# ಇತಿಹಾಸ ದರ್ಶನ

ಸಂಪುಟ ೧೭/೨೦೦೨



KARNATAKA ITIHASA ACADEMY
कर्नाटक इतिहास अकादमि

ಕರ್ನಾಟಕ ಇತಿಹಾಸ ಅಕಾದೆಮಿ (ರಿ.)
ಬೆಂಗಳೂರು

# ಇತಿಹಾಸ ದರ್ಶನ

## ಸಂಪುಟ ೧೭/೨೦೦೨

ದಿನಾಂಕ ೧೩, ೧೪ ಮತ್ತು ೧೫ರ ಅಕ್ಟೋಬರ್ ೨೦೦೧ರಲ್ಲಿ
ಉಡುಪಿಯ ಶ್ರೀಕೃಷ್ಣ ಮಠದ ಆಶ್ರಯದಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿಯ
ಹದಿನೈದನೆಯ ಸಮ್ಮೇಳನದಲ್ಲಿ ಸದಸ್ಯರು ಮಂಡಿಸಿದ ಪ್ರಬಂಧಗಳ ಸಂಕಲನ




*ಸಂಪಾದಕರು*

ಎಂ.ಜಿ. ನಾಗರಾಜ್

ಡಾ॥ ಪಿ.ವಿ. ಕೃಷ್ಣಮೂರ್ತಿ



ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು

# ITIHĀSA DARŚANA

Proceedings of the Fifteenth Annual Conference of
**The Karnataka Itihasa Academy** (Regd.,)
held at Sri Krishna Mutt, Udupi on 13th, 14th & 15th Oct. 2001

Volume 17, September - 2002

*Edited by* : **M. G. Nagaraj**
**Dr. P. V. Krishna murthy**

*Published by*: Karnataka Itihasa Academy (Regd.)
Gokhale Institute of Public Affairs Premises
Basavanagudi Road, Narasimharaja Colony
Bangalore - 560 019

Price : **Rs. 200/-**

ಬೆಲೆ : ರೂ. ೨೦೦/-




***ಪ್ರಬಂಧಕಾರರ ಗಮನಕ್ಕೆ***

*ಈ ಸಂಪುಟದ ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರೇ ಹೊಣೆ. ಅವು ಅಕಾದೆಮಿಯ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳಲ್ಲ. **ಕರ್ನಾಟಕ ಇತಿಹಾಸದ** ಮೇಲೆ ಹೊಸಬೆಳಕು ಚೆಲ್ಲುವ ಬರಹಗಳಿಗೆ **ಇತಿಹಾಸ ದರ್ಶನ** ಮೀಸಲಾಗಿದೆ. ಲೇಖನಗಳು ಹಸ್ತಲಿಖಿತ ೧೦ ಪುಟಗಳ ಪರಿಮಿತಿಯಲ್ಲಿ ಇರುವುದು ಸೂಕ್ತ. ಲೇಖನಗಳನ್ನು ಹಾಳೆಯ ಒಂದೇ ಮಗ್ಗುಲಲ್ಲಿ **ಸ್ಫುಟವಾದ ಅಕ್ಷರಗಳಲ್ಲಿ** ಬರೆದಿರಬೇಕು. **ಬೆರಳಚ್ಚು** ಮಾಡಿಸಿದ್ದರೆ **ಅಗತ್ಯವಿರುವಡೆ ತಿದ್ದುಪಡಿ** ಮಾಡಿರಬೇಕು. ಅಡಿಟಿಪ್ಪಣಿಗಳನ್ನು, ಗ್ರಂಥಲೇಖನಾಧಾರ ವಿವರಗಳನ್ನು ಈಗಾಗಲೇ ಸಂಶೋಧನ ಬರಹಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ ಕ್ರಮದಲ್ಲಿ ನೀಡುವುದು ಉತ್ತಮ. ಈಗಿನ ೧೬ನೇ ಸಮ್ಮೇಳನದಲ್ಲಿ ಮಂಡಿತ ಪ್ರಬಂಧಗಳನ್ನು ಅನಿವಾರ್ಯ ಕಾರಣಗಳಿಂದ ಅಲ್ಲಿಯೇ ಕೊಡಲಾಗದಿರುವ ಅಕಾದೆಮಿಯ ಸದಸ್ಯ ಲೇಖಕರು, ದಯಮಾಡಿ ತಮ್ಮ ಪೂರ್ಣ ವಿಳಾಸದೊಡನೆ ಸಮ್ಮೇಳನ ಮುಗಿದ ಎರಡು ತಿಂಗಳ ಒಳಗಾಗಿ, **ಸಂಪಾದಕರು, ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಅಕಾದೆಮಿ, ಗೋಖಲೆ ಸಾರ್ವಜನಿಕ ಸಂಸ್ಥೆ ಆವರಣ, ಬಸವನಗುಡಿ ರಸ್ತೆ, ನರಸಿಂಹರಾಜಾ ಕಾಲೋನಿ, ಬೆಂಗಳೂರು - ೫೬೦ ೦೧೯**, ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರಿದೆ. ಹಾಗೆಯೇ **ಲೇಖನಗಳಲ್ಲಿ** ಲೇಖಕರು ತಮ್ಮ **ಈಚಿನ ಸರಿಯಾದ ವಿಳಾಸವನ್ನು ದಾಖಲಿಸಲು** ದಯವಿಟ್ಟು ಮರೆಯಬಾರದೆಂದು ಪ್ರಾರ್ಥಿಸಿದೆ. ಸಮ್ಮೇಳನದಲ್ಲಿ ಮಂಡಿಸಿದ ಲೇಖನಗಳನ್ನು **ಬೇರೆಡೆ ಪ್ರಕಟ ಮಾಡಿದ್ದರೆ** ಅಥವಾ **ಬೇರೆಡೆ ಪ್ರಕಟನೆಗೆ ಕಳುಹಿಸಿದ್ದರೆ** ದಯವಿಟ್ಟು ತಿಳಿಸಬೇಕೆಂದು ವಿನಂತಿ.*


ಲಕ್ಷ್ಮೀ ಮುದ್ರಣಾಲಯ
**LAKSHMI MUDRANALAYA**
ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮
ದೂರವಾಣಿ : ೬೬೧೩೧೨೩, ೬೬೧೮೭೫೨

# ಅಕಾದೆಮಿಯ ಅಧ್ಯಕ್ಷರ ಮಾತು

ಕರ್ನಾಟಕ ಇತಿಹಾಸ ಅಕಾದೆಮಿಗೆ ಈಗ ೧೬ ವರ್ಷವಾಗಿದೆ. ಇದೀಗ ಅದರ ೧೬ನೆಯ ಸಮ್ಮೇಳನ. ಷೋಡಷ ವರ್ಷ: ತಾರುಣ್ಯದ ಸಂಕೇತ. ಈವರೆಗೆ ಕೈಹಿಡಿದು ನಡೆಸಬೇಕಾಗಿದ್ದ ಮೇಲಿಂದಮೇಲೆ ಮಾರ್ಗದರ್ಶನ ಮಾಡಬೇಕಾಗಿದ್ದ ವ್ಯಕ್ತಿ ಜೀವನದ ಶೈಶವ, ಬಾಲ್ಯ ಕಳೆದಿದೆ. ಸಂಸ್ಥೆಯನ್ನು ಹಾಗೆಂದೂ ಭಾವಿಸಬಹುದು.

ಈ ಬಾರಿ ಸಕಾಲದಲ್ಲಿ ತಮ್ಮ ಪ್ರಬಂಧಗಳನ್ನು ಕಳುಹಿಸದ ವಿದ್ವಾಂಸರ ಬರಹಗಳನ್ನು ಈ ಸಂಪುಟದಲ್ಲಿ ಕೈಬಿಟ್ಟಿದೆ. ಸಮ್ಮೇಳನಕ್ಕಾದರೂ ನೀಡಿದ ಕಾಲಮಿತಿಯಲ್ಲಿ ಪ್ರಬಂಧದ ಸಾರಾಂಶ ಕಳುಹಿಸಲಾಗದ, ವಿದ್ವಾಂಸರ ಪ್ರಬಂಧ ಮಂಡಿಸಲು ಅವಕಾಶಕೊಟ್ಟಿಲ್ಲ. ಹೊಸದೆನಿಸದ ವಿಷಯಾಂತರದ್ದೆನಿಸಿದ ಪ್ರಬಂಧಗಳ ಮಂಡನೆಗೆ ಅವಕಾಶ ಕೊಟ್ಟಿಲ್ಲ. ಇದೆಲ್ಲ ಸರ್ವಸದಸ್ಯರ ಸಭೆಯ ಆದೇಶವಾಗಿದೆ.

ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧವನ್ನು ಪ್ರಕಟನ ಪೂರ್ವದಲ್ಲಿ ಬೇರೆಡೆ ಪ್ರಕಟಿಸಿದಲ್ಲಿ **ಇತಿಹಾಸ ದರ್ಶನ**ದಲ್ಲಿ ಪ್ರಕಟವಾದುದರಲ್ಲಿ ಹೊಸತನ ಇರದು. ಅಂಥ ಪ್ರಬಂಧಗಳನ್ನು ತಿರಸ್ಕರಿಸಿದೆ.

ಹಿಂದೆ ಯಾರೂ ಅಷ್ಟೊಂದು ಬಳಸದ ಕಡತ (ಬಟ್ಟೆಯ ಮೇಲೆ ಬರೆದ ದಾಖಲೆ) ಗಳನ್ನು ಅಪಾರ ಪ್ರಮಾಣದಲ್ಲಿ ಬೆಳಕಿಗೆ ತಂದು **ಕಡತದ ಶಾಸ್ತ್ರಿ** ಎಂದು ಪರಿಚಿತರಾದ ನನ್ನ ಮಿತ್ರ, ಸಹಪಾಠಿ, **ಡಾ॥ ಎ. ಕೆ. ಶಾಸ್ತ್ರಿ** ಈ ಸಾರಿ ಸಮ್ಮೇಳನಾಧ್ಯಕ್ಷರು. 'ಆರ್ಕಿವಲ್ ಮೆಟೀರಿಯಲ್' ನ ಹೊಸ ಆಯಾಮವನ್ನು ವಿಶೇಷವಾಗಿ ಗುರ್ತಿಸಿದವರು ಅವರು. ಅವರಿಗೆ ಈ ಬಾರಿಯ ಅಧ್ಯಕ್ಷ ಪೀಠ ಸಂದಿದೆ.

ಶಾಸನಗಳ ಅಧ್ಯಯನ ಮಾಡುವ ವಿದ್ವಾಂಸರಿಗೆ ಗೌರವಸಲ್ಲಿಸಲೆಂದು ನೀಡುವ **ಡಾ॥ ಬಾ. ರಾ. ಗೋಪಾಲ್ ದತ್ತಿಯ ಪ್ರಶಸ್ತಿ**ಯನ್ನು ಹಿರಿಯ ವಿದ್ವಾಂಸ **ಡಾ॥** ಶ್ರೀನಿವಾಸ ರಿತ್ತಿಯವರಿಗೆ ನೀಡಿದೆ. ಹಿರಿಯ ವಿದ್ವಾಂಸರಿಗೆ ಈ ಪ್ರಶಸ್ತಿಯನ್ನು ಮೊದಲು ನೀಡಿ ಪ್ರಶಸ್ತಿಯ ಪ್ರತಿಷ್ಠೆಯನ್ನು ಗಮನಿಸುವಂತೆ ಮಾಡಿದ್ದೇವೆ. ಮುಂದೆ ತರುಣ ಶಾಸನತಜ್ಞರಿಗೆ ಇದರಿಂದ ಸ್ಫೂರ್ತಿ ಸಿಗಲೆಂದು ಹಾರೈಸುತ್ತೇನೆ.

ಶ್ರೀರಾಮಚಂದ್ರಾಪುರ ಮಠದ ಆಸರೆಯಲ್ಲಿ ಈ ಸಮ್ಮೇಳನ ನಡೆವಂತಾದುದು ಒಂದು ಪುಣ್ಯ ವಿಶೇಷ.

ಈ ಸಂಪುಟವನ್ನು ಅಚ್ಚುಕಟ್ಟಾಗಿ ಸಂಪಾದಿಸಿದ ಸಂಪಾದಕರಾದ ಪ್ರೊ॥ ಎಂ. ಜಿ. ನಾಗರಾಜ್ ಹಾಗೂ ಡಾ॥ ಪಿ. ವಿ. ಕೃಷ್ಣಮೂರ್ತಿ ಇವರಿಗೆ ಸಂಸ್ಥೆಯು ಋಣಿಯಾಗಿದೆ. ಅದೇ ರೀತಿ ಮುದ್ರಿಸಿದ ಲಕ್ಷ್ಮಿಮುದ್ರಣಾಲಯಕ್ಕೂ ಆಭಾರ ಸಲ್ಲಿಸಿದೆ.

ಕರ್ನಾಟಕ ಇತಿಹಾಸ ಅಕಾದೆಮಿ ಪ್ರಗತಿ ಪಥದಲ್ಲಿದೆ- ಸರ್ವ ವಿಧದಿಂದಲೂ ಇದರ ಪ್ರಗತಿಗೆ ಸದಸ್ಯರ ಸಹಕಾರವೇ ಅಲ್ಲದೆ ಸಲಹೆ, ಮಾರ್ಗದರ್ಶನ ಸದಾ ಇರಲಿ.

**ಸೂರ್ಯನಾಥ್ ಕಾಮತ್**

# ಸಂಪಾದಕೀಯ

ಅಕಾದೆಮಿಯ ಪ್ರಾಯ ಹದಿನಾರರ ಹೊಸಿಲಿನಲ್ಲಿದೆ. ಏನೆಲ್ಲ ಸಾಧಿಸುವೆ ಎಂಬ ಉತ್ಸಾಹದ ಚಿಮ್ಮುಗೆ ಅದಕ್ಕಿದೆ. ಷೋಡಶ ಪ್ರಾಯವೆಂದರೆ ಹದಿನಾರರ ಹರೆಯದ ಲವಲವಿಕೆಯ ಸಹಜ ತಾರುಣ್ಯದ ವಯಸ್ಸು. ಷೋಡಶ ಕಳೆಗಳಲ್ಲಿ ಚಂದ್ರನಲ್ಲಿರುವ ಅಮೃತಾ, ಪುಷ್ಟಿ, ತುಷ್ಟಿ, ಚಂದ್ರಿಕಾ, ಕಾಂತಿ, ಜ್ಯೋತ್ಸ್ನಾ, ಪ್ರೀತಿ ಇತ್ಯಾದಿ ಹದಿನಾರು ಬಗೆಯ ಕಲೆಗಳಿದ್ದು, ಕಳೆಯನ್ನು ಬೀರುತ್ತವೆ. ಕರ್ನಾಟಕ ಇತಿಹಾಸ ಅಕಾದೆಮಿಗೆ ಅಂಥ ಷೋಡಶ ಕಳೆವೊದಗಿದೆ. ಆ ಕಳೆ ತಂದು ಕೊಟ್ಟವರು ಅಕಾದೆಮಿಯ ಸರ್ವಸದಸ್ಯರೆ. ತಮ್ಮ ದುಡಿಮೆ, ಅಧ್ಯಯನ, ಕ್ಷೇತ್ರಕಾರ್ಯ, ಸಹಕಾರ, ದಾನ, ಹೊಂದಾಣಿಕೆ, ಶಿಸ್ತು, ವಿದ್ವತ್ತು, ಪ್ರೀತಿ, ಸೌಹಾರ್ದ ಮುಂತಾದ ಸತ್ಕಳೆಗಳಿಂದ ಅಕಾದೆಮಿಯನ್ನು ಬೆಳೆಸಿದ್ದಾರೆ. ಅಂಥ ಸತ್ ಷೋಡಶ ಕಳೆಗೆ ಶ್ರೀರಾಮಾಚಂದ್ರಾಪುರ ಮಠದ ಆಶೀರ್ವಾದದ ಆಸರೆ, ಇಂದಿನ ಸಮ್ಮೇಳನದ ಮೂಲಕ ಒದಗಿದೆ; ಶ್ರೀ ಮಠದ ಧರ್ಮಚಕ್ರ ಟ್ರಸ್ಟ್ ಅದಕ್ಕೆ ನೆರವಾಗಿದೆ.

ಮಲೆನಾಡಿನ ಮೈಸಿರಿ ಹೊತ್ತ ಶಿವಮೊಗ್ಗಾ ಜಿಲ್ಲೆಯ ಹೊಸನಗರ ಪರಿಸರದ ಪವಿತ್ರ ಸನ್ನಿಧಿ ಶ್ರೀರಾಮಚಂದ್ರಾಪುರ ಮಠದ ಧರ್ಮಚಕ್ರ ಟ್ರಸ್ಟ್ ಆಶ್ರಯದಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ೧೬ನೇ ವಾರ್ಷಿಕ ಸಮ್ಮೇಳನವು ೨೦೦೨ನೇ ಸೆಪ್ಟೆಂಬರ್ ೨೨ರಿಂದ ೨೪ರ ವರೆಗೆ ನಡೆಯುತ್ತಿದೆ. ಶ್ರೀರಾಮಚಂದ್ರಾಪುರ ಮಠವು ಧಾರ್ಮಿಕ-ಸಾಂಸ್ಕೃತಿಕ ಕ್ಷೇತ್ರದಲ್ಲಿ ಪಾರಂಪರಿಕ ಸತ್ವವನ್ನು ತೋರಿರುವಂತೆ ಸಾಮಾಜಿಕ ಜನಜೀವನದಲ್ಲಿಯೂ ಮಾರ್ಗದರ್ಶನ ನೀಡಿದೆ. ಅಡಿಕೆ ಕೃಷಿಗಾರರ ಸಮಸ್ಯೆಯನ್ನು ಸಮರ್ಥವಾಗಿ ಸರ್ಕಾರದ ಗಮನಕ್ಕೆ ತಂದು ಪರಿಹಾರಕ್ಕೆ ಶ್ರೀಧ್ವನಿ ಎತ್ತಿದೆ. ಕ್ರಿ.ಶ. ೧೮೩೪ರಲ್ಲಿ ಕೊಡಗಿನ ಅಮ್ಮಕೊಡವರಿಗೆ ಈ ಶ್ರೀಮಠ ಆಚಾರದೀಕ್ಷೆ ನೀಡಿ, ಮಠದ ಶಿಷ್ಯರಾಗಲು ಕೃಪಾಶೀರ್ವಾದ ಮಾಡಿತು. ಅಂತೇ ಈ ಶ್ರೀಮಠದ ಬಗ್ಗೆ ಅವರಲ್ಲೆಲ್ಲ ಭಕ್ತಿ ಗೌರವಾದರಗಳು ನಡೆದು ಬಂದಿವೆ. ಕೊಡಗು ರಾಜ ಹಾಲೇರಿ ವಂಶದ ಚಿಕ್ಕವೀರರಾಜೇಂದ್ರ ಒಡೆಯನ ಕಾಲದಲ್ಲಿ ಕರಣಿಕನಾಗಿದ್ದ ಕರಣಿಕ ತಿಮ್ಮಪ್ಪಯ್ಯ ಹಾಗು ನೂರೊಕ್ಕಲು ಕುಟ್ಟಚಮ್ಮನ ಕುಟ್ಟಮ್ಮ ಸುಬೇದಾರ ಅವರು ಶ್ರೀಮಠದ ಗುರುಗಳವರಲ್ಲಿ ಅಮ್ಮಕೊಡವರಿಗೆ ಶ್ರೀಮಠದಿಂದ ಆಚಾರದೀಕ್ಷೆ ಕೊಡಿಸಿ, ಶಿಷ್ಯತ್ವ ಪಡೆಯಲು ಅನುವಾದರು. ಹೀಗೆ ಮಲೆನಾಡುಗಳ ಎರಡು ಪ್ರದೇಶಗಳ ಸಾಂಸ್ಕೃತಿಕ ಸಂಬಂಧದ ಒಂದು ಐತಿಹಾಸಿಕ ತುಣುಕು ಹಾಲೇರಿ ಅರಸರ ಕಾಲದಿಂದಲೇ ದೊರಕುತ್ತದೆ. ಕೆಳದಿಯಲ್ಲಿ ೧೭೬೩ಕ್ಕೆ, ಕೊಡಗಿನಲ್ಲಿ ಕ್ರಿ.ಶ. ೧೮೩೪ಕ್ಕೆ ಅರಸುವಂಶದಾಳ್ವಿಕೆ ಮುಗಿದುಹೋದರೂ ಸಾಂಸ್ಕೃತಿಕ ಸಂದರ್ಭದ ಪಾವಿತ್ರ್ಯದ ಸಂಬಂಧಗಳು ಉಳಿದು ಬಂದಿರುವುದು ಐತಿಹಾಸಿಕವಾಗಿ ಗಮನಾರ್ಹ.

'ಮುಷ್ಟಿ ಅಕ್ಕಿ' ಯನ್ನು ಸಮುದಾಯದ ಮನೆ ಬಾಗಿಲಿಗೆ ಹೋಗಿ ಸಂಗ್ರಹಿಸಿ, ವಿದ್ಯಾರ್ಥಿಗಳಿಗೆ ಹಾಗು ಜನತೆಗೆ ಪ್ರಸಾದ ಮಾಡಿಕೊಡುವ ಶ್ರೀ ಮಠದ ಕೈಂಕರ್ಯ, ಸಾಮಾಜಿಕ ಹಾಗು ಶೈಕ್ಷಣಿಕ ಕೈಂಕರ್ಯವಾಗಿದೆ. ಶ್ರೀ ಮಠದ ಮಾಸಿಕ ಪತ್ರಿಕೆಯೂ ಸಾಂಸ್ಕೃತಿಕ ಹಾಗು ಸಾಹಿತ್ಯಕ ಸೇವೆಯನ್ನು ಸಲ್ಲಿಸುತ್ತಿದೆ. ಇದೀಗ ಅಕಾದೆಮಿಯ ಸದಸ್ಯರ ವಿದ್ವತ್ಪ್ರತಿಭೆಯನ್ನು ಶೀ ಮಠದ ಆವರಣದಲ್ಲಿ ಪ್ರಸ್ತುತ ಪಡಿಸುವ ಸಂದರ್ಭವಾಗಿರುವುದು ಮನಸ್ಸಿಗೆ ಮುದವಾಗುವ ಸಂಗತಿ.

ಅಕಾದೆಮಿಯ ಸಮ್ಮೇಳನ ವರ್ಷೇ ವರ್ಷೇ ಹಿರಿಯ-ಕಿರಿಯ ವಿದ್ವಾಂಸರ ವಿದ್ವತ್ ಪ್ರಬಂಧಗಳ ಮಂಡನೆಯ ಸಮುಚಿತ ಆಕರ್ಷಕ ಸಂದರ್ಭವಾಗುತ್ತಿರುವುದು ಸಂತೋಷಕರವಾಗಿದೆ. ಕಿರಿಯ ವಿದ್ವಾಂಸರ ಕ್ಷೇತ್ರಕಾರ್ಯ ಹಾಗು ಹೊಸ ಶೋಧಗಳ ಮಂಡನೆ ಉತ್ಸಾಹ ಪೂರ್ಣವಾಗಿದೆ. ಹಿರಿಯ ವಿದ್ವಾಂಸರ ಪಕ್ವ ಮಂಡನೆ ಹಾಗು ಬರಹದ ಅಚ್ಚುಕಟ್ಟು ವಿಕಸಿತ ಮಾದರಿ ಎನಿಸುತ್ತಿದೆ. 'ಇತಿಹಾಸ ದರ್ಶನ'ದಲ್ಲಿ ತಮ್ಮ ಪ್ರಬಂಧಗಳು ಪ್ರಕಟನೆಯಾಗುತ್ತಿರಲಿ ಎಂಬ ವಿದ್ವಾಂಸರ ಆಶಯದ ಸಾಕ್ಷಿಯಾಗಿ ಈ ವರ್ಷವೂ ೮೮ ಮಂಡಿತ ಪ್ರಬಂಧಗಳು ಪ್ರಕಟವಾಗಿವೆ. ಆದರೆ ಉಡುಪಿ ಸಮ್ಮೇಳನದ ಮಂಡಿತ ಪ್ರಬಂಧಗಳ ಪೈಕಿ ಕಾರ್ಯಕಾರಿ ಸಮಿತಿಯ ಗಮನಕ್ಕೆ ಬಂದ, 'ಇತಿಹಾಸ ದರ್ಶನ' ದಲ್ಲಿ ಪ್ರಕಟವಾಗುವ ಮುನ್ನ ಬೇರೆಡೆ ಪ್ರಕಟವಾದಂಥ ಪ್ರಬಂಧಗಳನ್ನು ಸರ್ವಸದಸ್ಯಸಭೆಯ ಆದೇಶದ ಹಿನ್ನೆಲೆಯಲ್ಲಿ ಕಾರ್ಯಕಾರಿ ಸಮಿತಿಯ ತೀರ್ಮಾನದಂತೆ ಈ ೧೭ನೇ ಸಂಪುಟದಲ್ಲಿ ಕೈ ಬಿಡಲಾಗಿದೆ.

ಈ ಬಾರಿಯ ಸಮ್ಮೇಳನಾಧ್ಯಕ್ಷರಾಗಿ ಹಸ್ತಪ್ರತಿ, ನಿರೂಪ, ಕಡತಗಳ ಪ್ರಸಿದ್ಧ ತಜ್ಞ, ಇತಿಹಾಸಕಾರ **ಡಾ|| ಎ. ಕೆ. ಶಾಸ್ತ್ರಿ** ಅವರು ಆಯ್ಕೆಯಾಗಿರುವುದಕ್ಕೆ, ಶಾಸನ ಕ್ಷೇತ್ರದಲ್ಲಿ ಅವಿರಳ, ಅವಿರತ ಸೇವೆ ಸಲ್ಲಿಸಿರುವ ಅಪರೂಪದ ಸಜ್ಜನ ವಿದ್ವಾಂಸ **ಡಾ|| ಶ್ರೀನಿವಾಸ ರಿತ್ತಿ** ಅವರಿಗೆ **ಡಾ|| ಬಾ.ರಾ. ಗೋಪಾಲ್ ದತ್ತಿಯ ಪ್ರಶಸ್ತಿಯು** ದತ್ತವಾಗಿರುವುದಕ್ಕೆ ಅಭಿನಂದನೆಗಳು.

ಪೂಜ್ಯ ಶ್ರೀರಾಮಚಂದ್ರಾಪುರ ಮಠದ ಶ್ರೀರಾಘವೇಶ್ವರ ಭಾರತೀ ಸ್ವಾಮಿಗಳವರ ಶ್ರೀ ಸಾನ್ನಿಧ್ಯದಲ್ಲಿ ಅಕಾದೆಮಿಯ ೧೬ನೇ ಸಮ್ಮೇಳನವನ್ನು ರಾಜ್ಯ ಸರ್ಕಾರದ ಮಾನ್ಯ ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವ ಶ್ರೀ ಡಿ. ಬಿ. ಚಂದ್ರೇಗೌಡ ಅವರು ಉದ್ಘಾಟನೆ ಮಾಡುವ ಸಂದರ್ಭದಲ್ಲಿ ಅಕಾದೆಮಿಯ ಆಜೀವ ಗೌರವಾಧ್ಯಕ್ಷರೂ, ನಾಡಿನ ಖ್ಯಾತ ಹಿರಿಯ ಇತಿಹಾಸ ತಜ್ಞರೂ ಆದ ಪ್ರೊ| ಜಿ. ಎಸ್. ದೀಕ್ಷಿತ್ ಅವರು ಇತಿಹಾಸದರ್ಶನದ ೧೭ನೇ ಸಂಪುಟವನ್ನು (೧೭/೨೦೦೨) ಬಿಡುಗಡೆ ಮಾಡುತ್ತಿರುವುದು ಒಂದು ಆಶೀರ್ವಾದ. ಸಮ್ಮೇಳನದಲ್ಲಿ ಪಾಲ್ಗೊಳ್ಳುತ್ತಿರುವ ಎಲ್ಲರಿಗೂ ಸ್ವಾಗತ. ನಮ್ಮ ಕಾರ್ಯದಲ್ಲಿ ನೆರವಾಗುತ್ತಿರುವ ಅಕಾದೆಮಿಯ ಸರ್ವಸದಸ್ಯರನ್ನು ನೆನೆಯುತ್ತ ಅಭಿಮಾನಗಳನ್ನು ಸಲ್ಲಿಸುತ್ತೇವೆ. ಸಂಪುಟವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮಿ ಮುದ್ರಣಾಲಯದ ಮಾಲೀಕರಾದ ಶ್ರೀ ಅಶೋಕ್ ಕುಮಾರ್ ಹಾಗೂ ಮುಖಪುಟ ವಿನ್ಯಾಸ ಮಾಡಿದ ಶ್ರೀ ಎಸ್. ಮಂಜುನಾಥ್, ಅಚ್ಚುಕಟ್ಟಾಗಿ ಡಿ.ಟಿ.ಪಿ. ಮಾಡಿಕೊಟ್ಟ ಶ್ರೀಮತಿ ಆರ್. ಸುನೀತ ಹಾಗೂ ಸಿಬ್ಬಂದಿ ವರ್ಗದವರಿಗೆ ನಮ್ಮ ಕೃತಜ್ಞತೆಗಳು.

ಬೆಂಗಳೂರು
೧೯.೯.೨೦೦೨
ಚಿತ್ರಭಾನು ಸಂವತ್ಸರ
ಭಾದ್ರಪದ ||ಶು|| ತ್ರಯೋದಶಿ
ಧನಿಷ್ಠಾ ನಕ್ಷತ್ರ, ಗುರುವಾರ

**ಎಂ. ಜಿ. ನಾಗರಾಜ್**
**ಡಾ|| ಪಿ. ವಿ. ಕೃಷ್ಣ ಮೂರ್ತಿ**

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.,)

ಬೆಂಗಳೂರು

## ಕಾರ್ಯಕಾರಿ ಸಮಿತಿ

(ದಿನಾಂಕ ೯.೭.೨೦೦೦ದಲ್ಲಿ ಆಯ್ಕೆಗೊಂಡಂತೆ)

### ಅಜೀವ ಗೌರವ ಅಧ್ಯಕ್ಷರು

ಪ್ರೊ॥ ಜಿ.ಎಸ್. ದೀಕ್ಷಿತ್, *ಧಾರವಾಡ*

### ಅಧ್ಯಕ್ಷರು

ಡಾ॥ ಸೂರ್ಯನಾಥ ಕಾಮತ್, *ಬೆಂಗಳೂರು*

### ಉಪಾಧ್ಯಕ್ಷರು

ಶ್ರೀ ಎಂ.ಜಿ. ನಾಗರಾಜ್, *ಬೆಂಗಳೂರು*

ಡಾ॥ ಸಿ.ಎಸ್. ಪಾಟೀಲ್, (೧೨-೧೦-೨೦೦೧ ರವರೆಗೆ) *ಬೆಂಗಳೂರು*

### ಪ್ರಧಾನ ಕಾರ್ಯದರ್ಶಿ

ಡಾ॥ ಎಚ್.ಎಸ್. ಗೋಪಾಲರಾವ್, *ಬೆಂಗಳೂರು*

### ಕಾರ್ಯದರ್ಶಿ

ಡಾ॥ ಕೆ. ವಸಂತಲಕ್ಷ್ಮಿ, *ಬೆಂಗಳೂರು*

ಡಾ॥ ಚೆನ್ನಕ್ಕ ಪಾವಟೆ, *ಧಾರವಾಡ*

### ಕೋಶಾಧ್ಯಕ್ಷರು

ಶ್ರೀ ಎಂ.ಬಿ. ಪಾಟೀಲ್, *ಬೆಂಗಳೂರು*

### ಸದಸ್ಯರು

ಡಾ॥ ಎಂ.ಎಸ್. ಕೃಷ್ಣಮೂರ್ತಿ, *ಮೈಸೂರು*

ಡಾ॥ ಕೆ.ಜಿ. ವಸಂತಮಾಧವ, *ಪಾವಂಜೆ, ದಕ್ಷಿಣ ಕನ್ನಡ ಜಿಲ್ಲೆ*

ಪ್ರೊ॥ ಬಿ. ರಾಜಶೇಖರಪ್ಪ, *ಚಿತ್ರದುರ್ಗ*

ಪ್ರೊ॥ ವಸಂತ ಕುಷ್ಟಗಿ, *ಗುಲಬರ್ಗಾ*

ಡಾ॥ ದೇವರಕೊಂಡಾರೆಡ್ಡಿ, *ಹಂಪಿ*

ಶ್ರೀ ಕುಂ.ಬಾ. ಸದಾಶಿವಪ್ಪ, *ಹರಪನಹಳ್ಳಿ, ದಾವಣಗೆರೆ ಜಿಲ್ಲೆ*

ಡಾ॥ ಚೆನ್ನಬಸವ ಹಿರೇಮಠ, *ರಾಯಚೂರು*

ಡಾ॥ ಸ್ಮಿತಾ ಸುರೇಬಾನಕರ, *ಬೆಳಗಾವಿ*

ಶ್ರೀ ಗುರುಮೂರ್ತಿ ಪೆಂಡಕೂರು, *ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ*

ಶ್ರೀ ಸಿದ್ಧಯ್ಯ ಹಿರೇಮಠ, *ಶಿವಮೊಗ್ಗ*

ಡಾ॥ ಎ.ಕೆ. ಶಾಸ್ತ್ರಿ, *ಶಿರಸಿ, ಉತ್ತರಕನ್ನಡ ಜಿಲ್ಲೆ*

ಡಾ॥ ಶೀಲಾಕಾಂತ ಪತ್ತಾರ, *ಬಾದಾಮಿ, ಬಾಗಲಕೋಟೆ ಜಿಲ್ಲೆ*

ಡಾ॥ ಎಚ್.ಆರ್. ರಘುನಾಥ ಭಟ್, *ಧಾರವಾಡ*

ಪ್ರೊ॥ ಲಕ್ಷ್ಮಣ್ ತೆಲಗಾವಿ, *ಹಂಪಿ*

ಶ್ರೀ ತ.ರಂ. ಕೃಷ್ಣಗೌಡ, *ಬೆಂಗಳೂರು*

ಡಾ॥ ಎಚ್. ಚಂದ್ರಶೇಖರ್, *ಬೆಂಗಳೂರು*

## ಉಡುಪಿಯ ಶ್ರೀಕೃಷ್ಣಮಠದ ಆಶ್ರಯದಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿಯ ಹದಿನೈದನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರು



ಡಾ|| ಜ್ಯೋತ್ಸ್ನಾ ಕಾಮತ್



ಕೈ| ಕೆ. ಅಭಿಶಂಕರ್ ಅವರ ಸ್ಮರಣಾರ್ಥ ಸಮ್ಮೇಳನಾಧ್ಯಕ್ಷರಿಗೆ ನೀಡುವ ನೆನಪಿನ ಶಿಲ್ಪ ಕಾಣಿಕೆ.
ಪ್ರತಿವರ್ಷ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನಾಧ್ಯಕ್ಷರಿಗೆ ಈ ಕಾಣಿಕೆ ನೀಡಲು
ಶ್ರೀಮತಿ ವಿಶಾಲಾಕ್ಷಿ ಅಭಿಶಂಕರ್ ಅವರು ಪುದುವಟ್ಟು ಇಟ್ಟಿದ್ದಾರೆ.
(ಶಿಲ್ಪಕಲಾವಿದೆ : ಶ್ರೀಮತಿ ಕನಕಮೂರ್ತಿ)

## ಕರ್ನಾಟಕ ಇತಿಹಾಸ ಅಕಾದೆಮಿಯ
## ಹದಿನೈದನೆಯ ಸಮ್ಮೇಳನದ ಆಶ್ರಯದಾತರು



ಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು

# ಡಾ।। ಬಾ. ರಾ. ಗೋಪಾಲ್ ದತ್ತಿ ಪ್ರಶಸ್ತಿ ಸನ್ಮಾನಿತರು



ವರ್ಷ ೨೦೦೧
ಡಾ।। ಕೆ. ವಿ. ರಮೇಶ್



ವರ್ಷ ೨೦೦೨
ಡಾ। ಶ್ರೀನಿವಾಸ ರಿತ್ತಿ



ಮಾನ್ಯ ಸಚಿವ ಶ್ರೀ ಕಾಗೋಡು ತಿಮ್ಮಪ್ಪ
ಅವರಿಂದ ಹದಿನೈದನೆಯ ವಾರ್ಷಿಕ
ಸಮ್ಮೇಳನದ ಉದ್ಘಾಟನೆ

(ಕೃಪೆ ಕೆ.ಎಲ್. ಕುಂಡಂತಾಯ, ಉದಯವಾಣಿ)



ಸಮ್ಮೇಳನದ ಸಂದರ್ಭದಲ್ಲಿ ಪೇಜಾವರ ಶ್ರೀಗಳ
ಸಾನಿಧ್ಯದಲ್ಲಿ ಡಾ। ಸೂರ್ಯನಾಥ ಕಾಮತ್
ಡಾ। ಜಿ. ಎಸ್. ದೀಕ್ಷಿತ್ ಮತ್ತು
ಡಾ। ಜ್ಯೋತ್ಸ್ನಾ ಕಾಮತ್ ಅವರು



ಸಮ್ಮೇಳನದ ಗೋಷ್ಠಿಯೊಂದರಲ್ಲಿ
ವಿದ್ವಾಂಸರಿಂದ ಪ್ರಬಂಧ ಮಂಡನೆ



೨೦೦೧ರ 'ಇತಿಹಾಸ ಪರಂಪರೆ ಉಳಿಸಿ' ಕಾರ್ಯಕ್ರಮದ ಉದ್ಘಾಟನೆ ಮಾಡಿದ
ಸನ್ಮಾನ್ಯ ರಾಜ್ಯಪಾಲರಾದ ಶ್ರೀಮತಿ ವಿ. ಎಸ್. ರಮಾದೇವಿ, ಹಾಗು ಡಾ|| ಎಚ್. ನರಸಿಂಹಯ್ಯ
ಚಲನಚಿತ್ರ ತಾರೆ ಹಾಗು ಶಾಸಕಿ ಶ್ರೀಮತಿ ಉಮಾಶ್ರೀ, ಡಾ| ಸೂರ್ಯನಾಥ ಕಾಮತ್ ಮುಂತಾದವರು

೨೦೦೧ರ 'ಇತಿಹಾಸ ಪರಂಪರೆ ಉಳಿಸಿ' ಕಾರ್ಯಕ್ರಮದಲ್ಲಿ
ರಾಮನಗರದ ಪ್ರಥಮ ದರ್ಜೆ ಕಾಲೇಜು ಹಾಗು
ಮಾಧ್ಯಮಿಕ ಶಾಲೆಯಲ್ಲಿ ಮುಖ್ಯ ಅತಿಥಿಗಳಾಗಿ
ಡಾ| ಎಸ್. ನಾಗರಾಜು ಅವರು ಉಪನ್ಯಾಸ
ಮಾಡುತ್ತಿರುವರು. ಅಧ್ಯಕ್ಷತೆ ಡಾ| ಎಸ್. ಎಲ್. ತಿಮ್ಮಯ್ಯ
ಅತಿಥಿಗಳು : ಶ್ರೀ ಸೋಮಶೇಖರ (ಮುಖ್ಯೋಪಾಧ್ಯಾಯರು)
ಶಿವಾಜಿ ರಾವ್ ಮತ್ತು ಶ್ರೀಮತಿ ಶಾಂತಾಬಾಯಿ
ಹಾಗು ವಿದ್ಯಾರ್ಥಿ-ವಿದ್ಯಾರ್ಥಿನಿಯರು







ಬೆಂಗಳೂರು ನಗರ ಜಿಲ್ಲಾ ಘಟಕದಿಂದ ಇತಿಹಾಸ ದರ್ಶನದ ಲೇಖನಗಳ ಮೌಲ್ಯ ಮಾಪನ
'ವಿಚಾರ ಗೋಷ್ಠಿ'ಯ ಉದ್ಘಾಟನೆ ಡಾ। ಕೆ. ವಿ. ರಮೇಶ್ ಅವರಿಂದ

*ವಿಚಾರ ಗೋಷ್ಠಿಯ ಇನ್ನೊಂದು ದೃಶ್ಯ*



ಡಾ॥ ಹೆಚ್. ಎಸ್. ಗೋಪಾಲ್ ರಾವ್, ಡಾ॥ ಬೆಂ. ಶ. ಶಾಮಲಾ ರತ್ನಕುಮಾರಿ, ಡಾ॥ ಕೆ. ವಿ. ರಮೇಶ್
ಡಾ॥ ಸೂರ್ಯನಾಥ ಕಾಮತ್, ಡಾ । ಕೆ. ಎಲ್. ಎನ್. ಶಾಸ್ತ್ರಿ, ಡಾ॥ ಪಿ. ವಿ. ಕೃಷ್ಣ ಮೂರ್ತಿ

## ಈ ಘೋಷಣೆಗಳನ್ನು ಜನಪ್ರಿಯಗೊಳಿಸಿ

- ಮನುಷ್ಯನಿಗೆ ನೆನಪು ಹೇಗೋ
  ದೇಶಕ್ಕೆ ಇತಿಹಾಸ ಹಾಗೆ

- ನೆನಪು ನಮಗೆ ದಾರಿ ತೋರ್ವ ಉರಿಯುವಾ ಬತ್ತಿ,
  ಇತಿಹಾಸವು ನೆನಪಿನಂತೆ ನಾಡಿಗೊಂದು ಬುತ್ತಿ

- ಇತಿಹಾಸದ ಸಂಶೋಧನೆ
  ನಮ್ಮ ತಿಳಿವಿನ ವರ್ಧನೆ

- ತಾಳೆ ಹೊತ್ತಗೆಯ ರಕ್ಷಣೆ
  ಹಳೆಯ ಪರಂಪರೆಗೆ ಪೋಷಣೆ

- ಹಳೆಯ ಕೋಟೆ ಹಳೆ ದೇಗುಲ ಹಳೆ ಕಾಗದ ಕಡತ
  ಹೇಳುವುದು ನಮಗೆಲ್ಲ ಪ್ರಾಚೀನರ ತುಡಿತ

- ಪ್ರಾಚೀನ ಶಾಸನಗಳ ನಾಶ
  ಇತಿಹಾಸ ಪುರುಷನಿಗೆ ಪಾಶ

- ಪ್ರಾಚೀನ ದೇಗುಲ, ಶಿಲ್ಪ, ಮೂರ್ತಿ
  ನಮ್ಮ ಹಿರಿಯರ ಕಲೆಯ ಕೀರ್ತಿ

- ಪ್ರಾಚೀನ ಇಗರ್ಜಿ ಮಸೀದಿ ಗುಡಿ
  ನಮ್ಮ ಪರಂಪರೆಯ ಭವ್ಯ ಮುಡಿ

- ಕೋಟೆ ಕೊತ್ತಲದ ಕಲ್ಲು ಕಿತ್ತರೆ
  ಪ್ರಾಚೀನ ಪರಂಪರೆಯು ಪಂಚಾಂಗ ಕಿತ್ತಂತೆ

- ಹಳೆಯ ಕೆರೆಗಳ ದುರ್ಲಕ್ಷ್ಯ
  ತಂದಿತೆಮಗೆ ದುರ್ಭಿಕ್ಷ

**ಕರ್ನಾಟಕ ಇತಿಹಾಸ ಅಕಾದೆಮಿ (ರಿ.)**
ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಆವರಣ,
ಬಸವನಗುಡಿ ರಸ್ತೆ, ಬೆಂಗಳೂರು–560 019
ಇವರ ಪ್ರಕಟಣೆ

# ಪರಿವಿಡಿ

# ಈವರೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಅಧಿವೇಶನಗಳ ಸರ್ವಾಧ್ಯಕ್ಷರು ಹಾಗೂ ಇತರ ವಿವರಗಳು

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು |
|---|---|---|---|---|
| ೧. | ೧೫-೧೭ ಮೇ ೧೯೮೭ | ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ | ಡಾ|| ಎಂ. ಚಿದಾನಂದಮೂರ್ತಿ |
| ೨. | ೨೩-೨೪ ಅಕ್ಟೋಬರ್ ೧೯೮೮ | ತುಮಕೂರು | ಸಿದ್ಧಗಂಗಾಕ್ಷೇತ್ರ : ಡಾ|| ಶಿವಕುಮಾರ ಸ್ವಾಮಿಗಳು ಮತ್ತು ತುಮಕೂರು ಜಿಲ್ಲಾ ಇತಿಹಾಸ ಪರಿಷತ್ತು | ಡಾ|| ಜಿ. ಎಸ್. ಗಾಯಿ |
| ೩. | ೧೦-೧೧ ಜೂನ್ ೧೯೮೯ | ಗದಗ | ಶ್ರೀ ಮ. ನಿ. ಪ್ರ. ಜ|| ಡಾ|| ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ, ಗದಗ | ಡಾ|| ಶ್ರೀನಿವಾಸ ರಿತ್ತಿ |
| ೪. | ೨೧-೨೨ ಜುಲೈ ೧೯೯೦ | ದಾವಣಗೆರೆ | ಡಾ|| ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿ, ಹಿರೇಮಠ, ದಾವಣಗೆರೆ | ಡಾ|| ಎಸ್. ಆರ್. ರಾವ್ |
| ೫. | ೧೨-೧೪ ಜುಲೈ ೧೯೯೧ | ಚಿತ್ರದುರ್ಗ | ಚಿನ್ಮೂಲಾದ್ರಿ ಶ್ರೀ ಮುರುಘ ರಾಜೇಂದ್ರ ಬೃಹನ್ಮಠ, ಚಿತ್ರದುರ್ಗ | ಡಾ|| ಬಾ. ರಾ. ಗೋಪಾಲ್ |
| ೬. | ೧೧-೧೩ ಜುಲೈ ೧೯೯೨ | ರಾಯಚೂರು | ಪಂಡಿತ್ ತಾರಾನಾಥ ಶಿಕ್ಷಣ ಸಂಸ್ಥೆ ರಾಯಚೂರು | ಡಾ|| ಕೆ. ವಿ. ರಮೇಶ್ |
| ೭. | ೨೩-೨೫ ಜುಲೈ ೧೯೯೩ | ಮೈಸೂರು | ಸುತ್ತೂರು ಮಠದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಜೆ. ಎಸ್. ಎಸ್. ಸಂಸ್ಥೆ, ಮೈಸೂರು | ಡಾ|| ಅ. ಸುಂದರ |
| ೮. | ೯-೧೦ ಜುಲೈ ೧೯೯೪ | ಸೊಂಡೂರು | ಶ್ರೀ ಎಂ. ವೈ. ಘೋರ್ಪಡೆ ಕರ್ನಾಟಕ ಸೇವಾ ಸಂಘ, ಸೊಂಡೂರು | ಡಾ|| ಎಂ. ಎಂ. ಕಲಬುರ್ಗಿ |
| ೯. | ೯-೧೧ ಸೆಪ್ಟೆಂಬರ್ ೧೯೯೫ | ಬೆಳಗಾವಿ | ಶ್ರೀ ಮ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳು - ಶ್ರೀ ನಾಗನೂರು ರುದ್ರಾಕ್ಷಿಮಠದ ವೀರಶೈವ ಅಧ್ಯಯನ ಅಕಾದೆಮಿ, ಬೆಳಗಾವಿ | ಡಾ|| ಎ.ವಿ. ನರಸಿಂಹಮೂರ್ತಿ |
| ೧೦. | ೭-೯ ಜೂನ್ ೧೯೯೬ | ಧಾರವಾಡ | ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಶ್ರೀ ಮ. ನಿ. ಪ್ರ. ಶಿವಯೋಗಿ ಮಹಾಸ್ವಾಮಿಗಳು ಶ್ರೀ ಮುರುಘಾಮಠ ಧಾರವಾಡ | ಡಾ|| ಜಿ. ಎಸ್. ದೀಕ್ಷಿತ್ |
| ೧೧. | ೨೫-೨೭ ಅಕ್ಟೋಬರ್ ೧೯೯೭ | ಸಿರಸಿ | ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನ ಮಠ ಹಾಗೂ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ, ಸಿರಸಿ | ಪ್ರೊ|| ಕೆ. ಅಭಿಶಂಕರ್ |
| ೧೨. | ೧೪-೧೬ ನವೆಂಬರ್ ೧೯೯೮ | ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ | ಡಾ|| ಎಸ್. ನಾಗರಾಜು |
| ೧೩. | ೧೧-೧೩ ಜೂನ್ ೧೯೯೯ | ಹರಪನಹಳ್ಳಿ | ಮಾನ್ಯ ಸಚಿವ ಶ್ರೀ ಡಿ. ನಾರಾಯಣದಾಸ್ ಮತ್ತು ಆಯೋಜಕರಾದ ಶ್ರೀ ಕುಂ. ಬಾ. ಸದಾಶಿವಪ್ಪ, ಸ್ವಾಗತ ಸಮಿತಿ, ಹರಪನಹಳ್ಳಿ | ಡಾ|| ಶ್ರೀನಿವಾಸ ಹಾವನೂರ |
| ೧೪. | ೮-೧೦ ಜುಲೈ ೨೦೦೦ | ಹಂಪಿ | ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ | ಶ್ರೀ ಸಿ. ಟಿ. ಎಂ. ಕೊಟ್ರಯ್ಯ |
| ೧೫. | ೧೩-೧೫ ಅಕ್ಟೋಬರ್ ೨೦೦೧ | ಉಡುಪಿ | ಪೂಜ್ಯ ಶ್ರೀ ವಿಶ್ವೇಶ್ವರ ತೀರ್ಥ ಪಾದಂಗಳು ಪೇಜಾವರ ಮಠಾಧೀಶರು, ಉಡುಪಿ | ಡಾ|| ಜ್ಯೋತ್ಸ್ನಾ ಕಾಮತ್ |

## ಕರ್ನಾಟಕ ಇತಿಹಾಸ ಅಕಾದೆಮಿಯ ಹದಿನೈದನೆಯ ವಾರ್ಷಿಕ ಸಮ್ಮೇಳನ
## ಉಡುಪಿ
## ದಿನಾಂಕ : ೧೩-೧೪ ಅಕ್ಟೋಬರ್ ೨೦೦೧

ಸಮ್ಮೇಳನಾಧ್ಯಕ್ಷರು

**ಡಾ॥ ಜ್ಯೋತ್ಸ್ನಾ ಕಾಮತ್***

### ಅಧ್ಯಕ್ಷ ಭಾಷಣ

# ಸಾಮಾಜಿಕ ಇತಿಹಾಸ : ಜೀವಂತ ಇತಿಹಾಸ

ಮೊದಲಲ್ಲಿ, ಕರ್ನಾಟಕ ಇತಿಹಾಸ ಅಕಾದೆಮಿಯು ೧೫ನೇ ವಾರ್ಷಿಕ ಅಧಿವೇಶನದ ಅಧ್ಯಕ್ಷಳನ್ನಾಗಿ ಆಯ್ಕೆ ಮಾಡಿದ ಅದರ ಅಧ್ಯಕ್ಷರಿಗೆ, ಕಾರ್ಯನಿರ್ವಾಹಕ ಮಂಡಳಿಯ ಸದಸ್ಯರಿಗೆ, ಉಡುಪಿಯ ಪುಣ್ಯಕ್ಷೇತ್ರದಲ್ಲಿ ಈ ಅಧಿವೇಶನ ನಡೆಯುವಂತೆ ನೋಡಿಕೊಂಡು ಸರ್ವ ಸೌಕರ್ಯಗಳನ್ನು ಒದಗಿಸಿ ಆಶೀರ್ವದಿಸಿದ ಪೂಜ್ಯ ಶ್ರೀ ಪೇಜಾವರ ಮಠಾಧೀಶರಿಗೆ, ಕಾರ್ಯ ಬಾಹುಳ್ಯದ ನಡುವೆಯೂ ಉಪಸ್ಥಿತರಿದ್ದು ಅಧಿವೇಶನದ ಉದ್ಘಾಟನಾ ಸಮಾರಂಭಕ್ಕೆ ಮೆರುಗನ್ನಿತ್ತ ಇತಿಹಾಸಾಸಕ್ತರಿಗೆ, ಉಡುಪಿಯ ನಾಗರಿಕರಿಗೆ ನನ್ನ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ. ಮಹಿಳಾ ಮೀಸಲಾತಿ, ಮಹಿಳಾ ಬಲವರ್ಧನ ವರ್ಷಗಳಿಗೂ, ನನ್ನ ಆಯ್ಕೆಗೂ ಸಂಬಂಧ ಇಲ್ಲವೆಂದು ಕೊಂಡಿದ್ದೇನೆ. "ಇತಿಹಾಸ ಸಂಶೋಧನೆ ಪರಿಶ್ರಮಗಳಿಗೆ" ಇವೆಲ್ಲವೂ ಅನ್ವಯಿಸುವುದಿಲ್ಲ, ಎಂದು ನನ್ನ ಭಾವನೆ. ಕನ್ನಡ ನಾಡಿನ ಜನಜೀವನದ ಅಧ್ಯಯನದ ಮೂವತ್ತು ವರ್ಷಗಳಿಗೆ ಮೀರಿದ ನನ್ನ ಹವ್ಯಾಸಿ ಸಂಶೋಧನೆಯನ್ನು ನಾಡಿನ ಪ್ರಮುಖ ಹವ್ಯಾಸಿ ಇತಿಹಾಸ ಸಂಶೋಧನೆಯ ಹಾಗೂ ಸಂಶೋಧಕರ ಸಂಸ್ಥೆಯಾದ ಕರ್ನಾಟಕ ಇತಿಹಾಸ ಅಕಾದೆಮಿಯು ಗುರುತಿಸಿ, ಗೌರವಿಸಿದೆ, ಎಂದು ಭಾವಿಸಿದ್ದೇನೆ. ಇದೊಂದು ಅಪರೂಪ ಅವಕಾಶ. ಏಕೆಂದರೆ, ಇತಿಹಾಸದ ಸಂಶೋಧನೆಯನ್ನೆ ತೀವ್ರ ಆಸಕ್ತಿಯ ಹವ್ಯಾಸವಾಗಿ ಬೆಳೆಸಿಕೊಂಡು, ವಿವಿಧ ವೃತ್ತಿಗಳಲ್ಲಿದ್ದ ವರೆಲ್ಲ ಒಂದಾಗಿ, ಆ ಹವ್ಯಾಸಕ್ಕೊಂದು ಸಂಘಟಿತರೂಪ ಕೊಟ್ಟು ಸೃಜನಶೀಲವಾಗುವಂತೆ ಕರ್ನಾಟಕ ಇತಿಹಾಸ ಅಕಾದೆಮಿ ಕಟ್ಟಿ ಬೆಳೆಸಿಕೊಂಡು ಬಂದದ್ದು, ಭಾರತದಲ್ಲಿ ಪ್ರಯೋಗಶೀಲತೆಯ ಅಪೂರ್ವ ಐತಿಹಾಸಿಕ ದಾಖಲೆಯಾಗಿದೆ ಎಂದರೆ ಅತಿಶಯೋಕ್ತಿಯಲ್ಲ. ನಮ್ಮ ದೇಶದಲ್ಲಿ ಅನೇಕ ಹವ್ಯಾಸಿ ಸಂಸ್ಥೆಗಳನ್ನು ಕಟ್ಟಿ ಕೇವಲ ಸರಕಾರಿ ಮತ್ತು ಇತರ ಅನುದಾನಗಳನ್ನು ಪಡೆಯುವವರಿಗೆ ಕೊರತೆಯಿಲ್ಲ.

ಆದರೆ ನಮ್ಮ ಈ ಅಕಾದೆಮಿಯ ಕತೆ ಹಾಗಿಲ್ಲ. ಕೇವಲ ೧೬ ವರ್ಷಗಳ ಹಿಂದೆ ಜನ್ಮತಾಳಿದ ಸಂಸ್ಥೆಯ ಸದಸ್ಯರಲ್ಲಿ ಇತಿಹಾಸ, ಕನ್ನಡ ಬೋಧಿಸುವ ಮತ್ತು ಸಂಶೋಧನೆಯ ನೇರ ಲಾಭ ಪಡೆಯುವವರಿಗಿಂತ ಇಂಜಿನಿಯರರು, ಆಡಳಿತಗಾರರು, ವಿಜ್ಞಾನ, ಉದ್ದಿಮೆ, ತಾಂತ್ರಿಕ ಕ್ಷೇತ್ರಗಳ ತಜ್ಞರೇ ಸಾಕಷ್ಟು ಸಂಖ್ಯೆಯಲ್ಲಿ ಇರುವದು ವಿಶೇಷ! ಕಾರ್ಯಕಾರಿ ಸದಸ್ಯರ ನಿರ್ವಹಣಶಕ್ತಿ ಅಪೂರ್ವವಾದದ್ದು. ವಾರ್ಷಿಕ ಅಧಿವೇಶನ ಸಮೀಪಿಸುತ್ತಿದ್ದಂತೆ ಘಟೋತ್ಕಚನ ಮಾಯಾಬಝಾರ ತರದಲ್ಲಿ ಅಕಾದೆಮಿ ಚಟುವಟಿಕೆಗಳು ಮೈತಾಳುತ್ತವೆ. ಒಂದು ಪೈಸೆ ಹೆಚ್ಚುಕಡಿಮೆ ಆಗದಂತೆ ಲೆಕ್ಕಾಚಾರ ಇಡುವದು; ಬಂದ, ಲೇಖನಗಳನ್ನೆಲ್ಲ ಕಣ್ಣಲ್ಲಿಕಣ್ಣಿಟ್ಟು ನೋಡಿ, ತಿದ್ದಿ ಸಂಪಾದಿಸಿ, **ಇತಿಹಾಸ ದರ್ಶನ** ಸಂಪುಟ ಸಕಾಲಕ್ಕೆ ಮುದ್ರಣಗೊಂಡು ಬರುವಂತೆ ಮಾಡುವದು; ಟ್ರಂಕುಗಳಲ್ಲಿ ಹೇರಿ, ಬಸ್ಸು, ಟ್ರೇನು ಯಾವುದು ಸಿಕ್ಕರೆ ಅದನ್ನೇರಿ, ಅಕಾದೆಮಿಯ ವಿದ್ವತ್ ಭಾಂಡಾರವನ್ನು ಹೊರಿಸಿ ನಿರ್ದಿಷ್ಟ ಸ್ಥಳವನ್ನು ಸೇರುವದು; ಊಟ-ವಿಶ್ರಾಂತಿಗಳ ಪರಿವೆ ಇಲ್ಲದೆ, ಆ ಕೆಲಸ ಈ ಕೆಲಸ ಎಂದು ಭೇದಮಾಡದೇ ದುಡಿಯುವ 'ಕಾಣದ ಕೈಗಳ'ನ್ನೆಲ್ಲ ನೆನಪಿಸಿಕೊಂಡು ಅತೀವ ಅಭಿಮಾನ ತಾಳುವಂತಾಗುತ್ತದೆ. ಸಮ್ಮೇಳನದಲ್ಲಿ ಸಕಲರಿಗೂ ಸಮಾನ ಅವಕಾಶ ನೀಡಲು ಶಕ್ತಿ

* ೧೧೦, 'ಶಶಿಕಿರಣ್' ೧೮ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫

ಮೀರಿ ಪ್ರಯತ್ನಿಸಲಾಗುತ್ತದೆ. ಹಳಬರಿಗಿಂತ ಹೊಸಬರಿಗೆ ಒಂದಿಷ್ಟು ಹೆಚ್ಚಿನ ಪ್ರೋತ್ಸಾಹವಿದೆ. ಕಿರಿಯರ ಸಂಶೋಧನೆಗೂ ಪ್ರಾಶಸ್ತ್ಯವಿದೆ. ಡಾಕ್ಟರೇಟ್ ಪಡೆದ ಸದಸ್ಯರಿಗೆ ವೇದಿಕೆಗೆ ಬರಮಾಡಿಕೊಂಡು ಗೌರವಿಸಲಾಗುತ್ತದೆ. 'ಐತಿಹಾಸಿಕ ಪರಂಪರೆ ಉಳಿಸಿ' ಒಂದು ಆಂದೋಲನದ ರೂಪವನ್ನೆ ತಾಳುವಂತೆ ಸತತವಾಗಿ ಪ್ರಯತ್ನಿಸಲಾಗುತ್ತಿದೆ. ಶಾಲೆ, ಕಾಲೇಜುಗಳಷ್ಟೆ ಅಲ್ಲದೇ ಸಾರ್ವಜನಿಕರಿಗೂ ತಲುಪುವ ಹೊಸ ಕ್ರಮಗಳನ್ನು ಯೋಜಿಸಲಾಗುತ್ತಿದೆ. ಹಂಪಿಯ ಹೆದ್ದಾರಿ ಹಾಗೂ ಸೇತುವೆ ನಿರ್ಮಾಣಕುರಿತ ಅಕಾದೆಮಿಯ ನಿಲುವು ಮತ್ತು ಅದಕ್ಕೆ ಸಂಬಂಧಿಸಿದ ಪ್ರಯತ್ನ ಸರ್ವಶ್ರುತವಿದೆ. ಇತಿಹಾಸ ಪ್ರಜ್ಞೆ ಬೆಳೆಸಲು ಕೈಕೊಂಡ ಮಾಸಿಕ ಉಪನ್ಯಾಸ ಮಾಲೆ ಇನ್ನೊಂದು ದಿಟ್ಟ ಹೆಜ್ಜೆ.

ಇವೆಲ್ಲ ಯಾವ ಧನ ಸಹಾಯವಿಲ್ಲದೇ ನಡೆಯುವ ಚಟುವಟಿಕೆಗಳೆಂದರೆ ಯಾರು ನಂಬುತ್ತಾರೆ? ಅನೇಕ ಪರಿಚಿತರಿಗೆ, ಬರಹೋಗುವ ಖರ್ಚು, ಜೇಬಿನಿಂದ ತೆತ್ತು, ಸದಸ್ಯ ಫೀ ಕೊಟ್ಟು, ಎಷ್ಟೋಬಾರಿ ರಜಾ ಹಾಕಿ, ಆಕಾದೆಮಿಯ ಕಾರ್ಯಕಲಾಪಗಳಲ್ಲಿ ಭಾಗವಹಿಸುವ ಆಸಕ್ತರಿದ್ದಾರೆ! ಎಂದರೆ ವಿಶ್ವಾಸ ಹುಟ್ಟುವುದಿಲ್ಲ. ಸಂಶೋಧನಾಸಕ್ತರನ್ನು ಬೆಸೆದ ತೀವ್ರತೆ ಅಂಥಾದ್ದು. ಸ್ವಾನುಭವದ ಒಂದೇ ಮಾತನ್ನು ಹೇಳಬಯಸುವೆ. ೧೯೯೫ರ ಆಗಸ್ಟ್ ತಿಂಗಳಿನಲ್ಲಿ ನಾನು ಅಮೇರಿಕೆಗೆ ಹೋಗಿದ್ದೆ. ನಂತರದ ನಾಲ್ಕು ತಿಂಗಳಲ್ಲಿ ಎರಡು ಸಮ್ಮೇಳನಗಳು ಜರುಗಿದ್ದವು. ಪ್ರಪ್ರಥಮ ಕೊಂಕಣಿ ವಿಶ್ವಸಮ್ಮೇಳನ ಮಂಗಳೂರಿನಲ್ಲಿತ್ತು. ವಿಶೇಷ ಆಮಂತ್ರಿತಳೆಂದು ಬರಹೋಗುವ ವ್ಯವಸ್ಥೆ, ವಾಸದ ಏರ್ಪಾಡಿನೊಂದಿಗೆ ಗೌರವಧನದ ಸಾಕಷ್ಟು ದೊಡ್ಡ ಮೊತ್ತವನ್ನೇ ಕೊಡಮಾಡಲಿದ್ದರು. ಅದೇ ಹೊತ್ತಿಗೆ ಅಕಾದೆಮಿಯ ವಾರ್ಷಿಕ ಸಮ್ಮೇಳನ ಬೆಳಗಾಂವಿಯಲ್ಲಿ ಜರುಗಿತು. ಕೊಂಕಣಿ ಸಮ್ಮೇಳನದಲ್ಲಿ ಭಾಗವಹಿಸಲಾಗದ್ದಕ್ಕೆ ಎಳ್ಳಷ್ಟೂ ಬೇಸರಿಸದಿದ್ದರೂ, ಬೆಳಗಾಂವಿಯ ಅಧಿವೇಶನ ತಪ್ಪಿಸಿಕೊಂಡದ್ದಕ್ಕೆ ತುಂಬ ಪೇಚಾಡಿದ್ದೆ! ಜನಬಲ, ಧನ ಬಲ ವಿಪುಲವಾಗಿರುವ ವಿಶ್ವವಿದ್ಯಾಲಯ, ಅಧ್ಯಯನ ಸಂಘಗಳು ಮಾಡಲಾಗದ ಕೆಲಸವನ್ನು ಕರ್ನಾಟಕ ಇತಿಹಾಸ ಅಕಾದೆಮಿ ಮಾಡಿ ತೋರಿಸಿದೆ. ಕೆಲಕಾಲ ವಿಶ್ವವಿದ್ಯಾಲಯ, ಮೂರು ದಶಕಗಳ ಕಾಲ, ಆಕಾಶವಾಣಿಯಂಥ ಸಂಸ್ಥೆಯಲ್ಲಿ ಕೆಲಸಮಾಡಿ, ಅವುಗಳ ಕಾರ್ಯವಿಧಾನವನ್ನು ಹತ್ತಿರದಿಂದ ನೋಡಿದವಳು ನಾನು. ಸಮ್ಮೇಳನ ಸಂಘಟನೆ, ಪ್ರಬಂಧ ಮಂಡನೆ, ಸಂಪುಟ ಪ್ರಕಟಣೆಗಳೆಲ್ಲ ಕೇವಲ ಹವ್ಯಾಸಿ ಆಸಕ್ತಿಯಿಂದ ಮಾಡಿ ತೋರಿಸಿ ಕರ್ನಾಟಕ ಇತಿಹಾಸ ಅಕಾದೆಮಿ ಈ ವಲಯದಲ್ಲಿ ದೇಶಕ್ಕೇ ಆದರ್ಶಪ್ರಾಯವಾಗಿದೆ, ಎಂದು ಹೇಳಬಲ್ಲೆ.

ಕರ್ನಾಟಕ ಇತಿಹಾಸ ರಚನೆಗೆ ಅಪ್ರತಿಮ ಕೊಡುಗೆಯಿತ್ತ ದಿಗ್ಗಜರು ಅನೇಕ ಜನ, ಅವರನ್ನು ಕಾಲಕಾಲಕ್ಕೆ ಸ್ಮರಿಸಿಕೊಳ್ಳುತ್ತಲೇ ಓದಿ ಬೆಳೆದು ಹವ್ಯಾಸಿ 'ಇತಿಹಾಸ ವಿದ್ಯಾರ್ಥಿ ಸಂಶೋಧಕಿಯಾಗಿ' ಮುಂದುವರಿದೆ. ವರ್ಗಾವರ್ಗಿಯ ಆಕಾಶವಾಣಿ ನೌಕರಿ, ಸಂಸಾರಸ್ಥೆಯ ಹೊಣೆಗಳ ನಡುವೆ ಈ ಹವ್ಯಾಸ ಉಳಿಸಿಕೊಂಡೆ. ಡಾಕ್ಟರೇಟ್ ಪಡೆದೆ. ಆದರೆ ಆಗ ಅಕಾದೆಮಿ ಜನ್ಮತಳೆದಿರಲಿಲ್ಲ. ಆದರೆ ಅದು ಅಸ್ತಿತ್ವಕ್ಕೆ ಬಂದಂದಿನಿಂದ ನನ್ನ ಹವ್ಯಾಸ ಬೆಳೆಸುವ ಮಹಾಶಕ್ತಿಯಾಗಿ ಪರಿಣಮಿಸಿದೆ. ನನ್ನದೇ ವಿಶಿಷ್ಟವಾದ ಪ್ರಸ್ತುತೀಕರಣಕ್ಕೆ ಇನ್ನಿಲ್ಲದಷ್ಟು ಅವಕಾಶ ಕಲ್ಪಿಸಿದೆ. "ಗಂಡಸರಿಗೂ ಸೀರೆ, ಕನ್ನಡಿಗರ ಕನ್ನಡಿಗಳು, ಮಂಚ, ಪೀಠೋಪಕರಣಗಳು; ಕಾಷ್ಠಶಿಲ್ಪಗಳಲ್ಲಿ ಜನಜೀವನ, ಭಿತ್ತಿಚಿತ್ರಗಳಲ್ಲಿ ಐತಿಹಾಸಿಕ ವ್ಯಕ್ತಿಗಳು, ಕನ್ನಡಿಗರ ಸುರಾಪಾನ ಪರಂಪರೆ" ಮುಂತಾದ ಸಚಿತ್ರ ಪ್ರಬಂಧಗಳು ಹುಟ್ಟಿಕೊಂಡವು. ಇಂಥ ಲೇಖನಗಳ ಮಾಹಿತಿ ಸಂಗ್ರಹಣೆ ಎಷ್ಟು ಕಷ್ಟಕರ! ಎಂದು ಯತ್ನಿಸಿದವರಿಗೆ ಗೊತ್ತು.

ಜೀವಂತ ಇತಿಹಾಸದ ಒಂದು ಉದಾಹರಣೆ : ನಮ್ಮೂರಾದ ಹೊನ್ನಾವರದಲ್ಲಿ ಮಲ್ಯ ಕುಟುಂಬವೊಂದು ತುಂಬ ಪುರಾತನ ಕಾಲದಿಂದ ಬೇರುಬಿಟ್ಟಿದೆ. ಈಗ ಸ್ಥಿತಿವಂತರಾಗಿರದ ಕುಟುಂಬದ ಮುಖ್ಯಸ್ಥನಿಗೆ ಊರ ಪ್ರಮುಖ ದೇವಸ್ಥಾನ ಹಾಗೂ ಮಠದ ರಥೋತ್ಸವಕಾಲದಲ್ಲಿ ವಾದ್ಯಮೇಳದೊಂದಿಗೆ ಹೋಗಿ ಕೈಯಲ್ಲಿ ಬೆಳ್ಳಿದಂಡ ಇತ್ತು, ಮೆರವಣಿಗೆಯಲ್ಲಿ ಕರೆತರುವ ಮರ್ಯಾದೆ ಸಲ್ಲುತ್ತದೆ. ಈ ರೂಢಿ ಹೇಗೆ ಬಂದಿತು? ಎಂದು ಪತ್ತೆಹಚ್ಚಲು ಸಾಕಷ್ಟು ಪ್ರಯತ್ನಿಸಿದ್ದಾಯ್ತು. ಈಗಿನ ಮುಖ್ಯಸ್ಥ, ಕಿರಿಯ ವಯಸ್ಸಿನ ಪ್ರಶಾಂತನಿಗೆ ಏನೂಗೊತ್ತಿರದಿದ್ದರೂ ತಮ್ಮಲ್ಲಿದ್ದ ಮೂರು ಬ್ರಹ್ಮಲಿಪಿಯ ತಾಮ್ರಪಟಗಳ ಬಗ್ಗೆ ಹೇಳಿದ. ಒಂದನ್ನಂತೂ ಬಚ್ಚಲೊಲೆಯ ಬೂದಿ ತೆಗೆಯಲು ಬಳಸುತ್ತಿದ್ದುದನ್ನು ಗಮನಿಸಿ, ತರಿಸಿ ಸ್ವಚ್ಛಗೊಳಿಸಿ ಶಾಸನತಜ್ಞರಿಂದ ಓದಿಸಿದಾಗ, ಮಲ್ಯ ಕುಟುಂಬದ ಮೂರು ನೂರುವರ್ಷಗಳ ಇತಿಹಾಸದ ಮೇಲೆ ಬೆಳಕು ಬಿತ್ತು. ಕೆಳದಿಯ ಅಳರಸರ ಕಾಲಕ್ಕೆ ಮಹತ್ವದ ಪಾತ್ರ ವಹಿಸಿದ ರಾಮಚಂದ್ರ ಹಾಗೂ ನಾರಾಯಣ ಮಲ್ಯರ ಕುಟುಂಬದ ಕುಡಿಯಾಗಿದ್ದ ಆ ತರುಣ!

ಈ ಪ್ರಬಂಧ ಪ್ರಸ್ತುತ ಪಡಿಸಿದಾಗಿನ ಘಟನೆ ನೆನಪಾಗುತ್ತದೆ. ಬೆಂಗಳೂರಿನ ಪ್ರಸಿದ್ಧ ಉದ್ದಿಮೆದಾರರು ಅದೇ "ಮಲ್ಯ" ಹೆಸರಿನವರು, ಇವರಿಗೆ ಸಂಬಂಧವೇ? ಅವರ ಮನೆತನದ ಇತಿಹಾಸ ಸಂಶೋಧನೆ ಮಾಡುತ್ತೇನೆ! ಎಂದು ತರುಣಿಯೊಬ್ಬಳು ಸಲಹೆ ಪಡೆಯಲು ಬಂದಳು, ಆ ಮಲ್ಯ - ಈ ಮಲ್ಯರಿಗೆ ಸಂಬಂಧವಿಲ್ಲ. ಆ ಮಲ್ಯರ ಮನೆತನ ಅತ್ಯಾಧುನಿಕವಾಗಿದ್ದರಿಂದ ಅವರ ಮನೆಯಲ್ಲಿ ಬೂದಿ ಬಳಿಯುವ ತಾಮ್ರಪಟ ನಿನಗೆ ದೊರೆಯಲಾರದು! ಆದರೆ ಮನಸ್ಸುಗೊಟ್ಟು ಸಂಶೋಧನೆ ಮಾಡಿದರೆ ಲಕ್ಷಗಟ್ಲೆ ಹಣ, ಸಂಶೋಧನೆಗೆ ಕೊಟ್ಟಾರು! ಎಂದೆ.

ಇನ್ನು ಜೀವಂತ ಇತಿಹಾಸವೆಂದು ನಂಬಿರುವ ನನ್ನ ಸಾಮಾಜಿಕ ಇತಿಹಾಸದ ಅಧ್ಯಯನದ ಕೆಲವು ಹೊಳಹುಗಳನ್ನೆ ಆರಿಸಿಕೊಳ್ಳಲು ಕಾರಣಗಳು ಹಾಗೂ ಆಕರಗಳನ್ನು ಪರಿಶೀಲಿಸ ಬಹುದು.

ಶಾಲೆ-ಕಾಲೇಜುಗಳ ವಿದ್ಯಾಭ್ಯಾಸ ಕ್ರಮದಲ್ಲಿ ಇತಿಹಾಸ ಬೋಧನಾಕ್ರಮ, ಆಕರ್ಷಕವಾಗಿಲ್ಲ ಅರಸು ಮನೆತನಗಳು, ವಂಶಾವಳಿ, ಮಾಡಿದ ಯುದ್ಧಗಳು, ಗೆದ್ದುಕೊಂಡ ಪ್ರದೇಶಗಳು, ಒಪ್ಪಂದ-ವಿವರಗಳು, ಅಳಿಗಾಲದ ಕಾರಣಾದಿಗಳಂತಹ ನೀರಸ ವಿಷಯಗಳೇ(!) ಇತಿಹಾಸ, ಜನರ ದೈನಂದಿನ ಜೀವನಕ್ಕೆ ಸಂಬಂಧಿಸಿದ ಇತಿಹಾಸ ಏಕೆ ಇಲ್ಲ? ಎಂದು ವಿದ್ಯಾರ್ಥಿ ದಿನ ಗಳಿಂದ ಪ್ರಶ್ನೆಕಾಡುತ್ತಿತ್ತು. ಇತಿಹಾಸ ಪ್ರೀತಿಯ ವಿಷಯವಾದರೂ ರಾಜಕೀಯ ಇತಿಹಾಸ ಇಷ್ಟವಾಗುತ್ತಿರಲಿಲ್ಲ. ಮುಂದೆ **ಮಧ್ಯಯುಗದ ಕನ್ನಡಿಗರ ಸಾಮಾಜಿಕ ಜೀವನದ ಮೇಲೆಯೇ** ಸಂಶೋಧನೆ ನಡೆಸುವ ಸದವಕಾಶ ದೊರೆಯಿತು. ಆದರೆ ಈ ವಿಷಯದಲ್ಲಿ ಮಾದರಿಯಾಗಬಹುದಾದ ಕ್ರಿಸ್ತ ಶಕದ ಒಂದೂ ಸಂಪ್ರಬಂಧ ಕಣ್ಣಿಗೆ ಬೀಳಲಿಲ್ಲ. ರಾಜಕೀಯ ಇತಿಹಾಸ, ಆಡಳಿತಕ್ರಮಕ್ಕೆ ಒತ್ತುಕೊಟ್ಟು ಕರ್ನಾಟಕದ ಬೇರೆ ಬೇರೆ ಅರಸು ಮನೆತನಗಳನ್ನು ಅಭ್ಯಸಿಸಿದವರಿದ್ದರು. ಅವರ ಕೃತಿಗಳಲ್ಲಿ ಜನಜೀವನ ಬರುತ್ತಿದ್ದುದು ತೀರ ಗೌಣವಾಗಿ ಅಥವಾ ಅನುಬಂಧ ರೂಪದಲ್ಲಿ. ಹೀಗಾಗಿ ಆಕರಗಳ ಬಳಕೆಯ ಬಗ್ಗೆ ತುಂಬ ಶ್ರಮ ಪಡಬೇಕಾಯಿತು. ಶಾಸನ ಸಂಪುಟಗಳು, ಕನ್ನಡ ಕಾವ್ಯಗಳು, ವಿದೇಶೀಯರ ವೃತ್ತಾಂತಗಳು ಕೆಲಮಟ್ಟಿಗೆ ಸಹಾಯವಾದವು. ಕನ್ನಡ ಸಂಸ್ಕೃತ ಶಾಸ್ತ್ರಗ್ರಂಥಗಳು ಹೆಚ್ಚಿನ ಆಧಾರ ನೀಡಿದವು.

ನನ್ನ ವಿದ್ಯಾಗುರು ಹಾಗೂ ಸಂಶೋಧನಾ ಮಾರ್ಗ ದರ್ಶಕರಾಗಿದ್ದ ಪ್ರೊ|| ಜಿ. ಎಸ್. ದೀಕ್ಷಿತರು, ಆಕರಗಳ ಬಳಕೆಯಲ್ಲಿ ಬಹಳ ಕಟ್ಟು ನಿಟ್ಟಿನವರು. ಸಬಲವಾದ ಮಾಹಿತಿ, ಹೇಳಿಕೆ, ಪುರಾವೆಯ ಗಟ್ಟಿ ತಳಹದಿಯಿಲ್ಲದೇ ಮುಂದರಿಯಲು ಬಿಡುತ್ತಿರಲಿಲ್ಲ. ಆದರೆ ಅವರ ವ್ಯಾಸಂಗವ್ಯಾಪ್ತಿ ಮತ್ತು ಇತಿಹಾಸ ಪ್ರೇಮದಷ್ಟೆ ಜೀವನಾಸಕ್ತಿ ಬಹುಮುಖವಾದದ್ದು. ಇದು ನನಗೆ ಹೆಚ್ಚಿನ ಬಲಕೊಟ್ಟಿತ್ತು. ಪ್ರಾಚೀನ ಊಟ ಉಣಿಸು, ಉಡಿಗೆ-ತೊಡಿಗೆಗಳ ಅಧ್ಯಯನ ಮಾಡುತ್ತೇನೆ ಎಂದಾಗ ಆಗಲೆಂದರು. ಆಟೋಟಗಳನ್ನು ಸೇರಿಸುತ್ತೇನೆ, ಎಂದಾಗ ಹೆಚ್ಚಿನ ಉತ್ಸಾಹ ತೋರಿದರು. ಸ್ವತಃ ಅವರು ಕ್ರೀಡಾಪಟು, ಅಪರವಯಸ್ಸಿನಲ್ಲೂ ಟೆನಿಸ್ ಆಡಿದವರು. ಹೀಗಾಗಿ ಚೆಂಡಾಟ, ಮುಖ್ಯವಾಗಿ ಪೋಲೋ ಅಥವಾ ಗಾಲ್ಫ್‌ನ್ನು ಹೋಲುವ ರಾಷ್ಟ್ರಕೂಟರ ಕಾಲದಿಂದಲೂ ಪ್ರಚಾರದಲ್ಲಿದ್ದ ಚೆಂಡಾಟದ ಕುರಿತು ಅವರು ತೋರಿಸಿದ ತೀವ್ರ ಆಸಕ್ತಿ ಕರ್ನಾಟಕದಲ್ಲಿ ಆಡುತ್ತ ಬಂದ ಹಲವಾರು ಆಟೋಟಗಳ ಚರಿತ್ರೆಯನ್ನು ಕಂಡು ಹಿಡಿಯಲು ಪ್ರೇರಣೆ ನೀಡಿತು. ಸರಿ! ಗ್ರಂಥಗಳಿಂದ ಕಲೆ ಹಾಕಿದ ಮಾಹಿತಿಗೆ ಶಿಲ್ಪ ಚಿತ್ರಗಳು, ಭಿತ್ತಿ ಚಿತ್ರಗಳು, ಕಾಷ್ಠಶಿಲ್ಪಗಳು, ವೀರಗಲ್ಲುಗಳು ಗಳೆಲ್ಲ ಪೂರಕ ಆಕರಗಳಾದವು. ಅವು ಕೊಡಮಾಡಿದ ಮಾಹಿತಿ ವಿಸ್ಮಯ ಹುಟ್ಟಿಸುವಂಥದಾಯಿತು. ಕಾಲಮಾನದ ಪರಿಮಿತಿ ಯಿಲ್ಲದೇ ಬೆಳೆದು ಬಂದು ಜೀವಂತವಾಗಿ ಉಳಿದು ಕೊಂಡ ಚರಿತ್ರೆಗೆ ಜೀವಂತ ಇತಿಹಾಸ ಅನ್ನೋಣವೆ? ಪರಂಪರಾಗತ ಇತಿಹಾಸ ಎಂದು ಗುರುತಿಸಿದರೆ ಹೇಗೆ? ಇತಿಹಾಸದ ಪಳೆಯುಳಿಕೆಗಳು ನಮ್ಮ ಪ್ರಾಚೀನ ದೇಶದಲ್ಲಿ ಅಸಂಖ್ಯ ಪ್ರಮಾಣ ದಲ್ಲಿರುವದು ಪ್ರಾಕ್ತನ ಶಾಸ್ತ್ರಜ್ಞರೆಲ್ಲ ಬಲ್ಲರು. ಅದರಂತೆ ರೂಢಿ, ನಂಬಿಕೆಗಳು, ಪೂಜಾದಿ ವಿಧಾನಗಳು, ಕುಟುಂಬ ಅಥವಾ ಜನಾಂಗಗಳಲ್ಲಿ ಉಳಿದು ಬಂದ ಕಥಾನಕಗಳು ಜನಸಾಮಾನ್ಯರ ಇತಿಹಾಸದ ಪುನಾರಚನೆಗೆ ತುಂಬ ಸಹಾಯನೀಡುತ್ತವೆ. ಪ್ರಾಚೀನ ವಿಶ್ವಕೋಶದಂತಿರುವ ಕನ್ನಡ, ಸಂಸ್ಕೃತಿ ಶಾಸ್ತ್ರಗ್ರಂಥಗಳಲ್ಲೂ ಇವುಗಳ ಉಲ್ಲೇಖ ಬರುವದುಂಟು. *ಹನ್ನೆರಡನೆಯ ಶತಮಾನದಲ್ಲಿ ಆಳಿದ ಚಾಲುಕ್ಯ ವಿಕ್ರಮಾದಿತ್ಯನ ಮಗ ಸೋಮೇಶ್ವರ ಭೂಲೋಕಮಲ್ಲನ (ಕ್ರಿ. ಶ. ೧೧೨೬- ೧೧೩೮) ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥ ಚಿಂತಾಮಣಿ, ಅಪೂರ್ವ ಆಕರ ಗ್ರಂಥ. ಅರಸು ಮಕ್ಕಳು ಅರಿಯಲೇಬೇಕಾಗಿರುವ ಹಲವಾರು ವಿದ್ಯಾಪ್ರಕಾರ ಗಳು ಇದರಲ್ಲಿವೆ. ಸೂಪಶಾಸ್ತ್ರದಿಂದ ಹಿಡಿದು ಚಿತ್ರ, ಶಿಲ್ಪಶಾಸ್ತ್ರ, ಆಡಳಿತಕ್ರಮ, ಸಂಗೀತ, ಹಲವಾರು ಶಸ್ತ್ರವಿದ್ಯಾಕ್ರಮಗಳು, ಕ್ರೀಡಾ ವಿನೋದಗಳಾದಿಯಾಗಿ ಅದರಲ್ಲಿ ಸೇರ್ಪಡೆಯಾಗದ ಅಂದಿನ ವಿಜ್ಞಾನ- ಕಲಾಪ್ರಕಾರಗಳೇ ಇಲ್ಲ! ಎನ್ನಬಹುದು. ಇದು ಸಂಸ್ಕೃತದಲ್ಲಿ ರುವುದರಿಂದ ಕನ್ನಡ ಶಬ್ದಗಳನ್ನೆಲ್ಲ ಸಂಸ್ಕೃತೀಕರಿಸಲಾಗಿದೆ. (ಇತ್ತೀಚಿಗೆ ಕನ್ನಡ ಅನುವಾದದಲ್ಲಿ ಲಭ್ಯವಿದೆ). ಈ ಬೃಹದ್ ಗ್ರಂಥದಲ್ಲಿ 'ಇಡ್ಲಿ- 'ಇಡರಿಕಾ' ಹೋಳಿಗೆ-ಪೋಲಿಕಾ, ವೈಹಾಳಿ-ವಾಹ್ಯಾಲಿ, ಹರಿಕಾರ- ಪರಿಕಾರರಾಗಿ ರೂಪಾಂತರ ಹೊಂದಿದ್ದಾರೆ. ಇಡ್ಲಿ ಅಷ್ಟು ಹಳೆಯದೇ ಎಂದು ಸೋಜಿಗ ಪಡುತ್ತಿದ್ದಂತೆ ವಡ್ಡಾರಾಧನೆ, ತನ್ನ ಇಡ್ಲಿ ಪರಿಚಯ ಇನ್ನೂ ಹಿಂದಿನದು ಎಂದು ಸಾರಿ ಹೇಳಿತು! ಚಾವುಂಡರಾಯನ 'ಲೋಕೋಪಕಾರಂ', ಕನ್ನಡದಲ್ಲೆ ಬರೆದ ೧೧ನೆ ಶತಮಾನದ ಪುಟ್ಟ ವಿಶ್ವಕೋಶ ಸಮಾನ ಗ್ರಂಥ. ಇವೆರಡರಲ್ಲಿ ಬಂದ ತೌಲನಿಕ ಮಾಹಿತಿಯನ್ನು ಕನ್ನಡ ಕಾವ್ಯಗಳಲ್ಲಿ ಅಲ್ಲಲ್ಲಿ ಅಡಕವಾಗಿರುವ ಅಂಶಗಳೊಂದಿಗೆ ಹೋಲಿಸಿದಾಗ, ಕಣ್ಮರೆಯಾದ ಕಲಾ ಪ್ರಪಂಚದ ಇಣುಕು ನೋಟಗಳು ಗೋಚರಿಸಿದವು.*

*ಕಾವ್ಯಾಭ್ಯಾಸಿಗಳಿಗೆ ಸಹಸಾ ಮಹತ್ವದ್ದೆನಿಸದ ಅಂಶಗಳು ಜನಜೀವನ ಸಂಶೋಧಕರಿಗೆ ಉಪಯುಕ್ತವೆನಿಸುತ್ತವೆ. ಪಂಪನ ಕೃತಿಗಳಲ್ಲಿ ಕ್ರೀಡೆ, ವಿಹಾರಗಳು, 'ಕ್ಯಾಬರೆ', ಹೋಲುವ ನೃತ್ಯವಿಧಾನ, ವೆಜಿಟೆಬಲ್ ಬೋಂಡ ಅಥವಾ 'ಶಾಕವಟಕ' ಕರ್ನಾಟಕದ ವಿಶಿಷ್ಟ ಸುರಾಪ್ರಕಾರಗಳ ಉಲ್ಲೇಖ ಬರುವದು, ಚರಿತ್ರಾಸಕ್ತರಿಗೆ ವಿಶೇಷ ವೆನಿಸದೇ? ಕುಮಾರವ್ಯಾಸ ಭಾರತದಲ್ಲಿ ಕ್ಷತ್ರಿಯ ಜನಾಂಗಕ್ಕೆ ಮೀಸಲಿದ್ದ ಮಾಂಸಾಹಾರದ ಉಲ್ಲೇಖ ಬರುವದು, ಮತ್ತು ಅವನ್ನು ಮಾಡುವ ಪ್ರಕಾರಗಳು ಸೂಪಶಾಸ್ತ್ರದಲ್ಲಿ ಕಂಡುಬರುವುದು ಆಕಸ್ಮಿಕವಲ್ಲ! ಕೋಫ್ತಾ, ತಂದೂರಿ ಒಲೆ, ಬಾರ್ಬೆಕ್ಯೂ, ಕೃತ್ರಿಮ ಹಾಲು ತಯಾರಿಸುವ ವಿಧಾನ, ಬೊನ್ಸ್‌ಯ್ಯು, ಇಕೆಬಾನಾಗಳಂತಹ ವೃಕ್ಷ-*

ಸಸ್ಯಗಳ ವಿಚಿತ್ರ ಪ್ರಕಾರಗಳು ಸಹಸ್ರವರ್ಷಗಳ ಹಿಂದೆಯೇ ಕನ್ನಡಿಗರಿಗೆ ಪರಿಚಿತವಿದ್ದವು.

ಪ್ರಾಚೀನ ಮಹಿಳಾ ಶಿಕ್ಷಣ ಕುರಿತು ವಿಷಯ ಸಂಗ್ರಹಣೆ ಪ್ರಾರಂಭಿಸಿದಾಗ, ಮಧ್ಯಯುಗದ ವಿದುಷಿ ಸಾವಿನಿರ್ಮಡಿ ಎಂಬಾಕೆಯ ಸ್ಮಾರಕ ಶಿಲೆಯ ಉಲ್ಲೇಖ ರೈಸರು ಸಂಪಾದಿಸಿದ ಕೋಲಾರ ಜಿಲ್ಲೆಯ ಶಾಸನಗಳ ಸಂಪುಟದಲ್ಲಿದ್ದರೂ, ಅದರ ಚಿತ್ರವಾಗಲಿ ಇನ್ನಾರಾದರೂ ಆ ಕುರಿತು ಅಭ್ಯಾಸ ಮಾಡಿದ ಮಾಹಿತಿಯಾಗಲಿ ಲಭ್ಯವಿರಲಿಲ್ಲ. ಅಂತೆಯೇ ಕೋಲಾರ ಜಿಲ್ಲೆಯವರೇ ಆದ ನಮ್ಮ ಆತ್ಮೀಯ, ಡಾ|| ಆರ್. ಶೇಷಶಾಸ್ತ್ರಿಯವರೊಂದಿಗೆ ಪ್ರಸ್ತಾಪಿಸಿದೆವು. ಅವರು ಸಾಕಷ್ಟು ತಿರುಗಾಡಿ, ರೈಸರು ಉಲ್ಲೇಖಿಸಿದ ಆ ಸ್ಮಾರಕವಿದ್ದ 'ಕಾರಬೆಲೆ' ಎಂಬ ಹಳ್ಳಿ ಈಗ ಅಸ್ತಿತ್ವದಲ್ಲೇ ಇಲ್ಲ. ಆದರೆ ಹತ್ತಿರದ ಯರಗಲ್ ಹಳ್ಳಿಯ ಕುರುಬರ ದೇವಾಲಯದ ಪ್ರಾಂಗಣದಲ್ಲಿ ಹರಡಿಕೊಂಡ ವೀರಗಲ್ಲುಗಳಲ್ಲಿ ಇದೂ ಸೇರ್ಪಡೆಯಾಗಿರುವ ಸಾಧ್ಯತೆ ಇದೆ! ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಅವರೊಡನೆ ಅಲ್ಲಿ ಹೋದಾಗ ಒಂದು ವೃಕ್ಷದ ಅಡಿಯಲ್ಲಿ ಹೂತುಹೋಗಿದ್ದ ಸಾವಿನಿರ್ಮಡಿಯ ಶಿಲಾಫಲಕ ತನ್ನ ಅಸ್ತಿತ್ವ ಸಾರುತ್ತಲಿತ್ತು. ಸ್ಥಳೀಯರ ನೆರವಿನಿಂದ ಅದನ್ನು ಹೊರಕ್ಕೆತೆಗೆದು ಸ್ವಚ್ಛ ಮಾಡಿದಾಗ ಕಿರಿಯ ವಯಸ್ಸಿನ ಪಂಡಿತೆ ಯೋರ್ವಳು ಕೈಯಲ್ಲಿ ತಾಳೆಗರಿಗ್ರಂಥ ಹಿಡಿದು ಬೋಧನ ಭಂಗಿಯಲ್ಲಿದ್ದದ್ದು ಕಂಡಿತು. 'ನಾಗಾರ್ಜುನಯ್ಯ ನಂದಿಗಬೆಯ' ಮಗಳಾದ ಈಕೆಯ ಹೆಸರು 'ಸಾವಿನಿರ್ಮಡಿ' ಎಂದಿದ್ದು, ಸಕಲಶಾಸ್ತ್ರ ಪ್ರವೀಣೆ, ಎಂದು ಘೋಷಿಸಲಾಗಿತ್ತು. ಇದಕ್ಕೆ ಸಾಕ್ಷಿಯಾಗಿ ಬಳಿಯಲ್ಲಿ ಟವಣೆಕೋಲು, ಕೈಯಲ್ಲಿ ಶ್ರೀ ಹ.. ಸಿದ್ಧಿ ಎಂಬ ಅಕ್ಷರಗಳಿದ್ದ ಪುಟವುಳ್ಳ ತಾಳೆ ಓಲೆಗ್ರಂಥವಿತ್ತು. ಉಳಿದಾವ ವಿವರಗಳಿರಲಿಲ್ಲ. ಈ ಸ್ಮಾರಕ ಶಿಲೆಯ ಬಗ್ಗೆ ವಾರಪತ್ರಿಕೆಯಲ್ಲಿ ಲೇಖನ ಬರೆದ ಬಳಿಕ ಸಂಬಂಧಿತ ಇಲಾಖೆ, ಅದಕ್ಕೊಂದು ಆಶ್ರಯ ಕಲ್ಪಿಸಿತು.

ಸಾಮಾಜಿಕ ಇತಿಹಾಸದ ಅಧ್ಯಯನದಲ್ಲಿ ಕರ್ನಾಟಕದ ಉದ್ದಗಲಕ್ಕೂ ಹರಡಿಕೊಂಡ ಪುರಾತನ ದೇವಾಲಯಗಳ ಹೊರಾಂಗಣ ಶಿಲ್ಪಗಳಲ್ಲಿ ಸಾಕಷ್ಟು ಮಾಹಿತಿ ದೊರೆಯುವ ಸಾಧ್ಯತೆಯಿದೆ. ಆಯಾ ದೇವತೆಯ ಪುರಾಣಗಳಿಗೆ ಸಂಬಂಧಿಸಿದ ಕಥಾನಕಗಳಿಗೆ ಆದ್ಯತೆ ಇತ್ತರೂ ಶಿಲ್ಪಿಗಳು, ತಮಗೆ ಚಿರಪರಿಚಿತವಿದ್ದ ಕೇಶಾಲಂಕಾರಗಳು, ಆಭರಣಗಳು, ಉಡಿಗೆಯ ಪ್ರಕಾರಗಳನ್ನೇ ಕಂಡರಿಸಿದರು. ಕೆಲ ದೇವಾಲಯಗಳ ಪೌಳಿಗಳ ತೀರ ಕೆಳಗಿನ ಚಿತ್ರಪಟ್ಟಿಕೆಗಳಲ್ಲಿ, ಮೂಲೆಗಳಲ್ಲಿ, ತಮ್ಮ ಕಲಾಸ್ವಾತಂತ್ರ್ಯ ಹರಿಬಿಟ್ಟ ಜನರಂಜನೆಯ ದೃಶ್ಯಗಳನ್ನು, ಕತೆಗಳನ್ನು ಚಿತ್ರಿಸಿದ್ದೂ ಇದೆ. ಇವನ್ನು ನೋಡಲು ಸಂಶೋಧಕನ ಕಣ್ಣು, ಜಿ-ಜ್ಞಾಸುಬುದ್ಧಿ, ಕೈಯಲ್ಲಿ ಕ್ಯಾಮರಾ, ಮುಖ್ಯವಾಗಿ ಕ್ಲಿಕ್ಕಿಸಲು ದೇವಾಲಯ ಆಡಳಿತವರ್ಗದ ಪರವಾನಗಿ ಬೇಕು!

ಉತ್ತರಕನ್ನಡ ಜಿಲ್ಲೆಯ ಭಟಕಳದಲ್ಲಿ ಮೂಡಭಟಕಳ ಭಾಗದಲ್ಲಿ ಹದಿನಾರನೆಯ ಶತಮಾನದಲ್ಲಿ ನಿರ್ಮಿತವಾದ ಖೇತಪೈ ನಾರಾಯಣ ದೇವಾಲಯ, ಜನಸಾಮಾನ್ಯರ ಜೀವನವನ್ನು ಚಿತ್ರಿಸಿರುವ ಅಪೂರ್ವ ಸ್ಥಳವಾಗಿದೆ. ಮುಖ್ಯ ದೇವಾಲಯವು ರಾಮಾಯಣ ಆಧಾರಿತ ಉಬ್ಬುಚಿತ್ರಗಳನ್ನು ಹೊತ್ತುನಿಂತಿದೆ. ಅದನ್ನು ಸುತ್ತುವರಿದ ಜಗತಿಯ ಗೋಡೆಗಳ ಮೇಲೆ ಗೃಹಜೀವನ, ಸ್ತ್ರೀ ಪುರುಷರ ಸ್ನಾನ, ಪೀಠೋಪಕರಣಗಳು, ಪ್ರಸೂತಿ ದೃಶ್ಯ, ಮಕ್ಕಳ ಲಾಲನೆ, ಅಲಂಕಾರ, ಸೇವಕರ ಸೇವಾ ವಿಧಾನ, ಮಲ್ಲಯುದ್ಧ, ಕಸರತ್ತು, ಸಂಗೀತ ವಿದ್ಯೆ, ನೃತ್ಯ, ದನಕರುಗಳ ಪಾಲನೆ, ಹಾವಾಡಿಗ, ಹಕ್ಕಿಗಳ ಅಂಕ, ಹಳ್ಳಿಯ ವೈದ್ಯ, ಸುರಾಪಾನ, ಮಿಥುನ ಶಿಲ್ಪಗಳ ಅಂಕಣವಿದೆ.

ಕೇಶಾಲಂಕಾರಗಳು, ಬಟ್ಟೆಬರೆಗಳ ವೈವಿಧ್ಯಕ್ಕೆ, ವಿಜಯನಗರ ಕಾಲದಲ್ಲಿ ವೈಭವದಿಂದ ಮೆರೆದ ಲೇಪಾಕ್ಷಿಯ ಪಾಪನಾಥೇಶ್ವರ ದೇವಾಲಯ ಸಂಕೀರ್ಣಕ್ಕೆ ಹೋಗಬೇಕು. ಅಲ್ಲಿಯ ಭಿತ್ತಿ-ಚಿತ್ರಗಳಲ್ಲಿ ಶಿವದರ್ಶನಕ್ಕೆ ಬಂದ ಸಾಮಾನ್ಯ ಮಹಿಳೆಯರ ಮುಡಿಗಳ ವೈವಿಧ್ಯ, ನೋಡಿಯೇ ಅರಿಯಬೇಕು. ಸಾಹಿತ್ಯದಲ್ಲಿ ವರ್ಣಿತವಾದ ಎಡ ಮುಡಿ, ಬಲಮುಡಿ, ಬಳಲ್ಮುಡಿ, ಸೋರ್ಮುಡಿ, ಪಿನ್ನೆತ್ತಿ ತುರುಬು, ಕಾಳೋರಗ ಜಡೆಗಳೆಲ್ಲ ಇವೆ. ಹೂ ಮತ್ತು ಮುತ್ತಿನ ಅಲಂಕಾರಗಳನ್ನು ಕಾಣಬಹುದು. ಪುರುಷರ ಬಣ್ಣ ಬಣ್ಣದ ಸೀರೆಗಳನ್ನು ಇಲ್ಲಿಯೇ ಕಾಣಬಹುದು.

ಪುರುಷರ ಕೇಶಾಲಂಕಾರಗಳಿಗೆ, ಉಡಿಗೆಗೆ ವೀರಗಲ್ಲುಗಳು ಹೇರಳ ಮಾಹಿತಿ ಕೊಡುತ್ತವೆ. ಆಯುಧ ಪ್ರಕಾರಗಳು, ಇನ್ನಿತರ ಯುದ್ಧ ಪರಿಕರಗಳನ್ನೂ ಅವುಗಳಲ್ಲಿ ಗುರುತಿಸಬಹುದು.

ಹೊಯ್ಸಳ ದೇವಾಲಯಗಳ ಶಿಲ್ಪಗಳಲ್ಲಿ ಸ್ತ್ರೀಶಿಲ್ಪಗಳಲ್ಲಿ ಕೊರತೆ ಇಲ್ಲ. ಆದರೆ ಅವೆಲ್ಲ ಶಿಲ್ಪಸೂತ್ರಗಳ ಆಧಾರದ ಮೇಲೆ ಕೊರೆದಂಥವು. ಹೊರಲಾರದಷ್ಟು ಆಭರಣಗಳಿಂದ ಅಲಂಕರಿಸಲ್ಪಟ್ಟವುಗಳು. ಆದರೆ ಶ್ರವಣಬೆಳ್ಗೊಳದ ಗುಳ್ಳೇಕಾಯಜ್ಜಿ ಇದಕ್ಕೆ ಅಪವಾದವಾಗಿದ್ದಾಳೆ. ಕಾವ್ಯಗಳಲ್ಲಿ ಹಾಗೂ ಮಾನಸೋಲ್ಲಾಸದಲ್ಲಿ ವರ್ಣಿತವಾದ ಅನೇಕ ಆಭರಣಗಳನ್ನು ಅವರ ಮೈಮೇಲೆ ಗುರುತಿಸಬಹುದು. ಹಲವಾರು ದೇವಾಲಯಗಳ ದ್ವಾರಪಾಲಿಕೆಯರ, ನರ್ತಕಿಯರ ಕೇಶಾಲಂಕಾರ ಹಾಗೂ ಒಡವೆಗಳು ಸಮಕಾಲೀನ ವಿನ್ಯಾಸದವು.

ವಿಶ್ವಖ್ಯಾತಿಯ ಕಲಾವಿಮರ್ಶಕ ಹಾಗೂ ದಿಲ್ಲಿಯ ರಾಷ್ಟ್ರೀಯ ಕಲಾಶಾಲೆಯ ನಿರ್ದೇಶಕರಾಗಿದ್ದ ದಿ. ಡಾ|| ಸಿ. ಶಿವರಾಮಮೂರ್ತಿಗಳು, ನನ್ನ ಸಂಶೋಧನಾಕ್ರಮವನ್ನು ಬಿಚ್ಚು ಮನಸ್ಸಿನಿಂದ ಪ್ರಶಂಸಿಸಿದ್ದೇ ಅಲ್ಲದೇ ದಿಲ್ಲಿಯ ಪ್ರಸಿದ್ಧ ಪ್ರಕಾಶಕರಿಗೆ ನನ್ನ ಪಿಎಚ್. ಡಿ. ಮಹಾಪ್ರಬಂಧದ ಪುಸ್ತಕ ರೂಪವನ್ನು ಪ್ರಕಟಿಸುವಂತೆ ಸೂಚಿಸಿದ್ದು ನನ್ನ ಸುಕೃತವೆಂದು ತಿಳಿದಿದ್ದೇನೆ. ೧೯೮೦ರಲ್ಲಿ ಹೊರಬಂದ ಪುಸ್ತಕದಲ್ಲಿ ಶಿಲ್ಪಾಧಾರಿತ ಎರಡುನೂರ ಐವತ್ತು ರೇಖಾಚಿತ್ರಗಳನ್ನು ಸೇರಿಸಲಾಗಿತ್ತು. ನೂರು ಶಬ್ದಗಳಲ್ಲಿ ಹೇಳುವದನ್ನು ಒಂದೇ ಚಿತ್ರ ದೃಢೀಕರಿಸುತ್ತದೆ, ಎಂಬುದನ್ನು ಎಲ್ಲರೂ ಬಲ್ಲರು. ಈ ಪುಸ್ತಕ ವಿದೇಶದಲ್ಲೂ ಮನ್ನಣೆ ಪಡೆಯಿತು. ವಾಶಿಂಗ್ಟನ್ ವಿಶ್ವವಿದ್ಯಾಲಯದ ಡಾ|| ಫ್ರಾಂಕ್ ಕೊನ್‌ಲೊನ್ ಸೇರಿದಂತೆ ಅನೇಕರು ವೈಯಕ್ತಿಕವಾಗಿ ಮೆಚ್ಚಿಗೆ ತಿಳಿಸಿದ್ದಾರೆ. "ಕದಂಬಕುಲ" ಖ್ಯಾತಿಯ ದಿ. ಡಾ|| ಜಾರ್ಜ್ ಮೊರ್‍ಯಾಸ್ ಅವರು ತಮ್ಮ INDIA PAST & PRESENT ತ್ರೈಮಾಸಿಕ ದಲ್ಲಿ ಶಿಕ್ಷಣ ಸಂಬಂಧಿತ ಅಧ್ಯಾಯವನ್ನು ಇಡಿಯದಾಗಿ ಪ್ರಕಟಿಸಿದರು.

ಬಳಿಕ ಮುಂಬೈ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಡಾ|| ಶ್ರೀನಿವಾಸ ಹಾವನೂರರು ಪ್ರಾಚೀನ ಕರ್ನಾಟಕ ಶಿಕ್ಷಣ ಕ್ರಮ ಕುರಿತು ಪುಸ್ತಕ ಬರೆದು ಕೊಟ್ಟರೆ ಪ್ರಕಟಿಸುವದಾಗಿ ಹೇಳಿದರು. ಈ ಅವಕಾಶ ಹುಸಿ ಹೋಗಗೊಡದೇ ಹಸ್ತಪ್ರತಿ ಬರೆದು ಕೊಟ್ಟೆ. ಸುಮಾರು ನೂರು ಚಿತ್ರಗಳಿದ್ದ ಈ ಪುಸ್ತಕ ನೋಡಿದವರು, ಹಿಂದಿನ ವಿದ್ಯಾಭ್ಯಾಸ ಕುರಿತು ಇಷ್ಟೊಂದು ಮಾಹಿತಿ ಚಿತ್ರಗಳಿವೆಯೇ! ಎಂದು ಉದ್ಗರಿಸಿದ್ದು ಇದೆ. ಕರ್ನಾಟಕದ ಶಿಕ್ಷಣ ಪರಂಪರೆ, ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಗಳಿಸಿತು. ಇದರ ಇಂಗ್ಲಿಷ್ ಅನುವಾದ ಸದ್ಯದಲ್ಲಿ ಬರಲಿದೆ.

ಸಾಮಾಜಿಕ ಇತಿಹಾಸವು ಜೀವಂತ ಇತಿಹಾಸವಾಗಿ ಮುಂದರಿಯಬೇಕಿದ್ದರೆ ಜ್ವಲಂತ ಸಮಸ್ಯೆಗಳನ್ನು ಚರಿತ್ರಕಾರರು ಜನತೆಯ ಗಮನಕ್ಕೆ ಆಗಾಗ ತರುತ್ತಲೇ ಇರಬೇಕಾಗುತ್ತದೆ. ಕರ್ನಾಟಕದ ಕೆರೆಗಳ ಕುರಿತಾದ ಸಂಶೋಧನೆ ನಡೆಸಿದ ಪ್ರೊ|| ಜಿ. ಎಸ್. ದೀಕ್ಷಿತರು ಪುರಾತನ ಬಾವಿ ಕೆರೆಗಳ ನಿರ್ಮಾಣ, ರಿಪೇರಿ, ಆಣೆಕಟ್ಟುಗಳ ನಿರ್ವಹಣೆಯಲ್ಲಿ ಸಾರ್ವಜನಿಕರ ಪಾತ್ರವನ್ನು ಎತ್ತಿತೋರಿಸಿದ್ದೇ ಅಲ್ಲದೇ ೧೯೯೬ನೇ ವರ್ಷದ ಅಕಾದೆಮಿಯ ಧಾರವಾಡ ಅಧಿವೇಶನದ ಅಧ್ಯಕ್ಷೀಯ ಭಾಷಣದಲ್ಲಿ ನೀರಿನ ಬರ ಅಧಿಕವಾಗುವ ಸಂಭವದ ಬಗ್ಗೆ ಮುನ್ನೆಚ್ಚರ ನೀಡಿದ್ದರು. ಸಮಸಾಮಯಿಕ ಸಮಸ್ಯೆಗಳನ್ನು ಇತಿಹಾಸ ಸಂಶೋಧಕರು ಎತ್ತಿಕೊಂಡು ವಿವೇಚಿಸುವದು ಬಗ್ಗೆ ಸೂಕ್ತ. ಇಂದು ಕಲುಷಿತ ಪರಿಸರದ ಸಮಸ್ಯೆ ಭೂತಾಕಾರವಾಗಿ ತಲೆಯೆತ್ತಿದೆ. ಮುಂಬೈಯ ಫಾದರ್ ಹೆರಾಸ್ ಸಂಸ್ಥೆಯು ೭೫ನೇ ವರ್ಧಂತಿಯನ್ನು ಆಚರಿಸುತ್ತಿರುವ ಸಂದರ್ಭದಲ್ಲಿ ಅವರ ಮುಖಪತ್ರಿಕೆ 'ಇಂಡಿಕಾ' ವಿಶೇಷ ಸಂಚಿಕೆ ಹೊರತರುತ್ತಿದೆ. ಅದಕ್ಕೆ ವಿಶೇಷ ಸಂಶೋಧನಾ ಲೇಖ ಕೇಳಿದಾಗ ಮಧ್ಯಯುಗದ ಕನ್ನಡಿಗರ ಪರಿಸರ ಪ್ರಜ್ಞೆ (*Ecological Awareness in Medieval Karnataka*) ಎಂಬ ಸಚಿತ್ರ ಲೇಖ ಬರೆದೆ. ಸದ್ಯದಲ್ಲೇ ಅದು ಪ್ರಕಟವಾಗಲಿದೆ. ಸಂಶೋಧಕನ, ಅದೂ ಜನಜೀವನದ ಚರಿತ್ರೆಯ ಸಂಶೋಧಕನ ವ್ಯಾಸಂಗದ ಹರಹು ವಿಸ್ತಾರವಾಗಿರಬೇಕು, ಸಾಮಯಿಕವಿರಬೇಕು. ಹಿಂದೆಂದೋ ಡಾಕ್ಟರೇಟಿಗೆ ಬರೆದ ವಿಷಯವನ್ನು ಹಿಂದು-ಮುಂದಾಗಿ ಬರೆದು, ತಲೆಬಾಲ ಸೇರಿಸಿ, ಪ್ರಬಂಧಗಳ ಸಂಖ್ಯೆ ಹೆಚ್ಚಿಸಲು ಪ್ರಯತ್ನಿಸುವಂತಿಲ್ಲ. ಇಂದು, ಇಂಧನದ ತೀವ್ರ ಕೊರತೆ, ಪೆಟ್ರೋಲ್ ಇಲ್ಲದ ನಮ್ಮ ದೇಶದಲ್ಲಿ ವಾಹನಗಳ ನೂಕುನುಗ್ಗಲು, ವಾಯು ಮಾಲಿನ್ಯಗಳಂಥ ಪ್ರಚಲಿತ ಸಮಸ್ಯೆ ವಿಚಾರಗಳು ಕಾಡಿದ್ದರಿಂದ, ಕಾರು, ವ್ಯಾನುಗಳನ್ನು ಬಳಸದೆಯೇ ಸುಖಪ್ರಯಾಣದ ಸಾಧ್ಯತೆಯನ್ನು ನಮ್ಮ ಹಿರಿಯರು ರೂಢಿಸಿಕೊಂಡ ಬಗೆಯನ್ನು ಈ ವರ್ಷ ಪ್ರಸ್ತುತ ಪಡಿಸಲಿರುವ ಪ್ರಬಂಧದಲ್ಲಿ ಕಾಣಿಸಲು ಹವಣಿಸಿದ್ದೇನೆ.

ಕೊನೆಯದಾಗಿ, ಕರ್ನಾಟಕ ಇತಿಹಾಸ ಹಾಗೂ ಸಂಸ್ಕೃತಿ ಪ್ರಚಾರ, ರಾಜ್ಯ, ರಾಷ್ಟ್ರಗಳ ಮೇರೆ ಮೀರಿ ವಿಶ್ವದಾದ್ಯಂತ ಹರಡಲು ನಮ್ಮ ಕಾಮತ ಕುಟುಂಬ, ನಡೆಸುತ್ತಿರುವ ಸಕ್ರಿಯ ಸೇವೆಯ ಬಗ್ಗೆ ಎರಡು ಮಾತು. ದೇಶದ ಸ್ವಾತಂತ್ರ್ಯ ಸುವರ್ಣ ಮಹೋತ್ಸವ ಸಂದರ್ಭದಲ್ಲಿ, ೧೯೯೭ನೇ ಆಗಸ್ಟ್ ತಿಂಗಳಿನಲ್ಲಿ, ನಮ್ಮದೇ ಆದ www.Kamat.com. ಎಂಬ ಇಂಟರ್‌ನೆಟ್ ವೆಬ್‌ಸ್ಯಾಟ್ ಪ್ರಾರಂಭಿಸಿದೆವು. ಇದಕ್ಕಾಗಿ ಇತಿಹಾಸಕ್ಕೆ ಸಂಬಂಧಿಸಿದ ಲೇಖನಗಳನ್ನು ನಾನು ಬರೆದೆ, ನನ್ನ ಪತಿ ವಿಜ್ಞಾನಿ, ಲೇಖಕ, ಛಾಯಾಚಿತ್ರಕಾರ, ಡಾ|| ಕೃಷ್ಣಾನಂದ ಕಾಮತರು, ಬೇಕಾಗುವ ಛಾಯಾಚಿತ್ರ, ರೇಖಾಚಿತ್ರ, ನಕ್ಷೆಗಳನ್ನೆಲ್ಲ ತಯಾರಿಸುತ್ತಾರೆ. ಪ್ರತಿವಾರವೂ ಒಂದು ಸಚಿತ್ರ ಲೇಖನವನ್ನು ಅಂಚೆಯಿಂದ ಅಮೇರಿಕೆಗೆ ಕಳಿಸುತ್ತಾರೆ. ಅಲ್ಲಿ ವಾಸಿಸುತ್ತಿರುವ ನಮ್ಮ ಮಗ, ಚಿತ್ರಗಳನ್ನು 'ಸ್ಕ್ಯಾನ್ ' ಮಾಡಿ ಆಕರ್ಷಕ ಗ್ರಾಫಿಕ್‌ಗಳೊಂದಿಗೆ ಅಳವಡಿಸಿಕೊಳ್ಳುತ್ತಾನೆ. ಸೊಸೆ ಮಾಹಿತಿಯನ್ನು ಕಂಪ್ಯೂಟರಿಗೆ "ಊಡು"ತ್ತಾಳೆ! ಇದನ್ನು ಬಿತ್ತರಿಸಿದಾಗ ವಿಶ್ವದ ಯಾವ ಮೂಲೆಯಲ್ಲಿ ಇದ್ದವರೂ ನೋಡಿ ಸವಿಯಬಹುದು, ಅರಿಯಬಹುದು, ನೋಡುಗರ ಸಂಖ್ಯೆಯನ್ನು ಕಂಪ್ಯೂಟರ್ ದಾಖಲಿಸುತ್ತದೆ. ನೋಡುಗರ ಅನಿಸಿಕೆಗಳನ್ನು ಈ - ಮೇಲ್ ಮೂಲಕ ತಂದು ತಲುಪಿಸುತ್ತದೆ. ನಾವು ಕಂಪ್ಯುಟರ್ ಹಾಗೂ ಈ-ಮೇಲ್ ಸವಲತ್ತು ಹೊಂದಿಲ್ಲ. ಆದ್ದರಿಂದ ಬಿತ್ತರಗೊಂಡ ಕಾರ್ಯಕ್ರಮಗಳ ವರದಿ ಹಾಗೂ ಈ-ಮೇಲ್‌ದ ಮುದ್ರಿತ ಹಾಳೆಗಳನ್ನು ಮಗನು ನಿಯಮಿತವಾಗಿ ಕಳಿಸಿ ಕೊಡುತ್ತಾನೆ. ಕಳೆದ ನಾಲ್ಕುವರ್ಷಗಳಲ್ಲಿ ನಮ್ಮ ಇಂಟರ್‌ನೆಟ್ ಮುನ್ನಡೆ ಸಾಗಿಸಿಯೇ ಇದೆ. ಪ್ರತಿದಿನ ಹದಿನೈದರಿಂದ ಐವತ್ತು ಸಹಸ್ರ ಜನ ಪ್ರಪಂಚದಾದ್ಯಂತ ವೀಕ್ಷಿಸುತ್ತಿದ್ದಾರೆ, ಎಂದರೆ ನಂಬುವದು ಕಷ್ಟ! ಮೊನ್ನೆಯ ಸ್ವಾತಂತ್ರ್ಯೋತ್ಸವದಿನದಂದು ಈ ಸಂಖ್ಯೆ ಎಂಬತ್ತು ಸಾವಿರಕ್ಕೆ ಏರಿದ್ದು ದೊಡ್ಡದಾಖಲೆ! ಇದಕ್ಕಾಗಿ ನಾವು ಯಾರಿಂದಲೂ ಧನಸಹಾಯ ಪಡೆದಿಲ್ಲ. ಜಾಹೀರಾತು ಹಾಕುವುದಿಲ್ಲ, ವೆಬ್‌ಸ್ಯಾಟ್‌ದ ಯಾವತ್ತೂ ಕೆಲಸಗಳನ್ನು ನಾವು ನಾಲ್ವರು ನಿರ್ವಹಿಸುವದೇ ಅಲ್ಲದೇ ಅದರ ಯಾವುದೇ ವೆಚ್ಚವನ್ನು, ನಾವೇ ಭರಿಸುತ್ತೇವೆ.

ಈ ಸಾಹಸಕ್ಕೆ ಬಂದ ಕೆಲ ಪ್ರತಿಕ್ರಿಯೆಗಳು ಸ್ವಾರಸ್ಯಮಯವಾಗಿವೆ. 'ಭಿಕ್ಷಾಟನೆಯ ಶಿವ' ಶಿಲ್ಪಿಗಳಿಗೆ ಪ್ರಿಯವಸ್ತುವಲ್ಲವೇ? ನಮ್ಮಲ್ಲಿ ಭಿಕ್ಷೆಯ ಪರಂಪರೆಯ ಜೊತೆಗೆ, ಭಿಕ್ಷುಕರ ನಿರ್ಬಂಧನೆಗೆ ಸರಕಾರ ಕೈಕೊಂಡ ಕ್ರಮಗಳ ಬಗ್ಗೆ ಡಾ|| ಕಾಮತರು ಸಚಿತ್ರ ಲೇಖವನ್ನು ವೆಬ್‌ಸ್ಯಾಟಿನಲ್ಲಿ ಹಾಕಿದ್ದರು. ಅಮೇರಿಕೆಯ ವಿಸ್ಕಾನ್ಸಿನ್ ಟಿ.ವಿ.ಯವರು ದೂರವಾಣಿ ಮೂಲಕ ಸಂಪರ್ಕಿಸಿ, ಇಂಥ ತೀರ ಪ್ರಾಚೀನ ಇತಿಹಾಸವಿದ್ದ ವಿನಮ್ರತೆ ಬೋಧಿಸುವ, ಸುಂದರ ಬೀದಿ ಸಂಸ್ಕೃತಿಯ (*Asphalt Culture*) ಮಾದರಿ

ಯನ್ನು ಸರಕಾರ ಏಕೆ ನಿರ್ಬಂಧಿಸಬೇಕು? ಎಂದು ಕೇಳಿದರು. ಎಲ್ಲ ದೇವಾಲಯಗಳಲ್ಲೂ ಕಂಡುಬರುವ ಮಿಥುನಶಿಲ್ಪಗಳ ಹಿನ್ನೆಲೆ ಮತ್ತು ಲೈಂಗಿಕ ದೃಶ್ಯಗಳ ಸಾಂಕೇತಿಕ ತಿಳುವಳಿಕೆ ನೀಡುವ ಬರವಣಿಗೆ ಬಿತ್ತರಗೊಂಡಾಗ, ಪ್ಯಾರಿಸ್ ಟಿ.ವಿಯ ಅಧಿಕಾರಿ ಮಹಿಳೆ, ನಮ್ಮಿಬ್ಬರನ್ನೂ ದೂರವಾಣಿ ಮೂಲಕ ಸಂಪರ್ಕಿಸಿದಳು. ಅಂಥ ವಿಗ್ರಹಗಳನ್ನು ಏಕೆ ಪೂಜಿಸಬೇಕು? ಖಜುರಾಹೋ ಆಳಿದ ಅರಸರು ಇಂಥ ದೇವತೆಗಳನ್ನು ಮಾತ್ರ ಆರಾಧಿಸುತ್ತಿದ್ದರೇ? ಎಂದೆಲ್ಲ ವಿಚಾರಿಸಿ ಕೊಂಡಳು! ಅಂಥ ಮಿಥುನಶಿಲ್ಪಗಳು ಎಲ್ಲೆಡೆ ಇದ್ದು ಅಲಂಕಾರಿತವಾಗಿ ಇವೆಯೇ ಹೊರತು ಪೂಜೆಗಲ್ಲ! ಎಂದು ವಿವರಿಸಬೇಕಾಯಿತು. ಮಂಚಗಳ ವಿವಿಧ ಪ್ರಾಚೀನ ರೂಪಗಳನ್ನು ನೋಡಿದ ಇಟಲಿಯ ವ್ಯಾಪಾರಿಯೋರ್ವ ಅವುಗಳ ಡಿಝೈನ್ ಉಪಯೋಗಿಸಲು ಅನುಮತಿ ಕೇಳಿದ. "ಪುರುಷರಿಗೂ ಸೀರೆ!" ಯ ಇಂಗ್ಲಿಷ್ ರೂಪ ಪ್ರಸಾರವಾದಾಗ ಬ್ರಿಟನ್ನಿನ ನಾಗರಿಕನೊಬ್ಬ ಅಂಥ ಸೀರೆಯುಟ್ಟು ಮೆರೆಯುವ ಇಚ್ಛೆಯನ್ನು ವ್ಯಕ್ತಗೊಳಿಸಿದ. ಟೀಪುಸುಲ್ತಾನ ದ್ವಿಶತಮಾನೋತ್ಸವ ಸ್ಮರಣೆಯ ಕಾರ್ಯಕ್ರಮ ಪ್ರಸಾರ ಮಾಡಿದ ಮೊದಲಿಗರಲ್ಲಿ ಕಾಮತ್ ವೆಬ್‌ಸ್ಯಾಟ್ ಬರುತ್ತದೆ. ಬ್ರಿಟಿಶನಾಗರಿಕರಿಂದ ಮೆಚ್ಚಿಗೆ ಪಡೆಯಿತು. ಕರ್ನಾಟಕ ಸರಕಾರದಿಂದ ದೊಡ್ಡ ಧನಸಹಾಯ ಪಡೆದ ಟೀಪುವೆಬ್‌ಸ್ಯಾಟ್, ನಮ್ಮ ಕಾರ್ಯಕ್ರಮವನ್ನು ಎರವಲು ಪಡೆದದ್ದು ಕುತೂಹಲಕಾರಿ! ಇಂಗ್ಲೆಂಡಿನ ಪತ್ರಿಕೆಯೊಂದು ನಮ್ಮ ಅನುಮತಿ ಪಡೆದು ಈ ಲೇಖನವನ್ನು ಮರು ಮುದ್ರಿಸಿತು.

ಜನಸಾಮಾನ್ಯರಂತೆ ವಿದ್ವತ್ ಸಂಸ್ಥೆಗಳೂ ಈ ವೆಬ್‌ಸ್ಯಾಟ್ ನೋಡಿ ತಲೆದೂಗಿದ್ದಾರೆ. ಎನ್‌ಸ್ಯಾಕ್ಲೊಪೀಡಿಯ ಬ್ರಿಟಾನಿಕ, ಸ್ಮಿತ್‌ಸೋನಿಯನ್ ಸಂಸ್ಥೆ, 'ಟ್ಯಾಮ್' ಸಾಪ್ತಾಹಿಕಗಳು ಭಾರತ ಕುರಿತ ಉತ್ತಮ ವೆಬ್‌ಸ್ಯಾಟ್‌ಗಳಲ್ಲಿ ನಮ್ಮದೂ ಒಂದೆಂದು ಪರಿಗಣಿಸಿವೆ. ಮೋಜಿನ ಮಾತೆಂದರೆ ಭಾರತ ಸಂಸ್ಕೃತಿ ಪ್ರಚಾರಕ್ಕೆಂದೇ ವಾಶಿಂಗ್ಟನ್‌ದಲ್ಲಿ ಬೇರೂರಿದ ಕೇಂದ್ರ ಸರಕಾರದ *Cultural Affairs* ಆಫೀಸಿನವರು ಯಾರೇ ಏನೇ ವಿಷಯ ಕೇಳಿದರೂ ಕಾಮತ್ ವೆಬ್‌ಸ್ಯಾಟಿಗೆ ವಿಚಾರಿಸಿ! ಎಂದು ಹೇಳುವ ಪ್ರವೃತ್ತಿ ಬೆಳಸಿಕೊಂಡಿದ್ದಾರೆ. ಹಲವು ಭಾರತೀಯ ಪತ್ರಿಕೆಗಳು ನಮ್ಮ ಚಿತ್ರ-ಲೇಖನಗಳನ್ನು ಅನುಮತಿ ಇಲ್ಲದೆಯೇ ಪ್ರಕಟಿಸುತ್ತವೆ! ವಿದೇಶಿ ಪತ್ರಿಕೆಗಳು ಅನುಮತಿ ಪಡೆದು, ಪ್ರಕಟಿಸಿ ಪ್ರತಿಗಳನ್ನು ಕಳಿಸುವ ಸೌಜನ್ಯತೋರುತ್ತವೆ. ಇವೆಲ್ಲವೂ ನಮ್ಮ ಬರವಣಿಗೆಯ ಜನಪ್ರಿಯತೆಯ ಸೂಚಿಯೆಂದು ನಾವು ಅಭಿಮಾನ ಪಡುತ್ತೇವೆ.

ಇಂಟರ್‌ನೆಟ್ ಸಾಧನೆಯಿಂದ ನಮ್ಮನ್ನು ಹುಡುಕಿಕೊಂಡು ಬಂದ ವಿದೇಶೀ ಮಾಧ್ಯಮತಜ್ಞರಿದ್ದಾರೆ. 'ಮೋಟಾರ್ ಸ್ಯಾಕಲ್ ಮಹಿಳೆ'ಯಂದು ಪ್ರಸಿದ್ಧಳಾದ ಕಾರ್ಲಾಕಿಂಗ್, ಮನೆಗೇ ಬಂದು, ನಮ್ಮಿಬ್ಬರನ್ನು ಸಂದರ್ಶಿಸಿ *Lowtech-high result website!* ಎಂದು ಉದ್ಗರಿಸಿ ಹೋದಳು. ಅವಳನ್ನು ಅನುಸರಿಸಿ *BBC* ಗಾಗಿ ಸಂದರ್ಶಿಸಲು *NDTV* ತಂಡ ಬಂದಿತ್ತು. ನ್ಯೂಯಾರ್ಕದ ಪತ್ರಕರ್ತ ಹಾಗೂ ಮಾಧ್ಯಮ ಪರಿಣತರಾದ ಪಾಲ್‌ಸ್ಮಾರ್ಟ್ ಎಂಬುವರು ತಮ್ಮ ಕಲಾವಿದೆ ಪತ್ನಿಯೊಂದಿಗೆ ಬಂದು ನಮ್ಮೊಡನೆ ಮೂರು ಗಂಟೆ ಸಮಯ ಇದ್ದು, ತಮ್ಮ ಪುಸ್ತಕಕ್ಕೆ ಬೇಕಾದ ಮಾಹಿತಿ ಪಡೆದುಕೊಂಡರು. ಇಂಟರ್‌ನೆಟ್‌ಗಾಗಿಯೇ ಹೇಳಿ ಮಾಡಿಸಿದ ಪ್ರತಿಭೆ! ಎಂದು ಕಾಮತರನ್ನು ಹೊಗಳಿದರು.

ನಮ್ಮ ಕಾರ್ಯಕ್ರಮಗಳು ಬಿಡಿಯಾಗಿ ರಷ್ಯನ್, ಜರ್ಮನ್, ಚೀನಿ ಭಾಷೆಗಳಲ್ಲಿ ಪರಿವರ್ತಿಸಲಾಗಿದೆ. ಅದನ್ನು ಇಡಿಯದಾಗಿ ಸ್ಪ್ಯಾನಿಶ್ ಭಾಷೆಗೆ ಅನುವಾದಿಸುವ ಕೆಲಸ ಈಗಾಗಲೇ ಪ್ರಾರಂಭವಾಗಿದೆ. ಇತ್ತೀಚಿನ ಬೆಳವಣಿಗೆಯಲ್ಲಿ ನೋಡುಗರ ಸಂಖ್ಯೆಯಲ್ಲಿ ಭಾರತೀಯ ಮೂಲದವರಲ್ಲಿ ಗಮನಾರ್ಹ ಹೆಚ್ಚಳವಿದೆ. ಹೀಗೆ ಹೊಚ್ಚ ಹೊಸ ಮಾಧ್ಯಮ ವೊಂದು, ನಮ್ಮ ನಿವೃತ್ತಜೀವನದಲ್ಲಿ ಪ್ರವೇಶಿಸಿ, ಹಗಲಿರುಳೂ ದುಡಿಯುವಂತೆ ಮಾಡಿದೆ. ಅದು ನಮ್ಮಿಬ್ಬರ ಬೇರೆ ಬೇರೆ ಆಸಕ್ತಿಯ ಕ್ಷೇತ್ರಗಳಿಗೇ ಸಂಬಂಧಿಸಿರುವದರಿಂದ ಕ್ರಿಯಾಶೀಲತೆಯ ನೆಮ್ಮದಿಯೊಂದಿಗೆ ಕನ್ನಡನಾಡಿನ ಸಂಸ್ಕೃತಿ ಪ್ರಚಾರದ ತೃಪ್ತಿ ದೊರೆತಿದೆ.

ಇಲ್ಲಿ ನೆರೆದ ಹಿರಿಕಿರಿಯ ವೃತ್ತಿ ಮತ್ತು ಹವ್ಯಾಸಿ ಇತಿಹಾಸ ಕಾರರಲ್ಲಿ ನನ್ನ ಚಿಕ್ಕವಿನಂತಿ; ಅಂತರ್ರಾಷ್ಟ್ರೀಯ ಸಮುದಾಯಕ್ಕೆ ರುಚಿಸಬಹುದಾದ ಆಕರ್ಷಕವಾದ ಮೇಲ್ಮಟ್ಟದ ಸಚಿತ್ರ ಲೇಖನಗಳಿದ್ದರೆ ಕಳಿಸಿಕೊಡಿ! ನಿಮ್ಮ ಹೆಸರು ಬಳಸಿಯೇ ಅಳವಡಿಸಿಕೊಳ್ಳಲಾಗುವುದು. ಆದರಿಂದ ಧನಲಾಭವಿಲ್ಲ ದಿದ್ದರೂ ನಮ್ಮ ಇತಿಹಾಸ ಪರಂಪರೆಯ ನೋಟಗಳನ್ನು ಜಗತ್ತಿಗೆ ಪರಿಚಯಿಸಿದ ಖುಷಿ ನಿಮ್ಮದಾಗುತ್ತದೆ.

ಈ ತನಕ, ನಾನು ಕೈಕೊಂಡ ಸಂಶೋಧನಾಕ್ರಮ ಮತ್ತು ಜನರಿಗೆ ನಿಕಟವಾಗುವ ಚರಿತ್ರೆಯ ಹೊರಳು ನೋಟಗಳನ್ನು ಕೊಡಲು ಯತ್ನಿಸಿದ್ದೇನೆ. *Living Fossils* ಅಥವಾ ಜೀವಂತ ಪಳೆಯುಳಿಕೆಗಳು ಜೀವಶಾಸ್ತ್ರದ ಅಧ್ಯಯನಕ್ಕೆ ಸಹಾಯವಾಗುವಂತೆ ನಮ್ಮ ಕೆಲ ಜೀವಂತ ಸಂಪ್ರದಾಯಗಳ ಅಭ್ಯಾಸ ನಡೆಯಬೇಕು ಎಂದು ಆಶಿಸುತ್ತೇನೆ. ಈ ಕೆಲ ವಿಚಾರಗಳನ್ನು ತಮ್ಮೊಂದಿಗೆ ಹಂಚಿಕೊಳ್ಳಲು ಸಾಧ್ಯವಾಗಿಸಿದ್ದಕ್ಕಾಗಿ ಈ ಅಧ್ಯಕ್ಷ ಸ್ಥಾನ ಒದಗಿಸಿದ್ದಕ್ಕಾಗಿ, ಅಕಾದೆಮಿಯವರಿಗೆ ವಂದನೆಯನ್ನು ಇನ್ನೊಮ್ಮೆ ಸಲ್ಲಿಸಿ ನನ್ನ ಮಾತು ಮುಗಿಸುತ್ತೇನೆ.



# ಸಮ್ಮೇಳನಾಧ್ಯಕ್ಷೆ ಡಾ॥ ಜ್ಯೋತ್ಸ್ನಾ ಕಾಮತ್

## ಬದುಕು-ಬರಹದ ಪಕ್ಷಿ ನೋಟ

| | | | |
|---|---|---|---|
| ಪೂರ್ಣ ಹೆಸರು | : | ಡಾ. (ಶ್ರೀಮತಿ) ಜ್ಯೋತ್ಸ್ನಾ ಕೃಷ್ಣಾನಂದ ಕಾಮತ್ | |
| ಹುಟ್ಟೂರು | : | ವಾಯಿ, ಸಾತಾರಾ ಜಿಲ್ಲೆ, ಮಹಾರಾಷ್ಟ್ರ | |
| ಜನ್ಮ ದಿನಾಂಕ | : | ೨೪-೦೧-೧೯೩೭ | |
| ಶಿಕ್ಷಣ | : | ೧. ಬಿ. ಎ., (ಆನರ್ಸ್) | ೧೯೫೭ |
| | | ೨. ಡಿಪ್. ಎಡ್., ಕರ್ನಾಟಕ ಸರಕಾರ | ೧೯೫೮ |
| | | ೩. ಎಂ. ಎ., ಕರ್ನಾಟಕ ವಿಶ್ವವಿದ್ಯಾಲಯ | ೧೯೬೧ |
| | | ೪. ಪಿಎಚ್. ಡಿ., ಕರ್ನಾಟಕ ವಿಶ್ವವಿದ್ಯಾಲಯ | ೧೯೭೨ |
| ವೃತ್ತಿ | : | ಆಕಾಶವಾಣಿಯ ಆಡಳಿತ, ಸಂಶೋಧನೆ;<br>ಬೆಂಗಳೂರು ಆಕಾಶವಾಣಿ ಕೇಂದ್ರ ನಿರ್ದೇಶಕಿಯಾಗಿ ನಿವೃತ್ತಿ; | |
| ಹವ್ಯಾಸಗಳು | : | ಬರವಣಿಗೆ, ಪರ್ಯಟನ | |
| ಬಲ್ಲ ಭಾಷೆಗಳು | : | ಕೊಂಕಣಿ, ಕನ್ನಡ, ಇಂಗ್ಲೀಷ್, ಹಿಂದಿ, ಸಂಸ್ಕೃತ, ಮರಾಠಿ, ಬಂಗಾಲಿ | |
| ಕಾವ್ಯನಾಮ | : | ಡಾ. ಜ್ಯೋತ್ಸ್ನಾ ಕಾಮತ್ | |
| ಪತಿಯ ಹೆಸರು | : | ಕೃಷ್ಣಾನಂದ ಕಾಮತ್ | |
| ಮಕ್ಕಳು | : | ಒಬ್ಬನೇ ಮಗ, ವಿಕಾಸ ಕೃಷ್ಣಾನಂದ ಕಾಮತ್ | |
| ಪ್ರಕಟಿತ ಲೇಖನಗಳು | : | ಸುಮಾರು ಒಂದು ನೂರು. ಕೊಂಕಣಿ, ಕನ್ನಡ, ಇಂಗ್ಲೀಷ್, ಭಾಷೆಗಳಲ್ಲಿ | |
| ಪ್ರಕಟಿತ ಪುಸ್ತಕಗಳು | : | ಕೆಳಗಿನಂತೆ | |

| ಅ.ನಂ. | ಪುಸ್ತಕದ ಹೆಸರು | ಸಾಹಿತ್ಯ ಪ್ರಕಾರ | ಪ್ರಕಾಶಕರು | ಪ್ರಕಟಣೆಯ ವರ್ಷ |
|---|---|---|---|---|
| ೧. | ಸೋಶಿಯಲ್ ಲ್ಯಾಫ್ ಇನ್ ಮಿಡಿವಲ್ ಕರ್ನಾಟಕ | ಇತಿಹಾಸ | ಅಭಿನವ ಪಬ್ಲಿಕೇಶನ್ಸ್, ದಿಲ್ಲಿ | ೧೯೮೦ |
| ೨. | ಕರ್ನಾಟಕ ಶಿಕ್ಷಣ ಪರಂಪರೆ | ಸಂಶೋಧನೆ | ಮುಂಬಯಿ ವಿಶ್ವವಿದ್ಯಾಲಯ | ೧೯೮೮ |
| ೩. | ಸಂಸಾರದಲ್ಲಿ ಸ್ವಾರಸ್ಯ | ಹಾಸ್ಯ ಪ್ರಬಂಧಗಳು | ತ. ವೆಂ. ಸ್ಮಾರಕ ಪ್ರಕಾಶನ | ೧೯೮೭ |
| ೪. | ಸಂಸಾರದಲ್ಲಿ ಸ್ವಾರಸ್ಯ (ದ್ವಿತೀಯ ಮುದ್ರಣ) | ” | ಪುಸ್ತಕಾಲಯ, ಬೆಂಗಳೂರು | ೧೯೯೨ |
| ೫. | ಹೀಗಿದ್ದೇವೆ ನಾವು | ಲಘು ಬರಹಗಳು | ಪುಸ್ತಕಾಲಯ, ಬೆಂಗಳೂರು | ೧೯೯೨ |
| ೬. | ಮಹಿಳೆ : ಒಂದು ಅಧ್ಯಯನ | ಸಂಶೋಧನೆ | ನವಕರ್ನಾಟಕ ಪ್ರಕಾಶನ, ಬೆಂಗಳೂರು | ೧೯೯೯ |
| ೭. | ನಗೆ-ಕೇದಿಗೆ | ವಿನೋದ ಸಾಹಿತ್ಯ | ಮನೋಹರ ಗ್ರಂಥಮಾಲಾ, ಧಾರವಾಡ | ೧೯೯೯ |
| ೮. | ನೆನಪಿನಲ್ಲಿ ನಿಂದವರು | ಸ್ಮೃತಿ ಚಿತ್ರಗಳು | ಮಹಿಳಾ ಸಾಹಿತಿಕಾ, ಹುಬ್ಬಳ್ಳಿ | ೨೦೦೦ |
| ೯. | ಮಹಿಳೆ : ಅಂದು-ಇಂದು | ಸಂಶೋಧನೆ | ಪ್ರೇಮಸಾಯಿ ಪ್ರಕಾಶನ, ಬೆಂಗಳೂರು | ಅಚ್ಚಿನಲ್ಲಿ |
| ೧೦. | ಬೆಡಗಿನ ಬದುಕು | ಪ್ರಾಚೀನ ಸಾಮಾಜಿಕ ಜೀವನ | ಶ್ರೀವಾರಿ ಪ್ರಕಾಶನ ಬೆಂಗಳೂರು | ಅಚ್ಚಿನಲ್ಲಿ |

**ಬರವಣಿಗೆಗೆ ಬಂದ ಬಹುಮಾನಗಳು**

೧. ಕರ್ನಾಟಕ ಶಿಕ್ಷಣ ಪರಂಪರೆ-೧೯೮೮ನೇ ವರ್ಷದ ಉತ್ತಮ ಸಂಶೋಧನಾ ಗ್ರಂಥವೆಂದು ಪರಿಗಣಿಸಿ **ಕರ್ನಾಟಕ ಸಾಹಿತ್ಯ ಅಕಾಡೆಮಿಯು ಪ್ರಥಮ ಬಹುಮಾನ** ನೀಡಿ ಗೌರವಿಸಿತು.

೨. ಕನ್ನಡಕ್ಕೆ ಸಲ್ಲಿಸಿದ ಅಪಾರ ಸೇವೆ ಗುರುತಿಸಿ, ಕರ್ನಾಟಕ ಸರಕಾರ ೧೯೯೧ರ ಸಾಲಿನ **ರಾಜ್ಯೋತ್ಸವ ಪ್ರಶಸ್ತಿ** ಕೊಟ್ಟು ಸನ್ಮಾನಿಸಿತು.

೩. ಉತ್ತರ ಕನ್ನಡ ಜಿಲ್ಲಾ ಪತ್ರಿಕಾ ಮಂಡಲಿಯು ೧೯೯೫-೯೬ನೇ ವರ್ಷದ ಉತ್ತಮ ಬರಹಗಾರ್ತಿ ಎಂದು **ಶ್ರೀ ಕೆ. ಶಾಮರಾವ್ ದತ್ತಿ ನಿಧಿಯ ಪುರಸ್ಕಾರ** ನೀಡಿದೆ.

೪. ಮುಂಬಯಿಯ ಕರ್ನಾಟಕ ಸಂಘದ **ಅ. ಸು. ಕೃಷ್ಣರಾವ್ ಸ್ಮಾರಕ ೧೯೯೮ರ** ಬಹುಮಾನ ಲಭಿಸಿದೆ.

ಡಾ॥ ಎಂ.ಎಸ್. ಕೃಷ್ಣಮೂರ್ತಿ *
ಡಾ॥ ಎಂ.ಪಿ. ಮಹದೇವಯ್ಯ **

# ಕರ್ನಾಟಕದ ಬೌದ್ಧಧರ್ಮದ ಮೇಲೆ ಹೊಸ ಬೆಳಕು - ರಾಜಘಟ್ಟ ಉತ್ಖನನ

ಪೀಠಿಕೆ: ರಾಜಘಟ್ಟ (೧೩°,೧೯',೩೦", ಉತ್ತರ ಮತ್ತು ೭೭°,೩೫',೪೫" ಪೂರ್ವ) ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರದಿಂದ ೮ ಕಿಲೋಮೀಟರ್ ಈಶಾನ್ಯಕ್ಕೆ ಇರುವ ಒಂದು ಸಣ್ಣಗ್ರಾಮ. ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿಯ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗವು ೧೯೭೫ರಲ್ಲಿ ಈ ಸ್ಥಳದಲ್ಲಿ ಪುರಾತತ್ವ ಅನ್ವೇಷಣೆಗಳನ್ನು ನಡೆಸಿ ಅಲ್ಲಿ ಪ್ರಾಚೀನ ಜನವಸತಿ ಇದ್ದುದಕ್ಕೆ ಸಾಕ್ಷ್ಯಾಧಾರಗಳನ್ನು ಕಂಡು ಹಿಡಿದಿತ್ತು.[೧] ೧೯೮೫-೮೬-೮೭ರಲ್ಲಿ ಕನ್ನಡ ಉಪನ್ಯಾಸಕರಾದ ಬೆಂಗಳೂರಿನ ಸಾಸಲು ವಿಶ್ವನಾಥ್ ಎಂಬುವವರು ಈ ಸ್ಥಳದಲ್ಲಿ ಮತ್ತೆ ಮತ್ತೆ ಪುರಾತತ್ವ ಅನ್ವೇಷಣೆಗಳನ್ನು ನಡೆಸಿ ಗಂಗರ ಕಾಲದ ದೇವಾಲಯಗಳು ಮತ್ತು ಬೌದ್ಧ ಶಿಲ್ಪಾವಶೇಷಗಳನ್ನು ಕಂಡು ಹಿಡಿದು ಪ್ರಕಟಪಡಿಸಿದ್ದರು. ೧೯೮೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಡಾ. ನಾಗರಾಜ ಶರ್ಮರವರು ಮತ್ತೊಮ್ಮೆ ಈ ಸ್ಥಳದಲ್ಲಿ ಪುರಾತತ್ವ ಅನ್ವೇಷಣೆ ನಡೆಸಿ ಅದೇ ರೀತಿಯ ಇನ್ನಷ್ಟು ಅವಶೇಷಗಳನ್ನು ಪತ್ತೆಹಚ್ಚಿ ಪ್ರಕಟಮಾಡಿದರು. ೨೦೦೧ ನೇ ಇಸವಿ ಮಾರ್ಚ್-ಏಪ್ರಿಲ್ ತಿಂಗಳುಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯದ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗವು ಈ ಸ್ಥಳದಲ್ಲಿ ವ್ಯಾಪಕವಾಗಿ ಅನ್ವೇಷಣೆಯನ್ನು ನಡೆಸಿ ಪುರಾತತ್ವ ಉತ್ಖನನವನ್ನು ಸಹ ನಡೆಸಿತು.[೨]

ರಾಜಘಟ್ಟ ಒಂದು ಐತಿಹಾಸಿಕ ನೆಲೆ, ಇಲ್ಲಿನ ಪ್ರಾಚ್ಯವಸ್ತು ಕುರುಹುಗಳು ರಾಜಘಟ್ಟದ ಸಂಸ್ಕೃತಿಯನ್ನು ಕ್ರಿಸ್ತಪೂರ್ವದ ಶತಮಾನಗಳಿಗೆ ಕೊಂಡೊಯ್ಯುತ್ತದೆ. ಕ್ರಿಸ್ತಪೂರ್ವದ ಶತಮಾನಗಳಿಗೆ ಸೇರಿಸಬಹುದಾದ ಬೃಹತ್ ಶಿಲಾಯುಗ ಸಂಸ್ಕೃತಿಯ ಅನೇಕ ಸಮಾಧಿಗಳು ಇಲ್ಲಿ ಕಂಡು ಬಂದಿವೆ. ಇದರಿಂದಾಗಿ ಇಲ್ಲಿಯ ಜನವಸತಿ ಪ್ರಾಯಶಃ ಕ್ರಿಸ್ತಪೂರ್ವದ ೫-೪ನೇ ಶತಮಾನಗಳಷ್ಟು ಹಳೆಯದು ಎನ್ನಬಹುದು. ದುರಾದೃಷ್ಟವಶಾತ್ ಇಲ್ಲಿರುವ ಹಲವಾರು ಬೃಹತ್ ಶಿಲಾಯುಗ ಸಮಾಧಿಗಳು ಕಳ್ಳರ ಹಾವಳಿಯಿಂದ ನಾಶವಾಗಿವೆ. ಇದರಿಂದಾಗಿ ಅವುಗಳ ಸಂಸ್ಕೃತಿಯ ನಿಜಸ್ಥಿತಿಯನ್ನು ಅರಿಯಲು ಅಸಾಧ್ಯವಾಗಿದೆ. ಆದರೂ ಸಹ ಈ ಸಮಾಧಿಗಳ ಅಚ್ಚುಕಟ್ಟಾದ ನಿರ್ಮಾಣ ಎಂತಹವರಿಗೂ ಆಶ್ಚರ್ಯವನ್ನು ಉಂಟುಮಾಡುತ್ತದೆ. ೨.೭೦ ಮೀಟರ್ ಉದ್ದ, ೧.೭೦ ಮೀಟರ್ ಅಗಲ ೧.೬೦ ಅಡಿ ಎತ್ತರದ ಚೌಕಟ್ಟಾದ ಕೋಣೆಯು ಮೇಲೆ ೪.೦೦x೨.೫೦x೦.೨೫ ಮೀಟರ್ ವಿಸ್ತೀರ್ಣದ ದೊಡ್ಡದಾದ, ನೀಟಾಗಿ ಕತ್ತರಿಸಿದ ಕಲ್ಲು ಚಪ್ಪಡಿಯನ್ನು ಕೂರಿಸಿ, ಪೂರ್ವದಿಕ್ಕಿಗೆ ೮೦ ಸೆಂ.ಮೀ. ವ್ಯಾಸದ ಕಿಂಡಿಯನ್ನು ಮಾಡಿ ನಿರ್ಮಿಸಿರುವ ಈ ಸಮಾಧಿ ಅದರ ವಾಸ್ತು ಸೌಂದರ್ಯಕ್ಕೆ ಮತ್ತು ನಿರ್ಮಾಣ ಕುಶಲತೆಗೆ ಉತ್ತಮ ನಿದರ್ಶನವಾಗಿದೆ.



ಬೃಹತ್ ಶಿಲಾಯುಗ ಸಂಸ್ಕೃತಿಯಿಂದ ಇಲ್ಲಿಯ ನಾಗರೀಕತೆ ನಿಖರವಾಗಿ ಪ್ರಾರಂಭವಾಯಿತೆಂದು ಹೇಳಬಹುದು. ರಾಜಘಟ್ಟದ ಬಳಿ ಯಾವುದೇ ನದಿ ಅಥವಾ ತೊರೆಗಳಿಲ್ಲ, ಬದಲಾಗಿ ಊರಿನ ಪಕ್ಕದಲ್ಲೇ ಒಂದು ದೊಡ್ಡದಾದ ಕೆರೆ ಇದೆ. ಈ ಕೆರೆ ಪ್ರಾಯಶಃ ಅಲ್ಲಿಯ ಜನವಸತಿಗೆ ಪ್ರಾಚೀನ ಕಾಲದಿಂದಲೂ ನೀರಿನ ಆಸರೆಯನ್ನು ಒದಗಿಸಿರಬೇಕೆಂದು

* ಪ್ರೊಫೆಸರ್ ಅಂಡ್ ಛೇರ್‌ಮನ್, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು-೫೭೦ ೦೦೯
** ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೯




**BUDDHIST CHAITYA HALL**
**R A J A G H A T T A**
(Bangalore Dist.)
**C.4th-6th Century A.D.**

ತಿಳಿಯಬಹುದು. ಹೀಗೆ ಪ್ರಾರಂಭವಾದ ರಾಜಘಟ್ಟದ ನಾಗರೀಕತೆ ಕ್ರಿಸ್ತಶಕದ ಪ್ರಾರಂಭವಾದ ಶತಮಾನಗಳಲ್ಲಿ ನಿರಂತರವಾಗಿ ಮುಂದುವರೆದು ಬಾಣರು, ಗಂಗರು ಮತ್ತು ನಂತರದ ಕಾಲಗಳಲ್ಲೂ ಸಹ ರಾಜಘಟ್ಟ ಒಂದು ಪ್ರವರ್ಧಮಾನದ ಊರಾಗಿ ಬೆಳೆಯುವಂತಾಯಿತು.

ರಾಜಘಟ್ಟವು ಒಂದು ಪ್ರಸಿದ್ಧವಾದ ಬೌದ್ಧನೆಲೆಯೂ ಆಗಿತ್ತು ಎಂಬುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳು ಉತ್ಖನನಗಳಿಂದ ದೊರೆತಿವೆ. ರಾಜಘಟ್ಟ ಎಂಬ ಹೆಸರು ಈ ಸ್ಥಳಕ್ಕೆ ಹೇಗೆ ಮತ್ತು ಏಕೆ ಬಂತೆಂಬುದಕ್ಕೆ ನೇರವಾದ ಸಾಕ್ಷಿಗಳಿಲ್ಲ. ಪ್ರವರ್ಧಮಾನ ವಾದ ಬೌದ್ಧಕೇಂದ್ರವಾಗಿ ಬೌದ್ಧ ಸಂಸ್ಕೃತಿಯೊಂದಿಗೆ ಸಂಪರ್ಕವನ್ನು ಪ್ರಬಲವಾಗಿ ಹೊಂದಿದ್ದರಿಂದ ಈ ಊರು ರಾಜಘಟ್ಟ ಎಂಬ ಹೆಸರಿನಿಂದ ಅಂಕಿತವಾಗಿರಬೇಕು. ಏಕೆಂದರೆ ಬೌದ್ಧಧರ್ಮವು ಉತ್ತರದಿಂದ ದಕ್ಷಿಣಕ್ಕೆ ಬಂದಂತಹ ಧರ್ಮ. ಈ ಧರ್ಮೀಯರು ಮುಂಚೆ ವಾರಣಾಸಿಯ ಬಳಿಯ ರಾಜಘಟ್ಟ ಪ್ರದೇಶದಲ್ಲಿ ನೆಲೆಸಿದ್ದು ಅಲ್ಲಿಂದ ಇಲ್ಲಿಗೆ ವಲಸೆ ಬಂದಿರುವ ಸಾಧ್ಯತೆ ಇರುವುದರಿಂದ ಈ ಸ್ಥಳಕ್ಕೂ ಸಹ ಅವರು ಬೌದ್ಧಧರ್ಮಕ್ಕೆ ಹೆಸರಾದ ಉತ್ತರದ ರಾಜಗೃಹ, ರಾಜಘಾಟ್ ಮುಂತಾದ ಊರಿನ ಹೆಸರನ್ನೇ ಇಟ್ಟಿರುವ ಸಾಧ್ಯತೆಗಳೂ ಇಲ್ಲದಿಲ್ಲ. ದಕ್ಷಿಣ ಕರ್ನಾಟಕದಲ್ಲಿ ಈ ರೀತಿಯ ಹೆಸರುಳ್ಳ ಊರುಗಳು ಅಪರೂಪವೆಂದೇ ಹೇಳಬೇಕು. ಆದ್ದರಿಂದ ರಾಜಘಟ್ಟ ಎಂಬ ಹೆಸರು ಪ್ರಾಯಶಃ ಈ ಪ್ರದೇಶಕ್ಕೆ ಔತ್ತರೇಯ ಬೌದ್ಧಸಂಸ್ಕೃತಿಯ ಕೊಡುಗೆಯಾಗಿ ಬಂದಿರಲೂ ಸಾಧ್ಯ.

ರಾಜಘಟ್ಟ, ದೊಡ್ಡಬಳ್ಳಾಪುರದಿಂದ ನಂದಿಗೆ ಹೋಗುವ ಮಾರ್ಗದ ಮಧ್ಯದಲ್ಲಿ ಇದೆ. ರಸ್ತೆಗೆ ಹೊಂದಿಕೊಂಡಿರುವ ಈ ಗ್ರಾಮದ ಆಗ್ನೇಯಕ್ಕೆ ವಿಶಾಲವಾದ ಕೃಷಿಭೂಮಿ ಇದೆ. ಈ ಭೂಮಿಯ ಸ್ವಲ್ಪ ಭಾಗವನ್ನು ಅಲ್ಲಿಯ ಜನರು **ಬೂದಿಗುಂಡಿ** ಪ್ರದೇಶವೆಂದು ಕರೆಯುತ್ತಾರೆ. ಈ ಪ್ರದೇಶ ಸುಮಾರು ಒಂದು ನೂರು ಎಕರೆ ಪ್ರದೇಶದಷ್ಟು ವಿಸ್ತೀರ್ಣವನ್ನು ಹೊಂದಿದೆ. ಈ ಸ್ಥಳದಲ್ಲಿ ಸುಮಾರು ೮ ರಿಂದ ೧೦ ಅಡಿಯವರೆಗಿನ ಭೂಮಿ ಬೂದಿಮಿಶ್ರಿತ ಮಣ್ಣಿನಿಂದ ತುಂಬಿದಂತಹ ಪ್ರದೇಶ. ಬೂದಿಮಿಶ್ರಿತ ಮಣ್ಣು ಜನವಸತಿ ನಿವೇಶನದ ಒಂದು ಕುರುಹು ಎಂಬುದು ಎಲ್ಲರಿಗೂ ತಿಳಿದಿರುವ ವಿಚಾರವೇ ಆಗಿದೆ. ಈ ಬೂದಿಮಿಶ್ರಿತ ಮಣ್ಣನ್ನು ಅಲ್ಲಿಯ ಜನರು ಸುಮಾರು ಮೂರು ದಶಕದಿಂದ ಈಚೆಗೆ ಕೃಷಿಯ ಗೊಬ್ಬರವಾಗಿ ಬಳಸಲು ಬೇರೆಡೆಗೆ ಸಾಗಿಸುತ್ತಾ ಬಂದಿದ್ದಾರೆ. ಇದರಿಂದಾಗಿ ಇಡೀ ಪ್ರದೇಶದ ಬೂದಿಮಣ್ಣು ಈಗ ಸಂಪೂರ್ಣವಾಗಿ ಕಾಣದಂತಾಗಿದೆ ಎನ್ನಬಹುದು. ಬೂದಿಮಣ್ಣಿಗಾಗಿ ಅಗೆಯುತ್ತಿದ್ದ ಈ ಕಾರಣ ದಿಂದಾಗಿಯೇ ೧೯೭೭ರಲ್ಲಿಯೇ ನಮ್ಮ ವಿಭಾಗವು ಅಲ್ಲಿ ಅನ್ವೇಷಣೆಯನ್ನು ನಡೆಸಿ ಪ್ರಾಚೀನ ಸಂಸ್ಕೃತಿಯ ಅನೇಕ ಕುರುಹುಗಳನ್ನು ಪತ್ತೆ ಮಾಡಿತು. ಈ ಕುರುಹುಗಳೆಲ್ಲವೂ ಆದಿ ಚಾರಿತ್ರಿಕ ಕಾಲದ ಸಂಸ್ಕೃತಿಗೆ ಸರಿಹೊಂದುವಂತೆ ಇವೆ. ಕೆಂಪು ಮತ್ತು ಕಪ್ಪುಬಣ್ಣದ ಮಡಕೆಗಳು, ಕೆಂಪುಬಣ್ಣದ ಮಡಕೆಗಳು, ಕಪ್ಪುಬಣ್ಣದ ಮಡಕೆಗಳು, ಚಿತ್ರಿತ ಮಡಕೆಗಳು, ಶಂಖ ಮತ್ತು ದಂತದಲ್ಲಿ ಮಾಡಿದ ಆಭರಣಗಳ ಚೂರುಗಳು, ಗಾಜಿನ, ಕಲ್ಲಿನ ಮಣಿಗಳು ಮುಂತಾದವು ಈ ಅವಶೇಷಗಳಲ್ಲಿ ವಿಶೇಷವಾದ ವಸ್ತುಗಳು. ಇವೆಲ್ಲವೂ ಕರ್ನಾಟಕದ ಆದಿಚಾರಿತ್ರಿಕ ಕಾಲದ ನೆಲೆಗಳಲ್ಲಿ ದೊರಕಿರುವ ಅವಶೇಷಗಳಿಗೆ ಸರಿಸಮಾನವಾಗಿರುವುದ ರಿಂದ ಇಲ್ಲಿಯೂ ಆ ಕಾಲದ ಸಂಸ್ಕೃತಿ ನೆಲೆಸಿತ್ತೆಂದು ಹೇಳ ಬಹುದು. ಆದರೆ ರಾಜಕೀಯವಾಗಿ ಯಾವ ಬಣ ಈ ಪ್ರದೇಶ ದಲ್ಲಿ ಆಳುತ್ತಿದ್ದಿತೆಂಬುದಕ್ಕೆ ಯಾವುದೇ ನಿಖರವಾದ ಮಾಹಿತಿ ಇಲ್ಲ. ಆದರೆ ಸಮೃದ್ಧವಾದ ಸಂಸ್ಕೃತಿ ಮತ್ತು ಜನವಸತಿ ಮಾತ್ರ ಈ ಪ್ರದೇಶದಲ್ಲಿ ಇತ್ತೆಂಬುದಕ್ಕೆ ಆ ಕಾಲದ ಪ್ರಾಚ್ಯವಸ್ತುಗಳೇ ಸಾಕ್ಷಿ.

ಆದಿಚಾರಿತ್ರಿಕ ಕಾಲಕ್ಕೆ ಸೇರಿಸಬಹುದಾದ ಇಟ್ಟಿಗೆಯ ಕಟ್ಟಡದ ಅವಶೇಷಗಳು ಸಹ ಬೂದಿಗುಂಡಿ ಪ್ರದೇಶದಲ್ಲಿ ಕಂಡು ಬಂದಿದೆ ಎಂದು ಮೇಲೆ ಹೇಳಿದ ಸಂಶೋಧಕರು ವರದಿ ಮಾಡಿದ್ದಾರೆ. ಹಾಗೂ ಈ ಅಂಶ ಉತ್ಖನನದಿಂದಲೂ ಸಹ ರುಜುವಾತಾಗಿದೆ. ಈ ಕಟ್ಟಡಗಳಲ್ಲಿ ಬಳಸಿದ ಇಟ್ಟಿಗೆಗಳು ಕರ್ನಾಟಕದಲ್ಲಿ ಶಾತವಾಹನರ ಮತ್ತು ಗಂಗರ ಕಾಲದ ಕಟ್ಟಡಗಳಲ್ಲಿ ಬಳಸಿರುವ ಇಟ್ಟಿಗೆಗಳ ಆಕೃತಿಗೆ ಮತ್ತು ಗಾತ್ರಕ್ಕೆ ಸಮನಾಗಿ ಇವೆ. ದುರಾದೃಷ್ಟವಶಾತ್ ಈ ಕಟ್ಟಡಗಳೆಲ್ಲವೂ ಇಲ್ಲಿಯ ಅಗೆತ ಗಳಿಂದಾಗಿ ಕೇವಲ ನಾಮಾವಶೇಷಗಳಾಗಿವೆ. ಆದರೂ ಈ ಸ್ಥಳದಲ್ಲಿ ಪ್ರವರ್ಧಮಾನವಾದ ಒಂದು ಊರು ಪ್ರಾಚೀನವಾಗಿ ಇತ್ತೆಂಬುದು ಸ್ಪಷ್ಟವಾಗುತ್ತದೆ. ಈ ಬೂದಿಗುಂಡಿ ಪ್ರದೇಶ ಪ್ರಸ್ತುತ ಸಂಪೂರ್ಣವಾಗಿ ಖಾಲಿಯಾಗಿದೆ. ಸುಮಾರು ೮ ಅಡಿ ಎತ್ತರ ಬೂದಿಮಣ್ಣಿನ ಶೇಖರಣೆ ಸಂಪೂರ್ಣವಾಗಿ ಕಾಣದಾಗಿದೆ. ಕೇವಲ ಅಲ್ಲಲ್ಲಿ ಸಣ್ಣದಾದ ಮಣ್ಣಿನ ಗುಡ್ಡೆಗಳು ಮಾತ್ರ ಉಳಿದಿದ್ದು, ಅವುಗಳಲ್ಲೇ ಒಂದು ಭಾಗವನ್ನು ಆಯ್ದುಕೊಂಡು ಉತ್ಖನನವನ್ನು ನಡೆಸಲಾಯಿತು. ಉತ್ಖನನಕ್ಕಾಗಿ ಆಯ್ದುಕೊಂಡ ಗುಡ್ಡ ಬಹಳ ಸಣ್ಣದಾಗಿದ್ದುದರಿಂದ ಆ ಗುಡ್ಡವನ್ನು ಮಧ್ಯದಲ್ಲಿ ಕತ್ತರಿಸಿ ಅದರ ಸ್ತರವಿನ್ಯಾಸವನ್ನು ತಿಳಿಯುವುದೇ ಉತ್ಖನನದ ಉದ್ದೇಶವಾಗಿದ್ದಿತು. ಹೀಗೆ ಅಗೆದ ಗುಂಡಿಯಲ್ಲಿ ಮೇಲಿನ ಎರಡು ಸ್ತರಗಳು ಯಾವುದೇ ಹೆಚ್ಚಿನ ಮಹತ್ವದ ಸುಳಿವನ್ನಾಗಲಿ, ಪ್ರಾಚ್ಯವಸ್ತುವನ್ನಾಗಲಿ ನೀಡಲಿಲ್ಲ. ಮೂರನೆಯ ಸ್ತರದಲ್ಲಿ ಪ್ರಾಯಶಃ ಗಂಗರ ಕಾಲದ್ದೆನ್ನಬಹುದಾದ ಮಡಕೆಗಳು ಕಂಡುಬಂದವು. ಇದೇ ಸ್ತರದಲ್ಲಿ ಒಂದು ಮನೆಯ ಗೋಡೆಯ ಅವಶೇಷದ ಭಾಗ ಮತ್ತು ಅದಕ್ಕೆ ಹೊಂದಿಕೊಂಡಂತೆ ಇದ್ದ ಇಟ್ಟಿಗೆಯ ಒಲೆ ಮತ್ತು ಅದರ ಪಕ್ಕದಲ್ಲೇ ಬೂದಿಯ ರಾಶಿ ಪತ್ತೆಯಾಯಿತು. ನಾಲ್ಕನೆಯ ಪದರದಲ್ಲಿ ಆದಿಚಾರಿತ್ರಿಕ ಕಾಲಕ್ಕೆ

ಸೇರಿಸಬಹುದಾದ ಮನೆಯ ಗೋಡೆ ಮತ್ತು ಗಟ್ಟಿನೆಲ ಇವು ಸಹ ಪತ್ತೆಯಾದವು. ಇದರ ಕೆಳಭಾಗದ ಐದನೆಯ ಪದರವು ಬೂದಿ ಮಿಶ್ರಿತ ಮಣ್ಣಿನಿಂದ ಕೂಡಿದ್ದಾಗಿದ್ದು, ಕಪ್ಪು ಮಡಕೆ, ಕಂದು ಬಣ್ಣದ ಮಡಕೆ, ಬೂದು ಬಣ್ಣದ ಚೂರುಗಳು ಇದರಲ್ಲಿ ಕಂಡು ಬಂದವು. ವಿಪರೀತವಾಗಿ ಕಂಡು ಬಂದ ಬೂದಿ ಮತ್ತು ಬೂದಿ ಮಿಶ್ರಿತ ಮಣ್ಣು ಆ ಕಾಲದಲ್ಲಿ ಇಲ್ಲಿ ವಿಪರೀತವಾಗಿ ಬೆಂಕಿಗೆ ಸಂಬಂಧಿಸಿದ ಕೆಲಸಕಾರ್ಯಗಳು ನಡೆದಿತ್ತು ಎನ್ನುವುದನ್ನು ಸೂಚಿಸುತ್ತವೆ. ಆದರೆ ಅದು ಯಾವ ರೀತಿಯ ಕಾರ್ಯ ಚಟುವಟಿಕೆ ಎಂಬುದನ್ನು ಸ್ಪಷ್ಟವಾಗಿ ಹೇಳುವುದಕ್ಕಾಗುವುದಿಲ್ಲ. ಇದರ ಕೆಳಭಾಗದಲ್ಲಿ ಕಂದು ಹಾಗು ಕೆಂಪು ಬಣ್ಣದ ಮಡಕೆ ನೊರಜುಗಲ್ಲಿನ ಸ್ವಾಭಾವಿಕ ಮಣ್ಣು ಕಂಡು ಬಂದಿತು. ಉತ್ಖನನ ದಿಂದ ವಿಶೇಷವಾದ ಮಾಹಿತಿ ದೊರಕದಿದ್ದರೂ ಇಷ್ಟು ಮಾತ್ರ ಹೇಳಬಹುದು. ಆದಿಚಾರಿತ್ರಿಕ ಕಾಲದಿಂದ ಈ ಸ್ಥಳದಲ್ಲಿ ಜನವಸತಿ ಇತ್ತು. ಇಟ್ಟಿಗೆಯಿಂದ ಮಾಡಿದ ಮನೆಗಳಲ್ಲಿ ಜನರು ವಾಸ ಮಾಡುತ್ತಿದ್ದರು. ಇದೇ ರೀತಿಯ ಸಂಸ್ಕೃತಿ ನಂತರದ ಕಾಲದವರೆಗೂ ಮುಂದುವರೆದು ಪ್ರಾಯಶಃ ಈ ಜನವಸತಿ ಸುಮಾರು ೮-೧೦ನೆಯ ಶತಮಾನದವರೆಗೂ ಮುಂದುವರೆ ದಿರಬಹುದು. ತದನಂತರ ಇಲ್ಲಿಯ ಜನವಸತಿ ಪ್ರಾಯಶಃ ಬೇರೆ ಸ್ಥಳಕ್ಕೆ ಬದಲಾವಣೆ ಮಾಡಿರಬೇಕು. ಇಡೀ ಪ್ರದೇಶ ಕೆಲವು ದಶಕಗಳ ಹಿಂದೆ ಬೂದಿಮಣ್ಣಿನಿಂದ ಆವೃತವಾಗಿತ್ತೆಂಬುದು ತಿಳಿದಿರುವ ವಿಚಾರ. ಇಷ್ಟು ವಿಶಾಲ ಪ್ರದೇಶದಲ್ಲಿ ಈ ಅಗಾಧ ಗಾತ್ರದಲ್ಲಿ ಬೂದಿಯ ಮಣ್ಣು ಶೇಖರಣೆಯಾಗಬೇಕಾದರೆ ಆ ಇಡೀಪ್ರದೇಶ ಸಾಕಷ್ಟು ದಟ್ಟವಾದ ಜನಸಂಖ್ಯೆಯಿಂದ ಆವೃತವಾಗಿದ್ದಿರಬೇಕು. ಆದರೆ ದುರಾದೃಷ್ಟವಶಾತ್ ಈ ಪ್ರದೇಶದಲ್ಲಿ ಅಲ್ಪಸ್ವಲ್ಪ ನಾಗರೀಕತೆಯ ಕುರುಹುಗಳನ್ನು ಬಿಟ್ಟರೆ ಇಡೀ ಬೂದಿಗುಂಡಿ ಪ್ರದೇಶ ಈಗ ನಿರ್ನಾಮವಾಗಿದೆ.

ರಾಜಘಟ್ಟದಲ್ಲಿ ಬೌದ್ಧ ಅವಶೇಷಗಳು ಕೆಲವು ಅನ್ವೇಷಣಾ ಕಾರರಿಂದ ಪತ್ತೆ ಮಾಡಲಾಗಿತ್ತೆಂದು ಆಗಲೇ ಹೇಳಿದೆ. ಇದರಿಂದಾಗಿ ಇಲ್ಲಿ ಬೌದ್ಧ ಪಂಥದ ಸಂಸ್ಕೃತಿ ಇತ್ತೆಂಬುದು ಸ್ಪಷ್ಟವಾಗುತ್ತದೆ. ಈ ಬೌದ್ಧ ಸಂಸ್ಕೃತಿ ಯಾವ ಸ್ಥಳದಲ್ಲಿ ನೆಲೆಸಿತ್ತು, ಅದರ ಸ್ವರೂಪ ಹೇಗಿತ್ತು ಎಂಬುದು ವಿಚಾರಯೋಗ್ಯವಾದ ಪ್ರಶ್ನೆಯಾಗಿತ್ತು. ಈ ಪ್ರಶ್ನೆಗೆ ಉತ್ತರವನ್ನು ಕಂಡು ಹಿಡಿಯಲು ರಾಜಘಟ್ಟದಲ್ಲಿ ಸಾಕಷ್ಟು ವಿಸ್ತಾರವಾದ ಮತ್ತು ತೀವ್ರವಾದ ಪುರಾತತ್ವ ಅನ್ವೇಷಣೆಯನ್ನು ಕೆಲವಾರು ದಿನಗಳ ಕಾಲ ನಡೆಸಿದ ಸಂಶೋಧಕರ ತಂಡ ರಾಜಘಟ್ಟದಲ್ಲಿ, ಒಂದು ಕಾಲದಲ್ಲಿ ಬೂದಿಗುಂಡಿಗೆ ಹೊಂದಿಕೊಂಡಿದ್ದಂತಹ ಸಾಕಷ್ಟು ಎತ್ತರ ವಾದಂತಹ ಒಂದು ಪ್ರದೇಶವನ್ನು ಉತ್ಖನನಕ್ಕಾಗಿ ಆಯ್ಕೆ ಮಾಡಿತು. ಈ ಪ್ರದೇಶ ರಾಜಘಟ್ಟ ಗ್ರಾಮದಿಂದ ಸುಮಾರು ಒಂದು ಫರ್ಲಾಂಗ್ ದಕ್ಷಿಣಕ್ಕೆ ಇದೆ. ಇದರ ಪಕ್ಕದಲ್ಲೇ ವಿದ್ಯುತ್ ಹೈಟೆನ್ಷನ್ ತಂತಿಯ ಜಾಲವೂ ಸಹ ಹೋಗಿದೆ. ಈ ಪ್ರದೇಶ ಕೃಷಿಗೆ ಯೋಗ್ಯವಾಗಿಲ್ಲದಂತಹ, ಬಹಳ ಗಟ್ಟಿಯಾದ, ಸಮತಟ್ಟಾದ ಪ್ರದೇಶ. ಈ ಭಾಗದಲ್ಲಿ ಜಾಲಂದ್ರ ರೀತಿಯ ಸಮಾನಾಂತರ ಉತ್ಖನನವನ್ನು ನಡೆಸಲು ಪ್ರಾರಂಭದಲ್ಲಿ ಯೋಜನೆ ಹಾಕಿ, ಗುಂಡಿಗಳನ್ನು ಗುರುತು ಮಾಡಿ, ಅಗೆತ ಪ್ರಾರಂಭಿಸಲಾಯಿತು. ಈ ಸ್ಥಳದಲ್ಲಿ ಮೇಲ್ಪದರವು ಬಹಳ ಗಟ್ಟಿಯಾಗಿದ್ದು ಇಟ್ಟಿಗೆಯ ಚೂರು, ಮಣ್ಣಿನಿಂದ ಮಿಶ್ರಿತವಾದ ಭೂಮಿಯಾಗಿತ್ತು. ಇಲ್ಲಿಯ ಒಂದು ಗುಂಡಿಯಲ್ಲಿ ಸುಮಾರು ಒಂದು ಅಡಿ ಆಳದಲ್ಲೇ ಒಂದು ಗೋಡೆಯ ಅವಶೇಷಗಳು ಪತ್ತೆಯಾದವು. ಈ ಗೋಡೆಯು ಇಟ್ಟಿಗೆಯಿಂದ ನಿರ್ಮಿತ ವಾಗಿದ್ದು, ಇಟ್ಟಿಗೆಯ ಆಕಾರಗಳು ಬಹು ದೊಡ್ಡದಾಗಿದ್ದು, ಕರ್ನಾಟಕದ ಆದಿಚಾರಿತ್ರಿಕ ಸಂಸ್ಕೃತಿಯ ನೆಲೆಗಳಲ್ಲಿ ಕಂಡು ಬರುವ ಇಟ್ಟಿಗೆಗಳಾಕಾರ, ಗಾತ್ರಗಳಿಗೆ ಸಮವಾಗಿದ್ದವು. ಈ ಗೋಡೆಯ ಅವಶೇಷವನ್ನು ಬಿಡಿಸುತ್ತ, ಗುಂಡಿಗಳನ್ನು ಮುಂದುವರಿಸುತ್ತಾ ಹೋದಾಗ ಇಟ್ಟಿಗೆಯಿಂದ ನಿರ್ಮಿತವಾದ ಒಂದು ಸಂಪೂರ್ಣ ಬೌದ್ಧ ಚೈತ್ಯಾಲಯದ ಅಡಿಪಾಯವೇ ಗೋಚರವಾಯಿತು ಮತ್ತು ಒಂದು ಬೌದ್ಧ ಚೈತ್ಯಾಲಯದ ಅವಶೇಷಗಳು ದಕ್ಷಿಣ ಕರ್ನಾಟಕದಲ್ಲೇ ಪ್ರಪ್ರಥಮವಾಗಿ ದೊರೆತಂತಾಯಿತು. ಈ ಚೈತ್ಯಾಲಯದ ಸರ್ವತೋಮುಖವಾದ ಅಧ್ಯಯನ ಮತ್ತು ವರ್ಣನೆ ತಿಳಿಯಲು ಯೋಗ್ಯವಾಗಿರುವುದರಿಂದ ಅದರ ವಿವರಗಳನ್ನು, ಮಹತ್ವವನ್ನು ಈ ಕೆಳಗೆ ನೀಡಲಾಗಿದೆ.

**ಚೈತ್ಯಾಲಯ**

ಇಟ್ಟಿಗೆಯಿಂದ ನಿರ್ಮಿಸಲಾದ ಈ ಚೈತ್ಯಾಲಯದ ಉದ್ದ ೧೧.೫ ಮೀಟರ್‌ಗಳು, ಅಗಲ ೯.೫ ಮೀಟರ್‌ಗಳು. ಇದರ ಮಧ್ಯಭಾಗದಲ್ಲಿ ಒಂದು ಹಜಾರ ಇದ್ದು ಅದರ ವಿಸ್ತೀರ್ಣ ೪.೩x೨.೫ ಮೀಟರ್‌ಗಳು. ಈ ಹಜಾರದ ಒಂದು ವಿಶೇಷ ಲಕ್ಷಣವೆಂದರೆ ಇದರಲ್ಲಿ ಯಾವುದೇ ಕಂಬಗಳಿಲ್ಲ ಮತ್ತು ಇದರ ಒಳ ಹಿಂಬದಿ ಮಾತ್ರ ಅರ್ಧವೃತ್ತಾಕಾರದ ಅಥವಾ ಕುದುರೆ ಲಾಳಾಕಾರವಾಗಿ ಇದೆ. ಇದೇ ಹೊರಭಾಗ ಸಮಚತುರ ಸ್ರಾಕಾರದಲ್ಲಿ ಇದೆ. ಈ ಹಜಾರದ ಸುತ್ತಲೂ ದೀರ್ಘ ಚತುರಸ್ರಾಕಾರದ ಒಂದು ಪ್ರದಕ್ಷಿಣ ಪಥ ಇದೆ. ಇದರ ಅಗಲ ೭೫ ಸೆಂಟಿಮೀಟರ್ ಇದೆ. ಚೈತ್ಯಾಲಯದ ಹೊರಗೋಡೆಯಲ್ಲಿ ಕೋಷ್ಟಗಳು, ಜಾಲಂದ್ರಗಳು ಇದ್ದುದಕ್ಕೆ ಸೂಕ್ಷ್ಮವಾದ ಸಾಕ್ಷ್ಯಗಳು ಕಂಡುಬರುತ್ತವೆ. ಕಟ್ಟಡವನ್ನು ದಕ್ಷಿಣ ದಿಕ್ಕಿಗೆ ಮುಖಮಾಡಿ ನಿರ್ಮಿಸಲಾಗಿದೆ. ದಕ್ಷಿಣದ ಮುಖದಲ್ಲಿ ಕಂಬಗಳ ಆಸರೆಯ ಮೇಲೆ ನಿಂತಿದ್ದ ಒಂದು ಸಣ್ಣ ಮುಖಮಂಟಪ ಇತ್ತು. ಮುಖ್ಯದ್ವಾರದ ಮುಂಭಾಗದಲ್ಲಿ ಚಂದ್ರಶಿಲೆ ಮತ್ತು ಇಕ್ಕೆಲಗಳಲ್ಲಿ ಕಟಾಂಜನದ ಕಲ್ಲುಗಳು ಇದ್ದುದು ಕಂಡು ಬಂದಿದೆ. ಕಟ್ಟಡವನ್ನು ಸಂಪೂರ್ಣವಾಗಿ ಗಾರೆಯಿಂದ ಗಿಲಾವು ಮಾಡಿ ಸುಣ್ಣವನ್ನು



ಬೃಹತ್ ಶಿಲಾಯುಗದ ಕಿಂಡಿಕೋಣೆ (ರಾಜಘಟ್ಟದ ಉತ್ಖನನ)

ಬಳಿಯಲಾಗಿತ್ತು. ಕಟ್ಟಡದ ಹೊರಮುಖವು ವೈವಿಧ್ಯಮಯವಾದ ವಾಸ್ತು ಮತ್ತು ಶಿಲ್ಪ ಅಲಂಕರಣಗಳಿಂದ ಕಂಗೊಳಿಸುತ್ತಿತ್ತು ಎನ್ನುವುದಕ್ಕೆ ಸಾಕ್ಷ್ಯಾಧಾರಗಳು ಸಿಕ್ಕಿವೆ. ವಾಸ್ತು ಅಲಂಕರಣಕ್ಕಾಗಿ ವಿವಿಧಾಕಾರದ, ಗಾತ್ರದ ವಿಶೇಷ ರೀತಿಯ ಇಟ್ಟಿಗೆಗಳನ್ನು ಪ್ರತ್ಯೇಕವಾಗಿ ಅಚ್ಚು ಮಾಡಿ ಸುಟ್ಟು ಅವುಗಳನ್ನು ಬಳಸುತ್ತಿದ್ದರು. ಚೌಕಟ್ಟಾದ, ದೀರ್ಘಚತುರಸ್ರಾಕಾರದ, ಉಳಿಯಾಕಾರದ, ಅರ್ಧವೃತ್ತಾಕಾರವಾದ, ಕಾಲು ವೃತ್ತಾಕಾರವಾದ ದುಂಡಾದ ತುದಿಗಳುಳ್ಳ ಇಟ್ಟಿಗೆಗಳು, ಬೇಕಾದಷ್ಟು ಸಂಖ್ಯೆಯಲ್ಲಿ ಸಿಕ್ಕಿವೆ. ಇದಲ್ಲದೆ ಮೂಲೆ ಮತ್ತು ಮೇಲ್ಭಾಗಗಳನ್ನು ದುಂಡು ಮಾಡಿದ, ಮೂಲೆ ಕತ್ತರಿಸಿದ, ವಿವಿಧಾಕಾರದ ಏಣು, ಗಾಡಿಗಳನ್ನುಳ್ಳ ಇಟ್ಟಿಗೆಗಳು ಹಾಗೂ ಇನ್ನೂ ಅನೇಕ ವಿವಿಧ ಅಲಂಕರಣೆಗಳಿಗೆ ಬಳಸಿದ ಇಟ್ಟಿಗೆಗಳು ಉತ್ಖನನದಲ್ಲಿ ಕಂಡು ಬಂದಿರುವುದನ್ನು ನೋಡಿದರೆ, ಈ ಕಟ್ಟಡದ ವಾಸ್ತು ಅಲಂಕರಣೆ ಸಾಮಾನ್ಯ ವಾದದ್ದೇನಾಗಿರಲಿಲ್ಲ ಎಂದೆನಿಸುತ್ತದೆ. ಕಟ್ಟಡದ ಜೊತೆಗೆ ಅಲಂಕರಣಕ್ಕಾಗಿ ಅನೇಕ ಸಣ್ಣಸಣ್ಣ ಕಟಾಂಜನದ ಕಂಬಗಳನ್ನು ಸಹ ಅವರು ಇಟ್ಟಿಗೆಗಳಿಂದ ತಯಾರುಮಾಡಿಕೊಳ್ಳುತ್ತಿದ್ದರು. ಕಟಾಂಜನ ಕಂಬಗಳ ಪೀಠ ಮತ್ತು ಮೇಲ್ಭಾಗ ಹಾಗೂ ಮಧ್ಯದ ದಿಂಡಿಗೆ ವಿವಿಧ ರೀತಿಯ ಸಣ್ಣ ಸಣ್ಣ ಇಟ್ಟಿಗೆಗಳು ಅಂದರೆ ಉರುಳೆಯಾಕಾರದ, ಚೌಕಾಕಾರದ, ಅಷ್ಟಮುಖಾಕಾರದ ಇಟ್ಟಿಗೆಗಳನ್ನು ಬಳಸಲಾಗಿತ್ತು. ಈ ಎಲ್ಲಾ ಇಟ್ಟಿಗೆಗಳಿಗೂ ಮಧ್ಯದಲ್ಲಿ ಒಂದೇ ಗಾತ್ರದ ಕೊಳವೆಯಾಕಾರದ ರಂಧ್ರವನ್ನು ಮಾಡಲಾಗಿದೆ. ಈ ಕೊಳವೆ ರಂಧ್ರದೊಳಗೆ, ಅದಕ್ಕೆ ಸರಿಯಾದ ಮರದ ಕಡ್ಡಿಯನ್ನು ಕೂರಿಸಿ ಈ ಸಣ್ಣ ಸಣ್ಣ ಇಟ್ಟಿಗೆಗಳನ್ನು ಒಂದರ ಮೇಲೊಂದರಂತೆ ಜೋಡಿಸಿ ವೈವಿಧ್ಯಮಯವಾದ ಕಟಾಂಜನ ಕಂಬದ ದಿಂಡನ್ನು ಅವರು ತಯಾರಿಸುತ್ತಿದ್ದಿರಬೇಕು. ಈ ರೀತಿ ಜೋಡಿಸಿದ ಕಟಾಂಜನ ಕಂಬಕ್ಕೆ ದಪ್ಪವಾಗಿ ಗಾರೆ ಲೇಪನವನ್ನು ಮಾಡುತ್ತಿದ್ದರು.

ಭಿತ್ತಿಯ ಭಾಗವನ್ನು ಮೂರ್ತಿಶಿಲ್ಪ, ಪ್ರಾಣಿಶಿಲ್ಪ, ಸಸ್ಯ ಹಾಗೂ ಇನ್ನಿತರ ಜ್ಯಾಮಿತಿಕ ರೂಪಗಳ ಮುಖಾಂತರ ಅಲಂಕರಿಸಲಾಗಿತ್ತು. ಸಣ್ಣ ಸಣ್ಣದಾದ ಅನೇಕ ಶಿಲ್ಪಗಳ ತುಣುಕುಗಳು ಕಂಡು ಬಂದಿವೆ. ಮನುಷ್ಯ ಶಿಲ್ಪದ ತಲೆಗಳು, ಮುಖಗಳು, ಕೈಕಾಲುಗಳು ಇತ್ಯಾದಿ ಸಾಕಷ್ಟು ಸಂಖ್ಯೆಯಲ್ಲಿ ದೊರೆತಿದ್ದು ಹೊರಭಿತ್ತಿಯನ್ನು ಸುಂದರವಾದ ಶಿಲ್ಪಗಳಿಂದ ಅಲಂಕರಿಸಿದ್ದರೆನ್ನಬಹುದು. ಈ ಶಿಲ್ಪಗಳನ್ನು ಇಟ್ಟಿಗೆಯ ಚೂರು, ಗಾರೆ ಮತ್ತು ಸುಣ್ಣದಿಂದ ಮಾಡಲಾಗಿದೆ. ಈ ಶಿಲ್ಪಗಳ ಮುಖಗಳ ಹಾವಭಾವಗಳು, ರಸಗಳು, ವಿಭಿನ್ನವಾಗಿದ್ದು ಇಲ್ಲಿಯ ಭಿತ್ತಿಯ ಮೇಲೆ ಬೌದ್ಧಧರ್ಮಕ್ಕೆ ಸೇರಿದಂತಹ ವಿವಿಧ ಕಥಾನಕಗಳ ಮುಖ್ಯ ಸನ್ನಿವೇಶಗಳನ್ನು ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಿರಬೇಕೆಂದು

ತೋರುತ್ತದೆ. ಈ ಶಿಲ್ಪಗಳಿಗೆ ಪೂರಕವಾಗಿ ಅನೇಕ ಅಲಂಕಾರಿಕ ರೂಪಗಳು ಕಂಡುಬಂದಿವೆ. ಅವುಗಳಲ್ಲಿ ಮುಖ್ಯವಾದದ್ದು ವ್ಯಾಳಶಿಲ್ಪಗಳು. ಅಗಲವಾಗಿ ಬಾಯಿತೆರೆದ ಸಿಂಹಮುಖಗಳು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲಿ ಕಂಡರಿಸಿದ್ದಿರಬೇಕು. ಸಿಂಹದ ಅಗಲವಾದ ಕಣ್ಣುಗಳು, ಚೂಪಾದ ಕೋರೆದಾಡೆಗಳು, ಒಳಕ್ಕೆ ಸುತ್ತಿಕೊಂಡಿರುವ ಚೂಪಾದ ನಾಲಿಗೆಯ ತುದಿ, ಸೂಕ್ಷ್ಮವಾದ ಕಿವಿಗಳು, ಇನ್ನೂ ಸೂಕ್ಷ್ಮವಾದ ಗುಂಗುರು ಕೇಶರಾಶಿ ಮುಂತಾದವು ಅತ್ಯಂತ ಕೌಶಲ್ಯದಿಂದ ರೂಪಿಸಲ್ಪಟ್ಟಿವೆ. ಇದೇ ರೀತಿ ಸುಂದರವಾಗಿ, ಅಂಕುಡೊಂಕಾಗಿ, ಸುರುಳಿಸುರುಳಿಯಾಗಿ ಸುತ್ತಿಕೊಂಡಿರುವ ಬಳ್ಳಿಯ ಚಿತ್ರಗಳು, ಹೂವಿನ ಚಿತ್ರಗಳು ಮುಂತಾದವು ಮತ್ತು ಜ್ಯಾಮಿತಿಕ ರೀತಿಯ ಚಿತ್ರಗಳು ಸಹ ಇಲ್ಲಿ ಚಿತ್ರಾಲಂಕಾರದ ವಸ್ತುವಾಗಿದ್ದವು. ಇದರಿಂದಾಗಿ ಇಡೀ ಚೈತ್ಯಾಲಯ ಅಲಂಕರಣೆಯಲ್ಲಿ ಸಾಕಷ್ಟು ಸುಂದರವೂ, ಆಕರ್ಷಕವೂ ಆಗಿತ್ತೆಂದು ತೋರುತ್ತದೆ.

ಚೈತ್ಯಾಲಯವು ಕಾಲಪುರುಷನ ಹಾವಳಿಯಿಂದಾಗಿ ಮತ್ತು ಸ್ಥಳೀಯರ ಹಾವಳಿಗಳಿಂದಾಗಿ ಬಹಳಷ್ಟು ನಾಶವಾಗಿ ಹೋಗಿದೆ. ಚೈತ್ಯಾಲಯ ಕುಸಿದು ಬಿದ್ದನಂತರ ಈ ಸ್ಥಳದಲ್ಲಿ ದೊಡ್ಡದಾದ ಇಟ್ಟಿಗೆ ಹಾಗೂ ಕಟ್ಟಡ ವಸ್ತುವಿನ ದೊಡ್ಡ ರಾಶಿಯೇ ಇದ್ದಿರಬೇಕು. ಸ್ಥಳೀಯರು ಕಳೆದ ಶತಮಾನದಿಂದೀಚೆಗೆ ಈ ದಿಬ್ಬದಲ್ಲಿ ಒಳ್ಳೆಯ ಸುಟ್ಟ ಇಟ್ಟಿಗೆಗಳು ದೊರಕುವುದನ್ನು ಕಂಡುಕೊಂಡು ಅಲ್ಲಿಂದ ಯಥೇಚ್ಛವಾಗಿ ಇಟ್ಟಿಗೆಗಳನ್ನು ಅಗೆದು ತೆಗೆದು ಸಾಗಿಸಿ ಊರಿನಲ್ಲಿ ಮನೆಗಳನ್ನು ಕಟ್ಟಿಕೊಂಡಿರುವುದನ್ನು ಈಗಲೂ ಸಹ ಕಾಣ ಬಹುದು. ಇದರಿಂದಾಗಿ ಕಟ್ಟಡದ ಅವಶೇಷಗಳ ದಿಬ್ಬವಿದ್ದ ಕಡೆ ನೆಲ ಸಮತಟ್ಟಾಗಿದೆ. ಈ ನೆಲದಲ್ಲೂ ಸಹ ಕೆಲವು ಗುಂಡಿಗಳನ್ನು ಮಾಡಿ ಇಟ್ಟಿಗೆಗಳನ್ನು ತೆಗೆದಿರುವುದರಿಂದ ಚೈತ್ಯಾಲಯವು ಕೆಲವು ಕಡೆ ಅಧಿಷ್ಠಾನದ ಬುಡದವರೆಗೂ ಇಲ್ಲದಂತಾಗಿದೆ.

ಇಷ್ಟೊಂದು ವಿಪರೀತವಾಗಿ ದುರಾಕ್ರಮಣಗಳನ್ನು, ದುಷ್ಕೃತ್ಯಗಳನ್ನು ಎದುರಿಸಿದ್ದರೂ ಸಹ ಚೈತ್ಯಾಲಯದ ತಳವಿನ್ಯಾಸದ ಕೆಲವು ಭಾಗ ಅಚ್ಚುಕಟ್ಟಾಗಿ ಉಳಿದುಕೊಂಡು ಬಂದಿದೆ. ಇದರಿಂದಾಗಿ ಚೈತ್ಯಾಲಯದ ತಳವಿನ್ಯಾಸದ ಸ್ಪಷ್ಟ ಆಕಾರವನ್ನು ಗುರುತಿಸಬಹುದಾಗಿದೆ. ಚೈತ್ಯಾಲಯವನ್ನು ಚೆನ್ನಾಗಿ ಸುಟ್ಟು ಅಚ್ಚುಕಟ್ಟಾಗಿ ಅಚ್ಚು ಹಾಕಿದ ಇಟ್ಟಿಗೆಗಳಿಂದ ಕಟ್ಟಿದ್ದಾರೆ. ಮುಖ್ಯ ಕಟ್ಟಡಕ್ಕೆ ಬಳಸಿರುವ ಇಟ್ಟಿಗೆಗಳು ದೀರ್ಘಚತುರಸ್ರಾಕಾರದ ಮತ್ತು ಚೌಕಾಕಾರದ್ದಾಗಿವೆ. ಇವುಗಳೆಲ್ಲವೂ ಒಂದೇ ಕಾಲದಲ್ಲಿ ತಯಾರಿಸಲ್ಪಟ್ಟಿದ್ದರೂ ಇವುಗಳ ಗಾತ್ರ ಮತ್ತು ಪ್ರಮಾಣದಲ್ಲಿ ವ್ಯತ್ಯಾಸವಿದೆ. ಈ ಇಟ್ಟಿಗೆಗಳಲ್ಲಿ ಮೂರು ಮುಖ್ಯಗಾತ್ರದ ಇಟ್ಟಿಗೆಗಳನ್ನು ಇಲ್ಲಿ ಗುರುತಿಸಬಬಹುದು. ಅವುಗಳೆಂದರೆ ೪೧x೨೦x೬೧/೨ ಸೆಂಟಿಮೀಟರ್; ೨೫x೨೦x೬ ಸೆಂಟಿ ಮೀಟರ್; ೧೯x೧೯x೬೧/೨ ಸೆಂಟಿಮೀಟರ್. ಈ ಇಟ್ಟಿಗೆಯ ಗಾತ್ರಗಳು ಕರ್ನಾಟಕದಲ್ಲಿ ಆದಿಚಾರಿತ್ರಿಕ ಕಾಲಕ್ಕೆ ಸೇರಿದ ಸಂಸ್ಕೃತಿಯ ನೆಲೆಗಳಲ್ಲಿ ದೊರೆಯುವ ಇಟ್ಟಿಗೆಗಳ ಪ್ರಮಾಣಕ್ಕೆ ಸರಿಹೊಂದುತ್ತವೆ. ಕಟ್ಟಡವನ್ನು ಯಾವುದೇ ಘನವಾದ ಅಡಿಪಾಯದ ಮೇಲೆ ಕಟ್ಟಲಾಗಿಲ್ಲ, ನೇರವಾಗಿ ಗಟ್ಟಿಮಣ್ಣಿನ ಮೇಲೆ ಇಟ್ಟಿಗೆಗಳನ್ನು ಕೂರಿಸಿ ದಪ್ಪನಾದ ಗೋಡೆಯನ್ನು ಕಟ್ಟಿದ್ದಾರೆ. ಇಟ್ಟಿಗೆಯ ವರಸೆಗಳನ್ನು ಅಚ್ಚುಕಟ್ಟಾಗಿ ಮತ್ತು ಬಹಳ ನೀಟಾಗಿ ಜೋಡಿಸಿದ್ದಾರೆ. ಇಟ್ಟಿಗೆಯ ವರಸೆಗಳ ಮಧ್ಯೆ ತಿಳಿಯಾದ ಕಲ್ಮಶವಿಲ್ಲದ ಜೇಡಿಮಣ್ಣಿನ ತೆಳುಪದರವನ್ನು ಮೆತ್ತಿ ಇಟ್ಟಿಗೆ ಗಳನ್ನು ಭದ್ರವಾಗಿ ಕೂಡಿಸಿದ್ದಾರೆ. ಇಟ್ಟಿಗೆಯ ವರಸೆಗಳ ಅಂತರ ಬಹಳ ಕಡಿಮೆ ಇದ್ದು ಕೇವಲ ಚಾಕುವಿನಷ್ಟು ತೆಳ್ಳಗಿದೆ. ಇದರ ಉದ್ದೇಶ ಕಟ್ಟಡದಲ್ಲಿ ಮಣ್ಣಿನ ಅಂಶ ಕಡಿಮೆಯಾಗಿ ಇಟ್ಟಿಗೆಯ ಅಂಶ ಹೆಚ್ಚುತ್ತದೆ. ಕಟ್ಟಡ ಹೆಚ್ಚು ಭದ್ರವಾಗುತ್ತದೆ. ಜೋಡಣೆಗಳ ಅಂತರ ಬಹಳ ಕಡಿಮೆ ಇರುತ್ತದೆ. ಇದರಿಂದಾಗಿ ಕಟ್ಟಡದ ಒಳಕ್ಕೆ ಬೇರುಗಳು ನುಗ್ಗುವ, ತೇವ ಇಳಿಯುವ ಸಾಧ್ಯತೆಗಳು ಕಡಿಮೆ ಯಾಗುತ್ತವೆ.

ಚೈತ್ಯಾಲಯದ ಭಿತ್ತಿಯ ಭಾಗ ಸುಂದರವಾದ ವಾಸ್ತು, ಶಿಲ್ಪ ಮತ್ತು ಇತರೆ ಅಲಂಕಾರಿಕ ಕೆತ್ತನೆಗಳಿಂದ ಕಂಗೊಳಿಸುತ್ತಿತ್ತು ಎನ್ನುವುದಕ್ಕೆ ಸಾಕಷ್ಟು ಆಧಾರಗಳು ಉತ್ಖನನದಲ್ಲಿ ದೊರೆತಿದೆ. ಗಾರೆಯ ಗಚ್ಚಿನಲ್ಲಿ ಮಾಡಲ್ಪಟ್ಟ ಸುಂದರವಾದ ಆಕೃತಿಗಳುಳ್ಳ ಎಲೆ, ಹೂವು, ಬಳ್ಳಿ ಮುಂತಾದ ಡಿಜೈನುಗಳು ಪ್ರಾಣಿಗಳ ಮತ್ತು ಮನುಷ್ಯರ ಸಣ್ಣಸಣ್ಣ ಆಕೃತಿಗಳು ಮುಂತಾದವು ದೊರಕಿವೆ. ಇವಲ್ಲದೆ ಅಲಂಕರಣಕ್ಕೆಂದೇ ಪ್ರತ್ಯೇಕವಾಗಿ ಅಚ್ಚುಗಳಿಂದ ತಯಾರಿಸಲ್ಪಟ್ಟ ವಿವಿಧಾಕಾರದ ಸಣ್ಣ, ಮಧ್ಯಮ ಹಾಗೂ ದೊಡ್ಡಗಾತ್ರದ ಇಟ್ಟಿಗೆಗಳು ದೊರಕಿವೆ. ಇವುಗಳಿಂದ ನಾವು ಈ ರೀತಿಯಾಗಿ ಚೈತ್ಯಾಲಯವನ್ನು ವರ್ಣಿಸಬಹುದು. ಚೈತ್ಯಾಲಯವು ಆಕರ್ಷಕವಾದ ಹಾಗೂ ಅಲಂಕೃತವಾದ ಹೊರಮೈಯನ್ನು ಹೊಂದಿತ್ತು. ಚೈತ್ಯಾಲಯದ ಇಟ್ಟಿಗೆ ಗೋಡೆಯನ್ನು ಸಂಪೂರ್ಣವಾಗಿ ಸುಣ್ಣದ ಗಾರೆಯಿಂದ ಗಿಲಾವು ಮಾಡಲಾಗಿತ್ತು. ಆಗಿಂದಾಗ್ಗೆ ಈ ಗೋಡೆಗೆ ಸುಣ್ಣವನ್ನು ಪ್ರಾಯಶಃ ಬಣ್ಣವನ್ನೂ ಬಳಿಯಲಾಗುತ್ತಿತ್ತು. ಗೋಡೆಯು ಸಾಧಾರಣ ಸಮತಟ್ಟಾಗಿರದೆ ಇವುಗಳಲ್ಲಿ ವಿವಿಧಾಕಾರದ ಸಣ್ಣ, ಮಧ್ಯಮ ಹಾಗೂ ದೊಡ್ಡಗಾತ್ರದ ಅನೇಕ ದಿಂಡುಗಳು ಹಾಗೂ ಇತರ ವಾಸ್ತು ಅಲಂಕರಣೆಗಳು ಇದ್ದವು. ಗೋಡೆಯಲ್ಲಿ ಅಲ್ಲಲ್ಲಿ ಕಂಬಗಳು, ಅರೆಗಂಬಗಳು, ಕೋಷ್ಠಗಳು, ಕಟಾಂಜನಗಳು ಒದಗಿಸಲ್ಪಟ್ಟಿದ್ದವು. ದುಂಡಾದ ಅಥವಾ ಉರುಳೆಯಾಕಾರದ, ಚೌಕಟ್ಟಾದ ಕಂಬಗಳು, ಅರೆಗಂಬಗಳು ಇದ್ದವು. ಕಂಬ ಮತ್ತು ಅರೆಗಂಬಗಳಿಗೆ ಅಲಂಕಾರಿಕ ಪೀಠಗಳು ಮತ್ತು ಬೋದಿಗೆಗಳು ಇದ್ದವು. ಕಟಾಂಜನಗಳು ವಿವಿಧಾಕಾರದ ದಿಂಡನ್ನು ಹೊಂದಿದ್ದವು. ಒಂದೇ ದಿಂಡಿನಲ್ಲಿ ಚೌಕ, ಅಷ್ಟಮುಖ ಮತ್ತು ದುಂಡಾದ ಭಾಗಗಳು ಇದ್ದವು.

ಶಿಲ್ಪಾಲಂಕರಣದಲ್ಲಿ ಪ್ರಾಯಶಃ ಬೌದ್ಧ ಪರಂಪರೆಗೆ ಸೇರಿದಂತಹ ಜಾತಕ ಕಥೆಗಳು ಹಾಗೂ ಬುದ್ಧನ ಜೀವನಕ್ಕೆ ಸಂಬಂಧಿಸಿದಂತಹ ಅನೇಕ ಸನ್ನಿವೇಶಗಳು, ಕಥೆಗಳು ನಿರೂಪಿತವಾಗಿದ್ದವು. ಸುಂದರವಾದ, ಸೂಕ್ಷ್ಮವಾದ ಹಾಗೂ ವಿವಿಧ ರಸಗಳನ್ನು ಹೊರಸೂಸುವಂತಹ ಗಾರೆಗಚ್ಚಿನ ಶಿಲ್ಪದ ಮುಖಗಳು ಈ ಶಿಲ್ಪಾಲಂಕರಣೆಯು ಕೇವಲ ಧಾರ್ಮಿಕವಾಗಿರದೆ ವೈವಿಧ್ಯಮಯ ಲೌಕಿಕ ಘಟನೆಗಳನ್ನು ಒಳಗೊಂಡಿತ್ತೆಂದು ಸೂಚಿಸುತ್ತವೆ. ಸುಂದರ ಸೂಕ್ಷ್ಮವಾದ ಅಲಂಕಾರಿಕ ಕೆತ್ತನೆಗಳು ಸಾಕಷ್ಟು ವೈವಿಧ್ಯಮಯ ಡಿಜೈನುಗಳಲ್ಲಿ ದೊರಕಿದ್ದು ಶಿಲ್ಪಿಯ ಅಲಂಕರಣೆಯ ಜ್ಞಾನದ ಕುಶಲತೆಯನ್ನು, ಫಲವತ್ತತೆಯನ್ನು ನಿರೂಪಿಸುತ್ತವೆ. ಪ್ರಾಣಿಶಿಲ್ಪಗಳು ಅದರಲ್ಲೂ ವ್ಯಾಳದ ಶಿಲ್ಪಗಳು ಬಹಳ ಅಚ್ಚುಕಟ್ಟಾಗಿ ಮತ್ತು ಆಕರ್ಷಕವಾಗಿ ಮೂಡಿಬಂದಿವೆ.

ಇಷ್ಟು ಭವ್ಯವಾದ ಹಾಗೂ ಸಾಲಂಕೃತವಾದ ಚೈತ್ಯಾಲಯ ಮೇಲ್ಛಾವಣಿ ಯಾವ ರೀತಿ ಇತ್ತು ಎನ್ನುವುದರ ಬಗ್ಗೆ ಅನುಮಾನ ಪಡಬೇಕಾಗಿದೆ. ಉತ್ಖನನದಲ್ಲಿ ದೊರೆತ ನೇರ ಹಾಗೂ ಅನೇಕ ಸಾಕ್ಷ್ಯಗಳಿಂದ ಈ ಚೈತ್ಯಾಲಯದ ಮೇಲ್ಛಾವಣಿ ಇಟ್ಟಿಗೆಯಿಂದ ನಿರ್ಮಿಸಿದ ಕಾರ್ಬೆಲ್ ಕಮಾನಿನಿಂದ ಮುಚ್ಚಲ್ಪಟ್ಟಿತ್ತು ಎಂದು ಊಹಿಸಬಹುದಾಗಿದೆ. ಹೆಂಚಿನ ಛಾವಣಿ ಇತ್ತು ಎಂದು ಹೇಳುವುದಕ್ಕೆ ಉತ್ಖನನದಲ್ಲಿ ಒಂದೇ ಒಂದು ಹೆಂಚಿನ ಚೂರು ಸಹ ಸಿಕ್ಕಿಲ್ಲ. ಆದ್ದರಿಂದ ಈ ಚೈತ್ಯಾಲಯಕ್ಕೆ ಹೆಂಚಿನ ಛಾವಣಿ ಇದ್ದಿರಲಾರದು. ಮರದ ಛಾವಣಿ ಇತ್ತೆಂಬುದನ್ನೂ ಸಹ ಹೇಳಲಾಗುವುದಿಲ್ಲ. ಏಕೆಂದರೆ ಮರದ ಛಾವಣಿಯ ಕಟ್ಟನ್ನು ನಿರ್ಮಿಸುವುದಕ್ಕೆ ಉಪಯೋಗಿಸುವಂತಹ ಕಬ್ಬಿಣದ ವಿವಿಧ ಗಾತ್ರದ ಮೊಳೆಗಳಾಗಲಿ ಅಥವಾ ಬೋಲ್ಟುಗಳಾಗಲಿ ಯಾವುದೂ ದೊರೆತಿಲ್ಲ. ಇದರಿಂದಾಗಿ ಈ ಚೈತ್ಯಾಲಯಕ್ಕೆ ಮರದ ಛಾವಣಿ ಇತ್ತೆಂಬುದನ್ನು ಖಚಿತವಾಗಿ ನಿರಾಕರಿಸಬಹುದು. ಚೈತ್ಯದ ಸ್ಥಳದಲ್ಲಿ ಅಗಾಧವಾದ ಇಟ್ಟಿಗೆಯ ರಾಶಿ ಇತ್ತೆಂದೂ, ಅವೆಲ್ಲವನ್ನು ಸ್ಥಳೀಯರು ಗ್ರಾಮದಲ್ಲಿ ಮನೆಗಳನ್ನು ಕಟ್ಟಲು ಇಲ್ಲಿಂದ ಕೊಂಡೊಯ್ದರೆಂದು ಸ್ಥಳೀಯರು ಹೇಳುವುದರಿಂದ, ಈ ಚೈತ್ಯಾಲಯ ಬಹುಶಃ ಇಟ್ಟಿಗೆಯಿಂದ ನಿರ್ಮಿಸಿದ ಕಮಾನಿನ ಮೇಲ್ಛಾವಣಿಯನ್ನು ಹೊಂದಿದ್ದಿರಬಹುದೆಂದು ಹೇಳಬಹುದು.

**ಕಾಲ**

ಈ ಚೈತ್ಯಾಲಯದ ಕಾಲವನ್ನು ನಿರ್ಧರಿಸುವುದಕ್ಕೆ ಯಾವುದೇ ನಿಖರವಾದ ಹಾಗೂ ಸ್ಪಷ್ಟವಾದ ಆಧಾರಗಳು ಉತ್ಖನನದಲ್ಲಿ ದೊರೆತಿಲ್ಲ. ಆದರೂ ಸಹ ಈ ಚೈತ್ಯಾಲಯದ ಕಾಲವನ್ನು ನಿರ್ಧರಿಸುವ ಒಂದು ಪ್ರಯತ್ನವನ್ನು ಇಲ್ಲಿ ಮಾಡಬಹುದು. ಈ ಚೈತ್ಯಾಲಯಕ್ಕೆ ಸುಮಾರು ಎರಡು ಫರ್ಲಾಂಗ್ ಪೂರ್ವದಲ್ಲಿ ಮಣ್ಣಿನಿಂದ ಮಾಡಿದ ಅನೇಕ ಸಣ್ಣ ಸಣ್ಣ ಹರಕೆ ಸ್ತೂಪಗಳು ಉತ್ಖನನದಲ್ಲಿ ದೊರೆತವು. (ವಿವರಗಳನ್ನು ಮುಂದೆ ಕೊಡಲಾಗಿದೆ.) ಈ ಪ್ರತಿಯೊಂದು ಹರಕೆಯ ಸ್ತೂಪಗಳ ಒಳಭಾಗದಲ್ಲಿ ಒಂದೊಂದು ಸಣ್ಣದಾದ ಮಾತ್ರೆ ಗಾತ್ರದ ಮಣ್ಣಿನ ಬಿಲ್ಲೆಗಳು ಕಂಡುಬಂದಿವೆ. ಪ್ರತಿಯೊಂದು ಬಿಲ್ಲೆಯ ಒಂದು ಮುಖದ ಮೇಲೆ ಬ್ರಾಹ್ಮೀಲಿಪಿಯಲ್ಲಿ ಬೌದ್ಧಧ್ಯಾನಶ್ಲೋಕವೊಂದರ ಮುದ್ರೆ ಇರುತ್ತದೆ. ಲಿಪಿಯ ಆಧಾರದ ಮೇಲೆ ಈ ಸ್ತೂಪಗಳು ಮತ್ತು ಅದರೊಳಗಿನ ಬಿಲ್ಲೆಗಳನ್ನು ಕ್ರಿ.ಶ. ೪ರಿಂದ ೬ನೆಯ ಶತಮಾನಗಳ ಕಾಲದ್ದೆಂದು ನಿರ್ಧರಿಸಬಹುದಾಗಿದೆ.[೩] ಆದ್ದರಿಂದ ಈ ಸ್ತೂಪಗಳ ಕಾಲ ಕ್ರಿ.ಶ. ೪ ರಿಂದ ೬ನೇ ಶತಮಾನವೆಂದು ನಿರ್ಧರಿಸಬಹುದು. ಈ ಸ್ತೂಪಗಳೆಲ್ಲವೂ ಹರಕೆ ಸ್ತೂಪಗಳು. ಇವುಗಳನ್ನು ಬೌದ್ಧಧರ್ಮೀಯರು ತಮ್ಮ ಇಷ್ಟ ದೇವರಾದ ಬುದ್ಧನಿಗೆ ಅರ್ಪಿಸಿದ್ದಿರಬೇಕು. ಈ ರೀತಿಯ ಸ್ತೂಪಗಳ ಅರ್ಪಣೆ ಈಗಲೂ ಸಹ ಟಿಬೆಟ್‌ನ ಬೌದ್ಧ ಧರ್ಮೀಯರಲ್ಲಿದೆ. ರಾಜಘಟ್ಟದಲ್ಲಿ ಒಂದೇ ಸ್ಥಳದಲ್ಲಿ ಅನೇಕ ಸಂಖ್ಯೆಯಲ್ಲಿ ಕ್ರಿ.ಶ. ೪-೬ನೇ ಶತಮಾನಕ್ಕೆ ಸೇರಿದ ಹರಕೆಯ ಸ್ತೂಪಗಳು ದೊರೆತಿವೆ ಎಂದರೆ ಈ ಸ್ಥಳದಲ್ಲಿ, ಆ ಕಾಲದಲ್ಲಿ ಬೌದ್ಧಧರ್ಮ ಪ್ರವರ್ಧಮಾನವಾಗಿ ನೆಲೆಸಿದ್ದಿರಬೇಕು. ಬೌದ್ಧ ಧರ್ಮೀಯರು ಅನೇಕ ಸಂಖ್ಯೆಯಲ್ಲಿ ಅಲ್ಲಿ ನೆಲೆಸಿದ್ದಿರಬೇಕು. ಈ ಬೌದ್ಧ ಧರ್ಮೀಯರ ನಿತ್ಯೋಪಯೋಗಕ್ಕಾಗಿ ರಾಜಘಟ್ಟದಲ್ಲಿ ಚೈತ್ಯಾಲಯವು ಸಹ ನಿರ್ಮಿತವಾಗಿರಬೇಕು. ಹೀಗಾಗಿ ಚೈತ್ಯಾಲಯದ ಕಾಲ ಕ್ರಿ.ಶ. ೪-೬ನೆಯ ಶತಮಾನವೆಂದು ಊಹಿಸಬಹುದು.

**ಬೌದ್ಧಪಂಥ**

ರಾಜಘಟ್ಟದಲ್ಲಿ ನೆಲೆಸಿದ್ದ ಬೌದ್ಧ ಜನಾಂಗವು ಬೌದ್ಧಧರ್ಮದ ಯಾವ ಪಂಥಕ್ಕೆ ಸೇರಿತ್ತೆಂಬುದರ ಬಗ್ಗೆ ಸ್ಪಷ್ಟ ಸಾಕ್ಷ್ಯಗಳು ದೊರೆತಿಲ್ಲ. ಆದರೂ ಕೆಲವು ಸಾಂದರ್ಭಿಕ ಆಧಾರಗಳ ಮುಖಾಂತರ ಈ ಪಂಥವು ಮಹಾಯಾನ ಪಂಥವಾಗಿದ್ದಿರಬಹುದೆಂದು ಹೇಳಬಹುದಾಗಿದೆ. ಮೇಲೆ ಹೇಳಿದ ಹರಕೆಯ ಸ್ತೂಪಗಳು ದೊರೆತ ಸ್ಥಳದಲ್ಲಿ ಒಂದು ಪದಕದ ಗಾತ್ರದ ಮಣ್ಣಿನ ಮುದ್ರೆಯೊಂದು ದೊರೆಯಿತು.[೪] ಇದರ ಒಂದು ಮುಖದಲ್ಲಿ ಪದ್ಮಾಸನದಲ್ಲಿ, ಧ್ಯಾನಮುದ್ರೆಯಲ್ಲಿ ಇರುವ ಬುದ್ಧನ ಚಿತ್ರವಿದೆ. ಆತನ ಇಕ್ಕೆಲಗಳಲ್ಲಿ ಒಂದೊಂದು ಸಣ್ಣ ಸ್ತೂಪವಿದೆ. ಬುದ್ಧನ ಎರಡು ಭುಜದ ಪಕ್ಕಗಳಲ್ಲಿ ಒಂದೊಂದು ಚಾಮರವೂ, ತಲೆಯ ಹಿಂಭಾಗದಲ್ಲಿ ಪ್ರಭಾವಳಿಯೂ ಕಂಡು ಬರುತ್ತದೆ. ಈ ರೀತಿಯ ಬುದ್ಧನ ಕಂಡರಣೆಯನ್ನು ಅಮಿತಾಭನೆಂದು ಕರೆಯುತ್ತಾರೆ. ಈ ರೀತಿಯ ಬುದ್ಧನ ನಿರೂಪಣೆಯನ್ನು ಮಹಾಯಾನ ಪಂಥದ ಟಿಬೆಟ್‌ನ ಬೌದ್ಧರು ಇಂದಿಗೂ ಅಮಿತಾಭನೆಂದು ಪೂಜಿಸುತ್ತಾರೆ.[೫] ಮಹಾಯಾನ ಚೈತ್ಯಾಲಯಗಳನ್ನು ಇಂದಿಗೂ ಸಹ ದಕ್ಷಿಣಕ್ಕೆ ಮುಖಮಾಡಿ ನಿರ್ಮಿಸಲಾಗುತ್ತದೆ.[೬] ರಾಜಘಟ್ಟದ ಚೈತ್ಯಾಲಯವು ದಕ್ಷಿಣಕ್ಕೆ ಮುಖಮಾಡಿ ನಿಂತಿದೆ. ಈ ಕಾರಣಗಳಿಂದಾಗಿ ಪ್ರಾಯಶಃ ರಾಜಘಟ್ಟ ಚೈತ್ಯಾಲಯವು ಮಹಾಯಾನ ಪಂಥದ್ದಾಗಿರಬಹುದೆಂದು ಹೇಳಬಹುದು.

### ಹರಕೆಯ ಸ್ತೂಪಗಳು

ರಾಜಘಟ್ಟದ ಆಗ್ನೇಯಕ್ಕೆ ಸುಮಾರು ಎರಡು ಫರ್ಲಾಂಗ್ ದೂರದಲ್ಲಿ ಹೊಲವೊಂದರಲ್ಲಿ ಸಣ್ಣಸಣ್ಣ ಹರಕೆಯ ಸ್ತೂಪಗಳ ಇರುವಿಕೆಯನ್ನು ಗ್ರಾಮಸ್ಥರು ಗಮನಿಸಿದ್ದರು. ಹೊಲವನ್ನು ಉಳುವಾಗ ನೆಲದಿಂದ ಹೊರಬರುತ್ತಿದ್ದ ಇಂತಹ ಸಣ್ಣ ಸಣ್ಣ ಮಣ್ಣಿನ ಸ್ತೂಪಗಳನ್ನು ಗ್ರಾಮಸ್ಥರು ಕುತೂಹಲದಿಂದ ಪರೀಕ್ಷಿಸಿ ಒಡೆದು ಅವುಗಳ ಒಳಭಾಗದಲ್ಲಿ ಇರುತ್ತಿದ್ದ ಮಣ್ಣಿನ ನಾಣ್ಯರೀತಿಯ ಅಕ್ಷರ ಮುದ್ರೆಯನ್ನು ಕುತೂಹಲದಿಂದ ವೀಕ್ಷಿಸಿ ಬಿಸಾಡುತ್ತಿದ್ದರು. ಕುವೆಂಪು ವಿಶ್ವವಿದ್ಯಾನಿಲಯದ ಡಾ. ರಾಜರಾಮ್ ಹೆಗ್ಗಡೆಯವರು ಈ ಸ್ಥಳವನ್ನು ಪರಿಶೀಲಿಸಿ ಅಲ್ಲಿ ದೊರೆಯುವ ಈ ರೀತಿಯ ಹರಕೆಯ ಸ್ತೂಪಗಳನ್ನು ಮತ್ತು ಅದರ ಒಳಗಿರುವ ಬಿಲ್ಲೆಗಳ ಮೇಲಿನ ಶಾಸನವನ್ನು ಕುರಿತು ಮೊದಲು ಪ್ರಕಟಿಸಿದರು.[2] ಈ ಸ್ಥಳದಲ್ಲಿ ನಡೆಸಿದ ಉತ್ಖನನದಲ್ಲಿ ಯಾವುದೇ ರೀತಿಯ ವಸತಿ ಅವಶೇಷಗಳು ಕಂಡು ಬರಲಿಲ್ಲ. ಯಾವುದೇ ಕಟ್ಟಡವಾಗಲಿ, ವಸತಿ ನಿವೇಶನವಾಗಲಿ, ವಸತಿ ಪದರಗಳಾಗಲಿ ಹಾಗೆಯೇ ಇನ್ನಾವುದೇ ಮನುಷ್ಯನಿಂದ ಮಾಡಿದ ವಸ್ತುಗಳಾಗಲಿ, ದೊರಕಲಿಲ್ಲ. ಒಟ್ಟಿಗೆ ಸುಮಾರು ೧೧/೨ ಅಡಿಯಷ್ಟು ಎತ್ತರದ ಪದರದಲ್ಲಿ ಹುದುಗಿದ್ದ ನೂರಾರು ಸ್ತೂಪಗಳು ಹೊರಬಂದವು. ಇದರಿಂದಾಗಿ ಪ್ರಾಯಶಃ ಊರಿನ ಚೈತ್ಯಾಲಯದಲ್ಲಿ ದೇವರಿಗೆ ಅರ್ಪಿಸಲ್ಪಟ್ಟ ಹರಕೆಯ ಸ್ತೂಪಗಳನ್ನು ಆಗ್ಗಿಂದಾಗ್ಗೆ ತಂದು ಊರಿನಾಚೆ ಒಂದು ಸ್ಥಳದಲ್ಲಿ ಸುರಿಯುತ್ತಿದ್ದಿರಬೇಕು. ಅಂತಹ ಒಂದು ನಿವೇಶನ ಪ್ರಾಯಶಃ ಈ ಸ್ಥಳ ಇದ್ದಿರಬಹುದು. ಇವಿಷ್ಟನ್ನು ಹೊರತುಪಡಿಸಿ ಬೇರೆ ಇನ್ನೇನನ್ನು ಈ ನಿವೇಶನ ಹಾಗೂ ಈ ಸ್ತೂಪಗಳು ದೊರೆತ ಪರಿಸ್ಥಿತಿಯ ಬಗ್ಗೆ ಹೇಳಲು ಸದ್ಯಕ್ಕೆ ಸಾಧ್ಯವಿಲ್ಲ. ಏನೇ ಆಗಲಿ ಇಷ್ಟೊಂದು ಸಂಖ್ಯೆಯಲ್ಲಿ ಒಂದೇ ಕಡೆ ರಾಶಿಯಲ್ಲಿ ಹರಕೆಯ ಸ್ತೂಪಗಳು ಕಂಡು ಬಂದಿರುವುದು ವಿಶೇಷವಲ್ಲದೆ ಅಭೂತ ಪೂರ್ವವಾದದ್ದು. ಈ ರೀತಿಯಾಗಿ ಒಟ್ಟಿಗೆ ನೂರಾರು ಸ್ತೂಪಗಳು ಗುಡ್ಡೆಯಾಗಿ ಕಂಡು ಬಂದಿರುವುದು ಪ್ರಾಯಶಃ ಭಾರತದಲ್ಲೇ ಮೊಟ್ಟಮೊದಲಿಗೆ ಎನ್ನಬಹುದು.

ಇಲ್ಲಿ ದೊರೆತ ಸ್ತೂಪಗಳೆಲ್ಲವೂ ಒಂದೇ ಸ್ಥಿತಿಯಲ್ಲಿ ಇರಲಿಲ್ಲ. ಬಹಳಷ್ಟು ಭಿನ್ನವಾಗಿದ್ದವು, ಚೂರಾಗಿದ್ದವು, ಇನ್ನು ಕೆಲವು ಸುಸ್ಥಿತಿಯಲ್ಲೂ ಇದ್ದವು. ಈ ಎಲ್ಲಾ ಸ್ತೂಪಗಳ ಸಂಖ್ಯೆಯನ್ನು ಕೂಡಿಸಿದರೆ ಸುಮಾರು ೩೦೦ ರಷ್ಟಾಗಬಹುದು. ಸ್ತೂಪಗಳೆಲ್ಲವೂ ಮಣ್ಣಿನಿಂದ ಮಾಡಲ್ಪಟ್ಟಿವೆ. ಕಲಸಿದ ಮಣ್ಣನ್ನು ಅದಕ್ಕಾಗಿಯೇ ಸಿದ್ಧಪಡಿಸಿದ ಮರದ ಅಥವಾ ಲೋಹದ ಅಥವಾ ಪ್ರಾಯಶಃ ಕಲ್ಲಿನ ಅಚ್ಚಿನೊಳಕ್ಕೆ ತುಂಬಿ ಹಸಿಯಾಗಿಯೇ ತೆಗೆದು ಬಿಸಿಲಿನಲ್ಲಿ ಒಣಗಿಸಿದಂತಹ ಸ್ತೂಪಗಳು ಇವು. ಹೆಚ್ಚು ಕಡಿಮೆ ಎಲ್ಲಾ ಸ್ತೂಪಗಳಿಗೂ ಹೊರಮೈಯಲ್ಲಿ ತೆಳುವಾದ ಕೆಂಪುಮಣ್ಣಿನ ತಿಳಿಯ ಲೇಪನ ಮಾಡಿರುವುದು ಉಂಟು. ಈ ರೀತಿಯಾಗಿ ಸ್ತೂಪಗಳನ್ನು ಅಚ್ಚಿನಲ್ಲಿ ಮಾಡಿದಾಗ ಪ್ರತಿಯೊಂದು ಸ್ತೂಪದ ಒಳಕ್ಕೂ ಒಂದೊಂದು ಬೌದ್ಧಧ್ಯಾನಶ್ಲೋಕದ ಮುದ್ರೆಯನ್ನು ಹೊಂದಿರುವ ಮಣ್ಣಿನ ಬಿಲ್ಲೆಯನ್ನು ಸೇರಿಸುತ್ತಿದ್ದರು. ಈ ರೀತಿಯ ಬಿಲ್ಲೆಗಳು ಆ ಮಣ್ಣಿನ ಸ್ತೂಪಕ್ಕೆ ಹೆಚ್ಚಿನ ಪಾವಿತ್ರತೆಯನ್ನು ತಂದು ಕೊಡುತ್ತಿದ್ದವು ಎಂಬ ಅಂಶವನ್ನು ವಿಶೇಷವಾಗಿ ಇಲ್ಲಿ ಹೇಳಬೇಕಾಗಿಲ್ಲ. ಅಚ್ಚಿನೊಳಕ್ಕೆ ಅರ್ಧಮಣ್ಣನ್ನು ತುಂಬಿದ ಮೇಲೆ, ಈ ಮಣ್ಣಿನ ಬಿಲ್ಲೆಯನ್ನು ಹಾಕಿ ಉಳಿದ ಅರ್ಧಭಾಗಕ್ಕೂ ಮಣ್ಣನ್ನು ತುಂಬಿ, ಚೆನ್ನಾಗಿ ಅಮುಕಿ ಸ್ತೂಪವನ್ನು ಹೊರಕ್ಕೆ ತೆಗೆಯುತ್ತಿದ್ದರು. ಈ ರೀತಿಯ ಅಚ್ಚಿನಿಂದ ಸ್ತೂಪವನ್ನು ಮಾಡುವ ಪರಿಪಾಠ ಈಗಲೂ ಸಹ ಟಿಬೆಟ್ ಬೌದ್ಧರಲ್ಲಿ ಇದೆ. ಈ ರೀತಿಯ ಅಚ್ಚನ್ನು **ತ್ಸ-ತ್ಸ** ಎಂದು ಕರೆಯುತ್ತಾರೆ.

ರಾಜಘಟ್ಟದ ಹರಕೆಯ ಸ್ತೂಪಗಳ ತಯಾರಿಕೆಯಲ್ಲಿ ಒಂದು ವಿಶೇಷತೆ ಇದೆ. ಅದೇನೆಂದರೆ ಸ್ತೂಪಗಳನ್ನು ತಯಾರಿಸುವಾಗ ಹಸಿಮಣ್ಣಿನ ಮಧ್ಯದಲ್ಲಿ ಮೇಲೆ ಹೇಳಿದ ಮಣ್ಣಿನ ಬಿಲ್ಲೆಗಳನ್ನು ಸೇರಿಸಲಾಗಿದ್ದಾಗ್ಯೂ ಸಹ ಆ ಬಿಲ್ಲೆಗಳು ಅನೇಕ ಸಂದರ್ಭಗಳಲ್ಲಿ ಹಸಿಮಣ್ಣಿಗೆ ಅಂಟಿಕೊಂಡಿರುವುದಿಲ್ಲ. ಅನೇಕ ಭಗ್ನವಾದ ಸ್ತೂಪಗಳಿಂದ ಇವು ಪ್ರತ್ಯೇಕವಾಗಿ ಹೊರಕ್ಕ ಬಂದಿರುತ್ತವೆ ಹಾಗೂ ಅವುಗಳ ಮೇಲ್ಮೈಯಲ್ಲಿ ಸ್ತೂಪದ ಹಸಿಮಣ್ಣು ಸ್ವಲ್ಪವೂ ಅಂಟಿಕೊಳ್ಳದಿರುವುದು ಇದರ ವಿಶೇಷ. ಈ ರೀತಿಯಲ್ಲಿ ಹೇಗೆ ಈ ಸ್ತೂಪಗಳೊಳಗೆ ಹಸಿಮಣ್ಣು ಅಂಟದ ರೀತಿಯಲ್ಲಿ ಮಣ್ಣಿನ ಬಿಲ್ಲೆಗಳನ್ನು ಸೇರಿಸುತ್ತಿದ್ದರು ಎಂಬುದರ ಬಗ್ಗೆ ಸಂಶೋಧನೆ ನಡೆಯುತ್ತಲಿದೆ.

ಮಣ್ಣಿನ ಬಿಲ್ಲೆಗಳನ್ನು ಮೊದಲೇ ಪ್ರತ್ಯೇಕವಾಗಿ ತಯಾರಿಸಿ



ಅದರ ಮೇಲೆ ಮುದ್ರೆಯನ್ನು ಒತ್ತಿ ಒಣಗಿಸಿ ಇಟ್ಟುಕೊಳ್ಳುತ್ತಿದ್ದರು. ಮುದ್ರೆಯನ್ನು ಒತ್ತುವಾಗ ಬಿಲ್ಲೆಗಳನ್ನು ಬಟ್ಟೆಯ ಮೇಲೆ ಇಟ್ಟಿಕೊಳ್ಳುತ್ತಿದ್ದರು ಎಂಬುದಕ್ಕೆ ಕೆಲವು ಮುದ್ರೆಗಳ ಹಿಂಭಾಗದಲ್ಲಿ ಬಟ್ಟೆಯಿಂದ ಒತ್ತಿದ ಗುರುತು ಕಾಣುತ್ತದೆ. ಬಿಲ್ಲೆಯ ಮುಮ್ಮುಖದಲ್ಲಿ ಸುಂದರವಾದ ಸೂಕ್ಷ್ಮವಾದ, ಸ್ಪಷ್ಟವಾದ ಹಾಗೂ ಖಚಿತವಾದ ಅಕ್ಷರಗಳಲ್ಲಿ ಬೌದ್ಧಧ್ಯಾನಶ್ಲೋಕವೊಂದನ್ನು ಮುದ್ರೆಯ ಮುಖಾಂತರ ಒತ್ತಿರುತ್ತಾರೆ. ಈ ಮುದ್ರೆಗಳು ಕಲ್ಲಿನದ್ದಾಗಿರಬಹುದು ಅಥವಾ ಲೋಹದ್ದಾಗಿರಬಹುದು. ಏನೇ ಆಗಲಿ ಇಷ್ಟೊಂದು ಸೂಕ್ಷ್ಮವಾಗಿ, ಸ್ಪಷ್ಟವಾಗಿ, ಅಕ್ಷರಗಳನ್ನು ಕೊರೆದು ಮುದ್ರೆಗಳನ್ನು ತಯಾರಿಸಿರುವುದು ಆ ಕಾಲದ ಲೋಹಕರ್ಮಿಗಳ ಕೌಶಲ್ಯಕ್ಕೆ ಸಾಕ್ಷಿಯಾಗಿದೆ. ಭಾರತದ ಯಾವುದೇ ನಾಣ್ಯದ ಮೇಲೆ ಇಷ್ಟೊಂದು ಸೂಕ್ಷ್ಮ ಮತ್ತು ಸುಂದರವಾದ ಅಕ್ಷರಗಳು ಇದುವರೆಗೂ ಕಂಡು ಬಂದಿಲ್ಲವೆಂದೇ ಹೇಳಬೇಕು.

ಪ್ರತಿಯೊಂದು ಬಿಲ್ಲೆಯೂ ತೆಳುವಾಗಿ ವೃತ್ತಾಕಾರ ವಾಗಿರುತ್ತದೆ, ಮುಂಭಾಗ ಚಪ್ಪಟೆಯಾಗಿದ್ದು, ಹಿಂಭಾಗ ಸ್ವಲ್ಪ ಉಬ್ಬನ್ನು ಹೊಂದಿರುತ್ತದೆ. ಈ ವೃತ್ತದೊಳಗೆ ಸಾಮಾನ್ಯವಾಗಿ ಐದು ಸಾಲುಗಳಲ್ಲಿ ಮತ್ತು ಅಪರೂಪವಾಗಿ ಆರು ಸಾಲುಗಳಲ್ಲಿ ಧ್ಯಾನಶ್ಲೋಕವನ್ನು ಬರೆದಿರುತ್ತಾರೆ. ಈ ಅಕ್ಷರಗಳ ಮೇಲೆ ಹೇಳಿದಂತೆ ಬ್ರಾಹ್ಮೀ ಲಿಪಿಯಲ್ಲಿದ್ದು ಅವುಗಳ ಲಿಪಿ ಲಕ್ಷಣಗಳು ಕ್ರಿ.ಶ. ೪ ರಿಂದ ೬ನೆಯ ಶತಮಾನದವರೆಗಿನ ದಾಕ್ಷಿಣಾತ್ಯ ಬ್ರಾಹ್ಮೀಲಿಪಿಯ ಲಕ್ಷಣಕ್ಕೆ ಸಮನಾಗಿವೆ. ಇದರಿಂದಾಗಿ ಈ ಹರಕೆಯ ಸ್ತೂಪಗಳ ಕಾಲವನ್ನು ಕ್ರಿ.ಶ. ೪ ರಿಂದ ೬ನೇ ಶತಮಾನಗಳವರೆಗೆ ಸೇರಿಸಬಹುದು. ಈ ಧ್ಯಾನಶ್ಲೋಕದ ಭಾಷೆ ಸಂಸ್ಕೃತ ಮಿಶ್ರಿತ ಪ್ರಾಕೃತ ಅಥವಾ ಪ್ರಾಕೃತ ಮಿಶ್ರಿತ ಸಂಸ್ಕೃತ



ಎನ್ನಬಹುದು. ಈ ಧ್ಯಾನಶ್ಲೋಕದ ಪೂರ್ಣಪಾಠ ಹೀಗಿದೆ. ***"ಯೇ ಧಮಾ ಹೇತು ಪ್ಪ ಭವಾ ತೇಸ ಹೇತು ತಥಾಗತೋ ಆ ಹೇ ತೇಸ ಚ ಯೋ ನಿರೋಧೋ ಏವ ವಾದೀ ಮಹಾಸಮಣೋ"***. ಮುದ್ರೆಯಿಂದ ಮುದ್ರೆಗೆ ಪಾಠದಲ್ಲಿ ವ್ಯತ್ಯಾಸ ಕಂಡುಬರಬಹುದು.

ಅಚ್ಚಿನಿಂದ ತಯಾರಿಸಲಾದ ಈ ಹರಕೆಯ ಸ್ತೂಪಗಳು ಮೇಲ್ಭಾಗದಲ್ಲಿ ಕೆಲವೊಂದು ಅಲಂಕರಣೆಯನ್ನು ಸಹ ಹೊಂದಿರುತ್ತಿದ್ದವು ಎಂಬುದಕ್ಕೆ ಸಾಕ್ಷ್ಯಾಧಾರಗಳು ಇವೆ. ಪ್ರತಿಯೊಂದು ಸ್ತೂಪವೂ ಮೇಧಿ ಮತ್ತು ಅಂಡವನ್ನು ಹೊಂದಿರುತ್ತದೆ. ಅಂಡದ ಮೇಲ್ಭಾಗದಲ್ಲಿ ಕಟಾಂಜನವಿರುವ ಸ್ಥಳದಲ್ಲಿ ಕೇವಲ ಸಣ್ಣದಾಗಿ ಚೌಕಟ್ಟಾದ ಭಾಗವನ್ನು ಮಾಡಿರುತ್ತಾರೆ. ಇದರ ಮೇಲ್ಭಾಗದಲ್ಲಿ ಶಂಕುವಿನ ಆಕೃತಿಯ ಸಣ್ಣದಾದ ಮಣ್ಣಿನ ಭಾಗವನ್ನು ಕಿರೀಟಪ್ರಾಯವಾಗಿ ಕೂಡಿಸಿರುತ್ತಾರೆ. ಇದು ಛತ್ರ, ಛತ್ರಾವಳಿ, ಛತ್ರಯಷ್ಠಿ ಮುಂತಾದವುಗಳನ್ನು ಸೂಚಿಸುತ್ತವೆ. ಇದಕ್ಕೆ ಬದಲಾಗಿ ಇನ್ನು ಕೆಲವು ಸ್ತೂಪಗಳಿಗೆ ಪ್ರಾಯಶಃ ಸಣ್ಣದಾದ ಕಡ್ಡಿಯಿಂದ ತಯಾರಿಸಲಾದ ಅಲಂಕಾರಿಕ ಛತ್ರಿಯನ್ನು ಸ್ತೂಪ ಹಸಿಯಾಗಿ ರುವಾಗಲೇ ಮೇಲಿನಿಂದ ಚುಚ್ಚಿ ಸಿಕ್ಕಿಸುತ್ತಿದ್ದರೆಂದು ತೋರುತ್ತದೆ. ಈ ರೀತಿಯ ಭಾಗಗಳು ಬೇಗ ನಶಿಸಿ ಹೋಗುವುದರಿಂದ ಇವುಗಳ ಸ್ಪಷ್ಟ ಸ್ವರೂಪ ತಿಳಿದಿಲ್ಲ.

ರಾಜಘಟ್ಟದ ಈ ಹರಕೆಯ ಸ್ತೂಪಗಳು ಮುಂಚೆಯೇ ತಿಳಿಸಿದಂತೆ ಅಚ್ಚಿನಿಂದ ಮಾಡಿದವುಗಳಾಗಿವೆಯಾದರೂ ಈ ಅಚ್ಚುಗಳಲ್ಲೇ ಬಹಳಷ್ಟು ವೈವಿಧ್ಯಗಳು ಇದ್ದವು ಎಂಬುದಕ್ಕೆ ದೊರೆತಿರುವ ಸ್ತೂಪಗಳೇ ಸಾಕ್ಷಿ. ದೊಡ್ಡದಾದ ೫೦೦ ಗ್ರಾಂ ತೂಕದ ಸ್ತೂಪಗಳಿಂದ ಹಿಡಿದು ಸಣ್ಣ ಗಾತ್ರದ ೪೦ ಗ್ರಾಂ ತೂಕದ ಸ್ತೂಪಗಳವರೆಗೆ ಇವುಗಳ ಗಾತ್ರಗಳು ಬದಲಾಗುತ್ತವೆ. ಹಾಗೆಯೇ ಇವುಗಳ ಹೊರ ಆಕಾರದಲ್ಲೂ ಬಹಳಷ್ಟು ವ್ಯತ್ಯಾಸಗಳಿದ್ದು ಜನರ ಅಭಿರುಚಿಗೆ ತಕ್ಕಂತೆ ಸ್ತೂಪಗಳನ್ನು ತಯಾರಿಸುತ್ತಿದ್ದರೆಂದು ಹೇಳಬಹುದು. ಸ್ತೂಪಗಳ ವಿವಿಧ ಆಕೃತಿಗಳು ಧಾರ್ಮಿಕವಾಗಿ ಮತ್ತೇನು ವಿಶೇಷವನ್ನು ಸೂಚಿಸುತ್ತಿದ್ದವು ಎಂಬುದನ್ನು ತಿಳಿಯಲು ಸಾಕ್ಷ್ಯಾಧಾರಗಳು ಇಲ್ಲ. ಇವು ಕೇವಲ ವ್ಯಕ್ತಿಯ ವೈಯಕ್ತಿಕ ಅಭಿರುಚಿಯನ್ನು ಸೂಚಿಸುತ್ತಿದ್ದವು ಎಂಬುದಷ್ಟನ್ನು ಮಾತ್ರ ಸದ್ಯಕ್ಕೆ ಹೇಳಬಹುದು.

ಈ ಹರಕೆಯ ಸ್ತೂಪಗಳ ತಯಾರಿಕೆಯಲ್ಲಿ ೭ ಮುಖ್ಯವಾದ ಅಚ್ಚುಗಳ ಆಕಾರಗಳು ಕಂಡು ಬಂದಿವೆ. ಅವುಗಳೆಂದರೆ: ಒಂದನೆ ವಿಧ - ಚೌಕಟ್ಟಾದ ಪೀಠ ಇದರ ಮೇಲೆ ಅಷ್ಟಮುಖಿ ಅದರ ಮೇಲೆ ದುಂಡಾದ ಮೇಧಿಯನ್ನು ಹೊಂದಿರುವ ಸ್ತೂಪ. ಚೌಕಟ್ಟಾದ ಬುಡಕ್ಕೆ ನಾಲ್ಕು ಮೂಲೆಗಳಲ್ಲಿ ಮತ್ತು ನಾಲ್ಕು ಮಧ್ಯಗಳಲ್ಲಿ ಸಣ್ಣದಾದ ಅಸ್ಪಷ್ಟವಾದ ಮುಂಬಣೆ ಕಂಡು

ಬರುತ್ತದೆ. ಪ್ರಾಯಶಃ ಇವುಗಳು ಸಿಂಹ ಅಥವಾ ಆನೆಯ ಶಿಲ್ಪದ ಆಸರೆಯನ್ನು ಅಥವಾ ಕೆತ್ತನೆಯನ್ನು ಹೊಂದಿರುವ ಮೇಧಿಯ ಪ್ರತಿರೂಪವಿರಬಹುದು. ಮೇಲ್ಭಾಗದ ಅಂಡ ಹೆಚ್ಚು ಕಡಿಮೆ ಎಲ್ಲಾ ಸ್ತೂಪಗಳಲ್ಲಿಯೂ, ಕೆಲವು ಅಪವಾದಗಳನ್ನು ಬಿಟ್ಟು



ಗುಮ್ಮಟಾಕಾರವಾಗಿಯೇ ಇರುತ್ತದೆ. ೨ನೇ ವಿಧ - ಈ ವಿಧದಲ್ಲಿ ವೃತ್ತಾಕಾರವಾದ ಮತ್ತು ಸ್ವಲ್ಪ ಎತ್ತರವಾದ ಮೇಧಿ, ಇದರ ಮೇಲ್ಗಡೆ ಅಂಡ. ೩ನೇ ವಿಧ - ಈ ವಿಧದಲ್ಲಿ ವೃತ್ತಾಕಾರದ, ಸ್ವಲ್ಪ ಎತ್ತರವಾದ ಮೇಧಿ ಮತ್ತು ಅದರ ಮೇಲೆ ಅದೇ ರೀತಿಯ ಚಿಕ್ಕ ಚಿಕ್ಕದಾದ ಇನ್ನೆರಡು ಮೇಧಿಗಳು ಮತ್ತು ಅಂಡ. ೪ನೇ ವಿಧ - ಇದರಲ್ಲಿ ಎತ್ತರವಾದ ವೃತ್ತಾಕಾರವಾದ ಮೇಧಿ



ಅದರ ಮೇಲೆ ಮೇಧಿಗಿಂತ ಕುಳ್ಳಗೆ ಇರುವ ಅಂಡ ಇರುತ್ತದೆ. ೫ನೇ ವಿಧ – ಇದರಲ್ಲಿ ಘಂಟಾ ಕಾರವಾದ ಅಂಡ ಕೆಳಭಾಗದಲ್ಲಿ ಸಣ್ಣಗೆ, ತೆಳ್ಳಗೆ ಕಾಣುವ ಒಂದು ಅಥವಾ ಎರಡು ಮೇಧಿಗಳು ಇದೆ. ೬ನೇ ವಿಧ - ಇದರಲ್ಲಿ ಉದ್ದವಾದ, ಎತ್ತರವಾದ, ಘಂಟಾಕಾರದ ಅಂಡ ಮತ್ತು ಕೆಳಭಾಗದಲ್ಲಿ ಅಸ್ಪಷ್ಟವಾಗಿ ಕಾಣುವ ಮೇಧಿ ಇವೆ. ೭ನೇ ವಿಧ - ಇದರಲ್ಲಿ ಈ ಮೇಲೆ ಹೇಳಿದ ಎಲ್ಲಾ ಸ್ತೂಪ ವಿಧಗಳಿಗೂ ಅಪವಾದವೆಂಬಂತೆ ಅಥವಾ ವಿಭಿನ್ನವಾಗಿರುವಂತೆ ಬರಿ ಕೈಯಿಂದ ಮಾಡಿದ ಒಂದೇ ಒಂದು ಸ್ತೂಪದ ವಿಧವೂ ಸಹ ಚೈತ್ಯಾಲಯದ ಆವರಣದ ಉತ್ಖನನದಲ್ಲಿ ಸಿಕ್ಕಿದೆ. ಇದು ಸಹ ಸಣ್ಣದಾದ ಒಂದು ಹರಕೆಯ ಸ್ತೂಪ. ಕಪ್ಪುಬಣ್ಣದ ಮಣ್ಣಿನಿಂದ ಮಾಡಿದ್ದಾಗಿದೆ. ಆದರೆ ಇದನ್ನು ಸುಟ್ಟಿದೆ. ಇದಕ್ಕೆ ಚೌಕಟ್ಟಾದ ಒಂದು ಮೇಧಿ ಅದರ ಮೇಲೆ ಬಳೆಯಾಕಾರದ, ಮಧ್ಯದಲ್ಲಿ ಏಣನ್ನು ಹೊಂದಿರುವ ಇನ್ನೊಂದು ಮೇಧಿ, ಅದರ ಮೇಲೆ ಗೋಳಾಕಾರದ ಸಣ್ಣದಾದ ಅಂಡ ಇವಿಷ್ಟೂ ಇವೆ. ಈ ಮೂರು ಭಾಗಗಳನ್ನು ಪ್ರತ್ಯೇಕವಾಗಿ ಕೈಯಿಂದ ಮಾಡಿ ಒಂದರ ಮೇಲೊಂದು ಕೂರಿಸಿ, ಅಂಟಿಸಿ, ಸುಟ್ಟಿರುವಂತೆ ಕಾಣುತ್ತವೆ. ಇದರ ಗಾತ್ರ, ಆಕಾರ ವಿವರಗಳನ್ನು ನೋಡಿದಾಗ ಇದು ಸಹ ಯಾವನೋ ಒಬ್ಬ ನಿಷ್ಠಾವಂತ ಬೌದ್ಧನು ತನ್ನ ಕೈಯಿಂದ ಸೂಕ್ಷ್ಮವಾಗಿ ಮಾಡಿ ದೇವರಿಗೆ ಅರ್ಪಿಸಿದಂತಹ ಸ್ತೂಪವೆಂದು ತೋರುತ್ತದೆ.

ವೈವಿಧ್ಯಮಯವಾದ ರಾಜಘಟ್ಟದ ಈ ಹರಕೆಯ ಸ್ತೂಪಗಳು ಅಲ್ಲಿನ ಬೌದ್ಧ ಧರ್ಮೀಯರ ವಿವಿಧ ಧಾರ್ಮಿಕ ಹಾಗೂ ಸೌಂದರ್ಯಾಭಿರುಚಿಯ ಸಂಕೇತಗಳೆಂದು ಹೇಳಬಹುದು. ಇಷ್ಟಾರ್ಥಸಿದ್ಧಿಗಾಗಿ ಸ್ತೂಪಗಳನ್ನು ತಯಾರಿಸಿ ಭಗವಂತನಿಗೆ ಅರ್ಪಿಸುವ ರೂಢಿ ಬಹಳ ಮುಂಚಿನಿಂದಲೂ ಬಂದಂತಹ ಹಾಗೂ ಈಗಲೂ ಪ್ರಚಲಿತದಲ್ಲಿ ಇರುವಂತಹ ಒಂದು ಸಂಪ್ರದಾಯ. ಹ್ಯೂಯನ್‌ತ್ಸಾಂಗನು ಸಹ ಈ ರೀತಿಯ ಸ್ತೂಪಗಳ ಬಗ್ಗೆ ಹೇಳಿಕೆಗಳನ್ನು ನೀಡಿದ್ದಾನೆ. ಭಾರತದಲ್ಲಿ ಬೌದ್ಧ ಧರ್ಮೀಯರು ಮಣ್ಣು, ಮರ, ಕಲ್ಲು, ಲೋಹ ಇತ್ಯಾದಿ ವಸ್ತುಗಳಲ್ಲಿ ಸಣ್ಣಸಣ್ಣ ಸ್ತೂಪಗಳನ್ನು ನಿರ್ಮಿಸಿ ದೇವರಿಗೆ ಅರ್ಪಿಸುತ್ತಿದ್ದರೆಂದು ಹೇಳಿದ್ದಾರೆ. ಆದರೆ ಈ ಮಣ್ಣಿನ ಸ್ತೂಪಗಳ ಒಳಗೆ ಈ ರೀತಿಯ ಬಿಲ್ಲೆಗಳನ್ನು ಇಡುತ್ತಿದ್ದರು ಎಂಬುದರ ಬಗ್ಗೆ ಆತನು ಮೌನಿ. ರಾಜಘಟ್ಟದ ಈ ಸ್ತೂಪಗಳು ಆಗಿನ ಕಾಲದ ಬೌದ್ಧಧಾರ್ಮಿಕ ಸಂಪ್ರದಾಯದ ಒಂದು ವಿನೂತನ ಮುಖವನ್ನು ನಮಗೆ ಪರಿಚಯಿಸುತ್ತವೆ. ಅಲ್ಲದೆ ಈ ರೀತಿಯ ಬಿಲ್ಲೆಗಳು ಆ ಸ್ತೂಪಗಳಿಗೆ ಹೆಚ್ಚಿನ ಪಾವಿತ್ರತೆಯನ್ನು ತಂದು ಕೊಡುತ್ತಿದ್ದವು ಎಂಬುದು ಇಲ್ಲಿ ನಿರೂಪಿತವಾಗುತ್ತದೆ.

ರಾಜಘಟ್ಟದಲ್ಲಿ ಉತ್ಖನನದ ಮುಖಾಂತರ ದೊರಕಗಿರುವ ಈ ಬೌದ್ಧ ಅವಶೇಷಗಳು ಬೌದ್ಧಧರ್ಮದ ಇತಿಹಾಸದ ದೃಷ್ಟಿಯಿಂದ, ಬೌದ್ಧ ವಾಸ್ತುಶಿಲ್ಪದ ದೃಷ್ಟಿಯಿಂದ ಹಾಗೂ ಬೌದ್ಧ ಸಂಪ್ರದಾಯದ ದೃಷ್ಟಿಯಿಂದ ಬಹಳ ಮಹತ್ವವಾದದ್ದೆಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು. ರಾಜಘಟ್ಟದಲ್ಲಿ ದೊರೆತಿರುವ ಚೈತ್ಯಾಲಯ ತನ್ನ ತಳವಿನ್ಯಾಸದ ಆಕಾರದಲ್ಲಿ ಇಡೀ ದಕ್ಷಿಣ ಭಾರತದಲ್ಲೇ ಅದ್ವಿತೀಯವಾದದ್ದು. ಉತ್ತರ ಭಾರತದಲ್ಲಿ ಎಲ್ಲಾದರೂ ಈ ರೀತಿಯ ತಳವಿನ್ಯಾಸದ ಚೈತ್ಯಾಲಯ ನಿರ್ಮಿತವಾಗಿತ್ತೇ ಎಂಬುದನ್ನು ಇನ್ನೂ ಹುಡುಕಬೇಕಾಗಿದೆ. ದಕ್ಷಿಣ ಭಾರತದಲ್ಲಿ ಎಲ್ಲೂ ಸಹ ಈ ರೀತಿಯ ತಳವಿನ್ಯಾಸದ ಚೈತ್ಯಾಲಯ ಇದುವರೆಗೂ ದೊರೆತಿಲ್ಲದಿರುವುದು ರಾಜಘಟ್ಟದ ಚೈತ್ಯಾಲಯದ

ವಾಸ್ತು ನಿರೂಪಣೆಯ ವಿಶೇಷತೆಯನ್ನು ಹೆಚ್ಚಿಸುತ್ತದೆ. ಹಾಗೆಯೇ ರಾಜಘಟ್ಟದಲ್ಲಿ ದೊರೆತಿರುವ ಮಣ್ಣಿನ ಹರಕೆಯ ಸ್ತೂಪಗಳು ಸಹ ಅವುಗಳ ಸಂಖ್ಯೆಯಿಂದ, ಆಕಾರಗಳಿಂದ, ವೈವಿಧ್ಯಗಳಿಂದ, ಅಪ್ರತಿಮವಾದದ್ದು ಎನ್ನಬಹುದು. ಈ ರೀತಿಯ ಮಣ್ಣಿನ ಸ್ತೂಪಗಳು ದಕ್ಷಿಣ ಭಾರತದಲ್ಲಿ ಎಲ್ಲೂ ಸಹ ಇದುವರೆಗೆ ಕಂಡು ಬಂದಿಲ್ಲ. ಅದರಲ್ಲೂ ಬೌದ್ಧ ಧ್ಯಾನಶ್ಲೋಕವಿರುವ ಬಿಲ್ಲೆಗಳನ್ನು ಹೊಂದಿರುವ ಈ ಹರಕೆ - ಸ್ತೂಪಗಳು ಇನ್ನೂ ಹೆಚ್ಚಿಗೆ ವಿಶೇಷ ವಾದದ್ದಾಗಿವೆ.

ಕರ್ನಾಟಕ, ದಕ್ಷಿಣ ಭಾರತದ ಬೌದ್ಧಧರ್ಮದ ಇತಿಹಾಸಕ್ಕೆ ತನ್ನ ಕೊಡುಗೆಯನ್ನು ಅಷ್ಟಾಗಿ ನೀಡಿರಲಿಲ್ಲ. ಅಶೋಕನ ಶಾಸನಗಳು ದಕ್ಷಿಣದ ಎಲ್ಲಾ ರಾಜ್ಯಗಳಿಗಿಂತಲೂ ಸಂಖ್ಯೆಯಲ್ಲಿ ಹೆಚ್ಚಾಗಿ ಕರ್ನಾಟಕದಲ್ಲಿ ದೊರಕಿದ್ದರೂ ಬೌದ್ಧಧರ್ಮದ ಕುರುಹುಗಳು ಕರ್ನಾಟಕದಲ್ಲಿ ಏಕೆ ಕಡಿಮೆ ಎಂಬುದೇ ಒಂದು ಜಟಿಲ ಸಮಸ್ಯೆಯಾಗಿತ್ತು. ಇತ್ತೀಚೆಗೆ ಸನ್ನತಿಯಲ್ಲಿ ನಡೆದ ಸಂಶೋಧನೆಗಳು ಉತ್ತರ ಕರ್ನಾಟಕದಲ್ಲಿ ಆ ಕಾಲದಲ್ಲಿ ಬೌದ್ಧಧರ್ಮ ಪ್ರಬಲವಾಗಿತ್ತೆಂಬುದಕ್ಕೆ ಸಾಕ್ಷ್ಯಾಧಾರಗಳನ್ನು ಒದಗಿಸಿ ಕೊಟ್ಟಿವೆ. ಆದರೆ ದಕ್ಷಿಣ ಕರ್ನಾಟಕದಲ್ಲಿ ಮಾತ್ರ ಬೌದ್ಧಧರ್ಮ ಪ್ರಸರಿಸಿತ್ತೆ ಎಂಬುದು ಸಂಶಯಾಸ್ಪದವಾದ ವಿಷಯವಾಗಿತ್ತು. ಆದರೆ ರಾಜಘಟ್ಟದಲ್ಲಿ ನಡೆದ ಈ ಉತ್ಖನನಗಳು ದಕ್ಷಿಣ ಕರ್ನಾಟಕವೂ ಸಹ ಬೌದ್ಧಧರ್ಮದ ಪೋಷಣೆಯಲ್ಲಿ ಸಾಕಷ್ಟು ಮಹತ್ತರವಾದ ಪಾತ್ರವನ್ನು ವಹಿಸಿತ್ತು ಎಂಬುದಕ್ಕೆ ಸ್ಪಷ್ಟ ಸಾಕ್ಷ್ಯಗಳನ್ನು ನೀಡುತ್ತವೆ. ಕ್ರಿ.ಶ. ೩೩೮ರ ಮುಡಿಯನೂರು ತಾಮ್ರಶಾಸನವು ಬಾಣ ದೊರೆ ಮಲ್ಲದೇವ ನಂದಿವರ್ಮನನ್ನು, 'ಬೋಧಿಸತ್ವನಂತೆ ಕರುಣಾಮಯಿ' ಆಗಿದ್ದನೆಂದು ಪ್ರಶಂಸಿಸುತ್ತದೆ. ಈ ಅಂಶ, ಬೋಧಿಸತ್ವ, ಆತನ ತತ್ವಗಳು, ಆತನ ಪೂಜೆ, ಆತನ ಮಹತ್ವ ಆ ಕಾಲದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಸಾಕಷ್ಟು ಜನಜನಿತವಾಗಿತ್ತೆಂಬುದನ್ನು ಸೂಚಿಸುತ್ತದೆ. ಕೋಲಾರ ಜಿಲ್ಲೆಯ ಕುರುಡುಮಲೈಯಲ್ಲಿ ಬುದ್ಧನ ಪ್ರತಿಮೆಯೊಂದು ದೊರಕಿರುವುದು ವರದಿಯಾಗಿದೆ[೯]. ಕೋಲಾರಕ್ಕೆ ಹೊಂದಿ ಕೊಂಡಿರುವ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಧರ್ಮಪುರಿಗೆ ಸಮೀಪದಲ್ಲೇ ಸುಂದರವಾದ ಬುದ್ಧನ ವಿಗ್ರಹಗಳು ದೊರಕಿವೆ. ಬೆಂಗಳೂರು ಜಿಲ್ಲೆಯ ಮಾಗಡಿ ತಾಲ್ಲೂಕಿನ ಕಲ್ಯ (ಹಿಂದಿನ ಕಲಾವತಿ ನಗರ) ಒಂದು ಪ್ರಸಿದ್ಧ ಬೌದ್ಧಕೇಂದ್ರವಾಗಿತ್ತೆಂಬುದನ್ನು ಡಾ. ಚಿದಾನಂದಮೂರ್ತಿಯವರು ಈಗಾಗಲೇ ಪ್ರಸ್ತುತಪಡಿಸಿದ್ದಾರೆ[೧೦]. ಈ ಎಲ್ಲಾ ಸಾಕ್ಷ್ಯಾಧಾರಗಳ ಹಿನ್ನೆಲೆಯಲ್ಲಿ ನೋಡಿದಾಗ ದಕ್ಷಿಣ ಕರ್ನಾಟಕವು ಬೌದ್ಧಧರ್ಮದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸಿತ್ತು. ಹಾಗೆಯೇ ಬೌದ್ಧಧರ್ಮವು ಸಹ ದಕ್ಷಿಣ ಕರ್ನಾಟಕದಲ್ಲಿ ಸಾಕಷ್ಟು ಪ್ರಬಲವಾಗಿ ನೆಲೆಯೂರಿತ್ತು ಎಂಬ ಅಂಶ ಸ್ಪಷ್ಟವಾಗುತ್ತದೆ. ಈ ಎಲ್ಲಾ ಆಧಾರಗಳನ್ನು ಮತ್ತಷ್ಟು ದೃಢೀಕರಿಸುವಂತೆ ರಾಜಘಟ್ಟದ ಉತ್ಖನನವು ಕರ್ನಾಟಕದಲ್ಲಿ ಪ್ರವರ್ಧಮಾನವಾದ ಬೌದ್ಧ ನೆಲೆ ಇತ್ತೆಂಬುದಕ್ಕೆ ನೇರ ಸಾಕ್ಷ್ಯಾಧಾರಗಳನ್ನು ಒದಗಿಸಿದೆ. ರಾಜಘಟ್ಟದ ಈ ಉತ್ಖನನಗಳ ಸಾಕ್ಷ್ಯಾಧಾರಗಳಿಂದಾಗಿ ಕರ್ನಾಟಕದ ಬೌದ್ಧ ಧರ್ಮದ ಇತಿಹಾಸವನ್ನು ಪುನರಾವಲೋಕನ ಮಾಡಬೇಕಾಗಿದೆ ಎಂದರೆ ಅತಿಶಯೋಕ್ತಿಯೇನಲ್ಲ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದ ಡಾ. ಟಿ. ದಯಾನಂದ ಪಟೇಲ್‌ರವರು ರಾಜಘಟ್ಟದಲ್ಲಿ ಪುರಾತತ್ವ ಅನ್ವೇಷಣೆ ನಡೆಸಿ ಆದಿ ಐತಿಹಾಸಿಕ ಕಾಲದ ಅನೇಕ ವಸ್ತುಗಳನ್ನು ಸಂಗ್ರಹಿಸಿದ್ದರು. ಈಗಲೂ ಅವು ವಿಭಾಗದ ವಸ್ತುಸಂಗ್ರಹಾಲಯದಲ್ಲಿ ಪ್ರದರ್ಶಿತವಾಗಿವೆ.

೨. ಈ ಉತ್ಖನನಕ್ಕೆ ಮೈಸೂರು ವಿಶ್ವವಿದ್ಯಾನಿಲಯ, ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ನಿರ್ದೇಶನಾಲಯ ಹಾಗೂ ಕೇಂದ್ರೀಯ ಪ್ರಾಚ್ಯವಸ್ತು ಸರ್ವೇಕ್ಷಣಾ ಇಲಾಖೆ ಈ ಮೂರೂ ಸಂಸ್ಥೆಗಳು ಧನಸಹಾಯವನ್ನು ನೀಡಿದ್ದವು. ಈ ಮೂರು ಸಂಸ್ಥೆಗಳಿಗೆ ನಾವು ಆಭಾರಿಯಾಗಿದ್ದೇವೆ. ಈ ಉತ್ಖನನದಲ್ಲಿ ಡಾ. ಟಿ. ದಯಾನಂದ ಪಟೇಲ್., ಕ್ಯೂರೇಟರ್ ಮತ್ತು ವಿಶೇಷಾಧಿಕಾರಿ, ಶ್ರೀ ಕೆ. ಪ್ರಭು ಪ್ರಾಚ್ಯವಸ್ತು ಸಹಾಯಕ ಇವರುಗಳು ಹಾಗೂ ಸಂಶೋಧಕ ವಿದ್ಯಾರ್ಥಿಗಳು ಸಕ್ರಿಯವಾಗಿ ಭಾಗವಹಿಸಿದ್ದರು.

೩. ಶಾಸನತಜ್ಞ ಡಾ. ಕೆ. ವಿ. ರಮೇಶ್‌ರವರು ಈ ಅಭಿಪ್ರಾಯವನ್ನು ಸೂಚಿಸಿದ್ದಾರೆ.

೪. ಡಾ. ನಾಗರಾಜಶರ್ಮ ಅವರು ಇಂತಹದೇ ಒಂದು ಬಿಲ್ಲೆಯನ್ನು ಈ ಮುಂಚೆ ರಾಜಘಟ್ಟದಲ್ಲಿ ಕಂಡು ಹಿಡಿದು ಪ್ರಕಟಿಸಿದ್ದಾರೆ. **ಡೆಕ್ಕನ್ ಹೆರಾಲ್ಡ್** ಪತ್ರಿಕೆ ೧೮.೧೧.೨೦೦೦.

೫. ಕೆ. ಸಿ. ಆಯಾಂಗ್ ರಿನ್‌ಪೋಚೆ, ಸಂಸ್ಥಾಪಕ-ನಿರ್ದೇಶಕ, ಕಾಗ್ಯೂಡಪ ವಿಹಾರ, ಬೈಲುಕುಪ್ಪೆ ಇವರ ಅಭಿಪ್ರಾಯ.

೬. ಕೆ. ಸಿ. ಆಯಾಂಗ್ ರಿನ್‌ಪೋಚೆ, ಇವರ ಅಭಿಪ್ರಾಯ

೭. **ಪ್ರಜಾವಾಣಿ** ದಿನಪತ್ರಿಕೆ, ಭಾನುವಾರ ೨೭.೮.೨೦೦೦, ತದನಂತರ ಇದರ ಬಗ್ಗೆ ಇವರು ವಿಸ್ತೃತ ಲೇಖನವನ್ನು ಸಹ ಬರೆದಿದ್ದಾರೆ., (೨೦೦೦) **ಸ್ಟಡೀಸ್ ಇನ್ ಇಂಡಿಯನ್ ಎಪಿಗ್ರಫಿ**, ಸಂಪುಟ ೨೬, ಪುಟ. ೭೧-೭೪.

೮. **ಎ. ಕ. ಸಂಪುಟ ೧೦**, ಕೋಲಾರ ಜಿಲ್ಲೆ, ಮುಳಬಾಗಿಲು ೧೫೭.

೯. **ಮೈಸೂರು ಸ್ಟೇಟ್ ಗ್ಯಾಸೆಟಿಯರ್.**, (೧೯೬೮), ಕೋಲಾರ ಜಿಲ್ಲೆ, ಬೆಂಗಳೂರು, ಪುಟ. ೮೫.

೧೦. ಡಾ. ಎಂ. ಚಿದಾನಂದಮೂರ್ತಿ., (೧೯೯೩), 'ಬೌದ್ಧ ಕೇಂದ್ರ ಕಲಾವತೀ ನಗರದ ಅಭಿಜ್ಞೆ', **ಹೊಸತು-ಹೊಸತು**, (ಸಂಶೋಧನ ಲೇಖನ ಸಂಗ್ರಹ ಸಂಪುಟ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ಪುಟ. ೨೫೭-೬೪.

ಡಾ॥ ಕೆ. ಬಿ. ಶಿವತಾರಕ್ *

# ತುಮಕೂರು ಜಿಲ್ಲಾ ಪ್ರದೇಶದ ಬೃಹತ್ ಶಿಲಾಯುಗ ಸಂಸ್ಕೃತಿ

**ಪೀಠಿಕೆ:**

ಕರ್ನಾಟಕದ ಹೆಚ್ಚಿನ ಎಲ್ಲಾ ಜಿಲ್ಲೆಗಳಲ್ಲಿಯೂ ಬೃಹತ್ ಶಿಲಾಯುಗ ಸಂಸ್ಕೃತಿ ಬಗೆಗೆ ಮಾಹಿತಿಗಳು ಲಭ್ಯವಾಗಿವೆ. ರಾಜ್ಯದಲ್ಲಿ ಒಟ್ಟು ೮೨೦ ನೆಲೆಗಳು ದೊರೆತಿದ್ದು ಇವುಗಳಲ್ಲಿ ೨೧೮ ವಾಸ್ತವ್ಯದ ನೆಲೆಗಳಾಗಿದ್ದು, ೬೦೨ ಗೋರಿ ನೆಲೆಗಳಾಗಿವೆ. ಅತಿ ಹೆಚ್ಚಿನ ನೆಲೆಗಳನ್ನು ಕೋಲಾರ ಜಿಲ್ಲೆಯಲ್ಲಿ ಸಂಗ್ರಹಿಸಲಾಗಿದ್ದು ಒಟ್ಟು ೧೯೪ ಇವೆ. ಅತಿ ಕಡಿಮೆ ಸಂಖ್ಯೆಯ ನೆಲೆಗಳನ್ನು ಹೊಂದಿರುವ ಜಿಲ್ಲೆ ಧಾರವಾಡದ್ದಾಗಿದ್ದು, ಏಕೈಕ ಗೋರಿ ಕಂಡು ಬಂದಿದೆ. ದೊರೆತಿರುವ ಮಾಹಿತಿಯಂತೆ ಇವರ ಗೋರಿಗಳ ವರ್ಗೀಕರಣ, ಈ ಸಂಸ್ಕೃತಿಯ ಉಗಮ, ವಿಕಾಸ ಮತ್ತು ಪ್ರಸರಣ, ಈ ಜನಾಂಗದ ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ ಕಟ್ಟಳೆ, ಆಹಾರ ಪದ್ಧತಿ, ಆಭರಣಗಳು, ವಸತಿ, ವಿಶಿಷ್ಟವಾದ ಮೃತ್‌ಪಾತ್ರೆಗಳು, ಲೋಹ, ತಂತ್ರಜ್ಞಾನ ಮುಂತಾದ ಹಲವಾರು ಮಾಹಿತಿಗಳನ್ನು ಸಂಗ್ರಹಿಸಲಾಗಿದ್ದು, ಈ ಜನರ ಜನಾಂಗೀಯ ಪ್ರಭೇದದ ಬಗ್ಗೆಯೂ ತಿಳಿಯುವ ಯತ್ನ ಮಾಡಿದ್ದು, ಹಲವು ವಿಷಯಗಳನ್ನು ತಿಳಿಯಲು ಸಹಾಯವಾಗಿದೆ. ದೊರೆತಿರುವ ವಾಸ್ತವ್ಯದ ಹಾಗೂ ಗೋರಿನೆಲೆಗಳ ವಿಸ್ತೃತ ಅಧ್ಯಯನವನ್ನು ಕೈಗೊಂಡು, ಡಾ. ಅ. ಸುಂದರ ಅವರು ಗೋರಿಗಳ ಮಾದರಿಗಳನ್ನು ಮೂರು ಗುಂಪುಗಳಾಗಿ ವರ್ಗೀಕರಿಸಿರುವರು. ಅವುಗಳೆಂದರೆ;

೧. ಕೋಣೆಗೋರಿ
೨. ಕೋಣೆಗಳಿಲ್ಲದ ದಫನಗಳು
೩. ಬೃಹತ್ ಸಾಲುಗಲ್ಲುಗಳು

ಈ ಮೂರು ಗುಂಪುಗಳ ಕೂಲಂಕಷ ಅಧ್ಯಯನವು ತಿಳಿಸುವಂತೆ ಹಲವಾರು ಉಪ ಗುಂಪುಗಳಿರುವುದು ಕಂಡುಬಂದಿದೆ. ಇಂತಹ ಉಪಮಾದರಿಗಳು ದೊರಕುತ್ತಲೆ ಇದ್ದು, ಹೆಚ್ಚಿನ ಹೊಸ ಹೊಸ ಮಾಹಿತಿಗಳು ದೊರಕುತ್ತಲೇ ಇವೆ.

**ಅಧ್ಯಯನದ ಇತಿಹಾಸ**

ತುಮಕೂರು ಜಿಲ್ಲಾ ಪ್ರದೇಶದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಯನ್ನು ಪ್ರಪ್ರಥಮವಾಗಿ ಶೋಧಿಸಿದ ಕೀರ್ತಿ ಬಿ.ಎಲ್. ರೈಸ್ ರವರಿಗೆ ಸಲ್ಲುತ್ತದೆ. ಅವರು ತಮ್ಮ ಶಾಸನಗಳ ಸಂಶೋಧನೆಯ ಕಾರ್ಯದಲ್ಲಿದ್ದಾಗ ೧೮೯೨-೯೩ರಲ್ಲಿ ಬೆಳ್ಳಿಬಟ್ಟಲು ಹಳ್ಳಿಯಲ್ಲಿ ಕೆಲವು ಗೋರಿನೆಲೆಗಳಿರುವ ಬಗೆಗೆ ತಿಳಿಸಿರುವರು (ಸುಂದರ. ಅ; ೧೯೭೫). ಹೆಚ್. ಕೆ. ಸ್ಲೇಟರ್ ರವರು (೧೯೦೬) ತಿಪಟೂರು ತಾಲ್ಲೂಕಿನ ಕೇರಳಕಟ್ಟೆಯಲ್ಲಿ ದೊರೆತ ಗೋರಿನೆಲೆಗಳ ಬಗೆಗೆ ತಿಳಿಯಪಡಿಸಿರುವರು. ತುಮಕೂರು ತಾಲ್ಲೂಕು ಹಿರೇಗುಂಡಗಲ್ಲು ಪ್ರದೇಶದಲ್ಲಿ ಕೆ.ವಿ. ರಾವ್ (ಇಂ.ಆ.ರಿ: ೧೯೭೮-೭೯; ೯೭)ರವರು ಕೈಗೊಂಡ ಕ್ಷೇತ್ರಕಾರ್ಯದ ಫಲವಾಗಿ ಬೃಹತ್ ಶಿಲಾಯುಗ ಸಂಸ್ಕೃತಿಯ ಮಡಿಕೆ ಭಾಗಗಳು ದೊರೆತು, ಇದು ವಾಸ್ತವ್ಯದ ನೆಲೆಯೆಂದು ತಿಳಿಯುತ್ತದೆ. ವಿ.ಆರ್. ಚೆಲುವರಾಜನ್ (೧೯೭೫)ರವರು ಪಾವಗಡ ತಾಲ್ಲೂಕು ಬಸವನಬೆಟ್ಟ, ಕಣಿಕಲಬಂಡೆ, ತಪ್ಪಗಾನದೊಡ್ಡಿ ಮತ್ತು ಪಳವಳ್ಳಿಗಳಲ್ಲಿ ಬೃಹತ್ ಶಿಲಾಯುಗದ ವೃತ್ತಾಕಾರದ ಗೋರಿಗಳಿರುವ ಬಗೆಗೆ ತಮ್ಮ ಕಿರು ಹೊತ್ತಿಗೆ ಪಾವಗಡ ತಾಲ್ಲೂಕು ದರ್ಶನದಲ್ಲಿ ಹೇಳಿರುವರು.

**ಪರಿಸರ ಮತ್ತು ಶಿಲಾ ಮಾದರಿ**

ಬೃಹತ್ ಶಿಲಾಯುಗ ಸಂಸ್ಕೃತಿಯ ಕಾಲಮಾನಕ್ಕಾಗಲೇ ಮಾನವನು ನಿರ್ದಿಷ್ಟ ಸ್ಥಳಗಳಲ್ಲಿ ನೆಲೆ ನಿಂತಿರುವುದು ತಿಳಿಯುತ್ತದೆ. ಭೂಮಿಯ ಬಹುಭಾಗವನ್ನು ಅವನು ಬಳಸಿ ಕೊಂಡಿರುವುದು ಕಂಡು ಬರುತ್ತದೆ. ಪ್ರಾಣಿ ವರ್ಗದ ಬಳಕೆ ಹಾಗೂ ತನ್ನ ಅವಶ್ಯಕತೆಯಂತೆ ತಿಳಿದಿದ್ದ ಎಲ್ಲಾ ಜ್ಞಾನಗಳ ಬಳಕೆಯನ್ನು ಪ್ರಯೋಗಿಸಿ ಮುಂದುವರಿದ ಜೀವನದ ಕ್ರಮವನ್ನು ನಡೆಸಿರುವುದು ತಿಳಿಯುತ್ತದೆ. ತನಗೆ ಉಪಯುಕ್ತವಾದ ಶಿಲಾ ಪ್ರಭೇದವನ್ನಷ್ಟೇ ಬಳಸಿ ತಾಂತ್ರಿಕ ವೈವಿಧ್ಯವನ್ನು ಪ್ರದರ್ಶಿಸಿರುವುದು ತಿಳಿಯುತ್ತದೆ. ತನ್ನ ನಿರ್ಮಿತಿಗವಶ್ಯಕವಾದ ಕಲ್ಲಿನ ಚಪ್ಪಡಿಗಳನ್ನು ತೆಗೆಯುವ ತಾಂತ್ರಿಕತೆಯನ್ನು ಬಳಸಿರುವುದು ಹಾಗೂ ನಿರ್ದಿಷ್ಟ ರೀತಿಯಲ್ಲಿ ನಿರೂಪಿಸಿರುವುದು ಗಮನಾರ್ಹ ಅಂಶವಾಗಿದೆ. ಲೋಹದ ಬಳಕೆಯಿಂದಾಗಿ ವೈವಿಧ್ಯತೆಯನ್ನು ಸಾಧಿಸಲು ಸಹಾಯಕವಾಗಿದೆ.

**ಬೃಹತ್ ಶಿಲಾಯುಗ ಸಂಸ್ಕೃತಿ**

ಪ್ರಸ್ತುತ ಅಧ್ಯಯನ ಪ್ರದೇಶವಾದ ತುಮಕೂರು ಜಿಲ್ಲೆಯಲ್ಲಿ ಒಟ್ಟು ೩೮ ನೆಲೆಗಳು ಶೋಧವಾಗಿದ್ದು ಇವುಗಳಲ್ಲಿ ೨೧ ಗೋರಿನೆಲೆಗಳಾಗಿದ್ದು, ೧೭ ವಸತಿ ನೆಲೆಗಳಾಗಿವೆ. ಒಟ್ಟು ನೆಲೆಗಳ

* ಎಸ್.ಎಂ.ಎಸ್. ಕಾಲೇಜು, ಬ್ರಹ್ಮಾವರ್-೫೭೬ ೨೧೩

ಪೈಕಿ ೧೮ ನೆಲೆಗಳು ನೂತನ ಶಿಲಾಯುಗ ಸಂಸ್ಕೃತಿಯೊಂದಿಗಿದ್ದು, ಉಳಿದ ೨೦ ನೆಲೆಗಳು ಈ ಕಾಲಮಾನದಲ್ಲೇ ಸಮೃದ್ಧ ವಾಗಿರುವುದು ಕಂಡುಬರುತ್ತದೆ. ದೊರೆತಿರುವ ಒಟ್ಟು ನೆಲೆಗಳನ್ನು ಈ ರೀತಿ ಪಟ್ಟೀಕರಿಸಬಹುದಾಗಿದೆ.

## ಪಟ್ಟಿ ೧

| ಕ್ರ.ಸಂ. | ನೆಲೆ | ತಾಲ್ಲೂಕು | ನೆಲೆ | ಗೋರಿ |
|---|---|---|---|---|
| ೧ | ಅಗ್ರಹಾರ | ತುಮಕೂರು | | ✓ |
| ೨ | ಇರಕಸಂದ್ರಕಾಲೋನಿ | ಕೊರಟಗೆರೆ | | |
| ೩ | ಕತ್ತಿಕ್ಯಾತನಹಳ್ಳಿ | ಪಾವಗಡ | | ✓ |
| ೪ | ಕತ್ತಿರಾಜನಹಳ್ಳಿ | ಪಾವಗಡ | | ✓ |
| ೫ | ಕೈದಾಳ | ತುಮಕೂರು | ✓ | |
| ೬ | ಗುಟ್ಟೆ | ಮಧುಗಿರಿ | ✓ | |
| ೭ | ಗುರಮ್ಮನಕಟ್ಟೆ | ಮಧುಗಿರಿ | ✓ | |
| ೮ | ಗೌಡನಕಟ್ಟೆ | ತುಮಕೂರು | | ✓ |
| ೯ | ಚಿನಗ | ತುಮಕೂರು | | ✓ |
| ೧೦ | ಚಿನವಾರ | ತುಮಕೂರು | | ✓ |
| ೧೧ | ಜಕ್ಕನಹಳ್ಳಿ | ತಿಪಟೂರು | | ✓ |
| ೧೨ | ಢಣಾಪುರ | ತುಮಕೂರು | | ✓ |
| ೧೩ | ತಣ್ಣೇನಹಳ್ಳಿ | ಕೊರಟಗೆರೆ | | ✓ |
| ೧೪ | ತೆಪ್ಪಸಂದ್ರ | ಕುಣಿಗಲ್ಲು | ✓ | |
| ೧೫ | ಥರಟಿ | ಕೊರಟಗೆರೆ | | ✓ |
| ೧೬ | ನಿಡುಗಲ್ಲು | ಪಾವಗಡ | | ✓ |
| ೧೭ | ಪಾವಗಡ | ಪಾವಗಡ | ✓ | |
| ೧೮ | ಪಾಲ್ಪಹಳ್ಳಿ | ಕೊರಟಗೆರೆ | | ✓ |
| ೧೯ | ಬುಕ್ಕಾಪಟ್ಣ | ಶಿರಾ | ✓ | |
| ೨೦ | ಬೂದಿಬೆಟ್ಟ | ಪಾವಗಡ | | ✓ |
| ೨೧ | ಬೆಟ್ಟದಹಳ್ಳಿ | ಗುಬ್ಬಿ | ✓ | |
| ೨೨ | ಬೆಳ್ಳಿಬಟ್ಟಲಹಳ್ಳಿ | ತುಮಕೂರು | | ✓ |
| ೨೩ | ಮಧುಗಿರಿ | ಮಧುಗಿರಿ | ✓ | |
| ೨೪ | ಮರಿದಾಸನಹಳ್ಳಿ | ಪಾವಗಡ | | ✓ |
| ೨೫ | ಮಾರನಾಯಕನಪಾಳ್ಯ | ತುಮಕೂರು | ✓ | |
| ೨೬ | ಮಿಡಿಗೇಶಿ | ಮಧುಗಿರಿ | ✓ | |
| ೨೭ | ಮಂಚಕಲ್‌ಕುಪ್ಪೆ | ತುಮಕೂರು | ✓ | |
| ೨೮ | ರಾಚಮಾರನಹಳ್ಳಿ | ಪಾವಗಡ | ✓ | |
| ೨೯ | ಯಲ್ಲಪ್ಪನಾಯಕನಹಳ್ಳಿ | ಪಾವಗಡ | ✓ | |
| ೩೦ | ಯಲ್ಲಪ್ಪನಾಯಕನ ಹೊಸಕೋಟೆ | ಪಾವಗಡ | ✓ | |
| ೩೧ | ಸಿದ್ಧಗಂಗಾಬೆಟ್ಟ | ತುಮಕೂರು | ✓ | |
| ೩೨ | ಸಿದ್ಧಾಪುರ | ಮಧುಗಿರಿ | ✓ | |

| | | | | |
|---|---|---|---|---|
| ೩೩ | ಸೀಗೆಪಾಳ್ಯ | ಕೊರಟಗೆರೆ | | ✓ |
| ೩೪ | ಸಿಗೇಹಳ್ಳಿ | ತುಮಕೂರು | | ✓ |
| ೩೫ | ಹಿರೇಗುಂಡಗಲ್ಲು | ತುಮಕೂರು | ✓ | |
| ೩೬ | ಹುಳಿಯಾರು | ಚಿಕ್ಕನಾಯಕನಹಳ್ಳಿ | | ✓ |
| ೩೭ | ಹೊನ್ನೇನಹಳ್ಳಿ | ಕೊರಟಗೆರೆ | ✓ | |
| ೩೮ | ಹೊಸಕೋಟೆ | ಕೊರಟಗೆರೆ | ✓ | |
| | ಒಟ್ಟು | | ೧೭ | ೨೧ |

**ಶಿಲಾಗೋರಿ ನೆಲೆಗಳು**

ಪ್ರಸ್ತುತ ಅಧ್ಯಯನ ಪ್ರದೇಶದ ಶಿಲಾಗೋರಿ ನೆಲೆಗಳು ಜಿಲ್ಲಾ ಪ್ರದೇಶದ ಪೂರ್ವಭಾಗಕ್ಕೆ ಉತ್ತರ-ದಕ್ಷಿಣವಾಗಿ ಕೇಂದ್ರೀಕೃತವಾಗಿರುವುದನ್ನು ಕಾಣಬಹುದು. ನಿರ್ಮಿತಿಗಳನ್ನು ರಚಿಸಲು ಬೇಕಾಗುವ ಕಲ್ಲುಚಪ್ಪಡಿಗಳು ಉತ್ತರ-ದಕ್ಷಿಣವಾಗಿ ಹಬ್ಬಿರುವ ಶಿಲಾಖಂಡದಲ್ಲಿ ದೊರಕಿದ್ದು, ಅದೇ ಪ್ರದೇಶದಲ್ಲಿಯೇ ಬೃಹತ್ ಶಿಲಾಗೋರಿಗಳಿರುವುದು ಗಮನಾರ್ಹ. ಇಂತಹ ಗೋರಿ ನೆಲೆಗಳ ಸುತ್ತಮುತ್ತಲ ಪ್ರದೇಶದಲ್ಲಿಯೇ ವಸತಿ ನೆಲೆಗಳು ಕಂಡು ಬಂದಿವೆ.

ದೊರಕಿರುವ ಒಟ್ಟು ಗೋರಿಗಳು ೨೨೩ ಇದ್ದು, ಇವುಗಳ ರಚನಾ ವಿಧಾನ, ತಳವಿನ್ಯಾಸ ಹಾಗೂ ಇನ್ನಿತರ ಅಂಶಗಳನ್ವಯ ದಂತೆ ಇವುಗಳನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಬಹುದಾಗಿದೆ. ಪ್ರತಿ ಗುಂಪಿನ ಒಟ್ಟು ಕಲ್ಗೋರಿಗಳನ್ನು ಈ ಕೆಳಕಂಡಂತೆ ಪಟ್ಟೀಕರಿಸಬಹುದು.

**ಪಟ್ಟಿ ೨**

| ಕ್ರ. ಸಂಖ್ಯೆ | ನೆಲೆ | ಕಲ್ಲುಗುಪ್ಪೆ | ಕಲ್ಲುವೃತ್ತ | | ಕಲ್ಮನೆ | ನಿಲಸುಗಲ್ಲು |
|---|---|---|---|---|---|---|
| | | | ಗುಂಡುಗಲ್ಲು | ಕಲ್ಲುಚಪ್ಪಡಿ | | |
| ೧ | ಅಗ್ರಹಾರ | | | | | ೩ |
| ೨ | ಇರಕಸಂದ್ರ ಕಾಲೋನಿ | ೪೬ | ೧೬ | ೧೪ | | ೧ |
| ೩ | ಕತ್ತಿಕ್ಯಾತನಹಳ್ಳಿ | | ೪ | | | |
| ೪ | ಕತ್ತಿರಾಜನಹಳ್ಳಿ | ೧೨ | ೧೨ | ೨೬ | | ೨ |
| ೫ | ಗೌಡನಕಟ್ಟೆ | ೨ | | | | ೧ |
| ೬ | ಜಿನಗ | ೨ | | | ೨ | ೨ |
| ೭ | ಜಿನವಾರ | | ೨೦ | | | |
| ೮ | ಜಕ್ಕನಹಳ್ಳಿ | ೨ | ೨ | | | |
| ೯ | ಥಣಾಪುರ | | ೪ | | | |
| ೧೦ | ತಣ್ಣೇನಹಳ್ಳಿ | | ೨ | | | |
| ೧೧ | ಥರಟಿ | | ೫ | | | |
| ೧೨ | ನಿಡುಗಲ್ಲು | | ೨ | | | |
| ೧೩ | ಪಾಲ್ಲಹಳ್ಳಿ | ೨ | | | | |
| ೧೪ | ಬೂದಿಬೆಟ್ಟ | | ೩ | | ೧ | |
| ೧೫ | ಬೆಳ್ಳಿಬಟ್ಟಲಹಳ್ಳಿ | | ೫ | | | |
| ೧೬ | ಮರಿದಾಸನಹಳ್ಳಿ | | ೪ | | | |
| ೧೭ | ಸೀಗೆಪಾಳ್ಯ | | ೬ | ೪ | | |
| ೧೮ | ಸೀಗೆಹಳ್ಳಿ | | | | | ೧ |

| | | | | | | |
|---|---|---|---|---|---|---|
| ೧೯ ಹುಳಿಯಾರು | | ೧ | | | | |
| ೨೦ ಹೊನ್ನೇನಹಳ್ಳಿ | | | ೯ | | ೧ | |
| ೨೧ ಹೊಸಕೋಟೆ | | ೪ | | | | |
| | ಒಟ್ಟು | ೭೧ | ೯೪ | ೪೪ | ೪ | ೧೦ |

ಮೇಲಿನ ನಾಲ್ಕು ಮುಖ್ಯ ವಿಭಾಗಗಳಂತೆ ಶಿಲಾವೃತ್ತಗಳು ಅತಿಹೆಚ್ಚು ಸಂಖ್ಯೆಯಲ್ಲಿದ್ದು, ೧೪೦ (ಶೇ. ೬೨.೭೮) ಆಗಿವೆ. ಅದೇ ರೀತಿ ಕಲ್ಲುಗುಪ್ಪೆಗಳು ಎರಡನೆಯ ಸ್ಥಾನದಲ್ಲಿದ್ದು, ಒಟ್ಟು ೬೯ (ಶೇ. ೩೦.೯೪) ಇವೆ. ನಿಲಸುಗಲ್ಲುಗಳು ೧೦ (ಶೇ. ೪.೪೮) ದೊರೆತಿದ್ದು, ಕಲ್ಮನೆ ಮಾದರಿಗಳು ಕೇವಲ ೪(ಶೇ. ೧.೭೯) ಆಗಿವೆ.

**ಕಲ್ಲುಗುಪ್ಪೆ**

ಇಂತಹ ಒಂದು ಪ್ರಮುಖ ಮಾದರಿಗಳಲ್ಲಿ ಒಟ್ಟು ೬೯ ಗೋರಿಗಳು ದೊರೆತಿದ್ದು, ಇವು ೭ ನೆಲೆಗಳಲ್ಲಿವೆ. ಇಂತಹ



ಕಲ್ಲುಗುಪ್ಪೆಗಳು ಭೂ ಮಟ್ಟದಿಂದ ೧೦-೧೫ ಸೆಂ.ಮೀ. ಎತ್ತರವಾಗಿ ಕಲ್ಲುಚುಕ್ಕೆಗಳ ರಾಶಿಯನ್ನು ಒಳಗೊಂಡಿವೆ. ಪ್ರಾಕೃತಿಕವಾಗಿ ಕಲ್ಲಿನ ರಾಶಿ ಕರಗಿದಾಗ ಕಲ್ಲುಗುಪ್ಪೆಗಳ ಮುಚ್ಚಳಗಳು ಕಂಡು ಬರುತ್ತವೆ. ಹೀಗೆ ಕಂಡು ಬರುವ ಮುಚ್ಚಳ ಕಲ್ಲುಗಳ ಅಳತೆ ಪ್ರಮಾಣದಂತೆ ಉದ್ದ ೨೮೨ ರಿಂದ ೭೮೯ ಸೆಂ.ಮೀ. ಹಾಗೂ ಅಗಲ ೧೮೦ ರಿಂದ ೪೭೦ ಸೆಂ.ಮೀ. ವ್ಯಾಪ್ತಿಯಲ್ಲಿವೆ. ಇರಕಸಂದ್ರ ಕಾಲೋನಿಯ ಒಂದು ಮುಚ್ಚಳಕಲ್ಲು ವೃತ್ತಾಕಾರವಾಗಿದ್ದು, ಅದರ ವ್ಯಾಸ ೧೦ ಮೀಟರ್‌ಗಳಾಗಿವೆ. ದಪ್ಪ ೪೮ ಸೆಂ.ಮೀ. ಇದೆ. ಸೀಗೆಪಾಳ್ಯದಲ್ಲಿ ಕಲ್ಲುಗುಪ್ಪೆಯ ಅವಶೇಷಗಳಿರುವುದನ್ನು ಕಾಣಬಹುದು.

**ಕಲ್ಲುವೃತ್ತಗಳು**

ರೂಪಿಸಿರುವ ವಿಧಾನದಂತೆ ಕಲ್ಲುವೃತ್ತಗಳನ್ನು ಎರಡು ಗುಂಪುಗಳಾಗಿ ವಿಭಾಗಿಸಬಹುದು. ಅವುಗಳೆಂದರೆ ೧) ಗುಂಡು ಗಲ್ಲು ವೃತ್ತ ೨) ಚಪ್ಪಡಿಕಲ್ಲು ವೃತ್ತ.

**೧) ಗುಂಡುಗಲ್ಲು ವೃತ್ತ** : ಪ್ರಸ್ತುತ ಅಧ್ಯಯನ ಪ್ರದೇಶದ ೧೫ ನೆಲೆಗಳಲ್ಲಿ ಇಂತಹ ಗುಂಡುಗಲ್ಲು ವೃತ್ತಗಳು ದೊರೆತಿದ್ದು, ಇವು ಒಟ್ಟು ೮೯ ಇವೆ. ಈ ಗುಂಡುಗಲ್ಲು ವೃತ್ತಗಳನ್ನು ನಿರ್ಮಿಸಲು ಅನಿರ್ದಿಷ್ಟ ಆಕಾರದ ಖಣಶಿಲೆಯ ಗುಂಡುಗಲ್ಲುಗಳನ್ನು ಬಳಸಲಾಗಿದೆ. ವೃತ್ತವನ್ನು ರೂಪಿಸಲು ೬ ರಿಂದ ೧೮ ಗುಂಡುಗಲ್ಲುಗಳನ್ನು ಉಪಯೋಗಿಸಿರುವುದನ್ನು ಕಾಣಬಹುದು. ಇಂತಹ ಶಿಲಾವೃತ್ತಗಳ ಮಧ್ಯದಲ್ಲಿ ಮುಚ್ಚಳಕಲ್ಲುಗಳು ಕಂಡುಬಂದಿವೆ. ಕೆಲವು ಕಲ್ಲುವೃತ್ತಗಳನ್ನು ಹಾಳುಮಾಡಲಾಗಿದ್ದು, ಮುಚ್ಚಳಕಲ್ಲನ್ನು ತೆಗೆದಿರುವುದರಿಂದ ಶವಸಂಪುಟದ ಭಾಗಗಳು ಕಂಡುಬಂದಿದ್ದು, ಇವುಗಳು, ಚೌಕಾಕಾರ, ಆಯತಾಕಾರ ಇಲ್ಲವೆ ಸ್ವಸ್ತಿಕ ಮಾದರಿಗಳಲ್ಲಿವೆ. ಕೆಲವು ಗೋರಿಗಳಲ್ಲಿ ಕಳಪಾಸುಗಲ್ಲು ಗಳೂ ಕಂಡುಬಂದಿವೆ. ದಫನ ಸಾಮುಗ್ರಿಗಳನ್ನು ಹಾಳು ಮಾಡಲಾಗಿದ್ದು ಸುತ್ತಲೂ ಕಪ್ಪು, ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು ದೊರೆತಿವೆ.

**೨) ಚಪ್ಪಡಿ ಕಲ್ಲು:** ಪ್ರಸ್ತುತ ಅಧ್ಯಯನ ಪ್ರದೇಶದ ಮೂರು ನೆಲೆಗಳಲ್ಲಿ ಒಟ್ಟು ೪೨ ಇಂತಹ ಕಲ್ಲು ವೃತ್ತಗಳು ದೊರೆತಿವೆ. ಕತ್ತಿರಾಜನಹಳ್ಳಿಯಲ್ಲಿ ೨೬, ಸೀಗೆಪಾಳ್ಯದಲ್ಲಿ ೪ ಹಾಗೂ ಇರಕಸಂದ್ರಕಾಲೋನಿಯಲ್ಲಿ ೧೪ ಇವೆ. ಕತ್ತಿರಾಜನಹಳ್ಳಿ ಹಾಗೂ ಇರಕಸಂದ್ರ ಕಾಲೋನಿಗಳಲ್ಲಿ ಎರಡು ವೃತ್ತಗಳ ನಡುವಿನ ಅಂತರ ೧೧೦ ಸೆಂ.ಮೀ. ಗಳಾಗಿವೆ. ಇವುಗಳಲ್ಲಿ ಹಲವು ಸುಸ್ಥಿತಿಯಲ್ಲಿದ್ದು, ಕೆಲವು ಹಾಳಾಗಿವೆ. ಹಾಳಾಗಿರುವ ಗೋರಿಗಳ ಸುತ್ತಮುತ್ತ ಕಪ್ಪು ಮತ್ತು ಕಪ್ಪು-ಕೆಂಪು ದ್ವಿವರ್ಣದ ಮೃತ್ ಪಾತ್ರ ಭಾಗಗಳು ದೊರೆತಿವೆ.

**ಕಲ್ಮನೆ**

ಕರ್ನಾಟಕದ ಉತ್ತರ ಭಾಗಗಳಲ್ಲಿ ಹೆಚ್ಚಾಗಿ ಕಂಡುಬರುವ ಬೃಹತ್ ಶಿಲಾಯುಗದ ಗೋರಿಗಳ ಮಾದರಿಗಳಲ್ಲಿ ಕಲ್ಮನೆಗಳು ಒಂದು ಪ್ರಮುಖ ಮಾದರಿಗಳಾಗಿವೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಲ್ಮನೆ ಮಾದರಿಯ ಒಟ್ಟು ೧೩ ಸಮಾಧಿಗಳು ದೊರೆತಿವೆ. ಕಲ್ಮನೆಗಳ ಕಲ್ಲುಗುಪ್ಪೆ, ಶವಕುಳಿ ಹಾಗೂ ನಿಲಸುಗಲ್ಲುಗಳೂ ಇವೆ. ಕತ್ತಿರಾಜನಹಳ್ಳಿ ಮತ್ತು ಇರಕಸಂದ್ರ ಕಾಲೋನಿಗಳಲ್ಲಿ ಈ ಮೂರೂ ಮಾದರಿಗಳೂ ಕಂಡುಬಂದಿವೆ. ಆದರೆ ಹೊನ್ನೇನಹಳ್ಳಿಯ ನೆಲೆಯಲ್ಲಿ ಕಲ್ಲುಗುಪ್ಪೆ ಮತ್ತು ಶವಕುಳಿ ಮಾತ್ರ ಇವೆ. ಈ ೧೩ ಕಲ್ಮನೆ ಮಾದರಿಗಳಲ್ಲಿ ೪ ಭೂಮಿಯ ಮೇಲ್ಭಾಗದಲ್ಲಿದ್ದು, ಉಳಿದವು ಭೂಮಿಯ ಒಳ ಭಾಗದಲ್ಲಿವೆ.



ಸಾಧಾರಣವಾಗಿ ಕಲ್ಮನೆಗಳು ಕಂಡು ಬರುವುದು ಉದ್ದೇಶಿತ ಗಾತ್ರ ಹಾಗೂ ದಪ್ಪದ ಚಪ್ಪಡಿಗಳನ್ನು ತೆಗೆಯ ಬಹುದಾದ ಸ್ಥಳಗಳಲ್ಲಿಯೇ ಇರುತ್ತವೆ. ಮಧುಗಿರಿ, ಪಾವಗಡ ಮತ್ತು ಕೊರಟಗೆರೆ ತಾಲ್ಲೂಕುಗಳಲ್ಲಿ ಕಲ್ಮನೆ ಮಾದರಿಯ ಸಮಾಧಿಗಳು ಕಂಡುಬಂದಿವೆ.

**ನೆಲದ ಮೇಲಿನ ಕಲ್ಮನೆಗಳು** : ಚಿನಗದಲ್ಲಿ ೨ ಹಾಗೂ ಬೂದಿಬೆಟ್ಟ ಮತ್ತು ಹನ್ನೇಮಾರನಹಳ್ಳಿಗಳಲ್ಲಿ ತಲಾ ಒಂದೊಂದು ಇವೆ. ಹೊನ್ನೇನಹಳ್ಳಿಯ ಮತ್ತು ಚಿನಗದಲ್ಲಿ ಒಂದು; ಗುಡ್ಡದ ಬುಡದಲ್ಲಿಯೂ ಹಾಗೂ ಬೂದಿಬೆಟ್ಟ ಮತ್ತು ಚಿನಗದ ಮತ್ತೊಂದು; ಗುಡ್ಡದ ಬುಡದಿಂದ ಸುಮಾರು ೧ ಕಿ.ಮೀ. ಅಂತರದಲ್ಲಿವೆ. ಗುಡ್ಡದ ಬುಡದಲ್ಲಿರುವ ಭೂಮಿಯು ಫಲವತ್ತಾಗಿದ್ದು ನಿರಂತರ ವ್ಯವಸಾಯಕ್ಕೆ ಒಳಗಾಗಿರುವುದರಿಂದ ಈ ಪ್ರದೇಶದಲ್ಲಿ ಇದ್ದಿರಬಹುದಾದ ಇನ್ನೂ ಅನೇಕ ಕಲ್ಮನೆಗಳು ನಾಶವಾಗಿರಬಹುದು.

ಬೂದಿಬೆಟ್ಟದ ಕಲ್ಮನೆ ಇರುವ ನೆಲೆಯಿಂದ ಪಶ್ಚಿಮಕ್ಕೆ ೩೦ಮೀ. ಅಂತರದಲ್ಲಿ ರಾಚಮಾರನಹಳ್ಳಿ ವಸತಿ ನೆಲೆ ಇದೆ. ಚಿನಗ ಗೋರಿ ನೆಲೆಯಿಂದ ೧.೫ ಕಿ.ಮೀ. ಪಶ್ಚಿಮಕ್ಕೆ ಹಿರೇಗುಂಡಗಲ್ಲು ವಸತಿ ನೆಲೆ ಇದೆ. ಹೊನ್ನೇನಳ್ಳಿಯ ಗೋರಿ ನೆಲೆಗೆ ವಾಯುವ್ಯಕ್ಕೆ ೧೨ ಕಿ.ಮೀ. ಅಂತರದಲ್ಲಿ ಹಿರೇಗುಂಡಗಲ್ಲು ನೆಲೆಯಿದೆ.

ಚಿನಗದ ಒಂದು ಕಲ್ಮನೆಯ ನಾಲ್ಕೂ ಗೋಡೆಕಲ್ಲುಗಳನ್ನೂ ಹೊಂದಿದ್ದು, ಸಾಕಷ್ಟು ಸುಸ್ಥಿತಿಯಲ್ಲಿದ್ದರೆ, ಚಿನಗದ ಗುಡ್ಡದ ಬುಡದಲ್ಲಿರುವ ಕಲ್ಮನೆ ಮತ್ತು ಹೊನ್ನೇನಹಳ್ಳಿ ಕಲ್ಮನೆಗಳಲ್ಲಿ ಮೂರು ಗೋಡೆಗಲ್ಲುಗಳು ಮಾತ್ರ ಉಳಿದಿದ್ದು ಕ್ರಮವಾಗಿ ಪಶ್ಚಿಮ ಮತ್ತು ಉತ್ತರದ ಗೋಡೆಕಲ್ಲು ಹಾಳಾಗಿದೆ. ಬೂದಿಬೆಟ್ಟದ ಕಲ್ಮನೆಯ ಉತ್ತರ ಮತ್ತು ಪೂರ್ವದ ಗೋಡೆಕಲ್ಲುಗಳು ಉಳಿದಿದ್ದು ದಕ್ಷಿಣ ಮತ್ತು ಪೂರ್ವದ ಗೋಡೆಕಲ್ಲುಗಳು ಹಾಳಾಗಿವೆ. ಎಲ್ಲಾ ಕಲ್ಮನೆಗಳ ನೆಲಹಾಸುಗಲ್ಲುಗಳು ಮತ್ತು ಮುಚ್ಚಳ ಕಲ್ಲುಗಳು ಇವೆ.

ತಳವಿನ್ಯಾಸದ ದೃಷ್ಟಿಯಿಂದ ಬೂದಿಬೆಟ್ಟದ ಮತ್ತು ಹೊನ್ನೇನಹಳ್ಳಿಯ ಕಲ್ಮನೆಗಳು ಸ್ವಸ್ತಿಕಾಕಾರದಲ್ಲಿವೆ. ಇದರಲ್ಲಿ ಬೂದಿಬೆಟ್ಟದ ಕಲ್ಮನೆ ಚೌಕಾಕಾರದ ಸ್ವಸ್ತಿಕದಲ್ಲಿದ್ದರೆ, ಹೊನ್ನೇನಹಳ್ಳಿಯ ಮಾದರಿಯು ಆಯತಾಕಾರದಲ್ಲಿದೆ.

ಸಾಧಾರಣವಾಗಿ ಇಂತಹ ಕಲ್ಮನೆಗಳಲ್ಲಿ ಯಾವುದಾದರೊಂದು ಗೋಡೆಕಲ್ಲು ಅಥವಾ ಮುಚ್ಚಳಕಲ್ಲಿನಲ್ಲಿ ವಿವಿಧ ಆಕಾರದ ತೂತುಗಳಿರುತ್ತವೆ. ಕರ್ನಾಟಕದ ಉಳಿದೆಲ್ಲಾ ಕಡೆಗಳಲ್ಲಿ ಸಾಧಾರಣವಾಗಿ ಇಂತಹ ರಂಧ್ರಗಳು ಉತ್ತರ ಇಲ್ಲವೆ ಪೂರ್ವದ ಗೋಡೆಕಲ್ಲಿನಲ್ಲಿ ಕಂಡುಬಂದಿವೆ. ಆದರೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದೊರೆತಿರುವ ನಾಲ್ಕು ಮಾದರಿಗಳಲ್ಲಿ ಒಂದರಲ್ಲಿಯೂ ಇಂತಹ ತೂತುಗಳಿಲ್ಲದಿರುವುದು ಗಮನಾರ್ಹ ಅಂಶ.

ಕಲ್ಮನೆಗಳಲ್ಲಿ ಶವ ಸಂಸ್ಕಾರವಾದ ನಂತರ ಉಳಿದ ಅಸ್ತಿ ಅವಶೇಷಗಳ ಮತ್ತು ಕೆಲವು ವಿಶಿಷ್ಟ ಮಾದರಿಯ ಕಪ್ಪು-ಕೆಂಪು ಮತ್ತು ಕಪ್ಪು ವರ್ಣದ ಮಡಕೆಗಳು ದಫನ ಸಾಮಗ್ರಿಯಾಗಿ ಇರಿಸಲ್ಪಟ್ಟಿರುತ್ತದೆ. ಆದರೆ ಎಲ್ಲಾ ಕಲ್ಗೋರಿಗಳು ಭಗ್ನಾವಸ್ಥೆಯಲ್ಲಿರುವುದರಿಂದ ಅಂತಹ ದಫನ ಸಾಮಗ್ರಿಗಳನ್ನು ಹಾಳು ಮಾಡಿರುವ ಸಾಧ್ಯತೆ ಇದೆ.

**ನೆಲದೊಳಗಿನ ಕಲ್ಮನೆಗಳು** : ಪ್ರಸ್ತುತ ಪ್ರದೇಶದಲ್ಲಿ ಒಟ್ಟು ಒಂಬತ್ತು ದೊರೆತಿವೆ. ಇವುಗಳು ಇರಕಸಂದ್ರಕಾಲೋನಿ (೫), ಕತ್ತಿರಾಜನಹಳ್ಳಿ (೧), ಗೌಡನಕಟ್ಟೆ (೨) ಮತ್ತು ಚಿನಿವಾರ (೧)ಗಳಲ್ಲಿ ದೊರೆತಿವೆ. ಈ ಕಲ್ಮನೆಗಳು ಇರಕಸಂದ್ರಕಾಲೋನಿ, ಚಿನಿವಾರ ಮತ್ತು ಗೌಡನಕಟ್ಟೆಗಳಲ್ಲಿ ಗುಡ್ಡದ ಬುಡದಲ್ಲಿಯೇ ಇದ್ದು, ಕತ್ತಿರಾಜನಹಳ್ಳಿಯ ಕಲ್ಮನೆಯು ಗುಡ್ಡದಿಂದ ಸುಮಾರು ೧.೫ ಕಿ.ಮೀ. ಅಂತರದಲ್ಲಿದೆ. ಕತ್ತಿರಾಜನಹಳ್ಳಿ ಗೋರಿ ನೆಲೆಗೆ ೪ ಕಿ.ಮೀ. ಈಶಾನ್ಯಕ್ಕೆ ಮಿಡಿಗೇಶಿ ವಸತಿ ನೆಲೆ ಇದೆ. ಆದರೆ ಉಳಿದ ನೆಲೆಗಳಾದ ಇರಕಸಂದ್ರಕಾಲೋನಿ, ಗೌಡನಕಟ್ಟೆ ಮತ್ತು ಚಿನಿವಾರಗಳ ಸಮೀಪದಲ್ಲಿ ಯಾವುದೇ ನೆಲೆಗಳಿಲ್ಲದಿರುವುದು ಗಮನಾರ್ಹ.

ಇಂತಹ ಕಲ್ಮನೆಗಳಿರುವ ಪ್ರದೇಶವನ್ನು ವ್ಯವಸಾಯ ಕ್ಕೋಸ್ಕರ ಬಳಸಿರುವುದು, ಕುತೂಹಲದಿಂದ ಅಗೆದಿರುವುದು ಮತ್ತು ನಿಧಿ ಶೋಧಕರು ನಾಶಮಾಡಿರುವ ಸಂಭವವಿದೆ. ಹೀಗೆ ಹಾಳಾಗಿರುವ ಕಲ್ಮನೆಗಳ ರಚನಾವಿಧಾನವನ್ನು ತಿಳಿಯಲು ಅನುಕೂಲವಾಗಿದೆ.

ಹೀಗೆ ಹಾಳಾಗಿರುವ ಕಲ್ಮನೆಗಳಿಂದ ಅವುಗಳ ತಳವಿನ್ಯಾಸ, ನಿರ್ದಿಷ್ಟ ಗೋಡೆಗಲ್ಲುಗಳಿರುವ ರಂಧ್ರಗಳು ಹಾಗೂ ಇವುಗಳಲ್ಲಿ ಇಡಲಾಗಿದ್ದ ದಫನ ಸಾಮಗ್ರಿಗಳ ಬಗೆಗೂ ಮಾಹಿತಿ ದೊರಕುತ್ತದೆ. ಈ ಕಲ್ಮನೆಗಳ ತಳವಿನ್ಯಾಸವು ಹೆಚ್ಚು ಕಡಿಮೆ ಆಯತ ಇಲ್ಲವೆ ಚೌಕಾಕಾರವಾಗಿದ್ದು, ಕೆಲವು ಸ್ವಸ್ತಿಕ ಮಾದರಿಯಲ್ಲಿವೆ. ಹಲವು ಕಲ್ಮನೆಗಳ ತಳದಲ್ಲಿ ಹಾಸುಗಲ್ಲುಗಳು ಕಂಡುಬಂದಿವೆ. ಚೌಕಾಕಾರದ ಕಲ್ಮನೆಗಳು ಗಾತ್ರದಲ್ಲಿ ಚಿಕ್ಕವಾಗಿವೆ.

ಪ್ರಸ್ತುತ ದೊರೆತಿರುವ ೯ ಕಲ್ಮನೆಗಳಲ್ಲಿದ್ದಿರಬಹುದಾದ ದಫನ ಸಾಮಗ್ರಿಗಳು ಗೌಡನಕಟ್ಟೆಯನ್ನು ಹೊರತುಪಡಿಸಿ ಇರಕಸಂದ್ರಕಾಲೋನಿ, ಕತ್ತಿರಾಜನಹಳ್ಳಿ ಮತ್ತು ಚಿನಿವಾರ, ಈ ಮೂರೂ ನೆಲೆಗಳಲ್ಲಿದ್ದು, ಇಂತಹ ಅವಶೇಷಗಳಾದ ಕಪ್ಪು, ಕೆಂಪು-ಕಪ್ಪು ವರ್ಣದ ಮೃತ್‌ಪಾತ್ರೆ ಅವಶೇಷಗಳು ದೊರೆತಿವೆ.

**ನಿಲಸುಗಲ್ಲು**

ಪ್ರಸ್ತುತ ಅಧ್ಯಯನ ಪ್ರದೇಶದ ಕೊರಟಗೆರೆ, ಮಧುಗಿರಿ ಮತ್ತು ತುಮಕೂರು ತಾಲ್ಲೂಕುಗಳಲ್ಲಿನ ಅಗ್ರಹಾರ, ಇರಕಸಂದ್ರ ಕಾಲೋನಿ, ಕತ್ತಿರಾಜನಹಳ್ಳಿ, ಗೌಡನಕಟ್ಟೆ, ಚಿನಗ ಹಾಗೂ ಸೀಗೆಹಳ್ಳಗಳಲ್ಲಿ ಒಟ್ಟು ೧೦ ನಿಲಸುಗಲ್ಲುಗಳು ದೊರೆಕಿವೆ. ಈ ನಿಲಸುಗಲ್ಲುಗಳಲ್ಲಿ ಅಗ್ರಹಾರ ನೆಲೆಯ ೩ ನಿಲಸುಗಲ್ಲುಗಳು ಇತರ ಯಾವುದೇ ಸಮಾಧಿಗಳೊಂದಿಗೆ ಸೇರದೆ ಸ್ವತಂತ್ರವಾಗಿದ್ದರೆ ಉಳಿದ ಹೆಚ್ಚಿನ ಸ್ಥಳಗಳಲ್ಲಿ ಶಿಲಾವೃತ್ತಗಳೊಂದಿಗೇ ಇವೆ. ಹೆಚ್ಚೂ ಕಡಿಮೆ ಎಲ್ಲಾ ಸ್ಥಳಗಳಲ್ಲಿ ದಪ್ಪನೆಯ ಎತ್ತರದ ಕಣಶಿಲೆಯ ಫಲಕಗಳನ್ನು ಭೂಮಿಗೆ ಲಂಬವಾಗಿ ನಿಲ್ಲಿಸಲಾಗಿದ್ದು ಈಗ ೭ ನಿಲಸುಗಲ್ಲುಗಳು ನೇರವಾಗಿದ್ದು ೨ ವಾಲಿವೆ ಹಾಗೂ ಒಂದು ನಾಶವಾಗಿದೆ. ದೀರ್ಘಕಾಲದವರೆಗೆ ಹವಾಮಾನದ ವೈಪರೀತ್ಯದಿಂದಾಗಿ ವಿವಿಧ ವರ್ಣದ ನೈಸರ್ಗಿಕ ಪೊರೆ ಈ ನಿಲಸುಗಲ್ಲುಗಳ ಮೇಲೆ ಉಂಟಾಗಿವೆ. ಈ ನಿಲಸುಗಲ್ಲುಗಳ ಎತ್ತರ ಕನಿಷ್ಠ ೧೫೦ ಸೆಂ.ಮೀ. ಇದ್ದು, ಗರಿಷ್ಠ ೫೨೦ ಸೆಂ.ಮೀ. ಆಗಿದೆ. ಅಗಲ ಕನಿಷ್ಠ ೨೮ ಸೆಂ. ಮೀ. ಗರಿಷ್ಠ ೨೪೨ ಸೆಂ.ಮೀ. ಗಳಾಗಿವೆ. ಇವುಗಳ ದಪ್ಪ ಕನಿಷ್ಠ ೮ ಸೆಂ.ಮೀ, ಗರಿಷ್ಠ ೫೮ ಸೆಂ.ಮೀ. ಗಳಾಗಿವೆ. ನಿಲಸುಗಲ್ಲುಗಳಲ್ಲಿ ಸಮಾಧಿ ಪ್ರಕ್ರಿಯೆಯ ಭಾಗವಾಗಿ ನಿಲ್ಲಿಸಿದ್ದಾಗಿರದೆ, ಸ್ಮಾರಕ ಶಿಲೆಯಾಗಿದ್ದಿರಬಹುದೆಂದು ಊಹಿಸಲಾಗಿದೆ. ಮಸ್ಕಿ ಉತ್ಖನನದಲ್ಲಿ ಈ ಅಂಶ ಸ್ಥಿರಪಟ್ಟಿದೆ. ಆದರೆ ಕೇರಳದ ಒಂದೆರಡು ಕಡೆ ಇವು ಸಮಾಧಿ ಪ್ರಕ್ರಿಯೆಯ ಭಾಗವಾಗಿ ನಿಲ್ಲಿಸಲಾಗಿದ್ದ ಕುರುಹು ಬೆಳಕಿಗೆ ಬಂದಿದೆ. ಚಿನಗ ನೆಲೆಯ ಒಂದು ನಿಲಸುಗಲ್ಲಿನ ಹತ್ತಿರದಲ್ಲಿ ಕಪ್ಪು-ಕೆಂಪು ವರ್ಣದ ಮೃತ್‌ಪಾತ್ರೆ ಭಾಗಗಳು ಕಂಡುಬಂದಿವೆ. ಜೊತೆಗೆ ಚಿನಗ ಮತ್ತು ಇರಕಸಂದ್ರ ಕಾಲೋನಿ ನೆಲೆಗಳಲ್ಲಿ ಸೂಕ್ಷ್ಮ ಶಿಲಾಯುಗದ ಉಪಕರಣಗಳು ಸಾಕಷ್ಟು ಪ್ರಮಾಣದಲ್ಲಿ ದೊರೆತಿವೆ. ಒಟ್ಟಾರೆ ವಿಭಿನ್ನ ಮಾದರಿಯ ಶಿಲಾಗೋರಿಗಳು ತುಮಕೂರು ಜಿಲ್ಲಾ ಪ್ರದೇಶದಲ್ಲಿ ವೈವಿಧ್ಯತೆಯಿಂದ ಕೂಡಿವೆ.

**ವಸತಿ ನೆಲೆ**

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಕಾಲಮಾನಕ್ಕೆ ಸಂಬಂಧಿಸಿದ ಒಟ್ಟು ೧೭ ನಿವೇಶನಗಳು ಬೆಳಕಿಗೆ ಬಂದಿವೆ. ಸಾಧಾರಣವಾಗಿ ನೆಲೆ ನಿವೇಶನಗಳು ಬೆಟ್ಟದ ತಪ್ಪಲು ಪ್ರದೇಶದಲ್ಲಿ ಮತ್ತು ಮೈದಾನ ಪ್ರದೇಶಗಳಲ್ಲಿವೆ. ಹೆಚ್ಚಿನ ನಿವೇಶನಗಳು ಕೃಷಿ ಭೂಮಿಯಾಗಿದ್ದು ಸಾಕಷ್ಟು ಹಾಳಾಗಿವೆ. ಉಳಿದಿರುವ ಅವಶೇಷಗಳ ಆಧಾರದ ಮೇಲೆ ಇವು ೧.೫ ಎಕರೆಯಿಂದ ೨.೫ ಹೆಕ್ಟೇರ್ ಪ್ರದೇಶದಲ್ಲಿ ನೆಲೆಗೊಂಡಿವೆ. ಅಲ್ಲದೆ ಹೆಚ್ಚಿನ ನಿವೇಶನಗಳು ಜಿಲ್ಲೆಯ ಪೂರ್ವಭಾಗದ ಕೊರಟಗೆರೆ, ಮಧುಗಿರಿ ಮತ್ತು ಪಾವಗಡ ತಾಲ್ಲೂಕುಗಳಲ್ಲಿಯೂ ಹೆಚ್ಚು ಕಡಿಮೆ ದಕ್ಷಿಣೋತ್ತರವಾಗಿ ಹರಡಿದ್ದು, ಶಿಲಾಪದರ ಪ್ರಸರಣಗೊಂಡಿರುವಂತೆಯೇ ಹೊಂದಿಕೊಂಡಿವೆ.

ಸಾಂಸ್ಕೃತಿಕ ಅನುಪೂರ್ವಿಕ ದೃಷ್ಟಿಯಿಂದ ಈ ೧೭ ನೆಲೆಗಳಲ್ಲಿ ೧೭ ನಿವೇಶನಗಳು ನೂತನ ಶಿಲಾಯುಗದ ಅವಶೇಷಗಳು ದೊರೆತಿರುವ ನೆಲೆಗಳಲ್ಲಿಯೂ, ಮೂರು ಇತಿಹಾಸ ಆರಂಭ ಕಾಲದ ಅವಶೇಷಗಳು ದೊರೆತಿರುವ ನೆಲೆಗಳ ಜೊತೆಯಲ್ಲಿದ್ದರೆ, ೨ ನೆಲೆಗಳು ಕೇವಲ ಬೃಹತ್ ಶಿಲಾಯುಗದ ನೆಲೆಗಳಾಗಿವೆ. ಇವುಗಳಲ್ಲಿ ೩ ನೆಲೆಗಳು ಹೆಚ್ಚಿನ ಪ್ರಮಾಣದ ಪ್ರಾಚ್ಯಾವಶೇಷಗಳನ್ನು ಹೊಂದಿದ್ದು, ಈ ನೆಲೆಗಳ ಸುತ್ತಲಿನ ಸುಮಾರು ೫ ಕಿ.ಮೀ. ಪರಿಧಿಯಲ್ಲಿ ಸಮಾಧಿ ನಿವೇಶನಗಳೂ ಕಂಡುಬಂದಿವೆ. ಉಳಿದಂತೆ ವಸತಿ ನಿವೇಶನಗಳಿಗೂ ಸಮಾಧಿ ನಿವೇಶನಗಳಿಗೂ ನೇರ ಸಂಬಂಧ ಇರುವಂತೆ ಕಂಡುಬರುವುದಿಲ್ಲ.

ಜೊತೆಗೆ ಯಾವುದೇ ವಸತಿ ನಿವೇಶನದ ಹತ್ತಿರದ ಪರಿಸರದಲ್ಲಿ ಕಂಡುಬಂದಿಲ್ಲ.

ಖನಿಜಗಳ ದೃಷ್ಟಿಯಿಂದ ಈ ವಸತಿ ನಿವೇಶನಗಳಲ್ಲಿ ಕೇವಲ ೨ ರಲ್ಲಿ ಮಾತ್ರ ಕಬ್ಬಿಣವನ್ನು ಬೇರ್ಪಡಿಸಿ ಉಳಿದ ಕಿಟ್ಟದ ಅವಶೇಷಗಳು ಬೆಳಕಿಗೆ ಬಂದಿವೆ. ಈ ಕುರುಹುಗಳು ಕಂಡು ಬಂದಿರುವ ರಾಚಮಾರನಹಳ್ಳಿ ಮತ್ತು ವೈ.ಎನ್. ಹೊಸಕೋಟೆ ನಿವೇಶನಗಳು ಬಹುಶಃ ದೀರ್ಘಕಾಲೀನ ಗಣಿಗಾರಿಕೆಗೆ ಉಪಯುಕ್ತವಾಗುವಂತಹ ಪ್ರಮಾಣದಲ್ಲಿ ಖನಿಜವನ್ನು ಹೊಂದಿರದೆ ಕೇವಲ ಭೂಮಿಯ ಮೇಲ್ಪದರಗಳಲ್ಲಿ ಖನಿಜಾಂಶ ವನ್ನು ಹೊಂದಿದ್ದುದು, ಬೃಹತ್ ಶಿಲಾಯುಗದಲ್ಲಿ ಖನಿಜವನ್ನು ಒದಗಿಸುತ್ತಿತ್ತೆಂದು ಕಂಡುಬರುತ್ತದೆ. ಹಾಗಿದ್ದರೂ ಈಗ ಹೆಚ್ಚಿನ ಪ್ರಮಾಣದ ಕಬ್ಬಿಣದ ಅದಿರನ್ನು ಹೊಂದಿರುವ ಜಿಲ್ಲೆಯ ಪಶ್ಚಿಮ ಭಾಗದ ಚಿಕ್ಕನಾಯಕನಹಳ್ಳಿ ತಾಲ್ಲೂಕು ಪ್ರದೇಶದಲ್ಲಿ ಒಂದೂ ವಸತಿ ನಿವೇಶನಗಳು ಕಂಡು ಬಂದಿಲ್ಲದಿರುವುದು ಕುತೂಹಲಕರ ವಾಗಿದೆ.

ವಸತಿ ನೆಲೆಗಳಲ್ಲಿ ಕಪ್ಪು-ಕೆಂಪು, ಕೆಂಪು ವರ್ಣಗಳ ಮೃತ್ ಪಾತ್ರೆ ಅವಶೇಷಗಳು ಕಂಡುಬಂದಿವೆ. ಹೆಚ್ಚಿನ ಪ್ರಮಾಣದ ಪ್ರಾಚ್ಯವಸ್ತು ಅವಶೇಷಗಳು ಕೈದಾಳ, ಬುಕ್ಕಾಪಟ್ಣ, ಮಧುಗಿರಿ, ಮಿಡಿಗೇಶಿ, ರಾಚಮಾರನಹಳ್ಳಿ, ಯಲ್ಲಪ್ಪನಾಯಕನಹಳ್ಳಿ, ಯಲ್ಲಪ್ಪನಾಯಕನ ಹೊಸಕೋಟೆ, ಸಿದ್ಧಗಂಗಾಬೆಟ್ಟ ಮತ್ತು ಹೀರೇಗುಂಡಗಲ್ಲು ನೆಲೆಗಳಲ್ಲಿ ದೊರೆತಿವೆ.

**ಪರಿಶೀಲನೆ**

ಈ ಸಂಸ್ಕೃತಿಯ ನೆಲೆಗಳ ಪ್ರಸರಣವನ್ನು ಪರಿಶೀಲಿಸುವಾಗ ಜಿಲ್ಲೆಯ ಮಧ್ಯ, ಪೂರ್ವ ಹಾಗೂ ಉತ್ತರ ಭಾಗ (ತುಮಕೂರು, ಕೊರಟಗೆರೆ, ಮಧುಗಿರಿ ಮತ್ತು ಪಾವಗಡ ತಾಲ್ಲೂಕು)ಗಳಲ್ಲಿ ಬಹಳಷ್ಟು ಕಂಡು ಬಂದಿವೆ. ಹಳೇ ಶಿಲಾಯುಗದ ನೆಲೆಗಳುಳ್ಳ ತಿಪಟೂರು, ಗುಬ್ಬಿ ಮತ್ತು ತುಮಕೂರು ತಾಲ್ಲೂಕು ಪ್ರದೇಶದಲ್ಲಿ ಒಂದೂ ನೆಲೆಯೂ ಕಂಡು ಬರದಿರುವುದು ಗಮನಾರ್ಹ. ಈ ಸಂಸ್ಕೃತಿಯು ಪೂರ್ವ ಭಾಗದಲ್ಲಿ ಪ್ರಸರಿಸಿರುವುದರ ಪ್ರಮುಖ ಕಾರಣವೆಂದರೆ ಈ ಭಾಗದಲ್ಲಿ ಗೋರಿಗಳ ನಿರ್ಮಾಣಕ್ಕೆ ಅವಶ್ಯಕವಾದ ಕಲ್ಲು ಚಪ್ಪಡಿ ಹಾಗೂ ಕಲ್ಲು ಗುಂಡುಗಳುಳ್ಳ ಬೆಟ್ಟದ ಸಾಲುಗಳು, ಕಣಿವೆ ಪ್ರದೇಶಗಳು ಹೆಚ್ಚಾಗಿರುವುದು ಸಹಜವೇ ಆಗಿದೆ.

ಅಧ್ಯಯನ ಪ್ರದೇಶದಲ್ಲಿನ ಬೃಹತ್ ಶಿಲಾ ಗೋರಿಗಳನ್ನು ಸ್ಥಳೀಯರು 'ಮೊರಿಯರ ಗುಡಿ', 'ಮೊರಿಯರ ಮನೆ', 'ಪಾಂಡವರ ಮನೆ' ಎಂಬ ಹಸರುಗಳಿಂದ ಅವುಗಳನ್ನು ಗುರುತಿಸುವರು. ಈ ಒಂದು ಕ್ರಮ ಈ ಪ್ರದೇಶದಲ್ಲಿ ಮಾತ್ರವಲ್ಲ ಇಡೀ ದಕ್ಷಿಣ ಭಾರತದಲ್ಲಿಯ ಬಹಳಷ್ಟು ನೆಲೆಗಳನ್ನು ಈ ಹೆಸರುಗಳಿಂದ, ಜೊತೆಗೆ 'ಭಸ್ಮದ ಕಟ್ಟೆ', 'ಮುನಿವಾಸದ ಗುಹೆ', 'ಪಾಂಡವರ ಕಲ್ಲು', ಅಥವಾ 'ಪಾಂಡವರ ಮನೆ' ಎಂಬು ದಾಗಿಯೂ ಕರೆಯಲಾಗಿದೆ. ಅ. ಸುಂದರ ಅವರ ಅಭಿಪ್ರಾಯ ದಂತೆ ಇದು ಒಂದು ಪ್ರತ್ಯೇಕ ಜನವರ್ಗವನ್ನು ನಿರ್ದೇಶಿಸುತ್ತದೆ ಎಂದು ಚರ್ಚಿಸಿರುವರು. ಈ ಸಂಸ್ಕೃತಿಯ ಕಾಲಮಾನವನ್ನು ಕ್ರಿ.ಪೂ. ೧೨೦೦ ರಿಂದ ೨೫೦ ಎಂದು ನಿರ್ಧರಿಸಲಾಗಿದೆ.

**ಪ್ರಚಲಿತ ಆಚರಣೆ**

ಅಧ್ಯಯನ ಪ್ರದೇಶದಲ್ಲಿನ ಒಂದು ನೆಲೆಯಾದ ಬುಕ್ಕಾಪಟ್ನದ ಸಮೀಪದಲ್ಲಿ ಇದೇ ಪದ್ಧತಿಯನ್ನು ಹೋಲುವ ಶವಸಂಸ್ಕಾರ ಪ್ರಕ್ರಿಯೆಯನ್ನು ಕಾಣಬಹುದಾಗಿದೆ. ಇದರಂತೆ ಸತ್ತ ವ್ಯಕ್ತಿಯನ್ನು ತಮ್ಮದೇ ಜಮೀನಿನಲ್ಲಿ ದಹನ ಕ್ರಿಯೆ ನಡೆಸಿದ ನಂತರ ಬೂದಿಯ ಅವಶೇಷವನ್ನು ತೆಗೆದುಕೊಂಡು ಕಲ್ಲಿನ ಗೋರಿಯನ್ನು ಕಟ್ಟಿ ವರ್ಷಕ್ಕೊಮ್ಮೆ ಆಚರಣೆಯನ್ನು ನಡೆಸುವರು ಇದೊಂದು ಸಾಂಪ್ರದಾಯಿಕ ಪ್ರಕ್ರಿಯೆ ಎಂಬುದಾಗಿ ತಿಳಿಯುತ್ತದೆ.

**ಉಪಸಂಹಾರ**

ರಾಜ್ಯದ ವಿವಿಧ ಪ್ರದೇಶಗಳ ಸಾಂಸ್ಕೃತಿಕ ಹಂತಗಳಿಗಿರುವ ಸಾಮ್ಯತೆ ಹಾಗೂ ಭಿನ್ನತೆಗಳನ್ನು ಅರಿತು ಇಡೀ ಉಪಖಂಡದ ವೈಶಿಷ್ಟ್ಯತೆಯ ಚಿತ್ರಣವನ್ನು ಪಡೆದುಕೊಳ್ಳಬಹುದಾಗಿದೆ. ಅದೇ ರೀತಿ ಈ ಪ್ರದೇಶದ ಪ್ರಾತಿನಿಧಿಕ ನೆಲೆಗಳ ಉತ್ಖನನದ ಅವಶ್ಯಕತೆಯೂ ಇದೆ.

ಈ ಪ್ರದೇಶದಲ್ಲಿ ಈವರೆಗೆ ಯಾವುದೇ ಒಂದು ಸ್ಪಷ್ಟ ಚಿತ್ರಣವನ್ನು ತಿಳಿಯಲಾಗದಿದ್ದಂತಹ ಸನ್ನಿವೇಶದಲ್ಲಿ ಇತ್ತೀಚಿನ ಶೋಧನೆಯಿಂದಾಗಿ ಅತಿ ಹೆಚ್ಚಿನ ಸಂಖ್ಯೆಯ ನೆಲೆಗಳು ಹಾಗೂ ವೈವಿಧ್ಯಮಯ ಪ್ರಾಚ್ಯವಸ್ತುಗಳು ದೊರೆತು, ಈ ಪ್ರದೇಶವೂ ಕೂಡ ಒಂದು ಪ್ರಬುದ್ಧ ವಾಸ್ತವ್ಯದ ಪ್ರದೇಶವಾಗಿತ್ತೆಂದು ತಿಳಿಯುತ್ತದೆ.



ಡಾ|| ನಿರ್ಮಲ್ ರಾಜು*

# ಭಾರತೀಯ ಸಾಂಸ್ಕೃತೀಕರಣದ ಹಿನ್ನೆಲೆಯಲ್ಲಿ ಅಗಸ್ತ್ಯಋಷಿಯ ಸಮನ್ವಯ

ಸಮಾಜ ಮತ್ತು ಧರ್ಮಗಳು ದೇಹ ಮತ್ತು ಆತ್ಮವಿದ್ದಂತೆ. ಈ ದೇಹ ಮತ್ತು ಆತ್ಮಗಳ ಸಮೀಕರಣವೇ ಸಾಂಸ್ಕೃತೀಕರಣ. ಈ ಹಿನ್ನೆಲೆಯಲ್ಲಿ ಭಾರತದ ಸಾಂಸ್ಕೃತೀಕರಣವನ್ನು ಪರಿಶೀಲಿಸಿದಾಗ ಅನೇಕ ಪೌರಾಣಿಕ ವ್ಯಕ್ತಿಗಳು ಮತ್ತು ತೀರ್ಥ ಕ್ಷೇತ್ರಗಳು ಪ್ರಮುಖ ಪಾತ್ರವಹಿಸಿರುವುದನ್ನು ಕಾಣಬಹುದು. ಅಂತಹ ವ್ಯಕ್ತಿಗಳಲ್ಲಿ ಅಗಸ್ತ್ಯ ಋಷಿಯ ಪರಿಕಲ್ಪನೆ ಮುಖ್ಯವಾದುದು.

ಅಗಸ್ತ್ಯ ದಕ್ಷಿಣಭಾರತದಲ್ಲಿ ಆರ್ಯಸಂಸ್ಕೃತಿಯನ್ನು ಪ್ರಚಾರಮಾಡಿದನು. ಅಗಸ್ತ್ಯ ಎಂಬ ವ್ಯಕ್ತಿ ಇದ್ದನೇ ಅಥವಾ ಇಲ್ಲವೇ ಎಂಬುದು ಮುಖ್ಯವಲ್ಲ. ಆದರೆ ಆ ಹೆಸರು ಸಂಕೇತಗೊಳಿಸುವ ವಿಚಾರ ಮುಖ್ಯ. ಅಗಸ್ತ್ಯ ಆರ್ಯರ ಸಾಹಸದ ಸಂಕೇತ ಮತ್ತು ಅವರ ಭಾವನೆಯ ಪ್ರಚಾರ ಮಾಧ್ಯವಾಗಿದ್ದಾನೆ. ಈತ ಪುರಾಣದ ಕಲ್ಪನೆಯಿಂದ ಲೇಪಿತಗೊಂಡ ಪ್ರಾಯಶಃ ಐತಿಹಾಸಿಕ ವ್ಯಕ್ತಿಯಾಗಿದ್ದಿರಬಹುದು. ಒಂದು ಮಹಾನ್ ಸಂಸ್ಕೃತಿ ಹೇಗೆ ಬೇರೆ ಬೇರೆ ಭೌಗೋಳಿಕ ಪ್ರದೇಶಗಳಿಗೆ, ಯಾರ ಮತ್ತು ಯಾವ ಮಾರ್ಗಗಳ ಮೂಲಕ ಪಸರಿಸಿತು ಎಂಬುದನ್ನು ತಿಳಿದುಕೊಳ್ಳಲು ಅಗಸ್ತ್ಯನ ಪಾತ್ರ ಒಂದು ಪ್ರಮುಖ ಆಧಾರವಾಗಿದೆ. ಹೊಸ ಸಾಂಸ್ಕೃತಿಕ ಪ್ರಾಕಾರವೊಂದರ ಸೃಷ್ಟಿಗೆ ಈತನು ಮೂಲಪುರುಷ ನಾಗಿದ್ದಾನೆ. ಆರ್ಯಾವರ್ತದಿಂದ ದಕ್ಷಿಣಾಪಥಕ್ಕೆ ಬಂದ ಆತ ಮತ್ತೆ ಹಿಂತಿರುಗಲಿಲ್ಲ. ಇದು ಅಗಸ್ತ್ಯನ ಯಾತ್ರೆ. ರಾಮಾಯಣದ ೧೧ನೇ ಸರ್ಗದ, ೮೧ನೇ ಶ್ಲೋಕದ ಪ್ರಕಾರ ದಕ್ಷಿಣ ಭಾರತಕ್ಕೆ ಬಂದ ಅಗಸ್ತ್ಯನು ಗೊಂಡಾರಣ್ಯಗಳನ್ನು ಕಡಿದು, ಮಾನವ ವಸತಿ ಮತ್ತು ಕೃಷಿಗೆ ಯೋಗ್ಯವನ್ನಾಗಿ ಮಾಡಿದ.

ಅಗಸ್ತ್ಯ ಮೊದಲು ಶಿವಭಕ್ತರಾಗಿದ್ದ. ದಕ್ಷಿಣ ಭಾರತದ ಅನೇಕ ರಾಜರಿಗೆ ಗುರುವಾಗಿದ್ದ. ಕಾಲಾನಂತರ ಅಗಸ್ತ್ಯನೇ ಪೂಜಾವಸ್ತು ವಾದ. ಈ ಹಿನ್ನೆಲೆಯಲ್ಲಿ ದಕ್ಷಿಣಭಾರತದಲ್ಲಿ ಅನೇಕ ಅಗಸ್ತ್ಯ ದೇವಾಲಯಗಳು ಹುಟ್ಟಿಕೊಂಡುವು. ಕಾವೇರಿ ನದಿಯ ಉಗಮ ದಿಂದ-ಅಂತ್ಯದವರೆಗೆ ಹಲವಾರು ಅಗಸ್ತ್ಯೇಶ್ವರ ದೇವಾಲಯಗಳು ನಿರ್ಮಾಣಗೊಂಡು, ಮುಂದೆ ಪ್ರಸಿದ್ಧ ತೀರ್ಥಕ್ಷೇತ್ರಗಳಾಗಿ ಮಾರ್ಪಾಡು ಹೊಂದಿದವು. ಈ ದೇವಾಲಯಗಳಲ್ಲಿ ಅಗಸ್ತ್ಯ ಮೂರ್ತಿಗೆ ಅಗ್ರಪೂಜೆ ಸಲ್ಲುತ್ತದೆ. ಅಗ್ನಿಪುರಾಣ ಮತ್ತು ಸ್ಕಾಂದ ಪುರಾಣಗಳು ಅಗಸ್ತ್ಯ ದೇವಾಲಯಗಳಲ್ಲಿರುವ, ಅಗಸ್ತ್ಯ ಮೂರ್ತಿಯನ್ನು ಯಾವ ರೀತಿಯಲ್ಲಿ ಪೂಜೆ ಮಾಡಬೇಕೆಂದು ವಿವರಿಸುತ್ತವೆ. ಚೋಳರ ಕಾಲದಲ್ಲಿ ಈ ಪರಂಪರೆಯು ವಿಶೇಷವಾಗಿ ಪ್ರೋತ್ಸಾಹಿಸಲ್ಪಟ್ಟು ತಮಿಳುನಾಡು, ಕರ್ನಾಟಕ, ಆಂಧ್ರ ಮೊದಲಾದ ಪ್ರದೇಶಗಳಲ್ಲಿ ಹೆಚ್ಚು ಜನಪ್ರಿಯತೆಯನ್ನು ಪಡೆಯಿತು. ಚಲಾವಣೆಯಲ್ಲಿರುವ ಎಲ್ಲಾ ರೀತಿಯ ಅಗಸ್ತ್ಯನ ಬಗೆಗಿರುವ ಐತಿಹ್ಯಗಳನ್ನು ಪರಿಶೀಲಿಸಿದಾಗ ಒಂದೆರಡು ಮೂಲಭೂತವಾದ ಸಮಾನ ಅಂಶಗಳು ಸ್ಪಷ್ಟವಾಗುತ್ತವೆ. ಮೊದಲನೆಯದಾಗಿ ಕಾವೇರಿ ನದಿ ಮತ್ತು ಅಗಸ್ತ್ಯನಿಗೆ ಹೊಂದಿಕೊಂಡಂತೆ ಇರುವ ಸಂಬಂಧಗಳು. ಅಗಸ್ತ್ಯನ ಕಮಂಡಲದಿಂದ ಬಿಡುಗಡೆಹೊಂದಿದ ಕಾವೇರಿಯು ದಕ್ಷಿಣದ ಗಂಗೆಯಾಗಿ ಪ್ರವೇಶಿಸಿದಳು. ಕಾವೇರಿ ನದಿಯ ಉಗಮದಿಂದ ಸಮುದ್ರ ಸಂಗಮಪರ್ಯಂತ ಅಗಸ್ತ್ಯ ದೇವಾಲಯಗಳು ಅಲ್ಲಲ್ಲಿ ನಿರ್ಮಾಣಗೊಂಡು, ಪ್ರಸಿದ್ಧ ಯಾತ್ರಾಸ್ಥಳಗಳಾಗಿವೆ. ಉದಾಹರಣೆಗೆ ತಲಕಾವೇರಿ, ಭಾಗಮಂಡಲ, ತಿರುಮಕೂಡಲು ನರಸೀಪುರ, ಶ್ರೀರಂಗಪಟ್ಟಣ, ತಲಕಾಡು, ಉತ್ತರ ಆರ್ಕಾಟ್, ವೇದಾರಣ್ಯಂ (ತಂಜಾವೂರು ಸಮೀಪ) ಮೊದಲಾದವುಗಳು. ಇಲ್ಲಿ ವಿಶೇಷವಾಗಿ ಅಖಂಡ ಭಾರತೀಯ ಪ್ರಜ್ಞೆಯು ಈ ಐತಿಹ್ಯದ ಹಿಂದೆ ಕೆಲಸ ಮಾಡಿರುವುದನ್ನು ನಾವು ಕಾಣಬಹುದು.

ಎರಡನೆಯದಾಗಿ ಅಗಸ್ತ್ಯನೆಂಬ ಋಷಿಯು ಉತ್ತರಭಾರತ ದಿಂದ ದಕ್ಷಿಣ ಭಾರತಕ್ಕೆ ಬಂದು ಇಲ್ಲಿ ಆರ್ಯಸಂಸ್ಕೃತಿಯನ್ನು ಪ್ರಚಾರ ಮಾಡಿದನು. ಆದರೆ ಆರ್ಯಸಂಸ್ಕೃತಿಯ ಧಾರ್ಮಿಕ ನಂಬಿಕೆಯ ಪ್ರಕಾರ ಶಿವಪೂಜೆ ಇಲ್ಲ. ನಿಸರ್ಗ ಪೂಜೆ ಮತ್ತು ಯಜ್ಞಗಳ ಆರಾಧನೆ ಅಲ್ಲಿ ಪ್ರಧಾನವಾಗಿತ್ತು. ಈ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ದಕ್ಷಿಣ ಭಾರತದ ಸಾಂಸ್ಕೃತಿಕ ವಲಯದಲ್ಲಿ ಸೇರಿಕೊಂಡು ಬಂದಿರುವ ಐತಿಹ್ಯದ ಪ್ರಕಾರ ಅಗಸ್ತ್ಯನು ಶಿವನ ಆರಾಧಕ ಮತ್ತು ಶಿವನನ್ನು ಲಿಂಗದ ರೂಪದಲ್ಲಿ ಅರ್ಚಿಸಿದ ಭಕ್ತ. ಆದುದರಿಂದಲೇ ಇಲ್ಲಿನ ಶಿವದೇವಾಲಯಗಳಿಗೆ ಅಗಸ್ತ್ಯೇಶ್ವರನೆಂಬ ನಾಮಧೇಯ ಉಂಟಾಯಿತು. ಅಗಸ್ತ್ಯನ ಐತಿಹ್ಯ ರಾಮಾಯಣ ಮತ್ತು ಪ್ರಾಚೀನ ಸಂಘಮ್ ಸಾಹಿತ್ಯದಲ್ಲಿ ದೊರಕುತ್ತದೆ. ಇದರಿಂದ ಅಗಸ್ತ್ಯ ಋಷಿ ಮೂಲಭೂತವಾಗಿ ಆರ್ಯಸಂಸ್ಕೃತಿಯ ಪ್ರಚಾರಕನಾಗಿ ಕಂಡುಬಂದರೂ, ಅನಂತರದಲ್ಲಿ ಆರ್ಯದ್ರಾವಿಡ ಸಂಸ್ಕೃತಿಗಳ ಸಂಗಮದಂತಿದ್ದಾನೆಂದು ಭಾವಿಸಬಹುದು.

ಅಗಸ್ತ್ಯನ ಐತಿಹ್ಯ ದ್ರಾವಿಡ ಪ್ರದೇಶದ ಹೃದಯದಂತಿರುವ ತಮಿಳುನಾಡಿನಲ್ಲಿ ಮತ್ತು ಅಲ್ಲಿನ ಜನರ ಪ್ರಜ್ಞೆಯಲ್ಲಿ ಆಳವಾಗಿ

* ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಮಹಾರಾಜಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೫೭೦ ೦೦೫

ಬೇರೂರಿದೆ. ಅಗಸ್ತ್ಯರು ತಮಿಳುಭಾಷೆಯ ಶಿಷ್ಟ ಬೆಳವಣಿಗೆಗೆ ಪೂರಕವಾದ ವ್ಯಾಕರಣ ಗ್ರಂಥವನ್ನು ರಚಿಸಿದರೆಂಬ ನಂಬಿಕೆಯಿದೆ. ಅಗಸ್ತ್ಯನು ತಮಿಳುನಾಡಿನ ಮೊದೆಯಿಲ್ ಬೆಟ್ಟದಲ್ಲಿ ನೆಲೆಸಿ, ತಮಿಳು ಭಾಷೆಗೆ ಜನ್ಮವಿತ್ತನೆಂದೂ, "ಆಕತ್ತಿಯಾಂ" ಎಂಬ ಪ್ರಥಮ ತಮಿಳು ವ್ಯಾಕರಣ ಗ್ರಂಥವನ್ನು ಬರೆದನೆಂದೂ ಮತ್ತು ಪ್ರಥಮ ತಮಿಳುಸಾಹಿತ್ಯ ಸಂಘಟನೆಯಾದ ಸಂಘಂ ಸಮ್ಮೇಳನದ ಪ್ರಥಮ ಅಧ್ಯಕ್ಷನಾಗಿದ್ದನೆಂದೂ, ತಮಿಳು ಸಾಹಿತ್ಯಗಳಲ್ಲಿ ವರ್ಣಿಸಲಾಗಿದೆ. ಇದು ಸಹ ಆರ್ಯ ದ್ರಾವಿಡ ಸಂಸ್ಕೃತಿಯ ಸಮನ್ವಯವನ್ನು ಸಾಧಿಸಲು ಸಹಾಯಕವಾಗುತ್ತದೆ.

ಮುಂದೆ ಭಾರತ ಮಾತ್ರವಲ್ಲದೆ ಭಾರತದ ಆಚೆಗೂ ಅಂದರೆ ಇಂದಿನ ಸಿಲೋನ್, ಜಾವ, ಇಂಡೋನೇಷ್ಯಾ, ಕ್ಯಾಂಬೋಡಿಯಾ ಮುಂತಾದ ಆಗ್ನೇಯ ಏಷ್ಯಾ ರಾಷ್ಟ್ರಗಳಿಗೂ ಅಗಸ್ತ್ಯನ ಐತಿಹ್ಯ ಸಾಗಿಹೋಯಿತು. ಅಲ್ಲೂ ಶೈವದೇವಾಲಯಗಳು ಇವನ ಹೆಸರಿನಲ್ಲಿ ನಿರ್ಮಿಸಲ್ಪಟ್ಟವು. ಇಲ್ಲಿನ ಸ್ವಾರಸ್ಯವೆಂದರೆ ಅಗಸ್ತ್ಯನ ಕ್ರಿಯಾಶೀಲ ವ್ಯಕ್ತಿತ್ವವು ಸ್ಥಳೀಯ ಶಿವಪೂಜೆಗೆ ಮಾತ್ರ ಮೀಸಲಾಗಿರದೆ ಭಾರತ ಮತ್ತು ವಿದೇಶಗಳ ನಡುವಣ ಸಾಂಸ್ಕೃತಿಕ ಪ್ರಸಾರ ಮತ್ತು ಸಂಪರ್ಕಕ್ಕೂ ಸಹಕಾರಿಯಾಯಿತು. ಇದನ್ನು ಸಹ ಇತಿಹಾಸಕಾರರು ಗುರುತಿಸಿದ್ದಾರೆ.

ಒಟ್ಟಿನಲ್ಲಿ ಅಗಸ್ತ್ಯ ಋಷಿಯ ಮತ್ತು ಅಗಸ್ತ್ಯ ದೇವಾಲಯಗಳ ಅಸ್ತಿತ್ವವನ್ನು ನಾವು ಪರಿಶೀಲಿಸಿದಾಗ ಭಾರತದ ಸಾಂಸ್ಕೃತೀಕರಣದ ಪ್ರಕ್ರಿಯೆಯಲ್ಲಿ ವಿಶೇಷವಾಗಿ ಉತ್ತರ ಮತ್ತು ದಕ್ಷಿಣ ಭಾರತದ ಆರ್ಯದ್ರಾವಿಡ ಸಂಸ್ಕೃತಿಗಳ ಸಮನ್ವಯತೆ ಮತ್ತು ಐಕ್ಯತೆಯಲ್ಲಿ ಅಗಸ್ತ್ಯನ ಪರಿಕಲ್ಪನೆ ಸಂದರ್ಭೋಚಿತವಾದುದೆಂದು ಅಭಿಪ್ರಾಯಪಡಬಹುದು.



## ಆಧಾರಗ್ರಂಥ ಸೂಚಿ


೧. ಕಾಕೋಳು ರಾಘವೇಂದ್ರ., (೧೯೭೪), **ಶ್ರೀ ವ್ಯಾಸ ವೈಭವ**, ಬೆಂಗಳೂರು.
೨. **ಮಹಾಕುಂಭ ಮೇಳ-ಸ್ಮರಣ ಸಂಚಿಕೆ.**, (೧೯೯೨), ಮೈಸೂರು.
೩. ತಿರುನಾರಾಯಣ ಅಯ್ಯಂಗಾರ್., (೧೯೮೪), **ಶ್ರೀ ದಕ್ಷಿಣ ಪ್ರಯಾಣಕ್ಷೇತ್ರ**, ಬೆಂಗಳೂರು.
೪. **ಕಾವೇರಿಮಹಾತ್ಮೆ**/ಕಾವೇರಿ ತೀರದ ಮುಖ್ಯ ಪುಣ್ಯಕ್ಷೇತ್ರಗಳು/ಕಾಕೋಳು ರಾಘವೇಂದ್ರ, ಬೆಂಗಳೂರು.
೫. **ಎಪಿಗ್ರಾಫಿಯ ಕರ್ನಾಟಿಕ**, ಸಂ. ೩., (೧೯೭೪), ನಂ. ಗೂ. ೨೧೨, ಮೈಸೂರು.
೬. ಎಂ. ಮಲ್ಲಣ್ಣ., (೧೯೭೯), **ಸೋಮಶೈಲದರ್ಶನ**, ಮೈಸೂರು.
೭. *QJMS Vol. XVII.*, (೧೯೨೭), ಬೆಂಗಳೂರು.
೮. **ಕನ್ನಡ ಸಾಹಿತ್ಯ ಚರಿತ್ರೆ.**, (೧೯೭೦), ಸಂ. ೧, ಮೈಸೂರು.
೯. ಕಾಕೋಳು ರಾಘವೇಂದ್ರ., (೧೯೭೪), **ದಕ್ಷಿಣ ಪ್ರಯಾಗ** - ತಿರುಮಕೂಡ್ಲು.

ಜಯಣ್ಣ ಉಲ್ಲಾನಹಳ್ಳಿ*

# ಮೊಳಕಾಲ್ಮೂರು ತಾಲ್ಲೂಕು ಹಾನಗಲ್ಲಿನ ಪುರಾತತ್ತ್ವ ಸಮೀಕ್ಷೆ

ಹಾನಗಲ್ಲು ಮೊಳಕಾಲ್ಮೂರು ತಾಲ್ಲೂಕು ಕೇಂದ್ರದಿಂದ ವಾಯುವ್ಯಕ್ಕೆ ಸುಮಾರು ೫ ಕಿ.ಮೀ. ದೂರದಲ್ಲಿದ್ದು, ಊರಿನ ಮಧ್ಯ ಬೆಂಗಳೂರು-ಬಳ್ಳಾರಿ ರಸ್ತೆ ಹಾಯ್ದು ಹೋಗುತ್ತದೆ. ಈ ಊರಿನ ಸುತ್ತ-ಮುತ್ತಲಿನ ಕ್ಲೋಸ್‌ಪೇಟೆ ಗ್ರಾನೈಟ್ ಗುಡ್ಡ-ಗಾಡು ಪರಿಸರ ಪ್ರಾಚೀನ ಮಾನವನ ವಾಸಕ್ಕೆ ಯೋಗ್ಯ ಸ್ಥಳವಾಗಿತ್ತು. ಪೂರ್ವದ ಅಕ್ಕಮ್ಮನಗುಡ್ಡ, ಪಶ್ಚಿಮದಲ್ಲಿ ಕೈಗುಡ್ಡ, ನೈರುತ್ಯಕ್ಕಿರುವ ಮೊರ್‍ಲ್ಲೂಬಂಡೆ ಗುಡ್ಡಗಳು ಪ್ರಮುಖವಾದವುಗಳು. ಇತ್ತೀಚಿನ ದಿನಗಳಲ್ಲಿ ಹಾನಗಲ್ಲಿನ ಸುತ್ತ-ಮುತ್ತಲ ಗುಡ್ಡಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಪ್ರಾಚೀನ ಮಾನವನ ಕುರುಹುಗಳು ಕಂಡುಬಂದಿವೆ. ಅಕ್ಕಮ್ಮನಗುಡ್ಡದಲ್ಲಿ ಚರ್ಟ್, ಆಗೇಟ, ಚಾಲ್ಸಿಡೋನಿ, ಡೈಕ್ ಹಾಗೂ ಸ್ಥಳೀಯವಾಗಿ ದೊರೆಯುವ ಬೆಣಚುಕಲ್ಲಿನಿಂದ ತಯಾರಿಸಿದ ಸೂಕ್ಷ್ಮ ಶಿಲಾಯುಧಗಳು ದೊರೆತಿವೆ. ನೂತನ ಶಿಲಾಯುಗದ ಉಜ್ಜಿ ನಯ ಗೊಳಿಸಿದ ಡೈಕ್ ಶಿಲೆಯ ಚಿಕ್ಕ ಮತ್ತು ದೊಡ್ಡ ಗಾತ್ರದ ಕೈಕೊಡಲಿಗಳು, ಕೈ ಬಾಚಿಗಳು ದೊರೆತಿದ್ದು, ಇವುಗಳನ್ನು ಅದೇ ಗುಡ್ಡದ ಅಕ್ಕಮ್ಮನ ಗುಡಿಯಲ್ಲಿಟ್ಟು ಇಂದಿಗೂ ಪೂಜಿಸುತ್ತಾರೆ. ಈ ಗುಡ್ಡದ ತಪ್ಪಲಿನಲ್ಲಿ ಬೂದಿ, ಬೂದುಬಣ್ಣದ ಮಡಕೆಗಳು, ಬೃಹತ್ ಶಿಲಾಯುಗದ ಕೆಂಪು-ಕಪ್ಪು ಬಣ್ಣದ ಮಡಕೆಗಳು ಅಲ್ಲದೆ ಆದಿ ಇತಿಹಾಸಕಾಲದ ಮಡಕೆಗಳು ದೊರೆತಿವೆ. ಈ ಗ್ರಾಮದ ಪಶ್ಚಿಮಕ್ಕಿರುವ ತಂಪಿನಹಟ್ಟಿಯಲ್ಲಿ ಸುಮಾರು ಆರು ಎಕರೆ ಜಮೀನಿನಲ್ಲಿ ಬೂದಿ ಹಾಗು ಬೂದು ಬಣ್ಣದ ಮಡಕೆಗಳಿವೆ. ಹಾನಗಲ್ಲಿನ ಸುತ್ತ-ಮುತ್ತ ಬೃಹತ್ ಶಿಲಾ ಸಮಾಧಿಗಳು ಅಧಿಕ ಸಂಖ್ಯೆಯಲ್ಲಿವೆ. ಅಕ್ಕಮ್ಮನಗುಡ್ಡದ ಪೂರ್ವ ಭಾಗದ ಅನ್ನದಾನಿ ವೀರಭದ್ರಪ್ಪನ ಹೊಲದ ಉತ್ತರ ಬುಡದಲ್ಲಿ, ಆಗ್ನೇಯ ಭಾಗದ ಮೇರ್‍ರ್‍ಯ್ಯನ ಹೊಲದಲ್ಲಿ, ಪಕ್ಕದ ಗೋಕಟ್ಟೆಯಲ್ಲಿ, ಅಲ್ಲದೆ ನೈರುತ್ಯಕ್ಕ ಮೊರ್‍ಲ್ಲೂಬಂಡೆ ಗುಡ್ಡದ ಮೇಲೆ ಹಾಗೂ ಅದರ ಪಶ್ಚಿಮ ತಪ್ಪಲಿನ ಓಬಯ್ಯನ ಹೊಲದಲ್ಲಿ ಬೃಹತ್ ಶಿಲಾಸಮಾಧಿಗಳಿವೆ. ಸಾಮಾನ್ಯವಾಗಿ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಜನರು ಬೃಹತ್ ಶಿಲಾಸಮಾಧಿಗಳನ್ನು ತೆಲುಗಿನ ಪದಗಳಾದ ಮೊರ್‍ಲ್ಲೂ ಇಂಡ್ಲು (ಮೊರೆರ ಮನೆ). ಮೊರ್‍ಲ್ಲೂ ಬಂಡ್ಲು (ಮೊರೆರ ಬಂಡೆ) ಎಂದು ಕರೆಯುತ್ತಾರೆ. ಆದರೆ ಈ ಗುಡ್ಡದ ಮೇಲಿನ ಬೃಹತ್ ಶಿಲಾಸಮಾಧಿಗಳನ್ನು ಗ್ರಾನೈಟ್ ಶಿಲೆಯನ್ನು ಎಬ್ಬಿಸುವ ಕಾರ್ಮಿಕರು ನಾಶಪಡಿಸಿದ್ದರೆ, ಓಬಯ್ಯನ ಹೊಲದಲ್ಲಿರುವ ಹಾಗೂ ಅನ್ನದಾನಿ ವೀರಭದ್ರಪ್ಪನ ಹೊಲದಲ್ಲಿರುವ ಬೃಹತ್ ಶಿಲಾ ಸಮಾಧಿಗಲ್ಲನ್ನು ನಿಧಿಗಳ್ಳರು ನಿಧಿಯ ಆಸೆಗಾಗಿ ಕೆಲವನ್ನು ಕಿತ್ತುಹಾಕಿದ್ದಾರೆ. ಹಾನಗಲ್ಲಿನ ಸುತ್ತ-ಮುತ್ತ ವೀರಗಲ್ಲುಗಳು ಹಾಗೂ ಮಾಸ್ತಿಗಲ್ಲುಗಳಿವೆ. ಮೇಲೆ ತಿಳಿಸಿದ ತಂಪಿನಹಟ್ಟಿಯ ಕಮಲಗೊಂದಿ ತಿಪ್ಪೇಸ್ವಾಮಿಯವರ ಹೊಲದಲ್ಲಿ ಐದು ಭಗ್ನಗೊಂಡ ವೀರಗಲ್ಲು-ಮಾಸ್ತಿಗಲ್ಲುಗಳಿವೆ. ಒಂದರಲ್ಲಿ ಒಬ್ಬ ವೀರನು ಬಲಗೈಯಲ್ಲಿ ಆಯುಧ ಹಿಡಿದು ನಿಂತಿದ್ದರೆ, ಅವನ ಪಕ್ಕ ಒಬ್ಬ ಮಹಾಸತಿ ತನ್ನ ಬಲಗೈಯನ್ನು ಅರ್ಧಕ್ಕೆ ಇಳಿಬಿಟ್ಟು ಅಂಗೈಯನ್ನು ಮಾತ್ರ ತೋರಿಸುತ್ತಾಳೆ. ಇನ್ನೊಂದರಲ್ಲಿ ಒಬ್ಬ ವೀರನು ಮಾತ್ರ ನಿಂತಿದ್ದಾನೆ. ಇನ್ನೆರಡು ವೀರಗಲ್ಲಿನಲ್ಲಿ ಕಾಲಿನ ಭಾಗಗಳಿವೆ ಹಾಗೂ ಒಂದರಲ್ಲಿ ತಲೆಯ ಭಾಗವಿದೆ. ತಂಪಿನಹಟ್ಟಿಯ ಉತ್ತರಕ್ಕೆ ಸುಮಾರು ೨೦೦ ಮೀಟರ್ ದೂರದಲ್ಲಿ ೨$^{೧}/_{೨}$ ಅಡಿ ಎತ್ತರ, ೨$^{೧}/_{೨}$ ಅಡಿ ಅಗಲದ ಗ್ರಾನೈಟ್ ಶಿಲೆಯ ವೀರಗಲ್ಲಿನಲ್ಲಿ ವೀರನು ಸೊಂಟಕ್ಕೆ ಕತ್ತಿ ಸಿಕ್ಕಿಸಿಕೊಂಡು ಎಡಗೈಯಲ್ಲಿ ಬಿಲ್ಲನ್ನು ಹಿಡಿದು ಬಲಗೈಯಲ್ಲಿ ಬಾಣ ಹೂಡಿದ್ದಾನೆ. ಯರೆರ್ಜನಹಳ್ಳಿ ಹಾಳೂರಿನಲ್ಲಿ ೩ ಅಡಿ ಎತ್ತರ, ೩ ಅಡಿ ಅಗಲದ ಗ್ರಾನೈಟ್ ಶಿಲೆಯ ವೀರಮಾಸ್ತಿಗಲ್ಲಿನಲ್ಲಿ ಒಬ್ಬ ವೀರನು ಎಡಗೈಯಲ್ಲಿ ಬಿಲ್ಲು ಹಿಡಿದುಕೊಂಡಿದ್ದಾನೆ. ಅವನ ಪಕ್ಕದಲ್ಲಿ ಮಹಾಸತಿ ತನ್ನ ಬಲಗೈಯನ್ನು ಮೇಲಕ್ಕೆ ಎತ್ತಿದ್ದು, ಇಳಿಬಿಟ್ಟ ಎಡಗೈಯಲ್ಲಿ ಕಮಂಡಲ ಹಿಡಿದುಕೊಂಡಿದ್ದಾಳೆ. ಈ ವೀರ ಮಾಸ್ತಿಗಲ್ಲಿನ ವಿಶೇಷಗಳೆಂದರೆ ಮುದುಡಿದ ಮೊಗ್ಗುಗಳು, ಮೇಲ್ತುದಿಯ ಮಧ್ಯದಲ್ಲಿ ಸಿಂಹಮುಖದ ಪ್ರಭಾವಳಿ, ಎಡ ಮೂಲೆಯಲ್ಲಿ ಚಿಕ್ಕ ಆಂಜನೇಯ, ಬಲ ಮೂಲೆಯಲ್ಲಿ ಹಾಗೂ ಮಹಾಸತಿಯ ಬಲಗೈ ಪಕ್ಕ ಹಂಸಗಳ ಕೆತ್ತನೆಗಳಿವೆ. ಅಲ್ಲದೆ ಈ ಗ್ರಾಮದ ಪೂರ್ವ ಬೆಟ್ಟದ ಮೇಲೆ ಕೋಟೆ-ಬುರುಜುಗಳ ಅವಶೇಷಗಳಿವೆ. ಒಟ್ಟಿನಲ್ಲಿ ಸೂಕ್ಷ್ಮಶಿಲಾಯುಗದಿಂದ ಇಂದಿನವರೆಗೂ ಈ ಗ್ರಾಮದಲ್ಲಿ ಜನರು ವಾಸಿಸುತ್ತಿದ್ದಾರೆನ್ನಬಹುದು.



ಈ ಲೇಖನ ಸಿದ್ಧಪಡಿಸಲು ಸಹಕರಿಸಿದ ವಿಭಾಗದ ಮುಖ್ಯಸ್ಥರಾದ ಶ್ರೀ ಬಾಲಸುಬ್ರಹ್ಮಣ್ಯ ಹಾಗೂ ನನ್ನ ಮಾರ್ಗದರ್ಶಕರಾದ ಡಾ|| ಸಿ.ಎಸ್. ವಾಸುದೇವನ್ ಮತ್ತು ಕ್ಷೇತ್ರಕಾರ್ಯದಲ್ಲಿ ನೆರವಾದ ಹಾನಗಲ್ಲಿನ ರಾಮಕೃಷ್ಣ, ಇವರೆಲ್ಲರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು.



* ಸಂಶೋಧನ ವಿದ್ಯಾರ್ಥಿ, ಪುರಾತತ್ವ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ಬಳ್ಳಾರಿ ಜಿಲ್ಲೆ-೫೮೩ ೨೭೬

ಎಸ್. ರಾಘವೇಂದ್ರ ಶೆಟ್ಟಿ*

# ಉಡುಪಿ ಜಿಲ್ಲೆಯಲ್ಲಿ ಪ್ರಾಗೈತಿಹಾಸಿಕ ನೆಲೆಗಳ ಶೋಧ

ಕರಾವಳಿ ಕರ್ನಾಟಕದ ಜಿಲ್ಲೆಯಾದ ಉಡುಪಿಯು ಐತಿಹಾಸಿಕ ದೃಷ್ಟಿಯಿಂದ ಮಹತ್ವದ ಸ್ಥಾನವನ್ನು ಪಡೆದಿದೆ. ಏಕೆಂದರೆ ಪ್ರಾಚೀನ ಅರಸು ಮನೆತನಗಳು ಈ ಪ್ರದೇಶದಿಂದಲೇ ಸಮುದ್ರ ವ್ಯಾಪಾರವನ್ನು ನಡೆಸುತ್ತಿದ್ದರು ಮತ್ತು ಕೆಲವು ಪಟ್ಟಣಗಳನ್ನು ಹೊಂದಿದ ಜಿಲ್ಲೆ ಇದಾಗಿದೆ. ಇತ್ತೀಚಿನ ದಿನಗಳಲ್ಲಿ ಉಡುಪಿ ಜಿಲ್ಲೆಯ ೪ ಸ್ಥಳಗಳಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲೆಗಳನ್ನು ಶೋಧಿಸಲಾಗಿದೆ. ಉಡುಪಿ ಜಿಲ್ಲೆಯ ಪ್ರಾಗೈತಿಹಾಸಿಕತೆಗೆ ಮಹತ್ವ ದೊರೆತಿದೆ. ಇವುಗಳಲ್ಲಿ ಮೂರು ಉಡುಪಿ ತಾಲ್ಲೂಕಿನಲ್ಲಿದ್ದರೆ, ಇನ್ನೊಂದು ನೆಲೆ ಕಾರ್ಕಳ ತಾಲ್ಲೂಕಿನಲ್ಲಿದೆ.

ಇದಕ್ಕೂ ಮೊದಲು ಡಾ॥ ಅ. ಸುಂದರ, ಡಾ॥ ಬಿ. ವಸಂತಶೆಟ್ಟಿ (೧೯೯೧), ಪಿ. ರಾಜೇಂದ್ರನ್ (೧೯೮೯), ಡಾ॥ ಕೆ. ಬಿ. ಶಿವತಾರಕ್ (೨೦೦೧) ಮತ್ತು ದಿ॥ ಪಿ. ಗುರುರಾಜ್ ಭಟ್, ಅವರುಗಳು ಈ ಪ್ರದೇಶದಲ್ಲಿ ಕೆಲವು ಪ್ರಾಗೈತಿಹಾಸಿಕ ನೆಲೆಗಳನ್ನು ಶೋಧಿಸಿದ್ದಾರೆ. ಅವರಲ್ಲಿ ಡಾ॥ ವಸಂತ ಶೆಟ್ಟಿಯವರು ಉಡುಪಿ, ಕಕ್ಕುಂಜೆ, ಕೆಳಕುಂಜಾಲು, ಬಾರಾಳಿ, ಮೈರ್‌ಕೊಮ ಮುಂತಾದೆಡೆಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಅವಶೇಷಗಳನ್ನು ಶೋಧಿಸಿದ್ದಾರೆ. ಡಾ॥ ಪಿ. ಗುರುರಾಜ್‌ಭಟ್ ಅವರು ನೀಡಿದ ಮಾಹಿತಿಯಂತೆ ಡಾ॥ ಅ. ಸುಂದರ ಅವರು, ವಡ್ಡರ್ಸೆ, ಬೋರ್ಕಟ್ಟೆ, ಬೇಳೂರು, ಚಾಂತಾಡಿಗಳಲ್ಲಿ ಬೃಹತ್ ಶಿಲಾಯುಗದ ಸಂಸ್ಕೃತಿಗೆ ಸೇರಿದ ನೆಲೆಗಳ ಪ್ರಾಮುಖ್ಯತೆಯನ್ನು ವಿವರಿಸಿರುವರು. ಇವರೆಲ್ಲರ ಶೋಧನೆಯ ಫಲವಾಗಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆಗಳು, ನೂತನ ಶಿಲಾಯುಗದ ೪ ನೆಲೆಗಳು, ಶಿಲಾ ತಾಮ್ರಯುಗದ ಬೃಹತ್ ಶಿಲಾಯುಗದ ೩ ನೆಲೆಗಳು ಹಾಗೂ ೩೨ ಬೃಹತ್ ಶಿಲಾಯುಗದ ಗೋರಿನೆಲೆಗಳು, ಇತಿಹಾಸ ಆರಂಭಕಾಲದ ಎರಡು ನೆಲೆಗಳು ಶೋಧಿಸಲ್ಪಟ್ಟಿವೆ. ಇವುಗಳಿಗೆ ಪೂರಕವಾಗಿ ಬಾರಕೂರಿನ ಮಸೀಕೆರೆ ನಂಚಾರು, ಹಾಗೂ ಸಾಸ್ತಾವು ಮತ್ತು ಕಾರ್ಕಳ ತಾಲ್ಲೂಕಿನ ಕಡ್ತಲ ಎಂಬಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲೆಗಳನ್ನು ಶೋಧಿಸಲಾಗಿದೆ.

*ಬಾರಕೂರು (ಮಸೀಕೆರೆ)*

ಉಡುಪಿ ಜಿಲ್ಲೆಯ ಬ್ರಹ್ಮಾವರದಿಂದ ೪ ಕಿ.ಮೀ. ಪೂರ್ವದಲ್ಲಿರುವ ಬಾರಕೂರು ರೈಲ್ವೆ ನಿಲ್ದಾಣದ ಹಿಂಭಾಗದಲ್ಲಿರುವ ಮಸೀಕೆರೆ ಎಂಬಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗೆ ಸೇರಿದ ಪ್ರದೇಶವು ಕೆಂಪು ಮಣ್ಣಿನಿಂದ ಕೂಡಿದ್ದು ಅಲ್ಲಲ್ಲಿ ಸಣ್ಣ ಬಂಡೆಗಳು ಕಂಡುಬರುತ್ತದೆ. ಈ ಪ್ರದೇಶದಿಂದ ಅನತಿ ದೂರದಲ್ಲಿ ಸೀತಾನದಿಯು ಹರಿಯುತ್ತಿದ್ದು ಹತ್ತಿರದಲ್ಲಿ ಮಸೀಕೆರೆ ಎಂಬ ನೀರಿನ ಆಶ್ರಯ ತಾಣವಾದ ದೊಡ್ಡ ಕೆರೆಯಿದೆ. ಇದರಿಂದ ಈ ಪ್ರದೇಶವು ಜನವಸತಿಗೆ ಯೋಗ್ಯವಾದ ಪ್ರದೇಶವೆಂದು ತಿಳಿಯಬೇಕಾಗಿದೆ. ಅಲ್ಲದೆ ಈ ಪ್ರದೇಶದಲ್ಲಿ ಸೂಕ್ಷ್ಮ ಶಿಲಾಯುಗ ಕಾಲದಲ್ಲಿ ಬಳಸುತ್ತಿದ್ದ ಉಪಕರಣಗಳನ್ನು ತಯಾರಿಸಲು ಉಪಯೋಗಿಸುತ್ತಿದ್ದ ಕ್ವಾರ್ಟ್ಸ್, ಅದಿರುಯುಕ್ತ ಕ್ವಾರ್ಟ್ಸ್ ಮತ್ತು ಜಾಸ್ಪರ್ ಶಿಲೆಗಳು ಕಂಡುಬಂದಿವೆ.

*ಸೂಕ್ಷ್ಮ ಶಿಲಾಯುಗ ಸಂಸ್ಕೃತಿ - ತಾಂತ್ರಿಕತೆ*

ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯು ಉಪಕರಣಗಳ ರೂಪಣಾ ತಾಂತ್ರಿಕತೆಯಲ್ಲಿ ಸಾಕಷ್ಟು ಮಾರ್ಪಾಡುಗಳನ್ನು ಕಾಣಬಹುದಾಗಿದೆ. ವಕ್ಷ ಸ್ಥಳ, ಪರೋಕ್ಷ ಹಾಗೂ ನೇರ ಒತ್ತಡ ತಂತ್ರಗಳ ಜೊತೆಗೆ ಜ್ಯಾಮಿತಿಯ ಆಕೃತಿಗಳನ್ನು ರೂಪಿಸಲು ಮತ್ತು ಕಚ್ಚುಗಳನ್ನುಂಟು ಮಾಡಲು ಶಿಲೆಗಳನ್ನು ಕತ್ತರಿಸುವ ತಂತ್ರವೂ ಬಳಕೆಯಾಗಿರುವುದು ತಿಳಿಯುತ್ತದೆ.



* ಇತಿಹಾಸ ವಿದ್ಯಾರ್ಥಿ, ಎಸ್. ಎಮ್. ಎಸ್. ಕಾಲೇಜು, ಬ್ರಹ್ಮಾವರ - ೫೭೬ ೨೧೩

ಬಾರಕೂರಿನ ಮಸೀಕೆರೆಯ ಪ್ರದೇಶದಲ್ಲಿ ಈ ಸಂಸ್ಕೃತಿಯ ಜನರು ಉಪಯೋಗಿಸುತ್ತಿದ್ದ ಉಪಕರಣಗಳಾದ ನೀಳಚಕ್ಕೆ, ಹೆರೆಚಕ್ಕೆ, ಮೊನೆ ಮಾದರಿಗಳು. ಜೊತೆಗೆ ಕೊರೆಗ, ಕೊರೆಯುಳಿ, ಅರ್ಧಚಂದ್ರಾಕೃತಿ ಬಾಣದ ಮೊನೆಯಂತಹ ಉಪಕರಣಗಳು ಇಲ್ಲಿ ಹೆಚ್ಚಿನ ಪ್ರಮಾಣದಲ್ಲಿ ದೊರೆತಿವೆ. ಇದಲ್ಲದೇ, ಮೂಲಶಿಲಾ ಗಟ್ಟಿ ಮತ್ತು ನಿರುಪಯುಕ್ತ ಕಲ್ಲಿನ ಭಾಗಗಳು ಕಂಡು ಬಂದಿರುವುದರಿಂದ ಇದೊಂದು ಉಪಕರಣ ಸಿದ್ಧಗೊಳಿಸುತ್ತಿದ್ದ ಉದ್ಯಮ ನೆಲೆಯೆಂದು ಭಾವಿಸಬಹುದಾಗಿದೆ.

*ನೂತನ ಶಿಲಾಯುಗ ಸಂಸ್ಕೃತಿ*

ಈ ಮೇಲೆ ತಿಳಿಸಿದ ಪ್ರದೇಶದಲ್ಲಿ ನೂತನ ಶಿಲಾಯುಗಕ್ಕೆ ಸೇರಿದ ಎರಡು ಉಂಗುರಕಲ್ಲು ಮತ್ತು ಒಂದು ಕೊಡಲಿ ಭಾಗದ ಉಪಕರಣಗಳು ದೊರೆತಿವೆ. ಉಂಗುರಕಲ್ಲಿನ ಉಪಕರಣವನ್ನು ಕೃಷಿಗೆ ಬಳಸಲಾಗುತ್ತಿದ್ದು. ಉಂಗುರದೊಳಕ್ಕೆ ಒಂದು ಕೋಲನ್ನು ಸಿಕ್ಕಿಸಿ ಒಂದು ತುದಿಯಿಂದ ಮೊನಚು ಮಾಡಿ ನೆಲವನ್ನು ಅಗೆಯಲು ಬಳಸಲಾಗುತ್ತಿತ್ತು ಎಂದು ಭಾವಿಸಲಾಗಿದೆ. ಅಲ್ಲದೇ ಇದೇ ಕಾಲಕ್ಕೆ ಸೇರಿದ್ದೆಂದು ಭಾವಿಸಲಾದ ಮಡಿಕೆ ಭಾಗಗಳು ಕಂಡು ಬಂದಿದ್ದು ಅವುಗಳ ಅಧ್ಯಯನವನ್ನು ನಡೆಸಲಾಗುತ್ತಿದೆ. ಈ ಪ್ರದೇಶದಿಂದ ಅನತಿ ದೂರದಲ್ಲೇ ನಡೂರು ಎಂಬಲ್ಲಿ ನೂತನ ಶಿಲಾಯುಗದ ಕೊಡಲಿಗಳನ್ನು ಡಾ॥ ಬಿ. ವಸಂತ ಶೆಟ್ಟಿಯವರು ಶೋಧಿಸಿದ್ದಾರೆ.

*ಇತಿಹಾಸ ಕಾಲ*

ಈ ಮಸೀಕೆರೆ ಪ್ರದೇಶದಲ್ಲಿ ಇತಿಹಾಸ ಕಾಲಕ್ಕೆ ಸೇರಿದ ವೃತ್ತಾಕಾರವಾಗಿ ಕಡೆದ ಕಲ್ಲಿನ ಬಂಡೆಯ ಮೇಲೆ ಪಾದಪೀಠ, ಶಿಲಾಸ್ತಂಭದ ಮೇಲ್ಭಾಗ ಸುಟ್ಟಹೆಂಚಿನ ಭಾಗ ಹಾಗೂ ಮೃತ್ ಪಾತ್ರೆಗಳ ಭಾಗಗಳು ಕಂಡುಬಂದಿವೆ. ಅಲ್ಲಲ್ಲಿ ಗಡಿಕಲ್ಲುಗಳು ದೊರೆತಿದ್ದು ವಿವಿಧ ಅಳತೆಯಲ್ಲಿವೆ. ಸೂರ್ಯ ಚಂದ್ರ ಹಾಗೂ ಶಿವಲಿಂಗಗಳನ್ನು ಕೊರೆಯಲಾಗಿದೆ.

*ನಂಚಾರು ಸೂಕ್ಷ್ಮ ಶಿಲಾಯುಗ ಸಂಸ್ಕೃತಿ ನೆಲೆ*

ಉಡುಪಿ ಜಿಲ್ಲೆಯ ಪುರಾಣಪ್ರಸಿದ್ಧ ಮಂದಾರ್ತಿಯಿಂದ ಪೂರ್ವಕ್ಕೆ ೧೦ ಕಿ.ಮೀ. ದೂರದಲ್ಲಿ ಆವರ್ಸೆ ಸಮೀಪದ ನಂಚಾರಿನ ಹೆಸ್ಕುಂದ ಶಾಲೆಯ ಸುತ್ತಲಿನ ಪ್ರದೇಶದಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆಯನ್ನು ಶೋಧಿಸಲಾಗಿದೆ. ಇದು ಕಲ್ಲುಬಂಡೆಗಳಿಂದ ಕೂಡಿದ ಪ್ರದೇಶವಾಗಿದ್ದು ಸಮೀಪದಲ್ಲಿ ನೀರಿನ ಆಶ್ರಯವಾಗಿ ಸೀತಾನದಿ ಹರಿಯುತ್ತಿದೆ. ಅಲ್ಲದೇ ಇಲ್ಲಿ ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಉಪಕರಣಗಳನ್ನು ತಯಾರಿಸಲು ಬಳಸುತ್ತಿದ್ದ ಶಿಲಾಗಟ್ಟಿಗಳು ದೊರೆತಿರುವುದರಿಂದ ಈ ಪ್ರದೇಶದಲ್ಲಿ ಈ ಸಂಸ್ಕೃತಿಯ ಜನರು ವಾಸಿಸಿರುವ ಕುರುಹುಗಳನ್ನು ಗುರುತಿಸಬಹುದಾಗಿದೆ.

ಈ ಸಂಸ್ಕೃತಿಯ ಇರುವಿಕೆಗೆ ಸಾಕ್ಷಿಯಾಗಿ ಈ ಪ್ರದೇಶದಲ್ಲಿ ನೀಳಚಕ್ಕೆ, ಹೆರೆಚಕ್ಕೆ ಮತ್ತು ಮೊನೆ ಮಾದರಿಯ ಉಪಕರಣಗಳು ದೊರೆತಿದ್ದು ಈ ಉಪಕರಣಗಳನ್ನು ಕ್ವಾರ್ಟ್ಸ್ ಶಿಲೆಯಲ್ಲಿ ತಯಾರಿಸಲಾಗಿದೆ.

*ಸಾಸ್ತಾವು(ಕರ್ಜೆ):ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆ*

ಉಡುಪಿ ಜಿಲ್ಲೆಯ ಬ್ರಹ್ಮಾವರದಿಂದ ೧೦ ಕಿ.ಮೀ. ದೂರದಲ್ಲಿರುವ ಪೇತ್ರಿಯಿಂದ ೩ ಕಿ.ಮೀ. ಉತ್ತರದಲ್ಲಿರುವ ಸಾಸ್ತಾವು ಎಂಬಲ್ಲಿ ಸೂಕ್ಷ್ಮಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲೆಯನ್ನು ಶೋಧಿಸಲಾಗಿದೆ. ಈ ಪ್ರದೇಶವು ಬಂಡೆಗಳಿಂದ ಕೂಡಿದ್ದು ಹತ್ತಿರದಲ್ಲಿ ನೀರಿನ ಹರಿವು ಇದೆ. ಈ ಪ್ರದೇಶದಲ್ಲಿ ಕ್ವಾರ್ಟ್ಸ್, ಕ್ವಾರ್ಟ್ಸ್‌ಸೈಟ್ ಜಾತಿಯ ಶಿಲೆಗಳು ಹೇರಳವಾಗಿ ಕಂಡುಬಂದಿವೆ. ಉಪಕರಣಗಳನ್ನು ತಯಾರಿಸಲು ಉಪಯೋಗಿಸಿದ ಮೂಲ ಶಿಲಾಗಟ್ಟಿ ಹಾಗೂ ನಿರುಪಯುಕ್ತ ಕಲ್ಲಿನ ಭಾಗಗಳು ಕಂಡುಬಂದಿವೆ. ಇಲ್ಲಿಯೂ ಹೆರೆಚಕ್ಕೆ ಮತ್ತು ಮೊನೆ ಮಾದರಿಯ ಉಪಕರಣಗಳು ಅಲ್ಪ ಪ್ರಮಾಣದಲ್ಲಿ ದೊರೆತಿವೆ. ಈ ಪ್ರದೇಶದಲ್ಲಿ ಹಲವು ಕಪ್ಪು ಮಿಶ್ರಿತ ಕೆಂಪು ಮಡಿಕೆ ಭಾಗಗಳು ಕಂಡುಬಂದಿದ್ದು ಅವುಗಳ ಅಧ್ಯಯನ ನಡೆಸಲಾಗುತ್ತಿದೆ. ಭೌಗೋಳಿಕ ಹಿನ್ನೆಲೆಯನ್ನು ಪರೀಕ್ಷಿಸಿದಾಗ ಇದು ಒಂದು ಮಹತ್ವದ ನೆಲೆಯಾಗಿರುವ ಸಾಧ್ಯತೆಗಳು ಕಂಡುಬರುತ್ತದೆ.

*ಕಡ್ತಲ ಶೆಟ್ಟಿಬೆಟ್ಟುಗ್ರಾಮ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆ*

ಕಾರ್ಕಳ ತಾಲ್ಲೂಕಿನ ಅಜೆಕಾರಿನಿಂದ ೬ ಕಿ.ಮೀ. ಪಶ್ಚಿಮದಲ್ಲಿ ಕಡ್ತಲ ಎಂಬಲ್ಲಿನ ಶೆಟ್ಟಿ ಬೆಟ್ಟು ಗ್ರಾಮದಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆಯನ್ನು ಹೊಸದಾಗಿ ಶೋಧಿಸಲಾಗಿದೆ. ಇದು ಒಂದು ಗುಡ್ಡಗಾಡು ಪ್ರದೇಶವಾಗಿ ಇಲ್ಲಿಯೇ ಸಮೀಪದಲ್ಲಿ ತೀರ್ಥಟ್ಟು ಎಂಬ ನದಿಯೊಂದು ಹರಿಯುತ್ತಿದೆ. ಈ ಸಂಸ್ಕೃತಿಯ ಜನರು ಈ ಪ್ರದೇಶದಲ್ಲಿ ವಾಸಿಸಿದ್ದರು ಎಂದು ತಿಳಿಯ ಬಹುದಾಗಿದೆ.

ಈ ಪ್ರದೇಶದಲ್ಲಿ ಕ್ವಾರ್ಟ್ಸ್ ಶಿಲೆಗಳು ಹೇರಳವಾಗಿ ಕಂಡುಬಂದಿವೆ. ನೀಳ ಚಕ್ಕೆ, ಹೆರೆ ಚಕ್ಕೆ, ಮೊನೆ ಮಾದರಿ ಹಾಗೂ ಅರ್ಧಚಂದ್ರಾಕೃತಿ ಬಾಣದ ಮೊನೆ ಉಪಕರಣಗಳು ದೊರೆತಿವೆ. ಇವು ಕ್ವಾರ್ಟ್ಸ್ ಶಿಲೆಯಲ್ಲಿ ತಯಾರಿಸಲ್ಪಟ್ಟಿವೆ. ಇದೇ ಪ್ರದೇಶದಲ್ಲಿ ಹಲವು ಮಡಿಕೆ ಭಾಗಗಳು ದೊರೆತಿದೆ. ಕಾರ್ಕಳ ತಾಲ್ಲೂಕಿನಲ್ಲಿ ದೊರೆತ ೧೧ ಪ್ರಾಗೈತಿಹಾಸಿಕ ನೆಲೆಗಳಲ್ಲಿ ೭ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗೆ ಸೇರಿರುವುದರಿಂದ ಈ ಸಂಸ್ಕೃತಿಯ ಪ್ರಸರಣವನ್ನು ಗಮನಿಸಬಹುದಾಗಿದೆ.

# ಉಡುಪಿ ಜಿಲ್ಲೆಯಲ್ಲಿ ದೊರೆತಿರುವ ಪ್ರಾಗೈತಿಹಾಸಿಕ ನೆಲೆಗಳು

## ಉಡುಪಿ ತಾಲ್ಲೂಕು

| ಕ್ರ.ಸಂ ಗ್ರಾಮ/ನೆಲೆಯ ಹೆಸರು | ಹಳೆಯ ಶಿಲಾಯುಗ | | | ಸೂಕ್ಷ್ಮ ಶಿಲಾಯುಗ | ನೂತನ ಶಿಲಾಯುಗ | ಶಿಲಾ ತಾಮ್ರ ಯುಗ | ಬೃಹತ್ ಶಿಲಾಯುಗ | | ಇತಿಹಾಸ ಆರಂಭಕಾಲ | ಇತರ | ಒಟ್ಟು |
|---|---|---|---|---|---|---|---|---|---|---|---|
| | ಆದಿ | ಮಧ್ಯ | ಅಂತ್ಯ | | | | ನೆಲೆ | ಗೋರಿ | | | |
| ೧ ಉದ್ಯಾವರ | | | | | | ✓ | ✓ | | ✓ | | |
| ೨ ಉಡುಪಿ (ರೈಲ್ವೆ ನಿಲ್ದಾಣ) | | | | | | | | ✓ | | | |
| ೩ ಉಡುಪಿ (ಸಂಸ್ಕೃತ ಕಾಲೇಜು) | | | | | | | | ✓ | | | |
| ೪ ಕಕ್ಕುಂಜೆ | | | | | | | | ✓ | | | |
| ೫ ಕಿರಾಡಿ | | | | | ✓ | | | ✓ | | | |
| ೬ ಕುಕ್ಕುಡೆ (ಹೌರಾಡಿ ಗ್ರಾಮ) | | | | | ✓ | | | | | | |
| ೭ ಕೆಳಕುಂಜಾಲು | | | | | | | | ✓ | | | |
| ೮ ಕೋಟ ತಟ್ಟು | | | | | ✓ | | | | | | |
| ೯ ಕಲ್ಯಾಣಪುರ (ಲಕ್ಷ್ಮೀನಗರ) | | | | | | | | ✓ | | | |
| ೧೦ ನಡೂರು | | | | | | | | | | | |
| ೧೧ ನಂಚಾರು | | | | | | | | | | | |
| ೧೨ ಪರ್ಕಳ | | | | | | | | ✓ | | | |
| ೧೩ ಪೆರ್ಡೂರು | | | | ✓ | | | | ✓ | | | |
| ೧೪ ಪೆರಂಪಳ್ಳಿ | | | | | | | | ✓ | | | |
| ೧೫ ಬಗ್ಗರ್‌ಕ್ಯಾರ್ (ಶಿರ್ವ) | | | | | | | | ✓ | | | |
| ೧೬ ಬಾರಕೂರು (ಮಸೀಕೆರೆ) | | | | ✓ | | | | ✓ | | | |
| ೧೭ ಬಾರಾಳಿ | | | | | | | | ✓ | | | |
| ೧೮ ಬೆಳ್ಳರ್ಪಾಡಿ | | | | | | | | ✓ | | | |
| ೧೯ ಬೇಳೂರು | | | | | | | | ✓ | | | |
| ೨೦ ಬೊಮ್ಮರಬೆಟ್ಟು | | | | | | | | ✓ | | | |
| ೨೧ ಬೋಳುಗುಡ್ಡೆ | | | | | ✓ | | | ✓ | | | |
| ೨೨ ಬಂಡೀಮಠ | | | | | | | | | | | |
| ೨೩ ಮೂಡನಿಡಂಬೂರು(ಬ್ರಹ್ಮಗಿರಿ) | | | | | | | | ✓ | | | |
| ೨೪ ಬ್ರಹ್ಮಾವರ | | | | | | | | ✓ | | | |
| ೨೫ ಮೈರ್‌ಕೊಮೆ (ಮಂದರ್ತಿ) | | | | | | | | | | | |
| ೨೬ ವಡ್ಡರ್ಸೆ | | | | | | | | ✓ | | | |
| ೨೭ ಸಾಂತೂರು | | | | | | | | ✓ | | | |
| ೨೮ ಸಾಸ್ತಾವು | | | | ✓ | | | | ✓ | | | |
| ೨೯ ಸುಭಾಸ್ ನಗರ (ಶಿರ್ವ) | | | | | | | | | | | |
| ೩೦ ಹಾರಾಡಿ | | | | ✓ | | | | | | | |
| ೩೧ ಹಿರಿಯಡ್ಕ | | | | | | | | ✓ | | | |
| ಒಟ್ಟು | – | – | – | ೪ | ೪ | ೧ | ೧ | ೨೨ | ೧ | – | ೩೩ |

## ಕಾರ್ಕಳ ತಾಲ್ಲೂಕು

| ಕ್ರ.ಸಂ ಗ್ರಾಮ/ನೆಲೆಯ ಹೆಸರು | ಹಳೆಯ ಶಿಲಾಯುಗ | | | ಸೂಕ್ಷ್ಮ ಶಿಲಾಯುಗ | ನೂತನ ಶಿಲಾಯುಗ | ಶಿಲಾ ತಾಮ್ರ ಯುಗ | ಬೃಹತ್ ಶಿಲಾಯುಗ | | ಇತಿಹಾಸ ಆರಂಭಕಾಲ | ಇತರ | ಒಟ್ಟು |
|---|---|---|---|---|---|---|---|---|---|---|---|
| | ಆದಿ | ಮಧ್ಯ | ಅಂತ್ಯ | | | | ನೆಲೆ | ಗೋರಿ | | | |
| ೧. ಅಂದರ ಚೌಕಿ | | | | ✓ | | | | | | | |
| ೨. ಕಾರ್ಕಳ | | | | ✓ | | | | | | | |
| ೩. ಕುಕ್ಕುಂದೂರು | | | | ✓ | | | | | | | |
| ೪. ಕಡ್ತಳ (ಶೆಟ್ಟಿಬೆಟ್ಟು ಗ್ರಾಮ) | | | | ✓ | | | | ✓ | | | |
| ೫. ಚಾರ | | | | | | | | | | | |
| ೬. ಜಾರ್ಕಳ | | | | ✓ | | | | ✓ | | | |
| ೭. ಬೇಳಂಜೆ | | | | | | | | ✓ | | | |
| ೮. ಬೋರ್ಕಟ್ಟಿ | | | | ✓ | | | | ✓ | | | |
| ೯. ಮೂಡು ಕೋಣಾಜೆಕೊಣಾಜೆ | | | | ✓ | | | | | | | |
| ೧೦. ಸಾಣೂರು | | | | | | | | | | | |
| ಒಟ್ಟು | – | – | – | ೭ | – | – | – | ೪ | – | – | ೧೧ |

## ಕುಂದಾಪುರ ತಾಲ್ಲೂಕು

| ಕ್ರ.ಸಂ ಗ್ರಾಮ/ನೆಲೆಯ ಹೆಸರು | ಹಳೆಯ ಶಿಲಾಯುಗ | | | ಸೂಕ್ಷ್ಮ ಶಿಲಾಯುಗ | ನೂತನ ಶಿಲಾಯುಗ | ಶಿಲಾ ಯುಗ ತಾಮ್ರ | ಬೃಹತ್ ಶಿಲಾಯುಗ | | ಇತಿಹಾಸ ಆರಂಭಕಾಲ | ಇತರೆ | ಒಟ್ಟು |
|---|---|---|---|---|---|---|---|---|---|---|---|
| | ಆದಿ | ಮಧ್ಯ | ಅಂತ್ಯ | | | | ನೆಲೆ | ಗೋರಿ | | | |
| ೧. ಅಮಾಸೆ ಬೈಲು | | | | | | | | ✓ | | | |
| ೨. ಕಡಸೆ | | | | | | | | ✓ | | | |
| ೩. ಗಾವಳಿ | | | | | | | ✓ | | | | |
| ೪. ಗಂಟಿ ಹೊಳೆ | | | | ✓ | | | | | | | |
| ೫. ಬಸ್ರೂರು | | | | | | | ✓ | | | | |
| ೬. ಬೇಳೂರು-ಚೌಂತಾಡಿ | | | | | | | | ✓ | | | |
| ೭. ಬೈಂದೂರು | | | | ✓ | | | | | | | |
| ೮. ನಿಡ್ಲಾಡಿ | | | | | | | | ✓ | | | |
| ೯. ವಳ್ತೂರು | | | | | | | | ✓ | | | |
| ೧೦. ಹಟ್ಟಿಯಂಗಡಿ | | | | | | | | | ✓ | | |
| ೧೧. ಕಲ್ಲಾಡಿ-ಹರ್ಕಾಡಿ | | | | | | | | ✓ | | | |
| ಒಟ್ಟು | – | – | – | ೨ | – | – | ೨ | ೬ | ೧ | – | ೧೧ |

## ಉಡುಪಿ ಜಿಲ್ಲೆಯ ತಾಲ್ಲೂಕುಗಳಲ್ಲಿ ದೊರೆತಿರುವ ನೆಲೆಗಳ ವಿವರ

| | | | | | | | | | | | |
|---|---|---|---|---|---|---|---|---|---|---|---|
| ೧. ಉಡುಪಿ | – | – | – | ೪ | ೪ | ೧ | ೧ | ೨೨ | ೧ | – | ೩೩ |
| ೨. ಕಾರ್ಕಳ | – | – | – | ೭ | – | – | – | ೪ | – | – | ೧೧ |
| ೩. ಕುಂದಾಪುರ | – | – | – | ೨ | – | – | ೨ | ೬ | ೧ | – | ೧೧ |
| ಒಟ್ಟು | – | – | – | ೧೩ | ೪ | ೧ | ೩ | ೩೨ | ೨ | – | ೫೫ |




*ಉಪಸಂಹಾರ*

ಉಡುಪಿ ಜಿಲ್ಲೆಯ ಈ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆಗಳಲ್ಲಿ ಸಾಮಾನ್ಯ ಉಪಕರಣಗಳಾದ ನೀಳಚಕ್ಕೆ, ಪರೆಚಕ್ಕೆ, ಮೊನೆ ಮಾದರಿಗಳು ಬಾಣದ ಮೊನೆ, ಅರ್ಧಚಂದ್ರಾಕೃತಿಯ ಉಪಕರಣಗಳನ್ನು ಗುರುತಿಸಬಹುದಾಗಿದೆ. ಈ ನಾಲ್ಕೂ ನೆಲೆಗಳು ಭೌಗೋಳಿಕವಾಗಿಯೂ ಕೆಲವೇ ಕಿ.ಮೀಟರ್‌ಗಳ ಅಂತರದಲ್ಲಿರುವುದರಿಂದ ಈ ಸಂಸ್ಕೃತಿಯ ಜನರು ಈ ಪ್ರದೇಶದಲ್ಲಿ ವ್ಯಾಪಕವಾಗಿ ಪ್ರಸರಣವನ್ನು ಹೊಂದಿದ್ದರು ಎಂದು ತಿಳಿಯಲಾಗಿದೆ ಮತ್ತು ಈ ಪ್ರದೇಶಗಳು ನೀರಿನ ಆಶ್ರಯಗಳನ್ನು ಹೊಂದಿದ್ದ ನೆಲೆಗಳಾಗಿದ್ದುವೆಂದು ತಿಳಿದು ಬರುತ್ತದೆ.

ಬಾರಕೂರು ನೆಲೆಯು ಒಂದು ಮಹತ್ವದ್ದಾಗಿದ್ದು ಈ ನಿಟ್ಟಿನಲ್ಲಿ ಹೆಚ್ಚಿನ ಅಧ್ಯಯನವನ್ನು ನಡೆಸಲಾಗುತ್ತಿದೆ. ಈ ಪ್ರದೇಶದಲ್ಲಿ ಹಾಗೂ ಉಡುಪಿ ಜಿಲ್ಲೆಯ ಇತರ ಕಡೆಗಳಲ್ಲಿ ಹೆಚ್ಚಿನ ಅಧ್ಯಯನವನ್ನು ಕ್ರಮಬದ್ಧವಾಗಿ ನಡೆಸಿದರೆ, ಉಡುಪಿ ಜಿಲ್ಲೆಯಲ್ಲಿ ಅನೇಕ ಪ್ರಾಗೈತಿಹಾಸಿಕ ನೆಲೆಗಳು ಶೋಧಿಸಲ್ಪಡುವ ಸಾಧ್ಯತೆಯಿದೆ ಅಂಥ ಪ್ರಯತ್ನವೂ ನಡೆದಿದೆ.



(ಈ ಲೇಖನವನ್ನು ತಯಾರಿಸಲು ಮಾರ್ಗದರ್ಶನವನ್ನು ನೀಡಿದ ನನ್ನ ಗುರುಗಳಾದ ಡಾ|| ಕೆ. ಬಿ. ಶಿವತಾರಕ್‌ರವರಿಗೆ ನನ್ನ ಹೃತ್ಪೂರ್ವಕ ವಂದನೆಗಳು ಹಾಗೂ ಕ್ಷೇತ್ರಕಾರ್ಯದಲ್ಲಿ ನನ್ನೊಂದಿಗೆ ಸಹಕರಿಸಿದ ನನ್ನ ಮಿತ್ರರಾದ ರಾಜೇಂದ್ರ, ಪ್ರಕಾಶ, ರಾಘವೇಂದ್ರ ವಿಲ್ಸನ್ ಡಿ. ಪಿಂಟೊ ಮತ್ತು ವಸಂತರವರಿಗೆ ನನ್ನ ಧನ್ಯವಾದಗಳು.)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ವಸಂತಶೆಟ್ಟಿ ಬಿ., (೧೯೮೭), "ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೂತನ ಶಿಲಾಯುಗ", **ಇತಿಹಾಸದರ್ಶನ**, ಸಂಚಿಕೆ ೧, ಕರ್ನಾಟಕ ಇತಿಹಾಸ ಅಕಾದಮಿ, ಬೆಂಗಳೂರು.

೨. ವಸಂತ ಶೆಟ್ಟಿ., (೧೯೯೧), "ದಕ್ಷಿಣ ಕನ್ನಡದ ಪ್ರಾಗಿತಿಹಾಸ", **ಸಂಶೋಧನ**, (ಡಾ. ಎಂ. ಚಿದಾನಂದಮೂರ್ತಿ, ಗೌರವ ಸಂಪುಟ), ಲಕ್ಷ್ಮಣ ತೆಲಗಾವಿ (ಸಂ.), ಬೆಂಗಳೂರು

೩. ಶಿವತಾರಕ್ ಕೆ. ಬಿ., (ಸಂ), (೨೦೦೧), **ಕರ್ನಾಟಕದ ಪುರಾತತ್ವ ನೆಲೆಗಳು**

೪. ಸುಂದರ ಅ., (೧೯೭೭), "ದಕ್ಷಿಣ ಕನ್ನಡ ಪ್ರಾಚೀನತಮ ಸಾಂಸ್ಕೃತಿಕ ಅವಶೇಷಗಳು", **ಸುದರ್ಶನ** (ಡಾ| ಮಾಧವ ಪೈ ಅಭಿನಂದನ ಗ್ರಂಥ)

೫. ಸುಂದರ ಅ., (೧೯೯೪), **'ಕರ್ನಾಟಕ ಪ್ರಾಗಿತಿಹಾಸಕಲೆ'**, ಪಿ. ಆರ್. ತಿಪ್ಪೇಸ್ವಾಮಿ (ಪ್ರ. ಸಂ.), ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು

೬. Gururaj Bhatt. P., (1969), *Antiquities of South Canara*

೭. Rajendran. P., (1983), *The Mesolithic Industries from South Canara*, Karantaka B.P. (R.)

೮. Sundar. A., (1991), "Prehistoric and protohistoric cultures of Dakshinakannada". *Perspective on Dakshinakannada and Coorg*. Mangalore University, Mangalore

೯. Vasanth Shetty B., (1983), "Prehistoric Rock Bruisings from Dakshina Kannada". *Q.J.M.S*, Vol. LXXIV, No. 1, Jan-Mar-1983-15-18

ಡಾ|| ನಾ. ಶಿ ರಂಗರಾಜು*

# ಕಾವೇರಿ ನದಿ ದಡದ ಪರಿಶೋಧನೆ

ಭಾರತದ ಅನೇಕ ಪುರಾತನ ಸಂಸ್ಕೃತಿಗಳು ನದಿಯ ದಡಗಳಲ್ಲಿ ಉದಯಿಸಿ ಬೆಳೆದು ವಿಕಾಸಕ್ಕೆ ಒಳಗಾಗಿ ಇಂದು ನಶಿಸಿ ಹೋಗಿವೆ. ಅದರಲ್ಲಿಯಂತು ನಮ್ಮ ಪೂರ್ವ ಇತಿಹಾಸದ ಎಲ್ಲಾ ಸಂಸ್ಕೃತಿಗಳ ಹುಟ್ಟು ಮತ್ತು ಅಂತ್ಯ ಈ ಭಾರತದ ಪ್ರತಿಯೊಂದು ನದಿಯ ದಡಗಳಲ್ಲಿಯೂ ಕಂಡುಹಿಡಿಯ ಬಹುದಾಗಿದೆ. ಇದಕ್ಕೆ ಸಿಂಧೂ ಬಯಲಿನ ನಾಗರೀಕತೆಯಿಂದ ಹಿಡಿದು ಕಾವೇರಿ ನದಿಯ ದಡದವರೆಗೆ ಅನೇಕ ಉದಾಹರಣೆ ಗಳನ್ನು ನೀಡಬಹುದು.

ಬ್ರಿಟೀಷ್ ಸಂಶೋಧಕರು ಹಾಗೂ ಉತ್ಖನನಕಾರರಿಂದ ಪ್ರಾರಂಭಿಸಿ ಇತ್ತೀಚಿನ ದಿನಗಳವರೆಗೆ ಭಾರತದ ಸಂಶೋಧಕರು ಇಂತಹ ಅನೇಕ ನೆಲೆಗಳನ್ನು ನದಿಗಳ ದಡಗಳಲ್ಲಿ ಗುರ್ತಿಸಿ ಸಂಶೋಧನೆಗಳನ್ನು ಮಾಡಿ ದೊಡ್ಡ ಪ್ರಮಾಣದ ಉತ್ಖನನಗಳನ್ನು ನಡೆಸಿ ಅವುಗಳ ವರದಿಗಳನ್ನು ತಯಾರಿಸಿ ಪ್ರಕಟಿಸಿದ್ದಾರೆ. ಇಂತಹ ಸಂಶೋಧನೆಯಲ್ಲಿ ಈಗ ಪೂನಾದ ಡೆಕ್ಕನ್ ಕಾಲೇಜು ಮುಂಚೂಣಿಯಲ್ಲಿದೆ ಎಂದರೆ ತಪ್ಪಾಗಲಾರದು. ಇವರು ಕರ್ನಾಟಕದಲ್ಲಿಯೂ ಸಹ ಅನೇಕ ಸಂಶೋಧನೆಗಳನ್ನು ಮತ್ತು ಉತ್ಖನನಗಳನ್ನೂ ನಡೆಸಿದ್ದಾರೆ.

ಡಿ.ಟೆರ್ರ ಮತ್ತು ಪಟೆರ್‌ಸನ್‌ರವರು ಕಾಶ್ಮೀರದ ಕಣಿವೆಗಳಲ್ಲಿ ಸಾಕಷ್ಟು ಸಂಶೋಧನೆಗಳನ್ನು ನಡೆಸಿದ ಮೇಲೆ ನದಿಗಳ ಮಹತ್ವ ಮತ್ತು ಅವುಗಳ ಜೊತೆಯಲ್ಲಿಯೇ ವಿವಿಧ ಸ್ತರಗಳಲ್ಲಿನ ಸಂಸ್ಕೃತಿಗಳ ಕುರುಹುಗಳನ್ನು ಕಂಡುಹಿಡಿದ ಮೇಲಂತೂ ಈ ನಿಟ್ಟಿನ ಸಂಶೋಧನೆಗಳಿಗೆ ಬಹಳ ಪ್ರಾಮುಖ್ಯತೆ ಬಂದಿತೆಂದು ಹೇಳಬಹುದು. ಸೋಹನ್‌ನದಿಯ ಸ್ತರಗಳ ವಿಂಗಡನೆ, ಅಧ್ಯಯನ ಹಾಗೂ ಅವಶೇಷಗಳ ಆಧಾರಗಳಿಂದ ಅನೇಕ ಮಾಹಿತಿಗಳನ್ನು ಸಂಗ್ರಹಿಸಿ ಅಧ್ಯಯನ ನಡೆಸಿದ ಮೇಲಂತೂ ನದಿಗಳ ಕಣಿವೆಗಳ ಮತ್ತು ದಡಗಳ ಅಧ್ಯಯನ ಒಂದು ಸ್ವರೂಪವನ್ನು ಪಡೆದುಕೊಂಡಿತು ಎಂದು ಹೇಳಬಹುದು. ಆನಂತರ ಭಾರತದ ಅನೇಕ ನದಿಗಳ ಪ್ರದೇಶಗಳನ್ನು ಪುರಾತತ್ವ ಸಂಶೋಧಕರು ಸಂಶೋಧನೆಗಳನ್ನು ನಡೆಸಿ ಹೊಸ ಹೊಸ ಪುರಾತನ ನೆಲೆಗಳನ್ನು ಮತ್ತು ಅವಶೇಷಗಳನ್ನು ಕಂಡು ಹಿಡಿದು ಉತ್ಖನನಗಳನ್ನು ನಡೆಸಿ ಪುರಾತತ್ವ ಶಾಸ್ತ್ರದ ಬೆಳವಣಿಗೆಗ ಶ್ರಮಿಸಿದ್ದರು.

ಕರ್ನಾಟಕದಲ್ಲಿಯೂ ಸಹ ಅನೇಕ ಸಂಶೋಧನೆಗಳನ್ನೂ ಮತ್ತು ಉತ್ಖನನಗಳನ್ನು ನದಿಯ ಪಾತ್ರಗಳಲ್ಲಿ ಹಲವಾರು ಕಡ ನಡೆಸಲಾಗಿದೆ. ಈ ನಿಟ್ಟಿನಲ್ಲಿ ಹೆಚ್ಚಿನ ಸಂಶೋಧನೆಯನ್ನು ನಡೆಸಿದವರೆಂದರೆ ಡಾ. ಅ. ಸುಂದರ ಅವರು. ಇವರ ಘಟಪ್ರಭ ಮತ್ತು ಮಲಪ್ರಭ ನದಿಗಳ ಸಂಶೋಧನೆಗಳು ಬಹಳ ಮುಖ್ಯವಾದವು. ಹಾಗೆಯೇ ಡಾ. ಎಂ. ಶೇಷಾದ್ರಿಯವರು ಕಾವೇರಿ ನದಿಯ ದಡದಲ್ಲಿ ನಡೆಸಿದ ಉತ್ಖನನ ಬಹಳ ಮುಖ್ಯವಾದುದು. ಅದೇ ರೀತಿ ಮೈಸೂರಿನ ಮಾನಸ ಗಂಗೋತ್ರಿಯ ಪ್ರಾಚೀನ ಇತಿಹಾಸ ಮತ್ತು ಪುರಾತತ್ವಶಾಸ್ತ್ರ ವಿಭಾಗದ ಪ್ರೊ. ಎ. ವಿ. ನರಸಿಂಹಮೂರ್ತಿ ಮತ್ತು ಕೆ.ಕೆ. ಸುಬ್ಬಯ್ಯನವರು ಮೈಸೂರು ಜಿಲ್ಲೆಯ ಕೊಪ್ಪದಲ್ಲಿ, ಹನುಮಂತರಾವ್‌ರವರು ಹೆಮ್ಮಿಗೆಯಲ್ಲಿ ಬೃಹತ್ ಶಿಲಾಯುಗದ ನೆಲೆಗಳ ಉತ್ಖನನಗಳನ್ನು ನಡೆಸಿದರು. ನಂತರ ಕೃಷ್ಣಾಪುರದಲ್ಲಿ ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆಯವರು ಮತ್ತು ಇವರ ಸಹಾಯೋಗದೊಂದಿಗೆ ನಡೆಸಿದ ತಲಕಾಡಿನ ಉತ್ಖನನಗಳು ಪ್ರಮುಖವಾದುದಾಗಿದ್ದು ಕಾವೇರಿ ನದಿಯ ದಡದಲ್ಲಿ ಇದುವರೆವಿಗೂ ನಡೆದಿರುವ ಪ್ರಮುಖ ಉತ್ಖನನಗಳಾಗಿವೆ. ಆದರ ಕಾವೇರಿ ನದಿಯ ಸಮಗ್ರ ಅಧ್ಯಯನದ ದೃಷ್ಟಿಯಿಂದ ಅದರ ದಡಗಳನ್ನಾಗಲಿ ಅಥವ ಕಣಿವೆಗಳನ್ನಾಗಲಿ ಸಮಗ್ರ ಅಧ್ಯಯನಕ್ಕೆ ತೆಗೆದುಕೊಂಡಿರಲಿಲ್ಲ. ಇದುವರೆವಿಗೂ ಕಾವೇರಿ ನದಿಯ ಪಾತ್ರದಲ್ಲಿ ಪೂರ್ವಇತಿಹಾಸದ ಕಾಲದಲ್ಲಿನ ಹಳೇ ಶಿಲಾಯುಗದ ಸಂಸ್ಕೃತಿಯ ಯಾವ ಅವಶೇಷಗಳೂ ದೊರಕಿಲ್ಲ. ಕೇವಲ ಶ್ರೀರಂಗಪಟ್ಟಣದಲ್ಲಿ ಮಾತ್ರ ಅಂತ್ಯ ಹಳೇ ಶಿಲಾಯುಗದ ಕಲ್ಲಿನ ಆಯುಧಗಳು ಮಾತ್ರ ದೊರಕಿದ್ದು ಉಳಿದಂತೆ ಅಲ್ಲಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನವಶಿಲಾಯುಗ ಮತ್ತು ಬೃಹತ್ ಶಿಲಾಯುಗದ ಅನೇಕ ನೆಲೆಗಳು ಅವಶೇಷಗಳು ದೊರಕಿವೆ.

ಶಾತವಾಹನ ಮತ್ತು ಗಂಗರ ಕಾಲದ ಅವಶೇಷಗಳು ಹಾಗೂ ರೊಮನ್ನರ ಕಾಲದಲ್ಲಿ ಅವಶೇಷಗಳು ತಲಕಾಡಿನ ಉತ್ಖನನದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬಂದಿವೆಯಲ್ಲದೆ, ಕಟ್ಟಡದ ಭಾಗಗಳು, ಅವಶೇಷಗಳು ಸಹ ಕಂಡು ಬಂದಿವೆ. ಈ ಒಂದು ನೆಲೆಯನ್ನು ಬಿಟ್ಟರೆ ಕರ್ನಾಟಕದಲ್ಲಿ ಹರಿಯುವ ಕಾವೇರಿನದಿಯ ಪಾತ್ರದಲ್ಲಿ ಮತ್ತೊಂದು ಪ್ರಾರಂಭಿಕ ಇತಿಹಾಸ ಕಾಲದ ಯಾವ ನೆಲೆಯೂ ಕಂಡುಬಂದಿಲ್ಲ. ಇಂತಹ

* ಪ್ರಮುಖ ಸಂಶೋಧಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರ ವಿಭಾಗ, ಮಾನಸಗಂಗೋತ್ರಿ, ಮೈಸೂರು

ಪ್ರತಿಯೊಂದು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕಾವೇರಿ ನದಿಯ ದಡದಲ್ಲಿ ಹೆಚ್ಚಿನ ಸಂಶೋಧನೆಗಾಗಿ ೧೯೯೯ರಲ್ಲಿ ನವದೆಹಲಿಯ ಯುನಿವರ್ಸಿಟಿ ಗ್ರಾಂಟ್ಸ್ ಕಮಿಷನ್ (*U.G.C*) ರವರಿಗೆ ಬೃಹತ್ ಸಂಶೋಧನಾ ಯೋಜನೆಯನ್ನು ತಯಾರಿಸಿ ಸಲ್ಲಿಸಿದ್ದೆ. ಈ ಸಮಗ್ರ ಅಧ್ಯಯನ ಮೂರು ಹಂತಗಳಲ್ಲಿದ್ದು ಮೊದಲ ಹಂತದ ಪರಿಶೋಧನೆಗಾಗಿ ಕಾವೇರಿ ನದಿ ಹುಟ್ಟುವ ತಲಕಾವೇರಿ ಇರುವ ಮಡಿಕೇರಿ, ಮೈಸೂರು ಹಾಗೂ ಮಂಡ್ಯ ಜಿಲ್ಲೆಗಳನ್ನು ಮಾತ್ರ ತೆಗೆದು ಕೊಂಡಿದ್ದು ಅವುಗಳ ಸಮಗ್ರ ಅಧ್ಯಯನಕ್ಕಾಗಿ ಮೊದಲ ಹಂತದ ಸಂಶೋಧನಾ ಕಾರ್ಯಗಳು ಪ್ರಾರಂಭವಾಗಿವೆ.

ಈ ಸಂಶೋಧನಾ ಬೃಹತ್ ಯೋಜನೆಯನ್ನು ಸಲ್ಲಿಸುವುದಕ್ಕೂ ಮೊದಲು ಬಿಳಿಕೆರೆಯ ಹತ್ತಿರದ ಆಯರಹಳ್ಳಿ ಮತ್ತು ತೊಣ್ಣೂರಿನ ಕೆರೆಯ ಹತ್ತಿರದ ಸಣಬದಲ್ಲಿ ಬೃಹತ್ ಶಿಲಾಯುಗದ ನೆಲೆಗಳನ್ನು ಸಂಶೋಧನೆ ಮಾಡಿ ಕಂಡು ಹಿಡಿದಿರುವುದರ ಜೊತೆಗೆ ನಮ್ಮ ವಿಭಾಗದಿಂದ ಕೈಗೊಂಡಿರುವ ಪ್ರತಿಯೊಂದು ಉತ್ಖನನದಲ್ಲೂ ಭಾಗಿಯಾಗಿರುವುದಲ್ಲದೆ ಈ ಯೋಜನೆಯಡಿಯಲ್ಲಿ ಮತ್ತಷ್ಟು ಸಂಶೋಧನೆ ನಡೆಸಿ ಹೊಸ ಹೊಸ ನೆಲೆಗಳನ್ನು ಕಂಡುಹಿಡಿದಿದ್ದೇನೆ. ಮಂಡ್ಯ ಜಿಲ್ಲೆಯಲ್ಲಿನ ತೊಣ್ಣೂರು ಕೆರೆಯ ಹಿನ್ನೀರಿನ ಹತ್ತಿರ ಬರುವ ಸಣಬದಲ್ಲಿನ ಬೃಹತ್ ಶಿಲಾಯುಗದ ಶಿಲಾಸಮಾಧಿಗಳೊಂದರ ಮೇಲಿನ ದೊಡ್ಡ ಹಾಸುಗಲ್ಲಿನ ಮೇಲೆ ಕೊರೆದು ಮೂಡಿಸಿರುವ ಮೂರು ಮನುಷ್ಯರ ಚಿತ್ರಗಳು ಬಹಳ ಮುಖ್ಯವಾದುದಾಗಿದೆ. ಈ ಹಾಸು ಚಪ್ಪಡಿಯಲ್ಲಿ ೫ - ೬ ಗುಂಡಿಗಳಿದ್ದು ಇಂದಿಗೂ ಸಣಬದ ಜನರು ಪಿತೃಪಕ್ಷದ ಸಮಯದಲ್ಲಿ ಇಲ್ಲಿಗೆ ಬಂದು ಎಡೆ ಇಡುತ್ತಾರೆಂದು ತಿಳಿದು ಬಂದಿದೆ. ದಕ್ಷಿಣ ಕರ್ನಾಟಕದಲ್ಲಿ ಇಂತಹ ಮನುಷ್ಯರ ಚಿತ್ರ ಮತ್ತು ಗುಂಡಿಗಳಿರುವ ಸಮಾಧಿಯ ಮೇಲ್‌ಕಲ್ಲು ಬೇರೆಲ್ಲೂ ಕಂಡುಬಂದಿಲ್ಲವೆಂದು ಹೇಳಬಹುದು. ಈ ಬೃಹತ್ ಶಿಲಾಯುಗದ ನೆಲೆಯಲ್ಲಿ ಆರ್ಥೋಸ್ಟಟ್ (*Arthostat*) ಗಳಿಂದ ಕೂಡಿದ ಸಿಸ್ಟ್ (*Cist*) ಮಾದರಿಯ ಕಲ್‌ಕೋಣೆಗಳ ಸಮಾಧಿಗಳು ಕಂಡುಬರುವುದಿಲ್ಲ. ಇಲ್ಲಿನ ಸಮಾಧಿಗಳು ಕೇವಲ ಎರಡು ಮಾದರಿಯಿಂದ ಮಾತ್ರ ಕೂಡಿವೆ. ಒಂದು ಸಾಮಾನ್ಯ ವಾಗಿ ಕಂಡುಬರುವ ಮಧ್ಯದಲ್ಲಿ ಮೇಲ್‌ಕಲ್ಲುಳ್ಳ (*Capstone*) ಕಲ್ಲುವೃತ್ತಗಳು (*Stone circle*) ಮತ್ತು ಸಮಾಧಿಗಳ ಮೇಲೆ ರಾಶಿರಾಶಿಯಾಗಿ ಹಾಕಿರುವ ಸಣ್ಣ ಸಣ್ಣ ಉಂಡೆಗಲ್ಲುಗಳು ಮತ್ತು ಚಕ್ಕೆಕಲ್ಲುಗಳಿಂದ ಆವೃತ್ತವಾಗಿರುವ ಒರಟು ಕಲ್ಲುಗಳ ದಿಬ್ಬದ (*Cairn*) ಸಮಾಧಿಗಳು ಮಾತ್ರ ಕಂಡು ಬರುತ್ತವೆ. ಈ ನೆಲೆಯಲ್ಲಿ ಸಂಗ್ರಹಮಾಡಿರುವ ಕೆಂಪು, ಕಪ್ಪು ಹಾಗೂ ಕೆಂಪು ಮಿಶ್ರಿತ ಕಪ್ಪು ಮಡಕೆಗಳು ಹೆಚ್ಚಾಗಿದ್ದು ಕೆಲವು ಮಡಕೆಗಳ ಮೇಲೆ ಗ್ರಾಫಿಟಿ (*Graphity*) ಕಂಡುಬಂದಿದೆ. ಮಡಕೆಗಳಲ್ಲಿ ಮೂರು ಕಾಲುಗಳುಳ್ಳ ಜಾರುಗಳ ಭಾಗ ಬಹಳ ಆಕರ್ಷಕವಾಗಿವೆ.

ಇದೇ ರೀತಿ ಮೈಸೂರು ಜಿಲ್ಲೆಯ ಬಿಳಿಕೆರೆಗೆ ಕೇವಲ ೬. ಕಿ. ಮೀ. ದೂರದಲ್ಲಿ ಕಾವೇರಿ ನದಿಯ ಹಿನ್ನೀರಿನಲ್ಲಿ ನೂರಕ್ಕೂ ಹೆಚ್ಚು ಬೃಹತ್ ಶಿಲಾಯುಗದ ಸಮಾಧಿಗಳು ಕಂಡುಬರುತ್ತವೆ. ಇಲ್ಲಿ ದೊರೆಯುವ ಅವಶೇಷಗಳನ್ನು ಸೂಕ್ಷ್ಮವಾಗಿ ಗಮನಿಸಿದರ ಇದು ಒಂದು ಸಣ್ಣ ಪ್ರಮಾಣದ ಕೈಗಾರಿಕ ನೆಲೆಯಂತ ಕಂಡುಬರುತ್ತದೆ. ಸಮಾಧಿಗಳಿರುವ ಸ್ಥಳದಿಂದ ಸ್ವಲ್ಪ ದೂರ ನಡೆದು ಸಂಶೋಧನೆ ನಡೆಸಿದರೆ ಕಬ್ಬಿಣವನ್ನು ಕರಗಿಸಿದ ಮೇಲೆ ಉಳಿಯುವ ಕಿಟ್ಟ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುವುದಲ್ಲದೆ ಸುಣ್ಣ ಕಲ್ಲು ಸಹ ಕಂಡುಬರುತ್ತದೆ. ಇದಲ್ಲದೇ ಹುಣಸೂರು ತಾಲ್ಲೂಕಿನ ಇನ್ನೂ ಅನೇಕ ಸ್ಥಳಗಳಲ್ಲಿ ಮತ್ತು ಕೃಷ್ಣರಾಜ ನಗರದಲ್ಲೂ ಸಹ ಬೃಹತ್ ಶಿಲಾಯುಗದ ಹೊಸ ಹೊಸ ನೆಲೆಗಳು ಕಂಡು ಬಂದಿವೆ.

ತಿರಮಕೂಡಲು ನರಸೀಪುರದಲ್ಲಿ ಈಗಾಗಲೇ ನವಶಿಲಾ ಯುಗದ ನೆಲೆಯನ್ನು ಕಂಡುಹಿಡಿದು. ಡಾ. ಎಂ. ಶೇಷಾದ್ರಿಯವರ ಮಾರ್ಗದರ್ಶನದಲ್ಲಿ ಉತ್ಖನನ ನಡೆಸಲಾಗಿದೆ. ಇಲ್ಲಿಗೆ ಬಹಳ ಹತ್ತಿರದ ಅಂದರೆ ಸುಮಾರು ೬ ಕಿ.ಮೀ. ದೂರದಲ್ಲಿ ಕೆಲವು ನವಶಿಲಾಯುಗದ ಮಡಿಕೆ ಚೂರುಗಳು ಕಂಡು ಬಂದಿವೆ.

ಈ ಬೃಹತ್ ಸಂಶೋಧನಾ ಯೋಜನೆಯ ಮೂಲ ಉದ್ದೇಶವೆಂದರೆ ಮಡಿಕೇರಿ ಜಿಲ್ಲೆಯಲ್ಲಿ ಬ್ರಿಟೀಷರ ಕಾಲದಲ್ಲಿ ಈಗಾಗಲೇ ನಡೆಸಿರುವ ಸಂಶೋಧನೆಗಳನ್ನು ಮತ್ತೆ ನಡೆಸುವುದು ಹಾಗೂ ಕಾವೇರಿ ನದಿಯ ಪಾತ್ರದಲ್ಲಿ ಬರುವ ಪುರಾತತ್ವದ ಸಂಶೋಧನೆ ಮಾಡುವುದಾಗಿದೆ. ಹಾಗೆಯೇ ಮೈಸೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿಯೂ ಸಹ ಕಾವೇರಿ ನದಿಯ ಪಾತ್ರದಲ್ಲಿ ಉನ್ನತ ಮಟ್ಟದ ಸಂಶೋಧನೆ ನಡೆಸುವುದಾಗಿದೆ.



ಡಾ|| ಎಂ. ಬೈರೇಗೌಡ*

# ರಾಮನಗರ ತಾಲ್ಲೂಕಿನ ಪುರಾತತ್ತ್ವ ಅವಶೇಷಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪಶ್ಚಿಮ ಭಾಗದ ಎಲ್ಲ ತಾಲ್ಲೂಕುಗಳೂ ಗಿರಿಶೃಂಗ, ಪರ್ವತ ಸಾಲುಗಳಿಂದ ಕೂಡಿವೆ. ಇದಕ್ಕೆ ಮಾಗಡಿಯ ಸಾವನದುರ್ಗ, ನೆಲಮಂಗಲದ ಶಿವಗಂಗೆ, ದೇವನಹಳ್ಳಿಯ ನಂದಿ ಮತ್ತು ದೊಡ್ಡಬಳ್ಳಾಪುರಕ್ಕೆ ಹೊಂದಿಕೊಂಡಿರುವ ಕನಕಪುರದ ಬಾಣಂತಿಮಾರಮ್ಮ, ರಂಗನಾಥ ಸ್ವಾಮಿ, ಮಡಿವಾಳದ ದೇವರಬೆಟ್ಟ ಸಾಲುಗಳು, ಚನ್ನಪಟ್ಟಣದ ಬೇವೂರು, ಕಬ್ಬಾಳಮ್ಮನ ಬೆಟ್ಟ, ರಾಮನಗರ ತಾಲ್ಲೂಕಿನ ಇತಿಹಾಸ ಮತ್ತು ಪುರಾಣ ಪ್ರಸಿದ್ಧವಾದ ರಾಮದೇವರಬೆಟ್ಟ, ಕೂಟಗಲ್, ಬಿಳಗುಂಬ, ಅಚ್ಚಲು ಮತ್ತು ಕೂನಗಲ್ ಬೆಟ್ಟಗಳ ಸಾಲುಗಳನ್ನು ಉದಾಹರಿಸಬಹುದು.

ಬೆಂಗಳೂರಿನ ನೈಋತ್ಯಕ್ಕೆ ಮೈಸೂರು ಹೆದ್ದಾರಿ ೪೮ನೇ ಕಿ.ಮೀ.ನಲ್ಲಿದೆ ರೇಷ್ಮೆಕೇಂದ್ರವೆನಿಸಿದ ರಾಮನಗರ. ಬೆಂಗಳೂರು ಗ್ರಾಮಾಂತರ ಜಿಲ್ಲೆ ಪ್ರಮುಖ ತಾಲ್ಲೂಕು ರಾಮನಗರ. ಕ್ಲೋಸ್‌ಪೇಟೆ ಎಂದು ಕರೆಯುತ್ತಿದ್ದ ಊರಿಗೆ ೧೯೪೯ರಲ್ಲಿ ರಾಮನಗರಂ ಎಂದು ನಾಮಕರಣವಾಯ್ತು. ಐತಿಹಾಸಿಕವಾಗಿ ಈ ಪ್ರದೇಶಕ್ಕೆ ಕೆಳಗಲಿ ನಾಡರ್ಗಲ್ಲು, ಕೆಳ್ಗಲಿನಾಡು, ಕಿಳಲೈನಾಡು, ಕಲುವಳಿನಾಡು, ಕಲುವೊಳೆನಾಡು, ಕೆಲಳಿನಾಡು, ಶಿವರಾಮಗಿರಿ, ರಾಮಗಿರಿ, ರಾಮಗಿರಿದುರ್ಗ, ಹೊಸಪೇಟೆ, ನವೀನಪೇಟೆ ಇತ್ಯಾದಿ ಹೆಸರುಗಳಿದ್ದ ಉಲ್ಲೇಖಗಳಿವೆ. ಕೆಳಗಲಿ ನಾಡನ್ನು ಪ್ರಸ್ತಾಪಿಸುವಾಗ "ಬಂಡೆಗಳ ನಾಡು ಕಲುವಳಿ ನಾಡು" ಎಂಬ ಉಲ್ಲೇಖ ಗಮನಾರ್ಹ. ಈ ಪ್ರದೇಶವನ್ನು ಕರ್ನಾಟಕದ ಪ್ರಾಚೀನ ಅರಸು ಮನೆತನಗಳಲ್ಲಿ ಒಂದಾದ ಗಂಗರು ಆಳುತ್ತಿದ್ದರೆಂಬ ಉಲ್ಲೇಖವು ಕ್ರಿ.ಶ. ೭೫೦ರ ಸುಮಾರಿನ ರಾಮನಗರದ ಐಜೂರಿನ ಶಾಸನದಲ್ಲಿದೆ. ನಂತರ ಹೊಯ್ಸಳರು ಮತ್ತು ಮೈಸೂರು ಒಡೆಯರ ಆಳ್ವಿಕೆಗೆ ಸಂಬಂಧಿಸಿದ ಶಾಸನಗಳು ದೊರೆಯುತ್ತವೆ.

ಇಡೀ ತಾಲ್ಲೂಕು ಕಂದುಬಣ್ಣದ ಒರಟು ಬೆಣಚು ಕಲ್ಲಿನಿಂದ ಕೂಡಿದ ಬೆಟ್ಟಗಳ ಸಾಲಿನಿಂದ ಕೂಡಿದೆ. ಇಲ್ಲಿನ ವಿಶಿಷ್ಟವಾದ ಕಣಶಿಲೆಗೆ (ಗ್ರಾನೈಟ್) "ಕ್ಲೋಸ್‌ಪೇಟೆ ಗ್ರಾನೈಟ್" ಎಂದೇ ಹೆಸರು. ಶಿವರಾಮಗಿರಿ, ರೇವಣಸಿದ್ಧೇಶ್ವರ ಬೆಟ್ಟ, ಯತಿರಾಜಗಿರಿ, ಕೃಷ್ಣಗಿರಿ, ಸಿಡಿಲಕಲ್ಲು ಮತ್ತು ಜಲಸಿದ್ಧೇಶ್ವರ ಬೆಟ್ಟಗಳಿಂದಾವೃತವಾಗಿರುವ ಇದು ಸಪ್ತಗಿರಿಗಳ ನಾಡೆಂದು ಹೆಸರು ಪಡೆದಿದೆ.

ಕಬ್ಬಿಣದ ಆವಿಷ್ಕಾರವಾದ ಕಾಲದಲ್ಲಿ ಕಬ್ಬಿಣದ ಆಯುಧಗಳು ಬಳಕೆಯಾಗಿ ಈ ಯುಗವು ಕಬ್ಬಿಣದ ಯುಗವೆನಿಸಿತ್ತು. ಈ ಯುಗದ ಜನರು ಬೃಹದಾಕಾರದ ಕಲ್ಲು ಚಪ್ಪಡಿಗಳನ್ನು ಬಳಸಿ ಸಮಾಧಿಗಳನ್ನು ನಿರ್ಮಿಸುತ್ತಿದ್ದುದರಿಂದ ಈ ಯುಗವನ್ನು ಬೃಹತ್ ಶಿಲಾಯುಗ ಎಂದೂ ಕರೆಯುತ್ತಾರೆ. ಈ ಹಿನ್ನೆಲೆಯಲ್ಲಿ ರಾಮನಗರ ತಾಲ್ಲೂಕಿನ ಬೆಟ್ಟಗುಡ್ಡಗಳನ್ನು ಆಧಾರವಾಗಿಟ್ಟುಕೊಂಡು ಆ ಪ್ರದೇಶದ ಭೌಗೋಳಿಕ, ಸಾಮಾಜಿಕ, ಸಾಂಸ್ಕೃತಿಕ, ಐತಿಹ್ಯಾತ್ಮಕ, ಜಾನಪದೀಯ ವಿವರಗಳನ್ನು ದಾಖಲಿಸಹೊರಟಾಗ ಸಿಕ್ಕ **ಬೃಹತ್ ಶಿಲಾಯುಗಕ್ಕೆ ಸೇರಿದ ಶಿಲಾಸಮಾಧಿಗಳು** ಐತಿಹಾಸಿಕವಾಗಿಯೂ ಅಧ್ಯಯನ ನಡೆಸಬಹುದಾದ ಸಾಧ್ಯತೆಗಳನ್ನು ತೋರಿದವು.

ವಿಶ್ವದಾದ್ಯಂತ ಸಾವಿನ ನಂತರದ ಸಂಸ್ಕಾರಾದಿ ಕ್ರಿಯೆಗಳು ಅದರ ಸಾಮಾಜಿಕ, ಸಾಂಸ್ಕೃತಿಕ ಮಹತ್ವಗಳನ್ನು ಸಾರಿ ಹೇಳುವುದಲ್ಲದೆ, ಅಪೂರ್ವ ಐತಿಹಾಸಿಕ ಸ್ಮಾರಕಗಳಾಗಿ ಹತ್ತು ಹಲವು ಸತ್ಯಗಳನ್ನು ಸಾಕ್ಷಾತ್ಕರಿಸುತ್ತವೆ. ಅಂಥ ಸಮಾಧಿ ನೆಲೆಗಳು ಆಯಾ ಪ್ರದೇಶದಲ್ಲಿ ಆಳಿ ಅಳಿದುಹೋದ ರಾಜಮಹಾರಾಜರು, ಸಂತ, ಶರಣರ ಬದುಕಿನ ವೈವಿಧ್ಯಮಯ ಚಿತ್ರಗಳನ್ನು ಬಿಚ್ಚಿಡುವ ಸ್ಮಾರಕಗಳು. ಈಜಿಪ್ಟಿನ ಪಿರಾಮಿಡ್ಡುಗಳು ಶವ ಸಂಸ್ಕಾರದ ನೆಲೆಗಳೇ ಆಗಿವೆ.

ರಾಮನಗರ ತಾಲ್ಲೂಕಿನಾದ್ಯಂತ ಬೆಟ್ಟ-ಗುಡ್ಡ, ಕಣಿವೆ-ಕಾಡುಗಳ ಮಧ್ಯದಲ್ಲಿ ಇತಿಹಾಸಪೂರ್ವ ಸಮಾಧಿನೆಲೆಗಳಿದ್ದು ಅವುಗಳಲ್ಲಿ ಸಾಗುವಳಿಯ ಜಮೀನಿನಲ್ಲಿದ್ದ ಅನೇಕ ನೆಲೆಗಳು ನಾಶವಾಗಿವೆ.

ಎಂ.ಜಿ. ನಾಗರಾಜ್ ಅವರ ರಾಮನಗರ ತಾಲ್ಲೂಕನ್ನು ಕುರಿತ ಕೆಲವು ಬರಹಗಳಲ್ಲಿ ರಾಮದೇವರ ಬೆಟ್ಟದ ಪೂರ್ವದ ಕಾಡುಗಳು, ಬಸವನಪುರ, ವಡೇರಹಳ್ಳಿ, ಗಂಗರಾಜರಹಳ್ಳಿ, ಅರಳಿಮರದದೊಡ್ಡಿ, ಕುಂಜಿಗರಹಳ್ಳಿ, ಕೂಟಗಲ್ಲು, ಅಚ್ಚಲುದುರ್ಗ, ಕೃಷ್ಣಾಪುರದೊಡ್ಡಿ, ಮಟಗಯ್ಯನದೊಡ್ಡಿ ಮುಂತಾದ ಪ್ರದೇಶಗಳಲ್ಲಿ ಕಂಡುಬರುವ ಪ್ರಾಗೈತಿಹಾಸಿಕ ನೆಲೆಗಳ ಉಲ್ಲೇಖಗಳನ್ನು ಕಾಣಬಹುದು. ಅವುಗಳಷ್ಟೇ ಅಲ್ಲದೆ ನನ್ನ ಕ್ಷೇತ್ರಕಾರ್ಯಕಾಲದಲ್ಲಿ ಈ ಬಗೆಯ ಇನ್ನೂ ಅನೇಕ ಪುರಾತನ ನೆಲೆಗಳು ಕಂಡುಬಂದವು. ರಾಮನಗರ ತಾಲ್ಲೂಕಿನ ಪ್ರತಿಯೊಂದು ಬೆಟ್ಟದ ಆಜೂ-ಬಾಜೂ ಇರುವ ಅನೇಕ ಗ್ರಾಮಗಳು ಹಾಗೂ ಬೆಟ್ಟಕ್ಕೆ ಹೊಂದಿಕೊಂಡಂತೆ,

* ಸಂಖ್ಯೆ ೧೧೯, ೭ನೇ ತಿರುವು, ೮ನೇ ಮುಖ್ಯ ರಸ್ತೆ ಆರ್. ಪಿ. ಸಿ. ಬಡಾವಣೆ, ಬೆಂಗಳೂರು - ೫೬೦ ೦೪೦

ಕೆಲವು ಬೆಟ್ಟಗಳ ನೆತ್ತಿಯಲ್ಲಿಯೇ ಬೃಹತ್ ಶಿಲಾಯುಗದಿಂದ ಹಿಡಿದು ತೀರಾ ಇತ್ತೀಚಿನವರೆಗಿನ ವಿವಿಧ ಬಗೆಯ ಶಿಲಾಸಮಾಧಿಗಳು ಕಂಡುಬರುತ್ತವೆ.

ಇನ್ನೂ ಆದಿವಾಸಿ ಸಂಸ್ಕೃತಿಯಲ್ಲಿಯೇ ಬದುಕುತ್ತಿರುವ ಇರುಳಿಗ ಎಂಬ ಬುಡಕಟ್ಟಿನ ಜನರಲ್ಲಿ ಸತ್ತವರನ್ನು ಹೂಳುವುದಾಗಲೀ; ಸುಡುವ ಪದ್ಧತಿಗಳಾಗಲಿ ತೀರಾ ಇತ್ತೀಚಿನ ದಶಕಗಳವರೆಗೂ ಇರಲಿಲ್ಲ. **'ಕಲ್ಲುಸೇವೆ'** (ಇರುಳಿಗರು ವಾಸಿಸುವ ನೆಲೆಯಿಂದ ಸುಮಾರು ಮೂರು-ನಾಲ್ಕು ಕಿಲೋಮೀಟರ್‌ಗಳಷ್ಟು ದೂರದ ವಿಶಾಲ ಅರೆಬಂಡೆಯ ಮೇಲೆ ನಿರ್ಮಿಸಿದ ಕಲ್ಲು ಗುಡಿಗಳಲ್ಲಿ ಶವವನ್ನಿಟ್ಟು ಪೂರ್ವ ಭಾಗವನ್ನು ಕಾಡುಕಲ್ಲುಗಳಿಂದ ಮುಚ್ಚಿ ಬರುವ ಪದ್ಧತಿಯೇ ಕಲ್ಲುಸೇವೆ) ಯೆಂಬ ಹೆಸರಿನಲ್ಲಿ ನಡೆಸುತ್ತಿದ್ದ ಸಂಸ್ಕಾರ ಪದ್ಧತಿಯು **ಬೃಹತ್ ಶಿಲಾಯುಗದ ಶಿಲಾಸಮಾಧಿಗಳ** ಪರಂಪರೆಯ ಪಳೆಯುಳಿಕೆ ಎಂಬಂತೆ ಕಂಡುಬರುತ್ತಿತ್ತು. ಇತ್ತೀಚೆಗೆ ತಮ್ಮ ಸುತ್ತಲಿನ ಇತರೆ ಜನ-ಜಾತಿಗಳ ಆಚರಣೆಗಳನ್ನು ನೋಡಿ ಅನುಕರಣೆ ಮಾಡುತ್ತಾ ಪರಂಪರೆಯಿಂದ ನಡೆಸಿಕೊಂಡು ಬರುತ್ತಿದ್ದ ಆಚರಣಾ ವಿಧಿಯನ್ನು ನಿಲ್ಲಿಸಿದ್ದಾರೆ. ವ್ಯಾಪಕವಾಗಿ ಹರಡಿಕೊಂಡಿರುವ ರಾಮನಗರ, ಮಾಗಡಿ, ಕನಕಪುರ, ಆನೇಕಲ್ಲು ತಾಲ್ಲೂಕಿನ ಇರುಳಿಗರ ಕಲ್ಲುಸೇವೆಯ ಗುಡಿಗಳಲ್ಲಿ ಸಂಸ್ಕಾರಗೊಂಡ ಮಾನವ ಶರೀರದ ಪಳೆಯುಳಿಕೆಗಳನ್ನು ಗುರುತಿಸಲಾಗಿದೆ.

**ಕೂನಗಲ್ ಬೆಟ್ಟ:** ಇತ್ತೀಚಿನ ಶತಕಗಳ ಪಾಳೇಗಾರರು, ಕೆಂಪೇಗೌಡನ ಸಾಮಂತರ ಆಳ್ವಿಕೆಯ ಕುರುಹುಗಳು ಇಲ್ಲಿ ಇನ್ನೂ ಜೀವಂತವಾಗಿವೆ. ಅಷ್ಟೇ ಅಲ್ಲದೆ ಜಾನಪದೀಯ ಹಿನ್ನೆಲೆಯ ಅನೇಕ ಐತಿಹ್ಯಗಳಿವೆ. ಪುರಾತನ ಮಾನವನ ನೆಲೆಗೆ ಪ್ರಾಥಮಿಕ ಅಗತ್ಯವಾದ ನಿಸರ್ಗನಿರ್ಮಿತ ಅನೇಕ ನೀರಿನ ದೋಣೆ, ಕೆರೆ, ತಟಾಕಗಳು ಇನ್ನೂ ಜೀವಂತವಾಗಿವೆ. ವಿಶೇಷವೆನ್ನಬಹುದಾದ ಅನೇಕ ಸ್ಥಳಗಳ ಹೆಸರುಗಳನ್ನು ಸ್ಥಳೀಯರು ಹೇಳುತ್ತಾರೆ. ಬೃಹತ್ ಶಿಲಾಯುಗದ ಸಮಾಧಿಗಳಿದ್ದುದರ ಬಗ್ಗೆ ಎಂ.ಜಿ. ನಾಗರಾಜ್ ಈಗಾಗಲೇ ಗುರುತಿಸಿದ್ದಾರೆ. ಸದ್ಯ ಯಾವುದೇ ಸಮಾಧಿಗಳು ಕಂಡುಬರದಿದ್ದರೂ ಸಮಾಧಿಗಳಿದ್ದ ಕುರುಹುಗಳು ಮಾತ್ರ ಜೀವಂತವಾಗಿವೆ.

ನನ್ನ ಕ್ಷೇತ್ರಕಾರ್ಯ ಕಾಲದಲ್ಲಿ ಮಣ್ಣಿನ ವಿಶಿಷ್ಟ ಕಲಾಕೃತಿಗಳು, ಕಲ್ಲಿನ ಆಯುಧಗಳು, ನೀರಿನ ಹೂಜಿಗಳು ದೊರೆತಿದ್ದು ತಜ್ಞರು ಅವುಗಳ ಕಾಲನಿರ್ಣಯ ಮಾಡಬೇಕಾಗಿದೆ. ಮೂರಿಂಚು ಅಗಲ, ಐದಿಂಚು ಉದ್ದ, ಅರ್ಧ ಇಂಚು ದಪ್ಪವಾಗಿರುವ ವಿಶೇಷ ಕಲ್ಲಿನ ಆಯುಧವೊಂದು ದೊರೆತಿದ್ದು, ಅದರ ಸುತ್ತಲಿನ ಅಲಗು ಮೊನಚಾಗಿರುವುದನ್ನು ಕಾಣಬಹುದು. ರಾಮನಗರ ತಾಲ್ಲೂಕಿನ ಕೂನಗಲ್ ಬೆಟ್ಟ ಅತ್ಯಂತ ಪುರಾತನ ನೆಲೆ ಎಂಬುದರಲ್ಲಿ ಯಾವುದೇ ಸಂಶಯವಿಲ್ಲ.



**ನೆಲಮಲೆ:** ರಾಮನಗರದಿಂದ ಕನಕಪುರಕ್ಕೆ ಹೋಗುವಾಗ ಹತ್ತು ಕಿ.ಮೀ. ಕ್ರಮಿಸಿದರೆ ಅವ್ವೇರಹಳ್ಳಿ ಬಸ್ ನಿಲ್ದಾಣ. ಅಲ್ಲಿಂದ ದಕ್ಷಿಣಕ್ಕೆ ಒಂದೆರಡು ಫರ್ಲಾಂಗ್ ನಡೆದರೆ ಅವ್ವೇರಹಳ್ಳಿ ಗ್ರಾಮ. ಮುಂದೆ ಒಂದೂವರೆ ಕಿ.ಮೀ. ಸಾಗಿದರೆ ಪುರಾಣ ಪ್ರಸಿದ್ಧವಾದ ರೇವಣಸಿದ್ಧೇಶ್ವರ ಬೆಟ್ಟಸಾಲುಗಳು. ಬೆಟ್ಟದ ಆಗ್ನೇಯ ದಿಕ್ಕಿನಲ್ಲಿರುವ ನೆಲಮಲೆ ಗ್ರಾಮಸ್ಥರ ಖಾಸಗಿ ಮಾವಿನ ತೋಟದಲ್ಲಿ ವೈಶಿಷ್ಟ್ಯಪೂರ್ಣವಾದ ಬೃಹತ್ ಶಿಲಾಯುಗಕ್ಕೆ ಸೇರಿದ ಐವತ್ತಕ್ಕೂ ಹೆಚ್ಚು ಬೃಹತ್ ಶಿಲಾ ಸಮಾಧಿಗಳು ಗೋಚರಿಸುತ್ತವೆ. ಹದಿನೈದು ಸಮಾಧಿಗಳ ಮೇಲಿನ ಟೋಪಿಕಲ್ಲು (*Cap Stone*) ಗಳು ಮಾತ್ರ ಇದ್ದು, ಉಳಿದಂತೆ ಯಾವ ಸಮಾಧಿಗಳ ಮೇಲಿನ ಟೋಪಿಕಲ್ಲುಗಳು ಇರುವುದಿಲ್ಲ. ಕೆಲವು ಸಮಾಧಿಗಳ ಹೊರಾವರಣದ ಕಲ್ಲುಗಳನ್ನು ತೆಗೆದು ಸಾಗುವಳಿ ಮಾಡುತ್ತಿದ್ದಾರೆ. ಮಧ್ಯದ ಶಿಲಾಕೋಣೆಗಳು ಮಾತ್ರ ಕಂಡುಬರುತ್ತವೆ. ಸಂಪೂರ್ಣವಾಗಿ ಕೆಂಪು ಗ್ರಾನೈಟ್ ಕಲ್ಲುಚಪ್ಪಡಿಗಳಿಂದ ಈ ಶಿಲಾಕೋಣೆಗಳು ನಿರ್ಮಾಣವಾಗಿವೆ.

ಗ್ರಾಮದೇವತೆಯ ಗುಡಿಯ ಸಮೀಪದ ರಸ್ತೆಯಿಂದ ಕೆಲವೇ ಫರ್ಲಾಂಗುಗಳ ದೂರದಲ್ಲಿ ಬೆಳೆದು ನಿಂತಿರುವ ಖಾಸಗಿ ಮಾವಿನ ತೋಪಿನ ನಡುವೆ ನಾಲ್ಕೈದು ಎಕರೆ ಪ್ರದೇಶದಲ್ಲಿ ಒಂದೊಂದು ಭಾಗದಲ್ಲಿ ಹದಿನೈದಕ್ಕೂ ಹೆಚ್ಚು ಸಮಾಧಿಗಳು ಸಮೂಹದಂತೆ ಕಂಡುಬರುತ್ತವೆ. ಹತ್ತಿಪ್ಪತ್ತು ಮೀಟರುಗಳ ದೂರದಲ್ಲಿ ಒಂದೊಂದು ಗುಂಪು, ಹೀಗೆ ನಾಲ್ಕು ಗುಂಪುಗಳಲ್ಲಿ ಸುಮಾರು ೫೦ಕ್ಕೂ ಹೆಚ್ಚು ಶಿಲಾಸಮಾಧಿಗಳಿವೆ.

ಸುಮಾರು ೩೫ ಅಡಿಗಳಷ್ಟು ಅಗಲವಾಗಿ ನೆಟ್ಟಿರುವ ಕಲ್ಲುಗಳ ಮಧ್ಯಭಾಗದಲ್ಲಿ ೧೨ ಅಡಿ ಉದ್ದ, ೯.೬ ಅಡಿ ಅಗಲ ಆಯತಾಕೃತಿಯ ತೆರೆದ ಸಮಾಧಿಯೊಂದು ಗಮನ ಸೆಳೆಯುತ್ತದೆ. ಒಬ್ಬ ಮನುಷ್ಯ ನಿಂತು ಕೈ ಮೇಲೆತ್ತಬಹುದಾದಷ್ಟು ಎತ್ತರವಿದ್ದು ವಿಶಾಲವಾದ ಒಳ ಆವರಣ ಇಲ್ಲಿದೆ. ಇದನ್ನು ತೆರೆದಾಗ ದೊಡ್ಡ ಮಡಿಕೆಗಳಲ್ಲಿ ಬೂದಿ ಸಿಕ್ಕಿರುವುದಾಗಿ ಸ್ಥಳೀಯರು ಹೇಳುತ್ತಾರೆ. ಇಲ್ಲಿನ ಮತ್ತೊಂದು ವಿಶೇಷವೆಂದರೆ ಒಂದಕ್ಕಿಂತ ಹೆಚ್ಚು ಶಿಲಾಪೆಟ್ಟಿಗೆಗಳು ಒಂದೇ ಸಮಾಧಿಯ ಆವರಣದಲ್ಲಿ ಕಂಡುಬರುವುದು. ಅದೂ ದೊಡ್ಡ ಪೆಟ್ಟಿಗೆಗೆ ಪೂರಕವಾಗಿ ಅದರ ದಕ್ಷಿಣ ಭಾಗದಲ್ಲಿ

ಒಂದೋ ಎರಡೋ ಕಿರು ಶಿಲಾಪೆಟ್ಟಿಗೆಗಳಿದ್ದು ಗಮನ ಸೆಳೆಯುತ್ತವೆ.

ಚೌಕ, ಆಯತಾಕಾರದ ಕಲ್ಲುಚಪ್ಪಡಿಗಳನ್ನು ಸೇರಿಸಿ ರೂಪಿಸಿದ ಸಮಾಧಿಕೋಣೆಗಳ ಪೂರ್ವಕ್ಕೆ ಒಂದರಿಂದ ಒಂದೂವರೆ ಅಡಿ ವ್ಯಾಸದ ವೃತ್ತಾಕಾರದ, ಅರೆವೃತ್ತಾಕಾರದ ರಂಧ್ರಗಳು ಕಂಡುಬರುತ್ತವೆ. ಕೆಲವು ಸಮಾಧಿಗಳಿಗೆ ರಂಧ್ರಗಳಿರುವುದಿಲ್ಲ. ಆರೂವರೆ ಅಡಿ ಎತ್ತರ, ಎಂಟು ಅಡಿ ಉದ್ದ, ಆರೂವರೆ ಅಡಿ ಅಗಲದ ಬಹುದೊಡ್ಡ ನಾಲ್ಕು ಬೃಹತ್ ಶಿಲಾಸಮಾಧಿಗಳು ಗಮನಸೆಳೆಯುತ್ತವೆ. ಮೇಲಿನ ಟೋಪಿ ಕಲ್ಲುಗಳು ಎಂಟು ಅಡಿ ಅಗಲ, ಹನ್ನೆರಡು ಅಡಿ ಉದ್ದ, ಹದಿನೈದು ಅಂಗುಲಕ್ಕೂ ಹೆಚ್ಚು ದಪ್ಪವಾಗಿವೆ. ಅಷ್ಟು ಎತ್ತರದ ಶಿಲಾಕೋಣೆಗಳ ಮೇಲೆ ದೈತ್ಯಾಕಾರದ ಏಕಶಿಲಾ ಟೋಪಿಕಲ್ಲನ್ನು ಎತ್ತಿಟ್ಟ ಬಗೆ ಬೆರಗುಗೊಳಿಸುತ್ತದೆ. ಬಹು ದೊಡ್ಡವೆಂದು ಗುರುತಿಸಲಾಗಿರುವ ಈ ಸಮಾಧಿಗಳ ಸುತ್ತ ಮೂವತ್ತೈದು-ನಲವತ್ತು ಅಂಡಿಗಳಿಗಿಂತಲೂ ಹೆಚ್ಚು ವ್ಯಾಸದ ವೃತ್ತದಲ್ಲಿ ನೆಟ್ಟ ಕಾಡುಕಲ್ಲುಗಳು ಅದರ ವಿಸ್ತಾರವನ್ನು ಸಾರಿ ಹೇಳುತ್ತವೆ.

ನಿಧಿಯ ಆಸೆಗಾಗಿ ಈ ಬೃಹತ್ ಸಮಾಧಿಗಳಲ್ಲಿ ಒಂದನ್ನು ಗ್ರಾಮಸ್ಥರು ತೆರೆದಿದ್ದು, ಅದರೊಳಗಿದ್ದ ಅವಶೇಷಗಳ ಮಹತ್ವ ತಿಳಿಯದೆ ನಾಶಗೊಳಿಸಿದ್ದಾರೆ. ಟೋಪಿಕಲ್ಲನ್ನು ಒಡೆದುಹಾಕುವ ಅವರ ಪ್ರಯತ್ನ ಫಲಿಸದೆ ಪೂರ್ವ ದಿಕ್ಕಿನ ರಂಧ್ರದ ನಿಲುಚಪ್ಪಡಿಯ ಒಂದು ಭಾಗವನ್ನು ಒಡೆದುಹಾಕಿ ಒಳಗಿನ ವಸ್ತುಗಳನ್ನು ಹೊರತೆಗೆದಿದ್ದಾರೆ. ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಮಡಕೆಯ ಚೂರುಗಳನ್ನು ಆರಿಸುವಾಗ ಚಿಕ್ಕ ಕುಡಿಕೆಯೊಂದು ದೊರೆತಿದೆ. ಅದರ ಮೇಲ್ಭಾಗದ ಅರ್ಧ ಕೆಂಪಗಿದ್ದು, ಕೆಳಗಿನ ಅರ್ಧಭಾಗ ಪೂರ್ಣ ಕಪ್ಪಾಗಿದೆ. ದೊಡ್ಡ ಮಡಕೆಯ ಚೂರುಗಳನ್ನು ಸಂಗ್ರಹಿಸಲಾಗಿದೆ. ಉಳಿದಂತೆ ಐದು, ನಾಲ್ಕು, ಮೂರು ಅಡಿ ಅಗಲ, ಆರು, ಐದು ನಾಲ್ಕು ಅಡಿಗಳ ಅನೇಕ ಸಮಾಧಿಗಳು ಗೋಚರಿಸುತ್ತವೆ. ನೆಲಮಲೆ ಗ್ರಾಮಕ್ಕೆ ಹೊಂದಿಕೊಂಡಂತೆಯೂ ಅನೇಕ ಬೃಹತ್ ಶಿಲಾಸಮಾಧಿಗಳ ಕುರುಹುಗಳು ಕಂಡುಬರುತ್ತದೆ. ಕ್ರಿ. ಪೂ. ೮ನೇ ಶತಮಾನದಿಂದ ಕ್ರಿ. ಶ. ೩ನೇ ಶತಮಾನದ ಅವಧಿಯಲ್ಲಿ ಈ ಬಗೆಯ ಶಿಲಾಸಮಾಧಿಗಳು ನಿರ್ಮಾಣ ಆಗುತ್ತಿದ್ದುದರ ಬಗೆಗೆ ಇತಿಹಾಸ ಸಂಶೋಧಕರು ನೀಡಿರುವ ವಿವರಗಳನ್ನು ಸಮೀಕರಿಸಿದಾಗ ಆ ಎಲ್ಲಾ ಲಕ್ಷಣಗಳೂ ಈ ಶಿಲಾಸಮಾಧಿಗಳನ್ನು ಹೋಲುತ್ತಿರುವುದನ್ನು ಗಮನಿಸಬಹುದು.

ಸಮಾಧಿ ಸ್ಥಳಗಳಿರುವಲ್ಲೆಲ್ಲಾ ಕಹಿಬೇವಿನ ಮರಗಳಿದ್ದು, ಈ ಬಯಲಿನಾದ್ಯಂತ ಅವು ಹೆಚ್ಚಾಗಿ ಕಂಡುಬರುತ್ತಿರುವುದು ಇವೆರಡರ ನಡುವೆ ಯಾವುದೋ ಅನ್ಯೋನ್ಯ ಸಂಬಂಧವಿರಬಹುದೆನಿಸುತ್ತದೆ.

ನೆಲಮಲೆ ಊರಿನ ದಕ್ಷಿಣ ಭಾಗದ ಹೊರವಲಯದಲ್ಲಿನ ಸಂದೀಶ್ ಅವರ ಮನೆಯ ಪಶ್ಚಿಮಕ್ಕೆ ವೀರಗಲ್ಲೊಂದನ್ನು ಕಾಣಬಹುದು. ಕಲ್ಲಿನ ಮಂಟಪದಂತಿರುವ ಆ ಸ್ಥಳವನ್ನು ಪಾಂಡವರ ಗುಡಿಯೆಂದು ಕರೆಯುತ್ತಾರೆ. ಭೂಮಿಯಿಂದ ಸುಮಾರು ನಾಲ್ಕೂವರೆ ಅಡಿ ಎತ್ತರವಿರಬಹುದು. ಮಂಟಪದ ನಾಲ್ಕೂ ದಿಕ್ಕುಗಳಲ್ಲೂ ಕಲ್ಲಿನ ಚಪ್ಪಡಿಗಳನ್ನು ನಿಲ್ಲಿಸಿದ್ದು, ಮೇಲ್ಭಾಗವು ದೊಡ್ಡ ಚಪ್ಪಡಿಯೊಂದರಿಂದ ಮುಚ್ಚಲ್ಪಟ್ಟಿದೆ. ಪೂರ್ವಭಾಗದ ಚಪ್ಪಡಿಯು ತೆರೆದುಕೊಂಡಂತೆ ಕಾಣುತ್ತದೆ. ಅಂದರೆ ಹೆಚ್ಚು ಭಾಗ ಭೂಮಿಯ ಆಳಕ್ಕಿಳಿದು ಒಳಭಾಗವನ್ನು ವೀಕ್ಷಿಸಲು ಅನುಕೂಲವಾಗುವಂತಿದೆ.

ಪೂರ್ವಾಭಿಮುಖವಾಗಿರುವ ಚಪ್ಪಡಿಯ ಮೇಲೆ ಮೂರು ಹಂತಗಳಲ್ಲಿ ಚಿತ್ರಗಳನ್ನು ಕಾಣಬಹುದು. ಕೆಳಭಾಗದಲ್ಲಿ ಮೂವರು ವೀರರು ಗುರಾಣಿ ಮತ್ತು ಬಿಲ್ಲು ಬಾಣಗಳಿಂದ ಬಿಲ್ಲುಹಿಡಿದ ವೈರಿಯೊಬ್ಬನೊಡನೆ ಸೆಣಸುವ ಚಿತ್ರವಿದೆ. ಎರಡನೇ ಹಂತದಲ್ಲಿ ಅಪ್ಸರೆಯರೊಡಗೂಡಿ ಮೂವರು ವೀರರು ಸ್ವರ್ಗಕ್ಕೆ ಪಯಣಿಸುವ ಚಿತ್ರ. ಮೂರನೆಯ ಹಂತದಲ್ಲಿ ಬಲಪಾರ್ಶ್ವಕ್ಕೆ ಶಿವಲಿಂಗ, ಪಕ್ಕದಲ್ಲಿ ನಂದಿ, ನಂತರ ಮೂವರು ವೀರರ ಚಿತ್ರಗಳನ್ನು ಕಾಣಬಹುದು. ಇನ್ನು ದಕ್ಷಿಣಾಭಿಮುಖವಾಗಿರುವ ಚಪ್ಪಡಿಯಲ್ಲಿ ಅಸ್ಪಷ್ಟ ಅಥವಾ ಅರ್ಧ ಕೆತ್ತಿದ ಚಿತ್ರಗಳನ್ನು ಕಾಣಬಹುದು. ಉತ್ತರಾಭಿಮುಖವಾಗಿರುವ ಚಪ್ಪಡಿಯಲ್ಲಿ ತ್ರಿಕೋನಾಕಾರದ ಸೊಡರುಗೂಡೊಂದನ್ನು ನಿರ್ಮಿಸಿದ್ದಾರೆ. ಶಿಲಾ ಸಮಾಧಿಗಳಿಂದ ಕೇವಲ ಒಂದೂವರೆ ಕಿ.ಮೀ. ಅಂತರದಲ್ಲಿರುವ ತೆಂಗಿನಕಲ್ಲು ಬೆಟ್ಟದಲ್ಲಿ ತೀರಾ ಶಿಥಿಲಾವಸ್ಥೆಯಲ್ಲಿರುವ ಕೋಟೆಯಲ್ಲಿ ಕೂಡ ಪ್ರಾಚೀನ ಅವಶೇಷಗಳು ಹೇರಳವಾಗಿವೆ.

**ಕೋಳಿಕಲ್ಲುಬೆಟ್ಟ:** ೧೦೦ಕ್ಕೂ ಹೆಚ್ಚಿನ ಪ್ರಾಚೀನ ಶಿಲಾ ಸಮಾಧಿಗಳ ಮತ್ತೊಂದು ನೆಲೆ ಕೂಟಗಲ್ ಬಳಿಯ ಕೋಳಿಕಲ್ಲು ಬೆಟ್ಟದಲ್ಲಿದೆ. ರಾಮನಗರದ ಪಶ್ಚಿಮಕ್ಕೆ ಹೊರಟು, ಚನ್ನೇನಹಳ್ಳಿ, ಕುರುಬರಹಳ್ಳಿ, ಪೂಜಾರಿದೊಡ್ಡಿಗಳನ್ನು ಹಾಯ್ದು ಎಂಟು ಕಿ.ಮೀ. ಕ್ರಮಿಸಿದರೆ ಶ್ಯಾನುಭೋಗನಹಳ್ಳಿ ಗ್ರಾಮ. ಅಲ್ಲಿಂದ ಉತ್ತರದ ಕಡೆ ತಿರುಗಿ ಹೊಸೂರಿನ ಮೂಲಕ ಮತ್ತೆ ನಾಲ್ಕು ಕಿ.ಮೀ. ಸಾಗಿದರೆ ಕೂಟಗಲ್ ಗ್ರಾಮವಿದೆ. ಕೂಡುಗಲ್ಲುಗಳ ಬೆಟ್ಟದ ತಪ್ಪಲಿನಲ್ಲಿನ ಗ್ರಾಮವೆನಿಸಿದೆ.



ಕೋಳಿಕಲ್ಲುಬೆಟ್ಟದ ಆಸುಪಾಸಿನಲ್ಲಿರುವ ಸಾಗುವಳಿ ಜಮೀನಿನಲ್ಲಿಯೂ ಸಮಾಧಿಯ ಟೋಪಿಕಲ್ಲು ಇರುವಷ್ಟು ಭಾಗದಲ್ಲಿ ಮಾತ್ರ ಅನೇಕ ಸಮಾಧಿಗಳನ್ನು ಕಾಣಬಹುದಾಗಿದೆ. ಕೋಳಿಕಲ್ಲುಬೆಟ್ಟದ ಕೆಳಭಾಗದಲ್ಲಿ ಸುಮಾರು ಒಂದು ಕಿ.ಮೀ. ದೂರದ ಹಾಸುಬಂಡೆಯ ಮೇಲಿರುವ ಇರುಳಿಗರ ಕಲ್ಲುಸೇವೆಯ ಸಮಾಧಿಯು ಇತ್ತೀಚಿನ ರಚನೆಯಾಗಿದ್ದು, ಶಿಲಾಸಮಾಧಿ ಪರಂಪರೆಯ ಕುರುಹಾಗಿದೆ. ಕಲ್ಲುಗುಡ್ಡೆಯ ಒಳಭಾಗದಲ್ಲಿ ಮಾನವ ಮೂಳೆಗಳನ್ನು ಕಾಣಬಹುದಾಗಿದೆ. ಐದು ವರ್ಷಗಳ ಹಿಂದೆಯಷ್ಟೇ ಈ ಸಮಾಧಿ ನಿರ್ಮಾಣವಾಗಿದೆಯೆಂದು ಸ್ಥಳೀಯರ ಹೇಳಿಕೆ.

ಈ ಎರಡೂ ಸ್ಥಳಗಳಲ್ಲಿಯೂ ಕೂಡ ಸಮಾಧಿಗಳು ಸುಮಾರು ಒಂಬತ್ತು ಅಡಿ ಉದ್ದ, ಆರೂವರೆ ಅಡಿಗಿಂತಲೂ ಹೆಚ್ಚು ಅಗಲವಾಗಿವೆ. ಹನ್ನೆರಡು ಅಡಿ ಉದ್ದ ಮತ್ತು ಒಂಬತ್ತು ಅಡಿ ಅಗಲದ ಬಹುದೊಡ್ಡ ಸಮಾಧಿಯು ರೇವಣಸಿದ್ಧೇಶ್ವರ ಬೆಟ್ಟದ ಖಾಸಗಿ ಮಾವಿನ ತೋಟದಲ್ಲಿ ಕಂಡುಬಂದಿದೆ. ನಿಧಿಯಾಸೆಗೆ ತೆರೆದಿರುವ ಆ ಸಮಾಧಿಯಲ್ಲಿ ಕಂದು ಮತ್ತು ಕಪ್ಪು ಬಣ್ಣದ ಕುಡಿಕೆ ಮತ್ತು ಗೆರೆಗಳುಳ್ಳ ಅನೇಕ ಮಡಿಕೆಯ ಚೂರುಗಳು ಲಭ್ಯವಾಗಿವೆ. ಕೂಟಗಲ್ ಬಳಿಯ ಕೋಳಿಕಲ್ಲು ಬೆಟ್ಟದ ಮೇಲೆ ಪತ್ತೆಯಾಗಿರುವ ಶಿಲಾಸಮಾಧಿಗಳಲ್ಲಿ ಅಂಥ ಅವಶೇಷಗಳು ದೊರೆತಿರುವುದಿಲ್ಲ. ಕಾರಣ ಹೆಚ್ಚಿನ ಪ್ರಮಾಣದ ಸಮಾಧಿಗಳ ಮೇಲ್ಹಾಸಿನ ಕಲ್ಲುಗಳು (Cap Stone) ಹಾಗೆಯೇ ಇರುವುದು. ಉತ್ಖನನ ಕಾರ್ಯ ನಡೆಸಿದರೆ ಅಲ್ಲಿಯೂ ಅನೇಕ ಅವಶೇಷಗಳು ದೊರೆಯುವ ಸಾಧ್ಯತೆಗಳಿವೆ.

ಕೋಳಿಕಲ್ಲುಬೆಟ್ಟದ ಮೇಲ್ಭಾಗದ ಹೊಲವೊಂದರಲ್ಲಿರುವ ಸಮಾಧಿಗಳನ್ನು ಸ್ಥಳೀಯರು ಬುರ್ಜು, ಪಾಂಡವರ ಗುಡಿಗಳೆಂದು ಕರೆಯುತ್ತಾರೆ. ಹಿಂದೆ ಬೆಂಕಿ ಮಳೆ ಬರುತ್ತಿತ್ತಂತೆ. ಅದರಿಂದ ರಕ್ಷಣೆ ಪಡೆಯಲು ಈ ಬಗೆಯ ಕಲ್ಲು ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದರೆಂದೂ ಕೆಲವು ವಕ್ತೃಗಳು ಹೇಳುತ್ತಾರೆ. ಸುತ್ತಲೂ ಕಲ್ಲು ಚಪ್ಪಡಿಗಳಿಂದ ನಿರ್ಮಾಣವಾಗಿದ್ದು, ಪೂರ್ವದ ನಿಲು ಚಪ್ಪಡಿಯಲ್ಲಿ ಎರಡರಿಂದ ಮೂರು ಅಡಿ ವ್ಯಾಸದ ರಂಧ್ರಗಳನ್ನು ಕಾಣಬಹುದು. ಆರೇಳು ಮೀಟರ್‌ಗಳ ಅಂತರದಲ್ಲಿ ಈ ಸಮಾಧಿಗಳು ನಿರ್ಮಾಣವಾಗಿವೆ. ಹೆಚ್ಚಿನ ಟೋಪಿಕಲ್ಲುಗಳು ಹಾಗೆಯೇ ಇವೆ. ಕೆಲವನ್ನು ಒಡೆದು ಹಾಕಿದ್ದಾರೆ. ಸಾಗುವಳಿಗೆಂದು ಬಳಸುವಲ್ಲಿ ನಿಧಿಯ ಆಸೆಯಿಂದ ಅನೇಕ ಸಮಾಧಿಗಳು ಬಯಲುಗೊಂಡಿವೆ.

ಹಾಸುಬಂಡೆಯ ಅನೇಕ ಸಮಾಧಿಗಳಿಗೆ ಆವರಣದ ಗುರುತೂ ಕಾಣುವುದಿಲ್ಲ. ಅಲ್ಲಿನ ಸಮಾಧಿಗಳ ಒಳಭಾಗದಲ್ಲಿ ದನಗಾಹಿಗಳು ಮಳೆಯಿಂದ ರಕ್ಷಣೆ ಪಡೆಯುತ್ತಿದ್ದುದರ ಬಗೆಗೆ ತಿಳಿಸುತ್ತಾರೆ. ವಿವಿಧ ಅಳತೆಯ ಸಮಾಧಿಗಳು ಬಡವ-ಶ್ರೀಮಂತ, ಹೆಣ್ಣು-ಗಂಡು, ಹಿರಿಯರು-ಮಕ್ಕಳು ಇಂಥ ಹಿನ್ನೆಲೆಯಲ್ಲಿ ನಿರ್ಮಾಣವಾಗಿರಬಹುದೇ ಎಂಬ ಅನುಮಾನ ಮೂಡುತ್ತದೆ. ಅನೇಕ ಸಮಾಧಿಗಳ ಸುತ್ತಲಿನ ಆವರಣದ ಕಲ್ಲುಗಳನ್ನು ಹೊಲದ ಬದುವಿಗೆ ಬಳಸಿಕೊಂಡಿದ್ದಾರೆ.

ಮಾಗಡಿ ತಾಲ್ಲೂಕಿನ ಹೂಜಿಗಲ್ಲು, ಕಲ್ಯ, ಸಾವನದುರ್ಗದ ಇಟ್ಟಿಗೆ ಬಯಲು, ಎಲೆಕ್ಯಾತನಹಳ್ಳಿ, ಮೈಲನಹಳ್ಳಿ, ಅರಳೇಮರದ ದೊಡ್ಡಿ, ರೈಲ್ವೆಗೊಲ್ಲಹಳ್ಳಿ, ಸೋಲೂರು ಹೋಬಳಿಯ ಕಲ್ಯಾಣಪುರ, ಬಿಲ್ಲನಕೋಟೆ ಬಳಿಯ ಆಲದಹಳ್ಳಿ, ಕನಕಪುರ ತಾಲ್ಲೂಕಿನ ಗುತ್ತಲುಹುಣಸೆ, ಸಾತನೂರಿನ ಸಂಬೇಗೌಡನ ದೊಡ್ಡಿ, ಗದ್ದೆಮಡಿನೆಕ್ಕಲು, ಬಂಡೆಗುಡಿ ತಿಗಳರಹೊಸಳ್ಳಿ, ಮರಳೆಗವಿಮಠ, ಮುನಿನಗರ, ಕುಪ್ಪೆದೊಡ್ಡಿ, ಹೊಸಕೋಟೆ ತಾಲ್ಲೂಕಿನ ಜಡಿಗೇನಹಳ್ಳಿ, ಚನ್ನಪಟ್ಟಣ ತಾಲ್ಲೂಕಿನ ಬನವಳ್ಳಿ, ಬೆಂಗಳೂರು ಉತ್ತರ ತಾಲ್ಲೂಕಿನ ಚಿಕ್ಕಜಾಲ, ಮಹಿಮೆ ರಂಗನಬೆಟ್ಟ, ರಾಮನಗರ ತಾಲ್ಲೂಕಿನ ಬಸವನಪುರ, ಗಂಗರಾರ ಹಳ್ಳಿ, ಕೆಂಜಿಗರಹಳ್ಳಿ, ವಡೇರಹಳ್ಳಿ, ಮುಂತಾದೆಡೆಗಳಲ್ಲಿ ಇಂಥ ಬೃಹತ್ ಶಿಲಾಯುಗದ ನೆಲೆಗಳು ಪತ್ತೆಯಾಗಿವೆ.

**ಕಾಲನಿರ್ಣಯ:** ದಕ್ಷಿಣ ಭಾರತದಲ್ಲಿ ಕಬ್ಬಿಣಯುಗ ಪ್ರಾರಂಭವಾದದ್ದು ಕ್ರಿ.ಪೂ. ೧೧೦೦ರ ಸುಮಾರಿಗೆ. ತುಳುನಾಡು ಮತ್ತು ಕರ್ನಾಟಕದ ಇತರ ಭಾಗಗಳಲ್ಲಿ ಕಂಡುಬರುವ ಬೃಹತ್ ಶಿಲಾಯುಗದ ಸಮಾಧಿ ರಚನೆಗಳ ತುಲನಾತ್ಮಕ ವಿಶ್ಲೇಷಣೆಯಿಂದ ಇವುಗಳ ಕಾಲಮಾನವನ್ನು ಕುರಿತಂತೆ ಕೆಲವು ಸಾಧ್ಯತೆಗಳನ್ನು ಸೂಚಿಸಬಹುದು. ಇಲ್ಲಿನ ಬೃಹತ್ ಶಿಲಾಯುಗದ ಶಿಲಾಕೋಣೆ ಸಮಾಧಿಗಳು ಐಹೊಳೆ ಮತ್ತು ರಾಜನಕೊಳೂರು ಪ್ರದೇಶದಲ್ಲಿ ಗುರುತಿಸಲಾದ ಇಂಥದೇ ಸಮಾಧಿ ರಚನೆಗಳನ್ನು ಹೋಲುತ್ತವೆ. ಡಾ|| ಸುಂದರ ಅವರ ಅಭಿಪ್ರಾಯದಂತೆ ಆ ಪ್ರದೇಶದ ಶಿಲಾಕೋಣೆ ಸಮಾಧಿಗಳು ಒಂದೇ ಕಾಲಕ್ಕನ್ವಯಿಸು ವಂಥವುಗಳಾಗಿದ್ದು ಇವುಗಳ ಕಾಲವನ್ನು ಕ್ರಿ.ಪೂ. ೮೦೦ ರಿಂದ ಕ್ರಿ.ಶ. ೬೦೦ ಎಂದು ನಿರ್ಧರಿಸಬಹುದಾಗಿದೆ. ರಾಮನಗರ ತಾಲ್ಲೂಕಿನಲ್ಲಿ ಗುರುತಿಸಲಾದ ಮೇಲ್ಭಾಗದಲ್ಲಿ ವೃತ್ತಾಕಾರವಾಗಿ ರಂಧ್ರವನ್ನು ಹೊಂದಿರುವ ಅರ್ಧ ಗೋಲಾಕಾರದಲ್ಲಿ ಕೆತ್ತಿರುವ ಗುಹಾ ಸಮಾಧಿಗಳು ಗುಹಾಸಮಾಧಿಯ ರಚನೆಯ ವಿಕಾಸದ ಕೊನೆಯ ಹಂತಕ್ಕನ್ವಯಿಸುತ್ತವೆಂಬ ವಿದ್ವಾಂಸರ ಅಭಿಪ್ರಾಯಕ್ಕೆ ಸಮೀಪವಿವೆ. ಕೋಳಿಕಲ್ಲುಬೆಟ್ಟದ ಮೇಲೆ ಕಂಡುಬರುವ ಶಿಲಾಸಮಾಧಿಗಳು ಉತ್ತರ ಕರ್ನಾಟಕದ ಐಹೊಳೆ, ಹಗರಟಗಿ, ರಾಜನಕೊಳೂರು, ಅಕ್ಕರಗಲ್ ಮತ್ತು ತುಳುನಾಡಿನಲ್ಲಿ ಕಂಡುಬರುವಂತೆ ವಿಶಾಲವಾದ ಬಂಡೆಗಲ್ಲಿನ ಮೇಲೆ ನಿರ್ಮಾಣವಾಗಿರುವುದು ವಿಶೇಷ.

**ಬಿಳಿಗುಂಬ, ಬಸವನಕಲ್ಲುಬೆಟ್ಟ:** ರಾಮನಗರದ ಪಶ್ಚಿಮ ಹೊರವಲಯದಲ್ಲಿ ಉತ್ತರಕ್ಕೆ ತಿರುಗಿ ಒಂದೆರಡು ಕಿ.ಮೀ.

ಕ್ರಮಿಸಿದರೆ ರಸ್ತೆಯ ಪೂರ್ವಕ್ಕೆ ಬೋಳಪ್ಪನಹಳ್ಳಿ ಕೆರೆ. ಅದಕ್ಕೆದುರಾಗಿ ಉತ್ತರಕ್ಕೆ ಬಡ್ಲನಅರೆ, ಹೆಣೆನಕಲ್ಲುಗಳೆಂಬ ಗುಡ್ಡೆಗಳು. ಪಶ್ಚಿಮಕ್ಕೆ ಚೆಲುವರಾಯಸ್ವಾಮಿಬೆಟ್ಟ. ಮುಂದೆ ಬೊಪ್ಪಿಗುಡ್ಡದ ಬೋರೆ, ದಂಡುಮಯ್ಯನ ಬೋರ, ಕೇಶವಪುರ ಗಳಲ್ಲಿ ದಾಟಿ ನಾಲ್ಕೈದು ಕಿ.ಮೀ. ದೂರ ಕ್ರಮಿಸಿದರೆ ಬಿಳಗುಂಬ ಗ್ರಾಮ. ಬಿಳಗುಂಬದ ಉತ್ತರಕ್ಕೆ ಕುರುಬರ ಹಳ್ಳಿಯ ದಾರಿಯಲ್ಲಿ ಊರಿಗೇ ಹೊಂದಿಕೊಂಡಂತೆ ೭೫ ವರ್ಷಗಳಿಗೂ ಹಳೆಯದಾದ ಮಾದರಿ ಪ್ರಾಥಮಿಕ ಪಾಠಶಾಲೆಯ ಆವರಣ ಹಾಗೂ ಅದರ ಸುತ್ತ ಮುತ್ತ ಹತ್ತಾರು ಸಮಾಧಿಗಳ ಅವಶೇಷಗಳಿವೆ. ಒಕ್ಕಲುತನಕ್ಕೆಂದು ಸಮಾಧಿಗಳ ಆವರಣದ ಕಲ್ಲುಗಳನ್ನು ತೆಗೆದು ಹೊಲದ ಬದುಗಳಿಗೆ ಬಳಸಿದ್ದಾರೆ. ಹಲವು ಸಮಾಧಿಗಳ ಟೋಪಿ ಕಲ್ಲುಗಳು ಇಲ್ಲವಾಗಿವೆ. ಮಧ್ಯದ ಶಿಲಾಕೋಣೆಗಳು ಮಾತ್ರ ಕೆಲವೆಡೆ ಕಾಣಸಿಗುತ್ತವೆ. ಒಂದೆರಡು ಟೋಪಿಕಲ್ಲುಗಳಿರುವ ಶಿಲಾಕೋಣೆಗಳು ಮಾತ್ರ ಉಳಿದಿದೆ. ಊರಿಗೆ ಹೊಂದಿಕೊಂಡಂತೆಯೇ ಈ ಸಮಾಧಿಗಳು ಕಂಡುಬರುತ್ತವೆ.

**ಬೊಮ್ಮಿಗುಡಿ ಬೈಲು:** ಬಿಳಗುಂಬದ ಪಶ್ಚಿಮಕ್ಕೆ ಚನ್ನಪ್ಪನ ಕೆರೆ ಒಣಿಯ ಮೂಲಕ ಒಂದೆರಡು ಫರ್ಲಾಂಗ್ ನಡೆದು ಚನ್ನಪ್ಪನ ಕೆರೆ ಏರಿಯ ಮೇಲೆ ಮತ್ತೆ ಅರ್ಧ ಕಿ.ಮೀ. ನಡೆದರೆ ಮಾವಿನ ತೋಟವೊಂದರ ಬದುವಿನ ಮೇಲೆ ಮಾಸ್ತಿಕಲ್ಲೊಂದು ಕಾಣುತ್ತದೆ. ಕಪ್ಪು ಗ್ರಾನೈಟ್ ಕಲ್ಲು, ಭೂಮಿಯಿಂದ ನಾಲ್ಕೂ-ನಾಲ್ಕೂವರೆ ಅಡಿಗಳಷ್ಟು ಎತ್ತರ, ಎರಡು ಅಡಿ ಅಗಲ, ಅರ್ಧ ಅಡಿಯಷ್ಟು ದಪ್ಪವಾಗಿದೆ. ಪೂರ್ವಾಭಿಮುಖವಾಗಿ ಕೆತ್ತಿದ ಹೆಣ್ಣೊಬ್ಬಳ ಚಿತ್ರ, ಎಡಪಾರ್ಶ್ವದಲ್ಲಿ ಶಿವಲಿಂಗ ಮುದ್ರೆ. ಊರ ಜನ ಅದನ್ನು ಬೊಮ್ಮಮ್ಮನ ಗುಡಿ ಎಂತಲೂ, ಆ ಬಯಲನ್ನು ಗೊ(ಬೊ)ಮ್ಮಿ ಗುಡಿ ಬೈಲು ಎಂತಲೂ ಕರೆಯುತ್ತಾರೆ.

**ಮಾಟ್ಲಾಡಿಬೈಲು:** ಅದೇ ಮಾವಿನ ತೋಟದಲ್ಲಿ ಮುಂದೆ ಸಾಗಿದರೆ ಮಾಟ್ಲಾಡಿಬೈಲು ಸಿಗುತ್ತದೆ. ಮಾಟಗಾರರನ್ನು ಕರೆಸಿ,ಆ ಬಯಲಿನ ಸಮಾಧಿಯಲ್ಲಿ ನಿಧಿಯಿದೆ ಎಂದು ತೆಗೆಸಬೇಕೆಂಬ ಪ್ರಯತ್ನ ಸಾಗದೆ, ಮಾಟಗಾರರು ಹೆದರಿ ಓಡಿಹೋದ್ದರಿಂದ ಅದಕ್ಕೆ ಮಾಟ್ಲಾಡಿ ಬೈಲು ಎಂಬ ಹೆಸರು ಬಂದಿದೆಯೆಂಬ ಮಾಹಿತಿ ದೊರೆಯಿತು. ಮಾಟ್ಲಾಡಿ ಬಯಲಿನಲ್ಲಿರುವ ಶಿಲಾಸಮಾಧಿ ವಿಶಿಷ್ಟವಾಗಿದೆ. ಸಮಾಧಿಯ ಮಧ್ಯಭಾಗದಲ್ಲಿ ಒಂದೂ ಮುಕ್ಕಾಲು ಅಡಿ ಗಲ ಚೌಕಾಕಾರದ ಕಲ್ಲೊಂದು ಕಂಡುಬರುತ್ತದೆ. ಕಲ್ಲಿನ ಉತ್ತರಕ್ಕೆ ಆಂಜನೇಯನ ಉಬ್ಬುಶಿಲ್ಪ. ಎತ್ತರಕ್ಕೇರಿದಂತೆ ವೃತ್ತಾಕಾರವಾಗಿರುವ ಕಲ್ಲಿನ ಪೂರ್ವ ಪಾರ್ಶ್ವ ದಲ್ಲಿ ಚಕ್ರದ ಚಿತ್ರವಿದೆ.

**ಶಿಲಾ ಸಮಾಧಿ:** ಮಾಟ್ಲಾಡಿ ಬಯಲಿನಲ್ಲಿ ಗಂಭೀರವಾಗಿ ಗಮನ ಸೆಳೆಯುವ ಭಾಗವೆಂದರೆ ಶಿಲಾಸಮಾಧಿ. ಶಿಲಾಕೋಣೆ ಎಂಟು ಅಡಿ ಉದ್ದ, ಆರೂವರೆ ಅಡಿ ಅಗಲವಾಗಿದೆ. ಸುತ್ತಲೂ ಇದ್ದ ಆವರಣದ ಕಲ್ಲುಗಳು ಇಲ್ಲವಾಗಿವೆ. ಟೋಪಿಕಲ್ಲಿನ ಪಶ್ಚಿಮದ ಒಂದು ಭಾಗ ಒಡೆದು ಕೆಳಗುರುಳಿದೆ. ಪೂರ್ವದ ಭಾಗ ಹಾಗೆಯೇ ಇದೆ. ವಿಶೇಷವೆಂದರೆ ಮಧ್ಯಭಾಗದಲ್ಲಿರುವ ಗರುಡಗಂಬ, ಟೋಪಿಕಲ್ಲಿನ ಮಧ್ಯದಲ್ಲಿ ಎರಡು ಅಡಿಯಷ್ಟು ಚೌಕಾಕಾರವಾದ ಕುಳಿಯಲ್ಲಿ ಈ ಗರುಡಗಂಬವನ್ನು ನಿಲ್ಲಿಸಲಾಗಿದೆ. ಭೂಮಿಯಿಂದ ಸುಮಾರು ಐದು ಅಡಿ ಎತ್ತರ ಸಮಾಧಿಯಿದ್ದರೆ, ಸಮಾಧಿಯ ಮೇಲೆ ಹತ್ತು ಅಡಿಗೂ ಎತ್ತರವಾಗಿ ಗರುಡಗಂಬವಿದೆ. ನಾಲ್ಕು ಅಡಿ ಎತ್ತರದವರೆಗೆ ಚೌಕಾಕಾರವಾಗಿದ್ದರೆ ಉಳಿದ ಮೇಲುಭಾಗ ದುಂಡಾಗಿದೆ. ಚೌಕಾಕಾರದ ಕಲ್ಲಿನ ದಕ್ಷಿಣಕ್ಕೆ ಆರು ಸಾಲು ಶಿಲಾಶಾಸನವಿದೆ. ಪಶ್ಚಿಮಕ್ಕೆ ಆಂಜನೇಯನ ಉಬ್ಬುಶಿಲ್ಪವಿದೆ. ಪೂರ್ವಕ್ಕೆ ಶಂಖುವಿನ ಗುರುತು ಅಸ್ಪಷ್ಟವಾಗಿ ಕಾಣುತ್ತದೆ. ಕಂಬದ ನೆತ್ತಿಯ ಮೇಲಿದ್ದ ಕಲಾಕೃತಿಯ ಕಲ್ಲು ಸಮಾಧಿಯ ಪಕ್ಕದಲ್ಲಿ ಬಿದ್ದಿದೆ. ಚೌಕಾಕಾರವಾಗಿರುವ ಭಾಗದ ದಕ್ಷಿಣಭಾಗ ಖಾಲಿಯಿದೆ. ಶಾಸನದ ಪಠ್ಯ ಎಫಿಗ್ರಾಫಿಯಾ ಕರ್ನಾಟಿಕಾದಲ್ಲಿ ದಾಖಲಾಗಿರುವುದಿಲ್ಲ. ಶಾಸನದ ಪಠ್ಯವನ್ನು ಓದಿದರೆ ಇತಿಹಾಸದ ಮೇಲೆ ಹೊಸಬೆಳಕು ಬೀರುವ ಅವಕಾಶಗಳಿವೆ. ಒಂದೂವರೆ ಅಡಿ ಅಗಲ ಮತ್ತು ಮೂರು ಅಡಿಗಳಷ್ಟು ಆಯತಾಕಾರದ ಭಾಗದಲ್ಲಿ ಈ ಶಾಸನವನ್ನು ಕಾಣಬಹುದಾಗಿದೆ. ಡಾ. ದೇವರ ಕೊಂಡಾರೆಡ್ಡಿ, ಡಾ. ಕೆ. ಆರ್. ಗಣೇಶ್ ಮತ್ತು ಗೆಳೆಯ ಬಿ.ಆರ್. ಸತ್ಯನಾರಾಯಣ ಅವರ ಸಹಾಯದಿಂದ ಓದಿಸುವ ಪ್ರಯತ್ನ ನಡೆಸಲಾಗಿದ್ದು, ಅದರ ಪಠ್ಯ ಕೆಳಗಿನಂತಿದೆ.

**ಶಾಸನ ಪಾಠ**

೧ ಆನಂದ ಸಂವತ್ಸರ
೨ ದ ವೈಷಾಕ.......
೩ ಸು ೫ ಹೆ.... ಬೊಮ್ಮ
೪ ಣಂನ ಮಕ್ಕಳು ವೀರ
೫ ಣಗಳು ವಿರುಪಾಕ್ಷಿ...
೬ ......... ಧರ್ಮವೂ...

ಗರುಡುಗಂಬಂದ ಶಿರೋಭಾಗದಲ್ಲಿದ್ದ ಕಲ್ಲು ಉರುಳಿ ಬಿದ್ದಿದೆ. ದಕ್ಷಿಣ ಮತ್ತು ಪಶ್ಚಿಮದಲ್ಲಿ ಗರುಡಗಂಬಕ್ಕೆ ಹೊಂದಿಕೊಂಡಂತೆ ಕಹಿಬೇವಿನ ಮರಗಳು ಬೆಳೆದು ಕೊಂಡಿವೆ. ಅಕ್ಕಪಕ್ಕದಲ್ಲಿ ಆಲೇಮರ, ಅಂಕೋಲೆ ಮರಗಳೂ ಕೂಡ ಬೆಳೆದಿವೆ. ಸಮಾಧಿಯ ದಕ್ಷಿಣಕ್ಕೆ ಒಂದು ಅಡಿ ಅಗಲದ ನಾಲ್ಕಿಂಚು ದಪ್ಪ, ಐದು ಅಡಿ ಉದ್ದದ ಕಪ್ಪುಚಪ್ಪಡಿ ಕಲ್ಲಿನ ಮೇಲೆ ಬೃಂದಾವನದ ಉಬ್ಬುಶಿಲ್ಪ ಅನಾಥವಾಗಿ ಬಿದ್ದಿದೆ. ಅದರ ಹಿಂಭಾಗ ಒರಟಾಗಿದೆ. ಆಜೂ ಬಾಜೂ ಸ್ವಲ್ಪ ದೂರದಲ್ಲಿ ಕೆಲವು ವೀರಗಲ್ಲುಗಳು, ವೀರಮಾಸ್ತಿ ಕಲ್ಲುಗಳು ಕಾಣಸಿಗುತ್ತವೆ.

**ವೀರಗಲ್ಲು:** ಆರಡಿ ಎತ್ತರ, ಎರಡೂವರೆ ಅಡಿ ಅಗಲ,



ಅರ್ಧ ಅಡಿ ದಪ್ಪ ಕಪ್ಪು ಗ್ರಾನೈಟ್ ಚಪ್ಪಡಿಯ ವೀರಗಲ್ಲಿದೆ. ಐದು ಹಂತಗಳಲ್ಲಿ ಉಬ್ಬುಶಿಲ್ಪವಿದ್ದು ತಳಭಾಗದ ಮೊದಲ ಹಂತ ಮಣ್ಣಿನಲ್ಲಿ ಹುದುಗಿಹೋಗಿದೆ. ಎರಡನೇ ಹಂತದಲ್ಲಿ ಕುದುರೆಯ ಮೇಲೆ ಇಬ್ಬರು ವೀರರು ಹೋರಾಡುತ್ತಿರುವ ಚಿತ್ರವಿದೆ. ಮೂರನೇ ಹಂತದಲ್ಲಿ ಹೋರಾಡಿ ಮಡಿದ ವೀರನನ್ನು ಕರದೊಯ್ಯುತ್ತಿರುವ ಅಪ್ಸರೆಯರ ಚಿತ್ರವಿದ್ದರೆ; ನಾಲ್ಕನೇ ಹಂತದಲ್ಲಿ ಕೈಲಾಸದ ಚಿತ್ರವಿದೆ. ಬಲಭಾಗದ ಕೊನೆಯಲ್ಲಿ ವೀರ, ಮಧ್ಯದ ಮಂಟಪದಲ್ಲಿ ಶಿವಲಿಂಗ ಅದರ ಪಕ್ಕ ನಂದಿ, ನಂದಿಯ ಪಕ್ಕದಲ್ಲಿ ಅಪ್ಸರೆ ನಿಂತ ಭಂಗಿಯಲ್ಲಿದ್ದಾಳೆ. ಶಿರೋಭಾಗದ ಬಲಕ್ಕೆ ಸೂರ್ಯ, ಮಧ್ಯೆ ಮಂಟಪದ ಎಡಭಾಗದಲ್ಲಿ ಚಂದ್ರನ ಚಿತ್ರವಿದೆ.

ಆ ಬಗೆಯ ಇನ್ನೂ ಒಂದೆರಡು ವೀರಗಲ್ಲುಗಳು ಸುತ್ತಮುತ್ತ ಬಿದ್ದಿವೆ. ಯಾವುದೇ ಬರಹಗಳಿರುವುದಿಲ್ಲ.

**ಸೂಳೇರ್‌ಬೈಲು:** ಶಿಲಾಸಮಾಧಿಯ ನೈಋತ್ಯಕ್ಕೆ ಸುಮಾರು ೨೦೦ ಮೀಟರ್ ದೂರದಲ್ಲಿನ ೪೪ ಎಕರೆ ಬಯಲು ಪ್ರದೇಶವೇ ಸೂಳೇರ್‌ಬೈಲು. ಹಿಂದೆ ರಾಮದೇವರ ಪರಿಷೆ ಸಂದರ್ಭದಲ್ಲಿ ಮೂರು ದಿನಗಳ ಕಾಲ ಅಲ್ಲಿ ಅಪೂರ್ವವಾದ ನೃತ್ಯ ನಡೆಯುತ್ತಿದ್ದು, ದೇವದಾಸಿಯರು ಅಲ್ಲಿ ನರ್ತಿಸುತ್ತಿದ್ದರಂತೆ. ಅವರ ಜೀವನೋಪಾಯಕ್ಕೆಂದು ಕೊಡುಗೆಯಾಗಿ ನೀಡಿದ ಜಾಗವೇ ಸೂಳೇರ್‌ಬೈಲು. ೧೯೧೨ರಲ್ಲಿ ಮೈಸೂರು ಒಡೆಯರು ರಾಮದೇವರ ದೇವಸ್ಥಾನದ ಅರ್ಚಕರಿಗೆ ಕೊಡುಗೆಯಾಗಿ ನೀಡಿದ್ದಕ್ಕೆ ದಾಖಲೆಗಳಿವೆ, ನಂತರ ಪ್ರಾಣಾಂತಿಕ ಖಾಯಿಲೆಯಿಂದ ಊರಿಗೆ ಊರೆ ನಾಶವಾದ ಮೇಲೆ ಅದು ಇತರರ ಪಾಲಾಯಿತೆಂದು ಬಿಳಗುಂಬ ಗ್ರಾಮದ ನಿವೃತ್ತ ಮುಖ್ಯೋಪಾಧ್ಯಾಯ ನರಸಿಂಹಯ್ಯ ಹೇಳುತ್ತಾರೆ.

**ಸೋಮೇಶ್ವರ ದೇವಾಲಯ:** ಪಶ್ಚಿಮಕ್ಕೆ ಸುಮಾರು ೧೫೦ ಮೀಟರ್ ದೂರದ ಹಾಸುಬಂಡೆಯ ಬದಿಗೆ ಹೊಂದಿಕೊಂಡಂತೆ ಸೋಮೇಶ್ವರ ದೇವಸ್ಥಾನದ ಅವಶೇಷಗಳಿವೆ. ಗರುಡಗಂಬವೊಂದರ ತಳಭಾಗ ಬಿದ್ದಿದೆ. ಮೇಲ್ಭಾಗವನ್ನು ತುಂಡರಿಸಿ ಅಲ್ಲಿಂದ ಏಳೆಂಟು ಕಿ.ಮೀ. ದೂರದ ಡಣ್ಣಾಯ್ಕನಪುರದ ನರಸಿಂಹಸ್ವಾಮಿ ದೇವಸ್ಥಾನದ ಗರುಡುಗಂಬವಾಗಿ ಬಳಸಿರುವುದನ್ನು ಬಿಳಗುಂಬ ಗ್ರಾಮದ ಲಕ್ಷ್ಮಣ, ರಾಮಯ್ಯ ಮತ್ತು ವೆಂಕಟೇಶ್ ನೆನಪಿಸುತ್ತಾರೆ. ದೇಗುಲದ ಹೊರಗೋಡೆಗೆ ಹಾಕಿದ ತಳಪಾಯದ ಕಲ್ಲುಗಳು ಹಾಗೆಯೇ ಸಾಲಾಗಿ ಬಿದ್ದಿವೆ. ಗರ್ಭಗುಡಿ, ಮಧ್ಯಭಾಗ ಮತ್ತು ಹೊರ ಆವರಣಗಳ ಅಧಿಷ್ಠಾನದ ಭಾಗ ಕಾಣುತ್ತದೆ. ಸುತ್ತಲೂ ಸುಮಾರು ಐದು ಅಡಿಯಷ್ಟು ಅಗಲದ ಹೊರಗೋಡೆಗೆ ಹಾಕಿದ ದಪ್ಪ ದಪ್ಪ ಕಲ್ಲುಗಳು ಸಾಕ್ಷೀಭೂತವಾಗಿ ಸುತ್ತಲೂ ನಿಂತಿವೆ.

ಮಸೀದಿ ಕೊಡುಗೆ ಎಂಬ ಸ್ಥಳವೊಂದು ಇರುವುದಾಗಿ ಲಕ್ಷ್ಮಣ ಅವರು ಹೇಳುವುದನ್ನು ಗಮನಿಸಿದರೆ ಅಲ್ಲಿ ಹಿಂದೆ ಮುಸ್ಲಿಮರು ನೆಲೆಸಿದ್ದರೆಂದು ಊಹಿಸಬಹುದು.

**ಬುರುಜು:** ಸೂಳೇರ್‌ಬೈಲಿನಲ್ಲಿ ಸೋಮೇಶ್ವರ ದೇವಸ್ಥಾನದ ಆಗ್ನೇಯ ಭಾಗಕ್ಕೆ ಹದಿನೈದು ಮೀಟರ್ ಅಗಲ, ಮೂವತ್ತು ಮೀಟರ್ ಉದ್ದದ ಎತ್ತರವಾಗಿ ನಿರ್ಮಿತವಾದ ಬುರುಜೊಂದಿದೆ. ಸುತ್ತಲಿನ ಕಲ್ಲುಗಳು ಉರುಳಿಹೋಗಿ ಅದೂ ಕೂಡ ಶಿಥಿಲಾವಸ್ಥೆಯಲ್ಲಿದ್ದು, ಒಕ್ಕಲುತನಕ್ಕೆ ಬಳಸದೆ ಹಾಗೆಯೇ ಉಳಿಸಿದ್ದಾರೆ.

**ಕೊತ್ತಿಪುರದ ಸಮಾಧಿಗಳು:** ಕೊತ್ತಿಪುರದ ಪಟೇಲ್ ವೆಂಕಟಪ್ಪ ಅವರ ತೋಟದಲ್ಲಿ ಬಿದ್ದಿದ್ದ ವೀರಗಲ್ಲೊಂದನ್ನು ಊರಿಗೆ ಹೊಂದಿಕಂಡಂತೆ ಇರುವ ಪೂರ್ವದ ಖಾಲೀ ನಿವೇಶನದಲ್ಲಿ ನಿಲ್ಲಿಸಿ ಊರ ಜನರೆಲ್ಲ ಪೂಜೆ ಮಾಡಿ ಕಲ್ಲಿನ

ತುಂಬ ವಿಭೂತಿಯನ್ನೇ ಬಳಿದು ಕೆತ್ತನೆಯ ಚಿತ್ರಗಳು ಮುಚ್ಚಿ ಹೋಗುವಂತ ಮಾಡಿದ್ದಾರೆ. ಕೊತ್ತಿಪುರದ ವಾಯುವ್ಯ ದಿಕ್ಕಿನಲ್ಲಿ ಮಾವಿನ ತೋಟದ ಒಂದೂವರೆ ಕಿ.ಮೀ. ದೂರದಲ್ಲಿದೆ ಬೃಹತ್ ಶಿಲಾಸಮಾಧಿಗಳ ನೆಲೆ. ಅದು ರಾಮ- ಲಕ್ಷ್ಮಣರ ಬೆಟ್ಟದ ಪಶ್ಚಿಮಕ್ಕೆ ದೊಡ್ಡ ತೋಟವೆಂದು ಕರೆಯುವ ಜಾಗದಲ್ಲಿದೆ. ಆ ಪ್ರದೇಶದಲ್ಲಿ ಪತ್ತಾರು ಶಿಲಾಸಮಾಧಿಗಳ ನೆಲೆಗಳಿದ್ದು ಅವೆಲ್ಲವೂ ಸಾಗುವಳಿಯ ಹಸರಿನಲ್ಲಿ ನಾಶವಾಗಿವೆ. ಮೂಲೆಯೊಂದರಲ್ಲಿ ವಿಶಾಲ ಮಾವಿನಮರದ ಕೆಳಗೆ ತೀರಾ ಶಿಥಿಲಾವಸ್ಥೆಯ ಎರಡು ಸಮಾಧಿಗಳ ಪಳೆಯುಳಿಕೆಯ ಕಲ್ಲು ಚಪ್ಪಡಿಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ನಿಲ್ಲಿಸಿದ್ದ ಎರಡೆರಡು ಕಲ್ಲುಗಳು ಇನ್ನೇನು ಬೀಳುವ ಸ್ಥಿತಿಯಲ್ಲಿದ್ದರೆ ಉಳಿದಂತೆ ಐದಾರು ಚಪ್ಪಡಿಗಳು ನೆಲದ ಮೇಲುರುಳಿವೆ. ಅವುಗಳಲ್ಲಿ ಎರಡು ಚಪ್ಪಡಿಗಳು ವೀರಗಲ್ಲುಗಳಾಗಿ ಕೆತ್ತನೆಗೊಂಡಿವ. ಐದು ಅಡಿ ಅಗಲ ಮತ್ತು ಎಂಟು ಅಡಿ ಉದ್ದವಿರುವ ಚಪ್ಪಡಿಗಳಲ್ಲಿ ನಾಲ್ಕು ಹಂತಗಳಲ್ಲಿ ಕೆತ್ತಿದ ವೀರರು, ಅಪ್ಸರೆಯರು, ಪಲ್ಲಕ್ಕಿಗಳ ಚಿತ್ರಗಳನ್ನು ಕಾಣಬಹುದು.

ಮೇನೆ ಅಥವಾ ಪಲ್ಲಕ್ಕಿ ಹೊತ್ತ ಇಬ್ಬರು ಸ್ತ್ರೀಯರು, ಬಲಭಾಗಕ್ಕೆ ಮೂರುಮಂದಿ, ಎಡಭಾಗಕ್ಕೆ ಇಬ್ಬರು ವ್ಯಕ್ತಿಗಳ ಚಿತ್ರ ಮೊದಲನೇ ಹಂತದಲ್ಲಿದೆ. ಎರಡನೇ ಹಂತದಲ್ಲಿ ಕುದುರೆಯೇರಿ ಹೋರಾಡುತ್ತಿರುವ ವೀರರಿಬ್ಬರ ಚಿತ್ರಗಳು ದೊಡ್ಡದಾಗಿವೆ. ಇಬ್ಬರ ಹಿಂದೆಯೂ ಇಬ್ಬರು, ಮೂರು ಜನ ಭಟರಿರುವಂತೆ ಕಾಣುತ್ತದೆ. ಮೂರನೇ ಹಂತದಲ್ಲಿ ಸ್ವರ್ಗಾರೋಹಣ, ನಾಲ್ಕನೇ ಹಂತದಲ್ಲಿ ಸ್ವರ್ಗಸ್ಥನಾದ ಚಿತ್ರ, ಶಿವಲಿಂಗು, ನಂದಿಗಳನ್ನು ಕಾಣಬಹುದು. ಕಲ್ಲು ಚಪ್ಪಡಿಗಳ ದಪ್ಪ ಒಂದು ಮುಕ್ಕಾಲು ಅಡಿಗಿಂತ ಹೆಚ್ಚಾಗಿದೆ. ಒರಟಾದ ಕಪ್ಪು ಗ್ರಾನೈಟ್ ಕಲ್ಲು. ಮತ್ತೊಂದು ಗೋಡಿ ಚಪ್ಪಡಿಯ ಮೇಲೆ ಕೆತ್ತಿದ ರೇಖೆಗಳು ಗಮನ ಸೆಳೆಯುತ್ತವೆ.

ಪ್ರಾಕೃತ ಅಥವಾ ಬ್ರಾಹ್ಮೀ ಲಿಪಿಯ ಸ್ವರೂಪದಲ್ಲಿ ಅವು ಗೋಚರಿಸುವಂತೆ, ಬಹುಶಃ ಬೇರೆಲ್ಲೋ ಕೆತ್ತಿದ್ದ ಲಿಪಿಗಳನ್ನು ನೋಡಿಬಂದ ಲಿಪಿಕಾರ ತಾನೂ ಏಕೆ ಪ್ರಯತ್ನಿಸಬಾರದೆಂದು ಆ ಲಿಪಿಗಳನ್ನು ಕೆತ್ತಲು ಯತ್ನಿಸಿರಬಹುದೇ ಎಂಬ ಅನುಮಾನ ಬರುತ್ತದೆ. ಶಾತವಾಹನರ ಕಾಲದಲ್ಲಿ ಬಳಕೆಯಲ್ಲಿದ್ದ 'ಸಾ' 'ರಾ' 'ನ' ಇತ್ಯಾದಿ ಅಕ್ಷರಗಳನ್ನು ಹೋಲುವಂತೆ ತೋರುತ್ತವೆ.

ಕೊತ್ತಿಪುರದ ಉತ್ತರಕ್ಕೆ ಸುಮಾರು ೩೦೦ ಮೀಟರ್ ದೂರದಲ್ಲಿ ಮಂಟಪವೊಂದಿದೆ. ಮಂಟಪದ ಮಧ್ಯಭಾಗದಲ್ಲಿ ಸುಮಾರು ಪತ್ತು ಅಡಿ ಎತ್ತರದ ಗರುಡುಗಂಬವಿದೆ. ಪಶ್ಚಿಮ ಪಾರ್ಶ್ವದಲ್ಲಿ ಕೆತ್ತಿದ ಆಂಜನೇಯನ ಉಬ್ಬುಶಿಲ್ಪ ಆ ಕಂಬದಲ್ಲಿದೆ. ಚೌಕಾಕಾರದ ಮಂಟಪವು ಭೂಮಿಯಿಂದ ಸುಮಾರು ನಾಲ್ಕೂವರೆ ಅಡಿ ಎತ್ತರದಲ್ಲಿದೆ. ಒಂದೂವರೆ ಅಡಿ ಅಗಲ, ಅಷ್ಟೇ ದಪ್ಪದ ನಾಲ್ಕು ಕಂಬಗಳ ಮೇಲೆ ಸುತ್ತಲೂ ಟೋಪಿ ಕಲ್ಲುಗಳನ್ನು ಇರಿಸಲಾಗಿದೆ. ಟೋಪಿಕಲ್ಲಿನ ಮಧ್ಯದಲ್ಲಿ ಗರುಡುಗಂಬ ಚಪ್ಪಡಿಕಲ್ಲುಗಳ ಮಧ್ಯೆ ಹಾಯ್ದು ಸುಮಾರು ಆರು ಅಡಿಗಳಷ್ಟು ಉದ್ದವಾಗಿದೆ.

ಅಚ್ಚಲುಬೆಟ್ಟದ ಪಕ್ಕದಲ್ಲಿ ಇರುವ ಒಕ್ಕೈ ಮಾಸ್ತಿಕಲ್ಲು ಸ್ಪಷ್ಟವಾದ ಸುಂದರವಾದ ಅಚ್ಚುಕಟ್ಟಾದ ಶಿಲ್ಪವಾಗಿದೆ. ವೀರ ಹಾಗು ಸತಿಯರ ಆಗೀನ ಪ್ರಣಾಮಭಂಗಿ ಗಮನಾರ್ಹವಾಗಿದೆ. ಮಾಸ್ತಿ ಹಸ್ತದ ನೀಳ ಬೆರಳುಗಳು ಹಾಗು ಹೆಬ್ಬೆರಳು ಕಲಾತ್ಮಕವಾಗಿ ಕೆತ್ತಲ್ಪಟ್ಟಿವೆ.



**ಕೈಲಾಂಚ:** ಕೈಲಾಂಚ ಗ್ರಾಮದ ದಕ್ಷಿಣಕ್ಕೆ ಹೊರಟರೆ ದೇವಸ್ಥಾನದಿಂದ ಕೂಗಳತೆಯ ದೂರದಲ್ಲಿ ಶಿಲಾ ಸಮಾಧಿಯ ನಡುವೆ ನಿಂತ ಕಂಬವೊಂದರ ಪಶ್ಚಿಮಕ್ಕೆ ಆಂಜನೇಯನ ಉಬ್ಬುಶಿಲ್ಪ, ಭೂಮಿಯ ಮೇಲುಭಾಗದಲ್ಲಿ ಕಾಣುವ ಟೋಪಿಕಲ್ಲು ಎರಡು ಚಪ್ಪಡಿಗಲ್ಲುಗಳಿಂದ ಕೂಡಿದೆ. ಮಧ್ಯದಲ್ಲಿ ಚೌಕಾಕಾರದ ರಂಧ್ರವಿದ್ದು, ಕಂಬ ಎದ್ದುಬಂದಿದೆ. ಸಮಾಧಿಯ ಮೇಲೆ ಕಂಬ ಎಂಟು ಅಡಿಗಳಷ್ಟು ಎತ್ತರವಾಗಿದೆ.

ದಕ್ಷಿಣಕ್ಕೆ ನಡೆದು ವಿಷ್ಣುಸಾಗರ ಕೆರೆ ಏರಿಯ ಮೂಲಕ ಆಗ್ನೇಯ ದಿಕ್ಕಿಗೆ ನಡೆದರೆ ನರಸಿಂಹಸ್ವಾಮಿಬೆಟ್ಟ ಅಥವಾ ಕುಪ್ಪೆಗುಡ್ಡೆ. ಕಿಬ್ಬಿಯ ವಿಶಾಲವಾದ ಬಂಡೆಗಲ್ಲಿನ ಮೇಲೆ ಪಶ್ಚಿಮಭಾಗಕ್ಕೆ ನೆಲದ ಮೇಲೂ ಪೂರ್ವದ ಎರಡು ಕಡೆಗೆ ನಾಲ್ಕಡಿ ಎತ್ತರದ ಬಂಡೆಗಲ್ಲುಗಳ ಆಸರೆಯಲ್ಲಿ ಶಿಲಾಸಮಾಧಿಯೊಂದು ಕಂಡುಬರುತ್ತದೆ. ಟೋಪಿಕಲ್ಲು ಸುಮಾರು ಎರಡು ಅಡಿಗಳಷ್ಟು ದಪ್ಪವಾಗಿದೆ. ಅಗಲ ಇಪ್ಪತ್ತು ಅಡಿಗಳಿಗಿಂತಲೂ ಹೆಚ್ಚಾಗಿದೆ.

ಉದ್ದ ಸುಮಾರು ಇಪ್ಪತ್ತೈದು ಅಡಿಗಳಷ್ಟಿರಬಹುದು. ಅದೇ ಬಂಡೆಯಲ್ಲಿ ತೆಗೆದ ಬೃಹತ್ ಚಪ್ಪಡಿಯದು.

ಬೆಟ್ಟದ ನೆತ್ತಿಯಲ್ಲಿ ಕೂಡ ಶಿಲಾಸಮಾಧಿಯೊಂದಿದೆ. ಕಲ್ಲು ಕಟ್ಟಡದ ನಡುವೆ ನಿಂತ ಕಂಬವಿದೆ. ಸುಮಾರು ಹತ್ತು ಅಡಿಗಳಷ್ಟು ಸುತ್ತಳತೆಯನ್ನು ಹೊಂದಿದೆ. ಮಧ್ಯದ ಕಂಬ ತೀರಾ ಕಚ್ಚಾ ಕಲ್ಲಾಗಿದ್ದು, ಗುರುಡುಗಂಬದ ಆಕಾರದಲ್ಲಿದೆ. ಸುಮಾರು ಆರು ಅಡಿಗಳಷ್ಟು ಎತ್ತರವಾಗಿದೆ. ಜನರು ಅದನ್ನೇ ನರಸಿಂಹಸ್ವಾಮಿ ದೇವಸ್ಥಾನವೆನ್ನುತ್ತಾರೆ. ಊರಪಕ್ಕದಲ್ಲಿರುವ ಸಮಾಧಿಯ ಎಲ್ಲ ಲಕ್ಷಣಗಳು ಇಲ್ಲಿಯೂ ಕಂಡುಬರುತ್ತದೆ. ಊರ ಬಳಿಯಿರುವುದು ಉಗ್ರನರಸಿಂಹಸ್ವಾಮಿ. ಅವನ ತಮ್ಮ ಕಂಬದ ನರಸಿಂಹಸ್ವಾಮಿ ಎಂದು ನಂಬಿಕೆಯಿಂದ ಹೇಳುತ್ತಾರೆ. ಎಣ್ಣೆ ಮಜ್ಜನದಿಂದ ಜಿಡ್ಡುಗಟ್ಟಿ ಕಂಬದ ಮೇಲೆ ಏನಿತ್ತು ಎಂಬುದೂ ಕಾಣದಷ್ಟು ಕರ್ರಗಾಗಿದೆ. ಈ ಬೆಟ್ಟದ ಸುತ್ತಮುತ್ತ ಕೂಡ ಅನೇಕ ಬೃಹತ್ ಶಿಲಾಸಮಾಧಿಗಳನ್ನು ಕಾಣಬಹುದು. ಅಷ್ಟು ಮಾತ್ರವಲ್ಲ ಅಲ್ಲಲ್ಲೇ ಬಯಲಿನಲ್ಲಿ ಬಿದ್ದಿರುವ ಕೆಲವು ವೀರಗಲ್ಲುಗಳೂ ಕೂಡ ಗಮನ ಸೆಳೆಯುತ್ತವೆ.

**ಯತಿರಾಜಗಿರಿ:** ಕೂನಮುದ್ದನಹಳ್ಳಿ, ತಿಮ್ಮಸಂದ್ರವನ್ನು ಬೇರ್ಪಡಿಸುವ ಅನೇಕ ಬೆಟ್ಟಸಾಲುಗಳಲ್ಲಿ ಯತಿರಾಜಗಿರಿ ಅಥವಾ ಕೋಟೆಬೆಟ್ಟ ಮುಖ್ಯವಾದುದು. ಯತಿರಾಯಸ್ವಾಮಿ ದೇಗುಲ ಒಂದೆರಡು ಫರ್ಲಾಂಗ್ ಇದೆ ಎನ್ನುವಾಗ ಬೆಟ್ಟದ ನೆತ್ತಿಯ ವಿಶಾಲವಾದ ಬಯಲಿನಲ್ಲಿ ಶಿಲಾಸಮಾಧಿಯೊಂದು ಕಂಡು ಬರುತ್ತದೆ. ಸಣ್ಣ ಸಣ್ಣ ಕಲ್ಲುಗಳಿಂದ ಮೂರೂ ಕಡೆಗಳಲ್ಲಿ ಗೋಡೆ ನಿರ್ಮಾಣವಾಗಿದೆ. ಉತ್ತರದ ಭಾಗ ತೆರೆದುಕೊಂಡಿದ್ದು ಸುಮಾರು ಎರಡೂವರೆ ಅಡಿ ಎತ್ತರವಿದೆ. ಮೇಲ್ಭಾಗವು ನಾಲ್ಕು ಚಪ್ಪಡಿ ಕಲ್ಲುಗಳಿಂದ ಮುಚ್ಚಲ್ಪಟ್ಟಿದೆ.

**ಚಲುವರಾಯಸ್ವಾಮಿ**ಬೆಟ್ಟದ ಶಿಖರದ ಭಾಗದಲ್ಲಿ ಬೃಹತ್ ಶಿಲಾಸಮಾಧಿಯ ಅವಶೇಷವೊಂದು ಕಾಣುತ್ತದೆ. ಒರಟು ದಿಂಡುಗಲ್ಲುಗಳ ಮೇಲೆ ಎರಡು-ಮೂರು ಅಡಿ ಎತ್ತರದಲ್ಲಿ ಟೋಪಿಕಲ್ಲೊಂದನ್ನು ಇಡಲಾಗಿದೆ. ಒಳಭಾಗದಲ್ಲಿ ಎರಡು ಪಾದಗಳ ಉಬ್ಬುಶಿಲ್ಪಗಳಿದ್ದು, ಅದನ್ನು ಚೆಲುವರಾಯಸ್ವಾಮಿಯ ಪಾದಗಳೆಂದು ಜನ ನಂಬಿದ್ದಾರೆ.

ರಾಮನಗರ ತಾಲ್ಲೂಕಿನಾದ್ಯಂತ ಇರುವ ಐತಿಹಾಸಿಕ ದಾಖಲೆಗಳು ಇಲ್ಲಿನ ಅನೇಕ ಬೃಹತ್ ಶಿಲಾಸಮಾಧಿಗಳು, ಅವುಗಳಲ್ಲಿನ ರೇಖಾ ಚಿತ್ರಗಳು, ವೈವಿಧ್ಯಮಯ ವೀರ, ಮಾಸ್ತಿಕಲ್ಲುಗಳು ತಾಲ್ಲೂಕಿನ ಐತಿಹಾಸಿಕ ಮತ್ತು ಐತಿಹ್ಯಾತ್ಮಕ ಪರಂಪರೆಯನ್ನು ಧ್ವನಿಸುತ್ತಿವೆ.



(ಕ್ಷೇತ್ರಕಾರ್ಯ ಕಾಲದಲ್ಲಿ ನೆರವಾದ ನನ್ನ ವಿದ್ಯಾರ್ಥಿ ಮಿತ್ರರಾದ ಬಿ.ಆರ್. ಸತ್ಯನಾರಾಯಣ, ಗುಲಾಬಿ ಎಂ. ಲೋಕೇಶ್, ತ್ಯಾಗಟೂರ್ ಸಿದ್ದೇಶ್, ನೆಲಮಲೆ ನಂದೀಶ್ ಮತ್ತು ರಾಮನಗರ ತಾಲ್ಲೂಕಿನ ಅನೇಕ ಗ್ರಾಮಗಳ ಸಹೃದಯರ ಸಹಕಾರವನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಎಂ. ಪುಟ್ಟಯ್ಯ., (೨೦೦೦), **ಸಾವು**, ಕನ್ನಡ ವಿಶ್ವವಿದ್ಯಾಲಯ ಹಂಪಿ.

೨. **ಸಂಶೋಧನ** (ಡಾ. ಎಂ. ಚಿದಾನಂದಮೂರ್ತಿಗೌರವ ಸಂಪುಟ)., (೧೯೯೧), ಲಕ್ಷ್ಮಣ್ ತೆಲಗಾವಿ (ಸಂ), ಬೆಂಗಳೂರು.

೩. ಡಾ॥ ಶ್ರೀನಿವಾಸ ಪಾಡಿಗಾರ., (೧೯೯೭), **ಪುರಾತತ್ವಶಾಸ್ತ್ರ ಪರಿಚಯ**, ರಾಮಾಶ್ರಯ ಪಬ್ಲಿಕೇಷನ್ಸ್, ಧಾರವಾಡ.

೪. ಡಾ॥ ಕೆ. ಬಿ. ಶಿವತಾರಕ್., (೨೦೦೧), **ಕರ್ನಾಟಕದ ಪುರಾತತ್ವ ನೆಲೆಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಡಾ॥ ಚನ್ನಬಸಪ್ಪ, ಎಸ್. ಪಾಟೀಲ., (೧೯೯೯), **ಕರ್ನಾಟಕ ಕೋಟೆಗಳು**, ಕ.ವಿ.ವಿ. ಹಂಪಿ.

೬. ಲಯಾಖ್ ಫತೇಅಲಿ., (೧೯೯೩), **ನಮ್ಮ ಪರಿಸರ**, (ಅನು-ಬಾ.ವೈ. ಶ್ರೀಧರ), ನ್ಯಾಷನಲ್ ಬುಕ್‌ಟ್ರಸ್ಟ್, ಇಂಡಿಯಾ.

೭. **ಅರ್ಕಾವತಿ** (೬೭ನೇ ಅಖಿಲಭಾರತದ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ)., (೧೯೯೯), (ಸಂ), ಎಂ. ಬೈರೇಗೌಡ., ತಾ.ಸಿ. ತಿಮ್ಮಯ್ಯ.

೮. ವೈ. ಸಿ. ಭಾನುಮತಿ., (೧೯೯೪), **ಮಲೆನಾಡು ಶೈವ ಒಕ್ಕಲಿಗರು - ಜಾನಪದೀಯ ಅಧ್ಯಯನ**, ಕೇಶವ ಪ್ರಕಾಶನ, ಮೈಸೂರು.

೯. ವಿ. ಚಂದ್ರಶೇಖರ ನಂಗಲಿ., (೨೦೦೦), **ಕಾಡು ಮತ್ತು ತೋಪು**, ಲೋಹಿಯಾ ಪ್ರಕಾಶನ, ಬಳ್ಳಾರಿ.

೧೦. ಡಾ॥ ಡಿ. ಎನ್. ಯೋಗೀಶ್ವರಪ್ಪ,. (೧೯೯೯), **ಹಾಗಲವಾಡಿ ನಾಯಕರು**, ಕನ್ನಡ ವಿ.ವಿ. ಹಂಪಿ.

ಡಾ|| ಆರ್. ಪುರುಷೋತ್ತಮ ರೆಡ್ಡಿ*

# ಸಂಡೂರು ಪ್ರದೇಶದ ಕಬ್ಬಿಣ ತಯಾರಿಕೆ ಒಂದು ಐತಿಹಾಸಿಕ ನೋಟ

ಲೋಹ ಖನಿಜಗಳಲ್ಲೆಲ್ಲಾ ಕಬ್ಬಿಣದ ಅದುರಿನಷ್ಟು ಪ್ರಧಾನ ಮತ್ತು ಸಾರ್ವತ್ರಿಕವಾದುದು ಬೇರೊಂದಿಲ್ಲ. ಭೂ ಚಿಪ್ಪಿನ ಒಟ್ಟು ತೂಕದ ೫.೦೬ ರಷ್ಟು ಕಬ್ಬಿಣವಿದೆ. ೭೦ ಕಿ.ಗ್ರಾಂ. ತೂಕದ ಮನುಷ್ಯನ ದೇಹದಲ್ಲಿಯ ಕಬ್ಬಿಣ ಸುಮಾರು ೪-೫ ಗ್ರಾಂ ರಕ್ತಕಣಗಳಲ್ಲಿರುವುದು. ಮಣ್ಣಿನ ಕೆಂಪು, ಹಳದಿ, ಕಪ್ಪು ಮತ್ತು ಕಂದು ಬಣ್ಣಗಳಿಗೆ ಮಣ್ಣಿನಲ್ಲಿರುವ ಬೇರೆ ಬೇರೆ ಪ್ರಮಾಣದ ಕಬ್ಬಿಣಾಂಶವೇ ಕಾರಣವಾಗಿರುತ್ತದೆ. ಕಬ್ಬಿಣದ ಬಗ್ಗೆ ಪುರಾತನರು ಆಕರ್ಷಿತರಾಗಲು ಕಾರಣ, ಅದರ ಗುಣ ವೈವಿಧ್ಯತೆ ಹಾಗು ಉಪಯುಕ್ತತೆ. ಕಬ್ಬಿಣ ಕಠಿಣವಾಗಬಲ್ಲದು, ಹಾಳೆಗಳಾಗಿಸ ಬಹುದು, ಪೆಡುಸಾಗಬಲ್ಲದು, ಅದನ್ನು ತಂತಿಯಂತೆ ಎಳೆಯ ಬಹುದು, ಪಟ್ಟಿಯಂತೆ ಬಡಿಯಬಹುದು. ಅದು ಹೆಚ್ಚಿನ ಒತ್ತಡ ಸಹಿಸುವ ಸಾಮರ್ಥ್ಯವನ್ನು ಹೊಂದಿದೆ. ಇದನ್ನು ಬೆಸೆಯುವುದು ಸುಲಭ. ಕರಗಿಸಿ ಎರಕ ಹೊಯ್ದು ಬೇಕಾದ ಆಕಾರ ಪಡೆಯ ಬಹುದು. ಶುದ್ಧ ರೂಪದಲ್ಲಿ ಇದು ದೊರೆಯುವುದಿಲ್ಲ. ಆಕಾಶದಿಂದ ಬಿದ್ದ ಉಲ್ಕಾ ಶಿಲೆಗಳಲ್ಲಿ ಕಬ್ಬಿಣ ಶುದ್ಧ, ರೂಪದಲ್ಲಿ ದೊರೆಯುವುದು. ಬಹುಕಾಲದಿಂದಲೂ ಕಬ್ಬಿಣದ ಬಗ್ಗೆ ತಿಳುವಳಿಕೆ ಇದ್ದರೂ ಇತ್ತೀಚೆಗೆ ಬಳಕೆ ಹೆಚ್ಚಾಗಿದೆ.

ಭಾರತದಲ್ಲಿ ಎಲ್ಲೆಲ್ಲಿ ಕಬ್ಬಿಣದ ಅದಿರು ದೊರೆಯುತ್ತ ದೆಯೋ ಅಂತಹ ಎಲ್ಲ ಭಾಗಗಳಲ್ಲೂ ಸರಿ ಸುಮಾರು ಸ್ಥಳೀಯ ಮಟ್ಟದಲ್ಲಾದರೂ ಕಬ್ಬಿಣ ತಯಾರಿಕೆಯ ಗುಡಿ ಕೈಗಾರಿಕೋದ್ಯಮ ತಲೆ ಎತ್ತಿತ್ತು. ಕರ್ನಾಟಕ ರಾಜ್ಯದಲ್ಲಿ ವಿಶೇಷವಾಗಿ ತುಮಕೂರು, ಚಿತ್ರದುರ್ಗ, ಚಿಕ್ಕಮಗಳೂರು, ಶಿವಮೊಗ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಈ ಕಾರ್ಯವು ನಡೆದಿರುವುದು ಕಂಡುಬರುತ್ತದೆ. ಇದಕ್ಕೆ ಸಾಕ್ಷಿ ಎಂಬಂತೆ ಯಶವಂತನಗರದ ಬಳಿ ದೊರೆಯುವ ಕಿಟ್ಟದ ರಾಶಿಯ ಗುಡ್ಡೆಗಳು ಹಾಗೂ ಕುಲುಮೆಯಲ್ಲಿ ಬಳಸುತ್ತಿದ್ದ ಜೇಡಿಮಣ್ಣಿನ ಕೊಳವೆಗಳು, ಬೂದಿಯ ರಾಶಿಯನ್ನು ಇಂದಿಗೂ ಅಲ್ಲಿ ಕಾಣಬಹುದಾಗಿದೆ.

ನಮ್ಮ ನಾಗರೀಕತೆ ಶಿಲಾಯುಗ, ಕಂಚಿನಯುಗ ನಂತರ ಕಬ್ಬಿಣ ಯುಗವನ್ನು ಪ್ರವೇಶಿಸಿತು. ಮಾನವನು ಭೂಮಿಯ ಮೇಲೆ ಉದಯವಾಗುವುದಕ್ಕಿಂತ ಮುಂಚೆಯೆ ವಿವಿಧ ಖನಿಜ ನಿಕ್ಷೇಪ ಗಳು ರೂಪುಗೊಂಡಿದ್ದವು. ಮೊದಲು ಹಲವು ಖನಿಜ ಹಾಗು ಶಿಲೆಗಳನ್ನು ಬಳಸಲು ಆರಂಭಿಸಿದ ಮಾನವನು ನಂತರ ತಾಮ್ರ, ಚಿನ್ನ ಹಾಗು ಕಂಚಿನ ಮಿಶ್ರಲೋಹಗಳ ಕಡೆ ಒಲವು ತೋರಿದನು. ತದನಂತರ ಕಬ್ಬಿಣ ಲೋಹದ ಬಳಕೆಯನ್ನು ಆರಂಭಿಸಿದನು. ಈ ಕಬ್ಬಿಣಯುಗದಲ್ಲಿ ಪ್ರಗತಿ ಉತ್ತುಂಗ ತಲುಪಿರುವುದನ್ನು ಪುರಾತತ್ವ ಶೋಧನೆಗಳು ಸ್ಪಷ್ಟವಾಗಿ ತಿಳಿಸುತ್ತವೆ. ಕಬ್ಬಿಣ ಕುರಿತ ಅತ್ಯಂತ ಹಳೆಯ ಪುರಾವೆ ಎಂದರೆ ಕ್ರಿ.ಪೂ. ೨೦೦೦ದ ಕಾಲದವು ಎನ್ನಲಾದ ಕೆಲವು ಕಬ್ಬಿಣ ಮಣಿಗಳು ಕೈರೋ ನಗರದ ಬಳಿ ಇರುವ ಗೀಜ್ ಎಂಬಲ್ಲಿನ ಸಮಾಧಿಯಲ್ಲಿ ದೊರೆತದ್ದಾಗಿದೆ. ಈಜಿಪ್ಟಿನ ರಾಮೇಸಸ್‌ಗೆ ಸುಮಾರು ಕ್ರಿ.ಪೂ. ೧೨೮೦ರಲ್ಲಿ ಹಿಟ್ಟೈಟ್ ದೊರೆ ಬರೆದ ಕಾಗದ ಒಂದರಲ್ಲಿ ಕಬ್ಬಿಣ ತಯಾರಿಸುವ ಬಗ್ಗೆ ಮಾಹಿತಿ ಕೊಟ್ಟಿದ್ದನು. ಕ್ರಿ.ಪೂ. ೨೦೦೦ ವರ್ಷದಿಂದ ೧೨೦೦ ವರ್ಷದ ಕಾಲಾವಧಿಯಲ್ಲಿ ಬಳಸಿದ್ದ ಬಗೆ ಬಗೆಯ ಕಬ್ಬಿಣ ವಸ್ತುಗಳು ದೊರೆತಿವೆ. ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳಲ್ಲಿಯೂ ಈ ಲೋಹದ ವರ್ಣನೆ ಇದೆ. ಅಲ್ಲಿ ನಮೂದಿಸಲಾಗಿರುವ ಬಾಣ, ಸಲಾಕೆಗಳೆಲ್ಲವೂ ಕಬ್ಬಿಣದ್ದೇ. ಪ್ರಾಚೀನ ಭಾರತ ಕಬ್ಬಿಣ ಲೋಹ ತಂತ್ರಜ್ಞಾನದಲ್ಲಿ ಇತರ ದೇಶಗಳಿಗಿಂತ ಮಂಚೂಣಿಯಲ್ಲಿತ್ತು ಎನ್ನುವುದಕ್ಕೆ ದೆಹಲಿಯ ಸ್ತಂಭ (ಕುತುಬ್‌ಮಿನಾರ್ ಎದುರಿಗೆ) ಎಂದು ಹೆಸರಾದ ಕಬ್ಬಿಣದ ಕಂಬ ಒಂದು ಸಾಕ್ಷಿ. ಇಂದೂರಿನ ಬಳಿ ಧಾರ್ ಎಂಬಲ್ಲಿ ಮತ್ತೊಂದು ಪ್ರಖ್ಯಾತ ಕಬ್ಬಿಣದ ಕಂಬವಿದೆ. ಒರಿಸ್ಸಾದ ಕೋನಾರ್ಕ್ ದೇವಾಲಯದಲ್ಲೂ ಹಾಗೂ ಪುರಿಯ ಗುಂಡಿ ಚಲಾರಿ ದೇವಾಲಯದಲ್ಲೂ ಕಬ್ಬಿಣದ ತೊಲೆಗಳನ್ನು ಬಳಸಿರುವುದು ಕಾಣಬಹುದು. ಈ ಜೀವಂತ ಸಾಕ್ಷಿಗಳೆಲ್ಲವೂ ಭಾರತದಲ್ಲಿನ ಕಬ್ಬಿಣ ತಂತ್ರಜ್ಞಾನದ ಇತಿಹಾಸ ಸಾರುತ್ತವೆ. ಪ್ರಾಚೀನ ಗ್ರಂಥಗಳು, ಪ್ರವಾಸೀ ಬರಹಗಳು, ಪ್ರಾಚ್ಯವಸ್ತುಗಳ ಉತ್ಖನನದಿಂದ ದೊರೆತ ಪುರಾವೆಗಳು ನಮ್ಮ ದೇಶದ ಲೋಹ ತಂತ್ರಜ್ಞಾನದ ಬಗ್ಗೆ ಸೂಚಿಸುತ್ತವೆ. ತಾಮ್ರ ಮತ್ತು ಕಂಚಿನ ತಂತ್ರಜ್ಞಾನದಂತೆ ಕಬ್ಬಿಣದ ತಂತ್ರಜ್ಞಾನವು ಹೊರಗಿನಿಂದ ಬಂದಿರಲು ಸಾಧ್ಯ.

ಬರವಣಿಗೆಯ ಕೌಶಲ್ಯ ಹುಟ್ಟುವುದಕ್ಕಿಂತ ಮುಂಚೆಯೇ ಮಾನವರು ಕೆಂಪುಬಣ್ಣವನ್ನು ಕೊಡುವ ಹಿಮಟೈಟ್, ಕಪ್ಪು ಬಣ್ಣ ಕೊಡುವ ಮ್ಯಾಂಗನೀಸ್ ಆಕ್ಸೈಡ್ ಮುಂತಾದ ಸ್ವಾಭಾವಿಕ ವರ್ಣಧಾತುಗಳನ್ನು ಗುರುತಿಸಿ ಗುಹೆಗಳೊಳಗೆ ಚಿತ್ರದ ಕೆಲಸಗಳನ್ನು ಮಾಡುತ್ತಿದ್ದರು.

* ಪ್ರವಾಚಕರು, ಭೂವಿಜ್ಞಾನಗಳ ವಿಭಾಗ, ಸ್ನಾತಕೋತ್ತರ ಕೇಂದ್ರ, ನಂದಿಹಳ್ಳಿ - ಸಂಡೂರು

ಕಬ್ಬಿಣ ತಯಾರಿಕೆಯ ಕಾರ್ಯ ಸಂಡೂರು ಪ್ರದೇಶದಲ್ಲಿ ವ್ಯಾಪಕವಾಗಿ ಹರಡಲು ಪ್ರಮುಖ ಕಾರಣಗಳೆಂದರೆ ಉತ್ತಮದರ್ಜೆಯ ಕಬ್ಬಿಣದ ಅದಿರು ಯಥೇಚ್ಚವಾಗಿ ದೊರೆಯುವುದು. ಅದಿರಿರುವ ಪ್ರದೇಶ ದಟ್ಟವಾದ ಅರಣ್ಯದಿಂದ ಕೂಡಿರುವುದರಿಂದ ಉರುವಲಿನ ಸಮಸ್ಯೆಯೂ ಇರಲಿಲ್ಲ. ಇಲ್ಲಿನ ಸುತ್ತಮುತ್ತಲ ರೈತರ ಸಾಮಗ್ರಿಗಳ ಅಗತ್ಯತೆಗೆ ಬೇಕಾದ ಕಬ್ಬಿಣ ತಯಾರಿಸಲು ಕುಲಕಸುಬುದಾರರಾದ ಕಮ್ಮಾರರು ಕಬ್ಬಿಣ ತಯಾರಿಸಲು ಆರಂಭಿಸಿದರು.

ಅಂದಿನ ಕಾಲದಲ್ಲಿ ವ್ಯವಸ್ಥಿತವಾದ ಗಣಿಗಾರಿಕೆ ಪದ್ಧತಿ ರೂಢಿಯಲ್ಲಿರಲಿಲ್ಲ. ಸಿಡಿಮದ್ದುಗಳನ್ನು ಸಿಡಿಸಿ ಗಡುಸಾದ ಶಿಲೆಗಳನ್ನು ಸೀಳುವಂತೆ ಮಾಡುವ ವಿಧಾನಗಳನ್ನು ಅರಿತಿರಲಿಲ್ಲ. ಅದಿರನ್ನು ಒಂದೆಡೆಯಿಂದ ಮತ್ತೊಂದೆಡೆ ಸಾಗಿಸುವ ನೆಲ, ಜಲದಲ್ಲಿ ಸಾಗಣೆ ವ್ಯವಸ್ಥೆಗಳಿರಲಿಲ್ಲ. ವಿದ್ಯುತ್‌ಶಕ್ತಿಯ ಅನ್ವೇಷಣೆಯಾಗಿರಲಿಲ್ಲ. ಕುಲುಮೆಯೊಳಗೆ ಬಿಸಿಗಾಳಿಯನ್ನು ರಭಸದಿಂದ ನುಗ್ಗಿಸಿ ಲೋಹಕರಗಿಸುವ ತಂತ್ರಜ್ಞಾನ ತಿಳಿದಿರಲಿಲ್ಲ. ಕಲ್ಲಿದ್ದಲು ಹಾಗೂ ಕೋಕ್‌ಗಳ ಶೋಧನೆಯಾಗಿರಲಿಲ್ಲ. ಕಬ್ಬಿಣ ಅದುರಿನ ಜೊತೆ ಬಳಸುವ ಶ್ರಾವಕಗಳ ನಿರ್ದಿಷ್ಟ ಪ್ರಮಾಣಗಳ ಅರಿವಿರಲಿಲ್ಲ. ಕುಶಲ ತಂತ್ರಜ್ಞಾನವುಳ್ಳ ಕಾರ್ಮಿಕರು, ಬಂಡವಾಳ ಮಾರುಕಟ್ಟೆ ವ್ಯವಸ್ಥೆಗಳಿಲ್ಲದ ಸಮಯದಲ್ಲಿ ಪುರಾತನರು ಕಬ್ಬಿಣವನ್ನು ತಯಾರಿಸುವುದರಲ್ಲಿ ಪರಿಣತರಾಗಿದ್ದರು. ಆದರೆ ಆ ಸಮಯದಲ್ಲಿ ಅವರಿಗಿದ್ದ ಅವಶ್ಯಕತೆ ಅನ್ವೇಷಣೆಗೆ ಪ್ರೇರೇಪಿಸಿತು. ಆ ದಿಶೆಯಲ್ಲಿ ಅವರು ಶ್ರಮಿಸಿ, ಸಾಧಿಸಿ ತಮ್ಮ ಉದ್ದೇಶಗಳನ್ನು ಈಡೇರಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದರು.

ಕಬ್ಬಿಣ ತಯಾರಿಕೆಯ ಗುಡಿಕೈಗಾರಿಕೆಗೆ ಬೇಕಾಗಿದ್ದ ಅಲ್ಪಸ್ವಲ್ಪ ಅದಿರನ್ನು ಅಕ್ಕಪಕ್ಕ ಪ್ರದೇಶದ ಖನಿಜದ ಶಿಬಿರಗಳಿಂದ ಚೂರ್ಣೀಕೃತವಾಗಿ ತೊರೆಗಳ ಬದಿಗಳಲ್ಲಿ ಶೇಖರವಾಗಿದ್ದ ಸಣ್ಣ ಸಣ್ಣ ಹಳಕುಗಳನ್ನು ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ. ಈ ರೀತಿ ಸಂಗ್ರಹಿಸಿದ ಕಬ್ಬಿಣ ಅದಿರಿನ ಉಂಡೆಗಳನ್ನು ಕತ್ತೆಗಳ ಮೂಲಕ ಕುಲುಮೆಯ ಸ್ಥಳಕ್ಕೆ ಸಾಗಿಸುತ್ತಿದ್ದರೆಂದು ಹಿರಿಯರು ತಿಳಿಸುತ್ತಾರೆ. ಇದಕ್ಕೆ ಸಾಕ್ಷಿ ಎಂಬಂತೆ ಈ ಪ್ರದೇಶದ ಒಂದು ಗಣಿಗೆ ***ಕತ್ತೆಮೈನ್ಸ್ ಗಣಿ*** ಎಂಬ ಹೆಸರು ಇನ್ನೂ ರೂಢಿಯಲ್ಲಿದೆ. ಅಂದಿನ ಕಾಲದಲ್ಲಿ ವ್ಯವಸ್ಥಿತವಾದ ರಸ್ತೆ ಹಾಗೂ ಸಾರಿಗೆ ಸೌಕರ್ಯಗಳಿಲ್ಲದ್ದರಿಂದ ಹಾಗೂ ಅದಿರು ಬೆಟ್ಟದ ಮೇಲೆ ದೊರೆಯುತ್ತಿದ್ದುದರಿಂದ ಈ ರೀತಿಯ ಸಾಗಣೆ ಅವರಿಗೆ ಅನಿವಾರ್ಯವಾಗಿರಬಹುದೆನಿಸುತ್ತದೆ. ಕುಲುಮೆಗಳನ್ನು ಅವರು ನಡೆಸುತ್ತಿದ್ದ ವಿಚಾರವಾಗಿ ಸ್ಪಷ್ಟ ದಾಖಲೆಗಳು ನಮಗೆ ದೊರೆಯುವುದಿಲ್ಲ. ಆದರೆ ಲಭ್ಯವಿರುವ ಕಿಟ್ಟದ ಹಾಗೂ ಬೂದಿಯ ರಾಶಿ, ತಿದಿಗಾಗಿ ಬಳಸುತ್ತಿದ್ದ ಕೊಳವೆಗಳ ಆಧಾರದ ಮೇಲೆ ಅವರು ಕಬ್ಬಿಣ ಉತ್ಪತ್ತಿ ಮಾಡುತ್ತಿದ್ದ ವಿಧಾನವನ್ನು ಕಲ್ಪಿಸಿಕೊಳ್ಳುವುದು ಕಷ್ಟವೇನಲ್ಲ.

ಈ ಪ್ರದೇಶದಲ್ಲಿ ಹೇರಳವಾಗಿ ದೊರೆಯುತ್ತಿದ್ದ ಹಿಮಟೈಟ್ ಅದಿರನ್ನು ಬುಟ್ಟಿ ತಟ್ಟೆಗಳಲ್ಲಿ ಸಂಗ್ರಹಿಸಿ ಮೊದಲ ಹಂತದಲ್ಲಿ ನುಣ್ಣನೆ ಪುಡಿಮಾಡಿ ಗಾಳಿಯಲ್ಲಿ ತೂರಿ ಶುದ್ಧಗೊಳಿಸುತ್ತಿದ್ದರು. ತದನಂತರ ನೀರಿನಲ್ಲಿ ಜಾಲಾಡಿ ಕಲ್ಮಶಗಳನ್ನು ತೆಗೆಯುತ್ತಿದ್ದರು. ಸಾಮಾನ್ಯವಾಗಿ ೩-೪ ಅಡಿ ವ್ಯಾಸದ ಅಷ್ಟೇ ಎತ್ತರವಿದ್ದ ಕುಲುಮೆಗಳು ಜನಪ್ರಿಯವಾಗಿದ್ದವು. ಜೇಡಿಮಣ್ಣಿನ ಕೊಳವೆಗಳನ್ನು ಮಾಡಿ ಅವಕ್ಕೆ ತಿದಿಗಳನ್ನು ಜೋಡಿಸುತ್ತಿದ್ದರು. ಸಾಮಾನ್ಯವಾಗಿ ೪ ರಿಂದ ೫ ಗಂಟೆ ಕಾಲ ಕುಲುಮೆಗಳು ಕೆಲಸ ಮಾಡುತ್ತಿದ್ದವು.

ಇನ್ನೊಂದು ರೀತಿಯ ಗುಂಪೆಯನ್ನು ಕಬ್ಬಿಣ ಕರಗಿಸಲು ಬಳಸುತ್ತಿದ್ದರು. ಕುಂಬಾರ ಮಣ್ಣಿನಿಂದ ವಾಡೆಯ ರೀತಿ ೫ ಅಡಿ ಉದ್ದ, ಒಂದುವರೆ ಅಡಿ ಅಗಲವುಳ್ಳದ್ದಾಗಿ ಮಾಡಿ ಮುಚ್ಚಿರುವರು. ಈ ಗುಂಪೆಗೆ ಮೇಲೆ ಕೆಳಗೆ ಮತ್ತು ಮಧ್ಯದಲ್ಲಿ ಕಬ್ಬಿಣದ ಕಟ್ಟುಗಳಿರುತ್ತವೆ. ಕೆಳಭಾಗದಲ್ಲಿ ಜೋಡಿ ತಿತ್ತಿಗಳನ್ನು ಇಡಲು ಎರಡು ಬಾಯಿಗಳಿರುತ್ತವೆ. ಹೀಗಿರುವ ಗುಂಪೆಯೊಳಗೆ ಅದಿರನ್ನು ಹಾಗು ಇದ್ದಿಲನ್ನು ಹಾಕಿ ಭರ್ತಿಮಾಡಿದ ಗುಂಪೆಯನ್ನು ಕುಲುಮೆಯ ಮೇಲಿಟ್ಟು ಕೆಳಭಾಗದ ಬಾಯಿಗೆ ಕೆಂಡ ಹಾಕಿ ತಿತ್ತಿಗಳನ್ನು ಕೂಡಿಸಿ ಒತ್ತುವರು. ಇದೆಲ್ಲಾ ಬೆಂಕಿಯಲ್ಲಿ ಬೂದಿಯಾದ ಮೇಲೆ ಮತ್ತು ಇದ್ದಿಲು ಹಾಗು ಅದಿರನ್ನು ಹಾಕಿ ಇವೆಲ್ಲಾ ಕರಗುವವರೆಗೆ ಒತ್ತುವರು. ಚೆನ್ನಾಗಿ ಕರಗಿದ ನಂತರ ಕುಲುಮೆಯ ಮೇಲಿಂದ ತೆಗೆದು ಅಡಿಗಲ್ಲಿನ ಮೇಲಿಟ್ಟು ಸುತ್ತಿಗೆಯಿಂದ ಬಡಿಯುವರು. ಈ ಏಟಿನಿಂದ ಕಿಟ್ಟ ಮೊದಲಾದವು ಇದ್ದರೆ ಹೋಗಿ ಗಟ್ಟಿ ಮಾತ್ರ ನಿಲ್ಲುವುದು. ಈ ರೀತಿ ತಯಾರಾದ ಕಬ್ಬಿಣವು ಒಳ್ಳೆ ಅದಿರುಗಳಿಂದ್ದಾಗಿದ್ದರೆ, ಅಳತೆಯ ಹತ್ತು ಸೇರಿಗೆ ತೂಕದ ಹತ್ತು ಸೇರಾಗುತ್ತದೆ. ಆಗಿನ ತಯಾರಿಕೆಯ ಪದ್ಧತಿಯಲ್ಲಿ ಸ್ರಾವಕವಾಗಿ ಬಳಸುವ ವಸ್ತುಗಳ ನಿರ್ದಿಷ್ಟ ಪ್ರಮಾಣ ಸರಿಯಾಗಿ ತಿಳಿದಿರಲಿಲ್ಲ. ಈ ಕಾರಣ ದಿಂದಾಗಿ ಕಿಟ್ಟದ ಜೊತೆಗೆ ಲೋಹವು ಸ್ವಲ್ಪ ಪ್ರಮಾಣದಲ್ಲಿ ನಷ್ಟವಾಗಿ ಹೋಗುತ್ತಿತ್ತು. ಕಬ್ಬಿಣದ ಸಿಲಿಕೇಟ್ ರೂಪದಲ್ಲಿ ಕೆನೆಗಟ್ಟುತ್ತಿದ್ದ ಕಿಟ್ಟವನ್ನು ಹೊರ ಹರಿಯುವಂತೆ ಮಾಡಲು ಕುಲುಮೆಯಲ್ಲಿ ತೂತು ಮಾಡುತ್ತಿದ್ದರು. ಕಿಟ್ಟ ಇನ್ನೂ ಉಳಿದಿದ್ದರೆ ಮರಳನ್ನು ಬೆರೆಸಿ ಅದನ್ನು ಬೇರ್ಪಡಿಸುವ ತಂತ್ರವನ್ನು ರೂಢಿಸಿ ಕೊಂಡಿದ್ದರು. ಇದೆಲ್ಲವೂ ತಂತ್ರಜ್ಞಾನದ ಪ್ರಗತಿಯಲ್ಲಿ ಇಟ್ಟ ಹೊಸ ಹೆಜ್ಜೆಗಳು. ಅಪೇಕ್ಷಿತ ಮಟ್ಟವನ್ನು ಉಳಿಸಿಕೊಳ್ಳಬೇಕಾದ ಅನಿವಾರ್ಯತೆ ಪ್ರಯತ್ನ ನಡೆದಿತ್ತು. ಸಣ್ಣ ಸಣ್ಣ ಕುಲುಮೆಯಲ್ಲಿ ಕಬ್ಬಿಣವನ್ನು ಕರಗಿಸುವದು ಕಷ್ಟದ ಕೆಲಸ. ಅಲ್ಲದೆ ಅತಿ ಹೆಚ್ಚಿನ ಉಷ್ಣತೆಯಲ್ಲಿ ಅಪಕರ್ಷಣ (ರೆಡ್ಯೂಸಿಂಗ್) ವಾತಾವರಣವನ್ನು ಕಾಯ್ದುಕೊಳ್ಳುವುದು ಇನ್ನೂ ಜಟಿಲವಾದ ಕೆಲಸ. ಮೃದು ಕಬ್ಬಿಣವನ್ನು ಕಾಸಿ ಅದುರಿನಲ್ಲಿರುವ ಅಲೋಹ ಪದಾರ್ಥಗಳನ್ನು ತೆಗೆಯಲು ಅನೇಕ ಬಾರಿ ಬಿಸಿಯಾಗಿದ್ದಾಗಲೇ ಬಡಿದು



ಬೇರ್ಪಡಿಸಿ ಅನಂತರವಷ್ಟೇ ಉಪಕರಣಗಳನ್ನು ಮಾಡಲು ಬಳಸಬೇಕಾದ ಸ್ಥಿತಿ ಇತ್ತು. ಕಾದ ಕಬ್ಬಿಣವನ್ನು ಬಡಿದಾಗ ಕಿಡಿ ಹೊರಡುವುದು ನಿಲ್ಲುತ್ತಲೇ ಅದು ಶುದ್ಧ ಕಬ್ಬಿಣವಾಗಿ ಮಾರ್ಪಟ್ಟಿದೆ ಎಂದು ಸುಲಭವಾಗಿ ತಿಳಿಯುತ್ತಿದ್ದರು.

ಮೊದಲು ನೆಲದಲ್ಲಿನ ಒಲೆ ಕುಲುಮೆಯಾಗಿ ಮಾರ್ಪಾಡಾಯಿತು. ಊದುಕುಲುಮೆಗಳ ಸ್ಥಾನದಲ್ಲಿ ತಿದಿಗಳು ಬಂದವು. ಕುಲುಮೆಯ ರೂಪುರೇಷೆಗಳು ಹೆಚ್ಚು ಅಭಿವೃದ್ಧಿ ಕಂಡವು. ಲೋಹ ವಿದ್ಯೆಯ ವಿಕಾಸ ಮುಂದೆ ಹೆಚ್ಚಿನ ಪ್ರಗತಿ ಕಾಣುತ್ತಾ ಸಾಗಿತು. ಕಬ್ಬಿಣದ ಅದಿರನ್ನು ಕರಗಿಸಲು ಗಟ್ಟಿ ಮರದ ತುಂಡುಗಳನ್ನು ಆರಂಭದಲ್ಲಿ ಉರುವಲಿಗಾಗಿ ಬಳಸಿದರು. ಕುಲುಮೆಯಲ್ಲಿ ಅದಿರಿನ ಜೊತೆ ಇದ್ದಿಲನ್ನು ಬೆರೆಸಿ ಕಾಯಿಸಿ ಕರಗಿಸುವುದು ಸುಲಭವೆನಿಸಿದಾಗ ಇದ್ದಿಲನ್ನು ಬಳಸಿದರು. ಹೆಚ್ಚು ಉಷ್ಣತೆಯನ್ನು ಕೊಡುವ ಕಲ್ಲಿದ್ದಲಿನ ಶೋಧನೆಯಾದಾಗ ಅದರ ಬಳಕೆ ಆರಂಭವಾಯಿತು. ಈಗ ಕಲ್ಲಿದ್ದಲಿನ ಸ್ಥಾನದಲ್ಲಿ ಕೋಕ್ ಬಳಕೆ ಆರಂಭವಾಯಿತು.

೧೯ನೇ ಶತಮಾನದ ಆದಿಯಲ್ಲೂ ದೇಶದಾದ್ಯಂತ ಸಾವಿರಾರು ಕುಲುಮೆಗಳು ಕೆಲಸ ಮಾಡುತ್ತಿದ್ದವು. ಒಂದೊಂದು ಕುಲುಮೆಯ ವಾರ್ಷಿಕ ಉತ್ಪನ್ನ ಕೇವಲ ೨-೩ ಟನ್ನುಗಳಷ್ಟಾಗುತ್ತಿತ್ತು. ಕೆಲವು ದಶಕಗಳ ಹಿಂದೆ ಪಾಶ್ಚಾತ್ಯ ದೇಶಗಳಿಂದ ಉತ್ತಮ ದರ್ಜೆಯ ಕಬ್ಬಿಣ ಮತ್ತು ಉಕ್ಕಿನ ವಸ್ತುಗಳು ಸುಲಭ ದರಗಳಲ್ಲಿ ಆಮದಾಗಿ ಬಂದು ಮಾರುಕಟ್ಟೆಯಲ್ಲಿ ಹೇರಳವಾಗಿ ದೊರಕುತ್ತಿದ್ದುದರಿಂದ ದೇಶಿಯ ಕಬ್ಬಿಣ ತಯಾರಿಕೆಯ ಉದ್ಯಮ ತಲೆ ಎತ್ತದಂತಾಗಿ ನಿಂತುಹೋಯಿತು. ಈ ಪುರಾತನ ನಾಗರೀಕತೆಯು ಯಾವ ಹೆಚ್ಚಿನ ಕುರುಹುಗಳನ್ನು ಬಿಡದೆ ಹಾಗೆಯೇ ನಶಿಸಿ ಹೋದದ್ದು ವಿಷಾದದ ಸಂಗತಿಯೇ ಸರಿ.

ಇತ್ತೀಚಿನ ದಿನಗಳಲ್ಲಿ ದೇಶದ ಪ್ರಗತಿಯನ್ನು ಅವರು ಬಳಸುವ ತಲಾವಾರು ಕಬ್ಬಿಣ ಮತ್ತು ಉಕ್ಕಿನ ಮೇಲೆ ಅಳೆಯುವುದುಂಟು. ಈ ದಿಶೆಯಲ್ಲಿ ಮುಂದುವರೆದ ರಾಷ್ಟ್ರಗಳಿಗೆ ಹೋಲಿಸಿದಾಗ ನಾವು ಇನ್ನೂ ಹಿಂದುಳಿದಿದ್ದೇವೆ ಎಂದೇ ಹೇಳಬಹುದು. ಕಬ್ಬಿಣವು ಸಮಸ್ತ ಕೈಗಾರಿಕೆಯ ಮೂಲ ವಸ್ತುವಾಗಿರುತ್ತದೆ. ಕಬ್ಬಿಣ ಉಕ್ಕುಗಳ ಉತ್ಪಾದನೆ ರಾಷ್ಟ್ರಪ್ರಗತಿಗೆ ಬುನಾದಿಯಾಗಿರುತ್ತದೆ.

ಕಬ್ಬಿಣ ತಯಾರಿಕೆಯ ವಿಧಾನ ಹಾಗೂ ಪ್ರಮಾಣದಲ್ಲಿ ಮೊದಲಿಗಿಂತ ಇಂದು ಸಾಕಷ್ಟು ಬೆಳವಣಿಗೆಯಾಗಿದೆ. ವಿವಿಧ ಉದ್ದೇಶಗಳಿಗಾಗಿ ಕಬ್ಬಿಣಕ್ಕೆ ಇರುವ ಬೇಡಿಕೆಯೇ ಈ ಉದ್ಯಮದ ತೀವ್ರ ಬೆಳವಣಿಗೆಗೆ ಕಾರಣವಾಗಿದೆ. ಜನಪ್ರಿಯತೆಯ ಹಾಗೂ ಬೇಡಿಕೆಯ ಆಧಾರದಿಂದ ಹೇಳುವುದಾದರೆ, ಕಬ್ಬಿಣವು ಬಂಗಾರಕ್ಕಿಂತ ಶ್ರೇಷ್ಠವಾದುದೆಂದು ಹೇಳಬೇಕಾಗುತ್ತದೆ. ಈ ಕಾರಣದಿಂದ ಈ ಲೋಹವನ್ನು ಕಪ್ಪು ಬಂಗಾರವೆಂದು ಕರೆದು ಗೌರವಿಸಿರುವುದು ಔಚಿತ್ಯಪೂರ್ಣವೆನಿಸುತ್ತದೆ. ಬಂಗಾರ ಕೇವಲ ಶ್ರೀಮಂತರ ಬೇಡಿಕೆಯಾದರೆ, ಕಬ್ಬಿಣ ಶ್ರೀಮಂತರ ಮತ್ತು ಬಡವರಿಬ್ಬರ ಬೇಡಿಕೆಯಾಗಿರುತ್ತದೆ. ಕಬ್ಬಿಣ ತಯಾರಿಕೆ ಆರಂಭಗೊಂಡ ಪದ್ಧತಿ ಇಂದಿನ ಹೊಸ ತಂತ್ರಜ್ಞಾನಕ್ಕೆ ದಾರಿ ಮಾಡಿಕೊಟ್ಟಿದೆ ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ. ನಮ್ಮ ಹಳ್ಳಿಗರ ಅದರಲ್ಲೂ ಕುಲಕಸುಬುದಾರರಾದ ಕಬ್ಬಿಣ ಗುಡಿ ಕೈಗಾರಿಕೆಯು ಅದಕ್ಕೆ ರೂವಾರಿಗಳಾದ ಕಮ್ಮಾರರ ಪ್ರಾಚೀನ ಜ್ಞಾನವೇ ಎಂಬುದನ್ನು ನಾವು ನೆನಪಿಟ್ಟುಕೊಳ್ಳಬೇಕು. ಅವಶ್ಯಕತೆಗೆ ಅಗತ್ಯವಾಗಿದ್ದ ಕಬ್ಬಿಣ ತಯಾರಿಕೆಗೆ ಆರಂಭವಾದ ಈ ಉದ್ಯಮ ಉಕ್ಕಿನ ಅನ್ವೇಷಣೆಗೆ ನಾಂದಿಯಾಯಿತು. ಕಬ್ಬಿಣ ಲೋಹ ತಂತ್ರಜ್ಞಾನ ಸಾಮಾಜಿಕ ಪರಿವರ್ತನೆಗೆ ಕಾರಣವಾಗಿರುವುದನ್ನು ಇತಿಹಾಸ ಮತ್ತೆ ಮತ್ತೆ ನಮಗೆ ನೆನಪಿಸುತ್ತದೆ.



(ಈ ಲೇಖನವನ್ನು ಸಿದ್ಧಪಡಿಸುವಾಗ ಮಾಹಿತಿ ಒದಗಿಸಿದ ಭೂ ವಿಜ್ಞಾನಿ ಶ್ರೀ ಗುಲಾನಿ ಇವರಿಗೆ ಕೃತಜ್ಞತೆಗಳು)

ಪ್ರೊ॥ ಲಕ್ಷ್ಮಣ್ ತೆಲಗಾವಿ*

# ವೇದಾವತಿ ನದಿದಂಡೆ ಹಾಗೂ ಚಂದ್ರವಳ್ಳಿ ನಿವೇಶನಗಳಲ್ಲಿ ದೊರೆತ ಶಾತವಾಹನಕಾಲೀನ ಹೊಸ ನಾಣ್ಯಗಳು

**ವೇದಾವತಿ ನದಿ ಕಣಿವೆ**

ಪಶ್ಚಿಮ ಘಟ್ಟಗಳಲ್ಲಿ ಹುಟ್ಟುವ ವೇದಾವತಿ ನದಿ ಹರಿಯುವುದು ಕರ್ನಾಟಕದ ಚಿಕ್ಕಮಗಳೂರು, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ. ಮುಂದೆ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯಲ್ಲಿಯೂ ಸಾಗುತ್ತದೆ. ಈಗಿನ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳ ಪೈಕಿ ಹೊಸದುರ್ಗ, ಹಿರಿಯೂರು, ಚಳ್ಳಕೆರೆ ಮತ್ತು ಮೊಳಕಾಲ್ಮೂರುಗಳು ಮೇಲಿನಿಂದ ಕೆಳಗಿನವರೆಗೆ ಕ್ರಮವಾಗಿ ಈ ನದಿಯ ವ್ಯಾಪ್ತಿಗೆ ಬರುವಂಥವು. ಕೆಳ ಕಣಿವೆಯಲ್ಲಿ ಈ ನದಿ ಚಿನ್ನಹಗರಿಯೆಂತಲೂ ಕರೆಸಿಕೊಳ್ಳುತ್ತದೆ. ಇಡೀ ಜಿಲ್ಲೆಯೇ ವೇದಾವತಿ ಜಲಾನಯದ ಪ್ರದೇಶವೆಂದು ಗುರುತಿಸಲ್ಪಟ್ಟಿರುವುದು ಇಲ್ಲಿ ಮುಖ್ಯ.

ಚರಿತ್ರಪೂರ್ವಕಾಲದಿಂದಲೂ ಈ ನದೀಕಣಿವೆ ಜನವಸತಿಯ ತಾಣವಾಗಿದ್ದಿತು. ಈ ನದಿಯ ಎರಡೂ ದಂಡೆಗಳಲ್ಲಿ ಕಂಡುಬರುವ ಪ್ರಾಚೀನ ಜನಜೀವನದ ಕುರುಹುಗಳೇ ಇದಕ್ಕೆ ಸಾಕ್ಷಿ ನುಡಿಯುತ್ತವೆ. ಈತನಕ ಕೈಗೊಳ್ಳಲಾದ ಪರಿವೀಕ್ಷಣೆಯಲ್ಲಿ ಚಳ್ಳಕೆರೆ ತಾಲ್ಲೂಕಿನಲ್ಲಿ ಈ ನದಿದಂಡೆಯ ಗ್ರಾಮಗಳು ಪೈಕಿ ಲಕಮಗೊಂಡನಹಳ್ಳಿ, ನಾಗಗೊಂಡನಹಳ್ಳಿ ಮೊದಲಾದ ಎಡೆಗಳಲ್ಲಿ ಬೃಹತ್ ಶಿಲಾ ಸಂಸ್ಕೃತಿಯ ಕುರುಹುಗಳನ್ನು ಈಗಾಗಲೇ ಬೆಳಕಿಗೆ ತರಲಾಗಿದೆ (ವರದಿ : *ಪ್ರಜಾವಾಣಿ, ೭ ಆಗಸ್ಟ್ ೧೯೯೮*). ಈಗ ಈವರೆಗೆ ಈ ಜಿಲ್ಲೆಯಲ್ಲಿ ವರದಿಯಾಗದ ಶಾತವಾಹನರ ಹೊಸ ನಾಣ್ಯಗಳಿಂದಾಗಿ ಈ ನದಿಕಣಿವೆ ಮತ್ತೆ ಸುದ್ದಿ ಮಾಡುತ್ತಿದೆ.

**ಜಿಲ್ಲೆಯಲ್ಲಿ ಈವರೆಗೆ ದೊರೆತ ಶಾತವಾಹನಕಾಲೀನ ನಾಣ್ಯಗಳು**

ಕರ್ನಾಟಕದ ಸನ್ನತಿ, ಬನವಾಸಿ, ವಡಗಾಂವ್ ಮಾಧವಪುರ ಮೊದಲಾದ ಶಾತವಾಹನಕಾಲೀನ ಸಂಸ್ಕೃತಿ ನೆಲೆಯೂರಿದ್ದ ಪ್ರಸಿದ್ಧ ನಿವೇಶನಗಳ ಸಾಲಿನಲ್ಲಿ ಬರುವಂಥಾ ಇನ್ನೊಂದು ಎಡೆಯೆಂದರೆ ಚಿತ್ರದುರ್ಗ ಸಮೀಪದ ಚಂದ್ರವಳ್ಳಿ. ಕಳೆದ ಶತಮಾನದಲ್ಲಿ ಆರ್. ನರಸಿಂಹಾಚಾರ್. ಎಂ. ಎಚ್. ಕೃಷ್ಣ, ಆರ್. ಮಾರ್ಟಿಮರ್ ವ್ಹೀಲರ್, ವಿ. ಮಿಶ್ರಾ ಮೊದಲಾದವರು ಇಲ್ಲಿ ಕೈಗೊಂಡ ಭೂಶೋಧನೆಗಳಲ್ಲಿ ದೊರೆತ ವಸ್ತು-ಅವಶೇಷಗಳಲ್ಲಿ ನಾಣ್ಯಗಳೂ ಸಾಕಷ್ಟು ಸಂಖ್ಯೆಯಲ್ಲಿದ್ದವು. ಇವು ಶಾತವಾಹನ ಅರಸರು ಹಾಗೂ ಅವರ ಸಾಮಂತರಾಗಿದ್ದ ಆನಂದರು ಮತ್ತು ಮಹಾರಥಿಗಳಿಗೆ ಸಂಬಂಧಿಸಿದವು. ಒಂದೆರಡು ಬೆಳ್ಳಿಯ ನಾಣ್ಯಗಳನ್ನು ಹೊರತು ಪಡಿಸಿದರೆ ಉಳಿದವು ಸೀಸ ಮತ್ತು ತಾಮ್ರ, ಸತು, ಸೀಸ ಮತ್ತು ತವರ ಲೋಹ ಮಿಶ್ರಣದವು. ಈ ನಾಣ್ಯಗಳು ಪ್ರಸಿದ್ಧ ಶಾತವಾಹನ ಅರಸರಾದ ಗೌತಮೀಪುತ್ರ ಶಾತಕರ್ಣಿಯ ಮಗ ವಾಶಿಷ್ಠಿ ಪುತ್ರ ಪುಳುಮಾವಿ (ಕ್ರಿ.ಶ. ಸು. ೧೩೦-೧೫೯) ಮತ್ತು ಆ ನಂತರದ ಅರಸ ಯಜ್ಞಶ್ರೀ ಶಾತಕರ್ಣಿ (ಕ್ರಿ.ಶ. ಸು. ೧೭೪-೨೦೩) ಹಾಗೂ ಮಹಾರಥಿಗಳಾದ ಸದಕಣ ಕಳಲಾಯ ಮಹಾರಥಿ, ಸದಕಣ ಕಣಸ ಮಹಾರಥಿ ಮತ್ತು ಸದಕಣ ಚಟಕಣ್ಣ ಮಹಾರಥಿಗಳಿಗೆ ಸೇರಿದವು. ಗೌತಮಿಪುತ್ರನ ವಿಳಿವಾಯುಕುರಸನೆಂಬ ಇನ್ನೊಬ್ಬ ಮಾಂಡಲಿಕನ ನಾಣ್ಯವೂ ಇಲ್ಲಿ ದೊರೆತಿದೆ.

ವಾಶಿಷ್ಠಿಪುತ್ರ ಪುಳುಮಾವಿ ಮತ್ತು ಯಜ್ಞಶ್ರೀ ಶಾತಕರ್ಣಿಗಳ ಹೆಸರುಗಳುಳ್ಳ ನಾಣ್ಯಗಳು ಪ್ರತ್ಯೇಕವಾಗಿದ್ದರೂ ಇವು ಹೊಂದಿರುವ ಚಿಹ್ನೆಗಳು ಮಾತ್ರ ಒಂದೇ ತೆರನಾದವು. ಮೇಲ್ಮುಖದಲ್ಲಿ ಆನೆಯ ಉಬ್ಬುಚಿತ್ರ ಮತ್ತು ಅರಸನ ಹೆಸರಿದ್ದರೆ, ಹಿಮ್ಮುಖದಲ್ಲಿ ಉಜ್ಜಯಿನೀ ಚಿಹ್ನೆ ಕಂಡುಬರುತ್ತದೆ. ಮಹಾರಥಿಗಳ ನಾಣ್ಯಗಳ ಮೇಲಿರುವ ಚಿಹ್ನೆಗಳೆಂದರೆ, ಮೇಲ್ಮುಖದಲ್ಲಿ ಭುಜಸಹಿತವಿರುವ ನಂದಿಯ ಉಬ್ಬುಚಿತ್ರ ಮತ್ತು ಆಯಾ ಮಹಾರಥಿಯ ಹೆಸರು; ಹಾಗೂ ಹಿಮ್ಮುಖದಲ್ಲಿ ಬೇಲಿಸಹಿತವಿರುವ ವೃಕ್ಷ, ತುದಿಯಲ್ಲಿ ಬಿದಿಗೆ ಚಂದ್ರಾಕೃತಿ ಹೊಂದಿರುವ ಗುಡ್ಡ, ಇದರ ಬುಡದಲ್ಲಿ ನದಿಯನ್ನು ಸಾಂಕೇತಿಕವಾಗಿ ತೋರಿಸುವ ಗೆರೆಗಳು; ಅಥವಾ ಇವುಗಳ ಎಡಬದಿಯಲ್ಲಿ ತ್ರಿಕೋನಾಕೃತಿ, ಜೋಡಿ ಮೀನು, ಬಲಬದಿಯಲ್ಲಿ ನಂದಿಪಾದ, ನದೀಚಿಹ್ನೆ ಹಾಗೂ ಬುಡದಲ್ಲಿ ಶ್ರೀವತ್ಸ ಮತ್ತು ಸ್ವಸ್ತಿಕ. ಇವೇ ಅಲ್ಲದೆ, ಅರಸರ ಅಥವಾ ಅವರ ಮಾಂಡಲಿಕರ ಹೆಸರುಗಳಿಲ್ಲದ, ಕೇವಲ ಚಿಹ್ನೆಗಳುಳ್ಳ ಸುಮಾರು ಏಳು ವಿಧದ ನಾಣ್ಯಗಳೂ ದೊರೆತಿವೆ.

ಚಂದ್ರವಳ್ಳಿಯಲ್ಲದೆ, ಚಿತ್ರದುರ್ಗ ತಾಲ್ಲೂಕು ಚಿಪ್ಪಿನಕೆರೆ ಮತ್ತು ಮೊಳಕಾಲ್ಮೂರು ತಾಲ್ಲೂಕು ಬ್ರಹ್ಮಗಿರಿ ನಿವೇಶನಗಳಲ್ಲಿ ದೊರೆತ ನಾಣ್ಯಗಳೂ ಇದೇ ವರ್ಗಕ್ಕೆ ಸೇರಿದಂಥವು. ಈ ಮೇಲಿನ

* ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ನಾಣ್ಯಗಳ ಸಾಲಿಗೆ ಸೇರದ ಹೊಸ ನಾಣ್ಯಗಳು ಈಗ ಬೆಳಕಿಗೆ ಬಂದಿರುವುದರಿಂದ ಚಿತ್ರದುರ್ಗ ಜಿಲ್ಲೆಯ ಶಾತವಾಹನಕಾಲೀನ ಇತಿಹಾಸಕ್ಕೆ ಇನ್ನಷ್ಟು ಪುಷ್ಟಿ ದೊರೆತಂತಾಗಿದೆ. ಈ ನಾಣ್ಯಗಳು ವೇದಾವತಿ ನದಿದಂಡೆಯಲ್ಲಿ ದೊರೆತಿರುವುದರಿಂದ, ಈ ನದಿಯ ಎರಡೂ ದಂಡೆಗಳ ಪರಿಸರವನ್ನು ಇನ್ನಷ್ಟು ಸೂಕ್ಷ್ಮವಾಗಿ ಗಮನಿಸುವ, ಅಂದರೆ ವೈಜ್ಞಾನಿಕವಾಗಿ ಸರ್ವೇಕ್ಷಣೆ ಕೈಗೊಳ್ಳುವ ಅಗತ್ಯ ಮೊದಲಿಗಿಂತ ಹೆಚ್ಚಾಗಿದೆ.

**ತೊರೆ ಓಬೇನಹಳ್ಳಿ ಮತ್ತು ಪರಿಸರ**

ಚಿತ್ರದುರ್ಗದಿಂದ ನೇರಕ್ಕೆ, ಅಂದರೆ ಪೂರ್ವದಿಕ್ಕಿಗೆ ಸುಮಾರು ೪೫ ಕಿ.ಮೀ. ಮತ್ತು ಹಿರಿಯೂರಿನಿಂದ ಪೂರ್ವಕ್ಕೆ ಸುಮಾರು ೧೬-೧೭ ಕಿ.ಮೀ.ಗಳ ಅಂತರದಲ್ಲಿದೆ ತೊರೆ ಓಬೇನಹಳ್ಳಿ. ರೂಢಿಯಲ್ಲಿ ಇದನ್ನು ಟಿ. ಓಬೇನಹಳ್ಳಿ ಎನ್ನಲಾಗುತ್ತದೆ. ಈ ಊರು ನೆಲಸಿರುವುದು ಹಿರಿಯೂರಿನಿಂದ, ಅಂದರೆ ಪಶ್ಚಿಮದಿಂದ ಪೂರ್ವಕ್ಕೆ ಹರಿಯುವ ವೇದಾವತಿ ನದಿಯ ಎಡದಂಡೆಯಲ್ಲಿ; ಅಂದರೆ, ನದಿಯ ಪಶ್ಚಿಮ ದಿಕ್ಕಿನಲ್ಲಿ. ನದಿಯಿಂದ ಈಗಿನ ಊರಿಗಿರುವ ಅಂತರ ೨ ಫರ್ಲಾಂಗ್.

ಆದರೆ ಹಳೆಯ ಊರು ನೆಲಸಿದ್ದುದು ನದಿದಂಡೆಯಲ್ಲೆ



ಎಂಬುದಕ್ಕೆ ಇಲ್ಲಿರುವ ಸ್ಮಾರಕಗಳೇ ಸಮರ್ಥನೆ ಒದಗಿಸುತ್ತವೆ. ನದಿ ದಂಡೆಯಲ್ಲಿರುವ ಪುಟ್ಟ ಈಶ್ವರ ದೇವಾಲಯ ಈಗ ಬಹುಪಾಲು ನಾಶಗೊಂಡಿದೆ. ಇದರಲ್ಲಿರುವ ಭವ್ಯ ಪ್ರಾಚೀನ ಲಿಂಗ ಮತ್ತು ಬಸವ ವಿಗ್ರಹಗಳು ಗಮನ ಸೆಳೆಯುತ್ತವೆ. ಸನಿಹದಲ್ಲಿ ವೀರನೋರ್ವನ ಶಿಲ್ಪವಿದ್ದು, ಇದನ್ನು ಆತನ ಸಮಾಧಿ ಎಡೆಯಲ್ಲಿ ಸ್ಥಾಪಿಸಿರುವಂತೆ ತೋರುತ್ತದೆ. ಹಳೆಯ ದೊಡ್ಡ ಗಾತ್ರದ ಇಟ್ಟಿಗೆಗಳು, ಅಲಂಕಾರ ಸಹಿತವಿದ್ದ ಕುಡುಗೋಲಿನಂಥಾ ನೂರಾರು ಕಬ್ಬಿಣದ ವಸ್ತುಗಳು, ಸ್ಫಟಿಕದ ಲಿಂಗ ಇತ್ಯಾದಿ ಇಲ್ಲಿ ಕಂಡುಬಂದಿರುವುದುಂಟು. ಇಲ್ಲಿ ಕೆಲವು ನಾಣ್ಯಗಳು ದೊರೆತಿರುವ ಬಗೆಗೆ ಹಾಗು ಹಳೆಯ ಸಮಾಧಿಗಳು ಮತ್ತು ಮೂಳೆಗಳು ಕಂಡುಬಂದಿರುವ ಬಗೆಗೂ ವರದಿಯಾಗಿರುವುದುಂಟು. ಈ ಪರಿಸರದಲ್ಲಿ ಓಬಳದೇವರು, ಲಕ್ಷ್ಮಿದೇವರು ಮೊದಲಾದ ಗುಡಿಗಳಿವೆ.

ಮೇಲೆ ಪ್ರಸ್ತಾಪಿಸಿದ ವ್ಯಕ್ತಿಯೋರ್ವನ ಶಿಲ್ಪ ಕೆಲವು ವಿಶೇಷ ಲಕ್ಷಣಗಳಿಂದ ಕೂಡಿದೆ. ನಿಂತಿರುವ ಭಂಗಿಯಲ್ಲಿರುವ ಈ ವ್ಯಕ್ತಿಯ ಎಡಗೈಯಲ್ಲಿ ವಿಶಿಷ್ಟಾಕಾರದ ದಂಡ ಹಾಗೂ ಬಲಗೈಯಲ್ಲಿ ಗಂಟೆಯನ್ನು ಹೋಲುವ ವಸ್ತುಗಳಿವೆ. ಮುಡಿಯಿಂದ ಕೂಡಿರುವಂತೆ ತೋರುವ ಈತ ಕಿವಿಗಳಲ್ಲಿ ಆಭರಣ, ಕೊರಳಲ್ಲಿ ಕಂಠೀಹಾರ; ನಡುಪಟ್ಟಿ ಮತ್ತು ನಡುವಸ್ತ್ರ; ತೋಳು, ಮುಂಗೈ ಮತ್ತು ಮುಂಗಾಲುಗಳಲ್ಲಿ ಬಳೆಗಳನ್ನು ಧರಿಸಿರುವಂತೆ



ಚಿತ್ರಿತನಾಗಿದ್ದಾನೆ. ನಡುವಸ್ತ್ರ ಎರಡು ಪಕ್ಕಗಳಲ್ಲೂ ಹರಡಿಕೊಂಡಿದೆ. ಇಲ್ಲಿ ಗಮನ ಸೆಳೆಯುವಂಥಾ ಅಂಶವೆಂದರೆ, ಈ ವ್ಯಕ್ತಿ ತನ್ನ ದೇಹದ ಮೇಲೆ ಧರಿಸಿಕೊಂಡಿರುವ ಎರಡು ಎಳೆಗಳ 'ಶಿವದಾರ'ಕ್ಕೆ ಎದೆಯ ಬಳಿ ಇರುವಂತೆ ಪುಟ್ಟ ಲಿಂಗವನ್ನು ಬಿಗಿದುಕೊಂಡಿರುವುದು. ಈ ವ್ಯಕ್ತಿಶಿಲ್ಪದ ಮೇಲ್ಭಾಗದಲ್ಲಿ ಲಿಂಗಸಹಿತವಿರುವ ನಂದಿವಿಗ್ರಹವಿದ್ದು, ಈಗ ಅದು ಮುಕ್ಕಾಗಿದೆ. ಮೇಲಿನ ಪಟ್ಟಿಕೆಯ ಎರಡೂ ಕೊನೆಗಳಲ್ಲಿ ಸೂರ್ಯ-ಚಂದ್ರರ

ರೇಖಾಚಿತ್ರಗಳಿವೆ. ಈ ವ್ಯಕ್ತಿಶಿಲ್ಪ ಪ್ರಾಚೀನ ಶಿವದೇವಾಲಯದ ಮುಂಬದಿಯ ತಗ್ಗಿನಲ್ಲಿ ನದಿದಂಡೆಗೇ ಹೊಂದಿಕೊಂಡು ಇರುವುದರಿಂದ, ಈ ಸ್ಥಳದಲ್ಲಿ ಈತನ ಸಮಾಧಿ ಇದ್ದಿರಬೇಕೆಂಬ ಶಂಕೆ ಮೂಡುತ್ತದೆ. ಈ ಹಿನ್ನೆಲೆಯಲ್ಲಿ, ಪ್ರಾಯಶಃ ಈ ವ್ಯಕ್ತಿ ಇಲ್ಲಿಯ ದೇವಾಲಯಕ್ಕೆ ಅಥವಾ ಪೂಜಾ ಎಡೆಗೆ ಸಂಬಂಧಿಸಿದವ ನಾಗಿರಬಹುದು. ಈತ ಈ ಕ್ಷೇತ್ರದ ಪಾಲಕ ಅಥವಾ ಈ ಎಡೆಯ ಮೇಲ್ವಿಚಾರಣೆ ಮಾಡುತ್ತಿದ್ದ 'ಕಟ್ಟಿಗೆ'ಯವನಾಗಿದ್ದಿರ ಬಹುದು. ಕಲ್ಯಾಣ ಚಾಲುಕ್ಯರ ಕಾಲ ಮತ್ತು ಆ ನಂತರದಲ್ಲಿ ಕಂಡುಬರುವಂತೆ, ಅಧಿಕಾರಸೂಚಕವಾದ ದಂಡವನ್ನು ಹಿಡಿದು ರಾಜಾಸ್ಥಾನ-ದೇವಾಲಯ-ಮಠ ಮಾನ್ಯಗಳಲ್ಲಿ ಶಿಸ್ತುಪಾಲನೆ ಕರ್ತವ್ಯ ನಿರ್ವಹಿಸುತ್ತಿದ್ದ 'ಕಟ್ಟಿಗೆ ಕಾಯಕ'ದ ವ್ಯಕ್ತಿಯಾಗಿದ್ದಿರ ಬಹುದು ಈತ. ಶಿಲ್ಪ ಲಕ್ಷಣಗಳ ಆಧಾರದಿಂದ ನಿರ್ಧರಿಸ ಬಹುದಾದ ಇದರ ಕಾಲಮಾನವೆಂದರೆ ಸುಮಾರು ೧೩ ನೇ ಶತಮಾನ.

ಹಿಂದೆ ಹಳೆಯ ಊರಿನ ಸುತ್ತಲೂ ಕೋಟೆ-ಪ್ರಕಾರ ಇದ್ದು, ಈಗ ನಾಶಗೊಂಡಿದೆ. ನಾಲ್ಕು ಮೂಲೆಗೆ ನಾಲ್ಕು ಬುರುಜುಗಳಿಂದ ಕೂಡಿದ್ದಿತಂತೆ ಈ ಕೋಟೆ. ಜನರು ಈ ಕೋಟೆಯ 'ಊರುಬಾಗಿಲು' ಮೂಲಕವೇ ಓಡಿಯಾಡಬೇಕಾಗಿದ್ದಿತು. ಸುಮಾರು ೧೦೦-೧೨೦ ವರುಷಗಳ ಹಿಂದಿನವರೆಗೂ ಈ ಕೋಟೆ ಉಳಿದುಕೊಂಡಿದ್ದಿತು. ಆ ನಂತರ ಈ ಕೋಟೆಯನ್ನು ಹೂವಿನ ಹೊಳೆ ಒಡ್ಡರಿಂದ ಕೀಳಿಸಿ ಕಲ್ಲುಗಳನ್ನು ಈಗಿನ ಹೊಸ ಊರಿಗೆ ವರ್ಗಾಯಿಸಿದರಂತೆ; ಮನೆ ಕಟ್ಟಿಕೊಳ್ಳಲು ಬಳಿಸಿದರಂತೆ. ಈ ಕಾರಣಕ್ಕಾಗಿಯೇ ಹಳೆಯ ಕೋಟೆಗೆ ಹೊಂದಿಕೊಂಡ ಹೊಸ ಊರಿನ ಭಾಗವನ್ನು ಕೋಟೆಹಾಳು ಎಂತಲೂ ಕೋಟೆಯಿದ್ದ ಹಳೆಯ ಭಾಗವನ್ನು ಕೋಟೆ ಪ್ರದೇಶವೆಂತಲೂ ಇಂದಿಗೂ ಕರೆಯುವುದುಂಟು. ಆದರೆ ಈಗಿರುವ ಊರು ಅಸ್ತಿತ್ವಕ್ಕೆ ಬಂದುದು ಸುಮಾರು ೨೦೦-೨೫೦ ವರುಷಗಳ ಹಿಂದೆ ಎಂಬುದು ಗಮನಾರ್ಹ.

ತೊರೆ ಓಬೇನಹಳ್ಳಿಯ ಪಶ್ಚಿಮ ಮತ್ತು ಉತ್ತರ ದಿಕ್ಕುಗಳಲ್ಲಿ ಹಳೆಯ ಮನೆಗಳ ನಿವೇಶನಗಳು ಕಂಡುಬರುತ್ತವೆ. ಊರಿನಿಂದ ಉತ್ತರಕ್ಕೆ ಸುಮಾರು ೧$^{೧}/_{೨}$ ಕಿ.ಮೀ. ಅಂತರದಲ್ಲಿ ಬೂದಿ ಸಹಿತವಿರುವ ಸೋರೆಗಳೂ ಗೋಚರಿಸಿರುವುದುಂಟು. ಏನೇ ಇದ್ದರೂ ವ್ಯವಸ್ಥಿತ ಪರಿಶೋಧನೆಯಿಂದ ಮಾತ್ರವೇ ಇವುಗಳು ಬಗೆಗೆ ಅಧಿಕೃತವಾಗಿ ಹೇಳಬಹುದು.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ, ಶಾತವಾಹನ ಕಾಲೀನ ನಾಣ್ಯಗಳ ಶೋಧನೆ ಕುರಿತು ಲಭ್ಯವಿರುವ ಕೆಲವು ಕುತೂಹಲಕಾರಿ ಸಂಗತಿಗಳನ್ನು ಇಲ್ಲಿ ಪ್ರಸ್ತಾಪಿಸುವುದು ಅಗತ್ಯ. ಮುಖ್ಯವಾಗಿ, ಈ ಗ್ರಾಮ ನಾಯಕ ಮತ್ತು ಆದಿಕರ್ನಾಟಕ ಕುಟುಂಬಗಳಿಂದ ಕೂಡಿದ್ದು, ಈ ವರ್ಗದವರಲ್ಲಿ ಪರಸ್ಪರ ಮಧುರ ಸಂಬಂಧವಿದೆ. ಈಗ ಸಂಗ್ರಹಗೊಂಡಿರುವ ಕುದುರೆ ಲಾಂಛನದ ಸೀಸದ ನಾಣ್ಯಗಳು ಇಲ್ಲಿ ಕೆಲವರ ವಶದಲ್ಲಿದೆ.

ಹಿಂದೊಮ್ಮೆ ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತಿದ್ದ ಈ ನಾಣ್ಯಗಳ ಸಂಖ್ಯೆ ಇಳಿಮುಖವಾಗಿದೆ. ಈ ನಾಣ್ಯಗಳನ್ನು ಸಂಗ್ರಹಿಸಿದ್ದವರ ಕಥೆಗಳೂ ಇಲ್ಲಿ ಪ್ರಚಾರದಲ್ಲಿವೆ. ಉದಾಹರಣೆಗೆ, ಚಿತ್ತಮ್ಮ (ಟಿ. ಪಾಂಡು ರಂಗನಾಯಕರ ಅಜ್ಜಿ) ಅವರಿಗೆ ಇಲ್ಲಿಯ ಶಿಳ್ಳೇಕ್ಯಾತರ ಬೀಳಿನಲ್ಲಿ (ಹೊಲದಲ್ಲಿ) ಒಂದು ಸೋರೆಯ ತುಂಬಾ 'ಕುದುರೆ ಮಾರ್ಕಿನ ಸೀಸದ ನಾಣ್ಯಗಳು' ದೊರೆತಿದ್ದುವಂತೆ. ಸೀಸಲೋಹದ ಈ ನಾಣ್ಯಗಳು ಬೇರೆಯವರ ಕಣ್ಣಿಗೆ ಬಿದ್ದರೆ ಬಂಗಾರದ ನಾಣ್ಯಗಳಾಗಿ ಪರಿವರ್ತನೆಗೊಳ್ಳುತ್ತವೆಂಬ ನಂಬಿಕೆ ಯಿಂದ ಅವುಗಳನ್ನು ಸಗಣಿ ಬಾಚುವ ತಟ್ಟೆಯೊಂದರಲ್ಲಿ ತುಂಬಿ ಮನೆಯ ಹೊರಗಡೆ ಇಟ್ಟಿರುತ್ತಿದ್ದರಂತೆ.

ಈ ನಾಣ್ಯಗಳು ಈಗಲೂ ಆಗಾಗ್ಗೆ ದೊರೆತು ಸುದ್ದಿ ಮಾಡುವುದುಂಟು. ನಾಗರಕಲ್ಲ ಹಸಗೆಯಲ್ಲಿ (ತಳವಾರ ನಿಂಗಪ್ಪನವರ ಗದ್ದೆಯಲ್ಲಿ) ಮತ್ತು ಅಂಗಡಿ ರಂಗಣ್ಣನವರ ಹೊಲಗಳಲ್ಲಿ ಈ ನಾಣ್ಯಗಳು ಇಂದಿಗೂ ದೊರಕುವುದೇ ಇದಕ್ಕೆ ಕಾರಣ. ಈ ನಾಣ್ಯಗಳಿಂದಾಗಿ, ಮಡಿಕೆ-ಕುಡಿಕೆ ಮತ್ತು ಇಟ್ಟಿಗೆಗಳ ಸಂಗ್ರಹಕ್ಕಾಗಿ ಆಸಕ್ತ ಹವ್ಯಾಸಿ ಸಂಶೋಧಕರೂ ಹವ್ಯಾಸಿ ನಾಣ್ಯಶಾಸ್ತ್ರಜ್ಞರೂ ಈ ನಿವೇಶನಕ್ಕೆ ಭೇಟಿಕೊಟ್ಟು ಈ ವಸ್ತುಗಳನ್ನು ಪಡೆದುಕೊಂಡಿರುವ ಉದಾಹರಣೆಗಳಿವೆ.



ತೊರೆ ಓಬೇನಹಳ್ಳಿಯತ್ತ ಚರಿತ್ರಕಾರರು ಗಮನ ಹರಿಸಲು ಇಲ್ಲಿ ದೊರೆಯುತ್ತಿರುವ ಶಾತವಾಹನಕಾಲೀನ ನಾಣ್ಯ ಇತ್ಯಾದಿ ಅವಶೇಷಗಳಷ್ಟೆ ಕಾರಣವಲ್ಲ; ರಂಗ ಕಲಾವಿದ ಟಿ. ಪಾಂಡು ರಂಗನಾಯಕರ ಸ್ವಂತ ಸಂಗ್ರಹದಲ್ಲಿರುವ ಹಲವಾರು ಕತ್ತಿಗಳು ಮತ್ತಿತರ ಅಮೂಲ್ಯ ವಸ್ತುಗಳೂ ಕಾರಣ. ಆಕರ್ಷಕ ಚಿತ್ರ ವಿನ್ಯಾಸದಿಂದ ಕೂಡಿದ, ಬೆಳ್ಳಿ ಲೇಪನದಿಂದ ಮೆರಗು ಪಡೆದ ವಿವಿಧ ಗಾತ್ರದ ಕತ್ತಿಗಳು ಇವರ ವಶದಲ್ಲಿವೆ. ಕೆಲವು ಕತ್ತಿಗಳ ಅಲಗಿನ ಮೇಲೆ ಮೂಡಿಸಲಾಗಿರುವ ಚಿಹ್ನೆಗಳು ಇವುಗಳ ಕಾಲಮಾನ, ನಿರ್ಮಾಣ ಮುಂತಾದ ತಾಂತ್ರಿಕಾಂಶಗಳ ಮೇಲೆ ಬೆಳಕು ಚೆಲ್ಲುತ್ತವೆ. ಉದಾಹರಣೆಗೆ, ಈಟಿಗಳನ್ನು ಹೋಲುವ

ಚಿಹ್ನೆಗಳ ಜತೆಗೆ 'W' ಅಕ್ಷರ ಸಂಕೇತವನ್ನೂ '1759' ಎಂಬ ತೇದಿಯನ್ನು ಒಂದೆರಡು ಕತ್ತಿಗಳ ಮೇಲೆ ನೋಡಬಹುದು. ನಿಶ್ಚಿತವಾಗಿಯೂ ಇವು ಪಾಳೆಯಗಾರರ ಕಾಲಕ್ಕೆ ಸೇರಿದುವು. ಆದರೆ ಈ ಭಾಗದಲ್ಲಿ ಇಂಗ್ಲಿಷರ ಪ್ರವೇಶವಾದುದು ೧೮೦೦ರ ತರುವಾಯವಾದ್ದರಿಂದ, ಇವುಗಳ ಕಾಲಮಾನದ ಬಗೆಗೆ ಮರು ಪರಿಶೀಲಿಸಲು ಅವಕಾಶವಿದೆ.

**ಹೊಸ ನಾಣ್ಯಗಳು**

ಈಗ ದೊರೆತಿರುವ ಸೀಸದ ನಾಣ್ಯರಾಶಿಯಲ್ಲಿ ಕೆಲವನ್ನುಳಿದು ಇತರ ಬಹುಪಾಲು ನಾಣ್ಯಗಳು ಎರಡೂ ಬದಿಗಳಲ್ಲಿ ಏನನ್ನೂ ಸ್ಪಷ್ಟವಾಗಿ ಗುರುತಿಸಲಾಗದಷ್ಟು ಸವೆದುಹೋಗಿವೆ; ಹಾಗೂ *Oxidation* ಕ್ರಿಯೆಗೆ ತುತ್ತಾಗಿ ಅಸ್ಪಷ್ಟವಾಗಿವೆ. ಆದರೂ ಈಗ ಸಂಗ್ರಹಗೊಂಡಿರುವ ನಾಣ್ಯಗಳನ್ನು ಪರಿಶೀಲಿಸಿದರೆ ತಕ್ಕಮಟ್ಟಿಗಾದರೂ ಕೆಲವು ಚಿಹ್ನೆಗಳನ್ನು ಗುರುತಿಸಬಹುದು.

ಈ ನಾಣ್ಯಗಳ ಮೇಲ್ಮುಖದಲ್ಲಿ ಕಂಡುಬರುವುದು ಬಲಮುಖನಾಗಿ ನಿಂತಿರುವ ಕುದುರೆಯ ಚಿತ್ರ. ಕುದುರೆಯ



ಮೇಲ್ಮುಖ
(ಬಲಮುಖನಾಗಿ ನಿಂತಿರುವ ಕುದುರೆ ಹಾಗೂ ಗೋಳಾಕಾರದ ವಸ್ತು)



ಹಿಮ್ಮುಖ
(ಚೈತ್ಯ ಮತ್ತು ವೃಕ್ಷ)

ಮುಂದೆ ಗೋಳಾಕಾರದ ವಸ್ತು (*spherical object*) ವೊಂದಿದೆ. ಮೇಲೆ ಶ್ರೀವತ್ಸ ಚಿಹ್ನೆಯಿದೆ. ನಾಣ್ಯದ ಹಿಮ್ಮುಖದಲ್ಲಿ ಆರು ಕಮಾನುಗಳುಳ್ಳ ಚೈತ್ಯ ಹಾಗೂ ಅದರ ಮೇಲೆ ಬಿದಿಗೆ ಚಂದ್ರನಾಕೃತಿ; ಕಟಾಂಜನ ಅಥವಾ ಬೇಲಿಯಲ್ಲಿ ವೃಕ್ಷ; ಹಾಗೂ ಬುಡದಲ್ಲಿ ಚುಕ್ಕೆಗಳ ಸಹಿತವಿರುವ ಅಲೆಗಳು. ಕುದುರೆಯ ಚಿಹ್ನೆಯಿರುವ ಈ ನಾಣ್ಯಗಳು ಒಂದೇ ಆಕಾರ ಮತ್ತು ತೂಕದವೆಂಬಂತೆ ತೋರಿದರೂ ಅವುಗಳ ಮೇಲ್ಮುಖ ಹಾಗೂ ಹಿಮ್ಮುಖಗಳಲ್ಲಿಯ ಚಿಹ್ನೆಗಳಲ್ಲಿ ಕಂಡುಬರುವ ಕೆಲವು ವ್ಯತ್ಯಾಸಗಳಿಂದಾಗಿ ಇವುಗಳನ್ನು ನಿಖರವಾಗಿ ಗುರುತಿಸುವುದು ಸ್ವಲ್ಪ ಕಷ್ಟವೇ ಸರಿ.

ನಾಣ್ಯಗಳಲ್ಲಿ ಅಕ್ಷರಗಳು ಬಹುಪಾಲು ಅಳಿಸಿ ಹೋಗಿರುವುದರಿಂದ ಅರಸ ಅಥವಾ ಆಡಳಿತಗಾರನ ಹೆಸರನ್ನು ನಿರ್ದಿಷ್ಟವಾಗಿ ಹೇಳಬರುವಂತಿಲ್ಲ. ಆದರೆ ಈ ನಾಣ್ಯಗಳು ಮೇಲ್ಮುಖ ಮತ್ತು ಹಿಮ್ಮುಖಗಳಲ್ಲಿ ಉಳಿಸಿಕೊಂಡಿರುವ ಕೆಲವು ಚಿಹ್ನೆಗಳನ್ನಾದರೂ ಗಮನಿಸಿ ಹೇಳುವುದಾದರೆ ಇವು ವಾಶಿಷ್ಠಿ ಪುತ್ರ ಪುಳುಮಾವಿಯ ಅವಧಿಯವೆಂದು ತರ್ಕಿಸಬಹುದು. ಏಕೆಂದರೆ ನಾಣ್ಯದ ಮೇಲೆ 'ರಾಞೊ... ಪುಳುಮಾವಿಸ' ಎಂಬ ಬರಹವಿದ್ದರೆ ಅದರ ಮಧ್ಯದ 'ವಾಶಿಷ್ಠಿ ಪುತಸ' ಎಂಬುದು ಲೋಪವಾಗಿರುವ ಸಾಧ್ಯತೆಯಿರುತ್ತದೆಂದು ಡಾ. ಮಾಲಾ ದತ್ತಾ ಅವರು ಅಭಿಪ್ರಾಯಿಸುತ್ತಾರೆ (ಮಾಲಾ ದತ್ತಾ: ೧೯೯೦ : ೪೮)

ಪ್ರಸ್ತುತ ಕುದುರೆ ಚಿಹ್ನೆಯ ನಾಣ್ಯಗಳು ವರದಿಯಾಗಿರುವ ನೆಲೆಗಳೆಂದರೆ ಆಂಧ್ರಪ್ರದೇಶದ ಅನಂತಪುರ, ಕಡಪಾ ಹಾಗೂ ಕೃಷ್ಣಾ ಮತ್ತು ಗೋದಾವರಿ ಜಿಲ್ಲೆಗಳು. ಈ ಪ್ರದೇಶಗಳಲ್ಲಿ ಈ ನಾಣ್ಯಗಳು ವ್ಯಾಪಕವಾಗಿ ಚಲಾವಣೆಯಲ್ಲಿದ್ದುದನ್ನು ಗುರುತಿಸಲಾಗಿದೆ. ಎಡಗಡೆ ಮುಖಮಾಡಿನಿಂತ ಕುದುರೆಯ ಚಿಹ್ನೆಯುಳ್ಳ ನಾಣ್ಯಗಳು ವಾಶಿಷ್ಠಿಪುತ್ರ ಪುಳುಮಾವಿ, ವಾಶಿಷ್ಠಿಪುತ್ರ ಶಾತಕರ್ಣಿ, ಗೌತಮೀಪುತ್ರ ಯಜ್ಞಶಾತಕರ್ಣಿ ಮತ್ತು ಚಂದ್ರಶಾತಕರ್ಣಿಯರ ಕೊಡುಗೆಗಳಾದರೆ, ಬಲಗಡೆ ಮುಖಮಾಡಿ ನಿಂತಿರುವ ಕುದುರೆಯಿರುವ ನಾಣ್ಯವನ್ನು ಹೊರತಂದವನು ಗೌತಮೀಪುತ್ರ ಯಜ್ಞಶಾತಕರ್ಣಿ. ಮಾಲಾ ದತ್ತಾ ಅವರ ಪ್ರಕಾರ, ಉಜ್ಜಯಿನೀ ಚಿಹ್ನೆ ಸಹಿತವಿರುವ ಕುದುರೆ ಲಾಂಛನದ ನಾಣ್ಯವು ಆಂಧ್ರ ಪ್ರದೇಶಕ್ಕೆ ಅಪರೂಪದ್ದು. ಆದರೆ ಮೇಲ್ಮುಖದಲ್ಲಿ ಕುದುರೆಯನ್ನು, ಹಿಮ್ಮುಖದಲ್ಲಿ ವೃಕ್ಷ ಸಹಿತವಿರುವ ಚೈತ್ಯ ಚಿಹ್ನೆಗಳನ್ನು ಹೊಂದಿರುವ ನಾಣ್ಯಗಳು ಅನಂತಪುರ ಮತ್ತು ಕಡಪಾ ಜಿಲ್ಲೆಗಳಲ್ಲಿ ದೊರೆತಿದ್ದು, ಅವು ವಾಶಿಷ್ಠಿ ಪುತ್ರ ಪುಳುಮಾವಿ ಮತ್ತು ವಾಶಿಷ್ಠಿ ಪುತ್ರ ಶಾತಕರ್ಣಿಯರಿಗೆ ಸಂಬಂಧಿಸಿದುವು. ಈ ನಾಣ್ಯಗಳು ಕೃಷ್ಣಾ-ಗೋದಾವರಿ ಪ್ರದೇಶಗಳವರೆಗೆ, ಅಂದರೆ ತಮಿಳುನಾಡಿನ ಸಮೀಪದ ಪರಿಸರದವರೆಗೆ ಪ್ರಸಾರದಲ್ಲಿದ್ದವು (ಮಾಲಾ ದತ್ತಾ : ೧೯೯೦ : ೨೧೫). ವಾಶಿಷ್ಠ ಪುತ್ರ ಪುಳುಮಾವಿಯ ಅಧಿಕಾರ ದಕ್ಷಿಣ ಆಂಧ್ರದವರೆಗೆ ವಿಸ್ತರಿಸಿದ್ದಿತೆಂದು ಇದರಿಂದ ವ್ಯಕ್ತಪಡುತ್ತದೆ. ಆದರೆ ಈ ಪ್ರದೇಶದವರೆಗೆ ಈತನ ಆಳ್ವಿಕೆ ಇದ್ದಿತೆಂಬುದನ್ನು ಸಮರ್ಥಿಸಲು ಶಾಸನಾಧಾರಗಳು ಲಭ್ಯವಿಲ್ಲ.

ಈ ಹಿನ್ನೆಲೆಯಲ್ಲಿ, ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕಿನ ತೊರೆ ಓಬೇನಹಳ್ಳಿ ಪರಿಸರದಲ್ಲಿ, ಅಂದರೆ ವೇದಾವತಿ ನದಿದಂಡೆಯಲ್ಲಿ ದೊರೆತ ಈ ಅರಸನ ನಾಣ್ಯಗಳು, ಈ ಜಿಲ್ಲೆಯ ಮಟ್ಟಿಗೆ ಮೊದಲಬಾರಿಗೆ ವರದಿಯಾದಂಥವೆನ್ನಲಡ್ಡಿಯಿಲ್ಲ. ಚಿತ್ರದುರ್ಗ ಸಮೀಪದ ಚಂದ್ರವಳ್ಳಿಯಲ್ಲಿ ವಾಶಿಷ್ಠಿಪುತ್ರ ಪುಳುಮಾವಿಯ ನಾಣ್ಯಗಳು ದೊರೆತಿವೆಯೆಂದು ಭಾವಿಸಲಾಗಿದ್ದರೂ, ಮೇಲ್ಮುಖದಲ್ಲಿ ಕುದುರೆಯ ಚಿಹ್ನೆಯಿರುವ ನಾಣ್ಯಗಳು ಕಂಡುಬಂದಿಲ್ಲ. ಇದೇ ಜಿಲ್ಲೆಯ ಚಿಪ್ಪಿನಕೆರೆ, ಬ್ರಹ್ಮಗಿರಿ ಮೊದಲಾದ ನಿವೇಶನಗಳಲ್ಲಿಯೂ ಈ ಬಗೆಯ ನಾಣ್ಯಗಳು ದೊರೆಯದಿರುವುದು ಗಮನಾರ್ಹ. ಈ ದೃಷ್ಟಿಯಿಂದ, ಶಾತವಾಹನರು ಪ್ರಾದೇಶಿಕವಾಗಿ ಮುದ್ರಿಸಿ ಚಲಾವಣೆಗೆ ತಂದ

ನಾಣ್ಯಗಳು ಈ ಜಿಲ್ಲೆಯ ಕೆಲವು ಭಾಗಗಳಲ್ಲಾದರೂ ಪ್ರಚಲಿತದಲ್ಲಿದ್ದವೆನ್ನುವುದನ್ನು ಗಮನಿಸಬಹುದು.

ಆದರೆ ಈ ನಾಣ್ಯಗಳು ಚಂದ್ರವಳ್ಳಿಯವರೆಗೆ ಏಕೆ ಹರಿದುಬರಲಿಲ್ಲವೆನ್ನುವುದನ್ನು ಅರಿಯುವುದು ಅಗತ್ಯ. ಅಂದರೆ, ಚಂದ್ರವಳ್ಳಿಯು ಶಾತವಾಹನ ಅರಸರ ನೇರ ಆಳ್ವಿಕೆಗೆ ಒಳಪಟ್ಟಿರಲಿಲ್ಲವೇ? ಆಂಧ್ರಪ್ರದೇಶದ ಅನಂತಪುರ ಮತ್ತು ಕಡಪಾ ಜಿಲ್ಲೆಗಳಲ್ಲಿ ಕುದುರೆ ಚಿಹ್ನೆಯ ನಾಣ್ಯಗಳು, ವಿಪುಲವಾಗಿ ಚಲಾವಣೆಯಲ್ಲಿದ್ದುದನ್ನು ಗಮನಿಸಿದರೆ, ಈ ಪ್ರದೇಶಗಳಿಗೆ ಸಮೀಪವಿರುವ ಚಿತ್ರದುರ್ಗ ಜಿಲ್ಲೆಗೂ ಇವು ಯಾವುದೋ ಮಾರ್ಗದಿಂದ ಹರಿದು ಬಂದಿರುವ ಸಾಧ್ಯತೆ ಬಗೆಗೆ ಪರಿಶೀಲಿಸಬೇಕಿದೆ. ನದಿತೀರದ ಗ್ರಾಮಗಳಿಗೆ ವಲಸೆ ಬಂದ ಜನಗಳಿಂದಲೂ ಇವು ಈ ಜಿಲ್ಲೆಯವರೆಗೆ ಪಸರಿಸಿದ್ದಿರಬಹುದು. ವೇದಾವತಿ ನದಿದಂಡೆಯ ಇತರ ನಿವೇಶನಗಳನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡುವುದರ ಮೂಲಕ ಈ ಜಿಜ್ಞಾಸೆಯನ್ನು ಪರಿಹರಿಸಲು ಹಾಗೂ ಶಾತವಾಹನಕಾಲೀನ ಚಿತ್ರದುರ್ಗ ಜಿಲ್ಲೆಯ ರಾಜಕೀಯ ನಕ್ಷೆಯನ್ನು ಪುನಾರಚಿಸಲು ಸಾಧ್ಯವೆನ್ನಬಹುದು.

**ಚಂದ್ರವಳ್ಳಿ ನಿವೇಶನದಲ್ಲಿ ದೊರೆತ ಸಿಂಹಚಿಹ್ನೆಯ ನಾಣ್ಯ**

ಚಂದ್ರವಳ್ಳಿ ನಿವೇಶನದಲ್ಲಿ ಈವರೆಗೆ ಬೆಳಕಿಗೆ ಬಂದ ಪ್ರಮುಖ ನಾಣ್ಯಗಳು ಆನೆ, ವೃಷಭ ಚಿಹ್ನೆಗಳನ್ನು ಹೊಂದಿರುವಂಥವು. ಉಳಿದ ಸಣ್ಣ ಅಳತೆಯ ನಾಣ್ಯಗಳು ಉಜ್ಜಯಿನೀ ಚಿಹ್ನೆ, ಚೈತ್ಯ ಚಿಹ್ನೆ, ಇತ್ಯಾದಿ ಚಿಹ್ನೆಗಳಿಂದ ಕೂಡಿವೆ. ಆದರೆ ಭೂಶೋಧನೆಯ ಯಾವ ಹಂತದಲ್ಲೂ ಈ ನಿವೇಶನದಲ್ಲಿ ಸಿಂಹಚಿಹ್ನೆಯುಳ್ಳ ನಾಣ್ಯ ದೊರೆತ ಬಗೆಗೆ ವರದಿಯಾಗಿರಲಿಲ್ಲ. ಈಗ ಇದೇ ನಿವೇಶನದಲ್ಲಿ ಮೇಲ್ಮುಖದಲ್ಲಿ ಸಿಂಹಚಿಹ್ನೆ ಹೊಂದಿರುವ ನಾಣ್ಯವೊಂದು ಪತ್ತೆಯಾಗಿರುವುದು ಗಮನಿಸಬೇಕಾದ ಅಂಶ.

ಇದು ತಕ್ಕಮಟ್ಟಿಗೆ ದುಂಡಾಗಿರುವ ಸೀಸದ ನಾಣ್ಯ. ಇದರ ಮೇಲ್ಮುಖದಲ್ಲಿ ಬಲಮುಖನಾಗಿ ನಿಮಿರಿ ನಿಂತಿರುವ ಸಿಂಹ.



ಮೇಲ್ಮುಖ
(ಸಿಂಹ : ಬಿಲ್ಲು-ಬಾಣ : ಹೋರಾಟದ ಖಡ್ಗ)



ಹಿಮ್ಮುಖ
(ವೃಕ್ಷ ಸಹಿತವಿರುವ ಚೈತ್ಯ)

ಇದರ ಬಾಲ ಡೊಂಕಾಗಿ ಮೇಲೆದ್ದು ನಿಂತಿದೆ. ಬಿಲ್ಲು-ಬಾಣ, ಹೋರಾಟದ ಖಡ್ಗ ಹಾಗೂ ಅಕ್ಷರಗಳಿವೆ (*Legend*). ಹಿಮ್ಮುಖದಲ್ಲಿ ಚೈತ್ಯ ಮತ್ತು ವೃಕ್ಷ ಚಿಹ್ನೆಗಳಿವೆ. ಈ ವಿಧದ ನಾಣ್ಯಗಳು ಆಂಧ್ರದೇಶ ಅಥವಾ ಪೂರ್ವ ದಖ್ಖನಿನವೆಂದು ಭಾವಿಸಲಾಗುತ್ತದೆ. ಈ ನಾಣ್ಯಗಳನ್ನು ವಾಶಿಷ್ಠಿ ಪುತ್ರ ಪುಳುಮಾವಿ, ವಾಶಿಷ್ಠಿ ಪುತ್ರ ಶಾತಕರ್ಣಿ, ಶಕ ಶಾತಕರ್ಣಿ, ಗೌತಮೀಪುತ್ರ ಶಾತಕರ್ಣಿ ಹಾಗೂ ಶಾತವಾಹನರಿಗೆ ಆರೋಪಿಸಲಾಗಿದ್ದು, ಆಂಧ್ರಪ್ರದೇಶದ ಮಟ್ಟಿಗೆ ಕೃಷ್ಣಾ ಮತ್ತು ಗೋದಾವರಿ ಜಿಲ್ಲೆಗಳು ಹಾಗೂ ಧರಣಿಕೋಟ (ಗುಂಟೂರು ಜಿಲ್ಲೆ) ಮತ್ತು ಮುಖಲಿಂಗಂ ನಿವೇಶನಗಳನ್ನು ಈ ನಾಣ್ಯಗಳು ಬಳಕೆಯಲ್ಲಿದ್ದ ಪ್ರದೇಶಗಳೆಂದು ಗುರುತಿಸಲಾಗಿದೆ.

ಸಿಂಹಚಿಹ್ನೆಯ ಒಂದೇ ಒಂದು ನಾಣ್ಯವು ಚಂದ್ರವಳ್ಳಿ ನಿವೇಶನದಲ್ಲಿ ಇದೀಗ ದೊರೆತಿರುವುದರಿಂದ, ಇದರ ಖಚಿತ *identification* ಇನ್ನೂ ತೊಡಕಾಗಿಯೇ ಉಳಿದಿದೆಯೆಂಬುದರಲ್ಲಿ ಸಂಶಯವಿಲ್ಲ. ಆದರೆ ಚಂದ್ರವಳ್ಳಿ ನಿವೇಶನದಲ್ಲಿ ಈ ತನಕ ಕೈಗೊಳ್ಳಲಾದ ೩-೪ ಹಂತಗಳ ಭೂಶೋಧನೆ ಮತ್ತು ನಿರಂತರವಾದ ಸರ್ವೇಕ್ಷಣೆಗಳ ತರುವಾಯವೂ ಸಿಂಹಚಿಹ್ನೆಯ ನಾಣ್ಯ ದೊರೆತಿರಲಿಲ್ಲವೆಂಬುದು ಇಲ್ಲಿ ಮುಖ್ಯ. ಈಗ ದೊರೆತಿರುವ ಪ್ರಸ್ತುತ ನಾಣ್ಯದ ಸಂಬಂಧದಲ್ಲಿ, ದಕ್ಷಿಣದಲ್ಲಿ ಆದ ಶಾತವಾಹನರ ರಾಜಕೀಯ ವಿಸ್ತರಣೆ ಕುರಿತು ಯಾವ ಬಗೆಯ ನೂತನಾಂಶಗಳು ವ್ಯಕ್ತಪಡಬಹುದೆಂಬುದನ್ನು ನಿರ್ಧರಿಸಲು ನಾಣ್ಯಶಾಸ್ತ್ರಜ್ಞರು ಮತ್ತು ಚರಿತ್ರಕಾರರ ಗಮನ ಇತ್ತ ಹರಿಯಬೇಕಿದೆ.*



* (ತೊರೆ ಓಬೇನಹಳ್ಳಿ ಕ್ಷೇತ್ರಕಾರ್ಯ ಕೈಗೊಳ್ಳಲು ಸೂಚನೆ ನೀಡಿದ ಡಾ. ಡಿ. ಆರ್. ರಾಮಚಂದ್ರನಾಯಕ್, ಜತೆಗೆ ಬಂದು ಸಹಕರಿಸಿದ ಹೆಚ್. ಧನಂಜಯ, ನಾಣ್ಯಗಳನ್ನೂ ಆತಿಥ್ಯವನ್ನೂ ನೀಡಿ ಅಧ್ಯಯನಕ್ಕೆ ನೆರವಾದ ರಂಗ ಕಲಾವಿದ ಟಿ. ಪಾಂಡುರಂಗನಾಯಕ, ಕೋಟೆ ಮತ್ತಿತರ ಅವಶೇಷಗಳ ಬಗೆಗೆ ಮಾಹಿತಿ ನೀಡಿದ ಗೌಡರ ರಂಗಪ್ಪ (ವಯಸ್ಸು ೧೧೦) ಹಾಗೂ ತೊರೆ ಓಬೇನಹಳ್ಳಿ ಗ್ರಾಮಸ್ಥರಿಗೆ ಕೃತಜ್ಞನಾಗಿದ್ದೇನೆ.)

ಎಂ. ನಿತ್ಯಾನಂದ ಪೈ ಕಾರ್ಕಳ*

# ಇಮ್ಮಡಿ ದೇವರಾಯನ ವರಹ ಮತ್ತು ಇಮ್ಮಡಿ ಸಿಂಘಣನ ಅಪರೂಪದ ಗದ್ಯಾಣ

**ವಿಜಯನಗರದ ಇಮ್ಮಡಿ ದೇವರಾಯನ ವರಹ**

***ತೂಕ:*** ೩.೪ ಗ್ರಾಂ.***ಆಕಾರ:*** ವೃತ್ತಾಕಾರ ***ವ್ಯಾಸ:*** ೧೩ ಮಿ.ಮೀ.



**ಮುಂಬದಿ:** ಬಲಬದಿಗೆ ಮುಖಮಾಡಿ ನಿಂತಿರುವ ಬಸವನ ಎದುರು (दे) (ದೆ) ಎಂಬ ನಾಗರೀ ಲಿಪಿ ಇದೆ. ಬಸವನ ಕುತ್ತಿಗೆಗೆ ಗಂಟೆ ಇರುವ ಹಾರವಿದ್ದು, ಬೆನ್ನಮೇಲೆ ಸೂರ್ಯಚಂದ್ರರಿದ್ದಾರೆ. ಕೆಳಭಾಗದಲ್ಲಿ ಸವೆದುಹೋದ ಅಸ್ಪಷ್ಟ ಲಿಪಿಯನ್ನು ಕಾಣಬಹುದು.

**ಹಿಂಬದಿ :** ಶ್ರೀ / ನೀಲಕಂ / ಠ (श्री / नीलकं / ठ) ಎಂಬ ಮೂರುಸಾಲಿನ ನಾಗರೀ ಬರಹವು ಚುಕ್ಕೆಗಳಿಂದ ಮಾಡಲ್ಪಟ್ಟ ವೃತ್ತದೊಳಗಿದೆ.

ನೀಲಕಂಠ (ಅರ್ಥಾತ್ ನೀಲಕುತ್ತಿಗೆಯವ ಅಂದರೆ ಶಿವ) ಎಂಬ ಹೆಸರು ಅಥವಾ ಬಿರುದಿರುವ ಯಾವನೇ ಅರಸರು ವಿಜಯನಗರ ಸಾಮ್ರಾಜ್ಯದ ಇತಿಹಾಸದಲ್ಲಿ ಕಂಡುಬರುವುದಿಲ್ಲ. ಆದರೆ ನಾಣ್ಯದ ಎದುರು ಬದಿಯಲ್ಲಿರುವ 'ದೆ' ಎಂಬ ನಾಗರೀ ಲಿಪಿ ಇರುವುದರಿಂದ ಇದು ದೇವರಾಯನ ನಾಣ್ಯವೆಂದು ಹೇಳಬಹುದು. ವಿಜಯನಗರದ ಆಳ್ವಿಕೆಯಲ್ಲಿ ದೇವರಾಯನೆಂದು ಹೆಸರಿರುವವರಲ್ಲಿ ದೇವರಾಯ I (ಕ್ರಿ.ಶ. ೧೪೦೨-೧೪೨೨) ಮತ್ತು ದೇವರಾಯ II (ಕ್ರಿ.ಶ. ೧೪೨೬-೧೪೪೬)ರು ಪ್ರಮುಖರು. ಇವರಿಬ್ಬರ ನಾಣ್ಯಗಳಲ್ಲೂ ಶ್ರೀದೇವರಾಯ ಅಥವಾ ಶ್ರೀ ಪ್ರತಾಪ ದೇವರಾಯನೆಂಬ ಬರಹವನ್ನು ಕನ್ನಡ ಅಥವಾ ನಾಗರೀಯಲ್ಲಿ ಕಾಣಬಹುದು. ಈ ಇಬ್ಬರೂ ದೇವರಾಯರ ಕಾಲದ ನಡುವಿನ ಅಂತರ ಕೇವಲ ೪ ವರ್ಷಗಳಾದುದರಿಂದ ಲಿಪಿಶಾಸ್ತ್ರದ ಆಧಾರದಿಂದ ನಾಣ್ಯಗಳು ಯಾರಿಗೆ ಸೇರಿದ್ದೆಂದು ಹೇಳಲು ಕಷ್ಟವಾಗುತ್ತದೆ. ಆದುದರಿಂದ ಕೆಲವು ಊಹೆಗಳನ್ನು ಸಾಧಾರವಾಗಿ ಮಾಡಬಹುದು. ಪ್ರೌಢದೇವರಾಯನೆಂದು ಪ್ರಸಿದ್ಧನಾದ ಇಮ್ಮಡಿ ದೇವರಾಯನಿಗೆ ಆನೆಗಳ ಬಗ್ಗೆ ವಿಶೇಷ ಆಸಕ್ತಿ ಇರುವುದು ಶಾಸನಗಳಲ್ಲಿ ಕಂಡುಬರುತ್ತದೆ. ಇವನ ಸೈನ್ಯದಲ್ಲಿ ಸಾವಿರಕ್ಕೂ ಮಿಕ್ಕಿ ಬೃಹತ್ ಆನೆಗಳಿದ್ದವೆಂದು ಆ ಕಾಲದ ಪ್ರವಾಸಿ ಅಬ್ದುಲ್ ರಜಾಕ್ ಹೇಳಿದ್ದಾನೆ. ದೇವರಾಯ II ನಿಗೆ 'ಗಜಬೇಂಟೆಕಾರ'ನೆಂಬ ಬಿರುದು ಸಹ ಇತ್ತು. ಆದುದರಿಂದ ಆನೆಯ ಚಿತ್ರವಿದ್ದು ದೇವರಾಯನೆಂಬ ಹೆಸರಿರುವ ಎಲ್ಲಾ ನಾಣ್ಯಗಳನ್ನು ಇಮ್ಮಡಿ ದೇವರಾಯನಿಗೆ ಮತ್ತು ನಂದಿ ಅಥವಾ ಬಸವನ ಚಿತ್ರವಿರುವ ಎಲ್ಲಾ ನಾಣ್ಯಗಳನ್ನು ಪ್ರಥಮ ದೇವರಾಯನಿಗೆ ಸೇರಿದ್ದೆಂದು ನಾಣ್ಯತಜ್ಞರು ವಿಂಗಡಿಸಿದ್ದಾರೆ. ಆದರೆ ದೇವರಾಯ II ನ ಧಾರ್ಮಿಕ ಒಲವು ವೀರಶೈವ ಧರ್ಮದ ಕಡೆಗೆ ಇರುವುದರಿಂದ ಶೈವಧರ್ಮದ ಚಿಹ್ನೆಗಳನ್ನು ಹೊಂದಿದ್ದ ನಾಣ್ಯಗಳು ಇವನಿಗೆ ಸೇರಿದ್ದೆಂದೂ ಹೇಳಿದರೂ, ಶಿವ ಪಾರ್ವತಿ ಚಿತ್ರವಿರುವ ಚಿನ್ನದ ಮತ್ತು ತಾಮ್ರದ ನಾಣ್ಯಗಳನ್ನು ಮತ್ತು ನಂದಿ ಅಥವಾ ಬಸವನ ಚಿತ್ರವಿರುವ ನಾಣ್ಯಗಳನ್ನು ದೇವರಾಯ I ನೆಂದು ನಾಣ್ಯತಜ್ಞರು ಹೇಳಿದ್ದಾರೆ. ಇಲ್ಲಿ ಪ್ರಸ್ತುತಪಡಿಸಿದ 'ನೀಲಕಂಠ'ನೆಂಬ ಹೆಸರಿರುವ ಬಸವನ ಮಾದರಿಯ ಇಂತಹದೇ ತಾಮ್ರದ ನಾಣ್ಯವನ್ನು ಪ್ರಥಮ ದೇವರಾಯನದೆಂದು ಹೇಳಿದ್ದಾರೆ. ಆದರೆ ಸಂಗಮ ವಂಶದ ಪ್ರಸಿದ್ಧ ಅರಸ ಇಮ್ಮಡಿ ದೇವರಾಯನು ಸ್ವತಃ ವೀರಶೈವನಾಗಿದ್ದನೆಂದೂ, ವೀರಶೈವ ಮತವು ಆತನ ಕಾಲದಲ್ಲಿ ಪುನರುಜ್ಜೀವನವನ್ನು ಕಂಡಿತೆಂದೂ ಇತಿಹಾಸವು ಹೇಳುತ್ತದೆ. ಆದ್ದರಿಂದ ಈ ವರಹವನ್ನು ದೇವರಾಯ II ನದೆಂದು ಹೇಳಿದರೆ ಪ್ರಸ್ತುತವಾಗುತ್ತದೆ. ಇದಕ್ಕಿಂತಲೂ ಹೆಚ್ಚಾಗಿ ಈ ಚಿನ್ನದ ವರಹವು ವಿಜಯನಗರ ಸಾಮ್ರಾಜ್ಯದ ಲಬ್ಧ ನಾಣ್ಯಶೃಂಖಲೆಯಲ್ಲಿ ಬಸವನ ಚಿತ್ರವಿರುವ ಪ್ರಪ್ರಥಮ ಚಿನ್ನದ ವರಹವೆಂದು ದಾಖಲಾಗುತ್ತದೆ.

**ಸೇವುಣ ಅರಸು ಇಮ್ಮಡಿ ಸಿಂಘಣನ ಚಿನ್ನದ ಗದ್ಯಾಣ**

***ತೂಕ:*** ೩.೮ ಗ್ರಾಂ, ***ಆಕಾರ:*** ವೃತ್ತಾಕಾರ, ***ವ್ಯಾಸ:*** ೧೧ಮಿ.ಮೀ.



**ಮುಂಬದಿ :** ವೈಷ್ಣವ ಚಿಹ್ನೆಗಳಾದ ಶಂಖ, ಚಕ್ರದ ನಡುವೆ ಮೇಲ್ಮುಖವಾಗಿ ನಿಂತಿರುವ ಕಠಾರಿ ವಿನ್ಯಾಸ.

**ಹಿಂಬದಿ :** ಮೂರುಸಾಲಿನ ನಾಗರೀ ಲಿಪಿ 'ಶ್ರೀ ಸಿಂಘ/ಣ

* ಗಣೇಶ ಎಂಟರ್ ಪ್ರೈಸಸ್, ಬಸ್ ನಿಲ್ದಾಣದ ಬಳಿ, ಮೂಡುಬಿದಿರೆ - ೫೭೪ ೨೨೭

ಕಾಂಚ/ಲ ದೇವಿ'

ಸೇಉಣ (ಸೇವುಣ) ಅಥವಾ ದೇವಗಿರಿಯ ಯಾದವರು ಯಾದವ ಕುಲಕ್ಕೆ ಸೇರಿದ್ದು ಮಧುರೆಯಿಂದ ದ್ವಾರಕೆಗೆ ಬಂದು ಅಲ್ಲಿಂದ ದಕ್ಷಿಣಕ್ಕೆ ಬಂದವರು ಎಂದು ಹೇಳುತ್ತಾರೆ. ಸೇವುಣರ ಶಾಸನಗಳು ಅವರನ್ನು ದ್ವಾರಾವತೀ ಪುರವರಾಧೀಶ್ವರ ಎಂದು ಕರೆದಿವೆ. ಇವರಿಗೆ ಯಾದವ ನಾರಾಯಣನೆಂಬ ಬಿರುದು, ಶಾಸನಗಳಲ್ಲಿ ಕಂಡುಬರುತ್ತದೆ. ವಿಷ್ಣು ವಂಶೋದ್ಭವರೆಂದು ಇವರು ಕರೆಯಿಸಿಕೊಂಡಿದ್ದಾರೆ.

ಕರ್ನಾಟಕವನ್ನು ಆಳಿದ ರಾಜಮನೆತನಗಳಲ್ಲಿ ಸಿಂಘಣ ನೆಂಬ ಹೆಸರಿರುವ ನಾಲ್ವರು ಅರಸರುಗಳಿದ್ದಾರೆ. ಕಲಚುರಿ ವಂಶದ ಸಿಂಘಣ (ಕ್ರಿ.ಶ. ೧೧೮೩-೧೧೮೪) ಸೇವುಣರ ಸಿಂಘಣ I (ಕ್ರಿ.ಶ. ೧೧೧೫-೪೫), ಇಮ್ಮಡಿ ಸಿಂಘಣ (ಕ್ರಿ.ಶ. ೧೨೦೦-೧೨೪೭), ಸಿಂಘಣ III (ಕ್ರಿ. ಶ. ೧೩೧೨-೧೩೧೩)

ಕಲಚುರಿಯ ಸಿಂಘಣನು ಕ್ರಿ.ಶ. ೧೧೮೩ರಲ್ಲಿ ಆಳ್ವಿಕೆಯನ್ನು ಆರಂಭಿಸಿ ಕ್ರಿ.ಶ. ೧೧೮೪ರಲ್ಲಿ ಚಾಳುಕ್ಯ ಸೋಮೇಶ್ವರ IV ನ ಅಧಿಪತ್ಯವನ್ನು ಸ್ವೀಕರಿಸಿದ್ದರಿಂದ ಕಲಚುರಿಗಳ ಆಳ್ವಿಕೆ ಕೊನೆಗಂಡಿತು. ಇವನ ಆಳ್ವಿಕೆಯು ಬಹಳ ಕಡಿಮೆ ಸಮಯದಾಗಿ ರುವುದರಿಂದ ಮತ್ತು ಈ ನಾಣ್ಯದಲ್ಲಿರುವ ಲಿಪಿಯು ಸಹ ಇವನ ಕಾಲಕ್ಕೆ ಹೊಂದದೇ ಇರುವುದರಿಂದ ಈ ನಾಣ್ಯವು ಸಹಾ ಅವನದ್ದಲ್ಲವೆಂದು ಹೇಳಬಹುದು.

ಸೇವುಣ ಸಿಂಘಣರಲ್ಲಿ ಅತ್ಯಂತ ಪ್ರಬಲನಾದ ಇಮ್ಮಡಿ ಸಿಂಘಣ ಇವನ ಕಾಲದಲ್ಲಿ ಸೇವುಣರು ಒಂದು ಪ್ರಬಲ ಶಕ್ತಿಯಾಗಿ ಬೆಳೆದು ಉತ್ತರ ಭಾರತದ ಅರಸರನ್ನು ನಡುಗಿಸುವ ಸಾಮರ್ಥ್ಯವನ್ನು ಪಡೆದಿದ್ದರು (೧) ಸಾಮಾನ್ಯವಾಗಿ ಇದುವರೆಗೆ ಸಿಕ್ಕಿರುವ ಸೇವುಣ ಅರಸರುಗಳಾದ ಭಿಲ್ಲಮ V, ಸಿಂಘಣ II, ಕೃಷ್ಣ, ಮಹಾದೇವ, ರಾಮಚಂದ್ರರ ಚಿನ್ನದ ನಾಣ್ಯಗಳು 'ಪದ್ಮಟಂಕ' ಮಾದರಿಯಲ್ಲಿವೆ. ಇವು ದೊನ್ನೆಯಾಕಾರ (*Cup-Shape*)ವಾಗಿವೆ. ಇವುಗಳ ತಗ್ಗಾದ ಮಧ್ಯಭಾಗದಲ್ಲಿ ಏಳು ಅಥವಾ ಎಂಟು ಎಸಳಿನ ಹೂವಿನ ಮುದ್ರೆ ಇದ್ದು ಉಬ್ಬಾದ ಭಾಗದಲ್ಲಿ ಸುತ್ತಲೂ 'ಶಂಖ', ಕನ್ನಡದ 'ಶ್ರೀ' ಮತ್ತು ಆಯಾ ರಾಜರುಗಳ ಹೆಸರುಗಳನ್ನು ನಾಗರೀ ಲಿಪಿಯಲ್ಲಿ ಮುದ್ರಿಸಿದ್ದಾರೆ. ಈ ನಾಣ್ಯಗಳು ಏಕಮುಖವಾಗಿದ್ದು ಹಿಂಬದಿ ಖಾಲಿಯಾಗಿ ರುತ್ತದೆ. ಪ್ರಸ್ತುತಪಡಿಸಿದ ಈ ನಾಣ್ಯವು ಪದ್ಮಟಂಕ ಮಾದರಿಯಲ್ಲಿ ಇಲ್ಲದೇ, ಚಪ್ಪಟೆಯಾಗಿದ್ದು, ವೃತ್ತಾಕಾರದ ಗದ್ಯಾಣ ಮಾದರಿಯಲ್ಲಿದ್ದು ಎರಡೂ ಬದಿ ಮುದ್ರಿತವಾಗಿದೆ. ಇದರಲ್ಲಿರುವ ನಾಗರೀ ಲಿಪಿಯು ಸುಮಾರು ೧೩ನೇ ಶತಮಾನಕ್ಕೆ ಸೇರಿದ್ದು ಸಿಂಘಣ II ನ ಕಾಲಮಾನಕ್ಕೆ (ಕ್ರಿ.ಶ. ೧೨೦೦-೧೨೪೭) ಸರಿ ಹೊಂದುತ್ತದೆ. ಅಲ್ಲದೇ ಸಿಂಘಣ II ನ ಬೆಳ್ಳಿಯ ನಾಣ್ಯಗಳಲ್ಲೂ ಸಹ ಇದೇ ಮಾದರಿ ಲಿಪಿಯ 'ಸಿಂಘಣ'ನೆಂಬ ಹೆಸರನ್ನು ಕಾಣಬಹುದು. ಆದುದರಿಂದ ಈ ನಾಣ್ಯವು ಸಹ ಇವನಿಗೆ ಸೇರಿದ್ದೆಂದು ಹೇಳಬಹುದಾದರೂ, ಈ ನಾಣ್ಯದಲ್ಲಿರುವ ಕಾಂಚಲದೇವಿ ಎಂಬ ಹೆಸರು ಯಾರದ್ದು ಮತ್ತು ಸಿಂಘಣನಿಗೂ ಕಾಂಚಲದೇವಿಗೂ ಇರುವ ಸಂಬಂಧ ಏನು? ಎಂದು ಗೂಢವಾಗಿಯೇ ಉಳಿಯುತ್ತದೆ.



## ಆಧಾರ ಗ್ರಂಥಸೂಚಿ


೧. ಡಾ॥ ಸೂರ್ಯನಾಥ ಕಾಮತ್., **ಕರ್ನಾಟಕದ ಸಂಕ್ಷಿಪ್ತ ಇತಿಹಾಸ**

೨. Dr. P. Gururaj Bhat., *History of South India*

೩. *Annual Report of the Mysore Archaeological Dept.* 1932.

೪. ಡಾ॥ ಎ.ವಿ. ನರಸಿಂಹ ಮೂರ್ತಿ., **ವಿಜಯನಗರದ ನಾಣ್ಯ ಸಂಪತ್ತು**

ಡಾ॥ ಸುರೇಶ ಗು. ದೊಡ್ಡಮನಿ*

# ಶಾತವಾಹನರ ಒಂದು ಹೊಸ ನೆಲೆ ಮತ್ತು ಚುಟುಗಳ ನಾಣ್ಯಗಳು

ಹಾವೇರಿ ಜಿಲ್ಲೆಯ ರಾಣೇಬೆನ್ನೂರು ತಾಲೂಕಿನ ಸುಣಕಲ್ಲ ಬಿದರಿ ಗ್ರಾಮದಿಂದ ಪಶ್ಚಿಮಕ್ಕೆ ಮೂರು ಕಿ. ಮೀ. ಹಾಗೂ ಗುಡ್ಡದಹೊಸಳ್ಳಿಯಿಂದ ಪೂರ್ವಕ್ಕೆ ೨ ಕಿ. ಮೀ. ದೂರದಲ್ಲಿರುವ ಹೊಸಕೆರೆಯ ಅಂಗಳದಲ್ಲಿ ಸುಮಾರು ೨-೩ ಎಕರೆ ವಿಶಾಲ ಪ್ರದೇಶದಲ್ಲಿ ಶಾತವಾಹನರ ಬೃಹತ್ ನೆಲೆಯೊಂದನ್ನು ಇತ್ತೀಚಿಗೆ ಶೋಧಿಸಲಾಗಿದೆ. ಈ ನೆಲೆಯ ಶೋಧನೆಯಿಂದಾಗಿ ಈ ಭಾಗದ ಇತಿಹಾಸವು ನಿರ್ದಿಷ್ಟವಾದ ಪ್ರಾಚೀನತೆಯನ್ನು ಪಡೆಯುತ್ತದೆ.

ಉತ್ತರ ಕರ್ನಾಟಕದಲ್ಲಿ ಶಾತವಾಹನ ಅರಸರ ಆಳ್ವಿಕೆಗೆ ಸಂಬಂಧಿಸಿದಂತೆ ಕಂಡು ಬಂದಿರುವ ದಾಖಲೆಗಳು ಅತಿ ವಿರಳ. ವಡಗಾಂವ ಮಾಧವಪುರದ ನೆಲೆ, ಸನ್ನತಿ, ಬನವಾಸಿ, ಬ್ರಹ್ಮಗಿರಿ ಉತ್ಖನನ ಹಾಗೂ ಇತ್ತೀಚಿಗೆ ನರಗುಂದ ಸಮೀಪದ ಕೊಣ್ಣೂರಿನಲ್ಲಿ ದೊರೆತ ಶಾಸನ ಮಾತ್ರ ಮೊದಲಿನ ದಾಖಲೆಗಳಾಗಿದ್ದವು. ಈ ಆಕರಗಳ ಜೊತೆಗೆ ಪ್ರಸ್ತುತ ನೂರುಂಬಾಡ ನಾಡಿನ ಐತಿಹಾಸಿಕ ನೆಲೆಯನ್ನು ಸೇರಿಸಬಹುದಾಗಿದೆ. ಅಂದರೆ ಉತ್ತರ ಕರ್ನಾಟಕದಲ್ಲಿ ದೊರೆತ ಕೆಲವೇ ಐತಿಹಾಸಿಕ ಸ್ಥಳಗಳಲ್ಲಿ ಇದೂ ಸಹ ಒಂದಾಗಿದ್ದು ಈ ಮೊದಲು ರಚಿಸಿದ ನೂರುಂಬಾಡ ನಾಡಿನ ಇತಿಹಾಸವನ್ನು ಪರಿಷ್ಕರಿಸಿ ಹೊಸ ಇತಿಹಾಸವನ್ನು ರಚಿಸುವಲ್ಲಿ ಪ್ರಸ್ತುತ ಈ ಐತಿಹಾಸಿಕ ನೆಲೆಯು ಅಧಿಕೃತ ಪ್ರಾಚೀನ ದಾಖಲೆಯನ್ನು ಒದಗಿಸುತ್ತದೆ.

ಕ್ರಿ. ಶ. ೧ ರಿಂದ ೩ ನೇ ಶತಮಾನಗಳವರೆಗೆ ಆಳಿದ ಶಾತವಾಹನರ ಅಥವಾ ಅವರ ಸಮಕಾಲೀನ ಅರಸರ ಈ ಬೃಹತ್ ನೆಲೆಯಲ್ಲಿ ದೊರೆತ ಅವಶೇಷಗಳೆಂದರೆ ಕೆಂಪು, ಕಪ್ಪು, ಕಂದು, ಬಿಳಿ ಹಾಗೂ ಬೂದು ಬಣ್ಣದ ದಪ್ಪ ಹಾಗೂ ತೆಳುವಾದ ಮಡಿಕೆ ಚೂರುಗಳು ಹಾಗೂ ಮಣ್ಣಿನ ಕುಂಡಗಳು. ಇದರೊಂದಿಗೆ ಪ್ರಾಚೀನ ಕಾಲದಲ್ಲಿ ಸಣ್ಣ ಪ್ರಮಾಣದಲ್ಲಿ ನಾಣ್ಯಗಳನ್ನು ಸಂಗ್ರಹಿಸಲು ಉಪಯೋಗಿಸುತ್ತಿದ್ದ ಮಣ್ಣಿನ ಹುಂಡೆಗಳ ಮೇಲಿನ ಭಾಗ ಈ ಪ್ರದೇಶದಲ್ಲಿ ದೊರೆತಿರುವುದರಿಂದ ಇಂಥ ಹಣ



ಸಂಗ್ರಹಣೆಯು ಅಂದಿನ ಆರ್ಥಿಕ ಕ್ಷೇತ್ರದಲ್ಲಿ ಮಹತ್ತರವಾದ ಪಾತ್ರ ವಹಿಸಿದ್ದನ್ನು ಕಂಡುಕೊಳ್ಳಬಹುದಾಗಿದೆ. ಈ ಮಡಿಕೆ ಚೂರುಗಳ ಮೇಲೆ ಕೆಲವೊಂದು ರೇಖಾಚಿತ್ರಗಳನ್ನು ಸಹ ಕಾಣಬಹುದು.

ನಂತರದ ಇಲ್ಲಿನ ಪ್ರಮುಖ ಅವಶೇಷಗಳೆಂದರೆ ಬೃಹತ್ ಗಾತ್ರದ ಸುಟ್ಟ ಮಣ್ಣಿನ ಇಟ್ಟಿಗೆಗಳು ಹಾಗೂ ಕಟ್ಟಡದ ತಳಪಾಯಗಳು. ಇಲ್ಲಿ ದೊರೆತ ಇಟ್ಟಿಗೆಗಳು ವಡಗಾಂವ ಮಾಧವಪುರದ ಶೋಧನೆಯಲ್ಲಿ ಕಂಡು ಬಂದಿರುವ ಇಟ್ಟಿಗೆಗಳನ್ನು ಹೋಲುತ್ತವೆ. ಈ ಪ್ರದೇಶದಲ್ಲಿ ಉತ್ಖನನ ನಡೆಸಿದರೆ ಮಹತ್ವಪೂರ್ಣ ದಾಖಲೆಗಳು ಸಿಗಬಹುದೆನಿಸುತ್ತದೆ.

ಮೇಲೆ ಹೆಸರಿಸಲಾದ ಐತಿಹಾಸಿಕ ನೆಲೆಯಲ್ಲಿ ದೊರೆತ ಲಿಖಿತ ಆಧಾರಗಳೆಂದರೆ ಸೀಸದಿಂದ ತಯಾರಿಸಿದ ನಾಣ್ಯಗಳು. ಈ ನಾಣ್ಯಗಳ ಮಾದರಿಯಿಂದ ಹಾಗೂ ಇವುಗಳ ಮೇಲಿನ ಬರಹದಿಂದ ಪ್ರಸ್ತುತ ನೆಲೆಯನ್ನು ಶಾತವಾಹನರ ಕಾಲದಷ್ಟು ಹಿಂದಕ್ಕೆ ಗುರುತಿಸಬಹುದಾಗಿದೆ. ಮೇಲೆ ಸೂಚಿಸಲಾದ ಪ್ರದೇಶವು 'ನೂರುಂಬಾಡ' ನಾಡಿನ ಆಡಳಿತ ವ್ಯಾಪ್ತಿಗೆ ಒಳಪಡುವುದರಿಂದ ಈ ಮೊದಲು ಪಿಎಚ್. ಡಿ. ಪದವಿಗಾಗಿ ನೂರುಂಬಾಡ ಪ್ರದೇಶದ ಇತಿಹಾಸವನ್ನು ಚಿತ್ರಿಸುವಾಗ ದೊರೆತ ಪ್ರಾಚೀನ ಆಧಾರಗಳೆಂದರೆ ಬಾದಾಮಿ ಚಾಲುಕ್ಯರ ಕಾಲದ ಶಾಸನಗಳು. ಅಲ್ಲಿಂದಲೇ ಪ್ರಸ್ತುತ ನೂರುಂಬಾಡ ನಾಡಿನ ಇತಿಹಾಸವನ್ನು ರಚಿಸಲಾಗಿದೆ. ಈಗ ಈ ಪ್ರದೇಶದಲ್ಲಿ ದೊರೆತ ನಾಣ್ಯಗಳ ಹಾಗೂ ಐತಿಹಾಸಿಕ ನೆಲೆಯ ಅಧ್ಯಯನದಿಂದ ನೂರುಂಬಾಡ ನಾಡಿನ ಇತಿಹಾಸ ರಚನೆಗೆ ಹೊಸ ಬೆಳಕನ್ನು ನೀಡಬಹುದಾಗಿದೆ.

* ಇತಿಹಾಸ ಉಪನ್ಯಾಸಕರು, ಕರ್ನಾಟಕ ಕಲಾ ಮಹಾವಿದ್ಯಾಲಯ, ಧಾರವಾಡ

ಈ ಪ್ರದೇಶದಲ್ಲಿ ದೊರೆತ ನಾಣ್ಯಗಳು 'ಚುಟು' ಸಂತತಿಯ ಅರಸರಿಗೆ ಸೇರಿವೆ. ಅಂದರೆ ನಾಣ್ಯಗಳ ಮಾದರಿಯು ಒಂದೇ ಆಗಿದ್ದರೂ ಅರಸನ ಹೆಸರುಗಳು ಮಾತ್ರ ಬೇರೆ ಬೇರೆಯಾಗಿವೆ. ಇಲ್ಲಿ ದೊರೆತ ಒಟ್ಟು ನಾಣ್ಯಗಳಲ್ಲಿ 'ಚುಟುಕುಲಾನಂದ' ಅರಸನ ೧೬ ನಾಣ್ಯಗಳು ದೊರೆತರೆ ಇದೇ ಸಂತತಿಯ 'ಮುಂಡಾನಂದ' ಅರಸನ ೧೪ ನಾಣ್ಯಗಳು ದೊರೆತಿವೆ. ಈ ನಾಣ್ಯಗಳ ಮೇಲಿರುವ ಚಿತ್ರಗಳಲ್ಲಿ ಸ್ವಲ್ಪ ಬದಲಾವಣೆಯನ್ನು ಕಾಣಬಹುದಾಗಿದೆ. ಚುಟುಕುಲಾನಂದನ ನಾಣ್ಯಗಳ ಒಂದು ಬದಿಯಲ್ಲಿ ಪರ್ವತದ ಚಿಹ್ನೆ (ದೃಢತೆಯ ಸಂಕೇತ) ಮತ್ತು ಪ್ರಾಕೃತ ಭಾಷೆಯ ಬ್ರಾಹ್ಮಿಲಿಪಿಯಲ್ಲಿ 'ಚುಟುಕುಲಾನಂದಸ' ಎಂಬ ಹೆಸರಿದೆ. ಇನ್ನೊಂದು ಬದಿಯಲ್ಲಿ ಕಟ್ಟೆಯ ಒಳಗಿನ ಗಿಡದ (ಬೋಧಿ ವೃಕ್ಷದ ಸಂಕೇತ) ಚಿಹ್ನೆಯಿದೆ. ಇದರ ಬಲಕ್ಕೆ ತ್ರಿಶೂಲ ಚಿಹ್ನೆ ಹಾಗೂ ಎಡಕ್ಕೆ ಸ್ವಸ್ತಿಕ ಚಿಹ್ನೆ ಇದೆ.

ಮುಡಾನಂದನೆಂಬ ಅರಸನ ೧೪ ನಾಣ್ಯಗಳು ಇದೇ ಸ್ಥಳದಲ್ಲಿ ದೊರೆತಿದ್ದು ಈ ಹೆಸರನ್ನು ಮೊದಲು 'ಮಹಾನಂದ' ಎಂಬುದಾಗಿ ತಪ್ಪಾಗಿ ಓದಿ ಅದಕ್ಕೆ ಇನ್ನೂ ಹೆಚ್ಚಿನ ಪ್ರಾಚೀನತೆಯನ್ನು ಒದಗಿಸಿ ಇಲ್ಲಿಯವರೆಗೂ ತಿಳಿದ ಇತಿಹಾಸಕ್ಕೆ ಈ ನಾಣ್ಯಗಳು ಹೊಸದು ಎಂಬ ಅರ್ಥ ಬರುವಂತೆ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಿಸಲಾಗಿತ್ತು. ಈ ನಾಣ್ಯಗಳ ಒಂದು ಬದಿಯಲ್ಲಿರುವ ಕಟ್ಟೆಯ ಒಳಗಿನ ಗಿಡದ ಚಿತ್ರದ ಪಕ್ಕದಲ್ಲಿ ತ್ರಿಶೂಲದ ಚಿಹ್ನೆಯನ್ನು ಮಾತ್ರ ಕಾಣಬಹುದು. ಅಂದರೆ ಮುಂಡಾನಂದ ಅರಸನ ನಾಣ್ಯಗಳಲ್ಲಿ ಕೇವಲ ತ್ರಿಶೂಲದ ಚಿಹ್ನೆ ಇದ್ದರೆ ಚುಟುಕುಲಾನಂದ ಅರಸನ ನಾಣ್ಯಗಳು ಮೇಲೆ ತ್ರಿಶೂಲ ಹಾಗೂ ಸ್ವಸ್ತಿಕ ಚಿಹ್ನೆಗಳನ್ನು ಕಾಣಬಹುದು. ಈ ಅರಸರ ಇದೇ ಮಾದರಿಯ ನಾಣ್ಯಗಳು ಚಿತ್ರದುರ್ಗ ಸಮೀಪದ ಚಂದ್ರವಳ್ಳಿ, ಕಾರವಾರ, ಹಾಗೂ ಬನವಾಸಿ ಉತ್ಖನನದಲ್ಲಿ ಕಂಡುಬಂದಿದ್ದು ಈಗ ದೊರೆತ ನಾಣ್ಯಗಳು ಇಲ್ಲಿಯೂ ಸಹ ಅವರ ಆಳ್ವಿಕೆ ಇರುವುದನ್ನು ಸೂಚಿಸುತ್ತವೆ. ಅಂದರೆ ನಾಣ್ಯಶಾಸ್ತ್ರಕ್ಕೆ ಈ ಅರಸರ ಕೊಡುಗೆಯನ್ನು ಈ ನಾಣ್ಯಗಳು ತಿಳಿಸುತ್ತವೆ.

ಶಾತವಾಹನ ಅರಸರ ಸಂತತಿಯಲ್ಲಿ ಶಾತಕರಣಿ ಹಾಗೂ ಚುಟುಕುಲಾನಂದ ಶಾತಕರಣಿ ಎಂಬ ಹೆಸರು ಕಂಡು ಬರುವುದರಿಂದ ಚುಟು ಅರಸರು ಶಾತವಾಹನರ ಸಾಮಂತರಾಗಿರ ಬಹುದೆಂದು ಹೇಳಬಹುದು. ಈ ವಿಷಯವನ್ನು ಡಾ. ಪಿ. ಬಿ. ದೇಸಾಯಿ, ಡಾ. ಶ್ರೀನಿವಾಸ ರಿತ್ತಿ ಮತ್ತು ಡಾ. ಬಿ. ಆರ್. ಗೋಪಾಲ ಅವರು *A History of Karnataka* ಎಂಬ ಗ್ರಂಥದಲ್ಲಿ (ಪು. ೫೩) ವ್ಯಕ್ತಪಡಿಸಿದ್ದಾರೆ. ಈ ಅಂಶವನ್ನು ಆಧಾರವಾಗಿಟ್ಟುಕೊಂಡು ಇವರು ಶಾತವಾಹನರ ಸಾಮಂತ ರಾಗಿದ್ದರೆಂದು ಹೇಳಲಾಗಿದೆ.

ಈ ವಿಷಯ ಕುರಿತಾದ ದಾಖಲೆಗಳನ್ನು ಬಿತ್ತರಿಸುವ ಹಿಂದಿನ ಉತ್ಖನನಗಳು ಶಾತವಾಹನರ ನೆಲೆಗಳಾಗಿದ್ದು ಅದರಲ್ಲಿ ಈ 'ಚುಟು' ಅರಸರ ನಾಣ್ಯಗಳು ಕಂಡು ಬಂದಿವೆ. ಈ ಅಂಶವನ್ನೂ ಗಮನದಲ್ಲಿಟ್ಟುಕೊಂಡು ಚುಟು ಅರಸರು ಶಾತವಾಹನರ ಸಾಮಂತರಾಗಿದ್ದರೆಂದು ಒತ್ತಿ ಹೇಳಬಹುದು. ಅಂದರೆ ಶಾತವಾಹನ ಅರಸರ ಆಳ್ವಿಕೆಯೊಂದಿಗೆ ಚುಟು ಅರಸರೂ ಸಹ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದರೆಂಬುದನ್ನು ಈ ನಾಣ್ಯಗಳು ದೃಢಪಡಿಸುತ್ತವೆ. ಅದರೊಂದಿಗೆ ನೂರುಂಬಾಡ ನಾಡಿನ ಇತಿಹಾಸ ರಚನೆಗೆ ಸ್ಪಷ್ಟವೂ ಹಾಗೂ ನಿರ್ದಿಷ್ಟವೂ ಆದ ಪ್ರಾಚೀನತೆಯನ್ನು ಇಲ್ಲಿನ ಅವಶೇಷಗಳು ಹಾಗೂ ನಾಣ್ಯಗಳು ಖಚಿತಪಡಿಸುತ್ತವೆ.



## ಆಧಾರ ಗ್ರಂಥಸೂಚಿ


೧. ಪಿ. ಬಿ. ದೇಸಾಯಿ ಮತ್ತು ಇತರರು., *A History of Karnataka.*

೨. ಎ. ವ್ಹಿ. ನರಸಿಂಹಮೂರ್ತಿ., *The Coins of Karnataka.*

೩. Rapson E.J., *Coins of Andhra Dynasty, Indian Coins.*

ಪ್ರೊ॥ ಬಿ. ರಾಜಶೇಖರಪ್ಪ*

# ಹಿರೇಕೋಗಲೂರಿನ ಅಪ್ರಕಟಿತ ಶಾಸನಗಳು

ಈ ಹಿಂದೆ ಶಿವಮೊಗ್ಗ ಜಿಲ್ಲೆಯಲ್ಲಿದ್ದು, ಈಚೆಗೆ ನೂತನವಾಗಿ ಆದ ದಾವಣಗೆರೆ ಜಿಲ್ಲೆಗೆ ಸೇರಿರುವ, ಚನ್ನಗಿರಿ ತಾಲ್ಲೂಕಿನ ಸಂತೆಬೇನ್ನೂರು ಹೋಬಳಿಯ ಹಿರೇಕೋಗಲೂರು ಗ್ರಾಮದಲ್ಲಿ ಹೊಸದಾಗಿ ಪತ್ತೆಯಾಗಿರುವ ಎರಡು ಶಿಲಾಶಾಸನಗಳನ್ನು ಕುರಿತು ಈ ಲೇಖನ.[೧] ಈ ಗ್ರಾಮದ ಮಧ್ಯೆ, 'ಹಳೇಕೋಟೆ' ಎಂದು ಕರೆಯುವ ಭಾಗದಲ್ಲಿ, ಕೋಟೆ ಚನ್ನಬಸಪ್ಪ ಎಂಬುವರ ಮನೆಯ ಹಿತ್ತಲಲ್ಲಿ, ಶೌಚಾಲಯದ ಗುಂಡಿ ನಿರ್ಮಿಸಲು ನೆಲವನ್ನು ಅಗೆಯುತ್ತಿದ್ದಾಗ, ಎರಡು ಬದಿಯಲ್ಲೂ ಶಿಲ್ಪ ಮತ್ತು ಬರಹ ಕೆತ್ತನೆ ಇರುವ ಬಳಪದ ಕಲ್ಲುಚಪ್ಪಡಿಯೊಂದು ಸಿಕ್ಕಿತು. ಅದನ್ನು ಎಚ್ಚರಿಕೆಯಿಂದ ತೆಗೆದಿರಿಸಿದ ಸ್ಥಳೀಯರು ಅದು ಸಿಕ್ಕಿದ್ದರ ಬಗ್ಗೆ (೧೯೯೫ರ ಅಂತ್ಯದಲ್ಲಿ) ಪತ್ರಿಕೆಗಳಿಗೆ ಸುದ್ದಿ ಕೊಟ್ಟರಲ್ಲದೆ, ದಿ. ೧೨. ೦೧. ೧೯೯೬ ರಂದು ನಾನು ಆ ಊರಿಗೆ ಹೋಗಿ ಆ ಬರಹಗಳನ್ನು ಓದಲು ಕಾರಣರಾದರು. ಅವುಗಳ ಪಾಠ ಮತ್ತಿತರ ವಿವರಗಳನ್ನು ಇಲ್ಲಿ ಸಾದರಪಡಿಸುತ್ತಿದ್ದೇನೆ.

ಕಲ್ಲುಚಪ್ಪಡಿಯ ಮೇಲುಭಾಗ ಸುಮಾರಾಗಿ ಕಮಾನಿನಾಕಾರವಾಗಿದ್ದು, ಅದರ ಒಂದು ಬದಿಯಲ್ಲಿ ಚಿಕ್ಕದಾಗಿ ಸೂರ್ಯ, ಚಂದ್ರ, ನಡುವೆ ಶಿವಲಿಂಗ, ಅದರ ಬಲಕ್ಕೆ ಪದ್ಮಾಸನ ಭಂಗಿಯಲ್ಲಿ ಕುಳಿತ ಒಬ್ಬ ಯತಿ, ಅವನ ಬಲಕ್ಕೆ ನೆಟ್ಟಗೆ ನಿಲ್ಲಿಸಿದ ಒಂದು ಖಡ್ಗ ಇವುಗಳಿದ್ದರೆ, ಲಿಂಗದ ಎಡಕ್ಕೆ ಒಂದು ಹಸು ಮತ್ತು ಅದರ ಹಾಲು ಕುಡಿಯುತ್ತಿರುವ ಒಂದು ಕರು, ಇವುಗಳ ಉಬ್ಬು ಕೆತ್ತನೆಗಳಿವೆ. ಇವುಗಳ ಅಡಿಯಲ್ಲಿ ಅಡ್ಡಲಾಗಿ ಚಿಕ್ಕ ಅಗಲದ ಒಂದು ಉಬ್ಬು ಪಟ್ಟಿಯಿದ್ದು ಅದರಲ್ಲಿ ಶಾಸನದ ಮೊದಲ ಎರಡು ಪಂಕ್ತಿಗಳನ್ನೂ ಅದರ ಕೆಳಗೆ ಮೂವತ್ತಾರು ಪಂಕ್ತಿಗಳನ್ನೂ ಕೊರೆಯಲಾಗಿದೆ. ಸುಮಾರು ೮೭ ಸೆಂ.ಮೀ. ಎತ್ತರ ಮತ್ತು ೫೭ ಸೆಂ.ಮೀ. ಅಗಲದ ವ್ಯಾಪ್ತಿಯಲ್ಲಿ ಕೆತ್ತಿರುವ ಈ ಶಾಸನವನ್ನು 'ಒಂದನೆಯ ಶಾಸನ' ಎಂದು ಹೆಸರಿಸಬಹುದು. ಇದರ ೨ನೆಯ ಮತ್ತು ೧೨ನೆಯ ಪಂಕ್ತಿಯಲ್ಲಿ ಕೆಲವು ಅಕ್ಷರಗಳು ಗುರುತಿಸಲಾರದಂತಾಗಿವೆ. ೨೮ನೆಯ ಪಂಕ್ತಿಯಲ್ಲಿ ಮಧ್ಯದಿಂದ ಕೊನೆಯವರೆಗೆ ಹಾಗೂ ೨೯ನೆಯ ಪಂಕ್ತಿಯಲ್ಲಿ ಮೊದಲಿಂದ ಕೊನೆಯವರೆಗೆ ಎಲ್ಲ ಅಕ್ಷರಗಳನ್ನು ಏನು ಕಾರಣಕ್ಕೋ ಕೆತ್ತಿಹಾಕಲಾಗಿದೆ. ಈ ತ್ರುಟೀಕರಣವು ಶಾಸನ ಹಾಕಿಸಿದ ಸ್ವಲ್ಪ ಕಾಲದಲ್ಲೇ ಆಗಿದ್ದಿರಬೇಕೆಂದೂ, ಅಂದರೆ ಬೇಡವೆನಿಸಿದ ಭಾಗವನ್ನು ಆಗಲೇ ತೆಗೆದುಹಾಕಿರಬೇಕೆಂದೂ ತೋರುತ್ತದೆ. ಇಷ್ಟು ಬಿಟ್ಟರೆ ಉಳಿದ ಬರಹ ಪೂರ್ಣ ಸುಸ್ಥಿತಿಯಲ್ಲಿದೆ ಎಂದು ಹೇಳಬಹುದು.



ಕಲ್ಲಿನ ಇನ್ನೊಂದು ಬದಿಯಲ್ಲಿ ಮೇಲೆ ಒಂದು ತೋರಣ, ಅದರ ಕೆಳಗೆ ಆಯಾಕಾರದ ಚೌಕಟ್ಟಿನೊಳಗೆ ಅಲಂಕೃತವಾದ ಒಂದು ಆನೆಯ ಚಿತ್ರ ಇವೆ. ಅದರ ಹೆಚ್ಚಿನ ವಿವರ ಮುಂದೆ ಬರುತ್ತದೆ. ಅದರ ಕೆಳಗೆ ಸುಮಾರು ೩೭ ಸೆಂ.ಮೀ. ಎತ್ತರ ಮತ್ತು ೫೭ ಸೆಂ.ಮೀ. ಅಗಲದ ವ್ಯಾಪ್ತಿಯಲ್ಲಿ ೧೪ ಪಂಕ್ತಿಗಳ ಶಾಸನವನ್ನು ಕೊರೆದಿದೆ. ಇದನ್ನು 'ಎರಡನೆಯ ಶಾಸನ' ಎಂದು

* ಕನ್ನಡ ಪ್ರಾಧ್ಯಾಪಕರು, ಪ್ರಾಂಶುಪಾಲರು, ೨ನೇ ಅಡ್ಡರಸ್ತೆ (ಪಶ್ಚಿಮ) ಜೆ.ಸಿ.ಆರ್. ವಿಸ್ತರಣೆ, ಚಿತ್ರದುರ್ಗ-೦೧

ಕರೆಯಬಹುದು. ಇದರಲ್ಲಿ ಅಲ್ಲಲ್ಲಿ ಕಚ್ಚುಗಳೂ ಗೀಚುಗಳೂ ಆಗಿ, ಬರಹ ಅಷ್ಟೊಂದು ಸುಸ್ಥಿತಿಯಲ್ಲಿ ಉಳಿದುಬಂದಿಲ್ಲ.

ಈ ಎರಡೂ ಶಾಸನಗಳು ಕ್ರಿ.ಶ. ೧೧ನೇ ಶತಮಾನದ ಕನ್ನಡದ ಸುಂದರ ಲಿಪಿಯಲ್ಲಿ ಮತ್ತು ಭಾಷೆಯಲ್ಲಿದ್ದು, ಒಬ್ಬನೇ ವ್ಯಕ್ತಿ ಹಾಕಿಸಿದ, ಪರಸ್ಪರ ಪೂರಕವಾದ ಶಾಸನಗಳಾಗಿವೆ. ಅವುಗಳ ಪಾಠ ಹೀಗಿದೆ:

**ಒಂದನೆಯ (ಅಥವಾ ಮುಂಭಾಗದ) ಶಾಸನದ ಪಾಠ**

೧ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಸಂ(ಭ)ವೇ

೨ ವಿಸುದ್ಧಜನ ಪ್ರೇಕ್ಷಯ ತ್ರಿವೇದಿ ದಿವ್ಯಚಕ್ಷು ವಿ . ಯಪ್ರಾಯ ನಮ .............

೩ ಮೇರು ಪ್ರಿಷ್ಠ ಸುಖಾಸೀನಂ ರಿಷಿಸಂಘೇ ಸಮಾವ್ರಿತಂ ಲೋಕಾನುಗ್ರಹಸ್ಥಾನಂ ಸರ್ವಜ್ಞನಧಿಕೇಶ್ವರಂ॥

೪ ✧ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮ ಭಟ್ಟಾರಕಂ ಸತ್ಯಾ

೫ ಸ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ತ್ರೈಲೋಕ್ಯ ಮಲ್ಲದೇವರ ವಿಜಯರಾಜ್ಯ ಮುತ್ತರೋತ್ತರಾಭಿ

೬ ವಿದ್ಧಿ ಪ್ರವರ್ದ್ಧಮಾನಮಾಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ ತತ್ಪಾದಪದ್ಮೋಪಜೀವಿ ಸ್ವಸ್ತಿ ಸಮಧಿಗತ ಪಂ

೭ ಚ ಮಹಾಶಬ್ದ ಪಲ್ಲವಾನ್ವಯಂ ಶ್ರೀ ಪ್ರಿಥ್ವೀವಲ್ಲಭಂ ಪಲ್ಲವ ಕುಳತಿಳಕಂ ಅಮೋಘವಾಕ್ಯಂ ಕಾಂಚೀಪುರವರೇಶ್ವರಂ

೮ ಶ್ರೀಮತ್ತ್ರೈಲೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮ್ಮಾ ನಡಿಗಳ್ ಕೋಗಳಿನಾಡಯ್ನೂಱುಂ ಬಲ್ಲಕುಂದೆ ಮೂನೂ

೯ ಱುಂ ಕಣೆಯಕಲ್ಮೂನೂಱುಂ ಕುಡಿಪರವಿಯೆಟ್ಪತ್ತುಂ ಕರಿವೀಡಿ ಮೂವತ್ತುಂ ಪಂಚಗ್ರಾಮಂಗಳುಂ ಕಡಂ

೧೦ ಬಳಿಗೆ ಸಾಯಿರಂಮುಮನಾಳುತ್ತಮಿರೆ ತತ್ಪಾದ ಪದ್ಮೋಪಜೀವಿ ಸ್ವಸ್ತಿ ಸಮಸ್ತ ವಂದಿಜನಾಧಾರಂ ಬಂಧು

೧೧ ಪ್ರಾಕಾರಂ ಗಡಿಯಂಕಮಲ್ಲಂ ಭೀತರಂ ಕೊಲ್ಲಂ ನುಡಿದಂತೆ ಗಂಡಂ [ಪ್ರಜೆಮೆ]ಚ್ಚಿ ಗಂಡಂ ಬಾಯಕುಳ ವಂಸೋದ್ಭವಂ

೧೨ ಶ್ರೀಮದರಸಿಯಕೆಱೆಯ ನೊಳಂಬ ಗಾವುಣ್ಡನ ಮಗಂ [ಚ್ಛಣ್ಡಾ]ರಿಪು ಮದೇಭ ಕುಂಭಿ ಕುಂಭಸ್ತಳ ನಖಾ

೧೩ ಸ್ಫಾಳನ ಕಿಶೋರ ಕೇಶರಿ ಪರಾಕ್ರಮ ವಿದಾರುಣಂ ಜಯವಿಜಯ ತೋರಣಂ ಗೋತ್ರಪವಿತ್ರಂ ಪರಾಂಗನಾ

೧೪ ಪುತ್ರಂ ಗಡಿಯಂಕಮಲ್ಲಂ ವೈರಿಪ್ರಿತ್ಸೆಲ್ಲಂ ಕದನಪ್ರಚಣ್ಡಾಂ ನಿಶ್ಚಯಗಣ್ಡಾಂ ಅಣ್ಣನ ಗಂಧವಾರಣಂ

೧೫ ದಾಯಿಗ ದಲ್ಲಳಂ ಗೂಳಿಗ ದಿಶಾಪಟ್ಟಂ ವಿನಾಯಕ ನಾಮಾನ್ವಯಂ ಶಿವಪಾದಪಂಕಜ ಭ್ರಮ

೧೬ ರಂ ಸರಣಾಗತ ವಜ್ರಪಂಜರಂ ನುಡಿದಂತೆ ಗಂಡಂ ನಾಮಾದಿ ಸಮಸ್ತ ಪ್ರಸಸ್ತಿ ಸಹಿತಂ

೧೭ ಶ್ರೀಮತ್ ಸುಭತುಂಗಂ ಪಿರಿಯ ಕೋಗಿಲೂರ್ಕ್ಕೆಱೆಯ ಕೋಗಿಲೂರ್ಕ್ಕೂಡಲಿಗೇರಿ ಮೆದಕೇರಿ ಎರ್ಮ್ಮೆ

೧೮ ಯನೂರ್ದ್ದರ್ಮ್ಮಿ ಪನ್ನೆರಡುಮಂ ತ್ರಿಭೋಗ ಸಹಿತಂಮಾಳುತ್ತಮಿರೆ ಸಕವರ್ಷ ೯೬೮ನೆಯ ಸ

೧೯ ರ್ವ್ವಜಿತ್ ಸಂವತ್ಸರದ ವೈಸಾಖ ಶುದ್ಧ ತ್ರಯೋದಸಿ ಆದಿವಾರದಂದು ಸುಭತುಂಗೇಶ್ವರ

೨೦ ದೇವರಂ ಪ್ರತಿಷ್ಠೆ ಮಾಡಿಸಿ ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನು

೨೧ ಷ್ಠಾಣ ಜಪ ಸಮಾಧಿ ಶೀಳ ಸಂಪನ್ನರಪ್ಪ ಶ್ರೀಮತ್ ಚಂದ್ರಾಭರಣ ಪಣ್ಡಿತರ ಕಾಲಂ ಕರ್ಚ್ಚಿ

೨೨ ಧಾರಾಪೂರ್ವ್ವಕಂ ಮಾಡಿ ಮಠದ ತಪೋಧನರ್ಗ್ಗೆ ಗ್ರಾಸಕ್ಕೆನ್ದು ಕೊಟ್ಟ ಗರ್ದ್ದೆ ಪಿರಿಯ ಕೆಱೆಯ

೨೩ ಮೊದಲೇರಿಯ ಕೆಳಗೆ ದೇವರ ನಿವೇದ್ಯದಯ್ದು ಕೊಳಗ ವಿದೇಯ ಗದ್ದೆಯೊಳಗಾಗೆ ಮತ್ತರೊನ್ದು

೨೪ ಗಾವುಣ್ಡಗೆಱೆಯಿಂ ಮೇಗಣ ಗೊರವಗೆಱೆಯೊನ್ದು ಆ ಕೆಱೆಯೊಳಗೆ ಮೊಗೆ ಮತ್ತರೆರಡು ಅಲ್ಲಿಂ ಪಡುವ

೨೫ ಕಿಸುಮತ್ತಮ್ಮೂಱು ಊರಿಂ ಪಡುವಲೆರೆ ಮತ್ತರ್ನ್ನಾಲ್ಕು ದೇವರ್ಗ್ಗೆ ನಿವೇದ್ಯಕ್ಕೆ ಕಿಸು ಮತ್ತರೊನ್ದು ದೇವ

೨೬ ರ್ಗ್ಗಂ ಮಠಕ್ಕಂ ತೋಂಟಂ ಕಮ್ಮ ಮೂನೂಱು ಇನ್ತೀ ಧರ್ಮ್ಮಮಂ ಪ್ರತಿಪಾಳಿಸಿದವರ್ಗ್ಗೆ ಸೂರ್ಯ್ಯಗ್ರಹಣದನ್ದು

೨೭ ಗಂಗೆ ವಾರಣಾಸಿ ಕುರುಕ್ಷೇತ್ರದೊಳ್ ಚತುರ್ವ್ವೇದ ಪಾರಗರ್ಗ್ಗೆ ಸಾಸಿರ ಕವಿಲೆಯಂ ಕೊಟ್ಟ ಪಳ[ಂ] ಮಳಿದವರ್ಗ್ಗಾ ಕ

೨೮ ವಿಲೆವಂ ಬ್ರಾಹ್ಮಣರುಮನಳಿದ ಫಳ [ಂ*] ◎ ............

೨೯ ...............................................................

೩೦ ಸಾಮಾನ್ಯೋಯಂ ಧರ್ಮ್ಮಸೇತು ನ್ರಿಪಾಣಾ(ಂ) ಕಾಳೇ ಕಾಳೇ ಪಾಳನೀಯೋ ಭವದ್ಭಿಃ ಸರ್ವನೇತಾನ್ಭಾಗಿನಃ ಪಾ

೩೧ ರ್ಥಿವೇ[ಂ]ದ್ರೋ ಭೂಯೋ ಭೂಯೋ ಯಾಚತೇ ರಾಮಭದ್ರಃ ◎ ಬಹುಭಿರ್ವ್ವಸುಧಾ ದತ್ತಾ ರಾಜಭಿಃ ಸಗರಾದಿಭಿಃ

೩೨ ಯಸ್ಯ ಯಸ್ಯ ಯದಾ ಭೂಮಿಃ ತಸ್ಯತಸ್ಯ ತದಾಫಳ [ಂ*] ✧ ಸ್ವದತ್ತಂ ಪರದತ್ತಂ ವಾಯೋ ಹರೇತಿ ವಸುಂಧರಾ

೩೩ ಷಷ್ಟಿರ್ವ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ[ಃ*]-⊕-
ಅಂಗಜರೂಪಮನುಮೆನಿಸಿ ಪರಾಂಗನೆಯತ್ತೆಱ
೩೪ ಗನೊಳ್ಪನಱಿದುಂ ವೇಶ್ಯಾಸಂಗತಮನೊಲ್ಲನೀ ಸುಭತುಂಗಂ ಮನುಮಾರ್ಗ್ಗಚರಿತನೇನ್ನದರೊಳರೇ॥ವಿದಿತ
೩೫ ಸಮಕ್ಕೆ ವಿಕ್ರಮರುಮಕ್ಕೆ ಪೆಱರ್ಪ್ಪರುಡೇಕೆ ಸಾತ್ಯಮಿಲ್ಲದ ನುಡಿ ಲೋಭಮಿಲ್ಲದ ಪರಾಕ್ರಮ ಮಳ್ಕದ
೩೬ [ಸೌ]ರ್ಯ್ಯಂ ಮೊರೆವೋಗದ ಚಲಮಾಳಿಯಲ್ಲದಱಿತಂ ವ್ರಿಥೆಯಲ್ಲದ ಮೆಚ್ಚುತುಚ್ಚಮಲ್ಲದ ತುಳಿಲಾ
೩೭ ಳ್ತನಂ ಪೊಗಳಲೊಪ್ಪುವುದೀ ಸುಭತು[ಂ*]ಗನಂ ಜಗಂ ॥ ಶ್ರೀ ಸುಭತುಂಗಂ ಬರೆಯಿಸಿದೀ ಸಾಸನಮೀ ಧ
೩೮ ರ್ತ್ರಿಯೊಳ್ ಚಂದ್ರಾರ್ಕ್ಕರ್ಬ್ಬಾಸಿಸುವಿನಮಿರ್ಕ್ಕೆ ಯಸಶ್ರೀಸತಿ ತಾನವನನಗಲದಿರ್ಕ್ಕನವರಥ[ಂ] -⊕-

**ಎರಡನೆಯ (ಅಥವಾ ಹಿಂಭಾಗದ) ಶಾಸನದ ಪಾಠ**

೧. ಸ್ವಸ್ತಿ ಸಮಸ್ತ ಗುಣಗಣಾಳಂಕ್ರುತ...ಬ[ನ್ಧುದಾ]ತ[ಂ] ಗಡಿಯಂಕಮಲ್ಲಂ ಪ್ರಜೆಮೆಚ್ಚೆಗಂಡಂ
೨ ಮುಱುಕರ ಮಾರಿ ಬಿದಿರೂರಯ್ನೂಱ[ಱ*]ನಾಳ್ಗಾವುಣ್ಡಂ ಶ್ರೀಮತ್ ಸುಬ್ಬಯ್ಯನಾತನ
೩ ಮಗಂ ಸ್ವಸ್ತಿ ಸಮಸ್ತ ವಂದಿಜನಾಧಾರಂ ಬಂಧು ಪ್ರಾಕಾರಂ ಗಡಿಯಂಕಮಲ್ಲಂ ಪ್ರಜೆಮೆ
೪ ಚ್ಚೆಗಣ್ಡಂ ಪಗೆಯ ಬೆಂಗೊಣ್ಬಂ। ಶ್ರೀಮದರಸಿಯಕೆಱೆಯ ನೊಳಂಬಗಾವುಣ್ಡನಾತನ ಮಗಂ
೫ ಸ್ವಸ್ತಿ ಸಮಸ್ತ ವಂದಿಜನಾಧಾರಂ ಬಂಧುಪ್ರಾಕಾರಂ ಪ್ರಜೆಮೆಚ್ಚೆಗಂಡಂ ಗಡಿಯಂಕಮಲ್ಲಂ ದಾಯಿಗ ದ
೬ ಲ್ಲಳಂ[ಂ*]ಗೂಳಿಗ ದಿಸಾಪಟ್ಟಂ ಕಾಯ್ವರ [ದೈವಂ] ಕುಣಂಗಿಲಯ್ನೂಱು[ಂ*] ಮಣ್ಣೆ ಮೂನೂಱು[ಂ] ಮಱುಗರೆ
೭ ಮೂನೂಱಱ ನಾಳ್ಗಾವುಣ್ಡಂ ಶ್ರೀಮದರಸಿಯಕೆಱೆಯ ಪಲ್ಲವಾದಿತ್ಯ ನೊಳಂಬಗಾವುಣ್ಡಂ
೮ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ಆತನ ತಮ್ಮಂ ಸುಬ್ಬಯ್ಯನಣ್ಣನ ಗನ್ಧವಾರಣ[ಂ*]
೯ ಮೆಂಬಂಕಮಾಲೆಯಂ ತಾಳ್ದಿ ಸುಭತುಂಗೇಶ್ವರ ದೇವರ ಪ್ರತಿಷ್ಠೆ ಮಾಡಿಸಿ ತಪೋಧನರ್ಗ್ಗೆ ಬಿಟ್ಟದತ್ತಿ ◎
೧೦ ರಣದೊಳಿದಿರ್ಚ್ಚಿದನ್ಯಬಲ ಮಾರ್ಪಡಲಿರ್ದುದೆ ಸತ್ತುಭೂಪರೊಡ್ಡಣವೊಡೆದಾ ಕಲಂಕಿದುದೆ [ವೈ]
೧೧ ರಿಭಟಾವಳಿ ಕಾಲಬಾಯೊಳಾ ಪೆಣಮಯಮಾಯ್ತ್ತ ಹುಬಬಬಬಾಪ್ಪೆನೆ ಕೊನ್ದುದಖಣ್ಡ
೧೨ ಚಣ್ಡ ಭಣ್ಡಣದೊಳರಾತಿಯಂ ವಿಜಯಕಾರಣಮಣ್ಣನ ಗನ್ಧವಾರಣ [ಂ*] ◎ ವೀರವಿರೋಧಿ ಸಾಧನ
೧೩ ನಿವಾರಣನುಪ್ಪ ರಿಪುಪ್ರತಾಪ ಸಂಹರಣಮಾನ್ತರಾತಿ ಲಯಕಾರಯೋಣಮಾಹ ವೀರಂ ಗದೋರ್ಜ್ಜಯ
೧೪ ಶ್ರೀರಮಣೀ ಗ್ರಿಹಲ್ಲಳಿತ ತೋರಣಮೂರ್ಜ್ಜಿತಸೌರ್ಯ್ಯ ಸಾಸನಸ್ಫುರಣಮಾನ ಸತ್ತುಭಟಮಾರಣಮಣ್ಣನಗನ್ಧ ವಾರಣ[ಂ*] [◎]



ಮೊದಲನೆಯ ಶಾಸನವು ಶಿವನನ್ನು ಕುರಿತು ಶ್ಲೋಕಗಳಿಂದ ಪ್ರಾರಂಭವಾಗುತ್ತಾ, ಪೃಥ್ವೀವಲ್ಲಭ ಮಹಾರಾಜಾಧಿರಾಜ ಇತ್ಯಾದಿಯಾಗಿ ವಿಶೇಷಿತವಾದ ಚಾಲುಕ್ಯ ತ್ರೈಲೋಕ್ಯಮಲ್ಲನು ಚಕ್ರವರ್ತಿಯಾಗಿ ಆಳುತ್ತಿರುವಾಗ, ಅವನ ಅಧೀನನಾಗಿ ನೊಳಂಬ ಪಲ್ಲವ ವಂಶದ ತ್ರೈಲೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮ್ಮಾನಡಿಯು ಕೋಗಳಿ ೫೦೦, ಬಲ್ಲಕುಂದೆ ೩೦೦, ಕಣೆಯಕಲ್ ೩೦೦, ಕುಡಿಪರವಿ ೭೦, ಕರಿವೀಡಿ ೩೦ ಈ ಪಂಚಗ್ರಾಮದ ಜೊತೆಗೆ ಕಡಂಬಳಿಗೆ ೧೦೦೦ವನ್ನೂ ಆಳುತ್ತಿರುವಾಗ್ಗೆ, ಅವನ ಅಧೀನನಾಗಿ ಶೌರ್ಯಾದಿ ಗುಣಗಳನ್ನು

ಹೇಳುವ ಅನೇಕ ಬಿರುದುಗಳನ್ನು ಹೊಂದಿದ್ದ, 'ಬಾಯಕುಳ ವಂಸೋದ್ಭವ'ನಾದ ಅರನೆಯಕೆರೆಯ ನೊಳಂಬ ಗಾವುಂಡನ ಮಗ 'ಪರಾಂಗನಾ ಪುತ್ರಂ', 'ಅಣ್ಣನ ಗಂಧವಾರಣಂ', 'ಡಾಯಿಗದಲ್ಗಳಂ', 'ಗೂಳಿಗದಿಶಾಪಟ್ಟಂ', ಈ ಮುಂತಾದ ಅನೇಕ ಬಿರುದುಗಳನ್ನು ಹೊಂದಿದ್ದ ಸುಭತುಂಗನು ಪಿರಿಯ ಕೋಗಿಲೂರ್, ಕಿರಿಯ ಕೋಗಿಲೂರ್, ಕೂಡಲಿಗೇರಿ, ಮೆದಕೇರಿ, ಎರ್ಮ್ಮೆಯನೂರ್, ದುರ್ಮ್ಮಿ ೧೨, ಇವುಗಳನ್ನು ತ್ರಿಭೋಗ ಸಹಿತವಾಗಿ ನಾಳ್ಗಾವುಂಡನಾಗಿ ಆಳುತ್ತಿದ್ದನು. ಅವನು ಶಕವರ್ಷ ೯೬೮ನೆಯ ಸರ್ವಜಿತ್ ಸಂವತ್ಸರದ ವೈಶಾಖ ಶುದ್ಧ ತ್ರಯೋದಶಿ ಆದಿತ್ಯವಾರದಂದು, ಸುಭತುಂಗೇಶ್ವರ ದೇವರನ್ನು ಪ್ರತಿಷ್ಠೆ ಮಾಡಿಸಿ ಚಂದ್ರಾಭರಣ ಪಂಡಿತರ ಕಾಲನ್ನು ತೊಳೆದು ಧಾರಾಪೂರ್ವಕವಾಗಿ, ಮಠದ ತಪಸ್ವಿಗಳಿಗೆ ಊಟಕ್ಕಾಗಿ ಪಿರಿಯಕೆರೆ, ಗಾವುಂಡಗೆರೆ ಮತ್ತು ಗೊರವಗೆರೆ, ಇವುಗಳ ವ್ಯಾಪ್ತಿಗೆ ಸೇರಿದ, ಕೆಂಪು ಮತ್ತು ಎರೇಮಣ್ಣಿನ ಬೇರೆಬೇರೆಯ ಭೂಮಿಗಳನ್ನು ದೇವರಿಗೂ, ಒಂದು ತೋಟವನ್ನು ಮಠಕ್ಕೂ ಕೊಟ್ಟನು. ಈ ವಿವರಣೆಯ ನಂತರ ಸರ್ವೇಸಾಧಾರಣವಾಗಿ ಬರುವ ಶಾಪಾಶಯದ ಸಂಸ್ಕೃತ ಶ್ಲೋಕಗಳೂ, ತದನಂತರ ಸುಭತುಂಗನ ರೂಪ ಶೌಚಗುಣ, ಪರಾಕ್ರಮ, ಸ್ವಾಮಿಭಕ್ತಿ, ಇವುಗಳನ್ನು ಹೇಳುವ ಹಳಗನ್ನಡದ ಒಂದು ವೃತ್ತ ಮತ್ತು ಎರಡು ಕಂದಗಳೂ ಬಂದು ಶಾಸನ ಮುಕ್ತಾಯಗೊಳ್ಳುತ್ತದೆ.

ಈ ಶಾಸನದಲ್ಲಿ ಹೇಳಲಾದ ಸರ್ವಜಿತ್ ಸಂವತ್ಸರವು ಶಕವರ್ಷ ೯೬೮ರಲ್ಲಿ ಬಂದಿರದೆ ೯೬೯ರಲ್ಲಿ ಬಂದಿತ್ತು. ಆದುದರಿಂದ ಅದು ಕ್ರಿಸ್ತಶಕದ ೧೦೪೭ನೆಯ ವರ್ಷವಾಗಿದ್ದು, ವೈಶಾಖ ಶುದ್ಧ ತ್ರಯೋದಶಿ ಆ ವರ್ಷದ ಏಪ್ರಿಲ್ ೧೧ನೆಯ ದಿನವಾಗುತ್ತದೆ. ಆದರೆ ಅದು ಆದಿತ್ಯವಾರವಾಗದೆ ಶನಿವಾರವಾಗುತ್ತದೆ.[೨] ಶಾಸನದ ರೀತ್ಯಾ ಆ ದಿನ ಆದಿತ್ಯವಾರ ಆಗಿರಬೇಕಾದರೆ, ಅದು ದಿ. ೧೨ ಆಗುತ್ತದೆ. ಇದರಲ್ಲಿ ಬರುವ ಚಕ್ರವರ್ತಿ ಚಾಲುಕ್ಯ ತ್ರೈಲೋಕ್ಯಮಲ್ಲನು ಕ್ರಿ.ಶ. ೧೦೪೪ರಿಂದ ೧೦೬೮ರ ವರೆಗೆ ಆಳಿದಂತೆ ತಿಳಿದುಬರುವ ೧ನೆಯ ಸೋಮೇಶ್ವರ ಎಂದೂ, ಅವನ ಅಧೀನನಾದ ತ್ರೈಲೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮ್ಮಾನಡಿ ಕ್ರಿ.ಶ. ೧೦೪೪ರಿಂದ ೧೦೫೪ರ ವರೆಗೆ ಆಳಿದಂತೆ ತಿಳಿದಿರುವ ನನ್ನಿ ನೊಳಂಬಪಲ್ಲವ ಪೆರ್ಮ್ಮಾನಡಿ ಎಂದೂ ಸ್ಪಷ್ಟವಾಗುತ್ತದೆ. ಈ ಪೆರ್ಮ್ಮಾನಡಿಯ ಅಧೀನರಾದ ಅರಸಿಯಕೆರೆಯ ನೊಳಂಬಗಾವುಂಡ ಮತ್ತು ಅವನ ಮಗ ಸುಭತುಂಗ (ಅಥವಾ ಶುಭತುಂಗ) ಇವರು ಸಹ ಅದೇ ನೊಳಂಬ ಪಲ್ಲವ ವಂಶದವರಿದ್ದು, ಬಾಯಕುಲ ಎಂಬ ಪ್ರಾಯಃ ಅದರ ಒಂದು ಶಾಖೆಗೆ ಸೇರಿದ್ದಿರಬೇಕೆಂದು ಕಾಣುತ್ತದೆ.

ಎರಡನೆಯ ಶಾಸನದ ವಿಷಯವನ್ನು ನೋಡಿದರೆ, ಮೊದಲನೆಯ ಶಾಸನದಲ್ಲಿ ಹೇಳ(ಲಾಗ)ದೆ ಬಿಟ್ಟಿದ್ದ ಕೆಲವು ವಿವರಗಳನ್ನು ಹೇಳಲಿಕ್ಕಾಗಿಯೆ ಅದನ್ನು ಹಾಕಿಸಿದಂತೆ ಕಂಡುಬರುತ್ತದೆ. ಹೀಗಾಗಿ, ಇದರಲ್ಲಿ ಕಾಲವನ್ನು ಹೇಳಿಲ್ಲದಿದ್ದರೂ ಇವರ ಕಾಲವೂ ಒಂದನೆಯ ಶಾಸನದ ಕಾಲವೇ, ಅಂದರೆ ಕ್ರಿ.ಶ. ೧೦೪೭ರ ಏಪ್ರಿಲ್ ೧೨ ಅಥವಾ ಅದರ ಸ್ವಲ್ಪ ತರುವಾಯದ್ದು ಎಂದು ಇಟ್ಟುಕೊಳ್ಳಬಹುದು. ಎರಡನೆಯ ಶಾಸನದಲ್ಲಿ ಬರುವ ವಿವರ ಹೀಗಿದೆ: ಶೌರ್ಯಾದಿ ಗುಣಗಳನ್ನು ಹೇಳುವ ಅನೇಕ ಬಿರುದುಗಳನ್ನುಳ್ಳ ಸುಬ್ಬಯ್ಯ (ಶುಭತುಂಗ?)ನು ಬಿದಿರೂರು ೫೦೦ ಎಂಬುದರ ನಾಳ್ಗಾವುಂಡನಾಗಿದ್ದನು. ಅವನ ಮಗನೇ ನೊಳಂಬಗಾವುಂಡ. ತಂದೆಯಂತೆ ಅನೇಕ ಬಿರುದುಗಳನ್ನು ಹೊಂದಿದ್ದ ಅವನು ಬಹುಶಃ ಅರಸಿಯಕೆರೆಯನ್ನು ಆಳುತ್ತಿದ್ದನು. 'ದಾಯಿಗ ದಲ್ಲಳಂ', 'ಗೂಳಿಗ ದಿಸಾಪಟ್ಟಂ' ಮುಂತಾದ ಬಿರುದುಗಳನ್ನು ಹೊಂದಿ, ಕುಣಂಗಿಲ್ ೫೦೦, ಮಣ್ಣೆ ೩೦೦, ಮಱುಗರೆ ೩೦೦, ಈ ಪ್ರದೇಶಗಳ ಜೊತೆಗೆ ಪ್ರಾಯಶಃ ತಂದೆಯ ತರುವಾಯ ಅರಸಿಯಕೆರೆಗೂ ಸಹ ನಾಳ್ಗಾವುಂಡನಾಗಿದ್ದವನು ಅವನ ಮಗನಾಗಿದ್ದ ಪಲ್ಲವಾದಿತ್ಯ ನೊಳಂಬಗಾವುಂಡ. ಅವನ ತಮ್ಮನೇ 'ಅಣ್ಣನ ಗಂಧವಾರಣಂ' ಎಂಬ ಬಿರುದಿಗೆ ಪಾತ್ರನಾದ ಸುಬ್ಬಯ್ಯ. ಇವನು ಸುಭತುಂಗೇಶ್ವರ ದೇವರನ್ನು ಪ್ರತಿಷ್ಠೆ ಮಾಡಿಸಿ ತಪಸ್ವಿಗಳಿಗೆ ದತ್ತಿದಾನಗಳನ್ನು ನೀಡಿದನು. ನೋಡುವವರು ನಿಬ್ಬೆರಗಾಗಿ (ಹುಬಬಬ ಬಾಪ್ಪು ಎಂದು) ಉದ್ಗರಿಸುವಂತೆ, ಯುದ್ಧದಲ್ಲಿ ಶತ್ರುಗಳನ್ನು ಆನೆಯೋಪಾದಿಯಲ್ಲಿ ಧ್ವಂಸಮಾಡುತ್ತಿದ್ದರಿಂದ 'ಅಣ್ಣನ ಗಂಧವಾರಣಂ' ಅಂದರೆ 'ಅಣ್ಣನ ಆನೆ' ಎಂಬ ಬಿರುದಿಗೆ ಅವನು ಸಹಜವಾಗಿಯೆ ಪಾತ್ರನಾಗಿದ್ದನು. ಶಾಸನದ ಕೊನೆಯಲ್ಲಿ ಬರುವ ಎರಡು ವೃತ್ತಗಳು ಅವನ ಬಿರುದಿನ ವರ್ಣನೆ ಅಥವಾ ವಿವರಣೆಯನ್ನು ಕಾವ್ಯಮಯವಾಗಿ ಹಾಗೂ ಸಚಿತ್ರವಾಗಿ ನೀಡುತ್ತವೆ.

ಈ ಎರಡೂ ಶಾಸನಗಳು ಪರಸ್ಪರ ಪೂರಕವಾದವುಗಳೆನ್ನುವುದು ಮೇಲಿನ ವಿವರದಿಂದ ಸ್ಪಷ್ಟ. ಇವೆರಡರ ವಿವರಗಳನ್ನು ಪರಸ್ಪರ ಕೂಡಿಸಿಕೊಂಡು ನೋಡಿದಾಗ ಒಂದನೆಯ ಶಾಸನದ ಸುಭತುಂಗನೇ ಎರಡನೆಯ ಶಾಸನದ ಕೊನೆಯಲ್ಲಿ ಬರುವ ಸುಬ್ಬಯ್ಯ ಎಂದು ಸ್ಪಷ್ಟವಾಗುತ್ತದೆ. ಸುಭತುಂಗ ಎಂಬ ಹೆಸರೇ ಸುಬ್ಬಯ್ಯ ಎಂದು (ಪ್ರಾಯಶಃ ಪ್ರೀತಿಯ ಹೆಸರಾಗಿ) ಮೊಟಕಾಗಿರುವುದು ಕಾಣಿಸುತ್ತದೆ. ಈ ಸುಬ್ಬಯ್ಯ (ಸುಭತುಂಗ)ನ ಅಜ್ಜನ ಹೆಸರೂ ಸುಬ್ಬಯ್ಯ ಎಂದೇ. ಇದರಿಂದ ಅಜ್ಜನ ಹೆಸರನ್ನೇ ಮೊಮ್ಮಗನಿಗೆ ಇಡಲಾಗಿತ್ತೆಂಬುದು ಸ್ಪಷ್ಟ. ಅಲ್ಲದೆ ಸುಬ್ಬಯ್ಯನ ಅಣ್ಣನ ಹೆಸರು ಪಲ್ಲವಾದಿತ್ಯ ನೊಳಂಬಗಾವುಂಡ ಎಂದು ಅವನೂ ಸಹ ಒಬ್ಬ ನಾಳ್ಗಾವುಂಡನಾಗಿದ್ದನೆಂದೂ ಅವನು ಆಳುತ್ತಿದ್ದ ಪ್ರಾಂತಗಳು ಯಾವ ಯಾವುವು ಇದ್ದುವೆಂದೂ ತಿಳಿಸುತ್ತದೆ. ಇವುಗಳಲ್ಲಿ ಕೆಲವರು ವ್ಯಕ್ತಿಗಳಿಗೆ ಪದನಾಮಗಳನ್ನು ಹೇಳಿರುವುದಿಲ್ಲ. ಅವನ್ನು ಹೀಗೆ ಗುರುತಿಸಬಹುದು. ಚಾಲುಕ್ಯ ತ್ರೈಲೋಕ್ಯಮಲ್ಲನು ಚಕ್ರವರ್ತಿಯಾಗಿದ್ದರೆ, ಅವನ ಅಧೀನನಾದ ತ್ರೈಲೋಕ್ಯಮಲ್ಲ ನೊಳಂಬಪಲ್ಲವ ಪೆರ್ಮ್ಮಾನಡಿಯು

ಮಂಡಲೇಶ್ವರನಾಗಿದ್ದನೆಂದೂ, ಅವನ ಅಧೀನರಾಗಿದ್ದ ನೊಳಂಬ ಗಾವುಂಡ ಮತ್ತು ಅವನ ಮಕ್ಕಳಾದ ಪಲ್ಲವಾದಿತ್ಯ ಮತ್ತು ಸುಭ ತುಂಗ ಇವರುಗಳು ನಾಳ್ಗಾವುಂಡರಾಗಿದ್ದರೆಂದೂ ತಿಳಿಯಬಹುದು. ಇವರು ನಾಳ್ಗಾವುಂಡರಾಗಿದ್ದರೂ ಸಾಮಂತರಷ್ಟು ಗಣ್ಯ ಸ್ಥಾನಮಾನಗಳನ್ನೂ ಪ್ರದೇಶಾಧಿಕಾರವನ್ನೂ ಹೊಂದಿದ್ದಂತೆ ಕಾಣಿಸುತ್ತದೆ. ಇದೀಗ ಈ ಶಾಸನಗಳ ಮೂಲಕ ತಿಳಿದು ಬರುತ್ತಿರುವ ಬಾಯಕುಲದ ಈ ಕಿರಿಯ ಅರಸು ಮನೆತನದ ವಂಶವೃಕ್ಷವನ್ನು ಹೀಗೆ ಕೊಡಬಹುದು:*

**ಸುಬ್ಬಯ್ಯ (=೧ನೆಯ ಶುಭತುಂಗ?)**
[ಬಿದಿರೂರು ೫೦೦]
|
(-?-) ನೊಳಂಬ ಗಾವುಂಡ
[ಅರಸಿಯಕೆರೆ]
|

**ಪಲ್ಲವಾದಿತ್ಯ ನೊಳಂಬ ಗಾವುಂಡ**
(ಅರಸಿಯಕೆಱು)
(ಕುಣಂಗಿಲ್ ೫೦೦, ಮಣ್ಣೆ ೭೦೦, ಮಱುಗರೆ ೭೦೦)

**ಸುಬ್ಬಯ್ಯ (= ೨ನೆಯ ಶುಭತುಂಗ)**
(ಪೆರಿಯಕೋಗಿಲೂರ್, ಕಿರಿಯ ಕೋಗಿಲೂರ್)
(ಕೊಡಲಿಗೇರಿ, ಮೆದಕೇರಿ, ಎಮ್ಮೆರ್ಯನೂರ್, ದುಮ್ಮಿ ೧೨)

ಎರಡನೆಯ ಶಾಸನದ ಮೇಲುಭಾಗದಲ್ಲಿ ಕೆತ್ತಿರುವ ಆನೆಯ ಶಿಲ್ಪ ತುಂಬ ರಮಣೀಯವಾಗಿದೆ. ಸಾಲಂಕೃತವಾಗಿರುವ ಆನೆ ಚಲನೆಯಲ್ಲಿರುವಂತೆ ಇಲ್ಲಿ ಶಿಲ್ಪಿತವಾಗಿದೆ. ಅದು ತನ್ನೆರಡೂ ದಂತಗಳಲ್ಲಿ ಒಬ್ಬ ಮನುಷ್ಯನನ್ನು ಚುಚ್ಚಿ ಹಿಡಿದು, ಇನ್ನೊಬ್ಬನನ್ನು ಸೊಂಡಿಲಲ್ಲಿ ಎತ್ತಿ ಹಿಡಿದು ನೇತಾಡಿಸುತ್ತಿದೆ. ಮತ್ತೊಬ್ಬನನ್ನು ಎಡಮುಂಗಾಲಿನ ಕೆಳಗೆ ಒತ್ತಿ ಹಿಡಿದು ತುಳಿಯುತ್ತಿರುವಂತಿದೆ. ಅದರ ಎದುರಿಗೆ ಇಬ್ಬರು ಪುರುಷರು ಅದು ಮಾಡುತ್ತಿರುವ ಭಯಾನಕ ಕೃತ್ಯಗಳನ್ನು ನೋಡುತ್ತಾ ಸ್ತಬ್ಧರಾಗಿ ನಿಂತಂತಿದೆ. ಹೀಗೆ ಶಿಲ್ಪಿತವಾಗಿರುವ ಆನೆಯ ಚಿತ್ರವನ್ನೂ, ಸುಭತುಂಗನಿಗೆ ಇದ್ದ ಅಣ್ಣನ ಆನೆ ಎಂಬ ಅರ್ಥದ 'ಅಣ್ಣನ ಗಂಧವಾರಣಂ' ಎಂಬ ಬಿರುದನ್ನೂ ಒಟ್ಟಿಗೆ ಮನಸ್ಸಿಗೆ ತಂದುಕೊಂಡು ನೋಡಿದಾಗ, ಇಲ್ಲಿರುವುದು ಆನೆಯ ಚಿತ್ರವಾದರೂ ಆನೆಯ ಚಿತ್ರಣವಲ್ಲ, 'ಅಣ್ಣನ ಗಂಧವಾರಣಂ' ಎಂಬ ಬಿರುದಿನ ಸಾಂಕೇತಿಕ ಚಿತ್ರಣ, ಪರೋಕ್ಷವಾಗಿ ಸುಭತುಂಗನದೇ ಚಿತ್ರಣ ಎನಿಸುತ್ತದೆ. ಹೀಗಾಗಿ ಇದೊಂದು ವಿಶಿಷ್ಟ ಶಿಲ್ಪ ಎಂದು ಹೇಳಬಹುದು.

ಈ ಸಾಂಕೇತಿಕ ಚಿತ್ರಣ ಶಿವಮೊಗ್ಗ ಜಿಲ್ಲೆಯ ಒಂದು ಪ್ರಸಿದ್ಧ ಪ್ರಾಚ್ಯ ಸ್ಮಾರಕವನ್ನು ನೆನಪಿಗೆ ತರುತ್ತದೆ. ಶಿಕಾರಿಪುರ ತಾಲ್ಲೂಕಿನ ಒಂದು ಪ್ರಾಚೀನ ಐತಿಹಾಸಿಕ ಸ್ಥಳವಾದ ಬೆಳಗಾವಿ (ಬಳ್ಳಿಗಾವೆ)ಯಲ್ಲಿ ಒಂದು ಸ್ತಂಭದ ಮೇಲೆ ನಿಲ್ಲಿಸಿರುವ ಗಂಡಭೇರುಂಡ ಶಿಲ್ಪವೇ ಆ ಪ್ರಾಚ್ಯ ಸ್ಮಾರಕ. ಅದು "ಕರ್ನಾಟಕದ ಗಂಡಭೇರುಂಡ ಶಿಲ್ಪಗಳಲ್ಲೇ ಅತಿಪ್ರಾಚೀನವಾದದ್ದು" ಎನ್ನಲಾಗಿದೆ.[೩] ಎತ್ತರವಾದ ಶಿಲಾಸ್ತಂಭದ ಮೇಲೆ ನಿಲ್ಲಿಸಿದ್ದ ಆ ಶಿಲ್ಪ ಸುಮಾರು ಮಾನವ ಪ್ರಮಾಣದ್ದು. ದೇಹ ಮನುಷ್ಯಾಕಾರದ್ದಿದ್ದು ಕಂಠದಿಂದ ಮೇಲೆ ಗಿಡುಗ ಪಕ್ಷಿಯದರ ರೀತಿಯ ಎರಡು ತಲೆಗಳನ್ನು ಹೊಂದಿದೆ. ರಾಕ್ಷಸರನ್ನು ನುಂಗುತ್ತಿರುವಂತೆ ಚಿತ್ರಿತವಾಗಿದೆ. ಆ ಸ್ತಂಭದ ಅಡಿಯಲ್ಲಿರುವ ಶಾಸನದಲ್ಲಿ ಅದನ್ನು ಭೇರುಂಡೇಶ್ವರ ದೇವರೆಂದು ಹೆಸರಿಸಿದೆ. ಈ ಶಿಲ್ಪದಲ್ಲಿ ವೀರಭಂಗಿಯಲ್ಲಿ ನಿಂತಿರುವ ಭೇರುಂಡೇಶ್ವರನು ತನ್ನ ಬಲಬಾಯಲ್ಲಿ ಒಬ್ಬನನ್ನು ಎಡಬಾಯಲ್ಲಿ ಇನ್ನೊಬ್ಬನನ್ನು ಅಗಿದು ನುಂಗುತ್ತಿದ್ದು, ಮತ್ತೊಬ್ಬನನ್ನು ಎಡಗೈಯಲ್ಲಿ ಹಿಡಿದು ಎಡಬಾಯಿಯತ್ತ ಕೊಂಡೊಯ್ಯುತ್ತಿರುವಂತಹ ಮತ್ತು ಬಲಬಾಯಿಯಲ್ಲಿರುವವನು ಬೀಳದಂತೆ ಬಲಗೈಯನ್ನು ಅಡ್ಡ ಹಿಡಿದು ಒಳತಳ್ಳುತ್ತಿರುವಂತಹ ಭೀಕರ ಚಿತ್ರಣವಿದೆ. ಅದನ್ನು ಸ್ಥಾಪಿಸಿದವನು ಕಲ್ಯಾಣ ಚಾಳುಕ್ಯ ಚಕ್ರವರ್ತಿ ತ್ರೈಲೋಕ್ಯಮಲ್ಲ (೧ನೆಯ ಸೋಮೇಶ್ವರ)ನ ಮಂಡಲೇಶ್ವರನಾಗಿ ಬನವಾಸಿ ಮೊದಲಾದ ಪ್ರಾಂತ್ಯವನ್ನು ಆಳುತ್ತಿದ್ದ ಚಾವುಂಡರಾಯರಸ ಎಂಬುವನು. ಅವನು ಶಕವರ್ಷ ೯೬೯ರ ಸರ್ವಜಿತ್ ಸಂವತ್ಸರದ ವೈಶಾಖ ಶುದ್ಧ ದಶಮಿ ಬೃಹಸ್ಪತಿವಾರದಂದು ಅಂದರೆ ಕ್ರಿ.ಶ. ೧೦೪೭ರ ಏಪ್ರಿಲ್ ೮ ರಂದು ಬಳ್ಳಿಗಾವೆಯ "ಜಗದೇಕಮಲ್ಲೇಶ್ವರ ದೇವರ ಮುನ್ದೆ ಗಣ್ಡಭೇರುಣ್ಡ ಸ್ತಂಭಮಂ ನಿಲಿಸಿ ಮಹಾತ್ಯಾಗಂ ಗೆಯ್ದ"ನೆಂದೂ[೪] ಅವನಿಗೆ "ಅಸಹಾಯ ಶೌರ್ಯ್ಯಂ ಗಣ್ಡರ ಗಣ್ಡಂ ಗಣ್ಡಭೇರುಣ್ಡಂ"[೫] ಇತ್ಯಾದಿಯಾದ

---

* ಇಲ್ಲಿ ಅವರವರ ಹೆಸರಿನ ಕೆಳಗೆ, ಕಂಸಗಳಲ್ಲಿ ಅವರವರು ಆಳುತ್ತಿದ್ದ ಪ್ರದೇಶಗಳ ಹೆಸರುಗಳನ್ನು ಕೊಟ್ಟಿದೆ. ಇದರಿಂದ ಒಂದೇ ಮನೆತನದ ಇವರುಗಳು ಬೇರೆಬೇರೆಯ ಎಷ್ಟೊಂದು ಪ್ರದೇಶಗಳಿಗೆ ಒಡೆಯರಾಗಿದ್ದರು ಎಂಬುದರ ಜೊತೆಗೆ ಅವರು ಹೊಂದಿದ್ದ ಸಾಮರ್ಥ್ಯ ಸ್ವಾಮಿನಿಷ್ಠೆಗಳು ಸಹ ಮನಸ್ಸಿಗೆ ಬರಬಹುದು.

ಅನೇಕ ಪ್ರಶಸ್ತಿಗಳಿದ್ದುವು. ಆ ಸ್ತಂಭ ಶಾಸನದಲ್ಲಿ "ಧರ್ಮ್ಮೇಣ ಶೌರ್ಯ್ಯೇಣ ಸತ್ಯೇನ ತ್ಯಾಗೇನ ಚ ಮಹೀತಳೇ ಗಣ್ಡಭೇರುಣ್ಡ ಸಾದೃಶ್ಯೋ ನ ಭೂತೋ ನ ಭವಿಷ್ಯತಿ"[೬] (ಧರ್ಮದಿಂದ ಶೌರ್ಯದಿಂದ ಸತ್ಯದಿಂದ ತ್ಯಾಗದಿಂದ ಪ್ರಪಂಚದಲ್ಲೇ ಗಂಡಭೇರುಂಡನಿಗೆ ಸಾದೃಶ್ಯನೆನಿಸಿದವನು ಹಿಂದೆ ಹುಟ್ಟಿಲ್ಲ, ಮುಂದೆ ಹುಟ್ಟಲಾರ) ಎಂದು ಚಾಮುಂಡರಾಯರಸನನ್ನು ಪ್ರಶಂಸಿಸಲಾಗಿದೆ. ಹಾಗೆಂದೇ ಬಿ.ಎಲ್. ರೈಸ್ ಅವರು ಅವನು 'ಗಣ್ಡ ಭೇರುಣ್ಡ'ನೆಂದೇ ಪ್ರಸಿದ್ಧನಾಗಿದ್ದನೆಂದು ತೋರುತ್ತದೆ[೭] ಎಂದು ಬರೆದಿರುವುದು ಸಮಂಜಸವಾಗಿದೆ. ಈ ಹಿನ್ನೆಲೆಯಿಂದ ನೋಡಿದಾಗ ಇಲ್ಲಿಯ ಸ್ತಂಭದ ಮೇಲಿನ ಶಿಲ್ಪ ಭೇರುಂಡೇಶ್ವರ ದೇವರು ಎಂದು ಹೇಳಿದ್ದರೂ ಚಾವುಂಡರಾಯರಸನ ಸಾಂಕೇತಿಕ ರೂಪವೆಂದೂ ಸ್ಫುಟವಾಗುತ್ತದೆ. ಹೀಗೆ ಮಂಡಲೇಶ್ವರನಾದ ಚಾವುಂಡರಾಯರಸನು ತನ್ನ ಪ್ರತೀಕವಾದ ಗಂಡಭೇರುಂಡ ಶಿಲ್ಪವನ್ನು ಸ್ಥಾಪಿಸಿದ ನಾಲ್ಕನೆಯ ದಿನವೇ ನಾಳ್ಗಾವುಂಡನಾದ ಸುಭತುಂಗನು ತನ್ನ ಪ್ರತೀಕವಾದ ಆನೆಯ ಶಿಲ್ಪವನ್ನು ಮಾಡಿಸಿರುವುದು ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಶೇಷ ಸಂಗತಿ.

ಎರಡೂ ಶಾಸನಗಳ ವಿವರಗಳನ್ನು ಒಟ್ಟುಗೂಡಿಸಿ ನೋಡಿದಾಗ, ಮತ್ತೆ ಕೆಲವು ಅಂಶಗಳು ಸ್ಫುಟಗೊಳ್ಳುತ್ತವೆ. ಕರ್ನಾಟಕ ಇತಿಹಾಸದಲ್ಲಿ ಮಂಡಲೇಶ್ವರರಾಗಿ ಆಳಿದ ಪ್ರಸಿದ್ಧ ರಾಜಮನೆತನಗಳಲ್ಲಿ ನೊಳಂಬಪಲ್ಲವರೂ ಸೇರಿರುವುದು ಎಲ್ಲರಿಗೂ ತಿಳಿದ ಸಂಗತಿ. ಕಲ್ಯಾಣ ಚಾಳುಕ್ಯ ಚಕ್ರವರ್ತಿಗಳ ಅಧೀನರಾಗಿ ಆಳುತ್ತಿದ್ದ ಈ ನೊಳಂಬಪಲ್ಲವರ ಇತಿಹಾಸಕ್ಕೆ ಸಂಬಂಧಿಸಿದ ಕೆಲವು ಹೊಸ ಸಂಗತಿಗಳು ಇಲ್ಲಿ ಕಾಣಸುತ್ತದೆ. ನೊಳಂಬಪಲ್ಲವರು ಮಂಡಲೇಶ್ವರರಾಗಿ ಆಳುತ್ತಿದ್ದ ನೊಳಂಬವಾಡಿ ೩೨೦೦೦ ಎಂಬ ಪ್ರಾಂತ್ಯವು ಕರ್ನಾಟಕದ ಬಳ್ಳಾರಿ, ಚಿತ್ರದುರ್ಗ, ತುಮಕೂರು, ಬೆಂಗಳೂರು, ಕೋಲಾರ ಹಾಗೂ ಆಂಧ್ರಪ್ರದೇಶದ ಅನಂತಪುರ, ಚಿತ್ತೂರು ಮತ್ತು ತಮಿಳುನಾಡಿನ ಧರ್ಮಪುರಿ, ಉತ್ತರ ಆರ್ಕಾಡು, ಸೇಲಂ ಜಿಲ್ಲೆಗಳ ಭಾಗಗಳನ್ನು ಒಳಗೊಂಡಿದ್ದಿತೆಂದು ಈವರೆಗೆ ತಿಳಿಯಲಾಗಿದೆಯಷ್ಟೆ.[೯] ಬಿ.ಎಲ್. ರೈಸ್ ಅವರು ಶಿವಮೊಗ್ಗ ಜಿಲ್ಲೆಯ ಶಾಸನಗಳ ಪ್ರಥಮ ಸಂಪುಟದಲ್ಲಿ ನೊಳಂಬಪಲ್ಲವರ ಕಾಲಕ್ಕೆ ಸೇರಿದವೆನ್ನುವ ನಾಲ್ಕು ಶಾಸನಗಳನ್ನು ಪ್ರಕಟಿಸಿದ್ದಾರೆ.[೧೦] ಅವುಗಳಲ್ಲಿ ತ್ರೈಲೋಕ್ಯಮಲ್ಲ ನೊಳಂಬ (ಕ್ರಿ.ಶ. ೧೦೪೪-೫೪) ರಾಜನ ಕಾಲಕ್ಕೆ ಸೇರಿದ ಶಾಸನಗಳೂ ಸೇರಿವೆ. ಅವುಗಳ ಬಗ್ಗೆ ಮತ್ತು ನೊಳಂಬಪಲ್ಲವರ ಬಗ್ಗೆ ರೈಸ್ ಅವರು ಪೀಠಿಕಾ ಭಾಗದಲ್ಲಿ ಪ್ರಸ್ತಾಪಿಸಿದ್ದಾರೆ ಕೂಡಾ.[೧೧] ಆ ಶಾಸನಗಳಲ್ಲಿ ಎರಡು ಚೆನ್ನಗಿರಿ ತಾಲ್ಲೂಕಿಗೆ, ಇನ್ನೆರಡು ಹೊನ್ನಾಳಿ ತಾಲ್ಲೂಕಿಗೆ ಸೇರಿದವು. ಹೀಗಿದ್ದರೂ ಕೂಡಾ ನೊಳಂಬವಾಡಿ ಪ್ರಾಂತ್ಯಕ್ಕೆ ಹಿಂದಿನ ಶಿವಮೊಗ್ಗ ಜಿಲ್ಲೆಯ ಭಾಗ ಸೇರಿತ್ತೆಂಬ ಸಂಗತಿಯನ್ನು ಅವರಾಗಲಿ ಇತರ ವಿದ್ವಾಂಸರಾಗಲಿ ಈವರೆಗೆ ಏಕೆ ಗಮನಿಸಲಿಲ್ಲವೋ ಎಂದು ಆಶ್ಚರ್ಯವಾಗುತ್ತದೆ. ನೊಳಂಬ ಪಲ್ಲವರ ಆಳ್ವಿಕೆಗೆ ಹಳೆಯ ಶಿವಮೊಗ್ಗ ಜಿಲ್ಲೆಯ ಭಾಗ ಸೇರಿದ್ದಿತೆಂಬುದಕ್ಕೆ ಹಿರೇಕೋಗಲೂರಿನ ಪ್ರಸ್ತುತ ಶಾಸನಗಳೂ ಸಹ ಈಗ ಹೆಚ್ಚಿನ ಆಧಾರಗಳಾಗಿ ಹಿಂದಿನ ಶಾಸನಗಳ ಪಟ್ಟಿಗೆ ಸೇರುತ್ತವೆ. "ಪ್ರಭಾವಶಾಲೀ ಅರಸುಮನೆತನಗಳ ಪರಸ್ಪರ ಕಚ್ಚಾಟಗಳ ನಡುವೆ ರಾಜ್ಯವೊಂದನ್ನು ಸ್ಥಾಪಿಸಿ ಅದನ್ನು ಕಾಲಕ್ರಮದಲ್ಲಿ ವಿಸ್ತರಿಸಿಕೊಳ್ಳುವುದರಲ್ಲಿ ನೊಳಂಬರು ಯಶಸ್ವಿಯಾದರೆಂಬುದು ಅವರ ಶಕ್ತಿ ಸಾಮರ್ಥ್ಯಗಳನ್ನೂ ಜನಪ್ರಿಯತೆಯನ್ನೂ ಎತ್ತಿತೋರಿಸುತ್ತದೆ" ಎಂಬ ವಿದ್ವಾಂಸರ ಮಾತು[೧೨] ನೊಳಂಬ ರಾಜ್ಯ ವಿಸ್ತರಣೆಯಲ್ಲಿ ಹಳೆಯ ಶಿವಮೊಗ್ಗ ಜಿಲ್ಲೆಯ ಭಾಗಗಳೂ ಸೇರಿದ್ದುದನ್ನೂ ಈಗ ಗಮನಕ್ಕೆ ತೆಗೆದುಕೊಂಡರೆ ಅವರ ಸಾಮರ್ಥ್ಯ ಪ್ರಭಾವಗಳು ಇನ್ನಷ್ಟು ಮನಸ್ಸಿಗೆ ಬರುತ್ತವೆ.

ಇದಲ್ಲದೆ, ಮೇಲೆ ಹೇಳಿದ ರೈಸ್ ಅವರಿಂದ ಪ್ರಕಟಿತವಾದ ಮೂರು ಶಾಸನಗಳೂ ಪ್ರಸ್ತುತ ಶಾಸನಗಳೂ ನೊಳಂಬ ಪಲ್ಲವರ ಕೊನೆಯ ದೊರೆಯಾದ ತ್ರೈಲೋಕ್ಯಮಲ್ಲ ನೊಳಂಬ ರಾಜನ ಕಾಲಕ್ಕೆ ಸೇರಿದವುಗಳಾಗಿವೆ. ಕೆಲವು ಶಾಸನಗಳಲ್ಲಿ ಇವನನ್ನು ತ್ರೈಲೋಕ್ಯಮಲ್ಲ ನನ್ನಿ ನೊಳಂಬ ಎಂದು ಕರೆಯಲಾಗಿದೆ. ಚನ್ನಗಿರಿ ತಾಲ್ಲೂಕಿನ ಒಂದು ಶಾಸನವು ಈ ದೊರೆ ಮಾಡಿದ ದಾಳಿಯೊಂದರ ಸೂಚನೆಯನ್ನು ಕೊಡುತ್ತದೆ.[೧೩] "ಶ್ರೀಮತ್ ತ್ರೈಲೋಕ್ಯಮಲ್ಲ ನೊಳಂಬಪಲ್ಲವ ಪೆರ್ಮ್ಮಾಡಿದೇವರು ದಾಳಿಯನಿಟ್ಟು ಎಂದು ಅದರಲ್ಲಿ ಬಂದಿರುವ ಮಾತಿನಿಂದ ಹಳೆಯ ಶಿವಮೊಗ್ಗ ಜಿಲ್ಲೆಯ ಈ ಭಾಗ, ಆ ದೊರೆ ನಡೆಸಿದ ದಾಳಿಯ ಪರಿಣಾಮವಾಗಿ ನೊಳಂಬವಾಡಿ ಪ್ರಾಂತಕ್ಕೆ ಸೇರಿದ್ದಿರಬಹುದೆ? ಎನ್ನಿಸುತ್ತದೆ.[೧೪] ಆ ಶಾಸನದಲ್ಲಿ ಕಾಲವನ್ನು ಹೇಳಿರುವುದಿಲ್ಲ. ಆದರೆ ರೈಸ್ ಅವರು ಇವರ ಕಾಲ ಕ್ರಿ.ಶ. ಸು. ೧೦೫೦ ಎಂದು ಸೂಚಿಸಿದ್ದಾರೆ. ಆದರೆ ಪ್ರಸ್ತುತ ಹಿರೇಕೋಗಲೂರು ಶಾಸನ ಕ್ರಿ.ಶ. ೧೦೪೭ರದ್ದಿದ್ದು ಅಷ್ಟು ಹೊತ್ತಿಗೆ ಈ ಭಾಗ ಅವನ ಆಳ್ವಿಕೆಗೆ ಒಳಪಟ್ಟಿದ್ದಂತೆ ಸೂಚಿತವಾಗುವುದರಿಂದ, ರೈಸ್ ಸೂಚಿಸಿದ ಕಾಲವನ್ನು ಬಿಡಬಹುದೆನಿಸುತ್ತದೆ. ಕ್ರಿ.ಶ. ೧೦೫೪ರಲ್ಲಿ ಈ ಕೊನೆಯ ನೊಳಂಬರಾಜ ಕೊಪ್ಪಂ ಎಂಬಲ್ಲಿ ನಡೆದ ಯುದ್ಧದಲ್ಲಿ, ತನ್ನ ಚಾಳುಕ್ಯ ದೊರೆ ೧ನೆಯ ಸೋಮೇಶ್ವರನ ಪರವಾಗಿ ಚೋಳರ ರಾಜಾಧಿರಾಜ ಮತ್ತು ೨ನೆಯ ರಾಜೇಂದ್ರ ಇವರನ್ನು ಎದುರಿಸಿ, ಹೋರಾಡಿ, ಅಸುನೀಗಿದಂತೆ ಮತ್ತು ಅವನೊಂದಿಗೆ ಮೂಲ ನೊಳಂಬಪಲ್ಲವ ಸಂತತಿಯ ಅರಸರ ಆಳ್ವಿಕೆ ಕೊನೆಗಂಡಂತೆ ತಿಳಿದುಬರುವುದರಿಂದ,[೧೫] ಅವನು ತನ್ನ ಆಳ್ವಿಕೆಯ ಕೊನೆಗಾಲದಲ್ಲಿ ಈ ಭಾಗದ ಮೇಲೆ ಹಿಡಿತ ಸಾಧಿಸಿ ಸ್ವಲ್ಪ ಕಾಲ ಮಾತ್ರ ಆಳಿರಬೇಕೆಂದು ಕಾಣುತ್ತದೆ.

ತ್ರೈಲೋಕ್ಯಮಲ್ಲ ನನ್ನಿನೊಳಂಬ ರಾಜನ ಅಧೀನರಾಗಿ ಆಳುತ್ತಿದ್ದ ನಾಳ್ಗಾವುಂಡರಲ್ಲಿ ಅದೇ ನೊಳಂಬಪಲ್ಲವ ವಂಶದವರೂ ಇದ್ದರೆಂದು ಪ್ರಸ್ತುತ ಶಾಸನದಿಂದ ತಿಳಿಯುತ್ತದೆ. ೧ನೆಯ ಶಾಸನದಲ್ಲಿ ಸುಭತುಂಗನ ತಂದೆಯನ್ನು 'ಬಾಯಕುಳ ವಂಸೋದ್ಭವಂ' ಎಂದು ವಿಶೇಷಿಸಿರುವುದರಿಂದ ಈ 'ಬಾಯಕುಳ' ಎಂಬುದು ನೊಳಂಬಪಲ್ಲವ ವಂಶದಲ್ಲಿ ಒಂದು ಶಾಖೆ ಅಥವಾ ಬೆಡಗು ಇಲ್ಲವೆ ಗೋತ್ರ ಇದ್ದಿರಬಹುದೇ ಎಂದು ಸಂದೇಹ ವಾಗುತ್ತದೆ. ಇದಲ್ಲದೆ ಇವನನ್ನು 'ವಿನಾಯಕ ನಾಮಾನ್ವಯಂ' ಎಂದೂ ಶಾಸನದಲ್ಲಿ ಕರೆದಿರುವುದನ್ನೂ ಇಲ್ಲಿ ನೋಡಬೇಕು. ಈ ಮಾತಿಗೆ 'ವಿನಾಯಕ ಎಂಬ(ವನ) ವಂಶದವನು' 'ವಿನಾಯಕ ಎಂಬ ಹೆಸರು (ಅಥವಾ ಹೆಸರಿಗೆ) ಅನ್ವಯವಾಗುವವನು' ಎಂದಾಗುತ್ತದೆಯಷ್ಟೆ. ನೊಳಂಬಪಲ್ಲವ ವಂಶದಲ್ಲಿ, ಬಾಯಕುಲ ಎಂಬುದು ಒಂದು ಶಾಖೆಯಿದ್ದು ಅದರಲ್ಲಿ ವಿನಾಯಕ ಹೆಸರಿನ ಮನೆತನ ಅದರ ಒಂದು ಕವಲಿರಬಹುದೆ? ಇಂಥ ಪ್ರಶ್ನೆಗಳೂ ಬರುತ್ತವೆ. ಇವಕ್ಕೆ ನಿರ್ದಿಷ್ಟ ಉತ್ತರ ದೊರೆಯಬೇಕಾಗಿದೆ.

ಈ ನಾಳ್ಗಾವುಂಡರುಗಳು ಆಳುತ್ತಿದ್ದ ಪ್ರಾಂತ್ಯಗಳ ಬಗ್ಗೆಯೂ ಸಹ ಗಮನಿಸುವುದು ಇಲ್ಲಿ ಅಗತ್ಯ. ಸುಭತುಂಗನ ಅಜ್ಜನಾದ ಸುಬ್ಬಯ್ಯನು ಬಹುಶಃ ಬಿದಿರೂರ್ ೫೦೦ ಪ್ರಾಂತ್ಯವನ್ನೂ ತಂದೆಯಾದ ನೊಳಂಬಗಾವುಂಡನು ಅರಸಿಯಕೆರೆಯ ಪ್ರಾಂತ್ಯವನ್ನೂ ಆಳುತ್ತಿದ್ದನೆಂದು ತಿಳಿಯುತ್ತದೆ. ಈ ಬಿದಿರೂರು, ಶಿವಮೊಗ್ಗ ಜಿಲ್ಲೆಯ ಪ್ರಸಿದ್ಧವಾದ ಬಿದನೂರು ಎನ್ನುವುದು ಸ್ಪಷ್ಟ. ಹಾಗೆಯೇ ಈ ಅರಸಿಯಕೆರೆ ಹಾಸನ ಜಿಲ್ಲೆಯ ಪ್ರಸಿದ್ಧವಾದ ಅರಸೀಕೆರೆಯೆ? ಈ ಅಂಶ ಇನ್ನೂ ದೃಢಪಡಬೇಕಾಗಿದೆ. ಹಾಗೆಯೇ ಸುಭತುಂಗನ ಅಣ್ಣನಾದ ಪಲ್ಲವಾದಿತ್ಯ ನೊಳಂಬ ಗಾವುಂಡನು ಬಹುಶಃ ಅರಸಿಯಕೆರೆಯ ಜೊತೆಗೆ ಕುಣಂಗಿಲ್ ೫೦೦, ಮಣ್ಣೆ ೩೦೦, ಮಱುಗರೆ ೩೦೦ ಈ ಪ್ರಾಂತ್ಯಗಳನ್ನೂ ಆಳುತ್ತಿದ್ದಂತೆ ತಿಳಿಯುತ್ತದೆಯಷ್ಟೆ. ಈ ಕುಣಂಗಿಲ್, ಮಣ್ಣೆ, ಮೆರುಗರೆಗಳು ತುಮಕೂರು ಜಿಲ್ಲೆಯ ಭಾಗಗಳನ್ನು ಒಳಗೊಂಡಿದ್ದ ಪ್ರಾಚೀನ ಪ್ರಾಂತ್ಯಗಳೆಂಬುದು ಈಗಾಗಲೇ ಆ ಭಾಗದ ಶಾಸನಗಳಿಂದ ತಿಳಿದಿರುವ ಸಂಗತಿ.

ಎರಡನೆಯ ಶಾಸನದಲ್ಲಿ, ಅಣ್ಣನಾದ ಪಲ್ಲವಾದಿತ್ಯ ನೊಳಂಬನಿಗೆ 'ದಾಯಿಗ ದಲ್ಲಳಂ' 'ಗೂಳಿಗ ದಿಶಾಪಟ್ಟಂ' ಎಂಬ ಬಿರುದುಗಳು ಗಮನಾರ್ಹವಾಗಿವೆ. ಇವು ಎರಡನೆಯ ಶಾಸನದಲ್ಲಿ ಅಣ್ಣನಾದ ಪಲ್ಲವಾದಿತ್ಯ ನೊಳಂಬನಿಗೆ ಅನ್ವಯಿಸಲ್ಪಟ್ಟಿದ್ದರೆ, ಒಂದನೆಯ ಶಾಸನದಲ್ಲಿ ತಮ್ಮನಾದ ಸುಭತುಂಗನಿಗೆ ಅನ್ವಯಿಸಲ್ಪಟ್ಟಿವೆ. ಇವುಗಳಲ್ಲಿ 'ದಾಯಿಗ ದಲ್ಲಳಂ' ಎಂಬುದು ಪ್ರಬಲ ಪ್ರತಿಸ್ಪರ್ಧಿಯಾದ ದಾಯಾದಿಯೊಬ್ಬನನ್ನು ಇವರು ನಿಗ್ರಹಿಸಿದುದನ್ನು ಸೂಚಿಸುತ್ತಿರಬೇಕು. 'ಗೂಳಿಗ ಪಟ್ಟಂ' ಎಂಬಲ್ಲಿಯ ಗೂಳಿಗ ಹೊಯ್ಸಳ ೧ನೆಯ ನರಸಿಂಹನ ಕಾಲಕ್ಕೆ ಮಱುಗರೆ ಮುಂತಾದ ಪ್ರಾಂತ್ಯವನ್ನು ಆಳಿದ ಗೂಳಿಗ ಅಥವಾ ಗೂಳಿಬಾಚಿದೇವ (ಕ್ರಿ.ಶ. ೧೧೪೨-೭೩) ಎಂಬುವನನ್ನು[೧೬] ನೆನಪಿಗೆ ತರುತ್ತದೆ. ಪ್ರಸ್ತುತ ಶಾಸನದ ಗೂಳಿಗ ಬಹುಶಃ ಆ ಗೂಳಿಬಾಚಿದೇವನ ಪೂರ್ವಿಕನಾದ ಇನ್ನೊಬ್ಬ ಗೂಳಿಗನಿದ್ದಿರ ಬಹುದೆ? ಎಂದೂ ಸಾಮಾನ್ಯವಾಗಿ ಅಜ್ಜನ ಹೆಸರನ್ನು ಮೊಮ್ಮಗನಿಗೆ ಇಡುವ ಪರಿಪಾಟ ಇರುವುದರಿಂದ ಪ್ರಸ್ತುತ ಶಾಸನದ ಗೂಳಿಗ ಮೇಲೆ ಹೇಳಿದ ಮುಂದಿನ ಕಾಲದ ಗೂಳಿಬಾಚಿದೇವನ ಅಜ್ಜನಾಗಿರಬಹುದೆ? ಎಂದೂ ಸಂದೇಹ ಉಂಟಾಗುತ್ತದೆ. ಆದರೆ ಗೂಳಿಬಾಚಿದೇವನ ವಂಶದ ವಿವರ ಬರುವ ಶಾಸನದಲ್ಲಿ ಅವನ ಅಜ್ಜನ ಹೆಸರನ್ನು ಚಲವಜೀವ ಎಂದು ಹೇಳಿದೆ.[೧೭] ಈ ಚಲವಜೀವ ಎಂಬುದು ಇಜೀವ ಬೆಡಂಗನ ರೀತಿಯಲ್ಲಿ ಅಂಕಿತನಾಮವಾಗಿರುವುದಕ್ಕಿಂತ ಅನ್ವರ್ಥನಾಮ ವಾಗಿರುವುದು ಸಾಧ್ಯ. ಹಾಗಾಗಿ ಈ ಚಲವಜೀವನಿಗೆ ಗೂಳಿಗ ಎಂಬ (ಇನ್ನೊಂದು ಅಥವಾ ನಿಜವಾದ) ಹೆಸರು ಇದ್ದಿರಬಹುದೆ? ಎಂದು ಸಂದೇಹ. ಬಹುಶಃ ಮಱುಗರೆ ನಾಡಿನ ಮೇಲೆ ಒಡೆತನ ಸಾಧಿಸುವಲ್ಲಿ ಪಲ್ಲವಾದಿತ್ಯ ಮತ್ತು ಸುಭತುಂಗರಿಗೆ ಪ್ರಬಲ ಪ್ರತಿಸ್ಪರ್ಧಿಯಾಗಿದ್ದ ಗೂಳಿಗ ಈ ಚಲವಜೀವನಾಗಿದ್ದು ಅವನನ್ನು ಅವರು ಸೋಲಿಸಿ ದಿಕ್ಕಾಪಾಲು ಮಾಡಿದ್ದರಿಂದಲೇ ಅವರಿಗೆ 'ಗೂಳಿಗ ದಿಶಾಪಟ್ಟಂ' ಎಂಬ ಆ ಬಿರುದು ಸಂದಿರಬಹುದೆ? ಎಂಬ ಸಂದೇಹಗಳೂ ಬರುತ್ತದೆ. ಮುಂದೆ ತ್ರೈಲೋಕ್ಯಮಲ್ಲ ನೊಳಂಬಪಲ್ಲವ ಪೆರ್ಮ್ಮಾನಡಿ ದೇರೆ ಅಸ್ತಂಗತನಾದ ಮೇಲೆ ಅವನೊಂದಿಗೆ ನೊಳಂಬಪಲ್ಲವರ ಆಳ್ವಿಕೆ ಕೊನೆಗಂಡ ಹಾಗೆ, ಬೇರೆ ಬೇರೆ ಪ್ರಾಂತಗಳ ಮೇಲಿನ ಪಲ್ಲವಾದಿತ್ಯ ಮತ್ತು ಸುಭತುಂಗರ ಆಳ್ವಿಕೆಯೂ ಪ್ರಾಯಶಃ ಅವರ ಕೈ ತಪ್ಪಿ ಹೋಗಿ ಮುಂದೆ ನಾಡು ಮತ್ತೆ ಹಳೆಯ ವೈರಿಗಳಾದ ಅದೇ ಗೂಳಿಗನ ವಂಶದವರ ಕೈಗೆ ಸಿಕ್ಕಿರಬಹುದು. ಈ ಸಂದೇಹಗಳೆಲ್ಲ ಸಾಧ್ಯತೆಗಳಾಗಿ ಕಾಣುತ್ತವೆ.

ಸುಭತುಂಗನು ಆಳುತ್ತಿದ್ದುದು ಪಿರಿಯಕೋಗಿಲೂರ್, ಕಿರಿಯಕೋಗಿಲೂರ್, ಕೂಡಲಿಗೇರಿ, ಮೆದಕೇರಿ, ಎಮ್ಮೆರ್ಯನೂರ್, ದುಮ್ಮಿರ್ ೧೨ ಇವನ್ನು ಒಳಗೊಂಡ ಪ್ರದೇಶ. ಇವುಗಳಲ್ಲಿ ಎಮ್ಮೆರ್ಯನೂರ್ ಮತ್ತು ದುಮ್ಮಿರ್ ಇವು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನ ಪ್ರಾಚೀನ ಐತಿಹಾಸಿಕ ಗ್ರಾಮಗಳಾದ ಹಿರೇಎಮ್ಮಿಗನೂರು ಮತ್ತು ದಮ್ಮಿ ಆಗಿದ್ದರೆ, ಪಿರಿಯಕೋಗಿಲೂರ್, ಕಿರಿಯ ಕೋಗಿಲೂರ್ ಮತ್ತು ಮೆದಕೇರಿ, ಇವು ಇಂದಿನ ದಾವಣಗೆರೆ ಜಿಲ್ಲೆಯ (ಹಿಂದಿನ ಶಿವಮೊಗ್ಗ ಜಿಲ್ಲೆಯ) ಚನ್ನಗಿರಿ ತಾಲ್ಲೂಕಿನ ಹಿರೇಕೋಗಲೂರು, ಚಿಕ್ಕಕೋಗಲೂರು ಮತ್ತು ಮೆದಕೇರಿ ಗ್ರಾಮಗಳಾಗಿವೆ. ಆದರೆ ಕೊಡಲಿಗೇರಿ ಎಂಬುದು ಹಿರೇಕೋಗಲೂರಿಗೆ ಸಮೀಪವಿದ್ದ, ಈಗ ಬೇಚರಾಕ್ ಆಗಿರುವ ಗ್ರಾಮ. ಇಲ್ಲಿ ಒಂದು ಮಾತು

ಕೊಡಲಿಗೇರಿ ಗ್ರಾಮದ ಹೆಸರಿನಲ್ಲಿರುವ ಕೂಡಲಿ ಅಥವಾ ಕೂಡಲು ಎಂಬ ಭಾಗದಿಂದ ಆ ಊರು ಈ ಪ್ರಾಂತದಲ್ಲಿದ್ದ ಎರಡು ನದಿಗಳ ಅಥವಾ ತೊರೆಗಳ ಸಂಗಮ ಸ್ಥಾನದಲ್ಲಿದ್ದ ಊರು ಎಂದು ಸೂಚಿತವಾಗುತ್ತದೆ. ಇದಲ್ಲದೆ ಚಿಕ್ಕ ಕೋಗಲೂರು ಗ್ರಾಮ ಹಿರೇಕೋಗಲೂರು ಗ್ರಾಮದ ತರುವಾಯದಲ್ಲಿ ಆದ ಗ್ರಾಮ ಎಂದು ಅದರ ಹೆಸರಿನಿಂದಲೇ ತಿಳಿಯುವುದಾದರೂ ಅದು ಕೂಡಾ ತೀರಾ ಈಚೆಗೆ ಆದ ಗ್ರಾಮವೇನಲ್ಲ. ಕನಿಷ್ಠ ಒಂದು ಸಾವಿರ ವರ್ಷಗಳಷ್ಟು ಹಿಂದೆಯೇ ಆದ ಗ್ರಾಮ ಎಂದೂ ಈ ಶಾಸನದಿಂದ ಸ್ಪಷ್ಟವಾಗುತ್ತದೆ.

ಸುಭತುಂಗನು ಸುಭತುಂಗೇಶ್ವರ ದೇವರ ದೇವಾಲಯವನ್ನು ನಿರ್ಮಿಸಿದ್ದು ಯಾವ ಊರಲ್ಲಿ ಎಂದು ಶಾಸನದಲ್ಲಿ ಹೇಳಿಲ್ಲ. ಪ್ರಸ್ತುತ ಶಾಸನಗಳು ಹಿರೇಕೋಗಲೂರಲ್ಲಿ ದೊರೆತಿರುವುದರಿಂದ, ಆ ದೇವಾಲಯದ ನಿರ್ಮಾಣ ಅಲ್ಲಿಯೇ ಆಗಿರಬೇಕು ಎನಿಸುತ್ತದೆ. ಅಲ್ಲದೆ ಆ ದೇವರು ಒಂದು ಶಿವಲಿಂಗವಿರಬೇಕೆಂದು ಶಾಸನದ ಮೇಲಿನ ಶಿವಲಿಂಗದ ಚಿತ್ರದಿಂದ ಮತ್ತು ಸುಭತುಂಗನನ್ನು 'ಶಿವಪಾದಪಂಕಜಭ್ರಮರಂ' ಎಂದು ಕರೆದಿರುವುದರಿಂದ ಸ್ಪಷ್ಟವಾಗಿದೆ. ಆದರೆ ಹಿರೇಕೋಗಲೂರಲ್ಲಿ ಈ ಹೆಸರಿನ ದೇವರ ದೇವಾಲಯ ಈಗ ಇಲ್ಲ. ಇಲ್ಲಿ ಪ್ರಾಚೀನ ಕಾಲದ ಒಂದು ಶಿವಾಲಯವಿದೆಯಾದರೂ ಅದರ ಲಿಂಗ ಮತ್ತು ದೇವಾಲಯ ನೊಳಂಬಪಲ್ಲವರ ಕಾಲದಷ್ಟು ಹಳೆಯವು ಎಂದು ಹೇಳುವುದು ಕಷ್ಟ. ಅಲ್ಲದೆ, ಒಂದು ಕೈಫಿಯತ್ತಿನ ಪ್ರಕಾರ, ಇಲ್ಲಿಗೆ ಸಮೀಪದ ಸಂತೇಬೆನ್ನೂರಿನಲ್ಲಿ ಮಹಮ್ಮದೀಯ ಪ್ರಾಂತಪಾಲಕರು ಆಳುತ್ತಿರುವಾಗ, ಕ್ರಿ.ಶ. ೧೬೪೧ ರಿಂದ ೧೬೪೯ರ ವರೆಗೆ ಒಂಬತ್ತು ವರ್ಷಗಳ ಕಾಲ ಮಸೀದಿಯೊಂದರ ನಿರ್ಮಾಣ ಆಗುವಾಗ್ಗೆ, ಸಂತೇಬೆನ್ನೂರು, ಸಿದ್ಧನಮಠ, ತಳಿಗೆರೆ ಊರುಗಳಲ್ಲಿಯ ಕೆಲವು ದೇವಾಲಯಗಳ ಜೊತೆಗೆ ಹಿರೇಕೋಗಲೂರಿನ ಮೂರು ದೇವಸ್ಥಾನಗಳನ್ನೂ ಭಗ್ನಗೊಳಿಸಲಾಯಿತು ಎಂದು ತಿಳಿಯುತ್ತದೆ.[೧೮] ಹಾಗೆ ಹಾಳಾದ ದೇವಸ್ಥಾನಗಳೆಂದರೆ ಸುಖನೇಶ್ವರ, ಕಲ್ಲೇಶ್ವರ ಮತ್ತು ಮಲ್ಲೇಶ್ವರ ದೇವಸ್ಥಾನಗಳೆಂದೂ ಆ ಕೈಫಿಯತ್ತು ಹೇಳುತ್ತದೆ. ಇಲ್ಲಿ ಸುಭತುಂಗೇಶ್ವರ ದೇವಾಲಯದ ಹೆಸರು ಕಾಣುವುದಿಲ್ಲ. ಸುಭತುಂಗೇಶ್ವರ ದೇವಾಲಯದ ಹೆಸರು ಆ ಕಾಲಕ್ಕಾಗಲೇ ಏನಾದರೂ ಬದಲಾವಣೆಗೊಂಡು, ಅದು ಮೇಲೆ ತಿಳಿಸಿದ ಭಗ್ನಗೊಂಡ ದೇವಾಲಯಗಳಲ್ಲಿ ಸುಖನೇಶ್ವರವೋ ಮತ್ತಾವುದೋ ಒಂದಾಗಿರಬಹುದೆ? ಎಂದು ಸಂದೇಹ ಬಾರದಿರುವುದಿಲ್ಲ. ಒಟ್ಟಿನಲ್ಲಿ ಆ ಹೆಸರಿನ ಮತ್ತು ಆ ಕಾಲಕ್ಕೆ ಸೇರಿದ್ದೆನ್ನುವ ದೇವಾಲಯ ಇದೇ ಎಂದು ನಿರ್ದಿಷ್ಟವಾಗಿ ತಿಳಿಯಲು ಸದ್ಯಕ್ಕೆ ಸಾಧ್ಯವಾಗುತ್ತಿಲ್ಲ.

ಒಂದನೆಯ ಶಾಸನದಲ್ಲಿ ಸುಭತುಂಗನು ದೇವಾಲಯದ ಜೊತೆಗೆ ತಪೋಧನರುಗಳಿದ್ದ ಒಂದು ಮಠಕ್ಕೂ ಕೂಡಾ ದಾನ ನೀಡಿರುವುದಾಗಿ ಹೇಳಿದೆಯಷ್ಟೆ. ಆ ಮಠ ಯಾವುದೆಂದು ಹೆಸರಿಲ್ಲವಾದರೂ ಅದು ಈ ದೇವಾಲಯಕ್ಕೆ ಹೊಂದಿಕೊಂಡೇ ಆದ ಮಠ ಇದ್ದಿರಬೇಕು. ಈ ದೇವಾಲಯಕ್ಕೆ ಮತ್ತು ಮಠ (ಮಠದ ತಪೋಧನರ ಭೋಜನ)ಕ್ಕೆ ಸುಭತುಂಗನು ನೀಡಿದ ದಾನವನ್ನು ಸ್ವೀಕರಿಸಿದ ಗುರು ಚಂದ್ರಾಭರಣಪಂಡಿತ ಒಬ್ಬ ಲಾಕುಳ ಪಾಶುಪತ ಅಥವಾ ಕಾಳಾಮುಖ ಶೈವ ಗುರುವಾಗಿರಬೇಕೆಂದು ಆ ಹೆಸರಿನ ಮೇಲಿಂದಲೇ ಭಾಸವಾಗುತ್ತದೆ. ದಾನ ಕೊಡಲಾದ ಭೂಮಿಗಳು ಇಲ್ಲಿಯ ಬೇರೆಬೇರೆ ಕೆರೆಗಳ ವ್ಯಾಪ್ತಿಗೆ ಸೇರಿದ್ದುವು. ಪಿರಿಯಕೆಱೆ ಗಾವುಂಡಗೆಱೆ ಮತ್ತು ಗೊರವಗೆಱೆ ಎಂಬ ಆ ಕೆರೆಗಳಲ್ಲಿ ಪಿರಿಯಕೆಱೆಯು ಈಗ ಹಿರೇಕೋಗಲೂರು ಮತ್ತು ಚಿಕ್ಕ ಕೋಗಲೂರುಗಳ ಮಧ್ಯೆ ಬರುವ ದೊಡ್ಡಕೆರೆ ಇರಬಹುದು. ಸಮೀಪದಲ್ಲಿರುವ ಬೇರೆಬೇರೆಯ ಕೆರೆಗಳಲ್ಲಿ ಹಿಂದಿನ ಗಾವುಂಡಗೆಱೆ ಮತ್ತು ಗೊರವಗೆಱೆ ಸೇರಿದ್ದಿರಬಹುದು. ಅವು ಯಾವುದು ಎಂದು ನಿರ್ದಿಷ್ಟವಾಗಿ ಗುರುತಿಸುವುದು ಈಗ ಸಾಧ್ಯವಾಗುವಂತಿಲ್ಲ.

ಸುಭತುಂಗನ ವ್ಯಕ್ತಿತ್ವದ ಬಗ್ಗೆ ಶಾಸನಗಳು ಕೊಡುವ ಇನ್ನು ಕೆಲವು ಅಂಶಗಳನ್ನು ಪ್ರಸ್ತಾಪಿಸುವುದರೊಂದಿಗೆ ಈ ಲೇಖನವನ್ನು ಪೂರ್ಣಗೊಳಿಸಬಹುದು. ಸುಭತುಂಗ ಅತ್ಯಂತ ಸ್ಫುರದ್ರೂಪಿ, ಸದ್ಗುಣಿ, ಸ್ವಾಮಿಭಕ್ತ, ಪರಾಕ್ರಮಿ ಎಂದು ಹೇಳುವುದರೊಂದಿಗೆ ಅವನನ್ನು 'ಪರಾಂಗನಾಪುತ್ರ' ಎಂದೂ ಕರೆಯಲಾಗಿದೆ. ಈ ವಿಶೇಷಣವಲ್ಲದೆ; ಪರಸ್ತ್ರೀಯರ ವಿಷಯದಲ್ಲಿ ಅವನು ಹೇಗೆ ಶೌಚಗುಣವುಳ್ಳವನಾಗಿದ್ದನೆಂದು ವಿಶೇಷವಾಗಿ ಹೇಳಲಾಗಿದೆ. ಇದಲ್ಲದೆ ಅವನು ಅಣ್ಣನ ಬಲಗೈಯಂತಿದ್ದ ಎಂಬುದನ್ನು 'ಅಣ್ಣನ ಗಂಧವಾರಣ' ಎಂಬ ಬಿರುದಿನ ಮೂಲಕ ಮತ್ತು ವಿಶೇಷವಾದ ಆನೆಯ ಚಿತ್ರದ ಮೂಲಕ ಸೂಚಿಸಿರುವುದನ್ನು ಹಿಂದೆಯೇ ನೋಡಿದ್ದೇವೆ. ಅವನ ಈ ಗುಣಗಳನ್ನು ಹೇಳುವ ಪದ್ಯಗಳು ಕಾವ್ಯಮಯವಾಗಿವೆ. ಹೀಗೆ ಸುಭತುಂಗನು ತನ್ನ ಸುಂದರ ಹೆಸರಿನ ತಕ್ಕವನಾಗಿ ವೈಶಿಷ್ಟ್ಯಪೂರ್ಣ ವ್ಯಕ್ತಿತ್ವ ಹೊಂದಿದ್ದ ಪ್ರಾಚೀನ ಕರ್ನಾಟಕದ ರಾಜಪುರುಷರಲ್ಲಿ ಒಬ್ಬನಾಗಿದ್ದಾನೆ.

ಹೀಗೆ ಈ ಶಾಸನಗಳು ಕರ್ನಾಟಕ ಇತಿಹಾಸದ ಕೆಲವು ಅಜ್ಞಾತ ಸಂಗತಿಗಳನ್ನು ಬೆಳಕಿಗಿಡುವುದರ ಮೂಲಕ, ಅದರ ಪುನಾರಚನೆಯಲ್ಲಿ ನೆರವಾಗುವ ಮಹತ್ವವನ್ನು ಪಡೆದಿವೆ. ಶಾಸನದ ರಾಜಕೀಯ ವಿವರಗಳು ಇತಿಹಾಸ-ಕುತೂಹಲಿಗಳಿಗೆ ಆಸಕ್ತಿಯ ವಿಷಯವಾದರೆ, ಸಾಂಕೇತಿಕವಾದ ಆನೆಯ ಚಿತ್ರಣ ಸಾಹಿತ್ಯ-ಕಲಾ-ಕುತೂಹಲಿಗಳಿಗೆ ಆಸಕ್ತಿಯ ಅಪರೂಪದ ವಸ್ತುವಾಗಿ ಮನಸ್ಸಿನಲ್ಲಿ ನಿಲ್ಲುತ್ತದೆ.



(ಈ ಶಾಸನದ ಕ್ಷೇತ್ರಕಾರ್ಯಕ್ಕೆ ಸಹಕರಿಸಿದ ಸಂತೇಬೆನ್ನೂರಿನಲ್ಲಿ ಕಂದಾಯ ಇಲಾಖೆಯಲ್ಲಿದ್ದ ಶ್ರೀ ಟಿ. ಪಿ. ಪರಮಶಿವಮೂರ್ತಿ ಶ್ರೀ ವಿ.ಎನ್. ತೋಟಪ್ಪನವರ, ಹಿರೇಕೋಗಲೂರಿನ ಶ್ರೀ ಕಲಿವೀರಪ್ಪ, ಶ್ರೀ ಕೆ.ಜಿ. ಗುರುಮೂರ್ತಿ, ಅವರಿಗೆ ಸ್ಥಳೀಯ ಸಹಕಾರದ ಜೊತೆಗೆ ಶಾಸನದ ಛಾಯಾಚಿತ್ರಗಳನ್ನು ನೀಡಿದ ಸಂತೇಬೆನ್ನೂರಿನ ಪತ್ರಕರ್ತ- ಲೇಖಕರಾದ ಶ್ರೀ ಸುಮತೀಂದ್ರನಾಡಿಗ್‌ಅವರಿಗೆ ನನ್ನ ಕೃತಜ್ಞತೆಗಳು.)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಈ ಊರಿನ ಕೆಲವು ಶಾಸನಗಳು ಈ ಹಿಂದೆ ಬಿ.ಎಲ್. ರೈಸ್ ಅವರಿಂದ ಮತ್ತು ಡಾ. ಎಂ. ಎಚ್. ಕೃಷ್ಣ ಅವರಿಂದ ಪ್ರಕಟವಾಗಿವೆ. ನೋಡಿ: **ಎಕ ಸಂಪುಟ ೭**, ಚನ್ನಗಿರಿ ೨೧ ರಿಂದ ೨೬ ಮತ್ತು **ಎಂಎಆರ್ ೧೯೩೫**, ಸಂಖ್ಯೆ ೩೮ ರಿಂದ ೪೦.

೨. ಇಲ್ಲಿ ಲಭ್ಯವಿಲ್ಲದ, ಸ್ವಾಮಿ ಕಣ್ಣುಪಿಳ್ಳೈ ಅವರ ಇಂಡಿಯನ್ ಎಪಿಮೆರಿಸ್ ಸಂಪುಟದ ಈ ವಿವರವನ್ನು ಮೈಸೂರಿನಿಂದ ಬರೆದು ಕಳಿಸಿಕೊಟ್ಟು ಸಹಕರಿಸಿದವರು ಶ್ರೀ ಸೀತಾರಾಮ ಜಾಗೀರ್‌ದಾರ್ ಅವರು.

೩. **ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ**., (೧೯೭೯), ಕಅಸಂ, ಮೈವಿವಿ, ಮೈಸೂರು, ಪು. ೪೫೨.

೪. **ಎಕ ಸಂಪುಟ ೭**, ಶಿಕಾರಿಪುರ ೧೫೧ (ಕ್ರಿ.ಶ. ೧೦೪೭)

೫. **ಎಕ ಸಂಪುಟ ೭**, ಶಿಕಾರಿಪುರ ೧೨೦ (ಕ್ರಿ.ಶ. ೧೦೪೮), ೧೫೧ (ಕ್ರಿ.ಶ. ೧೦೪೭).

೬. **ಎಕ ಸಂಪುಟ ೭**, ಶಿಕಾರಿಪುರ ೧೨೦ (ಕ್ರಿ.ಶ. ೧೦೪೮)

೭. **ಎಕ ಸಂಪುಟ ೭**, ಪೀಠಿಕೆ, ಪು. ೧೯.

೮. ಈಚಿನ ಕಾಲದಲ್ಲಿ ಈ ಗಂಡಭೇರುಂಡ ಮೂರ್ತಿಯನ್ನು ಯಾರೋ ಒಡೆದು ಹಾಕಿದ್ದಾಗ, ಮೈಸೂರು ಮಹಾರಾಜರ ಸರ್ಕಾರ, ಮೂಲದ ರೀತಿಯಲ್ಲೋ, ಮೈಸೂರಿನ ಶ್ರೀ ನಾಗಲಿಂಗೇಶ್ವರ ಮಠದ ಶ್ರೀ ಸಿದ್ದಲಿಂಗ ಸ್ವಾಮಿ ಎಂಬ ಪ್ರಸಿದ್ಧ ಶಿಲ್ಪಾಚಾರ್ಯರ ಕೈಯಲ್ಲಿ, ಅದರ ಪ್ರತಿಕೃತಿಯನ್ನು ನಿರ್ಮಾಣಮಾಡಿಸಿ, ಪುನಃ ಅದೇ ಸ್ತಂಭದ ಮೇಲೆ ಪ್ರತಿಷ್ಠಾಪಿಸಿದೆ. ಆ ಸ್ತಂಭದ ಮೇಲೆ ಈಗ ಕಾಣುವುದು ಮೂಲದ ಪ್ರತಿಕೃತಿ ಮಾತ್ರ. ನೋಡಿ: **ಎಂಎಆರ್ ೧೯೪೧**, ಪು. ೭೩ ಮತ್ತು ಚಿತ್ರ ೨೧(೨).

೯ಅ. ಡಾ. ಕೆ.ವಿ. ರಮೇಶ್., (೧೯೭೬), 'ಕರ್ನಾಟಕದ ಇತಿಹಾಸದಲ್ಲಿ ನೊಳಂಬರ ಸ್ಥಾನ'; **ನೊಳಂಬ ಇತಿಹಾಸ ದರ್ಶನ**, ನೊಳಂಬ ಇತಿಹಾಸ ಪರಿಷತ್, ತಿಪಟೂರು, ಪು. ೭೧, ೭೪.

ಆ. **ಕರ್ನಾಟಕ - ಕನ್ನಡ ವಿಷಯ ವಿಶ್ವಕೋಶ**., (೧೯೭೯), ಪೂರ್ವೋಕ್ತ, ಪು. ೮೬೧, ೮೯೯.

೧೦. **ಎಕ ಸಂಪುಟ ೭**, ಹೊನ್ನಾಳಿ ೧೦೭ (ಕ್ರಿ.ಶ. ೧೦೪೮), ೧೧೯ (ಕ್ರಿ.ಶ. ೧೦೫೪);

೧೧. **ಎಕ ಸಂಪುಟ ೭**, ಪೀಠಿಕೆ, ಪು. ೨೬.

೧೨. ಡಾ. ಕೆ. ವಿ. ರಮೇಶ್, ಪೂರ್ವೋಕ್ತ, ಪು. ೭೧.

೧೩. **ಎಕ ಸಂಪುಟ ೭**, ಚನ್ನಗಿರಿ ೯ (ಕ್ರಿ.ಶ.ಸು. ೧೦೫೦).

೧೪. ಬಿ.ಎಲ್. ರೈಸ್ ಅವರು, ಚನ್ನಗಿರಿ ೮ ಮತ್ತು ೯ನೆಯ ಶಾಸನಗಳಿಂದ ತ್ರೈಲೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮ್ಮಾಡಿ ದೇವನು ಒಂದು ಸೈನ್ಯದ ಅಧಿಪತಿಯಾಗಿಸಲ್ಪಟ್ಟಿದ್ದು, ಚೋಳರ ಮಹಾಸೇನೆಯನ್ನು ಓಡಿಸಿ ಬಮ್ಮಿಕೂರಲ್ಲಿ ಸೇನೆಯನ್ನು ನಿಲ್ಲಿಸಿಕೊಂಡಿದ್ದನೆಂದು ಬರೆದಿದ್ದಾರೆ. ಆದರೆ ಚನ್ನಗಿರಿ ೮ನೆಯ ಶಾಸನದಲ್ಲಿ 'ನೊಳಂಬನ ಪ್ರಸ್ತಾವದೊಳ್' ಎಂಬ ಮಾತಿನಲ್ಲಿ ಸೂಚಿಸಿರುವ ನೊಳಂಬ ಯಾರು ಎಂದು ಸ್ಪಷ್ಟವಿಲ್ಲ. ಇನ್ನು, ಚನ್ನಗಿರಿ ೯ನೆಯ ಶಾಸನದಲ್ಲಿ ಅವನ ಹೆಸರು ಸ್ಪಷ್ಟವಾಗಿ ಉಲ್ಲಿಖಿತವಾಗಿದ್ದು ಅವನ ದಾಳಿಯ ಬಗ್ಗೆ ತಿಳಿಸಿದೆಯಾದರೂ, ಅವನು ದಾಳಿಮಾಡಿದ್ದು ಚೋಳ ಮಹಾಸೇನೆಯ ಮೇಲೆ ಎಂಬ ಸೂಚನೆ ಅಲ್ಲಿ ಕಂಡುಬರುವುದಿಲ್ಲವಾಗಿ ರೈಸರ ಈ ಮೇಲಿನ ಹೇಳಿಕೆಯನ್ನು ಪುನರ್ವಿಮರ್ಶಿಸಬೇಕಾಗಿದೆ.

೧೫. **ಕರ್ನಾಟಕ - ಕನ್ನಡ ವಿಷಯ ವಿಶ್ವಕೋಶ**., ಪೂರ್ವೋಕ್ತ, ಪು. ೮೬೬ ಮತ್ತು ಎಂ.ಎಸ್. ಕೃಷ್ಣಮೂರ್ತಿ., 'ನೊಳಂಬರ ಇತಿಹಾಸ', **ನೊಳಂಬ ಇತಿಹಾಸ ದರ್ಶನ**, ಪೂರ್ವೋಕ್ತ, ಪು. ೨೩, ೫೭-೫೯.

೧೬. **ಎಕ ಸಂಪುಟ ೧೨**., ತುಮಕೂರು ೯ (ಕ್ರಿ.ಶ. ೧೧೫೧) ಮತ್ತು ಬಿ. ರಾಜಶೇಖರಪ್ಪ., (೧೯೯೭), 'ಕೊಂಡಾಪುರದ ಹೊಸಶಾಸನ', **ಚೆನ್ನುಡಿ** (ಸಂ: ಡಾ.ಬಿ. ನಂಜುಂಡಸ್ವಾಮಿ), ಗುಬ್ಬಿ, ಪು. ೧೪೭-೧೪೯, (ಈ ಎರಡೂ ಶಾಸನಗಳು ಒಂದೇ ದಿನಾಂಕದಂದು ಹಾಕಲಾದವು.)

೧೭. **ಎಕ ಸಂಪುಟ ೧೨**., ತುಮಕೂರು (ಕ್ರಿ.ಶ. ೧೧೫೧)

೧೮. **ಕರ್ನಾಟಕದ ಕೈಫಿಯತ್ತುಗಳು**., (೧೯೯೪), ಡಾ. ಎಂ.ಎಂ. ಕಲಬುರ್ಗಿ (ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೪೨೯.

ಸಂತೇಬೆನ್ನೂರು ಸುಮತೀಂದ್ರ ನಾಡಿಗ್ *

# ಚನ್ನಗಿರಿ ತಾಲ್ಲೂಕಿನಲ್ಲಿ ಉಚ್ಚಂಗಿ ಪಾಂಡ್ಯರ ಕಾಲದ ಎರಡು ಅಪ್ರಕಟಿತ ಶಾಸನಗಳು

ನೂತನ ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕಿನ ಸಂತೇಬೆನ್ನೂರು ಹೋಬಳಿಯ ದೊಡ್ಡ ಅಬ್ಬಿಗೆರೆ ಮತ್ತು ಮೆದಿಕೆರೆ ಎಂಬ ಎರಡು ಗ್ರಾಮಗಳಲ್ಲಿ ಈಚೆಗೆ ಎರಡು ಅಪ್ರಕಟಿತ ಶಿಲಾಶಾಸನಗಳು ದೊರೆತವು. ಈ ಎರಡೂ ಶಾಸನಗಳು ದಾನ ಶಾಸನಗಳಾಗಿದ್ದು ಈ ಹಿಂದೆ ಎಲ್ಲಿಯೂ ಪ್ರಕಟವಾಗಿಲ್ಲದಿರುವುದ ರಿಂದ ಇವು ಹೊಸಶಾಸನಗಳಾಗಿವೆ. ಈ ಎರಡೂ ಶಾಸನಗಳೂ ಹಳೆಗನ್ನಡ ಲಿಪಿ ಮತ್ತು ಭಾಷೆಯಲ್ಲಿದ್ದು ಬಳಪದ ಕಲ್ಲಿನಲ್ಲಿ ಅಕ್ಷರಗಳನ್ನು ಕೊರೆಯಲಾಗಿದೆ.

***ಮೊದಲ ಶಾಸನ ದೊಡ್ಡ ಅಬ್ಬಿಗೆರೆ ಶಾಸನ*** : ಸಂತೇಬೆನ್ನೂರು ಹೋಬಳಿ ಕೇಂದ್ರಕ್ಕೆ ನಾಲ್ಕು ಕಿ. ಮೀ. ಪೂರ್ವಕ್ಕೆ ಇರುವ ದೊಡ್ಡ ಅಬ್ಬಿಗೆರೆಯ ನೂತನ ಶ್ರೀ ಕಲ್ಲೇಶ್ವರ ದೇವಸ್ಥಾನದ ಪಕ್ಕ ದಕ್ಷಿಣಕ್ಕೆ ಪೂರ್ವಾಭಿಮುಖವಾಗಿ ಈ ಶಾಸನ ನೆಡಲಾಗಿದೆ. ಈ ಶಾಸನದ ಅಗಲ ೧೮", ಎತ್ತರ ೪೧", ದಪ್ಪ ೪೧/೨" ದಪ್ಪ ೪೧/೨" ಇದ್ದು ಶಾಸನದ ಮೇಲ್ಭಾಗದಲ್ಲಿ ಓರ್ವ ವ್ಯಕ್ತಿ ಶಿವಲಿಂಗಕ್ಕೆ ಅಭಿಷೇಕ ಮಾಡುತ್ತಿರುವಂತೆ ಚಿತ್ರವನ್ನು ಕಂಡರಿಸಿದ್ದು, ಎರಡೂ ಬದಿಯಲ್ಲಿ ಸೂರ್ಯ, ಚಂದ್ರರ ಚಿತ್ರವಿದೆ. ಕೆಳಗಡೆ ೩೩ ಸಾಲುಗಳುಳ್ಳ ಶಾಸನ ಕೆತ್ತಲಾಗಿದೆ.

ಈ ಶಾಸನದ ಮಧ್ಯಭಾಗದಲ್ಲಿ ೧೯ ರಿಂದ ೨೧ನೇ ಪಂಕ್ತಿಗಳವರೆಗೆ ೭ ಸಾಲುಗಳು ಸವೆದು ಹೋಗಿದ್ದು, ಅಕ್ಷರಗಳು ನಿಖರವಾಗಿ ಗುರ್ತಿಸಲಾಗುತ್ತಿಲ್ಲ. ಹೀಗೆ ಶಾಸನದ ಕೆಲಭಾಗ ತ್ರುಟಿತವಾಗಿದ್ದರೂ ಬರೆಯಿಸಿದವರ ಹೆಸರು, ಕಾಲ, ಉದ್ದೇಶ ಇವುಗಳ ವಿವರ ಹಾಳಾಗಿಲ್ಲದಿರುವುದರಿಂದ ಶಾಸನದ ಪಾಠ ನಿರ್ಧರಿಸಲು ತೊಂದರೆಯಾಗಿಲ್ಲ.

ಶಾಸನದ ಪ್ರಾರಂಭದಲ್ಲಿ 'ನಮಸ್ತುಂಗ.... ಶಂಭುವೇ' ಎಂಬ ಪ್ರಖ್ಯಾತ ಕವಿ ಬಾಣನ ಹರ್ಷಚರಿತೆಯ ಶಿವ ಪರವಾದ ಶ್ಲೋಕವಿದೆ.

ತದನಂತರ ಕಲ್ಯಾಣ ಚಾಲುಕ್ಯರ ತ್ರಿಭುವನಮಲ್ಲ ಆರನೇ ವಿಕ್ರಮಾದಿತ್ಯನ ಬಿರುದು, ಬಾವಲಿ, ಆಳ್ವಿಕೆಯನ್ನು ಹೊಗಳಲಾಗಿದ್ದು ನಂತರ ಅವರ ಮಹಾಮಂಡಳೇಶ್ವರನಾಗಿದ್ದ ಉಚ್ಚಂಗಿ ಪಾಂಡ್ಯ ರಾಜ ವಂಶಕ್ಕೆ ಸೇರಿದ ದೊರೆ ತ್ರಿಭುವನಮಲ್ಲ ರಾಯಪಾಂಡ್ಯ ದೇವರು, ನೊಳಂಬವಾಡಿ ಮುವತ್ತಾರುಸಾವಿರವನ್ನು ಆಳುತ್ತಿರುವಾಗ ಅವನ ಸಾಮಂತನಾಗಿದ್ದ ಬೊಮ್ಮಯ್ಯ ಎಂಬುವನು ಈ ಶಾಸನವನ್ನು ವಿಕ್ರಮ ಶಕ ೪೭ನೇ ಪ್ಲವ ಸಂವತ್ಸರದ ಪುಷ್ಯ ಬಹುಳ ೧೪ ಮಂಗಳವಾರ ಉತ್ತರಾಯಣ ಸಂಕ್ರಾಂತಿಯಂದು, ಅಂದರೆ ದಿನಾಂಕ ೧೦.೧.೧೧೨೨ ರಂದು ಅಬ್ಬೆಯಗೆರೆಯ ಕಲಿದೇವರ್ಗೆ, ಜಪ, ತಪ, ಯಮ, ನಿಯಮ, ಧ್ಯಾನ, ಧಾರಣ, ಮೌನ, ಅನುಷ್ಠಾನಗಳೆಂಬ ಅಷ್ಟಾಂಗ ಯೋಗದಿಂದ ಇರುವ ರುದ್ರಶಿವಪಂಡಿತರ ಶಿಷ್ಯರಾದ ಜ್ಞಾನ ಶಿವಪಂಡಿತರ ಕಾಲಂ ಕರ್ಚಿ ಆಲೂರಿನ ಕೆರೆಯ ಮೂಡಲ ಭೂಮಿಯನ್ನು ದಾನ ಮಾಡಿದ ವಿಚಾರ ತಿಳಿಸುತ್ತದೆ.

ಶಾಸನದ ಕೊನೆಯಲ್ಲಿ ಪರದತ್ತಾಂ ವಾಯೋ ಹರೇತಿ ವಸುಂಧರಾ ಷಷ್ಠಿ ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ಎಂಬ ಶಾಪಾಶಯದ ಸ್ಮೃತಿ ಶ್ಲೋಕವನ್ನು ಕೆತ್ತಲಾಗಿದೆ. ಕಡೆಯ ೩೩ನೇ ಸಾಲಿನ ಚಕ್ಕೆ ಹಾರಿ ಹೋಗಿದ್ದು ಅಲ್ಲಿದ್ದಿರ ಬಹುದಾದ ಶಾಸನ ಕೊರೆದವನ ಹೆಸರು ಓದಲಾಗುತ್ತಿಲ್ಲ. ಈ ಶಾಸನದ ಅಧ್ಯಯನದಿಂದ ಈ ಕೆಳಕಂಡ ಅಂಶ ತಿಳಿದುಬರುತ್ತದೆ.

೧. ಈವರೆಗೆ ಚಾಲುಕ್ಯರ ಅಧೀನ ಉಚ್ಚಂಗಿಪಾಂಡ್ಯರ ದೊರೆ ತ್ರಿಭುವನ ಮಲ್ಲರಾಯಪಾಂಡ್ಯನ ಶಾಸನ ದಾವಣಗೆರೆ ಯಲ್ಲಿ ಎರಡು, ಚನ್ನಗಿರಿಯಲ್ಲಿ ಒಂದು ಮಾತ್ರ ದೊರೆತ್ತಿದ್ದು ದೊಡ್ಡಅಬ್ಬಿಗೆರೆಯಲ್ಲಿ ಅವನ ಶಾಸನ ಸಿಕ್ಕಿರುವುದಿಂದ ಅವನ ರಾಜ್ಯಭಾರ ಇಲ್ಲಿಯವರೆಗೂ ವಿಸ್ತರಿಸಿತೆಂದು ತಿಳಿಯಬಹುದು.

೨. ದಾವಣಗೆರೆ ತಾಲ್ಲೂಕು ಶಾಸನ - ೩ (ಆನೆಕೊಂಡ)[೧] ಇದೇ ಪ್ಲವ ಸಂವತ್ಸರದ ಆಶ್ವೀಜ ಮಾಸದಲ್ಲಿ ತ್ರಿಭುವನಮಲ್ಲ ಪಾಂಡ್ಯದೇವರು ಬರೆಯಿಸಿದ್ದು ಅದರಲ್ಲಿ ತ್ರಿಭುವನಮಲ್ಲ ಪಾಂಡೇಶ್ವರ ದೇವಸ್ಥಾನ ಸ್ಥಾಪಿಸಲು ರುದ್ರಶಕ್ತಿದೇವರು ಮುಂತಾದವರ ಕಾಲು ತೊಳೆದು ದಾನ ಮಾಡಿದ ಬಗ್ಗೆ ಉಲ್ಲೇಖವಿದೆ. ನಾಲ್ಕು ತಿಂಗಳೊಳಗಾಗಿ ತ್ರಿಭುವನಮಲ್ಲ ಪಾಂಡ್ಯನ ಮಗ ರಾಯಪಾಂಡ್ಯ ಪಟ್ಟಕ್ಕೇರಿರುವುದು ಈ ಶಾಸನದಿಂದ ತಿಳಿದುಬರುತ್ತದೆ ಮತ್ತು ಅದೇ ಶಾಸನದಲ್ಲಿ ಹೊಗಳಿರುವ ರುದ್ರಶಕ್ತಿದೇವರ ಶಿಷ್ಯರಾದ ಜ್ಞಾನಶಿವಪಂಡಿತರ ಕಾಲು ತೊಳೆದು ಈ ದಾನ ಶಾಸನ ಬರೆಸಿರುವುದನ್ನು ವಿಶೇಷವಾಗಿ ಗಮನಿಸಬಹುದಾಗಿದೆ.

೩. ಶಾಸನ ಮೇಲ್ಭಾಗದಲ್ಲಿರುವ ಉಬ್ಬುಶಿಲ್ಪದಲ್ಲಿ

* ವರದಿಗಾರ, ಪ್ರಜಾವಾಣಿ ದೈನಿಕ, ಸಂತೇಬೆನ್ನೂರು - ೫೭೭ ೫೫೨, ದಾವಣಗೆರೆ ಜಿಲ್ಲೆ

ಕಂಡರಿಸಲಾದ ಚಿತ್ರವು ಅದು ಜ್ಞಾನಶಿವಪಂಡಿತರದೆಂಬ ಕಾಳಾಮುಖ ಪಂಥದ ಗುರುಗಳದಾಗಿರಬಹುದೆಂದು ತೋರುತ್ತದೆ.

೪. ದಾವಣಗೆರೆ ತಾಲ್ಲೂಕು ಶಾಸನ - ೧೫೬ (ಕಬ್ಬೂರು) ಈ ಶಾಸನಕ್ಕಿಂತ ಏಳು ವರ್ಷ ಹಿಂದಿನ ಜಯ ಸಂವತ್ಸರದಲ್ಲಿ ಬರೆಯಿಸಲಾಗಿದ್ದು ಅದರಲ್ಲೂ ಕಬ್ಬೂರ ವೂರೊಡೆಯ ಬಮ್ಮ ದೇವಯ್ಯ ಎಂಬುವನ ಹೆಸರು ಪ್ರಸ್ತಾಪಕ್ಕೆ ಬಂದಿದ್ದು ಈ ಬಮ್ಮ ದೇವಯ್ಯ, ಈ ಶಾಸನದಲ್ಲಿ ಉಲ್ಲೇಖಿತನಾಗಿರುವ ಬೊಮ್ಮಯ್ಯ ಒಬ್ಬನೇ ಎಂಬ ಸಂದೇಹ ಬರುತ್ತಿದೆ. ಕಾರಣ ಪ್ರಸ್ತುತ ಶಾಸನ ದೊರೆತಿರುವ ಅಬ್ಬಿಗೆರೆ ಗ್ರಾಮವು ಕಬ್ಬೂರು ಗ್ರಾಮಕ್ಕೆ ೧೫ ಕಿ. ಮೀ. ಸಮೀಪದಲ್ಲಿದೆ ಈ ಇಬ್ಬರು ಓರ್ವ ವ್ಯಕ್ತಿಯೇ ಎಂಬುದನ್ನು ಇನ್ನಷ್ಟು ಮಾಹಿತಿಯೊಂದಿಗೆ ದೃಢ ಪಡಿಸಿಕೊಳ್ಳಬೇಕಾಗಿದೆ.

೫. ಈ ಶಾಸನದಲ್ಲಿ ಉಲ್ಲೇಖಿತ ಅಬ್ಬೆಯಕೆರೆಯೇ ಈಗಿನ ದೊಡ್ಡಅಬ್ಬಿಗೆರೆ ಆಗಿದೆ. ಅಬ್ಬಿ ಎಂದರೆ ಬೆಟ್ಟದ ಮೇಲಿಂದ ಹರಿದು ಬರುವ ತೊರೆ ಎಂದರ್ಥ ಬರುತ್ತದೆ. ತೊರೆಯಿಂದ ಬರುವ ನೀರನ್ನು ಸಂಗ್ರಹಿಸುವ ಕೆರೆಯಿಂದಾಗಿ ಈ ಗ್ರಾಮಕ್ಕೆ ಅಬ್ಬಿಕೆರೆ, ಅಬ್ಬಿಗೆರೆ ಎಂದು ಹೆಸರು ಬಂದಿರಬಹುದು. ಇದರ ಪಕ್ಕದಲ್ಲಿ ಚಿಕ್ಕಅಬ್ಬಿಗೆರೆ ಎಂಬ ಗ್ರಾಮ ಇದ್ದು ಇದಕ್ಕೆ ಈಗ ದೊಡ್ಡಅಬ್ಬಿಗೆರೆ ಎಂದು ಕರೆಯಲಾಗುತ್ತಿದೆ. ಹಾಲಿ ಹಳೇ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿ ಹೊಸದಾಗಿ ದೇವಾಲಯ ಕಟ್ಟಲ್ಪಟ್ಟಿದ್ದರೂ, ಹಳೇ ಈಶ್ವರ ಲಿಂಗ, ನಂದಿಯನ್ನು ಪಕ್ಕದ ಸಣ್ಣ ಗುಡಿಯಲ್ಲಿ ಇಟ್ಟಿದ್ದಾರೆ.

೬. ಚನ್ನಗಿರಿಯಲ್ಲಿ ಈ ಹಿಂದೆ ರಾಯಪಾಂಡ್ಯನ ಒಂದು ಶಾಸನ ದೊರಕಿದ್ದು, ಈ ಶಾಸನದಿಂದ ಚನ್ನಗಿರಿ ತಾಲ್ಲೂಕಿನಲ್ಲಿ ರಾಯಪಾಂಡ್ಯನ ಕಾಲದ ಇನ್ನೊಂದು ಶಾಸನ ಸಿಕ್ಕಂತಾಗಿದೆ. ಈ ಶಾಸನ ಅವನ ಸಾಮಂತ ಬರೆಯಿಸಿದ್ದಾಗಿದೆ.

***ಎರಡನೇ ಮದಿಕೆರೆ ಶಾಸನ*** : ಈ ಶಾಸನವೂ ಸಂತೇಬೆನ್ನೂರಿಂದ ಉತ್ತರಕ್ಕೆ ಐದು ಕಿ. ಮೀ. ದೂರ ಇರುವ ಮದಿಕೆರೆ ಎಂಬ ಗ್ರಾಮದಲ್ಲಿರುವ ಐತಿಹಾಸಿಕ ತ್ರಿಕೂಟಾಚಲ ದೇವಸ್ಥಾನವಾದ ಶ್ರೀ ಮಧುಕೇಶ್ವರ ದೇವಸ್ಥಾನದ ಪಶ್ಚಿಮಕ್ಕೆ ೨೦೦ ಅಡಿ ದೂರದಲ್ಲಿದೆ. ಈ ಶಾಸನ ಆಲೂರಿನ ಗೌಡ ಹಾಲಪ್ಪ ಎಂಬುವರ ತೋಟದಲ್ಲಿದ್ದು ಅಡಿಕೆ ಸಸಿ ಹಾಕಲು ಗುಂಡಿ ತೆಗೆಯುವಾಗ ಈ ಶಾಸನ ಸಿಕ್ಕಿತಂತೆ. ಪೂರ್ವಾಭಿಮುಖವಾಗಿ ಈಗ ನೆಡಲ್ಪಟ್ಟಿರುವ ಈ ಶಾಸನ ೧೫” ಅಗಲ, ೨೫” ಎತ್ತರ, ೪೧/೨ “ದಪ್ಪವಿದ್ದು ಕೇವಲ ಆರು ಸಾಲುಗಳುಳ್ಳ ಚಿಕ್ಕ ಶಾಸನವಾಗಿದೆ. ಶಾಸನದ ಮೇಲ್ಭಾಗದಲ್ಲಿ ಶಿವಲಿಂಗ ಕೆತ್ತಲಾಗಿದ್ದು ಅಕ್ಕ ಪಕ್ಕ ಸೂರ್ಯ ಚಂದ್ರರ ಚಿತ್ರ ಬಿಡಿಸಲಾಗಿದೆ.

ಶಾಸನ ಚಿಕ್ಕದಾಗಿದ್ದರೂ, ಶಾಸನದ ಪಾಠ ಅಮೂಲ್ಯವಾಗಿದೆ. ಚಾಲುಕ್ಯ ವಿಕ್ರಮಶಕ ೪೫ನೇ ಶಾರ್ವರಿ ಸಂವತ್ಸರ ಆಷಾಢ ಶುದ್ಧ ೧೩ ಆದಿವಾರದಂದು (ಅಂದರೆ ಕ್ರಿ. ಶ. ೧೧೨೧) ಪ್ರಭು ಮಾಚಗಾವುಂಡ ಎಂಬುವನು ಮಾಳೇಶ್ವರ ದೇವಸ್ಥಾನಕ್ಕೆ ಮಾವಿನಕೆರೆ ಮತ್ತು ಆಲಂಗೆರೆಯ ನಡುವೆ ಉಳ್ಳ ಇಪ್ಪತ್ತು ಮತ್ತರು ಭೂಮಿ ದಾನವಾಗಿ ಕೊಟ್ಟದ್ದಾಗಿ ತಿಳಿಸುತ್ತದೆ.

ಈ ಶಾಸನದಿಂದ ಕೆಳಕಂಡ ಅಂಶ ಗಮನಿಸಬಹುದಾಗಿದೆ.

೧. ಇದೇ ಗ್ರಾಮದ ಪ್ರಾಚೀನ ಮಧುಕೇಶ್ವರ ದೇವಸ್ಥಾನದ ಮುಂದಿರುವ ಇನ್ನೊಂದು ಶಾಸನ (ಚನ್ನಗಿರಿ ತಾಲ್ಲೂಕು ಶಾಸನ - ೧೮)[೭] ದಂತೆ ಶಾ.... ಶಕ ೯೮೫ ಶೋಭಕೃತು ಸಂವತ್ಸರದಲ್ಲಿ ಅಂದರೆ ಕ್ರಿ.ಶ. ೧೦೬೩ರಲ್ಲಿ ಮಾಚ ಗಾವುಂಡ ಎನ್ನುವವನು ತನ್ನೂರ ಮಲ್ಲಿಕಾರ್ಜುನ ದೇವಸ್ಥಾನಕ್ಕೆ ದತ್ತಿ ದಾನ ಬಿಟ್ಟ ವಿಚಾರ ತಿಳಿಸುತ್ತದೆ. ಈಗ ಸಿಕ್ಕಿರುವ ಶಾಸನದ ಕಾಲ ಕ್ರಿ. ಶ. ೧೧೨೧ ಆ ಶಾಸನ ಕಾಲಕ್ಕೂ ಇದಕ್ಕೂ ೫೮ ವರ್ಷಗಳ ಅಂತರವಿದೆ. ಆದ್ದರಿಂದ ಈ ಎರಡೂ ಶಾಸನದಲ್ಲಿ ಉಲ್ಲೇಖವಾಗಿರುವ ಮಾಚ ಗಾವುಂಡ ಎಂಬ ವ್ಯಕ್ತಿ ಬೇರೆ ಬೇರೆ ಆಗಿದ್ದಿರಬಹುದಾದರೂ, ಪ್ರಸ್ತುತ ಸಿಕ್ಕಿರುವ ಶಾಸನದಿಂದ ಮಾಚ ಗಾವುಂಡ ಶಾಸನ - ೧೮ ರಲ್ಲಿ ಪ್ರಸ್ಥಾಪಿತವಾಗಿರುವ ಮಾಚಗಾವುಂಡನ ಮೊಮ್ಮಗ ಅಥವ ಸಂಬಂಧಿ ಆಗಿರುವ ಸಾಧ್ಯತೆ ಇದೆ.

೨. ಇದೇ ಜಿಲ್ಲೆ ಹೊನ್ನಾಳಿ ತಾಲ್ಲೂಕಿನ ಶಾಸನಗಳು ೧-೨ರಲ್ಲೂ[೮] ಸಹ ಮಾಚಗಾವುಂಡ ಎಂಬ ಹೆಸರಿನ ಓರ್ವವ್ಯಕ್ತಿ ಪ್ರಸ್ತಾಪವಿದ್ದು ಅದರ ಕಾಲ ಕ್ರಿ. ಶ. ೧೦೫೫. ಆ ವ್ಯಕ್ತಿ ಹಾಗೂ ಮದಿಕೆರೆ ಶಾಸನ - ೧೮[೯]ರಲ್ಲಿ ಬರುವ ವ್ಯಕ್ತಿಯೂ ಒಬ್ಬನೇ ಆಗಿರುವ ಸಾಧ್ಯತೆ ಇದ್ದು ಈ ಹೊಸ ಶಾಸನದಲ್ಲಿ ಉಲ್ಲೇಖಿತವಾಗಿರುವ ಮಾಚಗಾವುಂಡ ಅವರ ಸಂಬಂಧಿ ಇರಬಹುದಾಗಿದೆ.

೩. ದಾವಣಗೆರೆ ತಾಲ್ಲೂಕು ಶಾಸನ - ೧೫೬ (ಕಬ್ಬೂರು)[೬] ದಲ್ಲೂ ಓರ್ವ ಮಾಚಗಾವುಂಡನ ಪ್ರಸ್ತಾಪವಿದ್ದು ( ಕಾಲ ೧೧೧೪) ಆತನೂ ಈ ಶಾಸನದಲ್ಲಿ ಉಲ್ಲೇಖಿತ ವ್ಯಕ್ತಿಯೂ ಒಬ್ಬನೇ ಆಗಿರುವ ಸಾಧ್ಯತೆ ಬಹಳ ಇದೆ.

೪. ಏನೇ ಆದರೂ ಈ ಶಾಸನದಲ್ಲಿ ಉಕ್ತನಾಗಿರುವ ಮಾಚಗಾವುಂಡ ಉಚ್ಚಂಗಿಪಾಂಡ್ಯರ ಸಾಮಂತನಾಗಿರುವುದಾಗಿ ತಿಳಿದುಬರುತ್ತದೆ. ರೈಸರು ಕಬ್ಬೂರು ಶಾಸನವನ್ನು ಉಚ್ಚಂಗಿಪಾಂಡ್ಯರ ಕಾಲದ್ದೆಂದೇ ನಿರ್ಣಯಿಸಿದ್ದಾರೆ.[೨] ಕಾರಣ ಈಗಾಗಲೇ ಹಿಂದೆ ಪ್ರಸ್ತಾಪಿಸಿದ ದೊಡ್ಡಅಬ್ಬಿಗೆರೆ ಶಾಸನದ ಕಾಲಕ್ಕೂ, ಈ ಶಾಸನದ ಕಾಲಕ್ಕೂ, ಕೇವಲ ಎರಡು ವರ್ಷ ಮಾತ್ರ ವ್ಯತ್ಯಯವಿದ್ದು ಈ ಮಾಚಗಾವುಂಡ ಸಹ ಉಚ್ಚಂಗಿ ಪಾಂಡ್ಯ ತ್ರಿಭುವನ ಮಲ್ಲದೇವ ಪಾಂಡ್ಯನ ಸಾಮಂತ

ನಾಗಿರಲೇಬೇಕು. ದೊಡ್ಡಅಬ್ಬಿಗೆರೆಗೂ ಇಲ್ಲಿಗೂ ಕೇವಲ ಐದು ಕಿ. ಮೀ. ಅಂತರ ಮಾತ್ರವಿದೆ.

೫. ಈ ಶಾಸನದಲ್ಲಿ ಉಲ್ಲೇಖಿತ ಮಾಳೇಶ್ವರ ದೇವಸ್ಥಾನವೇ ಆ ಗ್ರಾಮದಲ್ಲಿರುವ ಕಲ್ಯಾಣ ಚಾಲುಕ್ಯರ ಕಾಲದ ಮಲ್ಲೇಶ್ವರ ದೇವಸ್ಥಾನವಾಗಿರಬೇಕು. ರೈಸರು ಇದನ್ನೆ ಮಧುಕೇಶ್ವರ ದೇವಸ್ಥಾನ ಎಂದು ಕರೆದಿದ್ದಾರೆ.[೮]

೬. ಈ ಶಾಸನದಲ್ಲಿ ಉಲ್ಲೇಖಿತವಾದ ಮಾವಿನಕೆರೆ, ಆಲಂಗೆರೆ ಯಾವುದೆಂದು ತಿಳಿಯಲಾಗುತ್ತಿಲ್ಲವಾದರೂ, ಶಾಸನ ಲಭ್ಯವಾದ ಸ್ಥಳ, ಮಾಹಿತಿ ಮೇರೆಗೆ ಮಾವಿನ ಮರ ಹಾಗೂ ಆಲದ ಮರದ ನಡುವೆ ಆಲೂರಿನಲ್ಲಿ ಇರುವ ಎರಡು ಕೆರೆ ಮಧ್ಯದ ಭೂಮಿಯನ್ನು ದಾನವಾಗಿ ಕೊಟ್ಟಿರಬೇಕೆಂಬ ನಿರ್ಣಯಕ್ಕೆ ಬರಬಹುದಾಗಿದೆ.

೭. ಈ ಎರಡೂ ಶಾಸನಗಳೂ ಚಾಲುಕ್ಯರ ಕಾಲದ್ದೆಂದು ನಿರ್ಣಯಿಸಬಹುದಾಗಿದ್ದು ಎರಡೂ ಶಾಸನಗಳೂ ಉಚ್ಚಂಗಿ ಪಾಂಡ್ಯರವೇ ಆಗಿವೆ.

೮. ಈ ಎರಡು ಹೊಸ ಶಾಸನಗಳ ಸೇರ್ಪಡೆಯಿಂದ ಚನ್ನಗಿರಿ ತಾಲ್ಲೂಕಿನಲ್ಲಿ ಉಚ್ಚಂಗಿಪಾಂಡ್ಯರ ಎಂಟು ಶಾಸನಗಳು ಈವರೆವಿಗೆ ದೊರೆತಂತಾಗಿವೆ

೯. ಈ ಶಾಸನಗಳಿಂದ ಚನ್ನಗಿರಿ ತಾಲ್ಲೂಕಿನ ಪ್ರಾದೇಶಿಕ ಇತಿಹಾಸಕ್ಕೆ ಅನೇಕ ಹೊಸ ಸಂಗತಿಗಳು ಸೇರ್ಪಡೆ ಯಾಗಲು ಸಾಧ್ಯವಾಗಿದೆ.

**ಶಾಸನದ ಪಾಠ**

***ಒಂದನೆಯ ದೊಡ್ಡ ಆಬ್ಬಗೆರೆ ಶಿಲಾಶಾಸನ***

೧ ಶ್ರೀ ನಮಸ್ತುಂಗ ಸಿರಸ್ತುಂಗ ಚಂದಿರ ಚಾಮರ ಚಾರವೇ ತ್ರೈಲೋಕ್ಯ ನಗರಾರಂಭ

೨ ಮೂಲ ಸ್ತಂಬಾಯ ಸೆಂಬುವೆ ಸ್ವಸ್ತಿ ಸಮಸ್ತ ಭುವನಾಶ್ರಯ

೩ ಶ್ರೀ ಪ್ರಥ್ವೀ ವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾ

೪ ರಕಂ ಸತ್ಯಾಶ್ರಯ ಕುಳ ತಿಳಕಂ ಚಾಳುಕ್ಯಾಭರಣಂ ಶ್ರೀಮ

೫ ತ್ರಿಭುವನಮಲ್ಲದೇವ - ವಿಜಯರಾಜ್ಯ ಮುತ್ತ ರೋತ್ತರಾಭಿವ್ರಿ

೬ ದ್ಧಿ ಪ್ರವರ್ದ್ಧಮಾನ ಮಾ ಚಂದ್ರಾರ್ಕ ತಾರಂಬಂರಂ ಪದುಳಂ ಸಲುತ್ತ

೭ ಮಿರೆ ತತ್ಪಾದಪದ್ಮೋಪಜೀವಿ ಸ್ವಸ್ತಿ ಸಮಾಧಿಗತ ಪಂಚಮ

೮ ಹಾ ಶಬ್ದ ಮಹಾಮಂಡಳೇಶ್ವರಂ (ಕ....ಜ) ಪುರವ ರಾಧೀಶ್ವರಂ

೯ ಯದುವಂಶಾಂಬರ ದ್ಯುಮಣಿ ಚೂಡಾಮಣಿ... ಭೂ ಕಾಮ..

೧೦ ಶತಮ..... ರಾಜಿಗ ಚೋಳ ಮನೋಭಂಗಂ ಶ್ರೀ

೧೧ ಮತ್ರಿಭುವನ ಮಲ್ಲರಾಯ ಪಾಂಡ್ಯ ದೇವರು ನೊಳಂಬವಾಡಿ ಮೂವತ್ತುರ್ಬ್ಬಾಸಿರ (ಮಂ)

೧೨ ಸುಖ ಸಂಖಥಾ ವಿನೋದದಿಂ ರಾಜ್ಯಂಗೆಯ್ಯುತ್ತಿರೆ ತತ್ಪಾದ ಪದ್ಮೋಪಜೀವಿ(ಗಳುಂ)

೧೩ ಸ್ವಸ್ತಿ ಸಮಧಿಗತ ಪಂಚಮಹಾಸಬ್ದ ಮಹಾ ಮಂಡಳೇ (ಶ್ವರಂ)

೧೪ ..................

೨೧ ಶೌರ್ಯ... ತ್ರಿಯಂಬಕದೇವ ಪಾದಾರಾಧಕ ವೈರಿಬಳ ಸಾಧಕ...

೨೨ ....ನಾಮಾದಿ ಸಮಸ್ತ ಪ್ರಸಸ್ತಿ ಸಹಿತಂ ಶ್ರೀ ಮನ್ಮಹಾಸಾಮನ್ತ ಪಡೆವಳ ಬೊ

೨೩ ಮಯ್ಯಂ ಚಾಳುಕ್ಯವಿಕ್ರಮ ಕಾಲ ೪೭ನೆಯ ಪ್ಲವ ಸಂವತ್ಸರದ ಪೌಷ್ಯ ಬಹು

೨೪ ಳ ೧೪ ಮಂಗಳವಾರದ ಉತ್ತರಾಯಣ ಸಂಕ್ರಾನ್ತಿ [ನಿ] ಮಿತ್ತಂ ಅಬ್ಬೆಯಗೆಱೆಯ ಕಲಿ

೨೫ ದೇವರ್ಗೆ ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾ

೨೬ ಣ ಜಪ ಸಮಾಧಿ ಶೀಲ ಗುಣ ಸಂಪ್ಪನರಾದ ರುದ್ರಸಿವ ಪಂಡಿತ ದೇವರ

೨೭ ಸಿಸ್ಸರು ಜ್ಞಾನಶಿವ ಪಂಡಿತರ ಕಾಲಂಕರ್ಚಿ ಧಾರಾಪೂರ್ವಕಂ ಮಾಡಿಬಿಟ್ಟ

೨೮ ... ರ (ಲ್ಲಿ) ಯ ಕೆಱೆಯ ಮೊದಲ್ವಾಗಳೆ ಮತ್ತರೊನ್ದು ೧ ಕಮ್ಮ ೧೦೦ ತ್ತಂನ....

೨೯ ಕಟ್ಟಿಸಿದ ಕೆಱೆಯ ... ಕಮ್ಮ ೫೦೦ ದೇವಾಲಯದಿಂ... ಮಾಡಲು ಬಿಟ್ಟೆ....

೩೦ ಮತ್ತರು ೩ ಇನ್ತೀ ಧರ್ಮವಂ ವೂರೊಡೆಯರು ಪ್ರತಿ ಪಾಳಿಸುವವರು

೩೧ ಸ್ವದತ್ತಾಂ ಪರದತ್ತಾಂ ವಾಯೋ ಹರೇತಿ ವಸುನ್ಧರಾಂ ಸಷ್ಟಿರ್ವ್ವರ್ಷ ಸಹ

೩೨ ಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ @

೩೩ .........................



*ಎರಡನೆಯ ಮದಿಕೆರೆ ಶಿಲಾಶಾಸನ*

೧ ಸ್ವಸ್ತಿ ಶ್ರೀ ಮ ಚಾಳುಕ್ಯ ವಿಕ್ರಮವ
೨ ರಿಸದ ೪೫ನೆಯ ಸಾರ್ವರಿ ಸಂ
೩ ವತ್ಸರದ ಆಸಾಡ ಸುದ್ದ ೧೩ ಆದಿವಾ
೪ ರದನ್ದು ಪ್ರಭು ಮಾಚಗಾವುನ್ಡ ಮಾಳೇ
೫ ಶ್ವರಕ್ಕೆ ಮಾವಿನಕೆಱೆಯು ಆಲಂಗೆಱೆಯ
೬ ಅಲ್ಲಿ ನಡುವುಳ್ಳ ದಿಪ್ಪತ್ತು ಮತ್ತರು ಭೂ
೭ (ಮಿ)

(ಈ ಎರಡೂ ಶಾಸನದ ಪಡಿಯಚ್ಚನ್ನು ಮಿತ್ರರಾದ ಶಿವಮೊಗ್ಗದ ಶ್ರೀ ಜಗದೀಶ್ ಅಗಸೀಬಾಗಿಲವರು ತೆಗೆದುಕೊಟ್ಟಿದ್ದರು. ಧಾರವಾಡದ ಸಂಶೋಧಕ ಡಾ।। ಶ್ರೀನಿವಾಸ ರಿತ್ತಿ ಮತ್ತು ಚಿತ್ರದುರ್ಗದ ಸಂಶೋಧಕ ಪ್ರೊ।। ಬಿ. ರಾಜಶೇಖರಪ್ಪ ಅವರುಗಳು ಪಾಠವನ್ನು ಓದಿ, ಪಡಿಯಚ್ಚಿನೊಂದಿಗೆ ತಾಳೆನೋಡಿ, ಪರಿಷ್ಕರಿಸಿ ಕೊಟ್ಟಿದ್ದಾರೆ. ಮೇಲ್ಕಂಡ ಮಹನೀಯರು ಒದಗಿಸಿದ ಪಾಠಗಳಿಂದ ನಾನು ಈ ಸಂಪ್ರಬಂಧ ಮಂಡಿಸಿದ್ದು, ಅವರ ಸಹಾಯ, ಸಲಹೆ, ಮಾರ್ಗದರ್ಶನಕ್ಕಾಗಿ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ).



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎ. ಕ. ಸಂಪುಟ – ೧೧ (ಹಳೆಯ ಆವೃತ್ತಿ ೧೯೦೩), ಚಿತ್ರದುರ್ಗ.**

೨. **ಅದೇ.**

೩. **ಎ.ಕ. ಸಂಪುಟ – ೭ ಭಾಗ ೧ (ಹಳೇ ಆವೃತ್ತಿ ೧೯೦೨), ಶಿವಮೊಗ್ಗ.**

೪. **ಅದೇ.**

೫. **ಅದೇ.**

೬. **ಎ. ಕ. ಸಂಪುಟ ೧೧ (ಹಳೇ ಆವೃತ್ತಿ ೧೯೦೩), ಚಿತ್ರದುರ್ಗ.**

೭. **ಅದೇ.**

೮. **ಎ. ಕ. ಸಂಪುಟ ೭ ಭಾಗ ೧ (ಹಳೇ ಆವೃತ್ತಿ ೧೯೦೨), ಶಿವಮೊಗ್ಗ.**

ಜಯದೇವಪ್ಪ ಜೈನಕೇರಿ *

# ಶ್ರೀ ವಲ್ಲಭನ ಅಪ್ರಕಟಿತ ಕಲ್ಲೂರು ಶಾಸನ ಮತ್ತು ಕೆಲವು ಪ್ರಾಚೀನ ಅವಶೇಷಗಳು

ಪ್ರಾಚೀನವಾಗಿ ಸಾಂತರರ ರಾಜಧಾನಿಯಾಗಿ ಮೆರೆದ ಶಿವಮೊಗ್ಗ ಜಿಲ್ಲೆಯ ಹೊಂಬುಜ ಒಂದು ಪ್ರಸಿದ್ಧ ಜೈನ ಧಾರ್ಮಿಕ ಕ್ಷೇತ್ರ. ಇಲ್ಲಿ ಗಂಗರಿಂದ ಹಿಡಿದು ರಾಷ್ಟ್ರಕೂಟ, ಚಾಲುಕ್ಯ, ಹೊಯ್ಸಳ, ವಿಜಯನಗರ ಮುಂತಾದ ಚಕ್ರವರ್ತಿಗಳ ಮಾಂಡಲೀಕರಾಗಿ, ಸಾಂತರರು ಈ ಪ್ರದೇಶವನ್ನು ಬಹುಕಾಲ ಆಳಿದ್ದಾರೆ. ೭ನೇ ಶತಮಾನದಲ್ಲಿ ಪ್ರಾಬಲ್ಯಕ್ಕೆ ಬಂದ ಸಾಂತರರು ಹೊಸನಗರ (ತಾ) ಹೊಂಬುಜ (ಈಗಿನ ಹುಮಚ) ವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಸಾಂತಳಿಗೆ - ೧೦೦೦ ಪ್ರಾಂತ್ಯವನ್ನು ಆಳಿದ್ದಾರೆ. ವಿಜಯನಗರ ಪತನಾನಂತರ ಪ್ರಬಲವಾದ ಮಲೆನಾಡು ಪ್ರಾಂತ್ಯದ ಕೆಳದಿ ಅರಸರ ಆಳ್ವಿಕೆಗೆ, ಸಾಂತಳಿಗೆ-೧೦೦೦ ನಾಡು ಒಳಪಟ್ಟಿತು. ಹನ್ನೆರಡನೇ ಶತಮಾನದಲ್ಲಿ ಸಾಂತರರ ಮನೆತನ ಎರಡು ಶಾಖೆಗಳಾಗಿ ಒಡೆದು ಕಳಸ ಮತ್ತು ಹೊಸಗುಂದಗಳಿಂದ ಆಳಿದ ಸಂಗತಿಗಳು ಇತಿಹಾಸದಿಂದ ತಿಳಿದು ಬರುತ್ತದೆ. .ಕಳಸದ ಮೂಲಕ ಕರಾವಳಿಯ ಕಾರ್ಕಳ ಪ್ರದೇಶವನ್ನು ಒಳಗೊಂಡು ೧೭ನೇ ಶತಮಾನದವರೆಗೆ ಸಾಂತರರು ಆಳಿದ್ದಾರೆ. ವಾನರಧ್ವಜರೆಂದೂ ಸಿಂಹಲಾಂಛನರೆಂದೂ ಕರೆದುಕೊಂಡಿರುವ ಇವರು ಜೈನ ಮತಾವಲಂಬಿಗಳು. ಆದರೆ ಹೊಸಗುಂದ ಶಾಖೆಯ ದೊರೆಗಳು ಶೈವಾರಾಧಕರು. ಹುಂಚದ ಪದ್ಮಾವತಿಯ ಆರಾಧಕರಾದ ಜೈನ ದೊರೆಗಳಿಗೆ ಕಳಸನಾಥೇಶ್ವರ ಕುಲದೈವ. ಉತ್ತರದ ಮಥುರೆಯಿಂದ ಬಂದ ಜೈನ ವಂಶದ ಇವರು ಸ್ಥಳೀಯರೊಂದಿಗೆ ಬೆರೆತು, ಕನ್ನಡ ನೆಲದ ಕನ್ನಡ ಭಾಷೆಯ ಉನ್ನತಿಗೆ ಕಾರಣರಾಗಿದ್ದಾರೆ.

೭ನೇ ಶತಮಾನದಿಂದ ೧೭ನೇ ಶತಮಾನದವರೆಗಿನ ಸುಮಾರು ೩೨ ಶಿಲಾ ಶಾಸನಗಳನ್ನು ಮತ್ತು ೫ ತಾಮ್ರ ಶಾಸನಗಳನ್ನು ಡಾ|| ಹಂ. ಪ. ನಾಗರಾಜಯ್ಯ ಅವರು ತಮ್ಮ "ಹೊಂಬುಜ ಶಾಸನಗಳು" ಗ್ರಂಥದಲ್ಲಿ ದಾಖಲಿಸಿದ್ದಾರೆ. ಈ ಶಾಸನಗಳೆಲ್ಲವೂ ಬಹುತೇಕ ಕನ್ನಡ ಭಾಷೆಯಲ್ಲಿವೆ.

ಪ್ರಸ್ತುತ ಶಾಸನವು ಹೊಂಬುಜದಿಂದ ಪೂರ್ವಕ್ಕೆ ಇರುವ ಕಲ್ಲೂರು ಗ್ರಾಮದಿಂದ ಸುಮಾರು ೨ ಕಿ. ಮೀ. ದೂರದಲ್ಲಿ ಪ್ರಾಚೀನ ಗ್ರಾಮ ಕಲ್ಲೂರು (ದಡಿಗೆಸರ) ದಲ್ಲಿ ದೊರಕಿದೆ. ಸುಮಾರು ೮-೯ನೇ ಶತಮಾನದಲ್ಲಿ ನಿರ್ಮಿಸಲಾಗಿರುವ ಗಂಗರ ಕಾಲದ ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿರುವ ಶಾಸನವು ಸುಮಾರು ೩೧/೨ ಅಡಿ ಎತ್ತರ ೧೩/೪ ಅಡಿ ಅಗಲವಿದೆ. ಈ ಶಿಲಾಶಾಸನದ ಲಿಪಿ ಭಾಷೆ ಕನ್ನಡ. ಇದರಲ್ಲಿ ೪೨ ಸಾಲುಗಳಿವೆ. ಸುಸ್ಥಿತಿಯಲ್ಲಿರುವ ಈ ಶಾಸನದಲ್ಲಿ, ಇಲ್ಲಿರುವ ಶಿವದೇವಾಲಯವನ್ನು ಶಿಲಾಮಯವಾಗಿ ಜೀರ್ಣೋದ್ಧಾರ ಮಾಡಿದ ಮತ್ತು ದೇವಾಲಯಕ್ಕೆ ಆದಾಯ ತರುವಂತೆ ಭೂಮಿಯನ್ನು ದಾನ ನೀಡಿದ ವಿವರಗಳಿವೆ.

ಶಾಸನವು ಅರ್ಧ ಚಂದ್ರಾಕೃತಿಯಲ್ಲಿದ್ದು, ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಉಬ್ಬು ಶಿಲ್ಪಗಳಿವೆ. ಶಿವಲಿಂಗ, ನಂದಿಯನ್ನು ಪೂಜಿಸುವ ಭಂಗಿಯಲ್ಲಿರುವ ಮನುಷ್ಯನ ಚಿತ್ರಗಳಿವೆ. ಶಾಸನಗಳ ರಚನಾ ಪದ್ಧತಿಯಂತೆ ಮೊದಲು ಶಿವಸ್ತುತಿಯಿಂದ ಪ್ರಾರಂಭವಾಗಿದೆ. ದಾತೃವಿನ ಇಷ್ಟದೈವ ಸ್ತುತಿ 'ಶುಭಕಾಮನೆ', ವಂಶಾವಳಿ ರಾಜ್ಯದ ಮೇರೆಗಳ ಉಲ್ಲೇಖ, ಪೌರಾಣಿಕ ಹಿನ್ನೆಲೆ ಇತ್ಯಾದಿಗಳು ವರ್ಣಿತವಾಗಿವೆ. ಶಾಸನ ಕಾಲ, ಮುಖ್ಯ ರಾಜರ ಸಾಮಂತ ರಾಜರ, ಮಂತ್ರಿಯ ದಂಡನಾಯಕರ ವಂಶಾವಳಿ, ಗುಣಗಾನ, ಬಿರುದಾವಳಿಗಳು ಪ್ರಸ್ತುತ ಶಾಸನದ ಸುಮಾರು ೨೫ ಸಾಲುಗಳನ್ನು ಆಕ್ರಮಿಸಿಕೊಂಡಿವೆ. ನಂತರದ ೧೦ ಸಾಲುಗಳಲ್ಲಿ ರಾಜನು ನಡೆಸಿದ ಧರ್ಮಕಾರ್ಯ, ದೇವಾಲಯ ಜೀರ್ಣೋದ್ಧಾರಕ್ಕೆ ಕೊಟ್ಟ ದಾನ, ಭೂಮಿ ವಿವರ, ದಾನ ಪಡೆದವರ ವಂಶಾವಳಿಗಳ ಉಲ್ಲೇಖವಿದೆ. ನಂತರದ ೭ ಸಾಲುಗಳಲ್ಲಿ ಫಲಶ್ರುತಿಯು ಕಾವ್ಯಮಯವಾಗಿ ಹಳಗನ್ನಡದಲ್ಲಿ ರಚಿತವಾಗಿದೆ. ಐತಿಹಾಸಿಕ ಸಂಗತಿಗಳ ನಿರೂಪಣೆಯಲ್ಲಿ ಇಲ್ಲಿ ಕಾವ್ಯ ಪ್ರೌಢಿಮೆ ಶಾಸನದಲ್ಲಿ ಕಂಡುಬರುವ ಚಂಪೂ ರಚನೆಗಳು ಸಂಸ್ಕೃತ ಶ್ಲೋಕಗಳು ಮತ್ತು ಕೆಲವು ಕಡೆ ಬಳಸಿರುವ ದೇಶೀ ಶೈಲಿಗಳು ವಿಶಿಷ್ಟವಾಗಿವೆ. ಗದ್ಯ ಶೈಲಿಗಳು ವರ್ಣಾಲಂಕಾರ ಶಬ್ದಾಲಂಕಾರಗಳಿಂದ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದೆ. ಆಯಾ ಕಾಲದ ಇತಿಹಾಸವನ್ನು ಅರಿಯಲು ಶಾಸನಗಳು ಮುಖ್ಯ ಆಧಾರವಾಗಿವೆ. ಬಹುಪಾಲು ಶಾಸನಗಳಲ್ಲಿ ಕಂಡು ಬರುವಂತೆ ಪ್ರಸ್ತುತ ಶಿಲಾ ಶಾಸನದಲ್ಲಿಯ ರಾಜನ ಗುಣಾತಿಶಯಗಳನ್ನು ಅಲಂಕಾರಿಕವಾಗಿಯೂ ಉತ್ಪ್ರೇಕ್ಷೆಯಿಂದಲೂ ಅರ್ಧ ಭಾಗಕ್ಕಿಂತ ಹೆಚ್ಚಾಗಿ ವರ್ಣಿಸಿರುವುದನ್ನು ಕಾಣಬಹುದು.

* ಸಂಖ್ಯೆ ೮೭, 'ಶಾಂತಲಾ', ಕುವೆಂಪು ರಸ್ತೆ, ಶಿವಮೊಗ್ಗ - ೫೭೭ ೨೦೧

## ಕಲ್ಲೂರು ಗ್ರಾಮ ಹೊಸನಗರತಾಲೂಕು

**ಶಾಸನ ದೊರೆತ ಸ್ಥಳ : ಈಶ್ವರ ದೇವಾಲಯದ ಎದುರು**

**ಅರಸ : ಹೊಂಬುಜ ಶ್ರೀ ವಲ್ಲಭ**

**ಕಾಲ : ಕ್ರಿ. ಶ ೧೧೬೮ (ಶಾ. ಶಕೆ : ೧೦೯೦ ಸರ್ವಧಾರಿ)**



ಶಾಸನಪಾಠ

೧ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯ ನಗರಾ

೨ ರಂಭ ಮೂಲ ಸ್ತಂಭಾಯ ಶಂಭವೇ॥ ಸ್ವಸ್ತಿ ಸಮದಿಗತ ಪಂಚ

೩ ಮಹಾಶಬ್ದ ಮಹಾಮಂಡಳೇಶ್ವರ ನುತ್ತರ ಮ[ಧು]ರಾಧೀ

೪ ಶ್ವರಂ ಪಟ್ಟಿ ಹೊಂಬುರ್ಚ್ಚಪುರವರೇಶ್ವರಂ ಮಹೋಗ್ರ ವಂಶಲಲಾಮಂ ಪದ್ಮಾ

೫ ವತಿದೇವಿ ಲಬ್ಧವರಪ್ರಸಾದಾಸಾಧಿತ ವಿಪುಳ [ತುಳಾಪುರುಷ ಮ]

೬ ಹಾದಾನ ಹಿರಣ್ಯಗರ್ಬ್ಬ ತ್ರಯಾದಿಕ ದಾನ ವಾನರ ಧ್ವಜ ಮೃಗರಾಜ ಲಾ[೦]

೭ ಛನ ವಿರಾಜಿತಾನ್ವಯೋತ್ಪನ್ನಂ ॥ ಬಹುಕಳಾ ಸಂಪನ್ನಂ ಶ್ರೀ ಸಾಂತರ ಕು

೮ ಳ ಕುಮುದಿನಿ ಶಶಾಂಕ [ಮ]ಯೂಖಾಂಕುರ ॥ ರಿಪು ಮಂಡ

೯ ಳೀಕ ಪತಂಗದೀಪಾಂಕುರಂ ॥ ತೊಂಡ ಮಂಡಳೀಕ ಕುಳಾಚಳ ವಜ್ರದಂಡಂ

೧೦ ಬಿರುದ ಭೇರುಂಡಂ ಕಂದುಕಾಚರ್ಯ್ಯಂ ಮಂದರ ಧೈರ್ಯಂ ಕೀರ್ತಿ

೧೧ ನಾರಾಯಣಂ ಶೌರ್ಯ್ಯ ಪಾರಾಯಣಂ ಜಿನ ಪಾದಾರಾಧ

೧೨ ಕಂ। ರಿಪುಬಳಸಾಧಕಂ ಶಾಂತಾರಾದಿತ್ಯಂ। ಸಕಳಜನಸ್ತುತ್ಯಂ ನೀ

೧೩ ತಿಶಾಸ್ತ್ರಜ್ಞಂ ಬಿರುದಸರ್ಬ್ಬಜ್ಞಂ। ಶ್ರೀಮನ್ಮಹಾಮಂಡಳೇಶ್ವರಂ ವಿಕ್ರಮ ಶಾಂ[ನ್ತ]

೧೪ ರ ದೇವರು ಪೊಂಬುಜ ನೆಲವೀಡಿನೊಳು ಸುಖಸಂಕಥಾ ವಿನೋ

೧೫ ದದಿಂ ರಾಜ್ಯಂಗೆಯ್ಯುತ್ತಮಿರಲು॥ ಶ್ರೀವಲ್ಲಭ ಮಹೀನಾಥ ಕಲ್ಪ ಭೂ

೧೬ ಜಾಶ್ರಯೋತ್ಕಲ್ಪವಾರ್ಥಿ। ಶ್ರೀ ಮತ್ತುಳುವಲ ದೇವಿಯಂ ಕಲ್ಪ

೧೭ ವಲ್ಲ ಫಲೋದಯಾ॥ ಅನ್ತೆನ್ಸಿದ ಶ್ರೀ ವಲ್ಲಭ ದೇವನರ್ಧಾಂಗ ಲಕ್ಷ್ಮಿ ತುಳು

೧೮ ವಲದೇವಿಯ ದಾನಗುಣಮದೆಂತನೆ॥ ಅಗಣ್ಯಂ ಲಾವಣ್ಯಂ ವಿಳಾಸ

೧೯ ಸಂಪದಾ। ಹರಿಪ್ರಿಯಾವಿಶ್ವಕಳಾಸುಭಾರಥಿ। ಅನೂನ ದಾನೊ (ನ್ಯೊ ?)

೨೦ ನ್ನುತ ಕಲ್ಪವಲ್ಲಭ ಬರಾಯಜಯಾ ದೇವಿ ತುಳ್ವಲಾಂಬಿಕಾ॥ ತ

೨೧ ತ್ತನಯಂ॥ ಸ್ವಸ್ತಿ ಶ್ರೀ ರತಿರಾಗ ಸಾಗರ ಸುದಾಸೂಥಿ ಸ್ಸು.

೨೨ ವ್ರತ್ತಾದೆಯ। ಶ್ರೀ ಪೊಂಬುರ್ಚ್ಚಪುರೇಶ್ವರಾ ಬುದನುತಃ। ಶ್ರೀ ವಲ್ಲ

೨೩ ಬೋದ್ಭವಃ । ಯಸ್ಯ ಸಿದ್ಧಖಿಳಾರಿ ರಾಜ ವಿಜಯ ಪ್ರೌಢಪ್ರತಾ

೨೪ ಪಾದೇಯಸ್ಯಾಯಂ ಮಹಾಮಹೀಪತಿರ್ವಿಜಯತಾಂ ತ್ರೈಲೋ

೨೫ ಕ್ಯದಾನಿಸ್ತಥಾ॥ ಅಂತೆನ್ಸಿದ ವೀರಶಾನ್ತರ ದೇವ ರಾಜ್ಯಂಗೆ

೨೬ ಯ್ಯುತ್ತಮಿರೆ॥ ಕಲ್ಲೂರ ಕೆರೆಯ ಕೋಡಿಯಾ ಬಯಲಿದ್ದ ಕಲಿದೇವ

೨೭ ರನೂರಮುಂದೆ ತಂದು। ಪಾಂಡಿತ ಜಿಯನ ಮಗನಪ್ಪ ಮಾಳೆಯ ಜಿ

೨೮ ಯನ ಮಗ ಹೊಂನೆಯ ಜಿಯಂ। ಸಕ ವರ್ಷ ೧೦೯೦ ನೆಯ ಸರ್ವ್ವದಾ

೨೯ ರಿ ಸಂವತ್ಸರದ ಕಾರ್ತೀಕ ಸುದ್ದ ಪಂಚಮಿ ಸೋಮವಾರದಂದು ಶು

೩೦ ಬ ಮುಹೂರ್ತದಂದು ಪುನಪ್ರತಿಷ್ಠೆಯ ಮಾಡಿಸಿ ದೇವಾಲ್ಯ

೩೧ ದ ಕಲುವೆಸನಂ ನಂದಿ ಮಂಟಪ ಬಾವಿಯಂ ಕಟ್ಟಿಸಿದರು। ಜೀರ್ಣ್ಣೋ

೩೨ ದ್ಧಾರ ದೇವಾರ್ಚನಾ ನಿಮಿತ್ತ ಸಲುವ ಭೂಮಿಗಳು ಹೂರು

೩೩ ಳವಾಗಿ। ಖಂಡುಗೆಯಗದ್ದೆ। ಲೊಕ್ಕಿಯ ಕಡಹು॥ ಹೊಂನೆ

೩೪ ಯ ಜಿಯನ ಮಗ ಕಲಿಯ ಜಿಯನು ಮಾಡಿದ ಹೊಸಗದ್ದೆ। ಬೆಳ್ದಲ

೩೫ ಕಡಹು ಅಡಿಯ ಮಕ್ಕಿ ಕುಳಿಯ ಕೆಯಿ ॥ ದೇವಾಲ್ಯ

೩೬ ದ ಮುಂದೆ ಊರಿಪ್ಪ ಬನ್ದುಬೆ ಕೆಯಿ। ಊರ ಆಳು ಮೊದ

೩೭ ಲು ಬಪ್ಪಧರ್ಮ। ಇ ಧರ್ಮವ ಪ್ರತಿಪಾಳಿಸಿದವಂಗೆ ಗಂಗೆ

೩೮ ವಾರಣಾಸಿಯಲು ಸಹಸ್ರ ಕವಿಲೆಯಂ ಕೊಂಡು ಕೊಳ

೩೯ ಗುವಂ ಹೊಂನಲು ಕಟ್ಟಿಸಿ ಬ್ರಾಹ್ಮಣರಿಗೆ ಕೊಟ್ಟ ಫಲಮಕ್ಕು॥

೪೦ ಈ ಧರ್ಮಮಳಿದವಂಗಾಥಿತ್ಯದಲೂ ಬ್ರಾಹ್ಮಣರು ಮನಾ ಕ

೪೧ ವಿಲೆಯ ಮನಳಿದ ಬ್ರಹ್ಮಾತಿಯನುನೆಯ್ದುವನು॥ ತಾಯ ಹ

೪೨ ತ್ತು ತಲೆ ತಂದೆಯ ಹಂನೊಂದು ತಲೆಯಂ ನರಕದಲೀಕ್ಷಿಪನು।

ಜೈನ ಶಾಸನಗಳಲ್ಲಿ ವಿರಳವಾದ ಈಶ್ವರನ ಸ್ತುತಿ "ನಮಸ್ತುಂಗಶಿರಶ್ಚುಂಬಿ" ಯೊಂದಿಗೆ ಶಾಸನ ಪಾಠ ಪ್ರಾರಂಭವಾಗಿದೆ. "ಯಾರ ಎತ್ತರವಾದ ತಲೆಯನ್ನು ಚುಂಬಿಸುತ್ತಿರುವ ಚಂದ್ರನು ಸುಂದರ ಚಾಮರವಾಗಿರುವನೊ ಯಾರು ಮೂರು

ಲೋಕಗಳು ಹುಟ್ಟಲು ಮೂಲ ಕಂಬದಂತೆ ಕಾರಣಕರ್ತ ನಾಗಿರುವನೋ ಅಂತಹ ಈಶ್ವರನಿಗೆ ನಮಸ್ಕಾರಗಳು". ಮಹಾಮಂಡಲೇಶ್ವರನೂ ಉತ್ತರ ಮಧುರೆಯ ಒಡೆಯನೂ, ಹೊಂಬುಜಪುರದ ಪ್ರಭುವೂ, ಮಹಾಉಗ್ರವಂಶಕ್ಕೆ ಹಣೆಯಂತೆ ಇರುವವನೂ, ಪದ್ಮಾವತಿದೇವಿ ವರಪ್ರಸಾದನೂ, ಮುಂತಾದ ವರ್ಣನೆಯಿಂದ ಪ್ರಸ್ತುತ ಶಾಸನವು ಅರಸ "ಶ್ರೀ ವಲ್ಲಭನ" ಕಾಲಗಣನೆಯ ವಿಷಯದಲ್ಲಿ ಹೊಸಬೆಳಕು ಚೆಲ್ಲುತ್ತದೆ. ಸಾಂತರ ಶ್ರೀವಲ್ಲಭ ವಿಕ್ರಮಸಾಂತರನು ಆಳಿದ ಕಾಲವನ್ನು ಡಾ|| ಹಂಪನಾ ಅವರು ಕ್ರಿ. ಶ. ೧೧೪೭ ರಿಂದ ೧೧೫೬ ಎಂದಿದ್ದಾರೆ.[1] ಈ ಶಿಲಾಶಾಸನವು, ಸಾಂತರ ಶ್ರೀವಲ್ಲಭ ವಿಕ್ರಮಸಾಂತರ ಅರಸನ ಕಾಲವನ್ನು ಕ್ರಿ. ಶ. ೧೧೬೮ರ ವರೆಗೆ ವಿಸ್ತರಿಸುತ್ತದೆ. ಈ ಮಹತ್ವದ ಸಂಗತಿಯು ಹೊಂಬುಜದ ಚರಿತ್ರೆಗೆ ಹೊಸ ಆಯಾಮವನ್ನು ನೀಡುತ್ತದೆ. ಇದುವರೆಗೆ ತಿಳಿಯದಿದ್ದ ಹೊಸ ಸಂಗತಿ ಬೆಳಕಿಗೆ ಬರಲು ಸಾಧ್ಯವಾಗಿದೆ. ಶಾ.ಶ. ೧೦೯೦ (ಕ್ರಿ.ಶ. ೧೧೬೮) ರ ಈ ಶಾಸನವು ಪ್ರಾರಂಭದಲ್ಲಿ ಶಿವಸ್ತುತಿ ಹೊಂದಿರುವ ಎರಡನೇ ಜೈನ ಶಾಸನವಾಗಿದೆ. ಉಳಿದೆಲ್ಲ ಹೊಂಬುಜ ಶಾಸನಗಳೂ ಜಿನಸ್ತುತಿಯಿಂದ ಪ್ರಾರಂಭವಾಗಿವೆ.[2]

ಸಾಂತರ ಅರಸು ತೈಲ III (ತ್ರಿಭುವನ ಮಲ್ಲಸಾಂತರ) (ಕ್ರಿ. ಶ. ೧೧೧೦) ಹೆಂಡತಿ ಚಟ್ಟಲದೇವಿಯರಿಗೆ ಇಬ್ಬರು ಮಕ್ಕಳು, ಹಿರಿಯಾಕೆ ಪಂಪಾದೇವಿ, ಕಿರಿಯವನೇ ಈ ಶಾಸನದ ದಾನಕರ್ತೃ "ಶ್ರೀವಲ್ಲಭ". ಈತನಿಗೆ "ವಿಕ್ರಮ ಸಾಂತರ" ಎಂಬ ಬಿರುದು ಇದ್ದಿತು. ಈತನು ಮಹಾಶೂರನೂ ದಾನಿಯೂ ಆಗಿದ್ದನು. ಸಾಂತರ ವಂಶಕ್ಕೆ ಕಳಸಪ್ರಾಯನಾಗಿದ್ದ ಶ್ರೀವಲ್ಲಭನಿಗೆ "ತ್ರಿಭುವನದಾನಿ" ಎಂಬ ಹೆಸರೂ ಇದ್ದಿತು. ಈತನ ಸಹೋದರಿ ಪಂಪಾದೇವಿಯೂ ಪಂಚಬಸದಿ ನಿರ್ಮಿಸಿ ಕೀರ್ತಿವಂತಳಾಗಿ ಚರಿತ್ರೆಯಲ್ಲಿ ನೂತನ ಅತ್ತಿಮಬ್ಬೆ ಎಂಬ ಹೆಸರು ಗಳಿಸಿದ್ದಾಳೆ. ಶ್ರೀವಲ್ಲಭನ ಪತ್ನಿ ತುಳುವಲದೇವಿಯು ಅನೇಕ ಬಸದಿಗಳನ್ನು ನಿರ್ಮಿಸಿ, ದಾನ-ದತ್ತಿಗಳನ್ನು ನೀಡಿ ಪ್ರಸಿದ್ಧಳಾಗಿದ್ದಾಳೆ. ಶ್ರೀವಲ್ಲಭ ಮತ್ತು ಪಂಪಾದೇವಿಯ ಗುರುಗಳು ಅಜಿತಸೇನ ಪಂಡಿತದೇವ ಮುನಿಗಳು ಎಂಬ ಕೆಲವು ಉಲ್ಲೇಖನಗಳಿವೆ. ಹೊಂಬುಜದಲ್ಲಿರುವ ಕೆಲವು ಜೈನ ಶಾಸನಗಳಲ್ಲಿ ಕಲ್ಲೂರನಾಡು ಎಂಬ ಉಲ್ಲೇಖ ಕಂಡುಬರುತ್ತದೆ. ಹತ್ತಿರದಲ್ಲೇ ಕುಮುದ್ವತಿ ನದಿ ಹರಿಯುತ್ತದೆ. ಪ್ರಾಚೀನ ಗ್ರಾಮದ ಮಠದ ಹಿತ್ತಲಿನಲ್ಲಿ ಸುಮಾರು ೨೦-೨೫ ಪ್ರಾಚೀನವಾದ ಹಗೇವುಗಳಿವೆ ಎಂದಿರುವಲ್ಲಿ, ೩-೪ ಹಗೇವುಗಳು, ಪ್ರಾಚೀನ ಬಾವಿ ಹಾಗು ೩-೪ ವೀರಗಲ್ಲುಗಳನ್ನು ಮಹಾಸತಿ ಶಿಲ್ಪಗಳು ಕಂಡು ಬಂದವು. ಈಗಿನ ಕಲ್ಲೂರು ಗ್ರಾಮದ ಹತ್ತಿರ ಒಂದು ಬಸವಣ್ಣ ದೇವಾಲಯವಿದೆ. ಇಲ್ಲಿರುವ ೧೨" x ೬" ಚೌಕವಾದ ಸುಮಾರು ೩೦" ಎತ್ತರದ ಸ್ತಂಭದ ಮೇಲೆ ಚಿಕ್ಕದಾದ ಬಸವನ ವಿಗ್ರಹವನ್ನು ಕೆತ್ತಲಾಗಿದೆ. ಸ್ತಂಭದ ಎಡ, ಬಲ ಮತ್ತು ಎದುರು ಭಾಗದಲ್ಲಿಯೂ ಶಾಸನವಿದೆ. ವಿಜಯನಗರ ಕಾಲಕ್ಕೆ ಸೇರಿದ ಬಸವಣ್ಣ ದೇವಾಲಯ ಎದುರು ಒಂದು ವೀರಗಲ್ಲು ಇದೆ. ಎಡಭಾಗದಲ್ಲಿ ಒಂದು ಜೋಡಿ ಸ್ತ್ರೀಯರಿರುವ ಮಹಾಸತಿ ಕಲ್ಲು ತುಂಬ ಕಲಾತ್ಮಕವಾಗಿದೆ.

*ಪ್ರಾಚೀನ ಶಿವಲಿಂಗ* : ಗ್ರಾಮಸ್ಥರು ಇತ್ತೀಚೆಗೆ ಹೆಂಚಿನ ಹೊದಿಕೆ ಇರುವ ದೇವಾಲಯ ನಿರ್ಮಿಸಿದ್ದಾರೆ. ಗರ್ಭಗುಡಿಯಲ್ಲಿರುವ ಅತ್ಯಂತ ಪ್ರಾಚೀನವಾದ ಬೃಹತ್ ಶಿವಲಿಂಗವು ಸುಮಾರು ೪೫" ಎತ್ತರ, ೪೦" ಚೌಕಾಕಾರವಾಗಿದೆ. ಶಿವಲಿಂಗದ ಜಲಹರಿಯು ಎಡಭಾಗದಲ್ಲಿ ೨೪" ಉದ್ದವಿದೆ. ಪಾಣಿ ಪೀಠದ ಮೇಲಿರುವ ಲಿಂಗ ಭಾಗವು ೧೫" ಎತ್ತರ, ೩೩" ಸುತ್ತಳತೆ ಇದೆ. ಈ ಬೃಹತ್ ಶಿವಲಿಂಗದ ಕಲ್ಲಿನ ಪದರಗಳನ್ನು ಮತ್ತು ಶಿಲ್ಪ ಶೈಲಿಯನ್ನು ನೋಡಿದಾಗ ಇದು ಗಂಗರ ಕಾಲ ಅಂದರೆ ೮-೯ನೇ ಶತಮಾನಕ್ಕೆ ಸೇರಿದ್ದು ಎನ್ನಬಹುದು.

ಇತ್ತೀಚೆಗೆ ನವೀಕರಿಸುವಾಗ ತೆಗೆದಿರುವ ಬಾಗಿಲುವಾಡ, ಗರ್ಭಗುಡಿ, ಮೇಲ್ಭಾಗದ ಕಮಲದ ಹೂವಿನ ಕೆತ್ತನೆಯ ಶಿಲಾ ಚಪ್ಪಡಿಗಳು ಅನಾಥವಾಗಿ ಮಣ್ಣಿನಲ್ಲಿ ಹೂತು ಹೋಗಿವೆ. ಇವುಗಳ ಸಂರಕ್ಷಣೆ ಕಾರ್ಯ ಆಗಬೇಕಾಗಿದೆ. ಪ್ರಾಚೀನ ದೇವಾಲಯಕ್ಕೆ ಸಂಬಂಧಿಸಿದ ನಾಲ್ಕು ದುಂಡು ಸ್ತಂಭಗಳನ್ನು, ಗಣೇಶ ಮತ್ತು ಶಿರೋಭಾಗ ತುಂಡಾಗಿರುವ ಮಹಿಷಮರ್ದಿನಿ ಮುಂತಾದ ಹಳೆಯ ಸ್ಮಾರಕಗಳನ್ನು ದೇವಾಲಯದ ಎದುರು ವ್ಯವಸ್ಥಿತವಾಗಿ ಕಟ್ಟೆ ಕಟ್ಟಿ ನಿಲ್ಲಿಸಿರುವುದು ಶ್ಲಾಘನೀಯ ಸಂಗತಿ.



(ಈ ಅಪ್ರಕಟಿತ ಶಾಸನ ಕುರಿತು ನಮಗೆ ಅಪೂರ್ವ ಮಾಹಿತಿ ನೀಡಿ ನಮ್ಮನ್ನು ಸ್ಥಳಕೆ, ಕರೆದೊಯ್ದು ಆತಿಥ್ಯ ನೀಡಿದ, ಶ್ರೀ ಕಲ್ಲೂರು ಮೇಘರಾಜ್ ಅವರಿಗೂ, ಸಹಕರಿಸಿದ ಶ್ರೀ ವಾಸಪ್ಪಗೌಡ, ತೇಜೋಮೂರ್ತಿಯವರಿಗೂ ಕಲ್ಲೂರು ಗ್ರಾಮದ ಪ್ರಾಚೀನತೆ ಮತ್ತು ಕುರುಹುಗಳನ್ನು ವಿವರಿಸಿದ ಹಿರಿಯರಾದ ಶ್ರೀ ಮಲ್ಲಪ್ಪಗೌಡರಿಗೆ ಲೇಖಕ ಋಣಿಯಾಗಿದ್ದಾನೆ. ಈ ಅಪೂರ್ವ ಶಾಸನದ ಪ್ರತಿ ತೆಗೆಯಲು ಸಹಕರಿಸಿದ ಶ್ರೀ ಜಗದೀಶ್ ಅಗಸಿಬಾಗಿಲವರ ಅವರಿಗೂ ಮಾರ್ಗದರ್ಶನ ಮಾಡಿದ ಹಿರಿಯ ವಿದ್ವಾಂಸರಾದ ಡಾ|| ಹಂಪನಾ ಅವರಿಗೂ ಕೃತಜ್ಞತೆಗಳು.)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ನಾಗರಾಜಯ್ಯ ಹಂ.ಪ., (೧೯೯೭), **ಹೊಂಬುಜ ಶಾಸನಗಳು**, ಶ್ರೀ ಸಿದ್ಧಾಂತ ಕೀರ್ತಿ ಗ್ರಂಥಮಾಲೆ, ಹೊಂಬುಜ.

೨. ಅದೇ.

೩. ನಾಗರಾಜಯ್ಯ ಹಂ.ಪ., (೧೯೯೭), **ಸಾಂತರರು ಒಂದು ಅಧ್ಯಯನ.**

೪. **ಕರ್ನಾಟಕ ವಿಷಯ ವಿಶ್ವಕೋಶ.**, (೧೯೭೯), (ಪ್ರ.ಸಂ.) ನಾಯಕ ಹಾ.ಮಾ, ಮೈಸೂರು ವಿಶ್ವವಿದ್ಯಾನಿಲಯ.

ಸತ್ಯನಾರಾಯಣ. ಬಿ.ಆರ್., *
ಮನೋಜ್. ಜಿ. **

# ನುಗ್ಗೆಹಳ್ಳಿಯ ಒಂದು ಅಪ್ರಕಟಿತ ಶಾಸನ

ಹಾಸನ ಜಿಲ್ಲೆ ಚನ್ನರಾಯಪಟ್ಟಣ ತಾಲ್ಲೂಕಿನ ನುಗ್ಗೆಹಳ್ಳಿ ಒಂದು ಹೋಬಳಿ ಕೇಂದ್ರ. ಹೊಯ್ಸಳ ಪ್ರಧಾನಿ ಬೊಮ್ಮಣ್ಣ ದಂಡನಾಯಕನು ಕಟ್ಟಿಸಿದ ಪ್ರಸನ್ನ ಕೇಶವ ಮತ್ತು ಸದಾಶಿವ ದೇವಾಲಯಗಳು ಇಲ್ಲಿನ ಪ್ರಮುಖ ಆಕರ್ಷಣೆ. ಇಲ್ಲಿಯ ೧೮ ಶಾಸನಗಳು ಎಪಿಗ್ರಾಫಿಯಾ ಕರ್ನಾಟಕ ಸಂಪುಟ ೧೦ರಲ್ಲಿ ಪ್ರಕಟವಾಗಿವೆ.[೧*] ಸದಾಶಿವ ದೇವಾಲಯದ ಮಕರ ತೋರಣದ ಮೇಲೆ ಅತಿಯಾಗಿ ಬಳಿದಿದ್ದ ಸುಣ್ಣದ ನಡುವೆ ಅಂಗೈ ಅಗಲದಷ್ಟು ಜಾಗದಲ್ಲಿ ಕಾಣುತ್ತಿದ್ದ ಕೆಲವು ಲಿಪಿಗಳಿಂದಾಗಿ ಈ ಶಾಸನವು ಕಣ್ಣಿಗೆ ಬಿತ್ತು. ಸುಣ್ಣವನ್ನು ತೊಳೆದು ನೋಡಿದಾಗ, ಒಂದರ ಮೇಲೊಂದು ಇಟ್ಟಿದ್ದ ಎರಡು ಕಲ್ಲುಗಳಲ್ಲಿ ಮೇಲಿನ ಕಲ್ಲಿನಲ್ಲಿ ಎರಡು ಸಾಲುಗಳು ಮತ್ತು ಕೆಳಗಿನ ಕಲ್ಲಿನಲ್ಲಿ ಎರಡೂವರೆ ಸಾಲುಗಳು ಇದ್ದ ಪೂರ್ಣ ಶಾಸನ ಕಂಡು ಬಂದಿತು. ಶಾಸನವು ಕನ್ನಡ ಭಾಷೆ ಮತ್ತು ಲಿಪಿಯದ್ದಾಗಿದೆ.

**ಶಾಸನ ಪಠ್ಯ**

೧. ಸ್ವಸ್ತಿ ಸಮಸ್ತ ಪ್ರಸಸ್ತಿ ಸಹಿತಂ ಶ್ರೀ ಮನುಮಹಾಸಾಮಂತ ಮಱುಗಲೆ ನಾಡಾಳುವ ಶ್ರೀ ರಾಮನಾಥ ದೇವರ ದಿಬ್ಯ ಶ್ರೀ ಪಾದಪದ್ಮಾರಾದಕರಪ್ಪಯಜಿಲೂರ ಮಲ್ಲಿದೇವರಸರು ಶ್ರೀಮನುಮಹಾಪ್ರಧಾನಂ ರಾಯ ದಳಪರು ನಟಿಂಗ ಕಲಿಗಳಂಕುಸ ಬೊಂ

೨. ಮಣ ದಂಣ್ಣಾಯಕರು ಮಾಡಿದಗ್ರಹಾರಂ ಶ್ರೀ ವಿಜಯ ಸೋಮನಾಥಪುರವಾದ ನುಗ್ಗಿಯಹಳ್ಳಿಯಯಶೇಶ ಮಹಾಜನಂಗಳಿಗೆಯಾಮಲ್ಲಿದೇವನು ಕಡಬದಲು ಬಿಟ್ಟೇದತ್ತಿ ಪರಿಧಾವಿಸಂವತ್ಸರದ ಮಾರ್ಗ್ಗಸಿರ ಬ। ೧ ಆದಿವಾರದಂದು ಆ ನು

೩. ಗ್ಗಿಯಹಳ್ಳಿಗೆ ಪ್ರವಿಷ್ಟವಾದ । ಮಾದಲಗೆಱು । ಕೋಸಳ ಗೆಱು । ಆ ಹಳ್ಳಿಗಳ । ತೋಟಿ । ಆ ಹಳ್ಳಿಗಳು । ಉಂಗುರಗೆಱು। ಮಸಕಲ್ಲಹಳ್ಳೀ । ಆ ಕಿಱುಕುಳ ಹಳ್ಳಿಗಳು। ಕಬ್ಬಳ್ಳಿಯ ವಿತ್ತಿಯಯೆಲ್ಲಾ ಹಳ್ಳೀಗಳುಂ ಆ ನುಗ್ಗಿಯಹಳ್ಳಿ ಅದಱ

೪. ಕಿಱುಕುಳ ಹಳ್ಳಿಗಳು ಸಹಿತ ಮಂನೆಯ। ನೆಬಂಧಿ। ಕುದುರಯಸೇಸೆ। ವೊಸಗೆ। ಮನಕರ। ಕಿಱುಕುಳ।ಯಲ್ಲಾ ಹದಿಕೆ।ಉಗ್ರಾಣ ಸಂಬಳ। ಮುಖ್ಯವಾದ ಹದಿಕೆಗಳನು। ಆ ಮಲ್ಲಿದೇವರ

೫. ಸರು। ಸರ್ವ್ವಮಾನ್ಯವಾಗಿ ಧಾರಾಪೂರ್ವ್ವಕಂ ಮಾಡಿ ಬಿಟ್ಟಿರುಯಿ ಮರಿಆದೆಯಲು ಚಂದ್ರಾದಿತ್ಯರುಳ್ಳಂನಬಕ

- ಈ ಶಾಸನದಲ್ಲಿ ಶಕವರ್ಷದ ಉಲ್ಲೇಖವಿಲ್ಲ. ಆದರೆ "ಪರಿಧಾವಿ ಸಂವತ್ಸರ ಮಾರ್ಗಶಿರ ಬಹುಳ ೧" ಎಂದಿದೆ. ಪ್ರಸನ್ನಕೇಶವ ದೇವಾಲಯದಲ್ಲಿನ ಶಾಸನದಲ್ಲಿ,[೨] ಪ್ರಸನ್ನ ಕೇಶವ ಮತ್ತು ಸದಾಶಿವ ದೇವಾಲಯಗಳು ನಿರ್ಮಾಣಗೊಂಡ ಕಾಲದ ಉಲ್ಲೇಖವಿದೆ. ಅದರಂತೆ ಸದಾಶಿವ ದೇವಾಲಯವು "ಕೀಲಕ ಫಾಲ್ಗುಣ ಪೌರ್ಣಮಿ"ಯಂದು ನಿರ್ಮಾಣಗೊಂಡಿದೆ. ಆದರೆ ಅಲ್ಲಿಯೂ ಶಕ ವರ್ಷದ ಉಲ್ಲೇಖವಿಲ್ಲ. ಅದೇ ಶಾಸನದಲ್ಲಿ ಉಲ್ಲೇಖವಾಗಿರುವಂತೆ ಪ್ರಸನ್ನ ಕೇಶವ ದೇವಾಲಯವು "ಶಕ ೧೧೭೮ ಪರಾಭವ ಚೈತ್ರ ಶುದ್ಧ ೫" ರಂದು ನಿರ್ಮಾಣ ಗೊಂಡಿದೆ. ಅದು ೧೨೪೬ ಮಾರ್ಚ್ ೨೩ಕ್ಕೆ ತಾಳೆಯಾಗುತ್ತದೆ. ಪರಾಭವ ಸಂವತ್ಸರದ ಮೂರು ವರ್ಷಗಳ ನಂತರ ಕೀಲಕ ಸಂವತ್ಸರವು ಬರುವುದರಿಂದ ಸದಾಶಿವ ದೇವಾಲಯದ ನಿರ್ಮಾಣ ಕಾಲವು ೧೨೪೯ ಫೆಬ್ರವರಿ ೨೮ಕ್ಕೆ ತಾಳೆಯಾಗುತ್ತದೆ. ಪ್ರಸ್ತುತ ಶಾಸನದಲ್ಲಿ ಹೇಳಿರುವ ಪರಿಧಾವಿ ಸಂವತ್ಸರವು ಕೀಲಕ ಸಂವತ್ಸರದ ಮೂರು ವರ್ಷಗಳ ನಂತರ ಬರುವದರಿಂದ ಈ ಶಾಸನದ ಕಾಲವು ೧೨೫೨ ನವೆಂಬರ್ ೧೮ಕ್ಕೆ ಸರಿಯಾಗುತ್ತದೆ. ಆದರೆ ಆದಿವಾರದ ಬದಲು ಸೋಮವಾರ ಬರುತ್ತದೆ.

ಈ ಶಾಸನವು ಹೊಯ್ಸಳ ಸೋಮೇಶ್ವರನ ಆಡಳಿತ ಕಾಲದ್ದಾಗಿದೆ. ಆದರೆ ನೇರವಾಗಿ ಅವನನ್ನು ಉಲ್ಲೇಖಿಸಿಲ್ಲ. ಶಾಸನದಲ್ಲಿ 'ರಾಮನಾಥ' ಉಲ್ಲೇಖವಿದ್ದು, ಅವನನ್ನು 'ಮಱುಗಲೆನಾಡಾಳ್ವ ಮಹಾಸಾಮಂತ' ಎಂದು ಕರೆಯಲಾಗಿದೆ. ಯಾವುದೇ ಹೊಯ್ಸಳ ಬಿರುದುಗಳಿಲ್ಲ. 'ಸಮಸ್ತ ಪ್ರಶಸ್ತಿ ಸಹಿತಂ' ಎಂದಷ್ಟೇ ಹೇಳಲಾಗಿದೆ. ಸೋಮೇಶ್ವರನ ಆಡಳಿತ ಕಾಲದಲ್ಲಿ ರಾಮನಾಥನು ಮಹಾಸಾಮಂತನಾಗಿ ಮಱುಗಲೆ ನಾಡನ್ನು ಆಳುತ್ತಿದ್ದನೆಂದು ಹೇಳಬಹುದು. ಈ ಮಱುಗಲೆನಾಡು ತುಮಕೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುತ್ತದೆ. ಪೂರಕವಾಗಿ ಕೆಲವು ಗಂಗರ ಶಾಸನಗಳು ಮಱುಗಲೆನಾಡನ್ನು ಉಲ್ಲೇಖಿಸುತ್ತವೆ.

* ಗ್ರಂಥಪಾಲಕರು, ಸುರಾನ ಕಾಲೇಜು, ಸೌತ್ ಎಂಡ್ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪
** ಬಿನ್. ಗುಂಡಣ್ಣ, ನಂ. ೨೫, ಕೆ.ಆರ್. ಸಿಂಧೆ ರಸ್ತೆ, ವಿಶ್ವೇಶ್ವರಪುರಂ, ಬೆಂಗಳೂರು - ೫೬೦ ೦೦೪

ಶ್ರೀಪುರುಷನ ಹಿರಿಯೂರು ಶಾಸನ;*೩ ಶ್ರೀಪುರುಷನ ಶೃಂಗೇರಿ ತಾಮ್ರಶಾಸನ*೪ ಮತ್ತು ಅವನೀತನ ಮಾರೊಹಳ್ಳಿ ಶಾಸನಗಳು*೫ ಮಱುಗಲೆ ನಾಡನ್ನು ಉಲ್ಲೇಖಿಸುತ್ತವೆ. ಕ್ರಿ.ಶ. ೧೨೫೪ರಲ್ಲಿ ಹೊಯ್ಸಳ ಸಾಮ್ರಾಜ್ಯ ವಿಭಜನೆ ಆಗುವವರೆಗೆ ಮಱುಗಲೆ ನಾಡನ್ನು ಮಹಾ ಸಾಮಂತನಾಗಿ ಆಳಿದ ರಾಮನಾಥನು, ನಂತರ ಪಡೆದ ಭಾಗದಲ್ಲಿ ಈ ಮಱುಗಲೆನಾಡು ಇತ್ತೆಂದು ತುಮಕೂರು ತಾಲ್ಲೂಕು ಹೆಬ್ಬೂರು ಹೋಬಳಿ ರಾಯಪುರದ ಶಾಸನದಿಂದ ವಿದಿತವಾಗುತ್ತದೆ.*೬ ಕ್ರಿ.ಶ. ೧೨೮೭ ರ ಈ ಶಾಸನದಲ್ಲಿ ರಾಮನಾಥನ ಮಂತ್ರಿ ಕಂಬಯ್ಯ ದಂಡನಾಯಕನು ಕಂದಾಯ ವಿಚಾರವೊಂದನ್ನು ಇತ್ಯರ್ಥಪಡಿಸಿದಾಗ ರಾಮನಾಥನು ಕೆರೆಯೊಂದನ್ನು ಜೀರ್ಣೋದ್ಧಾರ ಮಾಡಿ ಬಾಸಿ ಸಮುದ್ರವೆಂಬ ಕೆರೆಯ ಕೆಳಗೆ ದತ್ತಿ ಬಿಡುವ ವಿಚಾರವಿದೆ. ಅದರಲ್ಲಿ ರಾಮನಾಥನನ್ನು ಚಕ್ರವರ್ತಿ ಎಂದಷ್ಟೇ ಕರೆಯಲಾಗಿದೆ. ವಿಷಯ ವಿಶ್ವಕೋಶದಲ್ಲಿ 'ಸೇಲಂ, ಧರ್ಮಪುರಿ, ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ ಭಾಗಗಳು ಆತನ ಆಡಳಿತ ದಲ್ಲಿದ್ದವೆಂದು ಮತ್ತು ಆತ ಒಮ್ಮೆ ಕುಣಿಗಲ್ಲಿನವರೆಗೂ ದಂಡೆತ್ತಿ ಬಂದು ನರಸಿಂಹನಿಂದ ಪರಾಜಿತನಾಗಿ ಹಿಂತಿರುಗಿದನೆಂದು ಹೇಳಲಾಗಿದೆ. ಆದರೆ ಮೇಲಿನ ಆಧಾರಗಳಿಂದ ಹೊಯ್ಸಳ ಸಾಮ್ರಾಜ್ಯ ವಿಭಜನೆಯಾದ ಮೇಲೆ ಮಱುಗಲೆನಾಡಿನ ಪ್ರದೇಶವು ಅಂದರೆ ತುಮಕೂರು ಜಿಲ್ಲೆಯ ಕೆಲವು ಭಾಗಗಳು ರಾಮನಾಥನ ಆಳ್ವಿಕೆಗೊಳಪಟ್ಟಿದ್ದವು ಎನ್ನಬಹುದು.

ಪ್ರಸ್ತುತ ಶಾಸನದಲ್ಲಿ ಬರುವ ಮಲ್ಲಿದೇವನ ಊರಾದ ಯ(ಅ)ರಲೂರು ತುಮಕೂರು ತಾಲ್ಲೂಕ್ ಉರಡಗೆರೆ ಹೋಬಳಿಯ ಹರಳೂರೆ ಆಗಿದೆ. ಅಲ್ಲಿಯ ಒಂದು ಶಾಸನದಲ್ಲಿರುವ*೭ 'ಮಱುಗಲೆ ನಾಡೊಳಗಣ ಹರಳೂರು' ಎಂಬ ಉಲ್ಲೇಖ ಇದನ್ನು ದೃಢಪಡಿಸುತ್ತದೆ. ಆದರೆ ಪ್ರಸ್ತುತ ಶಾಸನದಲ್ಲಿ 'ಶ್ರೀ ರಾಮನಾಥದೇವರ ಪಾದಪದ್ಮಾರಾಧಕ...' ಎಂದು ಕರೆದುಕೊಂಡಿರುವ ಮಲ್ಲಿದೇವ ಯಾರು? ಎಂಬುದಕ್ಕೆ ಸರಿಯಾದ ಉತ್ತರವಿಲ್ಲ. ಚೋಳ ಅರಸರಲ್ಲಿ ಮತ್ತು ಸಿಂಧ ಅರಸರಲ್ಲಿ ಒಬ್ಬೊಬ್ಬ ಮಲ್ಲಿದೇವನ*೮ ಉಲ್ಲೇಖವಿದೆಯಾದರೂ, ಕಾಲದ ದೃಷ್ಟಿಯಿಂದಲೂ ಮತ್ತು ಅವರು ಸ್ವತಃ ಅರಸ ರಾಗಿದ್ದರಿಂದಲೂ ಈ ಮಲ್ಲಿದೇವ ಆಗಿರುವ ಸಂಭವವಿಲ್ಲ. ದಾವಣಗೆರೆ ತಾಲ್ಲೂಕು ಹರಿಹರದಲ್ಲಿನ ೪೫ನೇ ಸಂಖ್ಯೆಯ ಶಾಸನದಲ್ಲಿ*೯ 'ಕಲಿಗಳಂಕುಶ ಶ್ರೀವೀರಮಲ್ಲಿದೇವರಸ' ಎಂಬ ಉಲ್ಲೇಖವಿದೆ. ಆದರೆ ಅದರ ಕಾಲ ಕ್ರಿ.ಶ. ೧೧೦೦. ಆದರೆ ಕ್ರಿ.ಶ. ೧೨೭೬ಕ್ಕೆ ಸೇರಿದ ಹೊಯ್ಸಳ ಮೂರನೇ ನರಸಿಂಹನ ಹಳೆಬೀಡು ಶಾಸನದಲ್ಲಿ*೧೦ 'ಮಹಾಪ್ರಧಾನಿ ಮಲ್ಲಿದೇವ ದಂಡನಾಯಕ'ನೆಂಬುವವನ ಉಲ್ಲೇಖವಿದೆ. ಈ ಶಾಸನದಲ್ಲಿ ಸೇವುಣ ರಾಮಚಂದ್ರ ಮತ್ತು ಮಲ್ಲಿದೇವನ ನಡುವೆ ನಡೆದ ಯುದ್ಧದ ವಿಚಾರವಿದೆ. ಪ್ರಸ್ತುತ ಶಾಸನದ ಮಲ್ಲಿದೇವನು ಈತನೆ ಆಗಿರುವ ಸಂಭವವೂ ಕಡಿಮೆ. ಏಕೆಂದರೆ ಕ್ರಿ.ಶ. ೧೨೫೨ರಲ್ಲಿ ರಾಮನಾಥ ಪಾದಪದ್ಮಾರಾಧಕನಾಗಿದ್ದ ಮಲ್ಲಿದೇವ, ವಿಭಜನೆಯ ನಂತರ ರಾಮನಾಥನ ಶತ್ರುವಾದ ನರಸಿಂಹನ ಕಡೆಗೆ ಪಕ್ಷಾಂತರ ಮಾಡಿ ದಂಡನಾಯಕನಾಗಿರುವ ಸಾಧ್ಯತೆಗಳು ಕಡಿಮೆಯಿದ್ದರೂ ಅದನ್ನು ಅಲ್ಲಗಳೆಯುವಂತಿಲ್ಲ. ಇದರ ಬಗ್ಗೆ ಹೆಚ್ಚಿನ ಅಧ್ಯಯನದ ಅಗತ್ಯವಿದೆ.

ಬೊಮ್ಮಣ್ಣದಂಡನಾಯಕನು ನುಗ್ಗೆಹಳ್ಳಿಯ ದೇವಾಲಯ ಗಳ ನಿರ್ಮಾತೃವೆಂದು ಮೊದಲೆ ಹೇಳಲಾಗಿದೆ. ಈತನು ಹೊಯ್ಸಳ ಸೋಮೇಶ್ವರನ ಮಹಾಪ್ರಧಾನ ದಂಡನಾಯಕ ನಾಗಿದ್ದವನು. ನುಗ್ಗೆಹಳ್ಳಿಯ ಇನ್ನಿತರ ಶಾಸನಗಳಲ್ಲಿಯೂ ಈತನ ಉಲ್ಲೇಖಗಳಿವೆ. ನುಗ್ಗೆಹಳ್ಳಿಯಲ್ಲಿ ವಿಜಯಸೋಮನಾಥಪುರವೆಂಬ ಅಗ್ರಹಾರ ಮಾಡಿಸಿದ ಕೀರ್ತಿ ಈತನದು. ಇದನ್ನು ಈ ಶಾಸನದಲ್ಲು ಉಲ್ಲೇಖಿಸಲಾಗಿದೆ. ಆತನನ್ನು 'ಶ್ರೀಮನುಮಹಾ ಪ್ರಧಾನಂ ರಾಯದಳಪರು ನಱುಂಗಕಲಿಗಳಂಕುಸ ಎಂದು ಕರೆಯಲಾಗಿದೆ.

ಪ್ರಸ್ತುತ ಶಾಸನದಲ್ಲಿ ಮಱುಗಲೆ ನಾಡಿನ ಮಲ್ಲಿದೇವನು ನುಗ್ಗೆಹಳ್ಳಿಯ ಜನತೆಯ ಸಮ್ಮುಖದಲ್ಲಿ, ಸದಾಶಿವ ದೇವಾಲಯದ ಉಗ್ರಾಣದ ಸಂಬಳ ಮುಂತಾದ ಮೇಲ್ವಿಚಾರಣೆಗಾಗಿ ಕಬ್ಬಳ್ಳಿ ಮತ್ತು ನುಗ್ಗೆಹಳ್ಳಿ ವಿತ್ತಿಯ ಮಾದಲಗೆಱೆ, ಕೋಸಳಗೆಱೆ, ತೋಟಿ, ಉಂಗುರಗೆಱೆ, ಮಸಕಲ್ಲಹಳ್ಳಿ ಗ್ರಾಮಗಳಲ್ಲಿ ಉತ್ಪತ್ತಿ ಯಾಗುತ್ತಿದ್ದ ಕಿಱುಕುಳ, ಮನೆಕರ, ಕುದುರೆಯಸೇಸೆ, ಸಿಬಂಧಿ, ವೊಸಗೆ ಹದಿಕೆ ಮೊದಲಾದ ತೆರಿಗೆಗಳ ಮಾನ್ಯ ಮಾಡಿದ ಉಲ್ಲೇಖವಿದೆ. ಈ ಊರುಗಳ ಹೆಸರುಗಳು ಈಗಲೂ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಈಗಲೂ ಬಳಕೆಯಲ್ಲಿವೆ.

ಸಂಪೂರ್ಣ ಗದ್ಯದಲ್ಲಿರುವ ಈ ಶಾಸನದ ಭಾಷೆ ಹಳಗನ್ನಡ ವಾಗಿದೆ. ಭಾಷಾಪ್ರಯೋಗದಲ್ಲಿ ಅಲಲ್ಲಿ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ. ಅವುಗಳಲ್ಲಿ ಕೆಳಕಂಡಂತೆ ಗುರುತಿಸಬಹುದಾಗಿದೆ.

* ಱಳಕುಳಗಳ ನಿಯತವಾದ ಬಳಕೆಯಿದೆ. - ಮಱುಗಲೆ ನಾಡು, ಉಂಗುರಗೆಱೆ, ಮಾದಲಗೆಱೆ ಇತ್ಯಾದಿ.
* ಒಂದು ಕಡೆ ರ ಕಾರದ ಬದಲಿಗೆ ಱ ಕಾರದ ಬಳಕೆ ಯಾಗಿದೆ.- ಅದರ ಬದಲಾಗಿ ಅದಱ
* ವ್ಯಂಜನದ ಬದಲು ಸ್ವರದ ಪ್ರಯೋಗವಿದೆ.- ಮರ್ಯಾದೆ ಗೆ ಬದಲಾಗಿ ಮರಿಆದೆ.
* ಸ್ವರದ ಬದಲಾಗಿ ವ್ಯಂಜನದ ಪ್ರಯೋಗವಾಗಿದೆ.- ಅಶೇಷ ದ ಬದಲು ಯಶೇಷ.
* ಶ ಕಾರದ ಬದಲು ಸ ಕಾರ ಪ್ರಯೋಗವಾಗಿದೆ.- ಪ್ರಶಸ್ತಿ ಗೆ ಬದಲಾಗಿ ಪ್ರಸಸ್ತಿ, ಅಂಕುಶ ಕ್ಕೆ ಬದಲಾಗಿ ಅಂಕುಸ.

* ದ್ವಿತ್ವದ ಬದಲಾಗಿ ಅನುಸ್ವಾರದ ಬಳಕೆಯಿದೆ.- ಮಾನ್ಯ ದ ಬದಲಾಗಿ ಮಂನೆಯ

ಈ ಶಾಸನವು ವಿಭಜನಪೂರ್ವ ಹೊಯ್ಸಳ ಸಾಮ್ರಾಜ್ಯದಲ್ಲಿ ರಾಮನಾಥ ಮಹಾಸಾಮಂತನಾಗಿದ್ದನೆಂದು ತಿಳಿಸುತ್ತದೆ. ಅಲ್ಲದೆ ಮಲ್ಲಿದೇವರಸನು ಮಜುಗಲೆ ನಾಡಿನಿಂದ ಬಂದು ನುಗ್ಗೆಹಳ್ಳಿಯಲ್ಲಿ ದೇವಾಲಯಗಳಿಗೆ ದತ್ತಿ ಬಿಟ್ಟಿರುವ ವಿಚಾರವು ಸಾಂಸ್ಕೃತಿಕವಾಗಿ ಮುಖ್ಯವೆನಿಸುತ್ತದೆ.



(ಕ್ಷೇತ್ರಕಾರ್ಯದ ಸಮಯದಲ್ಲಿ ಜೊತೆಯಲ್ಲಿದ್ದು ಸಹಕರಿಸಿದ ಡಾ. ಶಾಮಲಾ ರತ್ನಕುಮಾರಿ ಮತ್ತು ಶಾಸನದ ಪಾಠವನ್ನು ಪೂರ್ಣವಾಗಿ ಓದಲು ಸಹಕರಿಸಿದ ಗುರುಗಳಾದ ಡಾ. ಕೆ.ಆರ್. ಗಣೇಶ್ ಅವರಿಗೆ ನಮ್ಮ ಧನ್ಯವಾದಗಳು ಸಲ್ಲುತ್ತವೆ.)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ಎಪಿಗ್ರಾಫಿಯ ಕರ್ನಾಟಕ ಸಂ. X.,** ಚನ್ನರಾಯಪಟ್ಟಣ ೧೦೩, (ರಿ. ೧೯೩೮-೪೧) ರಿಂದ ೧೨೧ (ಚನ್ನರಾಯಪಟ್ಟಣ ೧೫-೨೮೯).
೨. ಎ.ಕ.ಸಂ. X., ಚನ್ನರಾಯಪಟ್ಟಣ ೧೧೩, ನುಗ್ಗೇಹಳ್ಳಿ.
೩. ಎ.ಕ.ಸಂ. xi., ಹಿರಿಯೂರು ೩೩.
೪. ಎಂ.ಎ.ಆರ್. ೧೯೧೬ ಪು. ೧೪.
೫. ಎಂ.ಎ.ಆರ್. ೧೯೧೦ ಪು. ೨೪.
೬. ಎ.ಕ.ಸಂ. xii., ತುಮಕೂರು ೨೭.
೭. ಎ.ಕ.ಸಂ. xii., ತುಮಕೂರು ೨೮.
೮. ಎ.ಕ.ಸಂ. xii., ಪಾವಗಡ ೪೩, ೫೦, ೫೩.
೯. ಎ.ಕ.ಸಂ. xi., ದಾವಣಗೆರೆ ೪೫.
೧೦. ಎ.ಕ.ಸಂ. ix., ಬೇಲೂರು ೩೩೧.
೧೧. **ಕರ್ನಾಟಕ ವಿಷಯ ವಿಶ್ವಕೋಶ., ಕರ್ನಾಟಕ ಪರಂಪರೆ., ಇಂಡಿಯನ್ ಎಪಿಮರೀಸ್.**

ಆದಪ್ಪ ಪಾಸೋಡಿ*

# ಬುಯಾರದ ಕೂಡಲ ಮಲ್ಲಿಕಾರ್ಜುನ ದೇವರ ಒಂದು ಹೊಸ ಶಾಸನ

ವಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನಲ್ಲಿ ಒಂದು ಸಣ್ಣ ಊರು ಬುಯಾರ; ಇಂಡಿಯಿಂದ ಈಶಾನ್ಯ ದಿಕ್ಕಿನಲ್ಲಿದೆ. ಭೀಮಾನದಿ ದಂಡೆಯ ಮೇಲಿರುವ ಈ ಗ್ರಾಮ ತಾಮ್ರ-ಶಿಲಾಯುಗ ಸಂಸ್ಕೃತಿಯ ನೆಲೆಯಾಗಿದೆ.[೧] ಕ್ರಿ.ಶ. ಸುಮಾರು ೮೫೦ರಿಂದ ೧೩೦೦ ರವರೆಗೆ ಪ್ರಚಲಿತವಿದ್ದ ತರ್ದವಾಡಿ ನಾಡಿನ ಉಪವಿಭಾಗ 'ಬೇವಿನೂರು ಮೂವತ್ತಾರು' ವ್ಯಾಪ್ತಿಗೆ ಬುಯಾರವೂ ಸೇರಿತ್ತೆಂದು ಶಾಸನಾಧಾರಗಳಿಂದ ತಿಳಿದು ಬರುತ್ತದೆ. ಅಂದರೆ ಸದ್ಯದ ಇಂಡಿ ತಾಲ್ಲೂಕಿನ ಪೂರ್ವ ಭಾಗದ ಹಳ್ಳಿಗಳಾದ ಚಿಕ್ಕನಾದ, ಮಾರಸನಹಳ್ಳಿ ಹಾಗೂ ಬುಯಾರವೂ ಒಳಗೊಂಡಂತೆ ಒಟ್ಟು ಮೂವತ್ತಾರು ಗ್ರಾಮಗಳ ಕಂಪಣ ವಾಗಿತ್ತು.[೨] ಪ್ರಸ್ತುತ ಬುಯಾರ ಗ್ರಾಮ ೧೨-೧೩ನೆಯ ಶತಮಾನಗಳಿಂದ ಹಿಡಿದು ಇಂದಿಗೂ ಬುಯಾರ ಎಂದೇ ಕರೆಯಲ್ಪಡುತ್ತಿದೆ. ಇದು ಜಲಸಂಬಂಧಿ ಸ್ಥಳನಾಮವಾಗಿದೆ. ಪುಯ್ಯಲ್ಚು + ಆರ್ = ಪುಯ್ಯಲ್ಚಾರ್ > ಪುಯ್ಯಲಾರ್ > ಬುಯಲಾರ್> ಬುಯಾರ; ಪುಯ್ಯಲ್ಚು ಅಂದರೆ ಹರಿಯುವ ನೀರಿನ ರಭಸದ ಸದ್ದು ಅಥವಾ ಶಬ್ದ ಮಾಡು ಎಂಬ ಅರ್ಥ ಬರುತ್ತದೆ. ಬುಯಾರದ ಹತ್ತಿರ ಭೀಮಾನದಿಯ ತಿರುವಿನಲ್ಲಿ ಜೋರಾಗಿ ಹರಿಯುವುದರಿಂದ ಪುಯ್ಯಲ್ಚಾರ್ > ಬುಯಲಾರ್> ಬುಯಾರ ಎಂದೂ ಅಥವಾ ಪುಂ (ಗಂಡು) + ಆರ್ (ನದಿ)= ಪುಂಯಾರ್>ಬುಯಾರ್; ಭೀಮಾನದಿ ಗಂಡುನದಿ (ನದ) ಎನ್ನುವ ಅರ್ಥವೂ ಇರುವ ಸಾಧ್ಯತೆಯಿದೆ.

ಕೃಷ್ಣ, ಮಲಪ್ರಭಾ ನದಿಗಳು ಸೇರುವ ನೆಲೆ ಕೂಡಲ ಸಂಗಮ; ತುಂಗಾಭದ್ರಾ ನದಿಗಳ ಸಂಗಮ ನೆಲೆ ಕೂಡಲಿ. ಅದರಂತೆ ಭೀಮಾನದಿಗೆ ಒಂದು ಸಣ್ಣ ಹಳ್ಳ ಸೇರಿದ ಸ್ಥಳವಾದ ಬುಯಾರ, ಈ ಭಾಗದಲ್ಲಿ ಸಂಗಮ ಕ್ಷೇತ್ರವೆನಿಸಿದೆ. ೧೨-೧೩ ನೆಯ ಶತಮಾನದ ಹೊತ್ತಿಗೆ 'ಬುಯಾರ' ಮತ್ತು ಅಲ್ಲಿಯ 'ಕೂಡಲಮಲ್ಲಿಕಾರ್ಜುನದೇವರು' ಪ್ರಸಿದ್ಧವಾಗಿದ್ದವು ಎಂದು ತಿಳಿದು ಬರುತ್ತದೆ.

ಬುಯಾರದಿಂದ ೧೫ ಕಿ.ಮೀ. ದೂರದ ಲಾಳಸಂಗಿ ಗ್ರಾಮದ ಕಂದಾಯ ವ್ಯಾಪ್ತಿಗೊಳಪಡುವ ಗೋಳಸರ ಶ್ರೀಮತಿ ಶಾಂತಾಬಾಯಿ ನಿಂಬರಗಿಯವರ ಹೊಲದಲ್ಲಿ ದೊರೆತಿರುವ ಅಪ್ರಕಟಿತ ಶಾಸನ ಆರು ಸಾಲುಗಳಲ್ಲಿದೆ. ಈ ಶಾಸನಶಿಲೆ ೩೦x ೧೨ ಇಂಚು ಉದ್ದಗಲಗಳನ್ನು ಹೊಂದಿದ್ದು, ಶಿರೋಭಾಗದಲ್ಲಿ ಸೂರ್ಯ, ಲಿಂಗ, ಚಂದ್ರನ ರೇಖಾಚಿತ್ರಗಳನ್ನು ಕಂಡರಿಸಲಾಗಿದೆ. ಶಾಸನಶಿಲೆ ಸೀಮೆಗಲ್ಲಿನಂತಿದ್ದು ಎಲ್ಲ ಆರೂ ಸಾಲುಗಳನ್ನು ಮೇಲಿನ ಅರ್ಧಭಾಗದಲ್ಲಿ ಬರೆಯಲಾಗಿದೆ. ಕೆಳಾರ್ಧ ಭಾಗವನ್ನು ನೆಲದಲ್ಲಿ ನೆಡುವ ಉದ್ದೇಶದಿಂದ ಖಾಲಿ ಬಿಟ್ಟಿರಬಹುದು. ಅಕ್ಷರಗಳನ್ನು ದುಂಡಾಗಿ ಆಳವಾಗಿ ಕೊರೆಯಲಾಗಿದೆ. ಲಿಪಿಯ ದೃಷ್ಟಿಯಿಂದ ಇದು ೧೩ನೇ ಶತಮಾನದ ಪೂರ್ವಾರ್ಧ ಸಮಯದ್ದು ಎಂದು ಹೇಳಬೇಕಾಗುತ್ತದೆ.

**ಶಾಸನದ ಪಾಠ**

೧. ಶ್ರೀಮತು ಬುಯಾರದ
೨. ಕೂಡಲ ಮಲಿಕಾರ್ಜು
೩. ನ ದೇವರಿಗೆ ಲಾಳಸಂ
೪. ಗವಿಗೆಯ ಸಂಕರಸೆ
೫. ಟಿ ಬಿಟ ಮತ್ತರು ಈಪ
೬. ತು ೨೦



* ಶಿಕ್ಷಣ ಸಂಯೋಜಕ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಬೆಂಗಳೂರು ದಕ್ಷಿಣ ವಲಯ-೩, ನಗರ್ತರಪೇಟೆ, ಬೆಂಗಳೂರು-೨

***ಕೂಡಲ ಮಲ್ಲಿಕಾರ್ಜುನ ದೇವರಿಗೆ ದಾನ :*** 'ಬುಯಾರದ ಕೂಡಲ ಮಲ್ಲಿಕಾರ್ಜುನ ದೇವರಿಗೆ ಲಾಳಸಂಗವಿಗೆಯ ಶಂಕರಸೆಟ್ಟಿ ಬಿಟ್ಟ ಮತ್ತರು ೨೦' ಎಂಬುದು ಅಪ್ರಕಟಿತ ಶಾಸನದ ಪ್ರಮುಖ ಅಂಶವಾಗಿದೆ. ಪ್ರಕಟಿತ ಇನ್ನೆರಡು ಶಾಸನಗಳಲ್ಲಿ ಇದೇ ದೇವರಿಗೆ ದಾನ ಬಿಟ್ಟ ಉಲ್ಲೇಖಗಳಿವೆ. ರಾಯಮುರಾರಿ ಸೋವಿದೇವ ವರ್ಷದ ಸರ್ವಧಾರಿ ಸಂವತ್ಸರದಲ್ಲಿ ಮೈಳೆಯ ನಾಯಕನ ಅಧಿಕಾರಿಗಳಾದ ಕೊಪ್ಪರಸ, ಚಿಕ್ಕ ಚೆನ್ನರಸ, ಲಕ್ಕರಸನ ಸೋವರಸ ಮತ್ತು ಸಾಂಬರಸರು ಬಿಟ್ಟ ೬೦ ಮತ್ತರು[೩]; ಅದೇ ಸೋವಿದೇವ ವರ್ಷದ ೪ನೆಯ ಖರ ಸಂವತ್ಸರದ ಫಾಲ್ಗುಣದ ಅಮವಾಸ್ಯೆಯಂದು ಧಾಯ್ಯ, ಮಾಯಸಾಹಣಿ, ರೇಚಗಾವುಂಡ ಮುಖ್ಯವಾಗಿ ಸಮಸ್ತ ಮಾನ್ಯಕಾರರು ಬಿಟ್ಟ ಕೋಲಮತ್ತರು[೪] ೧೨ ಮತ್ತು ಕೇಡದ ಸಿರಿಯಮಸಾಹಣಿ, ಮೈಲಗಾವುಂಡ ರಾಜಗೌಡರು ಮತ್ತು ಪ್ರಜೆಗಳು ಕೂಡಲದೇವರಿಗೆ ಬಂದು ನಂದಾದೀವಿಗೆಗೆ ಸರ್ವನಮಸ್ಯವಾಗಿ ಬಿಟ್ಟ ಮಾಣಿಕೇಶ್ವರದ ಕೋಲಮತ್ತರು[೫] ೬; ಹೀಗೆ ಒಟ್ಟು ೯೮ ಮತ್ತರು ಭೂಮಿ ಬುಯಾರದ ಕೂಡಲ ಮಲ್ಲಿಕಾರ್ಜುನ ದೇವರಿಗೆ ದಾನ ಬಿಡಲ್ಪಟ್ಟಿತ್ತು ಎಂಬುದನ್ನು ಗಮನಿಸಿದಾಗ ಬುಯಾರದ ಸುತ್ತ ಮುತ್ತಲಿನ ಸುಮಾರು ೪೦೦ ಎಕರೆ ಪ್ರದೇಶ ದೇವರ ಧಾರ್ಮಿಕ ಕೈಂಕರ್ಯಕ್ಕೆ ಸೀಮಿತವಾಗಿತ್ತು ಎಂದು ತಿಳಿದುಬರುತ್ತದೆ. ದಾನದ ಇತಿ-ಮಿತಿಯನ್ನು ಲೆಕ್ಕ ಹಾಕಿದಾಗ ಅಧಿಕಾರಿ ವರ್ಗದವರು ೬೦ ಮತ್ತರು, ವರ್ತಕನಾದ ಲಾಳಸಂಗವಿಗೆಯ ಶಂಕರಸೆಟ್ಟಿ ೨೦ ಮತ್ತರು ಭೂಮಿ, ಮಾನ್ಯಕಾರರಾದ ಮಾಯಸಾಹಣಿ, ರೇಚಗಾವುಂಡರು ೧೨ ಕೋಲಮತ್ತರು ಹಾಗೂ ಜನಸಾಮಾನ್ಯರು ೬ ಕೋಲ ಮತ್ತರು ದಾನ ಬಿಟ್ಟಿರುತ್ತಾರೆ. ಸಮಾಜದ ವಿವಿಧ ಸ್ತರಗಳ ಜನರು ತಮ್ಮ ಆರ್ಥಿಕ ಪರಿಸ್ಥಿತಿಗನುಗುಣವಾಗಿ ಸಾಮರ್ಥ್ಯಕ್ಕನುಸಾರ ನೀಡಿರುವುದು ತಿಳಿದುಬರುತ್ತದೆ.

ಮೂವತ್ತಾರುಂಬಾಡವನ್ನಾಳುತ್ತಿದ್ದ ಲಕ್ಷ್ಮೀದೇವ ದಂಡ ನಾಯಕನು ಬುಯ್ಯಾರಕ್ಕೆ ನದೀಸ್ನಾನಕ್ಕಾಗಿ ಬಂದು, ಕೂಡಲ ಅಭಿನವ ಮಲ್ಲಿಕಾರ್ಜುನ ದೇವರನ್ನು ಕಂಡು, ನೆಲುವಿಗೆಯ ಶಿವಯೋಗಿ ಸಾತಯ್ಯನವರ ಶಿಷ್ಯ ಬಸವಯ್ಯನಿಗೆ, ಊರಿನಿಂದ (ಭುಯಾರದಿಂದ) ಪಶ್ಚಿಮ ದಿಕ್ಕಿಗೆ ಬೇವಿನೂರ ದಾರಿಯಲ್ಲಿ ಭೂದಾನ ಬಿಟ್ಟ ಬಗ್ಗೆ ಪ್ರಕಟಿತ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದೆ.[೬] ಆದರೆ ದಾನ ಬಿಟ್ಟ ಭೂಮಿ ಎಷ್ಟು ಎಂಬುದು ಅಸ್ಪಷ್ಟ. ಒಟ್ಟಿನಲ್ಲಿ ಬುಯಾರದ ಕೂಡಲ ಮಲ್ಲಿಕಾರ್ಜುನ ದೇವರ ಪ್ರಭಾವಲಯ ತುಂಬ ವಿಸ್ತಾರವಾಗಿತ್ತು. ಬುಯಾರ ಕ್ಷೇತ್ರ ಶಿವಶರಣರ ನೆಲೆವೀಡಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಬುಯಾರ ಮತ್ತು ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ಭೂಪ್ರಮಾಣವನ್ನು ನಿರ್ಧರಿಸಲು ಮತ್ತರು, ಕೋಲಮತ್ತರು, ಮಾಣಿಕೇಶ್ವರದ ಕೋಲು ಎಂಬ ಅಳತೆಮಾನಗಳು ಅಂದು ಪ್ರಚಲಿತವಿದ್ದ ಬಗ್ಗೆ ತಿಳಿದುಬರುತ್ತದೆ. ಸಾಮಾನ್ಯವಾಗಿ ಒಂದು ಮತ್ತರು ಅಂದರೆ ಮೂರು ಮುಕ್ಕಾಲು ಎಕರೆ ಎಂದು ವಿದ್ವಾಂಸರು ವಿಶ್ಲೇಷಿಸಿರುವರು.[೭]

***ಲಾಳಸಂಗವಿಗೆಯ ಶಂಕರಸೆಟ್ಟಿ :*** ಬುಯಾರದ ಮಲ್ಲಿಕಾರ್ಜುನ ದೇವರಿಗೆ ದಾನ ಬಿಟ್ಟ ಬಗ್ಗೆ ಹೇಳುವ ಅಪ್ರಕಟಿತ ಈ ಶಾಸನ ಬುಯಾರ ಹಾಗೂ ಮಲ್ಲಿಕಾರ್ಜುನ ದೇವರಿಗಿಂತ ಹೆಚ್ಚಾಗಿ 'ಲಾಳಸಂಗವಿಗೆ' ಮತ್ತು 'ಶಂಕರಸೆಟ್ಟಿ' ಯರ ಮೇಲೆ ಹೆಚ್ಚು ಬೆಳಕು ಚೆಲ್ಲುತ್ತದೆ. ಈ ಎರಡು ಹೆಸರುಗಳು ಪ್ರಥಮ ಬಾರಿಗೆ ಉಲ್ಲೇಖವಾಗಿರುವುದು ಇದೇ ಶಾಸನದಲ್ಲಿ. ಲಾಳಸಂಗಿ ಗ್ರಾಮನಾಮದ ಹಿನ್ನೆಲೆಯ ಬಗ್ಗೆ ಯೋಚಿಸಿದರೆ ಅದು ಲಾಳಸಂಗವಿಗೆಯೆಂದೂ, 'ನಾಡಸಂಧಿ ವಿಗ್ರಹಿ' ಎಂಬ ಅಧಿಕಾರಿಯ ವಾಸದ ನೆಲೆಯಲ್ಲವೆಂದು ಸ್ಪಷ್ಟವಾಗುತ್ತದೆ. ವ್ಯಕ್ತಿ ಮಹತ್ವದ ಹಿನ್ನೆಲೆ 'ಸಂಗವಿಗೆ' ಸರಿಯಿದೆ. ಪೂರ್ವಪದ 'ಲಾಳ' ವಿಶೇಷಣದಂತೆ ಕಂಡುಬರುತ್ತದೆ. ಹಾಗಾದರೆ 'ಲಾಳ' ಎಂಬುದು ಏನು? 'ಲಾಳ - ಲಾಟ' ಶಬ್ದಗಳ ಸಂಬಂಧವೇನಾದರೂ ಇರಬಹುದೆ?

ಶಂಕರಸೆಟ್ಟಿಯ ಬಗ್ಗೆ ಹೇಳುವುದಾದರೆ, ಶ್ರೇಷ್ಠಿನ್ ಸಂಸ್ಕೃತ ಪದದ ಕನ್ನಡರೂಪ ಸೆಟ್ಟಿ. ಮೂಲದಲ್ಲಿ ಸೆಟ್ಟಿ ಪ್ರತಿಷ್ಠಾಸೂಚಿ ಯಾಗಿದ್ದು ಕ್ರಮೇಣವಾಗಿ ವಣಿಜ ವೃತ್ತಿಸೂಚಿ ಆಗಿರ ಬೇಕೆನಿಸುತ್ತದೆ.[೮] ಜೀವನೋಪಾಯಕ್ಕಾಗಿ ವ್ಯಾಪಾರ ವೃತ್ತಿಯನ್ನ ವಂಬಿಸಿ, ಸರಕುಗಳನ್ನು ಎತ್ತು, ಕತ್ತೆ, ಕೋಣಗಳ ಮೇಲೆ ಹೇರಿಕೊಂಡು ಅಥವಾ ತಲೆಯ ಮೇಲೆ ಹೊತ್ತೂ ಕೂಡ ವ್ಯಾಪಾರ ಮಾಡುತ್ತಿದ್ದ ಸೆಟ್ಟಿಯರಲ್ಲಿ ಲಾಳಸಂಗವಿಗೆಯ ಶಂಕರಸೆಟ್ಟಿಯೂ ಒಬ್ಬ. ಈತ ಲಾಳಸಂಗಿಯಲ್ಲಿ ವಾಸವಾಗಿದ್ದು ಕೊಂಡು, ಸುಮಾರು ೧೭ ಕಿ.ಮೀ. ದೂರದ ಬುಯಾರಕ್ಕೆ ಸರಕು ಮಾರಲು ಹೋಗುತ್ತಿದ್ದಿರಬಹುದು. ಕೇವಲ ತನ್ನ ವ್ಯಾಪಾರ ಮತ್ತು ವೃತ್ತಿ ಲಾಭದಲ್ಲಿ ಮಗ್ನನಾಗದೆ, ಬುಯಾರದ ಕೂಡಲ ಮಲ್ಲಿಕಾರ್ಜುನ ದೇವರಿಗೆ ೨೦ ಮತ್ತರು ಭೂಮಿ ಬಿಟ್ಟಿರುವ ಅಂಶ ಅವನ ಧಾರ್ಮಿಕ ಭಾವ ಬದುಕನ್ನು ಚಿತ್ರಿಸುತ್ತದೆ.

ಮೊರಟದ ಐಚಿಶೆಟ್ಟಿಯ ತಂದೆ ಶಂಕರಸೆಟ್ಟಿ ಮತ್ತು ಜೈನವರ್ತಕರಲ್ಲಿ ಸೀರೆಯ ಕಾಳಿಸೆಟ್ಟಿಯ ತಂದೆಯ ಹೆಸರೂ ಶಂಕರಸೆಟ್ಟಿ; ಇವರಿಂದ ಭಿನ್ನನಿರುವಂತೆ ತೋರುವ ಲಾಳಸಂಗ ವಿಗೆಯ ಶಂಕರಸೆಟ್ಟಿಯ ಬಗ್ಗೆ ಹೆಚ್ಚಿನ ಶೋಧ ನಡೆಯಬೇಕಾಗಿದೆ. ಆದರೆ ಇಂದು ಲಾಳಸಂಗಿಯಲ್ಲಿ 'ಶೆಟ್ಟಿ' ಎಂಬ ಅಡ್ಡ ಹೆಸರಿನ ಮನೆತನದವರು ಇರುವುದಿಲ್ಲ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ವಿಜಾಪುರ ಜಿಲ್ಲೆ ಗ್ಯಾಜೆಟಿಯರ್.**, (೧೯೯೯), (ಸಂ) ಡಾ. ಆರ್. ಮುನಿಸ್ವಾಮಿ, **ಪುಟ ೫೮.**

೨. ಡಾ. ಕೊಪ್ಪ ಎಸ್. ಕೆ., (೧೯೯೦), **ತರ್ದವಾಡಿ ನಾಡು - ಒಂದು ಅಧ್ಯಯನ,** ಪ್ರತಿಭಾ ಪ್ರಕಾಶನ, ಇಂಡಿ, ಪು-೨೦.

೩. **ಸೌ.ಇ.ಇ. XX** ೧೩೮, ಬುಯಾರ (ಇಂಡಿ ತಾ), ಕ್ರಿ. ಶ. ೧೧೬೨, **ಪುಟ** ೧೭೬.

೪. ಅದೇ, XX ೧೫೩, ಬುಯಾರ, ಕ್ರಿ.ಶ. ೧೧೭೨, **ಪುಟ** ೧೯೫-೧೯೬.

೫. ಅದೇ, ಪು. ೧೯೫-೧೯೬.

೬. ಅದೇ, XX ೧೩೮, ಬುಯಾರ (ಇಂಡಿ-ತಾ), ಕ್ರಿ. ಶ. ೧೧೬೨, ಪು. ೧೭೫.

೭. ರಾಜೇಂದ್ರಪ್ಪ. ಎಸ್., 'ಮತ್ತರ್'ನ ಆಧುನಿಕ ಭೂಪ್ರಮಾಣ ನಿರ್ಧರಿಸಲು ಸಾಧ್ಯವೆ?' **ಇತಿಹಾಸ ದರ್ಶನ** ಸಂ. ೬, ಪುಟ ೧೩೭.

೮. ಹಿರೇಮಠ ಬಿ. ಆರ್., (೧೯೮೬), **ಶಾಸನಗಳಲ್ಲಿ ಕರ್ನಾಟಕದ ವರ್ತಕರು,** ಪ್ರಸಾರಾಂಗ, ಕ.ವಿ.ವಿ. ಧಾರವಾಡ, ಪುಟ-೧೨.



(ಪ್ರಬಂಧ ಮಂಡಿಸಿ, ಲೇಖನ ಸಿದ್ಧಪಡಿಸಲು ಪ್ರೋತ್ಸಾಹ - ಮಾರ್ಗದರ್ಶನ ನೀಡಿದ ಪೂಜ್ಯ ಗುರುಗಳಾದ ಡಾ. ಪಿ.ವಿ. ಕೃಷ್ಣ ಮೂರ್ತಿಯವರಿಗೆ ಕೃತಜ್ಞ)

ಡಾ|| ರಾಜಶ್ರೀ ಕಿಶೋರ*

# ದೇವಸೂಗೂರಿನ ಅಪ್ರಕಟಿತ ಶಾಸನಗಳು

ರಾಯಚೂರು ಜಿಲ್ಲೆಯ ದೇವಸೂಗೂರು ಗ್ರಾಮದಲ್ಲಿ ದೊರೆತ ಅಪ್ರಕಟಿತ ಶಾಸನಗಳೆಲ್ಲಾ ದಾನಶಾಸನಗಳೇ ಆಗಿವೆ. ಈ ದಾನಶಾಸನಗಳು ದೇವಾಲಯಕ್ಕೆ, ಮಠಕ್ಕೆ, ಮಹಾಜನಗಳಿಗೆ, ದೇವಾಲಯದ ಅರ್ಚಕರಿಗೆ, ದೇವರ ಅಂಗಭೋಗಕ್ಕೆ, ರಂಗಭೋಗಕ್ಕೆ, ತ್ರಿಕಾಲ ನೈವೇದ್ಯಕ್ಕೆ, ಊಳಿಗದವರಿಗೆ, ದೇವದಾಸಿಯರಿಗೆ, ಛತ್ರಕ್ಕೆ ಸಂಬಂಧಿಸಿ ಬಿಟ್ಟ ಹಾನಗಳಲ್ಲಿ ಸೇರುತ್ತವೆ.

ದೇವಸೂಗೂರಿನಲ್ಲಿ ಐದು ಶಾಸನಗಳು ದೊರೆತಿದ್ದು ಅವುಗಳ ಶಾಸನಪಾಠ ಹಾಗೂ ವಿವರಣೆ ಮುಂದಿನಂತಿವೆ:

*ಒಂದನೇ ಶಾಸನ ಪಾಠ*

ಕೃಷ್ಣಾನದಿಯ ದಡದ ಮೇಲಿರುವ ಭಿನ್ನವಾದ ಶಿವಲಿಂಗದ ಪಾಣಿಪೀಠದ ಮೇಲಿರುವ ಶಾಸನ

೧ ಚಂದನಕೆರೆ ಗುರುವೃತ್ತಿ ಆಯ। ನೂರು ೧೦ಂದು ಆಯುಗಪ್ಪವರವಗಂತ್ತಿ

೨ ಶ್ರೀ ಮುತ್ತಿನ ವಂಶಿಮಗ। ಕರಿವೀರಯ್ಯನ ಪ್ರಮಥಗಂ ಕೊಟ್ಟ ಮಾನ್ಯ

ಈ ಶಾಸನದಲ್ಲಿ ಮುತ್ತಿನ ವಂಶಸ್ಥ ಹಾಗೂ ಅವನ ಮಗ ಕರಿವೀರಯ್ಯರು ಚಂದನಕೆರೆಗೆ ಗುರುವೃತ್ತಿಯಾಗಿ ಬಿಟ್ಟುದ್ದಾಗಿದೆ. ಈ ವಲಯದಲ್ಲಿ ಚಂದನಕೇರಾ ಗ್ರಾಮ ದೇವದುರ್ಗ ತಾಲೂಕಿಗೆ ಒಂದು ಕಿ.ಮೀ. ಅಂತರದಲ್ಲಿದೆ. ಬಹುಶಃ ಈ ಶಾಸನನೋಕ್ತ ಚಂದನಕೆರೆ ಮತ್ತು ಚಂದನಕೇರಾ ಗ್ರಾಮ ಒಂದೇ ಆಗಿರಬೇಕು. ಚಂದನಕೆರೆಯಿಂದ ಈ ಊರಿಗೆ ಕೆರೆಯ ಹೆಸರು ಬಂದಿರಬೇಕು. ಗುರುವೃತ್ತಿಗಾಗಿ ಬಿಟ್ಟುಕೊಟ್ಟ ಇಬ್ಬರು ವ್ಯಕ್ತಿಗಳು ದೇವಸೂಗೂರಿನವರಾಗಿರಬೇಕು. ಈ ಶಾಸನಗಳು ಲಿಂಗದ ಪಾಣಿವಾಟದ ಮೇಲೆ ಬರೆಯಲಾಗಿದೆ. ಅಂತೆಯೇ ಇದು ಚಂದನಕೆರೆ ಎಂಬ ಊರಿನಿಂದ (ದೇವಸೂಗೂರಿಗೆ) ಸ್ಥಳಾಂತರವಾಗಿರಬಹುದು.

*ಎರಡನೆಯ ಶಾಸನ*

ಶ್ರೀ ಸೂಗೂರೇಶ್ವರ ದೇವಾಲಯದ ಮುಖಮಂಟಪ (ಅರ್ಧಮಂಟಪ) ದ ಬಲಪಾರ್ಶ್ವದ ಗೋಡೆಯ ಮುಂಭಾಗದಲ್ಲಿರುವ ಎರಡು ಶಿಲಾಲೇಖಗಳ ಪಾಠ:



*ಶಿಲಾಲೇಖ ಸಂಖ್ಯೆ - ೧ (೧೮ನೇ ಶ.)*

೧ ....ಸಿದ್ಧಸಿವಾಚಾರ ಸಂಪನ್ನಪದ ವೀರಶೈವ ಸಿದ್ಧ ಭಿಕ್ಷ

೨ ವ್ರಾತಿ ಅಯ್ಯನಮಠ ಕಾರಣಿಕ ಕರ್ತನಾದ ರಾಚೂರು ಸೀಮೆ

೩ ನಾಗಣಚಾರಿ ಕರಿಯಪ್ಪ ಸೂಗೂರು ಸ್ಥಾನಿಕರು ವೀರಣ್ಣ ಮೋಡೆರು.

೪ ಭಾಪ್ರಿ ವಡೆಯರು ಸೂಗೂರು ಸ್ಥಾನಿಕರು ವೀರಣ್ಣ ಮೋಡೆರು.

೫ ಕಲ್ಲೂರ ಸೂತ(ರಿಂದ) ಸೋಮ ಉದ್ದಂನವರು ಸೂಗೂರು ಪ್ರಸ್ಥಾನದ

೬ ಮಾಡಿಯಿದ್ದರು ಅವರಿಗೆ ವೋಪ್ಪಿ [ಸಿ] ಕೊಟ್ಟಂತ ಮಾನ್ಯದಲ್ಲಿ...

೭ ಮನ್ನಿಸಿ ಪ್ರಾಂತಲು ಕೊಟ್ಟಂತದು ಸೂರಿಯ ಚಂದ್ರಾದಿಗಳು ದಾನಕ್ಕೆ ತ

೮ ಪ್ಪಬಾರದು ಯಿದಕ್ಕೆ ತಪ್ಪಿದರೆ ಕಾಸಿಲಿ ಜಂಗಮನನು

೯ ರ ಕೊಂದ ದೋಷಕೆ ಹೋಹರು...

೧೦ . . . . . . . . . . . .

ಈ ಶಾಸನದಲ್ಲಿ ಅನೇಕ ವ್ಯಕ್ತಿಗಳು ಕೂಡಿ ದಾನ ನೀಡಿದ ವಿಷಯ ಕಂಡುಬರುತ್ತದೆ. ಅದರಲ್ಲಿ ಅಯ್ಯನ ಮಠ ಕಾರಣಿಕ ಎಂದಿದೆ. ಇಲ್ಲಿ ಪ್ರಸ್ತುತ ಸೂಗೂರೇಶ್ವರರ ದೇವಸ್ಥಾನದಲ್ಲಿ ಒಂದು ಮಠವಿತ್ತು. ಅದು ರಾಯಚೂರು ಜಿಲ್ಲೆಯ ಗುರುಮಠಕಲ್‌ನ ಮಠಪತಿಗಳೇ ಈ ಮಠದ ಅಧಿಪತಿಯಾಗಿದ್ದರು. ಇತ್ತೀಚೆಗೆ ಈ ಮಠವು ಇಲ್ಲವಾಗಿದೆ. ಸೂಗೂರೇಶ್ವರರ ದೇವಾಲಯದ ಆವರಣದಲ್ಲಿ ಮೊದಲು ಮಠವಿತ್ತೆಂದು ಹೇಳಲಾದ ಸ್ಥಳದಲ್ಲಿ ಮಠದಲ್ಲಿ ಸ್ಥಾಪಿಸುವ ಮಾದರಿಯ ಲಿಂಗ ದೊರೆತಿದೆ. ಈಗ ಕೆಲವು ಮಾರ್ಪಾಟುಗಳಿಂದ ಮಠದ ಅಸ್ತಿತ್ವ ಕಂಡು ಬಾರದಾಗಿದೆ.

ಸಿದ್ಧ ಶಿವಾಚಾರ ಸಂಪನ್ನ ವೀರಶೈವ ಸಿದ್ಧಾಂತದಲ್ಲಿ ಸಿದ್ಧ ಪದವಿಯಿಂದ ಅಲಂಕೃತ ಭಿಕ್ಷಾವ್ರತಿ, ಅಯ್ಯನ ಮಠ ಕಾರಣಿಕ, ರಾಯಚೂರು ಸೀಮೆಯ ಗಣಗಳು, ಆಚಾರವಂತ ಸೂಗೂರು

* ನಂ. ೨೭, ೮ನೇ ಅಡ್ಡರಸ್ತೆ, ಎನ್. ಆರ್. ಕಾಲೋನಿ, ಬೆಂಗಳೂರು - ೫೬೦ ೦೧೯

ಸ್ಥಾನಿಕ ಕರಿಯಪ್ಪ, ವೀರಣ್ಣ ವೊಡೆಯ, ಭಾದ್ರಿ ವೊಡೆಯ, ಸಿರಿಗೆ (ರೆ)ಯ ಒಡೆಯ, ಚೋಳ ವೊಡೆಯ, ಕಲ್ಲೂರು ದೇವಮಕ್ಕಳು, ಸೋಮು ಉದ್ದಂಡ ಮೊದಲಾದವರು ಸೂಗೂರು ಪ್ರಸ್ಥಾನಕ್ಕೆ ಆಗಮಿಸಿದರೆಂದಿದೆ.

*ಮೂರನೇ ಶಾಸನ (೧೮ನೇ ಶ.)*

*ಶಿಲಾಲೇಖ ಸಂಖ್ಯೆ - ೨*

೧ ಸ್ವಸ್ತಿ ಸುಭಮಸ್ತು ಪ್ರಸ್ತಕ
೨ ಬ್ರತಿ ಅಯ್ಯನವರ ಆಜ್ಞಾಧಾರಕರಾದ ರಾಚೂರು ನಾಡಸೀಮೆ
೩ ಯಲಿ ಯಿಡಲೂರು ಸಿದ್ದಯ್ಯ ವಡೇರು ಕೊಟ್ಟ ಮಾನ್ಯ..... (ಸಾಕ್ಷಿ)
೪ ಕೆಂಡದ ಬಸವಂ ಸ್ತಾನದ ಮಾಂ... ಬಳಿವಡೆಯರು
೫ ಭಕ್ತಿ ಅವರಿಗೆ ಪೂರ್ವ ಪದ್ದತಿಯ ಪಡೆದು ಯಿಡಲೂರು ಸಿದ್ದಯ್ಯ ನಡೆಸಿದ ಮಾ ೨೨
೬ ಪೂರ್ವಕೆ ಕೊಟ್ಟ ಕಾಣಿಕೆ ನಡೆದ
೭ . ಲಿಯಿದಕೆ (ನಡುವುದು) ತಪ್ಪಿದರೆ ಶಿವಾಲ್ಯಕೆ
೮ ದ್ರೋಹ ಅಪ್ಪಿದವರು

ಈ ಶಾಸನದಲ್ಲಿರುವ ಬರಹಗಳು ಹದಿನೆಂಟನೆಯ ಶತಮಾನಕ್ಕೆ ಸೇರಿದಂತೆ ಕಂಡು ಬರುತ್ತದೆ. ಇಡಲೂರು ಸಿದ್ದವೊಡೆಯ ಕೊಟ್ಟ ಮಾನ್ಯ೨೨ (ಹೊನ್ನು) ಎಂದಿದೆ. ಅವನು ರಾಯಚೂರು (ರಾಚೂರು) ಸೀಮೆಯವನೇ ಆಗಿದ್ದಾನೆ.

*ನಾಲ್ಕನೇಯ ಶಾಸನನ (೧೮ನೇ. ಶ.)*

ಶ್ರೀ ಸೂಗೂರೇಶ್ವರ ದೇವಾಲಯದ ಉತ್ತರ ಭಾಗದ ಪ್ರವೇಶದ್ವಾರಕ್ಕೆ ಸೇರಿದಂತೆ ನೆಟ್ಟಿರುವ ಒಂದು ಕಲ್ಲುಗಂಬದ ಮೇಲಿರುವ ಶಾಸನ ಪಾಠ.

೧ ವೀರ
೨ ಭದ್ರ
೩ ದೇವ
೪ [ಸ್ವಸ್ತಿ ಶ್ರೀ ಜಯಾ ದ.]
೫ ................
೬ ................
೭ ................
೮ ................
೯ ಮಹಾಮಂಡಲೇಶ್ವರ ಶ್ರೀ
೧೦ ವೀರ ಪ್ರತಾಪ ಪ್ರವು
೧೧ ಡ ದೇವರಾಯ ಮ
೧೨ ಹಾರಾಯರು ಪ್ರಥ
೧೩ ವಿರ (ರಾಜ್ಯಂ)ಗೆ ವೃತ್ತಿ
೧೪ ರಲು......... ಜ....... (ಪ)
೧೫ ತಿ ಪರಸಯನವರ
೧೬ ಮ(ಕ್ಕ)ಳು ಶ್ರೀಮತ್ತು ತ್ರಿ
೧೭ ಯಂಬಕ ಅರಸರು ರಾ
೧೮ ಯರು ಕಟ್ಟಿಸಿದ ರಾಚೂ
೧೯ ರ ಸೀಮೆಯೊಳಗಣ
೨೦ *ನೇ ಸಾಲಿನಿಂದ ೪೨ ಸಾಲುಗಳವರೆಗೆ ಅಕ್ಷರಗಳು ಮಾಸಿವೆ.*
೪೩ ತಮ
೪೪ ವೀರಭದ್ರ

ಈ ಶಾಸನವು ಹದಿನಾಲ್ಕನೇ ಶತಮಾನದ ಆದಿಭಾಗ ವಾಗಿದ್ದು, ವಿಜಯನಗರದ ಪ್ರೌಢದೇವರಾಯ (೧೪೨೪-೪೬) ಕಾಲದ್ದಾಗಿರುತ್ತದೆ. ಈ ಶಾಸನವು ವೀರಭದ್ರನ ಸ್ತುತಿಯಿಂದ ಪ್ರಾರಂಭಗೊಂಡು ವೀರಭದ್ರನ ಸ್ತುತಿಯಿಂದಲೇ ಮುಕ್ತಾಯ ವಾಗುತ್ತದೆ. ಪ್ರಾರಂಭದಲ್ಲಿ ನಾಲ್ಕು ಸಾಲುಗಳಿದ್ದು, ಎಂಟನೇ ಸಾಲಿನವರೆಗೆ ಅಕ್ಷರಗಳು ಮಾಸಿವೆ. ನಂತರ ಒಂಬತ್ತನೆಯ ಸಾಲಿನಿಂದ ಹತ್ತೊಂಬತ್ತನೆಯ ಸಾಲುಗಳವರೆಗೆ ಅಕ್ಷರಗಳಿವೆ. ವೀರಪ್ರೌಢದೇವರಾಯ ರಾಜ್ಯಂಗೈಯುತ್ತಿರಲು ಪರಸಯನವರ ಮಕ್ಕಳು ಶ್ರೀಮತ್ತು ತ್ರಿಯಂಬಕ ಅರಸರು ರಾಯಚೂರು ಸೀಮೆಯೊಳಗೆ ಕಟ್ಟಿಸಿದ ವೀರಭದ್ರ ದೇವಸ್ಥಾನವೆಂದಿದ್ದು, ಮುಂದೆ ಇಪ್ಪತ್ತನೆಯ ಸಾಲಿನಿಂದ ನಲವತ್ತೆರಡನೆಯ ಸಾಲುಗಳವರೆಗೆ ಅಕ್ಷರಗಳು ಮಾಸಿವೆ. ಇದರಿಂದ ಸ್ಪಷ್ಟವಾದ ವಿಚಾರಗಳನ್ನು ನೀಡಲು ಕಷ್ಟವಾಗುತ್ತದೆ. ಇಲ್ಲಿ ವೀರಭದ್ರ ದೇವಾಲಯ ಕಟ್ಟಿಸಿದರೆಂಬಲ್ಲಿ, ಅಲ್ಲದೇ ಈ ವಿಷಯ ವನ್ನೊಳಗೊಂಡ ಶಾಸನ ಈ ದೇವಸ್ಥಾನದಲ್ಲಿ ಸಿಗುವುದರಿಂದ (ಸೂಗೂರೇಶ್ವರರು ವೀರಭದ್ರ ಅವತಾರರು) ಈ ದೇವಾಲಯ ನಾಗರ ಎಲ್ಲಮ್ಮಳ ಶಕ್ತಿಪೀಠವಾಗಿ, ವೀರಭದ್ರಮೂರ್ತಿ ಪ್ರತಿಷ್ಠಾಪಿತವಾದ ಮೇಲೆ ವೀರಭದ್ರ ದೇವಸ್ಥಾನವಾಗಿ, ಈ ಹಿನ್ನೆಲೆಯಲ್ಲಿ ಸೂಗೂರೇಶ್ವರರ ದೇವಸ್ಥಾನವಾಗಿರಬೇಕು.

ದೇವಸೂಗೂರಿನ ಸೂಗೂರೇಶ್ವರರ ದೇವಸ್ಥಾನದಲ್ಲಿ ಕಂಡು ಬರುವ ಮಠವು ಪ್ರೌಢದೇವರಾಯನ ಕಾಲದನ್ವಯ ಸ್ಥಾಪಿತವಾಗಿರಬೇಕು. ವೀರಶೈವರೆ ಅಧಿಕವಿರುವ ಸಂದರ್ಭದಲ್ಲಿ ಅರ್ಚಕವರ್ಗದ ೩೦ಮನೆತನಗಳು ಪಾಳಿಯ ಪ್ರಕಾರ ಪೂಜೆ ಸಲ್ಲಿಸುತ್ತಿದ್ದರು. ಆ ಮಠಕ್ಕೆ ಮಠಪತಿಯನ್ನು ಅಧಿಪತಿಯನ್ನಾಗಿ ಮಾಡಿ ಮಠಗಳು ಕಾರ್ಯನಿರ್ವಹಿಸುತ್ತಿದ್ದವು. ಇವರು ಮಠದ ಪರವಾಗಿ ಸರ್ವಾಂಗೀಣ ಅಭಿವೃದ್ಧಿಗೊಳಿಸಿದರು. ಇಲ್ಲಿ ಧರ್ಮ ಸಂಬಂಧ ಚರ್ಚೆ ಎಂದರೆ ಮುಸ್ಲಿಂ ಧರ್ಮದ ಲಾಡಿ ಸಂಪ್ರದಾಯ, ಸಲಾಮಿ ಹೇಳುವುದು, ಬಂದೇ ನವಾಜ ಹಾಗು ಸೂಗೂರೇಶ್ವರರ ನಡುವೆ ಒಪ್ಪಂದವಾದ ಕಾರಣ ಮಾದಲಿ ನೈವೇದ್ಯ ಇಲ್ಲಿ ನಡೆಯುವುದು ಎನ್ನುವುದಿದೆ.





ಐದನೆಯ ಶಾಸನ

ದೇವಸೂಗೂರಿನ ಮಾಲಿಪಾಟೀಲರ ಹೊಲದ ಬಳಿ ಇರುವ ಶಾಸನ:

೧ ಸ್ವಸ್ತಿ ವರ್ಷ ೯೪೪ನೆಯ ದುಂದು
೨ ಭಿ ಸಂವತ್ಸರದ ಚೈತ್ರ ಶುದ್ಧ (೨) ಬ್ರಹ
೩ ಸ್ಪತಿವಾರಂ ಸಮಸ್ತ ಭುವನಾಶ್ರಯ
೪ ಶ್ರೀ ಪ್ರಿತ್ವಿವಲ್ಲಭ ಮಹಾರಾಜಾಧಿರಾ
೫ ಜ ಪರಮೇಶ್ವರ ಪರಮ ಭಟ್ಟಾರಕ ಸತ್ಯಾ
೬ ಶ್ರಯ ಕುಳತಿಲಕ ಚಾಲುಕ್ಯಾಭರಣ ಶ್ರೀಮ
೭ ಜ್ಜಗದೇಕಮಲ್ಲ ದೇವರ ರಾಜ್ಯ ಪ್ರವರ್ಧಮಾನ
೮ ದಿಮುತ್ತರೋತ್ತರಂ ಸಲ್ಲುತ್ತಮಿರೆ ಸಮಧಿಗ
೯ ತ ಪಂಚ ಮಹಾಶಬ್ದ ಮಹಾಸಾಮಂತ ಮಂ
೧೦ ಡಲೇಶ್ವರಂ ಶ್ರೀಮತ್ ಚಿಕದರ ಚಿಕ್ಕೆ

(ಬಲಭಾಗದಲ್ಲಿ)

೧೧. ಯರಸ ಸಂಕೇ
೧೨ ಸ್ವರ ದೇವರ್ಗೆ
೧೩ ಬಿಟ್ಟ ಕರಿಯ
೧೪ ಕೇಯ್ ಮತ್ತರ್
೧೫ ಹನ್ನೆರಡ (೧೨)
೧೬ ಇದ
೧೭ ನಳಿದೊಂ ಬಾರಣಾ
೧೮ ಸಿಯ ಕವಿಲೆಯಂ
೧೯ ಬ್ರಾಹ್ಮಣರ ನಳಿದೋಂ
೨೦ ಸ್ವದತ್ತಾಂ ಪರಮದತ್ತಂ
೨೧ ವಾಯೋ ಹರೇತಿ
೨೨ ಮಸುಂಧರಾಂ ಷಷ್ಟಿವ
೨೩ ರ್ಷ ಸಹಸ್ರಾಣಿ
೨೪ ವಿಷ್ಠಾಯಾಂ ಜಾ
೨೫ ಯತೇ . ಕ್ರಿಮೀ॥
೨೬ ಇಸ್ಥಾನವ ಪ
೨೭ ಡೆದಂ.. ೪ ಪ್ರದ್ದಿನ
೨೮ ...
೨೯ ಲೋಕೆ ಸಾಮಾನ್ಯೋಯಂ
೩೦ ಧರ್ಮಸೇತು ನ್ರಿಪಣಾಂ ಕಾ
೩೧ ಲೇ ಕಾಲೆ ಪಾಲನೀಯೋಭವದಿ
೩೨ ಸರ್ವಾನ್ಲೇತಾ ಪಾರ್ಥಿವೇನ್ದ್ರಾನ್ ಭೂ

೨೩ ಯೋ ಭೂರ್ಯೋ ಯಾಚತೆ ರಾಮಭದ್ರಃ
೩೪ ಇಂತೀ ಧರ್ಮ ಪಾಲನ ಪ್ರತಿಪಾಳಿ
೩೫ ಸುವುದು ಶ್ರೀ ಮು ತ್ರೈಲೋಕ.....
೩೬ ಮಲ್ಲದೇವ.... ಮನ್ ಶ್ರೀ
೩೭ ಮ . ಅಯ್ಯವರ್ಮ್ಮಯ್ಯ

ಈ ಶಾಸನವು ಇಲ್ಲಿನ ಎಲ್ಲಾ ಶಾಸನಗಳಿಗಿಂತ (ಅಂದರೆ ಕ್ರಿ.ಶ. ೧೦೨೨ನೇ ವರ್ಷದ್ದಾಗಿದ್ದು) ಪುರಾತನವಾಗಿದೆ. ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲನ ಮಹಾಸಾಮಂತ ಚಿಕದರ ಚಿಕ್ಕೆಯರಸನು[೪] ಈ ಊರಿನ ಸಂಕೇಶ್ವರ ದೇವರಿಗೆ ದಾನವಾಗಿ ಹನ್ನೆರಡು ಮತ್ತರು ಕಪ್ಪು ಭೂಮಿಯನ್ನು ದೇವರ ಪೂಜಾದಿಗಳಿಗೆ ಬಿಟ್ಟಿದ್ದನೆಂದು ತಿಳಿಸುತ್ತದೆ. ಸಂಕೇಶ್ವರ ದೇವರ ಬಗ್ಗೆ ಮಾಹಿತಿ ದೊರೆಯುವುದಿಲ್ಲ. ನಾನು ಈ ಶಾಸನ ಸಿಕ್ಕ ಸ್ಥಳವನ್ನು ಸಂದರ್ಶಿಸಿದಾಗ ಅಲ್ಲಿ ಕಂಡು ಬಂದದ್ದು, ದೇವಾಲಯದ ಹಳೆಯ ಸ್ತರಗಳು, ಪ್ರಾಚೀನ ರೂಪದ ಲಿಂಗ ಮತ್ತು ಬಸವ ಮೂರ್ತಿಗಳು ಬಹುಶಃ ಈ ಸ್ಥಳದಲ್ಲಿಯೇ ಸಿಕ್ಕ ಶಾಸನದಲ್ಲಿ ಉಲ್ಲೇಖಿತ ಗೊಂಡಂತೆ ಇದು ಸಂಕೇಶ್ವರ ದೇವಸ್ಥಾನವಾಗಿರಬೇಕು. ಆದರೆ ಎನ್. ಎನ್. ಸ್ವಾಮಿಯವರು ಹೇಳುವಂತೆ ಪ್ರಸ್ತುತದಲ್ಲಿದ್ದ ಸೂಗೂರೇಶ್ವರ ದೇವಸ್ಥಾನವೇ ಇದಾಗಿರಬೇಕೆಂದು ಊಹಿಸಿದ್ದಾರೆ. ಸಂಕೇಶ್ವರ ಎಂಬ ಹೆಸರನ್ನು ಒಳಗೊಂಡ ಶಾಸನ ಸೂಗೂರೇಶ್ವರ ದೇವಸ್ಥಾನದಲ್ಲಿ ಇರಲಾರದನ್ನು ವಿಶೇಷವಾಗಿ ಗಮನಿಸಬೇಕು. ಅಲ್ಲದೆ ಸೂಗೂರೇಶ್ವರ ದೇವಸ್ಥಾನದಲ್ಲಿರುವ ಶಾಸನಗಳಲ್ಲಿ ಸಂಕೇಶ್ವರ ಎಂಬ ಹೆಸರು ಕಂಡು ಬರುವುದಿಲ್ಲ. ಆದ್ದರಿಂದ ಈಗಿರುವ ಸೂಗೂರೇಶ್ವರ ದೇವಸ್ಥಾನ ಸಂಕೇಶ್ವರ ದೇವಸ್ಥಾನ ವಾಗಿರದೇ, ಊರ ಹೊರಗಿರುವ ಅಂದರೆ ಶಾಸನ ಲಿಂಗ ದೇವಸ್ಥಾನದ ಹಳೆಯ ಸ್ತರಗಳು ಕಂಡು ಬರುವ ಈ ಸ್ಥಳವು ಸಂಕೇಶ್ವರ ದೇವಸ್ಥಾನವಾಗಿದೆ. ಈ ದೇವಸ್ಥಾನ ಸಂಕಮ, ಸಂಕಣ್ಣ ಅಥವಾ ಸಂಕಪ್ಪ ಹೆಸರಿನ ವ್ಯಕ್ತಿ ಕಟ್ಟಿಸಿರಬೇಕು. ವ್ಯಕ್ತಿ ಕಟ್ಟಿಸಿದ ಹೆಸರಿಗೆ ಪೂರಕವಾಗಿ ಸಂಕಮೇಶ್ವರ, ಸಂಕೇಶ್ವರ ಆಗಿರಬೇಕು. ಆದರೆ ಇತಿಹಾಸದ ಪುಟ ತಿರುವಿ ಹಾಕಿದಾಗ ಸಂಕಮ ನೆಂಬುವವನು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಬರುತ್ತಾನೆ. ಮೇಲೆ ತಿಳಿಸಿದ ವ್ಯಕ್ತಿಯ ಹೆಸರಿನಿಂದ ಈ ದೇವಾಲಯ ನಿರ್ಮಾಣ ಗೊಂಡಿರಬೇಕು - ಹೀಗೆ ದಾನಶಾಸನಗಳು ದೇವಸೂಗೂರಿ ನಲ್ಲಿದ್ದು, ಅಪ್ರಕಟಿತ ಶಾಸನಗಳಾಗಿ ಕಂಡು ಬರುತ್ತವೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಎಂ. ಎ. ಕಲಬುರ್ಗಿ., (೧೯೭೮), **ಶಾಸನಗಳಲ್ಲಿ ಶಿವಶರಣರು**, ವೀರಶೈವ ಅಧ್ಯಯನ ಸಂಸ್ಥೆ, ಗದಗ
೨. ಡಾ. ಎಂ. ಬಿ. ನೇಗಿನಹಾಳ., (೧೯೮೨), **ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ**, ಕರ್ನಾಟಕ ವಿಶ್ವವಿದ್ಯಾಲಯ
೩. ಡಾ. ಚೆನ್ನಬಸವರಾಜಯ್ಯ ಹಿರೇಮಠ., 'ರಾಯಚೂರು ಜಿಲ್ಲೆಯ ಶಾಸನಗಳು', **ಕನ್ನಡ ಭಾರತಿ** (ತ್ರೈಮಾಸಿಕ), ಪು. ೪೧.
೪. ಡಾ. ಎಚ್. ತಿಪ್ಪೇರುದ್ರಸ್ವಾಮಿ., (೧೯೬೮), **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**
೫. **ಶಾಸನ ಸಂಗ್ರಹ**., (೧೯೭೫), (ಸಂ), ಎ. ಎಂ. ಅಣ್ಣಿಗೇರಿ, ಆರ್. ಶೇಷಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತ್ತು.
೬. ಅಪ್ರಕಟಿತ ಶಾಸನ., ಎ. ಆರ್. ಇ.ಪಿ. ೧೯೯೩, ಎಂ. ಎನ್. ಸ್ವಾಮಿ, ಮೈಸೂರು
೭. ಡಾ. ವಿದ್ಯಾಶಂಕರ್., **ವೀರಶೈವ ಪುರಾಣಗಳು**
೮. **ಕನ್ನಡ ರತ್ನಕೋಶ**., ದ್ವಿತೀಯ ಮುದ್ರಣ, ಕ. ಅ. ಪ್ರಾ ಕರ್ನಾಟಕ ಸರ್ಕಾರ, ಬೆಂ. ಪು. ೨೭೫
೯. ಅಯ್ಯಪ್ಪಯ್ಯ ಹುಡಾ., (೧೯೮೨), **ಸೂಗೂರೇಶ್ವರ ದರ್ಶನ**, ಪು. ೪೦, ಪು. ೪

ಸಾಸಲು ಜೆ. ವಿಶ್ವನಾಥ್ *
ಡಾ|| ಎಂ. ಜಿ. ಮಂಜುನಾಥ್*

# ಎರಡು (ಮಾರಿಗೊಂಡನಹಳ್ಳಿ ಮತ್ತು ಕುದೂರು) ಅಪ್ರಕಟಿತ ಶಾಸನಗಳು

## ಮೊದಲ ಶಾಸನ

ದಾವಣಗೆರೆ ಜಿಲ್ಲೆ ಹೊನ್ನಾಳಿ ತಾಲ್ಲೋಕಿನ ಮಾರಿಗೊಂಡನ ಹಳ್ಳಿಯ ವೀರಭದ್ರೇಶ್ವರ ದೇವಾಲಯದ ಮುಂದೆ ಇರುವ ಪಾಣೀ ಪೀಠದ ಮೇಲಿನ ಬರಹದ, ಈ ಕನ್ನಡ ಶಾಸನದಲ್ಲಿ ಎರಡು ಸಾಲುಗಳಿದ್ದು ಸಾಂಸ್ಕೃತಿಕ ಹಾಗೂ ಧಾರ್ಮಿಕ ದೃಷ್ಟಿಯಿಂದ ಮಹತ್ವದ ಅಂಶಗಳು ಕಾಣಬರುತ್ತದೆ.

*ಶಾಸನ ಪಾಠ*

*೧ ಸ್ವಸ್ತಿಶ್ರೀ ಮೂಲ ಸಂಘದ ಕೊಣ್ಡ*

*೨ ಕೊನ್ದಾನ್ವಯದ ಪುಸ್ತಕಗಚ್ಛದ ನಖರದ ಧರ್ಮ*

ಪ್ರಸ್ತುತ ಶಾಸನ ದೊರೆತಿರುವ ವೀರಭದ್ರೇಶ್ವರ ದೇವಾಲಯವು ವಾಸ್ತು ಶಿಲ್ಪದ ದೃಷ್ಟಿಯಿಂದ ತೀರಾ ಇತ್ತೀಚಿನದ್ದು ಆಗಿದೆ. ಆದರೂ ದೇವಾಲಯದ ಒಳಭಾಗವನ್ನು ಸೂಕ್ಷ್ಮವಾಗಿ ನೋಡಿದರೆ ಅದು ಮೂಲತಃ ಹೊಯ್ಸಳರ ಕಾಲದೆನ್ನುವುದು ಖಚಿತವಾಗುತ್ತದೆ. ದೇವಾಲಯದ ಒಳಭಾಗದಲ್ಲಿ ೪ ಅಡಿ ಎತ್ತರದ ವೀರಭದ್ರನ ಶಿಲ್ಪವಿದೆ. ಗರ್ಭಗೃಹದ ಬಾಗಿಲುವಾಡ ನವರಂಗದ ಕಂಬಗಳನ್ನು ಹೊಯ್ಸಳರ ಕಾಲದ್ದೆಂದು ಗುರ್ತಿಸಬಹುದು, ಕಟ್ಟಡವು ಮಾತ್ರ ಇಟ್ಟಿಗೆ ಸೀಮೆಂಟಿನಿಂದ ನಿರ್ಮಿಸಲ್ಪಟ್ಟಿರುವುದು ಇತ್ತೀಚೆಗೆ ಮಾತ್ರ.

ಈ ದೇವಾಲಯದ ಹಳೆಯ ವಾಸ್ತು ಶಿಲ್ಪಗಳೆಲ್ಲ ಹಾಳಾಗಿ ಮುರಿದು ದೇವಾಲಯದ ಮುಂದಿನ ತಿಪ್ಪೆಯಲ್ಲಿ ಅನೇಕ ಅವಶೇಷಗಳು ದೇವಾಲಯದ ಸುತ್ತ ಮುತ್ತ ಬಿದ್ದಿವೆ. ಅವುಗಳಲ್ಲಿ ಬೋದಿಗೆ, ಕಂಭ ಮತ್ತಿತರ ವಸ್ತುಗಳೂ ಇವೆ. ಆ ಅವಶೇಷಗಳ ರಾಶಿಯೊಳಗೆ ದೊರೆತ ಒಂದು ಪಾಣೀಪೀಠದ ಮೇಲೆ ಪ್ರಸ್ತುತ ಶಾಸನ ದೊರೆಯಿತು.

ಇದೊಂದು ಜೈನ ಶಾಸನ. ಮೂಲಸಂಘದ ಕೊಂಡ ಕೊನ್ದಾನ್ವಯದ ಪುಸ್ತಕಗಚ್ಛಕ್ಕೆ ಸೇರಿದ ವ್ಯಾಪಾರಿಗಳು ಶಿಲ್ಪವೊಂದನ್ನು ಮಾಡಿಸಿ ದೇವಾಲಯಕ್ಕೆ ಕೊಟ್ಟಿದ್ದನ್ನು ಶಾಸನ ದಾಖಲಿಸಿದೆ.

ಈ ಶಾಸನ ದೊರೆತುದರಿಂದ ಮಾತ್ರ ಈ ವೀರಭದ್ರ ದೇವಾಲಯ ಹಿಂದೊಮ್ಮೆ ಜೈನ ಬಸದಿಯಾಗಿದ್ದುದು ತಿಳಿದು ಬರುತ್ತದೆ. ವೀರಶೈವ ಧರ್ಮದ ಉಚ್ಛ್ರಾಯ ಕಾಲಘಟ್ಟದಲ್ಲಿ ಅಲ್ಲಿ ಅಲ್ಪ ಸಂಖ್ಯಾತರಾಗಿದ್ದ ಜೈನ ಬಸದಿಯನ್ನು ಶೈವರು ಆಕ್ರಮಿಸಿ ಕೊಂಡಿರಬಹುದೆಂದು ಹೇಳಬಹುದು. ಹೊಯ್ಸಳರ ಅವನತಿಯ ನಂತರ ಕರ್ನಾಟಕದಲ್ಲಿ ಜೈನ ಧರ್ಮಕ್ಕೆ ಹೆಚ್ಚಿನ ಆಶ್ರಯ ದೊರೆಯದಿದ್ದುದು ಈಗ ಇತಿಹಾಸ.

ಪ್ರಸ್ತುತ ದೇವಾಲಯದಲ್ಲಿರುವ ವೀರಭದ್ರನ ಶಿಲ್ಪವು ಕಣಶಿಲೆಯದಾಗಿದ್ದು ವಿಜಯನಗರಶೈಲಿಯ ಲಕ್ಷಣಗಳನ್ನು ಹೊಂದಿದೆ. ಆದ್ದರಿಂದ ಪ್ರಾಯಶಃ ಈ ಜೈನ ಬಸದಿಯು ವಿಜಯನಗರ ಕಾಲಘಟ್ಟದಲ್ಲಿ ವೀರಭದ್ರ ದೇವಾಲಯವಾಗಿ ಪರಿವರ್ತಿತವಾಗಿರಬಹುದೆಂದು ಹೇಳಬಹುದು.

ಪ್ರಸ್ತುತ ಶಾಸನಗಳಲ್ಲಿ ಕಾಲದ ಉಲ್ಲೇಖವಿಲ್ಲದಿದ್ದರೂ ಲಿಪಿಸ್ವರೂಪದ ದೃಷ್ಟಿಯಿಂದ ಕ್ರಿ.ಶ. ೧೨ನೇ ಶತಮಾನದ್ದೆಂದು ಹೇಳಬಹುದು.



* ನಂ. ೮೭೦, ೪ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು - ೫೬೦ ೦೪೦
* ಕನ್ನಡ ಅಧ್ಯಾಪಕರು, ಸ್ನಾತಕೋತ್ತರ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಕೋಲಾರ

ಧಾರ್ಮಿಕ ಸಮನ್ವಯದ ವಿಶಾಲ ಮನೋಭಾವನೆಯಿಂದ ಜೈನರೇಕೆ ವೀರಭದ್ರೇಶ್ವರ ಶಿಲ್ಪವನ್ನು ಮಾಡಿಸಿ ದಾನ ಮಾಡಿದ್ದಾಗಿರಬಾರದೆಂದು ತರ್ಕಿಸಲು ಅನುಮಾನಗಳಿದ್ದರೂ ಆಧಾರಗಳು ಅದಕ್ಕೆ ಸಾಲದು. ಕರ್ನಾಟಕದಲ್ಲಿನ ಧಾರ್ಮಿಕ ಘರ್ಷಣೆಗಳು ಇಲ್ಲಿ ಸಂಭವಿಸಿರುವುದನ್ನು ನಾವು ತಳ್ಳಿ ಹಾಕುವಂತಿಲ್ಲ. ಯಾಕೆಂದರೆ ಬಾಗಿಲುವಾಡದ ಲಲಾಟದಲ್ಲಿ ಪದ್ಮಾಸನದಲ್ಲಿ ಕುಳಿತ ಜಿನಶಿಲ್ಪ ಹಾಗೂ ಜೈನ ಶಾಸನ. ಇದೊಂದು ಜೈನ ಬಸದಿಯಾಗಿತ್ತೆಂಬುದಕ್ಕೆ ಖಚಿತ ಆಧಾರ ಗಳಾಗಿವೆ.

*ಎರಡನೆಯ ಶಾಸನ*

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಕುದೂರಿನ ಲಕ್ಷ್ಮೀದೇವಾಲಯದ ಹೊರ ಭಿತ್ತಿಯ ಶಾಸನ.

*ಶಾಸನ ಪಾಠ*

ಈ ಶಾಸನದಲ್ಲಿ ೩ ಸಾಲುಗಳ ಪಾಠವಿದೆ.

೧ *ಅಂಗೀರಸ ಸಂವತ್ಸರದ ಮಾರ್ಗಸಿರ ಬಹುಳ ೧೨*

೨ *ಶ್ರೀಮತು ಚಿಕ್ಕದೇವರಾಯರ ದಿವಸದಲ್ಲಿ ಮಲ್ಲಣ್ಣ*

೩ *ಗಲುಡ ಕಟ್ಟಿಸಿದ್ದು ಮಾಡಿದಾತ ಬಳ್ಳಾಪುಕರ ವೀರಣ್ಣ*

ಕುದೂರಿನ ಲಕ್ಷ್ಮಿ ದೇವಾಲಯವು ಕರ್ನಾಟಕದ ಅಪೂರ್ವ ದೇವಾಲಯಗಳಲ್ಲಿ ಒಂದು ಎಂದು ಹೇಳಬಹುದು. ಹಾಸನ ಜಿಲ್ಲೆಯ ದೊಡ್ಡಗದ್ದವಳ್ಳಿಯ ಲಕ್ಷ್ಮಿಯನ್ನು ಬಿಟ್ಟರೆ ಇಡೀ ಕರ್ನಾಟಕದಲ್ಲಿ ಇದೊಂದೇ ಲಕ್ಷ್ಮೀದೇವಾಲಯವಿರುವುದು.

ದೊಡ್ಡಗದ್ದವಳ್ಳಿಯ ಲಕ್ಷ್ಮೀದೇವಾಲಯ ಕ್ರಿ. ಶ. ಸು. ೧೧೧೬ರ ಹೊಯ್ಸಳ ವಿಷ್ಣುವರ್ಧನನ ಕಾಲದ್ದು. ಆದರೆ ಪ್ರಸ್ತುತ . ಕುದೂರಿನ ದೇವಾಲಯದ ಮೂಲ ವಿಗ್ರಹವು ಕ್ರಿ.ಶ. ಸು ೯ನೆಯ ಶತಮಾನದ್ದಾಗಿರಬಹುದೆಂದು ನಮ್ಮ ಅಭಿಪ್ರಾಯ.

ಪ್ರಸ್ತುತ ಶಾಸನದ ಪ್ರಕಾರ ಚಿಕ್ಕದೇವರಾಯ ಒಡೆಯರ್ ಅವರ ಕಾಲದಲ್ಲಿ ಈ ದೇವಾಲಯದ ಕಟ್ಟಡ ಪುನರ್ನಿರ್ಮಾಣ ವಾಗಿರಬಹುದೆಂದು ತೋರುತ್ತದೆ.

ದೇವಾಲಯದ ಗರ್ಭಗುಡಿಯಲ್ಲಿ ಪಂಚಲೋಹದ ಲಕ್ಷ್ಮಿಯ ಸುಖಾಸೀನ ಭಂಗಿಯ ವಿಗ್ರಹ ಇದೆ. ಈ ವಿಗ್ರಹದ ಪಾದಮೂಲದಲ್ಲಿ ಶ್ರೀಚಕ್ರವಿದೆ. ಈ ಚಕ್ರವಿರುವ ಕರ್ನಾಟಕದ ಇತರ ಶಕ್ತಿ ದೇವಾಲಯಗಳೆಂದರೆ ಕೊಲ್ಲೂರಿನ ಮೂಕಾಂಬಿಕೆ, ಶೃಂಗೇರಿಯ ಶಾರದೆ ಹಾಗೂ ಕೋಲಾರದ ಕೋಲಾರಮ್ಮ ದೇವಾಲಯಗಳು ಮಾತ್ರ.

ಪ್ರಸಕ್ತ ಲಕ್ಷ್ಮಿ ಶಿಲ್ಪದ ಲಕ್ಷಣಗಳನ್ನು ನೋಡಿದರೆ ಇದೂ ಸಹ ಮೇಲ್ಕಂಡ ಮೂರೂ ದೇವಾಲಯಗಳಲ್ಲಿನ ಶಿಲ್ಪಗಳ ಕಾಲಕ್ಕೆ ಸೇರುತ್ತದೆಂದು ಹೇಳಬಹುದು.



ಮುನಿನಗರ ಮಹಾದೇವಯ್ಯ*

# ಮುನಿನಗರದ ಅಪ್ರಕಟಿತ ಶಾಸನ ಮತ್ತು ಪ್ರಾಚೀನ ಅವಶೇಷಗಳು



ಮುನಿನಗರವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕನಕಪುರ ತಾಲ್ಲೂಕಿನ ಹಾರೋಹಳ್ಳಿ ಹೋಬಳಿಗೆ ಸೇರಿದ್ದು, ಬೆಂಗಳೂರಿನಿಂದ ದಕ್ಷಿಣಕ್ಕೆ ಸುಮಾರು ೩೫ ಕಿ.ಮೀಟರ್ ದೂರದಲ್ಲಿದೆ. ಹಿಂದೆ ಇದಕ್ಕೆ ಕಾರೆಗೊಡ್ಡಿ, ಮಾರಿಗುಳ್ಳಟ್ಟಿ, ಗುಳ್ಳಹಟ್ಟಿ ಕಾವಲ್ ಎಂಬ ಹೆಸರುಗಳಿದ್ದು, ಈಗ ಮುನಿನಗರ ವೆಂಬ ಹೆಸರಿನಿಂದ ಪ್ರಚಲಿತದಲ್ಲಿದೆ. ಅಲ್ಲಿ ದೊರೆತಿರುವ ಈ ಅಪ್ರಕಟಿತ ಶಾಸನವು ಹಳ್ಳಿಯ ಜನರಿಂದ 'ಬಸವನ ಗುಡಿ ಬಯಲು' ಎಂದು ಕರೆಸಿಕೊಳ್ಳುವ ಹೊಲಗಳ ಮಧ್ಯದಲ್ಲಿದೆ.

*ಶಾಸನದ ಪಾಠ*

೧. ಂ ಶ್ರೀ ಮತು ಬಾ

೨. ವ ಸಂವಛ್ಸರದ ಸ್ರವಣ ಸುದ

೩. ೫ ರಲೂ ಯಲಹಂಕನಾಡ ಪ್ರ

೪. ಬು ಯಿಂಮಡಿ ಕೆಂಪೆಗೌಡ

೫. ರೂ ಪಚೆಂನಯನ ಮಟದ

೬. ಗುರುಗೆ ದಾನವಾಗಿ ಸೊಳೆಪು

೭. ರ ಕೊಟರು

ಈ ಶಾಸನವು ಒಟ್ಟು ಏಳು ಸಾಲುಗಳಿಂದ ಕೂಡಿದ್ದು, ಮೊದಲನೆಯ ಸಾಲಿನ ಅಕ್ಷರಗಳು ದಪ್ಪವಾಗಿಯೂ, ಅಗಲವಾಗಿಯೂ ಇವೆ. ಉಳಿದ ಆರು ಸಾಲುಗಳ ಅಕ್ಷರಗಳು ಒಂದೇ ಸಮನಾಗಿವೆ. ಗ್ರಾನೈಟ್ ಶಿಲೆಯ ಒರಟು ಕಲ್ಲಿನ ಮೇಲೆ ಈ ಶಾಸನವನ್ನು ಕೆತ್ತಲಾಗಿದೆ. ಶಾಸನದ ಲಿಪಿಯ ಮೇಲ್ಭಾಗದಲ್ಲಿ ಸೂರ್ಯ, ಚಂದ್ರ, ಶಿವಲಿಂಗದ ಚಿತ್ರಗಳಿವೆ. ಶಾಸನದ ಕೆಲವು ಅಕ್ಷರಗಳು ತ್ರುಟಿತವಾಗಿವೆ.

ಈ ಶಾಸನದಿಂದ ಯಲಹಂಕನಾಡ ಪ್ರಭು ಇಮ್ಮಡಿ ಕೆಂಪೇಗೌಡನು ಪಚ್ಚನ್ನಯ್ಯನ ಮಟದ ಗುರುವಿಗೆ ಸೊಳೆಪುರ ಗ್ರಾಮವನ್ನು ದಾನವಾಗಿ ಕೊಟ್ಟಿರುವ ಅಂಶ ಸ್ಪಷ್ಟವಾಗುತ್ತದೆ. ಎರಡನೇ ಕೆಂಪೇಗೌಡ ಕ್ರಿ.ಶ. ೧೫೭೮-೧೬೩೮ ರವರೆಗೆ ಆಳಿದವನು.[೧] ಇವನು ಮಾಗಡಿ ಮತ್ತು ಸಾವನದುರ್ಗವನ್ನು ವಶಪಡಿಸಿಕೊಂಡು ಕೋಟೆಗಳನ್ನು ಕಟ್ಟಿಸಿರುವುದನ್ನು ಕಾಣಬಹುದಾಗಿದೆ. ಶಾಸನದಲ್ಲಿ ಶ್ರಾವಣ ಶುದ್ಧ ಎಂದು ಬರುವುದರಿಂದ ಕ್ರಿ.ಶ. ೧೬೩೪-೩೫ಕ್ಕೆ ಹೊಂದಿಕೊಳ್ಳುತ್ತದೆ ಎಂದು ಹೇಳಬಹುದು. ಮಠಕ್ಕೆ ದಾನವಾಗಿ ಬಿಟ್ಟಿದ್ದ ಎರಡು ಎಕರೆ ಜಮೀನು ಈಗಲೂ ಸಹ ಹಾಗೆಯೇ ಉಳಿದುಕೊಂಡು ಬಂದಿರುವುದನ್ನು ಕಾಣಬಹುದು.

ಶಾಸನದ ಪಕ್ಕದಲ್ಲಿಯೇ ಒಂದು ಹಳೆಯ ದೇಗುಲವಿದ್ದು, ಅದು ಈಗ ಸಂಪೂರ್ಣ ಹಾಳಾಗಿದ್ದು, ಅದರ ಕಂಬಗಳನ್ನು ಮಾತ್ರ ನೋಡಬಹುದು. ಈ ದೇವಸ್ಥಾನದಲ್ಲಿದ್ದ ಒಂದು ಲಿಂಗವನ್ನು ಗ್ರಾಮಸ್ಥರೊಬ್ಬರು ತಂದು ಮನೆಯಲ್ಲಿಟ್ಟು ಕೊಂಡಿದ್ದರಿಂದ ಅವರಿಗೆ ಕಾಯಿಲೆ ಬಂತೆಂದು, ನಂತರ ಅದನ್ನು ಅವರು ಅಲ್ಲಿಯೇ ತಂದು ಇಟ್ಟಿದ್ದರಿಂದ ಅವರಿಗೆ ಕಾಯಿಲೆ ವಾಸಿಯಾಯಿತ್ತೆಂದು ಗ್ರಾಮಸ್ಥರು ಹೇಳುತ್ತಾರೆ. ಆದರೆ ಈಗ ಅಲ್ಲಿ ಯಾವುದೇ ಲಿಂಗ ಇರುವುದಿಲ್ಲ.

* ಸಂಶೋಧನಾ ವಿದ್ಯಾರ್ಥಿ, ಕನ್ನಡ ಅಧ್ಯಯನ ಕೇಂದ್ರ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ, ೫೬೦ ೦೫೬

ಹಾಗೆಯೇ ಶಾಸನವಿರುವ ಸ್ಥಳದಿಂದ ಸುಮಾರು ಅರ್ಧ ಕಿ.ಮೀ. ದೂರದಲ್ಲಿ ಬಹಳ ಪುರಾತನವಾದ ಒಂದು ಕಲ್ಯಾಣಿ ಇದೆ. ಇದು ಬಹಳ ಸುಂದರವಾಗಿದ್ದು, ನೀರು ಸದಾ ಈ ಕಲ್ಯಾಣಿಯಲ್ಲಿರುತ್ತದೆ. ಜೊತೆಗೆ ಶಾಸನ ಸ್ಥಳದಿಂದ ಸುಮಾರು



೪ ಕಿ.ಮೀ. ದೂರದಲ್ಲಿ ರಾಗಿಹಳ್ಳಿ ಬೆಟ್ಟವೆಂದು ಕರೆಯುವ ದೊಡ್ಡ ಬೆಟ್ಟವಿದೆ. ಈ ಬೆಟ್ಟದ ಮೇಲೆ ಸಮತಟ್ಟಾದ ಜಾಗವಿದ್ದು, ಭದ್ರವಾದ ಮತ್ತು ಸುಂದರವಾದ ಕೋಟೆ ಇದೆ. ಇದು ಈಗಲೂ ಸುಸ್ಥಿತಿಯಲ್ಲಿದ್ದು, 'ಕೆಂಪೇಗೌಡನ ಕೋಟೆ' ಎಂದೇ ಖ್ಯಾತಿಯನ್ನು ಪಡೆದಿದೆ.

ಈ ಮೇಲಿನ ಅಂಶಗಳಿಂದ ಮತ್ತು ಶಾಸನಾಧಾರದಿಂದ ಇಮ್ಮಡಿ ಕೆಂಪೇಗೌಡನ ಆಳ್ವಿಕೆಗೆ ಕನಕಪುರದ ಗಡಿಭಾಗದ ಪ್ರದೇಶಗಳೂ ಸಹ ಒಳಪಟ್ಟಿದ್ದನ್ನು ಸ್ಪಷ್ಟವಾಗಿ ಸಾದರಪಡಿಸುತ್ತವೆ. ಶಾಸನದಲ್ಲಿ ಗುರು, ಪಚ್ಚಣ್ಣಯ್ಯನ ಮಠದ ಪ್ರಸ್ತಾಪ ಬರುವುದರಿಂದ ಯಲಹಂಕನಾಡ ಪ್ರಭು ಇಮ್ಮಡಿ ಕೆಂಪೇಗೌಡನು ಗ್ರಾಮವೊಂದನ್ನು ದಾನವಾಗಿ ಮಠಕ್ಕೆ ಕೊಟ್ಟ ವಿಷಯವಿದೆ. ಆದರೆ ಈ ಮಠವು ಯಾವ ಧರ್ಮದ್ದೆಂದು ಅಸ್ಪಷ್ಟವಿದ್ದರೂ ವೀರಶೈವ ದಾಸೋಹ *(ಪಚ್ಚಯಿಸು=ಪಾಕವಿಡು ಎಂಬರ್ಥದಲ್ಲಿ)* ಮಠವಾಗಿದ್ದಿರಬಹುದೆಂದು ಊಹಿಸಬಹುದಾಗಿದೆ. ಈ ಶಾಸನವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ ೯ ಹಾಗೂ ಅನುಬಂಧದ ಸಂಪುಟಗಳಲ್ಲಿಯೂ ಪ್ರಕಟವಾಗಿಲ್ಲ.



**ಬೃಹತ್ ಶಿಲಾಯುಗದ ಸಮಾಧಿಗಳು**

ಮುನಿನಗರ ಗ್ರಾಮದ ಮತ್ತೊಂದು ವಿಶೇಷವೆಂದರೆ ಗುಳ್ಳಹಟ್ಟಿಕಾವಲ್‌ಗೆ ಹೋಗುವ ರಸ್ತೆಯ ಬಲಭಾಗದಲ್ಲಿ ಸುಮಾರು ೩೫ ಬೃಹತ್ ಶಿಲಾಯುಗದ ಸಮಾಧಿಗಳನ್ನು ಕಾಣಬಹುದು. ಹೆಚ್ಚಿನ ಶಿಲಾ ಗೋರಿಗಳು ಗ್ರಾಮಸ್ಥರಿಂದ ನಿಧಿ ಇರಬಹುದೆಂಬ ಉದ್ದೇಶದಿಂದ ಹಾಳಾಗಿವೆ. ಈ ಸಮಾಧಿಯ ಒಳಗೆ ಕಪ್ಪು ಬಣ್ಣದ ಮಡಕೆಗಳು, ಕುಡಿಕೆಗಳು ಸಿಕ್ಕಿದ್ದು, ಇವು ಗ್ರಾಮಸ್ಥರ ಬಳಿ ಇದೆ. ಇಲ್ಲಿನ ಹೆಚ್ಚಿನ ಸಮಾಧಿಗಳು ೪'×೪' ಚ. ಅಡಿಗಳ ಉದ್ದ, ಅಗಲವಾಗಿದ್ದು, ಪಕ್ಕದ ಕಲ್ಲು ಚಪ್ಪಡಿಗಳು ಅರ್ಧ ಅಡಿ ಗಾತ್ರವುಳ್ಳವಾಗಿವೆ. ಮುಚ್ಚಳದ ಕಲ್ಲುಗಳು ಅರ್ಧ ಅಡಿಗಿಂತಲೂ ದಪ್ಪವಾಗಿವೆ.

ಸ್ಥಳೀಯರು ಈ ಸಮಾಧಿಗಳನ್ನು **ಪಾಂಡವರ ಗುಡಿ**ಗಳೆಂದು ಕರೆಯುತ್ತಾರೆ. ಸಾಮಾನ್ಯವಾಗಿ ಪೂರ್ವಾಭಿಮುಖ ಕಿಂಡಿಗಳುಳ್ಳ ಈ ಪ್ರಾಗ್ಯೆತಿಹಾಸಿಕ ಬೃಹತ್ ಶಿಲಾಸಮಾಧಿಗಳು ಹೆಚ್ಚಿನ ಸಂಖ್ಯೆಯಲ್ಲಿವೆ. ಕೆಲವು ಸಮಾಧಿಗಳ ಮೇಲೆ ಸಣ್ಣ ಸಣ್ಣ ಕಲ್ಲುಗಳ ಗುಡ್ಡೆಗಳಿರುವುದನ್ನು ಕಾಣಬಹುದು. ಇದಲ್ಲದೆ ಭೂಮಿಯ ಮೇಲ್ಭಾಗದಲ್ಲಿ ಕಲ್ಲುಗಳನ್ನಿಟ್ಟು, ಆ ಕಲ್ಲುಗಳ ಮೇಲೆ ಚಪ್ಪಡಿ ಕಲ್ಲನ್ನು ಇಟ್ಟಿರುವುದು ಕಂಡುಬರುತ್ತದೆ. ಈ ಸಮಾಧಿಗಳ ಸಮುಚ್ಚಯದ ಪಕ್ಕದಲ್ಲಿ ಶ್ರೀ ಮುನೇಶ್ವರ ಎಂಬ ಹಳೆಯ ಕಾಲದ ದೇವಸ್ಥಾನವಿದೆ. ಈ ಸ್ವಾಮಿಗೆ ಪ್ರತಿವರ್ಷವೂ ಗ್ರಾಮಸ್ಥರು ಹಬ್ಬವನ್ನು ಆಚರಿಸುತ್ತಾರೆ. ಜೊತೆಗೆ ಇಲ್ಲಿಯ ವಿಶೇಷವೆಂದರೆ ದಲಿತರು ಪೂಜಾರಿಗಳಾಗಿರುವುದು.



(ನನ್ನೊಟ್ಟಿಗೆ ಕ್ಷೇತ್ರಕಾರ್ಯದಲ್ಲಿ ಪಾಲ್ಗೊಂಡು ಶಾಸನ ಪಾಠವನ್ನು ಓದಲು ಎಲ್ಲಾ ರೀತಿಯ ಸಹಕಾರವನ್ನು ನೀಡಿದಂತಹ ನಾಡಿನ ಇತಿಹಾಸತಜ್ಞರೂ, ನನ್ನ ನೆಚ್ಚಿನ ಗುರುಗಳೂ, ನನ್ನಲ್ಲಿ ಶಾಸನದ ಅಭಿರುಚಿಯನ್ನು ಹೆಚ್ಚಿಸುತ್ತಿರುವ ಪ್ರೊ|| ಎಂ. ಜಿ. ನಾಗರಾಜ್ ಅವರಿಗೆ ಹೃದಯಪೂರ್ವಕ ಧನ್ಯವಾದಗಳು; ಕ್ಷೇತ್ರಕಾರ್ಯದ ಸಮಯದಲ್ಲಿ ಇಡೀ ದಿನ ನನ್ನೊಂದಿಗಿದ್ದು ಸಹಕರಿಸಿದ ಸಹೋದರ ಸಾವಿತ್ರಿ ಎಂ. ನಾಗರಾಜ್ ಅವರಿಗೂ ಮತ್ತು ಚಂದ್ರು ಅವರಿಗೂ ನನ್ನ ನಮನಗಳು).

## ಆಧಾರ ಗ್ರಂಥಸೂಚಿ

೧. ಡಾ. ಸೂರ್ಯನಾಥ್ ಕಾಮತ್., ಕರ್ನಾಟಕ ಇತಿಹಾಸ, ಪು. ೫೪

ಡಾ|| ಕೆಳದಿ ವೆಂಕಟೇಶ ಜೋಯಿಸ *

# ಶಿವತತ್ತ್ವರತ್ನಾಕರ ಬರೆದ ದಿನಾಂಕ ಉಕ್ತ ಅಪೂರ್ವ ದಾನಶಾಸನ ಪ್ರತಿ

ಭಾರತೀಯ ಸಂಸ್ಕೃತಿಯನ್ನು ಅಭ್ಯಾಸ ಮಾಡುವುದಕ್ಕೆ ನಮಗೆ ಹತ್ತು ಹಲವು ಆಕರಗಳು ಲಭ್ಯವಿದೆ. ಅವುಗಳಲ್ಲಿ ಸಂಸ್ಕೃತ ಕೋಶಗಳೂ ಒಂದು. ಇದರ ಬಳಕೆ ಆಗಿರುವುದು ಬಹಳ ಕಡಿಮೆ. ಚಾಲುಕ್ಯ ಸೋಮೇಶ್ವರನ **ಮಾನಸೋಲ್ಲಾಸ** ಮತ್ತು ಕೆಳದಿ ಬಸವಪ್ಪನಾಯಕನ **ಶಿವತತ್ತ್ವರತ್ನಾಕರ** ಎಂಬೆರಡು ವಿಶ್ವಕೋಶಗಳು ನಮ್ಮ ಸಂಸ್ಕೃತಿಯನ್ನು ಅರಿಯುವುದಕ್ಕೆ ವಿಶೇಷ ಆಕರಗಳಾಗಿವೆ.

ಶಿವತತ್ತ್ವರತ್ನಾಕರವು ಕೆಳದಿ ಬಸಪ್ಪನಾಯಕನ ಕೃತಿ. ಇವನ ಕಾಲ ಸುಮಾರು ೧೬೬೮-೧೭೧೫. ಕೆಳದಿ ನೃಪವಿಜಯದಲ್ಲಿ ಕೆಳದಿ ಬಸಪ್ಪನಾಯಕನು ಒಳ್ಳೆಯ ರಾಜಕಾರಣಿ, ಜ್ಞಾನಿ, ಆಧ್ಯಾತ್ಮ ತತ್ವಗಳ ಸಾಧಕ ಆಗಿದ್ದನೆಂಬುದನ್ನು ತಿಳಿಸಲಾಗಿದೆ. ಚಾರಿತ್ರಿಕವಾಗಿ ಬಸಪ್ಪನಾಯಕ ಕೆಳದಿವಂಶದ ೧೪ನೇ ಅರಸ. ಸೋಮಶೇಖರನಿಗೆ ಮಕ್ಕಳಿಲ್ಲದೆ ನಿಧನನಾದಾಗ ಅವನ ರಾಣಿ ಕೆಳದಿ ಚೆನ್ನಮ್ಮಾಜಿ ಕ್ರಿ.ಶ. ೧೬೭೨ರಲ್ಲಿ ಪಟ್ಟವೇರಿ ಅನಂತರ ದತ್ತು ತೆಗೆದುಕೊಳ್ಳುವ ಬಗ್ಗೆ ಗುರು, ಹಿರಿಯರಲ್ಲಿ ಯೋಚಿಸಿ ಅದರಂತೆ ನಂಬೆಣ್ಣಶೆಟ್ಟರ ಮೊಮ್ಮಗ, ಮರಿಯಪ್ಪಶೆಟ್ಟರ ಮಗನಾದ ಬಸವಪ್ಪನನ್ನು ದತ್ತು ತೆಗೆದುಕೊಂಡಳು. ಸೋಮಶೇಖರನಾಯಕನ ಅಣ್ಣನ ಹೆಂಡತಿ ಸಿದ್ದಮ್ಮಾಜಿ ಹಾಗೂ ಮರಿಯಪ್ಪಶೆಟ್ಟರ ಹೆಂಡತಿ ಗೌರಮ್ಮ ಅಕ್ಕ ತಂಗಿಯರು. ಆದ್ದರಿಂದ ಸಿದ್ದಮ್ಮ ಭದ್ರಪ್ಪನಿಗೆ ವಾವೆಯಲ್ಲಿ ಇವನು ಮಗ. ಇದರಿಂದ ಭದ್ರಪ್ಪನಾಯಕನ ತಮ್ಮ ಸೋಮಶೇಖರ ನಾಯಕನಿಗೂ ವಾವೆಯಲ್ಲಿ ಮಗನಾದಂತಾಗುತ್ತದೆ. ಆದ್ದರಿಂದ ಕ್ರಿ.ಶ. ೧೬೭೩ ರಲ್ಲಿ ಇವನನ್ನು ದತ್ತು ತೆಗೆದುಕೊಂಡಳು. ಬಸಪ್ಪನಿಗೆ ಉತ್ತಮವಾದ ಶಿಕ್ಷಣವನ್ನು ಕೊಡಿಸಿದಳು. ೨೫ ವರ್ಷ ಆಡಳಿತ ನಡೆಸಿ ನಿಧನಳಾದ ಚೆನ್ನಮ್ಮಾಜಿಯ ನಂತರ ಕ್ರಿ.ಶ. ೧೬೭೦ರಲ್ಲಿ ನಗರದ ಅರಮನೆಯಲ್ಲಿ ಇವನಿಗೆ ಪಟ್ಟವಾಯಿತು. ಇವನು ಮರಾಟ, ಮೈಸೂರು, ಪೋರ್ಚುಗೀಸರು, ಮಲೆಯಾಳಿಗಳೊಡನೆ ಯುದ್ಧವನ್ನು ನಡಸಬೇಕಾಗಿ ಬಂದಿತು.[೧] ಧಾರ್ಮಿಕನಾಗಿಯೂ ಜನಮನವನ್ನು ಗೆದ್ದಿದ್ದನು. ಇವನಿಗೆ ಹಲವು ಬಿರುದು ಬಾವಲಿಗಳು ಲಭ್ಯವಾಗಿದ್ದವು. ಅವುಗಳಲ್ಲಿ **ಸೂರಿನಿಕರ ಕಲ್ಪದ್ರುಮ** ಎಂಬುದು ಪ್ರಮುಖವಾದುದು. ಇವನ ಕಾಲದಲ್ಲಿ ಕನ್ನಡ, ಸಂಸ್ಕೃತ ಸಾಹಿತ್ಯಕ್ಕೆ ವಿಶೇಷ ಆಶ್ರಯ ದೊರೆಯಿತು. ಇವನೇ ಸ್ವತಃ ವಿದ್ವಾಂಸನೂ ಆಗಿದ್ದನು. ಕೆಳದಿ ಕಾಲದಲ್ಲಿ ಮೂವರು ಅರಸರು ಸೇರಿದಂತೆ ಒಟ್ಟು ಹದಿನಾರು ಜನ ಸುಮಾರು ೩೦ಕ್ಕೂ ಹೆಚ್ಚು ಸಂಸ್ಕೃತ ಕೃತಿಗಳನ್ನು ರಚಿಸಿದ್ದಾರೆ. ವಿಜಯನಗರದ ಅವನತಿಯ ನಂತರ ಕೆಳದಿಗೆ ವಲಸೆ ಬಂದ ವಿದ್ವಾಂಸರಿಗೆ ಆಶ್ರಯ ದೊರೆತಿತ್ತು. ಅಂತಹವರಲ್ಲಿ ಪ್ರಮುಖ ಭಟ್ಟೋಜಿ ದೀಕ್ಷಿತ.

ಕೆಳದಿ ಕಾಲದ ಸಂಸ್ಕೃತ ಸಾಹಿತ್ಯ, ಬಸಪ್ಪನಾಯಕನ ಜೀವನ ಸಾಧನೆ ಇತ್ಯಾದಿಗಳ ಬಗ್ಗೆ ಈಗಾಗಲೇ ವಿದ್ವಾಂಸರುಗಳಿಂದ ಸಾಕಷ್ಟು ಲೇಖನಗಳು ಬಂದಿರುವುದರಿಂದ ಆ ಬಗ್ಗೆ ಇಲ್ಲಿ ನಾನು ಚರ್ಚಿಸಹೋಗುತ್ತಿಲ್ಲ. ಇತ್ತೀಚೆಗೆ ಶಿವಮೊಗ್ಗದ ಅಡಿಕೆ ಮಂಡಿ ಸಾಹುಕಾರ ಶ್ರೀ ಎನ್. ನಾಗರಾಜರಾವ್, ಕಾಸರವಳ್ಳಿ ಇವರಲ್ಲಿ ಲಭಿಸಿದ ಶಿವತತ್ತ್ವರತ್ನಾಕರ ಬರೆದು ಮುಗಿಸಿದ ಸಂದರ್ಭದಲ್ಲಿ ಕೊಟ್ಟ ದಾನಶಾಸನ ಕುರಿತಂತಿರುವ ಪ್ರತಿಯ ಆಧಾರದಿಂದ ಇಲ್ಲಿ ಚರ್ಚಿಸಲು ಪ್ರಯತ್ನಿಸಿದ್ದೇನೆ.[೧] ಶಿವತತ್ತ್ವ ರತ್ನಾಕರವನ್ನು ಕ್ರಿ.ಶ. ೧೭೦೯ರಲ್ಲಿ ಮುಗಿಸಿರುವ ಬಗ್ಗೆ ಉಲ್ಲೇಖವಿದೆ. ಬಸಪ್ಪ ನಾಯಕನು ತನ್ನ ಕೃತಿಯ ಕೊನೆಯಲ್ಲಿ,[೨]

> ಶ್ರೀ ವೀರಭದ್ರ ಕರುಣಾಸಮುಪಾರ್ಜಿತ ಶ್ರೀಸಾಮ್ರಾಜ್ಯವೈಭವ ಪರಾಕ್ರಮಕೀರ್ತಿಭಾಜಾ। ಸೌರಾಷ್ಟ್ರತೌಲವ ಸಕೇರಲಮಲ್ಲ ರಾಷ್ಟ್ರ ತ್ರೈಗರ್ತದೇಶಪರಿಪಾಲನದಕ್ಷಿಣೇನ|| ೧|| ಪರಯಡವಮುರಾರಿ ಕೋಟಿ ಕೋಲಾಹಲೇನ ಪ್ರವಿಚಲಿತ ವಿಶುದ್ಧಾದ್ವೈತ ಸಿದ್ಧಾಂತ ಭೂಮ್ನಾ। ಅಸಿಯುಗಲಭೃತಾಂ ಚ ವೈರಿ ಸಪ್ತಾಂಗಲಕ್ಷ್ಮೀ ಹರಪರಿತ ಪಟ್ಟೋದ್ಯತ್ಯೇತನಶ್ರೀಯುತೇನ||೨|| ಚೌಡಪ್ಪ ನಾಯಕ ಸಮುನ್ಮಿಷತಾನ್ವವಾಯದುಗ್ಧಾಬ್ಧಿವೃದ್ಧಿಕರಕೈರವ ಬಾಂಧವೇನ। ಏಕಾಂಗವೀರ ರಣರಂಗವಿಹಾರಧೀರಮೋನೇಜ ಪಶ್ಚಿಮಸರಸ್ಪ ದಧೀಶ್ವರೇಣ||೩|| ಸ್ವಾಭೀಷ್ಟದಾಯಿಕೆಲದೀಸ್ಥಿತ ವೀರಭದ್ರಮುದ್ರಾ ಬಲೇನಪರಿಪಾಲಯತಾ ಧರಿತ್ರೀಮ್। ರಾಜಾಧಿರಾಜ ಕೆಲದಿ ಬಸವಕ್ಷಿತೀಂದ್ರ ರತ್ನೇನ ಸಂವಿರಚಿತೇನ ಕೃತಿಃ ಪ್ರಪೂರ್ಣಾ||೪||

ರಾಜಾಧಿರಾಜನಾದ ಕೆಳದಿ ಬಸವನೆಂಬ ಭೂಪತಿ ಶ್ರೇಷ್ಠನಿಂದ ವಿರಚಿಸಿದ ಕೃತಿಯು ಸಂಪೂರ್ಣವಾಗಿದೆ. ಆತನಾದರೊ ಶ್ರೀವೀರಭದ್ರನ ಕರುಣೆಯಿಂದ ಸಂಪಾದಿಸಲ್ಪಟ್ಟ ಸಿರಿ-ಸಾಮ್ರಾಜ್ಯ-ವೈಭವ-ಪರಾಕ್ರಮಗಳ ಕೀರ್ತಿಯನ್ನು ಹೊಂದಿರತಕ್ಕವನು. ಸೌರಾಷ್ಟ್ರ, ತಾಳವ, ಇತ್ಯಾದಿ ದೇಶಗಳನ್ನು ಪರಿಶೀಲಿಸುವುದರಲ್ಲಿ ಸಮರ್ಥನಾದವನು. ಅವನು ಪರಯಡವ

* ಕೆಳದಿ ಮ್ಯೂಸಿಯಂ, ಕೆಳದಿ, ಶಿವಮೊಗ್ಗ ಜಿಲ್ಲೆ

ಹಾಗು ಮುರಾರಿ ಪಕ್ಷಗಳ ಕೋಲಾಹಲದಿಂದ ಹೊಮ್ಮಿದ ವಿಶುದ್ಧಾದ್ವೈತ ಸಿದ್ಧಾಂತದ ನೆಲೆಯುಳ್ಳವನು. ಕೆಳದಿಯಲ್ಲಿಯ ವೀರಭದ್ರನ ಮುದ್ರೆಯ ಬಲದಿಂದ ಭೂಮಿಯನ್ನು ಆಳುತ್ತಿರುವವನು.

*ಶ್ರೀಮತ್ಯುನ್ನತ ಶಾಲಿವಾಹನಶಕೇ ಚಂದ್ರಾಗ್ನ್ಯತಕ್ಷ್ಮಾಮಿತೇ ವರ್ಷೇ ವಿಶ್ರುತ ಸರ್ವಧಾರಿಣಿ ತಥಾ ಮಾಸೇ ನಭಸ್ಯಾಹ್ವಯೇ॥ ವಾರೇ ನಿರ್ಜರ ವೈರಿಣಾವಾಪಿ ಗುರೋಃ ಪೌರ್ಣಮಾಸೀದಿನೇ ಗ್ರಂಥೋಯಂ ಪರಿಪೂರ್ಣತಾ ಮವಹತ ಪ್ರಖ್ಯಾತಸಾರಾರ್ಥ ಯುಕ್॥*

*ಅನುತ್ತರಗಭೀರಿಮಾಬಹುತರಂಗಕಲ್ಲೋಲವಾನ್ ಉದಿತ್ವರ ಕಲಾಶ್ರಯೋ ಮಹಿತರತ್ನ ಲಕ್ಷ್ಮಾನ್ವಿತಃ।*

*ಅಯಂ ಜನಿತಧೀಸುಧಃ ಸ ಶಿವತತ್ವರತ್ನಾಕರಃ ಕ್ಷಿತೌ ವಿಜಯತಾಂ ಚಿರಂ ಕೃತಿವರೋಖಿಲಾಶ್ಚರ್ಯಕೃತ್॥*

*ಶಕ್ತ ಸ್ತೋತುಂ ನ ಭವೇತ್ಪರ್ಯೈರ್ಯಃ ಆದೇಯತಾಮಪ್ಯಖಿಲಸ್ಯ ದತ್ತೇಃ। ಸ ಏವ ಭೂಯಃ ಶಿವತತ್ತ್ವರತ್ನಾಕರಸ್ಸತಾಂ ಕೌತುಕ ಮಾತನೋತು॥*

ಪ್ರಖ್ಯಾತವಾದ ಸಾರಾರ್ಥವನ್ನು ಹೊಂದಿರುವ ಈ ಗ್ರಂಥವು ಶಾ.ಶ. ೧೬೩೧ನೆಯ ಪ್ರಸಿದ್ಧವಾದ ಸರ್ವಧಾರೀ ಸಂವತ್ಸರದ ಶ್ರಾವಣಮಾಸ ಶುಕ್ರವಾರ ಪೌರ್ಣಮಿಯಂದು ಪರಿಪೂರ್ಣ ಗೊಂಡಿತು. ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುವ ಈ ಶ್ರೇಷ್ಠಕೃತಿಯಾದ ಶಿವತತ್ತ್ವರತ್ನಾಕರವು ಚಿರಕಾಲ ಭೂಮಿಯಲ್ಲಿ ಬೆಳಗಲೀ. ಮೀರಿಸಲಾಗದ ಗಾಂಭೀರ್ಯವುಳ್ಳ ಬಹುತರಂಗಗಳ ಕಲ್ಲೋಲಗಳನ್ನು ಇದು ಹೊಂದಿದೆ... ಎಂಬ ಮಾತುಗಳು ಶಿವತತ್ವ ರತ್ನಾಕರವು ಶಾಲಿವಾಹನ ಶಕ ೧೬೩೧ನೇ ಸರ್ವಧಾರಿ ಸಂವತ್ಸರದಲ್ಲಿ ಅಂದರೆ ಕ್ರಿ.ಶ. ೧೭೦೯ರಲ್ಲಿ ಮುಗಿಸಲ್ಪಟ್ಟಿ ರುವುದಾಗಿ ತಿಳಿದುಬರುತ್ತದೆ.[೪]

ಈಗ ದೊರೆತಿರುವ ಹಳೇ ಕನ್ನಡದಲ್ಲಿ ಬರೆದಿರುವ ದಾಖಲೆಯು ಶಾಲಿವಾಹನ ಶಕ ೧೬೪೬ ಅಂದರೆ ಕ್ರಿ. ಶ. ೧೭೨೪ರದ್ದಾಗಿದೆ.[೫] ಇದು ಹೇರೂರ ಗವಿ ಚೆನ್ನವೀರದೇವರ ಶಿಷ್ಯ ಅನ್ನದಾನಿ ದೇವರಿಗೆ ಭಾರದ್ವಾಜ ಗೋತ್ರದ ಅಪಸ್ತಂಭ ಸೂತ್ರದ ಯಜುಃ ಶಾಖೆಯ ರುದ್ರನಾರಾಯಣ ಶಾಸ್ತ್ರಿಗಳ ಪೌತ್ರ ನೀಲಲೋಹಿತ ದೀಕ್ಷಿತರ ಪುತ್ರ ನಾರಾಯಣ ಶಾಸ್ತ್ರಿಗಳು ಬರೆಸಿಕೊಟ್ಟ ಶಾಸನ ಇದಾಗಿದೆ. ಈ ಆಸ್ತಿಯು ಕೆಳದಿ ಬಸಪ್ಪನಾಯಕರವರು ಶಿವತತ್ವರತ್ನಾಕರ ಗ್ರಂಥ ಬರೆದು ಮುಗಿಸಿದ ಪೂಜಾ ಕಾಲದಲ್ಲಿ ಶಿವಾರ್ಪಿತವಾಗಿ ಬಂದಂತಹ ಸ್ವಾಸ್ತೆಯ ಒಳಗೆ ಕ್ರಯಕ್ಕೆ ಕೊಟ್ಟದ್ದಾಗಿದೆ. ಹಕ್ಕುದಾರನು (ಅವನ ಹೆಸರು ತಿಳಿದು ಬರುವುದಿಲ್ಲ) ರುದ್ರನಾರಾಯಣಶಾಸ್ತ್ರಿಗಳಿಗೆ ಕ್ರಯವಾಗಿ ಸ್ವಾಸ್ತೆ ನೀಡಿದ್ದು ಈತನು ಹೇರೂರ ಗವಿ ಚೆನ್ನವೀರದೇವರಿಗೆ ವಿಕ್ರಯ ಮಾಡಿದ ದಾಖಲೆ ಇದಾಗಿದೆ. ಈ ದಾಖಲೆಯಲ್ಲಿ ಸೂಚಿತ ವಾಗಿರುವ ರುದ್ರನಾರಾಯಣಶಾಸ್ತ್ರಿ[೬], ಚೆನ್ನವೀರದೇವ,[೭] ನೀಲಲೋಹಿತ ದೀಕ್ಷಿತ[೮], ನಾರಾಯಣಶಾಸ್ತ್ರಿ[೯], ಇವರುಗಳ ಹೆಸರುಗಳು ಕೆಳದಿ ಅರಸರ ಇತರ ಶಾಸನಗಳಲ್ಲಿಯೂ ಉಲ್ಲೇಖಿತ ವಾಗಿವೆ.

ಒಂದು ಗ್ರಂಥ ಪೂರ್ಣಗೊಂಡ ಸಂದರ್ಭದಲ್ಲಿ ವಿದ್ವಾಂಸರು ಗಳನ್ನು ಒಂದು ಕಡೆ ಸೇರಿಸಿ ಪೂರ್ಣಗೊಂಡ ಗ್ರಂಥದ ಕುರಿತು ಚರ್ಚಿಸಿ ಅನಂತರ ಗ್ರಂಥಪೂರ್ಣಗೊಂಡದ್ದಕ್ಕಾಗಿ ವಿದ್ವಾಂಸರು ಗಳನ್ನು ಗೌರವಿಸುವಂತಹ ಸಾಂಸ್ಕೃತಿಕ ಮಹತ್ವವನ್ನು ಈ ದಾಖಲೆ ತಿಳಿಸುತ್ತದೆ. ಇಂತಹ ಇನ್ನೂ ಹಲವಾರು ದಾಖಲೆಗಳು ಪ್ರಕಟವಾಗಬೇಕಿದ್ದು ಅವು ಪ್ರಕಟವಾದರೆ ಇನ್ನು ಹೆಚ್ಚು ಅಂಶಗಳನ್ನು ಹೊರಗೆಡಹಲು ಸಾಧ್ಯವಾಗುತ್ತದೆ.

*೧ ನಮಸ್ತುಂಗಾ॥ ಸ್ವಸ್ತಿ ಶ್ರೀ ಜಯಾ[ಭ್ಯು] (x) ದಯ ಶಾಲಿವಾಹನ ಶಕ ವರುಷ*
*೨ ೧೬೪೬ನೆಯ ಕ್ರೋಧಿ ಸಂ। ರದ ಮಾಘ ಶು (x) ಲ್ಲೂ ಹೆರೂರ್‍ರ ಗವಿಚಂನವಿರ್‍ರದೆವ*
*೩ ರ ಶಿಶ್ಯರಾದ ಅಂನದಾನಿ ದೆವರ್‍ರಿಗೆ॥ ಭಾರದ್ವಾಜಗೋತ್ರದ ಆಪಸ್ತಂ*
*೪ ಭ ಸೂತ್ರದ ಯಜುಃಶಾಖೆಯ ರುದ್ರನಾರಾಯಣ ಶಾಸ್ತ್ರಿಗಳ ಪಉತ್ರರಾದ ನೀಲ*
*೫ ಲೋಹಿತ್ತ ದಿಕ್ಷಿತ್ತರ ಪುತ್ರರಾದ ನಾರ್‍ರಾಯಣ ಶಾಸ್ತ್ರಿಗಳೂ, ಬರ್‍ರಶಿಕೊಟ ಸ್ವಾಸ್ಥೆ*
*೬ ಭೂಮಿಕ್ರಯಪಟಿಕಮವೆಂತ್ತೆಂದರ್‍ರೆ। ಶ್ರೀಮತ್ಕೆಳದಿ ಬಸವಪ್ಪನಾಯಕ್ಕೆಯ*
*೭ ನವರ್‍ರು ತ್ತಾಉ ಮಾಡ್ಸಿದ ಶಿವತತ್ವರತ್ನಾಕರ್‍ರದ ಗ್ರಂಥ ಸಂಪೂರ್ನವಾದ ಪೂ।*
*೮ ಜಾ ಕಾಲದಲ್ಲು ಶಿವಾರ್ಪಿತ್ತವಾಗಿ ಪಾಲ್ಸಿಕೊಂಡ ಸ್ವಾಸ್ಥೆ ವಳಗೆ ಕ್ರಯಕ್ಕೆ ಕೊಟ*
*೯ ದು ಹೊಕಳಿ ಶಿಮೆ ಕಉಲುವಾನಿ ಗ್ರಾಮದ ವಳಗಣ ಮೊಟನ ಕೊಡ್ಲಿ ಗ್ರಾಮ ೧ ಕ್ಕೆ*
*೧೦ ಗದೆ ಬಿಜವರ್ಿ ೩೦ ೩೦ ಮೂವತ್ತು ಖಂಡಗ ಬಿಜವರ್ಿಗೆ ಸಲುವ ರೆಖೆ ಶಿಸ್ತು*
*೧೧ ಗ ೧೩॥೧॥೦ ಅಕ್ಷರದಲು ಯಿದೆ ಹದಿಮೂರ್‍ರು ವರ್‍ರಹಾಂನ್ನು ಆರ್‍ರು ಹಣ*
*೧೨ ಆದದ ಸ್ವಾಸ್ಥೆ ಭೂಮಿಗೆ ತತ್ಕಾಲೋಚಿತ ಮದ್ಯಸ್ತ ಉಭಯವಾದ ಸಂಪ್ರತ್ತಿ ಪಂ*
*೧೩ ನ ಲಕ್ಷಣ ಲಕ್ಷಿತವಾಗಿ ಕಟದ ಕ್ರಯದ್ರವ್ಯ (ವಳ್ಳಿತ)೦ । ಗ ೧೩೬।।೦ ನೂರು ಮೂ*
*೧೪ ವತ್ತಾರು ವರ್‍ರೆ ವರ್‍ರಹಾಂನ್ನು ಸದ್ಯ ಪರ್ಿಛೆದವಾಗಿ ತಾರ್‍ರ ಏನ ಉಳಿಯದ ರ್ಿತ್ತಿ ತ್ತೆ*
*೧೫ ಗದುಕೊಂಡು। ಹೆರೂರ ಗವಿ ಚಂನವಿರ್‍ರದೆವರ್‍ರ ಶಿಶ್ಯರಾದ ಅಂನದಾನಿ ದೆವರ್ಿಗೇ*
*೧೬ ಭಾರದ್ವಾಜಗೋತ್ರದ ಆಪಸ್ತಂಭ ಸೂತ್ರದ ಯಜುಃಶಾಖೆಯ। ರುದ್ರನಾರಾಯಣ*
*೧೭ ಶಾಸ್ತ್ರಿಗಳ ಪಉತ್ರರಾದ ನೀಲಲೊಹಿತ್ತ ದಿಕ್ಷಿತರ್‍ರ ಪುತ್ರರಾದ ನಾರ್‍ರಾಯಣ ಶಾಸ್ತ್ರಿಗಳೂ*
*೧೮ ಸ್ತ್ರಿಪುತ್ರಗ್ನಾತ್ರಿ ದಾಯಾದ್ಯನೆರ್‍ರೆ ಸಾವಂತ್ತಾನ್ನು ಮತ್ತದಿಂ ಸ್ವರುಚಾವದಂಬಿಟ್ಟು ನಿ*

೧೯ ಮಗೆ ಕ್ರಯಕ್ಕೆ ಕೊಟೆವಾಗಿ ಯೀ ಹದಿಮೂರು ಆರು ಹಣಪಡದ ಸ್ವಾಸ್ಥೆಯೂ
೨೦ ಮಿಗೆ ಸಲುವ ಚತುಃಶಿಮೆವಳಗುಳ ನಿಧಿ ನಿಕ್ಷೆಪ ಜಲ ಪಾಷಾಣ ಅಕ್ಷಿಣಿ ಆಗಾ
೨೧ ಮಿ ಸಿದ ಸಾಧ್ಯಂಗಳೆಂಬ ಅಷ್ಟಭೋಗತ್ತೆಜಃ ಸಾಂಮ್ಯವಂನ್ನು ಪೂರ್ವಮರ್ರಿಯಾ
೨೨ ದೆಯಲ್ಲು ಆಗಮಾಡ್ಸಿಕೊಂಡು ನಿಲು ನಿಂಮ ಶಿಶ್ಯ ಪಾರಂಪರ್ಯವಾಗಿ ಆಚಂ
೨೩ ದ್ರಾರ್ಕಸ್ಥಾಯಿಗಳಾಗಿ ದಾನಾದಿ ಕ್ರಯ ಪರಿವರ್ತನೆಗಳಿಗೆ ಸಲಿಶಿಕೊಂಡು ಸು
೨೪ ಖದಿಂ ಅನ್ನುಭವಿಶಿಯಂದು ಭಾರದ್ವಾಜಗೋತ್ರದ ಆಪಸ್ತಂಭ ಸೂತ್ರ ಹಿಂಭಾಗಃ
೨೫ ದ ಯಜುಃಶಾಖೆಯ ರುದ್ರನಾರಾಯಣ ಶಾಸ್ತ್ರಿಗಳ ಪಉತ್ರರಾದ ನೀಲಲೊಹಿತ್ತ
೨೬ ದಿಕ್ಷಿತ್ತರ ಪುತ್ರರಾದ ನಾರಾಯ(x) (x)ಸ್ತ್ರಿಗಳು। ಹೆರೂರ ಗವಿಚಂನ ವಿಶ್ರದೆವರ್‍ರ
೨೭ ಶಿಶ್ಯರಾದ ಅಂನದಾನಿ ದೆವರ್ರಿಗೆ। (x)(x) ಸ್ವಾಸ್ಥೆ ಕ್ರಯಪಟೆ ಯಿದಕ್ಕೆ ಸಾ
೨೮ ಕ್ಷಿಗಳು। ಆದಿತ್ಯಚಂದ್ರಾ॥ ನಠ್ರ ಸಾಕ್ಷಿಗಳು। ಶ್ರೀನಿವಾಸ ಶಾಸ್ತ್ರಿಗಳೂ। ವಿರಂಬಾ
೨೯ ಪುರ್‍ರದ ಅಗ್ರಹಾರದ ಸುಬಾವಧಾನಿಗಳು। ಮುಳುವಾಗಲ ಸೂರಿ ನಾರಾಯ
೩೦ ಣಭಟರು / ವೆಂಗಟ ಸೊಮಯಾಜಿಗಳು / ಕರ್ಜುವಿನ ವಪಿತ / ನಾರಾಯ
೩೧ ಣ ಶಾಸ್ತ್ರಿಗಳ ಬರ್‍ರಹಾ! ನಾಗರದಲ್ಲೂ ಸಾಕ್ಷಿಗಳ ವಪಿತ್ತ ಶ್ರೀನಿವಾಸಾ ಚಾರ್ಯ
೩೨ ಸಾಕ್ಷಿ ವೆಂಕಟಸೊಮಯಾಜಿ ಸಾಕ್ಷಿ ಸೂರ್ರಿನಾರಾಯಣ ಭಟ ಸಾಕ್ಷಿ ಸು
೩೩ ಬಾವಧಾನಿ ಸಾಕ್ಷಿ / ನಾಗರ್ರಿ ಬರ್‍ರಹಾದಲು / ಯಿದೆ ವಾಲೆಪಟೆ
೩೪ ಬರ್‍ರದಾತ್ರ / ಮುಳುವಾಗಲ ಸೆ / ದೆವಪ್ಪಾ/



(ನನ್ನ ಸಂಶೋಧನೆಗೆ ಈ ಅಪೂರ್ವ ಮಾಹಿತಿ ನೀಡಿದ ಶ್ರೀ ನಾಗರಾಜರಾವ್ ಕಾಸರವಳ್ಳಿ ಹಾಗೂ ಶ್ರೀ ರಾಮಸ್ವಾಮಿ ಕಾಸರವಳ್ಳಿರವರಿಗೆ ಅತ್ಯಂತ ಕೃತಜ್ಞತೆಗಳು.)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ಶಿವತತ್ತ್ವರತ್ನಾಕರ.**, (ಭಾಷಾಂತರ-೧೯೯೯), ಕನ್ನಡ ವಿ.ವಿ. ಹಂಪಿ, ಪುಟ. XV.
೨. ಹಳಗನ್ನಡದಲ್ಲಿದೆ. ನೋಟ್ ಪುಸ್ತಕದಲ್ಲಿ ಬರೆದುಕೊಂಡದ್ದಾಗಿದೆ. ಪ್ರತಿ ಪುಟದಲ್ಲಿ ೩೪ ಸಾಲುಗಳಿವೆ.
೩. **ಶಿವತತ್ತ್ವರತ್ನಾಕರ.**, ಅದೇ, ಪುಟ XV.
೪. ಅದೇ, ಪುಟ ೯೪೦ ಮತ್ತು **ಶಿವತತ್ತ್ವರತ್ನಾಕರ ಎ. ಕಲ್ಚರಲ್ ಸ್ಟಡಿ.**, (೧೯೯೫), ಕೆಳದಿವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರ.
೫. ಶಿವತತ್ತ್ವರತ್ನಾಕರ ಪುಸ್ತಕ ಬರೆದು ಮುಗಿಸಿದ ೧೫ ವರ್ಷಗಳನಂತರ ಈ ದಾನ ಕೊಟ್ಟದ್ದಾಗಿದೆ.
೬. ಕೆ.ಅ.ಶ.ಸಂ. ಪು. ೧೯೩.
೭. ಅದೇ, ಪುಟ. ೧೨೭.
೮. ಅದೇ, ಪು. ೩೫೮.
೯. ಅದೇ, ಪು. ೧೯೬.

ಬಿ. ಎಸ್. ರಾಮಭಟ್ಟ*

# ತಾಳಗುಂದ ಶಾಸನವೊಂದರ ವಿಶ್ಲೇಷಣೆ

ಆದಿ ಕದಂಬರ ಹೆಸರಿನೊಂದಿಗೆ ಬನವಾಸಿ ಮತ್ತು ತಾಳಗುಂದವು ಸೇರಿಕೊಂಡಿವೆ. ಇವೆರಡೂ ಪ್ರಾಚೀನ ಸ್ಥಳಗಳು. ಇವೆರಡಕ್ಕೂ ನಿಕಟ ಸಂಬಂಧವಿದೆ. ಆದಿ ಕದಂಬರಿಗೆ ಸಂಬಂಧಿಸಿದ ಪ್ರಮುಖ ಶಾಸನಗಳಿರುವುದು ತಾಳಗುಂದದಲ್ಲಿ. ಈ ಸ್ಥಳದಲ್ಲಿರುವ ಶಿಲಾಶಾಸನಗಳಲ್ಲಿ ೧೮೬ನೆಯ ಶಾಸನವು ಚರ್ಚಾಸ್ಪದವಾಗಿದೆ: ಈ ಶಾಸನದ ಆಧಾರದಿಂದ ಈ ಕೆಳಗಿನ ಮೂರು ಅಂಶಗಳನ್ನು ಚರ್ಚಿಸಿದೆ.

೧. ಪ್ರಣವೇಶ್ವರ ದೇವಾಲಯದ ಸ್ಥಾಪನೆಯ ಅಸ್ಪಷ್ಟ ಅಂಶಗಳು ೨. ತಾಳಗುಂದ ಅಗ್ರಹಾರದ ಅಸ್ತಿತ್ವ ಮತ್ತು ಜಿಜ್ಞಾಸೆ ೩. ಕದಂಬರ ಮೂಲಸ್ಥಳವನ್ನು ಕುರಿತಾದ ಆಲೋಚನೆ.

ಪ್ರಣವೇಶ್ವರ ದೇವಾಲಯವು ಶಿಕಾರಿಪುರ ತಾಲ್ಲೂಕು ತಾಳಗುಂದದಲ್ಲಿದೆ. ಇದಕ್ಕೆ ಶಾಸನಗಳಲ್ಲಿ ತಾನಕುಂದೂರು, ಸ್ಥಾನ ಕುಂದೂರು[೨] ಸ್ಥಾಣುಕುಂದೂರು[೩] ಮತ್ತು ಸ್ಥಾಣುಗೂಢಪುರ[೪] ಎಂದು ಕರೆದಿದೆ. ತಾಳಗುಂದ ಎಂಬುದು ಈಚಿನ ಹೆಸರು. ಇಲ್ಲಿರುವ ಪ್ರಾಚೀನ ಸಿದ್ಧಾಲಯದ ಭವನನ್ನು (ಈಶ್ವರ) ಚುಟುಕುಲದ ವಿಷ್ಣು ಚುಟುಕುಲಾನಂದನು ಪೂಜಿಸಿದನೆಂದು ಹೇಳಲಾಗಿದೆ.[೫] ಇದೇ ೧೮೬ನೆಯ ಶಾಸನದಲ್ಲಿ ದೇವತೆಗಳು ಸ್ಥಾಪಿಸಿದ ಐದು ಶಿವಲಿಂಗಗಳಲ್ಲಿ ಪ್ರಣವೇಶ್ವರ ಲಿಂಗವೂ ಒಂದಾಗಿದೆ ಎಂದು ಹೇಳಿದೆ. ಆದರೆ ಐತಿಹಾಸಿಕವಾಗಿ ಈ ಶಿವಲಿಂಗವನ್ನು ಕ್ರಿ.ಶ. ಸು. ಎರಡನೆಯ ಶತಮಾನದಲ್ಲಿ ಸ್ಥಾಪಿಸಿರಬಹುದೆಂದು ಇತಿಹಾಸಕಾರರ ಅಭಿಪ್ರಾಯವಾಗಿದೆ. ಪ್ರಣವೇಶ್ವರ ದೇವಾಲಯವು ಗುಹೆಯ ಮಾದರಿಯಲ್ಲಿದ್ದು ಇದರ ಮೇಲೆ ಬೌದ್ಧ ಶಿಲ್ಪದ ಪ್ರಭಾವವಿದೆ ಎಂದು ಹೇಳಲಾಗಿದೆ.[೬] ತಾಳಗುಂದದ ಸ್ತಂಭ ಶಾಸನವು ಸಿದ್ಧಮ್ ಎಂದು ಆರಂಭವಾಗಿ ರುವುದನ್ನು ಗಮನಿಸಬಹುದು. ಸಿದ್ಧ ಎಂಬುದು ಪ್ರಾಚೀನತೆಯ ಸಂಕೇತವೂ ಹೌದು. ಭಗವದ್ಗೀತೆಯಲ್ಲಿ ಸಿದ್ಧನಾಂ ಕಪಿಲೋಮುನಿ ಎಂದು ಹೇಳಿದೆ - ಇದು ಪ್ರಾಚೀನ ಕಾಲದಲ್ಲಿ ಸಿದ್ಧರ ಸಾಧನಾಕ್ಷೇತ್ರವಾಗಿದ್ದ ಸಂಭವವಿದೆ.

ಆದಿ ಕದಂಬರ ಮಯೂರವರ್ಮನು ಪ್ರಣವೇಶ್ವರ ದೇವಾಲಯವನ್ನು ಸ್ಥಾಪಿಸಿದನೆಂದು ಹೇಳುವ ದಾಖಲೆ ಕಂಡುಬಂದಿಲ್ಲವಾದ ಕಾರಣ ಈ ದೇವಾಲಯುವನ್ನು ಮಯೂರವರ್ಮನು (ಕ್ರಿ.ಶ. ೨೮೦-೩೩೦) ಸ್ಥಾಪಿಸಿದನೆಂದು ಸ್ಪಷ್ಟಪಡಿಸಲು ಅಧಿಕೃತ ಆಧಾರಗಳ ಕೊರತೆಯಿದೆ.

ಬಿ. ಎಲ್. ರೈಸ್‌ರವರು ಮಯೂರವರ್ಮನ ಪೂರ್ವ ಜರ ಹೆಸರಿನ ಒಂದು ಪಟ್ಟಿಯನ್ನು ಪ್ರಕಟಿಸಿದ್ದಾರೆ. ಇದರಲ್ಲಿ

ಮುಕ್ಕಣ್ಣ- ತ್ರಿನೇತ್ರ-ತ್ರಿಲೋಚನ
ಮಧುಕೇಶ್ವರ
ಮಲ್ಲಿನಾಥ
ಚಂದ್ರವರ್ಮ - I
ಚಂದ್ರವರ್ಮ II (ಇನ್ನೊಬ್ಬ ಪುರಂದರ)
ಮಯೂರ ವರ್ಮ

-ಎಂದು ಹೇಳಿದೆ. ಇದರಲ್ಲಿ ಮಯೂರವರ್ಮನ ತಂದೆ ಮತ್ತು ಅಜ್ಜನ ಹೆಸರು ಹೇಳಿಲ್ಲ. ಆದರೆ ಗುಡ್ನಾಪುರದ ಪ್ರಾಕೃತ ಶಿಲಾಶಾಸನದಲ್ಲಿ ಮಯೂರವರ್ಮನ ತಂದೆಯ ಹೆಸರು ಬಂಧುಷೇಣ ಮತ್ತು ಅಜ್ಜ ವೀರಶರ್ಮನೆಂದು ಸ್ಪಷ್ಟವಾಗಿ ಹೇಳಿದೆ. ಮಯೂರವರ್ಮನ ಪೂರ್ವಜರ ಹೆಸರುಗಳನ್ನು ಡಾ|| ಸಾಲೆತೊರೆಯವರ ಗ್ರಂಥದಲ್ಲಿಯೂ[೮] ಹಾಗೂ ಸಹ್ಯಾದ್ರಿ ಮುದ್ರಿತ ಪುಸ್ತಕ ಅಧ್ಯಾಯ ಒಂಭತ್ತರಲ್ಲಿಯೂ ಹೇಳಿದೆ. ಡಾ|| ಸಾಲೆತೊರೆ ಯವರು ಮುಕ್ಕಣ್ಣ, ತ್ರಿಣೇತ್ರ ಮತ್ತು ತ್ರಿಲೋಚನನು ಆದಿಕದಂಬರ ಮೂಲ ಪುರುಷರೆಂದು ಹೇಳಿದ್ದಾರೆ ಹಾಗೂ ಮಯೂರ ವರ್ಮನೂ, ಮೂಲಪುರುಷನೆಂದು ಹೇಳಿದ್ದಾರೆ.

ತಾಳಗುಂದದ ೧೮೬ನೆಯ ಶಾಸನದಂತೆ ತ್ರಿಲೋಚನ ದೇವಂ, ಭಕ್ತಿಯಿಂ ಪ್ರಣವೇಶ್ವರ ಪ್ರತಿಷ್ಠೆಯಂ ವಿರಚಿಸಲ್ಕೆ ಎಂದು ಹೇಳಿದೆ. ಮುಂದುವರೆದ ಇದೇ ಶಾಸನದಲ್ಲಿ ತ್ರಿಲೋಚನ ದೇವನು ಪ್ರಯಾಗದಿಂದ ಮಾಧವ ದೇವರನ್ನು ತಂದು ಶಾ.ಶಕವ. ೧೧೮೩ನೆಯ ಸಿದ್ಧಾರ್ಥಿ ಸಂ. ರದ ಚೈತ್ರ ಬಹುಳ ೧೧ ಆದಿವಾರ ದಂದು ಪ್ರತಿಷ್ಠಾಪಿಸಿದನೆಂದು ಸ್ಪಷ್ಟವಾಗಿ ಹೇಳಿದೆ. ಈ ಶಾಸನದಲ್ಲಿ ಹೊಯ್ಸಳ ಮುಮ್ಮಡಿ ನರಸಿಂಹನು (೧೨೫೪-೧೨೯೨) ಆಳುತ್ತಿದ್ದಾಗ 'ತತುಕಾಲದೊಳು' ಎಂದು ಪ್ರಸ್ತಾಪಿಸಿದೆ. ಇದರಂತೆ ೧೩ನೆಯ ಶತಮಾನದಲ್ಲಿ ಆದಿಕದಂಬರ ಪೂರ್ವಜನಾದ ತ್ರಿಲೋಚನದೇವನು ಇವೆರಡನ್ನು ಸ್ಥಾಪಿಸಿದನೆಂದು ಹೇಳುವಂತಿಲ್ಲ. ಇದೇ ಶಾಸನದಲ್ಲಿ ಇವನೊಂದಿಗೆ ಈಶ್ವರದೇವ, ಗೋವಿಂದದೇವ ಮತ್ತು ನಾರಸಿಂಗದೇವನು ಮಾಧವದೇವರಿಗೆ ಭೂದಾನ ದತ್ತಿಗಳನ್ನು ನೀಡಿದ್ದಾರೆ. ಅಲ್ಲದೆ ದಂಡೆಯ ಸೋವಿಸೆಟ್ಟಿ ಎಂಬುವನು ತನ್ನ ಐದು ಕಮ್ಮ ತೋಟವನ್ನು ತ್ರಿಲೋಚನದೇವನ ಕೈಯಿಂದ ಮಾರಾಟ ಮಾಡಿಸಿ ಬಂದ ಹಣವನ್ನು ಮಾಧವ ದೇವರ ನಂದಾದೀವಿಗೆಗೆ ನೀಡಿದನೆಂದೂ ಹೇಳಿದೆ. ಇವರೆಲ್ಲರೂ ಹೊಯ್ಸಳರ ಕಾಲದ ಅಧಿಕಾರಿಗಳಾಗಿದ್ದ ಸಂಭವವಿದೆ. ಅಲ್ಲದೆ

*ಪದ್ಮಶ್ರೀ, ೧೩೯ ೩ ಕ್ರಾಸ್, ಗೋಪಾಲ ಗೌಡ ಬಡಾವಣೆ: ಗೋಪಾಳ, ಶಿವಮೊಗ್ಗ - ೫೭೭ ೨೦೧

ಇದೇ ಶಾಸನದಲ್ಲಿ ಹೇಳಿರುವ ತ್ರಿಲೋಚನದೇವನ ಹೆಸರು ಹೊಯ್ಸಳರ ಅರಸು ಮನೆತನದಲ್ಲಿ ಕಂಡು ಬಂದಿಲ್ಲ.

ತ್ರಿಲೋಚನದೇವನು ಪ್ರಯಾಗದಿಂದ ತಂದಿದ್ದ ಮಾಧವ ಮೂರ್ತಿಯು ಲೋಹದ ಮೂರ್ತಿಯೆ ಅಥವಾ ಶಿಲೆಯ ಮೂರ್ತಿಯೆ ಎಂಬುದು ತಿಳಿಯುವುದಿಲ್ಲ. ಇದನ್ನು ಪ್ರಣವೇಶ್ವರ ದೇವಾಲಯದಲ್ಲಿ ಸ್ಥಾಪಿಸಿದನೆ ಅಥವಾ ಪ್ರತ್ಯೇಕವಾದ ದೇವಾಲಯವನ್ನು ಕಟ್ಟಿಸಿದ್ದಾನೆಯೆ? ಎಂಬುದು ತಿಳಿದುಬಂದಿಲ್ಲ. ಆದಿಕದಂಬರು ಶೈವರು. ಆಗ ವೈಷ್ಣವ ಪಂಥವು ಅಷ್ಟಾಗಿ ಪ್ರಚಾರದಲ್ಲಿದ್ದಂತೆ ತಿಳಿಯುವುದಿಲ್ಲ. ಹೊಯ್ಸಳರ ಕಾಲದಲ್ಲಿ ವೈಷ್ಣವಧರ್ಮವು ಪ್ರಭಾವಶಾಲಿಯಾಗಿತ್ತು. ಇದೇ ಕಾಲದಲ್ಲಿ ಸ್ಥಾಪಿತವಾದ ಮಾಧವಮೂರ್ತಿಯನ್ನು ತ್ರಿಲೋಚನದೇವನು ಸ್ಥಾಪಿಸಿದನೆಂಬ ಪ್ರಾಚೀನತೆಯನ್ನು ನೀಡಿರುವ ಸಂಭವವಿದೆ.

ಬನವಾಸಿಯ ಮಧುಕೇಶ್ವರದೇವಾಲಯದ ಸಭಾಂಗಣದ ಒಂದು ಮೂಲೆಯ ಗೂಡಿನಲ್ಲಿರುವ ಆದಿ ಮಾಧವ ಮೂರ್ತಿಯು ಮಧುಕೇಶ್ವರ ದೇವಾಲಯದ ಮೂಲಮೂರ್ತಿ ಎಂಬ ಅಭಿಪ್ರಾಯವಿದೆ. ಏನಿದ್ದರೂ ಈ ಮೂರ್ತಿಯ ಶಿಲ್ಪಶೈಲಿಯು ಎಂಟನೆಯ ಶತಮಾನದ ಉತ್ತರ ಭಾಗದ್ದೆಂದು ಡಾ. ಅ. ಸುಂದರ ಅವರು ಹೇಳಿದ್ದಾರೆ.[೯]

ತಾಳಗುಂದದಲ್ಲಿ ಈಗಿರುವ ಪ್ರಣವೇಶ್ವರ ದೇವಾಲಯದ ನಿರ್ಮಾಣ ಕಾಲವು ಪ್ರಾಯಶಃ ನಾಲ್ಕನೆಯ ಶತಮಾನದಲ್ಲಿ ಆಗಿರಬಹುದು. ಇದು ದಕ್ಷಿಣ ಭಾರತದಲ್ಲಿಯೇ ಪ್ರಾಚೀನ ದೇವಾಲಯವೆಂದು ಅಭಿಶಂಕರ್ ಅವರು ಹೇಳಿದ್ದಾರೆ.[೧೦] ಇದು ಆದಿಕದಂಬರ ಕಾಲದ ಶಿಲ್ಪಶೈಲಿಯ ಆರಂಭದಕಾಲವಾಗಿದ್ದಿರ ಬಹುದು.

ತ್ರಿಲೋಚನದೇವನು ಆದಿಕದಂಬರ ಮೂಲಪುರುಷನೆಂದು ಒಪ್ಪಿಕೊಂಡಲ್ಲಿ ಪ್ರಣವೇಶ್ವರ ಮತ್ತು ಮಾಧವಮೂರ್ತಿಯನ್ನು ಪ್ರತಿಷ್ಠಾಪಿಸಿರಬಹುದೆಂದು ಆಲೋಚಿಸಬಹುದು. ಆದರೆ ಶಾಸನ ೧೮೭ರಂತೆ ಪ್ರಣವೇಶ್ವರ ಮೂರ್ತಿಯನ್ನು ಹೊಯ್ಸಳರ ಕಾಲದಲ್ಲಿ ಪ್ರತಿಷ್ಠಾಪಿಸಿಲ್ಲ. ಇದು ಪ್ರಾಚೀನವೆಂದು ಈಗಾಗಲೇ ಆಧಾರಗಳನ್ನು ನೀಡಿದೆ. ತ್ರಿಲೋಚನದೇವನ ಕಾಲವು ತಿಳಿದು ಬಂದಿಲ್ಲ. ಒಟ್ಟಿನಲ್ಲಿ ದೇವಾಲಯದ ಪ್ರಾಚೀನತೆಯ ಹಾಗೂ ಇದರ ಇತಿಹಾಸವು ಅಸ್ಪಷ್ಟವಾಗಿಯೇ ಉಳಿದಿದೆ.

**ತಾಳಗುಂದ ಅಗ್ರಹಾರದ ಅಸ್ತಿತ್ವ ಜಿಜ್ಞಾಸೆ**

ತಾಳಗುಂದದ ಇದೇ ೧೮೭ ನೆಯ ಶಾಸನದಲ್ಲಿ ಬನವಸೆ ಮೊದಲೆನಿಸಿದನೇಕ ಮಂಡಳೇಶ್ವರಂ ಮುಕ್ಕಣ್ಣ ಕಡಂಬಂ ದಕ್ಷಿಣಾಪಥದೊಳು ವಿಪ್ರ ಕುಳಮನರಿಕೆಯನೆಳಸಿ ಪಡೆಯದೆ... ಅಹಿಚ್ಛತ್ರಾಗ್ರಹಾರಮನಾರಾಧಿಸಿ..... ದ್ವಾತ್ರಿಂಶದ್ವಿಪ್ರ ಕುಟುಂಬಮಂ ಮುಂದಿಟ್ಟುತಂದು... ಮಾಡಿದ ಮಹಾಗ್ರಾರಮಂ ಸ್ಥಾಣುಗೂಢಪುರದವೊಳಲು.. ಎಂದು ಹೇಳಿದಂತೆ ಮುಕ್ಕಣ್ಣ ಕಡಂಬನು ಅಹಿಚ್ಛತ್ರದಿಂದ ಬ್ರಾಹ್ಮಣ ಕುಟುಂಬಗಳನ್ನು ಕರೆಸಿ ತಾಳಗುಂದದಲ್ಲಿ ನೆಲೆಗೊಳಿಸದನೆಂದು ತಿಳಿಯುತ್ತದೆ. ಮುಕ್ಕಣ್ಣ ಕಡಂಬನ ಹೆಸರು ಆದಿ ಕದಂಬರ ಪೂರ್ವಜರ ಹೆಸರಿನೊಂದಿಗೆ ಸೇರಿದೆ. ಅಲ್ಲದೆ ಮುಕ್ಕಣ್ಣ ಕದಂಬ ಮತ್ತು ತ್ರಿಲೋಚನ ದೇವನು ಬೇರೆ ಬೇರೆಯವರಾಗಿರಬೇಕು.

ಮೇಲಿನ ಶಾಸನದಂತೆ ಬನವಾಸಿಯನ್ನು ಆಳುತ್ತಿದ್ದ ಮಂಡಳೇಶ್ವರನೇ ಬೇರೆ ಮತ್ತು ಮುಕ್ಕಣ್ಣ ಕಡಂಬನೇ ಬೇರೆ ಎಂದು ತಿಳಿಯುತ್ತದೆ. ಪ್ರಾಚೀನ ಶಾಸನ ಒಂದರಲ್ಲಿ ಚುಟುಕುಲದ ವಿಷ್ಣು ಚುಟುಕುಲಾನಂದನು ಕ್ರಿ.ಶ. ಎರಡನೆಯ ಶತಮಾನದಲ್ಲಿ ಬನವಾಸಿಯಮಂಡಳೇಶ್ವರನಾಗಿದ್ದಂತೆ ತಿಳಿಯುತ್ತದೆ.

ಇವನು ಶಾತವಾಹನರ ಮಂಡಳೇಶ್ವರನಾಗಿರಬಹುದು. ಆದರೆ ಶಾಸನೋಕ್ತ ಮುಕ್ಕಣ್ಣನೂ ಮತ್ತು ಇವನೂ ಸಮಕಾಲೀನ ರೆಂದು ಹೇಳುವ ಆಧಾರವಿಲ್ಲ.

ಹಯವದನರಾವ್‌ರವರ ಗೆಜೆಟಿಯರಿನಲ್ಲಿ *"Mayuravarma introduced Brahmin colonies from Ahichetra. He distribuited Brahmins. He distribtuted 64 portions...."* ಎಂದು ಮಯೂರವರ್ಮನೇ ಅಹಿಚ್ಛತ್ರದಿಂದ ಬ್ರಾಹ್ಮಣರನ್ನು ಕರೆತಂದು ನೆಲೆಗೊಳಿಸಿದನೆಂದು ಹೇಳಿದ್ದಾರೆ, ಆದರೆ ಇದೇ ಪುಟದಲ್ಲಿ *The Haiga or Havika Brahmins have been settled by Mukkanna of Talagunda.* ಎಂದರೆ ಹವಿಕರನ್ನು ತಾಳಗುಂದದ ಮುಕ್ಕಣ್ಣನು ನೆಲೆಗೊಳಿಸಿದನು ಎಂದೂ ಉಲ್ಲೇಖಿಸಿದ್ದಾರೆ. ಈ ಎರಡು ಹೇಳಿಕೆಗಳಲ್ಲಿ ಒಮ್ಮತವಿಲ್ಲ. ಒಂದುವೇಳೆ ತ್ರಿಲೋಚನ ಮತ್ತು ಮುಕ್ಕಣ್ಣನು ಒಬ್ಬನೇ ಆಗಿದ್ದಲ್ಲಿ ಹಿಂದೆ ಹೇಳಿರುವಂತೆ ಹೊಯ್ಸಳ ವೀರಬಲ್ಲಾಳನ (೧೧೭೩-೧೨೨೦) ಕಾಲದ ತ್ರಿಲೋಚನದೇವನನ್ನು ಚಾರಿತ್ರಿಕವಾಗಿ ಒಪ್ಪಲು ಸಾಧ್ಯವಿಲ್ಲ. ಅಥವಾ ಮಯೂರವರ್ಮನಿಗೆ ಮುಕ್ಕಣ್ಣ ಕಡಂಬ ಎಂಬ ಇನ್ನೊಂದು ಹೆಸರಿತ್ತು ಎಂದು ಎಲ್ಲಿಯೂ ಹೇಳಿಲ್ಲ. ಇದೇ ಶಾಸನದಲ್ಲಿ ಉದ್ದೇಶಪೂರ್ವಕವಾಗಿ ಎರಡು ಹೆಸರನ್ನೂ ಹೇಳಿರುವ ಸಾಧ್ಯತೆಯಿದೆ. ಹೀಗೆ ಶ್ರೀ ಅಗ್ರಹಾರದ ಸ್ಥಾಪನೆಯ ಚಾರಿತ್ರಿಕ ಅಂಶಗಳು ಅಸ್ಪಷ್ಟವಾಗಿದೆ. ವೀರಬಲ್ಲಾಳನಿಗೆ ಇಮ್ಮಡಿ ವೀರಬಲ್ಲಾಳನೆಂಬ ಹೆಸರಿದೆ.

**ಕದಂಬರ ಮೂಲಸ್ಥಳ**

ಕದಂಬರ ಮನೆಯ ಮುಂದಿದ್ದ ಕದಂಬ ವೃಕ್ಷದಿಂದಾಗಿ ಅವರ ಕುಟುಂಬಕ್ಕೆ ಕದಂಬರು ಎಂಬ ಹೆಸರು ಬಂದಿತೆಂದು ಹೇಳಲಾಗಿದೆ. ಆದರೆ ಇವರ ಮೂಲಸ್ಥಳದ ಸರಿಯಾದ ಮಾಹಿತಿ ದೊರೆಯಬೇಕಾಗಿದೆ. ಸಾಮಾನ್ಯವಾಗಿ ಕದಂಬರನ್ನು ಬನವಾಸಿ ಯವರೆಂದು ಹೇಳಲಾಗಿದೆ. ಬನವಾಸಿಯು ಪ್ರಾಚೀನ ಕಾಲದಲ್ಲಿ ಬೌದ್ಧರ ನೆಲೆಯಾಗಿತ್ತು. ಬ್ರಾಹ್ಮಣರಾದ ಕದಂಬರು ವೇದಾಧ್ಯಯನ ಸಂಪನ್ನರಾಗಿದ್ದರು. ಇದನ್ನು ತಾಳಗುಂದದ ಸ್ತಂಭ ಶಾಸನದಲ್ಲಿ ಹೇಳಿದೆ. ಕದಂಬರಿಗೆ ಬನವಾಸಿಯು ಅಧ್ಯಯನ, ನಿತ್ಯಾಗ್ನಿ, ಹೋಮಹವನಾದಿಗಳಿಗೆ ತಕ್ಕ ಸ್ಥಳವಾಗಿರಲಿಲ್ಲವೆಂದು ಭಾವಿಸಬಹುದು. ಮಯೂರವರ್ಮನು ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ನಂತರ ಕಂದಬರು ಮಧುಕೇಶ್ವರನ ಭಕ್ತರಾಗಿರಬೇಕು. ಇದಕ್ಕೆ ಮೊದಲು ಇವರು

ಪ್ರಣವೇಶ್ವರ ಹಾಗೂ ಕಾರ್ತಿಕೇಯನ ಆರಾಧಕರಾಗಿದ್ದ ಸಂಭವವಿದೆ.

ಆದಿಕದಂಬರು ತಾವು ಹಾರೀತಿ ಪುತ್ರರು ಮಾನವ್ಯ ಗೋತ್ರದವರು ಎಂದು ಹೇಳಿಕೊಂಡಿದ್ದಾರೆ. ಇಂಥಹ ಗೋತ್ರ ಸೂತ್ರಾದಿಗಳು ಬ್ರಾಹ್ಮಣರಲ್ಲಿ ಇಲ್ಲ. ಹಾರೀತಿ ಬೌದ್ಧ ದೇವತೆ ಆದಕಾರಣ ಇವರು ಬ್ರಾಹ್ಮಣರಲ್ಲ ಕ್ಷತ್ರಿಯರು! ಕಾರಣಾಂತರ ದಿಂದ ರಾಜ್ಯಭ್ರಷ್ಟರಾಗಿ ಅಲೆದಾಡುತ್ತಿದ್ದರು ಎಂದು ಇತಿಹಾಸದ ಯಥಾರ್ಥತೆ ಎಂಬ ಗ್ರಂಥದಲ್ಲಿ ಹೇಳಿದೆ.[೧೩] ಆದರೆ ಇವರು ಎಲ್ಲಿದ್ದರು? ಯಾವ ರಾಜ್ಯವನ್ನಾಳುತ್ತಿದ್ದರು ಎಂಬ ಬಗ್ಗೆ ಆಧಾರವನ್ನು ನೀಡಿಲ್ಲ. ಅಲ್ಲದೆ ಇವರು ಆಂಧ್ರದಿಂದ ಬಂದವರೆಂದು ಯಾವ ಐತಿಹಾಸಿಕ ದಾಖಲೆಗಳಲ್ಲೂ ಹೇಳಿಲ್ಲ.

ತ್ರಿಲೋಚನ ದೇವನು ತಾಳಗುಂದದಲ್ಲಿ ಪ್ರಣವೇಶ್ವರನನ್ನು ಮತ್ತು ಮಾಧವದೇವರನ್ನು ಪ್ರತಿಷ್ಠಾಪನೆ ಮಾಡಿದ್ದಾನೆ. ಅಹಿಚ್ಛತ್ರದಿಂದ ಬಂದ ಬ್ರಾಹ್ಮಣರನ್ನು ನೆಲೆಗೊಳಿಸಿದ್ದು ತಾಳಗುಂದದಲ್ಲಿ. ಆದಿ ಕದಂಬರ ಇತಿಹಾಸವನ್ನು ಹೇಳುವ ಸ್ತಂಭಶಾಸನವನ್ನೂ ಶಾಂತಿವರ್ಮನು ತಾಳಗುಂದದಲ್ಲಿಯೇ ಸ್ಥಾಪಿಸಿದ್ದಾನೆ. ಕಂದಂಬರು ಮೊಟ್ಟಮೊದಲು ಶಿಲೆಯಲ್ಲಿ ಕಟ್ಟಿಸಿದ ದೇವಾಲಯವಿರುವುದು ತಾಳಗುಂದದಲ್ಲಿ. ಆದಿ ಕದಂಬರು ತಾಳಗುಂದವರೆಂದು ಅಭಿಶಂಕರ್ ಅವರೂ ಹೇಳಿದ್ದಾರೆ.[೧೪] ಚುಟುಕುಲದವರು ಅಥವಾ ಪಲ್ಲವರು ಬನವಾಸಿಯಿಂದ ಆಳುತ್ತಿದ್ದ ಕಾಲದಲ್ಲಿ ಕದಂಬರು ಬನವಾಸಿಯಲ್ಲಿದ್ದರು ಎಂದು ಹೇಳುವ ಆಧಾರವು ಈವರೆಗೂ ಲಭ್ಯವಿಲ್ಲ. ಆದಕಾರಣ ಆದಿ ಕದಂಬರು ತಾಳಗುಂದದವರೆಂದು ನಂಬಲರ್ಹವಾಗಿದೆ.

**ವಿಶ್ಲೇಷಣೆ**

ಬಿ.ಎಲ್. ರೈಸ್‌ರವರು ಪ್ರಕಟಿಸಿರುವ ಕದಂಬರ ಪೂರ್ವಜರ ಪಟ್ಟಿಯಲ್ಲಿ ಮುಕ್ಕಣ್ಣ, ತ್ರಿನೇತ್ರ ಮತ್ತು ತ್ರಿಲೋಚನ ಎಂದು ಕ್ರಮವಾಗಿ ಹೇಳಿದೆ. ಮೇಲು ನೋಟಕ್ಕೆ ಇದು ಒಬ್ಬನೇ ವ್ಯಕ್ತಿಯ ಹೆಸರು ಎಂದು ಅರ್ಥ ಬರುವಂತಿದ್ದರೂ ೧೮೬ನೆಯ ಶಾಸನದಲ್ಲಿ ಇವರನ್ನು ಬೇರೆ ಬೇರೆಯಾಗಿಯೇ ಹೇಳಿದೆ. ಕ್ರಿ.ಶ. ೧೨೬೧ರ ಹೊಯ್ಸಳ ನರಸಿಂಹನ ಕಾಲದ ಶಾಸನದಲ್ಲಿ ತ್ರಿಲೋಚನನ ಹೆಸರು ಹೇಳಿದೆ. ಮುಕಣ್ಣ ಕಡಂಬನ ಹೆಸರನ್ನು ವೀರಬಲ್ಲಾಳ (೧೧೭೩-೧೧೯೬)ನ ಕಾಲದ ಶಾಸನದಲ್ಲಿ ಉಲ್ಲೇಖಿಸಿದೆ. ತ್ರಿಲೋಚನನು ಪ್ರಣವೇಶ್ವರ ಮತ್ತು ಮಾಧವ ದೇವರನ್ನು ಪ್ರತಿಷ್ಠಿಸಿದನೆಂದು ಹೇಳಿದರೆ ಮುಕ್ಕಣ್ಣ ಕಡಂಬನು ತಾಳಗುಂದದ ಅಗ್ರಹಾರದ ಸ್ಥಾಪಕನಾಗಿದ್ದಾನೆ. ಪೂರ್ವಜರ ಹೆಸರಿನ ಪಟ್ಟಿಯಲ್ಲಿ ಮುಕ್ಕಣ್ಣನ ಹೆಸರು ಮೊದಲಿನಲ್ಲಿದ್ದು ತ್ರಿಲೋಚನನ ಹೆಸರು ಕೊನೆಯಲ್ಲಿದೆ. ಇವರ ಕಾಲವು ಈ ವರೆಗೂ ಲಭ್ಯವಿಲ್ಲ. ಇವರು ಪೌರಾಣಿಕ ವ್ಯಕ್ತಿಗಳೆ ಅಥವಾ ಐತಿಹಾಸಿಕ ವ್ಯಕ್ತಿಗಳೆ ಎಂಬುದನ್ನು ಖಚಿತಪಡಿಸಲು ಆಧಾರಗಳ ಕೊರತೆಯಿದೆ.

ದೇವಾಲಯ ಮತ್ತು ಅಗ್ರಹಾರಗಳಿಗೆ ದಾನದತ್ತಿಗಳನ್ನು ಪೂರ್ವಜರ ಹೆಸರಿನಲ್ಲಿ ನೀಡುವ ಪದ್ಧತಿಯಿತ್ತು. ಹೀಗೆ ದೇವಾಲಯ ಹಾಗೂ ಅಗ್ರಹಾರ ಸ್ಥಾಪನೆಯಲ್ಲಿ ಇದನ್ನೇ ಅನುಸರಿಸಿರಬಹುದು. ಹೊಯ್ಸಳರ ಕಾಲವೆಂದು ಹೇಳಿದ್ದರೂ ನಿಜವಾಗಿ ದೇವಾಲಯಸ್ಥಾಪಕ ಹಾಗೂ ಅಗ್ರಹಾರ ಸ್ಥಾಪಕ ಇದೇ ಕಾಲದವನೆ ಎಂದು ನಂಬುವಂತಿಲ್ಲ.

ಮಯೂರವರ್ಮನ ಕಾಲ ಅಥವಾ ನಾಲ್ಕನೆಯ ಶತಮಾನ ದಲ್ಲಿ ಕದಂಬರು ಮೊಟ್ಟ ಮೊದಲು ಪ್ರಣವೇಶ್ವರ ದೇವಾಲಯವನ್ನು ಶಿಲೆಯಲ್ಲಿ ನಿರ್ಮಿಸಿದರೆಂದು ಹೇಳಬಹುದು. ತಾಳಗುಂದದ ಅಗ್ರಹಾರವನ್ನು ಸಹ ಮಯೂರವರ್ಮನೇ ಸ್ಥಾಪಿಸಿದನೆಂದು ಕೆಲವು ಗ್ರಂಥದಲ್ಲಿ ಹೇಳಿದ ಹಾಗೆ ಪ್ರಚಲಿತವಿದೆ. ೧೮೬ನೆಯ ಶಾಸನದಲ್ಲಿ ಎಲ್ಲಿಯೂ ಮಯೂರ ವರ್ಮನ ಹೆಸರು ಹೇಳಿಲ್ಲ; ಮುಕ್ಕಣ್ಣ ಕಡಂಬನೇ ಅಗ್ರಹಾರ ಸ್ಥಾಪಕನೆಂದು ಸ್ಪಷ್ಟವಾಗಿ ಹೇಳಿದೆ. ಒಟ್ಟಿನಲ್ಲಿ ಈ ತೊಡಕನ್ನು ಬಿಡಿಸಲು ಮರುಚಿಂತನೆ ಅವಶ್ಯಕವೆನಿಸಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಎಪಿಗ್ರಾಫಿಯ ಕರ್ನಾಟಿಕ., ಸಂ. ೮, ಶಿಕಾರಿಪುರ ೧೮೬ (ತಾಳಗುಂದ), ಕ್ರಿ.ಶ. ೧೨೬೧.
೨. ಅದೇ, ಕ್ರಿ. ಶ. ೧೭೬, (ತಾಳಗುಂದ), ಕ್ರಿ.ಶ. ಸು. ೪ ನೇ ಶತಮಾನ.
೩. ಕ್ರಮಸಂಖ್ಯೆ ಒಂದರಂತೆ.
೪. ಅದೇ.
೫. `Satakarni worshipped Bhava in Siddalaya at Talagunda', Hayavadana Rao, *Mysore Gazetteer*, Page. 503.
೬. ಕೆ. ಅಭಿಶಂಕರ್., ಬನವಾಸಿ ಸಮಗ್ರ ಪರಿಚಯ, ಪು. ೭೩.
೭. Hayavadana Rao., *Mysore Gazetteer*, Page 504.
೮. ಡಾ. ಪಿ. ಬಿ ಸಾಲೊತೂರೆ., ಪಿ. ಬಿ. ದೇಸಾಯಿ., ಕನ್ನಡ ನಾಡಿನ ಚರಿತ್ರೆ, ಪು. ೨೪.
೯. ಡಾ. ಅ. ಸುಂದರ., ಬನವಾಸಿ ಸಮಗ್ರ ಪರಿಚಯ, ಪು. ೯೯-೧೦೦.
೧೦ ಕ್ರ. ಸಂ. ಆರರಂತೆ., ಪುಟ. ೭೨.
೧೧. ಡಾ. ಎ.ಕೆ. ಶಾಸ್ತ್ರಿ., ಬನವಾಸಿ ಸಮಗ್ರ ಪರಿಚಯ, ಪು. ೫.
೧೨ ಕ್ರ ಸಂ. ಏಳರಂತೆ. ಪು. ೪೯೮.
೧೩. ಸೀತಾರಾಮಾಚಾರ್ಯ., ನಾರಾಯಣಾಚಾರ್ಯ ಉಡುಪ., ಇತಿಹಾಸದ ಯಥಾರ್ಥತೆ, ಪು. ೬೨-೬೩-೬೪.
೧೪. ಕ್ರಮ ಸಂಖ್ಯೆ ಆರರಂತೆ, ಪು. ೭೩.

ಡಾ|| ಬಿ. ಜಗದೀಶ ಶೆಟ್ಟಿ*

# ಮಣಿಪುರ ಶಾಸನ - ಒಂದು ಅಧ್ಯಯನ

ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಕಾಲದಲ್ಲಿ ಈಗಿನ ಉಡುಪಿ ಹಾಗೂ ದಕ್ಷಿಣಕನ್ನಡ ಜಿಲ್ಲೆಗಳನ್ನೊಳಗೊಂಡ ಕರಾವಳಿ ಕರ್ನಾಟಕ ಅವರ ಆಡಳಿತಕ್ಕೊಳಪಟ್ಟಿತ್ತು. ಆಡಳಿತದ ಅನುಕೂಲಕ್ಕಾಗಿ ವಿಜಯನಗರ ಸಾಮ್ರಾಜ್ಯ ಹಲವು ರಾಜ್ಯಗಳಾಗಿ ವಿಂಗಡಿಸಲ್ಪಟ್ಟಿತ್ತು. ಈಗಿನ ಉಡುಪಿ ಜಿಲ್ಲೆ, ವಿಜಯನಗರದ ಬಾರಕೂರು ರಾಜ್ಯದ ಭಾಗವಾಗಿತ್ತು. ಬಾರಕೂರು ರಾಜ್ಯದ ಆಡಳಿತವನ್ನು ರಾಜ್ಯಪಾಲರು ನಡೆಸುತ್ತಿದ್ದರು. ಅವರುಗಳು ಸರಕಾರದ ನೀತಿಗೆ ಅನುಗುಣವಾಗಿ ಸ್ಥಳೀಯ ಸಂಸ್ಥೆಗಳು ಹೊಂದಿದ್ದ ಕೆಲವು ಸೌಲಭ್ಯಗಳಿಗೆ ಚ್ಯುತಿ ಬಾರದಂತೆ ಹಾಗೂ ಪ್ರಜೆಗಳ ಮೇಲೆ ದಬ್ಬಾಳಿಕೆಯನ್ನು ನಡೆಸಿದಾಗ, ವಿಜಯನಗರದ ಅರಸರು ಮಧ್ಯ ಪ್ರವೇಶಿಸಿ ತೊಂದರೆ ಅನುಭವಿಸಿದವರಿಗೆ ನ್ಯಾಯ ಒದಗಿಸಿಕೊಟ್ಟ ಅನೇಕ ಉದಾಹರಣೆಗಳು ಬಾರಕೂರು ರಾಜ್ಯದಲ್ಲಿ ದೊರೆಯುತ್ತವೆ.[೧] ಇಂತಹ ಸಂದರ್ಭಗಳಲ್ಲಿ ತಪ್ಪಿತಸ್ಥ ಅಧಿಕಾರಿಗಳ ಮೇಲೆ ಕ್ರಮ ತೆಗೆದುಕೊಳ್ಳುತ್ತಿದ್ದರು. ಇದು ಅಧಿಕಾರದ ವಿಕೇಂದ್ರೀಕರಣವು ಯಾವ ರೀತಿಯಲ್ಲಿತ್ತೆಂಬುದಕ್ಕೂ ಒಂದು ಉದಾಹರಣೆ.[೨] ಕರಾವಳಿ ಕರ್ನಾಟಕದ ಅನೇಕ ಶಾಸನಗಳು ಇಂತಹ ಘಟನೆಗಳನ್ನು ಉಲ್ಲೇಖಿಸುತ್ತವೆ.[೩]

ಇಲ್ಲಿ ಅಧ್ಯಯನಕ್ಕೆ ಆರಿಸಿಕೊಂಡಿರುವ ಉಡುಪಿ ತಾಲೂಕು ಹಾಗೂ ಜಿಲ್ಲೆಯ ಮಣಿಪುರದ ಶಾಸನ ಇಂತಹ ಒಂದು ಉದಾಹರಣೆಯನ್ನೂ ನೀಡುತ್ತದೆ. ಇದು ಗುರುತಿಸಿರುವ ಆದರೆ ಪ್ರಕಟವಾಗದ ಒಂದು ಶಾಸನ.[೪] ವಿಜಯನಗರದ ದೊರೆ ಒಂದನೇ ದೇವರಾಯನ ಕ್ರಿ. ಶ. ೧೪೧೦ರ ಈ ಶಾಸನ, ಅವನ ಆಳ್ವಿಕೆಯ ಕಾಲದಲ್ಲಿ ಮಹಾಪ್ರಧಾನ ಬಾಚಂಣ ಒಡೆಯರು ಬಾರಕೂರು ರಾಜ್ಯವನ್ನು ಪ್ರತಿಪಾಲಿಸುತ್ತಿರುವಾಗ ಬಯಲ ದೇವರನ್ನು ಅನ್ಯಾಯದಲ್ಲಿ ಹಾಯಿದು ಹಿಡಿದುಕೊಂಡು ಹೋಗುವಾಗ *ಹೊಸಬುಮೂಲಿ*-ಯನ್ನು ಅರಸಿನ ಬಂಟರು ಅನ್ಯಾಯವಾಗಿ ಕೊಂದರು. ಆಗ ಕೂಡಲೇ ಕಾರ್ಯಪ್ರವೃತ್ತರಾದ ಬಾಚಂಣ ಒಡೆಯರು ಕಾರ್ಕಳದ ನಾಡನಾಳುವ ದಂಡಪ್ಪ ಅಧಿಕಾರಿಗಳು, ಮೂಡಿರಲು, ಮಾರಮ್ಮ ಹೆಗ್ಗಡೆಯರು, ಬಳಿ ಸಾವಿರದವರು, ಬಯಲ ಎಂಟು ಮಂದಿ ಜನನಿಗಳು ಹಾಗೂ ೩೨ ಮಂದಿ ಸಭೆಯವರು ಸೇರಿ ಹೊಸಬುಮೂಲಿಯ ಕುಟುಂಬದವರಿಗೆ ಸರ್ವಮಾನ್ಯವಾಗಿ ಕೊಟ್ಟ ದಾನವನ್ನೂ ಈ ಶಾಸನ ಉಲ್ಲೇಖಿಸುತ್ತದೆ. ಕೊಟ್ಟ ಸ್ಥಳದ ಗಡಿಯನ್ನೂ ಸಹ ಉಲ್ಲೇಖಿಸಲಾಗಿದೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಬೇರೆ ಶಾಸನಗಳಲ್ಲಿ ವ್ಯಕ್ತವಾಗಿರುವಂತೆ, ಈ ಶಾಸನದಲ್ಲಿ ಸ್ಥಳೀಯ ಜನರ ಪ್ರತಿಭಟನೆ ಅಥವಾ ರಾಜನಿಗೆ ದೂರಿತ್ತ ಯಾವ ವಿವರವೂ ಲಭ್ಯವಿಲ್ಲ. ಅಲ್ಲದೆ ದಾನ ನೀಡುವಾಗ ಯಾರೆಲ್ಲಾ ಭಾಗಿಯಾಗುತ್ತಿದ್ದರು ಎಂಬ ವಿಷಯವೂ ಈ ಶಾಸನದಿಂದ ತಿಳಿದು ಬರುತ್ತದೆ. ವಿಜಯನಗರದ ಕಾಲದಲ್ಲಿ ರಾಜ್ಯದ ಅಧಿಕಾರಿಗಳನ್ನು ಭೂಮಾಲಕ ವರ್ಗದಿಂದ ಆರಿಸಲಾಗುತ್ತಿತ್ತು. ರಾಜನಿಗೆ ಸಮಾಜದ ಮೇಲೆ ತನ್ನ ಹಿಡಿತವನ್ನು ಸಾಧಿಸಲು ಇದು ಸಹಕಾರಿಯಾಗಿತ್ತು. ರಾಜ್ಯದ ಅಧಿಕಾರಿಗಳೆಲ್ಲಾ ಭೂಮಾಲಿಕರಾಗಿದ್ದುದು ಶಾಸನಗಳಿಂದ ತಿಳಿದು ಬರುತ್ತದೆ. ಅವರಲ್ಲಿ ಅಧಿಕಾರಿ ಮತ್ತು ಹೆಗ್ಗಡೆ ಈ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದ್ದಾರೆ.[೫]

ವಿಜಯನಗರದ ಕಾಲದಲ್ಲಿ ಹೆಚ್ಚು ಹೆಚ್ಚು ಜನರು ಭೂಮಾಲಿಕರಾದರು. ಆ ಕಾಲದ ಸಂಕೀರ್ಣ ಆಡಳಿತ ವ್ಯವಸ್ಥೆಯಲ್ಲಿ ಹೆಚ್ಚಿನ ಸಂಖ್ಯೆಯ ಅಧಿಕಾರಿಗಳ ಅವಶ್ಯಕತೆಯಿತ್ತು. ಇಂತಹ ಪರಿಸ್ಥಿತಿಯಲ್ಲಿ ಅಧ್ಯಯನಕ್ಕೆ ಆರಿಸಿಕೊಂಡಿರುವ ಶಾಸನದಲ್ಲಿ ಕಂಡು ಬರುವಂತೆ ಜನನಿಗಳೂ ಪ್ರಮುಖ ಪಾತ್ರವನ್ನು ವಹಿಸಿದ್ದರು. ಈ ಪ್ರದೇಶದಲ್ಲಿ ಜನನ ಎಂದರೆ ಭೂಮಿ. ಜನನಿ ಎಂದರೆ ಜನನ ಅಥವಾ ಭೂಮಿಯ ಮಾಲಕ.[೬] ಮೂಡಿರಲೂ ಭೂಮಾಲಿಕರಾಗಿದ್ದರು[೭]. *ಬಳಿಸಾವಿರದವರು* ಪ್ರತಿನಿಧಿಗಳಾಗಿರಬೇಕು.[೮]

ಮಣಿಪುರದ ಶಾಸನ ಭೂಮಿಯ ವಿವಿಧ ನಮೂನೆಗಳ ಬಗ್ಗೆಯೂ ತಿಳಿಸುತ್ತದೆ. ಉದಾ: ಬೆಟ್ಟು, ಬಯಲು. ಬೆಟ್ಟು ಎಂದರೆ ಬೇಸಾಯಕ್ಕೆ ಮಳೆಯ ನೀರನ್ನೇ ಅವಲಂಬಿಸಿರುವ ಭೂಮಿ. ಬಯಲು ಎಂದರೆ ತಗ್ಗಾದ ಉತ್ತಮ ನೀರಿನ ಸೌಕರ್ಯ ಇರುವ ಭೂಮಿ.[೯] ಈ ಶಾಸನ ಹೊಸಬುಮೂಲಿಯ ಬಳಿಯ ಉಲ್ಲೇಖವನ್ನೂ ನೀಡುತ್ತದೆ.[೧೦] ಈ ದಾನವನ್ನು ಬಾಚಂಣ ಒಡೆಯನ ಒಪ್ಪಿಗೆಯಿಂದ ನೀಡಲಾಯಿತು ಎಂಬುದನ್ನು ಶಾಸನ ತಿಳಿಸುತ್ತದೆ. ಕೊನೆಯಲ್ಲಿ ಶಾಪವಾಕ್ಯವೂ ಇದೆ.

ಒಟ್ಟಿನಲ್ಲಿ ಈ ಶಾಸನ ವಿಜಯನಗರ ಕಾಲದ ಸ್ಥಳೀಯ ಆಡಳಿತ ವ್ಯವಸ್ಥೆ, ಅದರಲ್ಲಿ ಭಾಗಿಗಳಾದ ಜನರು ಹಾಗೂ ವಿಜಯನಗರ ಅರಸರ ಜನಪರ ಕಾಳಜಿಯ ಬಗ್ಗೆ ಹೆಚ್ಚಿನ ಬೆಳಕನ್ನು ಚೆಲ್ಲುತ್ತದೆ.

* ಮುಖ್ಯಸ್ಥರು, ಇತಿಹಾಸ ವಿಭಾಗ, ಪೂರ್ಣಪ್ರಜ್ಞ ಕಾಲೇಜು, ಉಡುಪಿ

ಮಣಿಪುರ ಶಾಸನ ಪಾಠ

೧ [ಸ್ವಸ್ತಿ ಶ್ರೀ ಗಣಾಧಿಪತಯೇ ನಮ] [ನಮ]ಸ್ತುಂಗ ಶಿರಸ್ಚುಂಬಿ
೨ ಚಂದ್ರ ಚಾಮರ ಚಾರವೇ। ತ್ರಯಿಲೋಕ್ಯ ನಗರಾರಂಭಂ ಮೂ
೩ . . . . ಸ್ವಸ್ತಿ ಶ್ರೀ ರಾಜಾಧಿರಾಜ ರಾಜ ಪರಮೇಶ್ವರ ಶ್ರೀ ವೀರದೇವ
೪ [ರಾಯ] . . . . ರಾಜ್ಯ ಪಟ್ಟ ಉತ್ತರೋತ್ತರಾಭಿವೃದ್ಧಿಪ್ರವರ್ದ್ಧಮಾನ ಮಾಚ
೫ ಂದ್ರಾರ್ಕ್ಕ ತಾರಂಬರಂ ಸಲುತ್ತಿರ್ದ್ದ ಶಕವರುಷ ೧೩೩೦ ಸರ್ವ್ವಜಿತುಸಂ ಜೇ
೬ ಷ್ಠ ಸುದ್ಧ . . . ಶ್ರೀ ಮ . . ಮಹಾಪ್ರಧಾನ ಬಾಚಂಣ ಒಡೆಯರು ಬಾರಕೂ
೭ . ರ ರಾಜ್ಯಾವನೂ ಪ್ರತಿಪಾಲಿಸುವ ಕಾಲದಲೂ ಆ ಬಾಚಂಣ, ಒಡೆಯರು
೮ ಂ ಬಯಲ ದೇವರನೂ ಅಂನ್ಯಾಯದಲ್ಲಿ ಹಾಯಿದು ಹಿ
೯ ಡಿದುಕೊಂಡು ಹೋಹ ಅಳಿದಾಯೆಂದು ಮಾಣಿಸು [ವನ್ನ] ಹೊಸಬು ಮೊ
೧೦ ಯಲಿಯನೂ ಅಂನ್ಯಾಯದಲಿ ಆರಪಿನ ಬಂಬರು ಕೊಂದ ಸಂಮ
೧೧ ಂದ ಆ ಬಾಚಂಣ್ಣ ಒಡೆಯರ ನಿರೂಪದಿಂ ಶರಶಳದ ಸ್ಥಳದ ನಾಡನಾಳು
೧೨ ವ ದಂಡಪ್ಪ ಅಧಿಕಾರಿಗಳು ಮೂದಿಲರು ಮಾರಮ ಹೆಗ್ಗಡೆಯಾರೂ
೧೩ . ಆ ಬಳಿ ಸಾವಿರದವರೂ . ಂಬಯಲ ಯೆಂಟು ಮಂದಿ ಜನನಿ
೧೪ ಗಳು ಮೂವತ್ತೆರಡು ಮಂದಿ ಸಭೆಯೂ ಮುಂತಾಗಿ ಹೊಸಬು
೧೫ ಮೂಲಿಯ ಕುಟುಂಬದವರಿಗೆ ಕೊಟ್ಟ ಶಿಲಾಶಾಸನದ ಕ್ರಮವೆಂತೆಂ
೧೬ ದಡೆ ಆ ಹೊಸಬು ಮೂಲಿಯ ಮನೆಯಿಂದಂ ಪಡುವಣ ಬೆಟ್ಟು ಕೊಡ
೧೭ ಗಿತ್ತವ ನೋಟೆಂ ತೆಂಕಲು ಕಟ್ಟಿದ ಗೋಳಿ, ಬಡಗ ಕೆಂಟಂ ಬಡಗಲು
೧೮ ಮಠದ ನೋಟೆಂ ಮೂಡಲುಮೂಡಣ ಓಣಿಂ ಪಡುವಲು ಯಿ
೧೯ ಚತುಸೀಮೆ ಒಳಗುಳ ಬೆಟ್ಟು ಹೋಳೆಯ ತಡಿಯ ಬಯಲ ಕೋಟೆಯ
೨೦ ಗದ್ದೆಯಿಪ್ಪ . ಳಗೆ ಹಂನೊಂದು ತಾರದ ಮೊದಲನೂ
೨೧ ರೌಟುಗ ನೆತ್ತಿಯ ಬಳಿಯ ಹೊಸಬು ಮೂಲಿಯ ಕುಟುಂಬದ
೨೨ ವರಿಗೆ ಆ ಚಂದ್ರಾರ್ಕ್ಕ ಸ್ಥಾಯಿಯಾಗಿ ಆ ಬಾಳಿಗೆ ಸರ್ವಮಾನ್ಯ
೨೩ ವಾಗಿ ಕೊಟ್ಟಉ ಯಿಂತಪ್ಪುದಕ್ಕೆ ಬಾಚರಣ್ಣ ಒಡೆಯರರ ಸುಹ
೨೪ ಸ್ತದೊಪ್ಪ ಯಿ ಶಸನದ ಕಲ್ಲಿಂಗೆ ಅಳುಪಿದವರಿಗೆ ವಾರಣಾಸಿಯ
೨೫ ಲಿ . ಸಾವಿರ, ಕವಿಲೆ ಬ್ರಾಹ್ಮರ ಕೊಂದ ಪಾಪ



(ಮಣಿಪುರ ಶಾಸನದ ಪ್ರತಿಯನ್ನೂ ಅಧ್ಯಯನಕ್ಕೆ ಒದಗಿಸಿ ಕೊಟ್ಟ ಭಾರತ ಸರ್ಕಾರದ ಶಾಸನಶಾಸ್ತ್ರ ಇಲಾಖೆಗೆ ಲೇಖಕ ಚಿರಋಣಿ. ಅಲ್ಲದೆ ಶಾಸನದ ಪ್ರತಿ ನನಗೆ ಸಿಗುವಲ್ಲಿ ಸಹಕರಿಸಿದ ಮಿತ್ರರಾದ ಪ್ರೊ. ಸುಬ್ರಹ್ಮಣ್ಯ ಭಟ್. ಕೆ. ಎಂ. ಎಸ್. ಆರ್. ಎಸ್. ಕಾಲೇಜು ಶಿರ್ವಾ, ಉಡುಪಿ ಜಿಲ್ಲೆ ಇವರಿಗೆ ಕೃತಜ್ಞತೆಗಳು)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಮಹಾಲಿಂಗಮ್ ಟಿ.ವಿ., (೧೯೬೯), ಎಡ್ಮಿನಿಸ್ಟ್ರೇಶನ್ ಎಂಡ್ ಸೋಶಿಯಲ್ ಲೈಫ್ ಅಂಡರ್ ವಿಜಯನಗರ (ದ್ವಿತೀಯ ಮುದ್ರಣ) ಭಾಗ ೧, ಮದ್ರಾಸ್, ಪು. ೧೯೭.
೨. ಸಾಲೆತ್ತೂರ್ ಬಿ.ಎ., (೧೯೩೪), ಸೋಶಿಯಲ್ ಎಂಡ್ ಪೊಲಿಟಿಕಲ್ ಲೈಫ್ ಇನ್ ದಿ ವಿಜಯನಗರ ಎಂಪೈರ್, ಭಾಗ ೧, ಮದ್ರಾಸ್, ಪುಟ. ೩೪೨.
೩. *SII Vol VII*, ಸಂಖ್ಯೆಗಳು; ೩೪೯, ೧೮೨.
ಭಟ್ ಗುರುರಾಜ., (೧೯೭೫), ಸ್ಟಡೀಸ್ ಇನ್ ತುಳುವ ಹಿಸ್ಟರಿ ಎಂಡ್ ಕಲ್ಚರ್ ಕಲ್ಯಾಣಪುರ, ಪುಟ ೧೯೫.
ಕಾಮತ್ ಎನ್. ಯು., (೧೯೭೮), ಹಂಜಮಾನ, ದಿ ಜರ್ನಲ್ ಆಫ್ ಇನ್ಸಿಟ್ಯೂಟ್ ಆಫ್ ಇಂಡಿಯನ್ ಸ್ಟಡೀಸ್, ಕಡಿಯಾಳಿ, ಉಡುಪಿ, Vol.I.
ಶೆಟ್ಟಿ ವಸಂತ. ಬಿ., (೧೯೮೮), ಬ್ರಹ್ಮಾವರದ ಇತಿಹಾಸ, ಬ್ರಹ್ಮಾವರ, ಪುಟ ೨೩-೨೪, ೪೭-೪೯.
ಶೆಟ್ಟಿ ವಸಂತ. ಬಿ., 'ವಿಜಯನಗರ ಪ್ರಾಂತೀಯ ಧೋರಣೆಗೆ ಸ್ಥಳೀಯ ಪ್ರತಿಕ್ರಿಯೆ' ಇತಿಹಾಸ ದರ್ಶನ, ಸಂಪುಟ ೬/೧೯೯೧
೪. *ARISE*, 1931-32 : ಸಂಖ್ಯೆ - ೩೩೯
ವಿಜಯನಗರ ಇನ್‌ಸ್ಕ್ರಿಪ್ಷನ್ಸ್, Vol II., (೧೯೮೫), ಗೋಪಾಲ್ ಬಿ. ಆರ್. (ಸಂ), ಮೈಸೂರು, ಸಂಖ್ಯೆ ೧೧೮೯.
೫. ಶೆಟ್ಟಿ ಜಗದೀಶ. ಬಿ., ದಿ ಆಗ್ರೋ ಇಕಾನಮಿಕ್ ರಿಲೇಶನ್ಸ್ ಅಂಡ್ ಸೋಶಿಯಲ್ ಸ್ಟ್ರಕ್ಚರ್ ಇನ್ ದಕ್ಷಿಣ ಕನ್ನಡ (ಕ್ರಿ. ಶ. ೧೦೦೦-೧೬೦೦) ಅಪ್ರಕಟಿತ ಪಿ. ಎಚ್.ಡಿ. ಪ್ರಬಂಧ. ಮಂಗಳೂರು ವಿಶ್ವವಿದ್ಯಾನಿಲಯ ೧೯೯೨. ಪುಟಗಳು ೧೦೪,೧೦೫,೧೦೬
೬. *IBID* ಪುಟಗಳು., ೧೦೧, ೧೦೨
೭. ರಮೇಶ್ ಕೆ.ವಿ., (೧೯೭೦), ಎ ಹಿಸ್ಟರಿ ಆಫ್ ಸೌತ್ ಕೆನರಾ, ಧಾರವಾಡ, ಪು. ೧೮೩
೮. ಭಟ್ ಗುರುರಾಜ., ಅದೇ, ಪುಟ, ೨೪೯.
ವೇಲುತ್ತಾಟ ಕೇಶವನ್., (೧೯೯೧), 'ದಿ ನೇಚರ್ ಆಫ್ ಆಗ್ರೇರಿಯನ್ ಕಾರ್ಪೋರೇಶನ್ಸ್ ಇನ್ ಸೌತ್ ಕೆನರ ಅಂಡರ್ ದಿ ಆಳುಪಾಸ್ ಎಂಡ್ ಹೊಯ್ಸಳಾಸ್', ಪ್ರೊ ಸೀಡಿಂಗ್ಸ್ ಆಫ್ ದಿ ಇಂಡಿಯನ್ ಹಿಸ್ಟರಿ ಕಾಂಗ್ರೆಸ್, ಡೆಲ್ಲಿ, ಪು. ೧೧೧
೯. ಶೆಟ್ಟಿ ಜಗದೀಶ್ ಬಿ., ಮೇಲೆ ಹೇಳಿರುವ ಪಿಎಚ್. ಡಿ ಪ್ರಬಂಧ, ಪುಟಗಳು ೪೫, ೪೬
೧೦. ಭಟ್ ಗುರುರಾಜ್., ಸ್ಟಡೀಸ್, ಪು. ೨೪೧-೪೨; ಬಳಿ ಎಂದರೆ ವಂಶ. ತುಳುನಾಡಿನಲ್ಲಿ ಬ್ರಾಹ್ಮಣರನ್ನು ಹೊರತುಪಡಿಸಿ ಬೇರೆ ಎಲ್ಲಾ ಜನರಲ್ಲಿ ಕಂಡುಬರುತ್ತದೆ.

ಡಾ॥ ಹೆಚ್. ಎಸ್. ಉಷಾರಾಣಿ*

# ಶಾಸನೋಕ್ತ ಅಷ್ಟಾಂಗಯೋಗ ಪಾಲಕರು

ಯೋಗಾಭ್ಯಾಸ ಕುರಿತ ಪ್ರಪ್ರಥಮ ಗ್ರಂಥವೇ ಪತಂಜಲಿ ರಚಿಸಿದ ಯೋಗಸೂತ್ರಗಳು. ಅದೊಂದು ಪ್ರಾಚೀನ ಯೋಗಶಾಸ್ತ್ರ.

ಯೋಗಶಾಸ್ತ್ರದ ಒಂದು ವಿಭಾಗ ರಾಜಯೋಗ ಗ್ರಂಥ. ಶಾಸನಗಳಲ್ಲಿ ಉಕ್ತವಾಗಿರುವ ಅಷ್ಟಾಂಗಯೋಗದ ಹಂತಗಳು ರಾಜಯೋಗಕ್ಕೆ ಸಂಬಂಧಿಸಿದುದು. ಪತಂಜಲಿ ಮಹರ್ಷಿ ಸೂಚಿಸಿದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿ ಎಂಬ ಸಾಧನೆಯ ಮೆಟ್ಟಿಲುಗಳು ಸ್ವಲ್ಪ ಮಾರ್ಪಾಟು ಹೊಂದಿ ಶಾಸನಗಳಲ್ಲಿ ಮೂಡಿಬಂದಿವೆ. ಅವು ಇಂತಿವೆ : "ಯಮ, ನಿಯಮ, ಸ್ವಾಧ್ಯಾಯ, ಧ್ಯಾನ, ಧಾರಣ, ಮೌನೋನುಷ್ಠಾಣ, ಜಪ, ಸಮಾಧಿ ಎಂದು. ಈಗಾಗಲೇ ಹರಿಹರ ಶ್ರೀನಿವಾಸರಾವ್[೧] ಅವರು ಅಷ್ಟಾಂಗ ಯೋಗದ ಪಾರಿಭಾಷಿಕ ಶಬ್ದದ ಅರ್ಥವನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿದ್ದಾರೆ. ಪ್ರಸ್ತುತ ಪ್ರಬಂಧದಲ್ಲಿ ಅರಸೀಕೆರೆಯ ೧೨ನೇ ಶತಮಾನದ ಶಾಸನಗಳನ್ನಾಧರಿಸಿ ಅಷ್ಟಾಂಗಯೋಗವನ್ನು ಸಾಮಾಜಿಕ-ಧಾರ್ಮಿಕ ಹಿನ್ನಲೆಯಲ್ಲಿ ಪರಿಶೀಲಿಸಲು ಯತ್ನಿಸಲಾಗಿದೆ.

ಹೊಯ್ಸಳರ ರಾಜಧಾನಿಗಳಲ್ಲಿ ಒಂದಾಗಿದ್ದ ಅರಸೀಕೆರೆ ಇಂದಿಗೂ ಶೈವ ಸಂಪ್ರದಾಯವನ್ನು ಹೊಂದಿದೆ. ಈ ಭಾಗದಲ್ಲಿ ಲಭ್ಯವಿರುವ ಬಹುತೇಕ ಶಾಸನಗಳು ಎರಡನೆ ವೀರಬಲ್ಲಾಳನಿಗೆ ಸಂಬಂಧಿಸಿದುದಾಗಿವೆ. ಈ ಶಾಸನಗಳಲ್ಲಿ ಶೈವ ಆಚಾರ್ಯರ ಪ್ರಸ್ತಾಪವಿದೆ. ಅರಸೀಕೆರೆಯ ಈ ಆಚಾರ್ಯರು ವಿದ್ವಾಂಸರು, ವೇದಾಂಗಗಳನ್ನು ಬಲ್ಲವರು ಇತ್ಯಾದಿಯಾಗಿ ವರ್ಣಿಸಲ್ಪಟ್ಟಿದ್ದಾರೆ.

ಉದಾಹರಣೆಗೆ, ನಿಜಾನಂದದೇವ ಎಂಬಾತ ಮಂತ್ರ ತಂತ್ರದಲ್ಲಿ ನಿಪುಣನಾಗಿದ್ದುದನ್ನು ಹಾರನಹಳ್ಳಿ ಶಾಸನದಲ್ಲಿ[೨] ಉಲ್ಲೇಖಿಸಿರುವುದು ಹೀಗಿದೆ: "ವೇದಶಾಸ್ತ್ರ ಪ್ರವಣಮತಿ ಸದಾಚಾರ ನಿಷ್ಠಂ ದಯಾತತ್ಪರ ನೀಶಶ್ರೀಶ ಪೂಜಾಕರಣ ಪರಿಣತಂ ಮಂತ್ರ ತಂತ್ರಜ್ಞನುರ್ವ್ವೀ ಸುರವರ್ಯ್ಯಂ ಕಾಶ್ಯಪಂ ಸ್ವೀಕೃತ ಪರಮಶಮಂ ಸತ್ಯ ಸಂಪಂನನೆದಾದರದಿಂ ತಂನಂ ಜನಂ ಕೀರ್ತಿಸುವಿನಮೆಸೆದಂ ಶ್ರೀ ನಿಜಾನಂದದೇವಂ" ಎಂದು.

ವ್ಯಾಪಾರ ವಹಿವಾಟುಗಳಲ್ಲಿ ನಿರತರಾಗಿದ್ದು ಸಾರ್ವಜನಿಕ ಕಾರ್ಯಗಳನ್ನು ಕೈಗೊಳ್ಳುತ್ತಿದ್ದ ವರ್ಗವೇ ವೀರಬಣಜಿಗಳು. ಅವರ ಧರ್ಮ ಕುರಿತು ಶಾಸನಗಳಲ್ಲಿ ಮೂಡಿಬಂದಿರುವ ಉದಾಹರಣೆ ಆಗಿ ಕೆಂಗಲ್ಲು ಶಾಸನ[೩] ಪಾಠವು ಇಂತಿದೆ. "ಸ್ವಸ್ತಿ ಸಮಸ್ತ ಭುವನ ವಿಖ್ಯಾತ ಪಂಚಶತ ವೀರಶಾಸನ ಲಬ್ಧಾನೇಕಗುಣ ಗಳಾಳಂಕೃತ ಸತ್ಯ ಸೌಚಾಚಾರ ಚಾರುಚರಿತ ಯಮ ನಿಯಮ ವಿಜ್ಞಾನ ವೀರಬಣಂಜು ಧರ್ಮ.... ಸಮಸ್ತ ನಖರಂಗಳು ಪ್ರಮುಖವಾದ ಸಾಯಿರೊಕ್ಕಲ್ಗಳು ಕಾಳಾಮುಖ ಸಮಯ ಸಮುದ್ಧರಣರಪ್ಪ ತ್ರಿಭುವನ ಶಕ್ತಿ ಪಂಡಿತರ ಶಿಷ್ಯನಪ್ಪ ಧರ್ಮರಾಸಿ ಪಂಡಿತರಂ ಧರ್ಮೇಸ್ವರಮೆಂದು ದೇವಾಲಯವ ನೆತ್ತಿಸುವನ್ತುಂ ಕೆರೆಯ ಕಟ್ಟಿಸುವಂತು" ಎಂದು ಕೆರೆ ದೇವಾಲಯ ಕಟ್ಟಿಸುವ ಪ್ರವೃತ್ತಿ ಹಾಗೂ ಅವರ ಯೋಗ ಕುರಿತು ಪ್ರಸ್ತಾಪಿಸುತ್ತದೆ.

ಸಮಾಜದಲ್ಲಿ ಬ್ರಾಹ್ಮಣರಿಗೆ ವಿಶೇಷ ಗೌರವ ಮತ್ತು ಅಧಿಕಾರವಿತ್ತು. ಇವರು ಶಿಕ್ಷಿತರಾಗಿದ್ದು ಜ್ಞಾನ ಹಾಗೂ ಸಂಸ್ಕೃತಿಗಳ ಭಂಡಾರವೇ ಆಗಿರುತ್ತಿದ್ದರು. ಅಗ್ರಹಾರಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದ ಬ್ರಾಹ್ಮಣ ಸದಸ್ಯರನ್ನು ಮಹಾಜನರೆಂದು ಕರೆಯಲಾಗಿದೆ. ಹೊಳಲಕೆರೆ ಗ್ರಾಮದ ಅರುವತ್ತಾರು ಮಹಾಜನರು ಯಮ ನಿಯಮ ಇತ್ಯಾದಿ ಶೀಲ ಗುಣಸಂಪನ್ನರೆಂದು ಹೇಳಲಾಗಿದೆ.[೪] ತಳಿಲೂರ ಪಾಳು ಶಂಕರ ದೇವರ ದೇವಾಲಯದ ಮುಂದಿರುವ ಶಿಲಾಶಾಸನವು[೫] ಪಲ್ಲವ ಗ್ರಾಮದ ವಿಪ್ರರನ್ನು ಬಣ್ಣಿಸುವ ಪರಿ ಬಹು ಸ್ವಾರಸ್ಯಕರವಾಗಿದೆ: - "ಒಂದೆಡೆ ವೇದನಾದಮಯವೊಂದೆಡೆ ವಾದ ವಿನೋದರಯ್ಯ ಮತ್ತೊಂದೆಡೆ ವಿಸ್ಮೃತ ಸ್ಮೃತಿ ವಿಭೂಷಿತವೊಂದೆಡೆ ತಂತ್ರಸೇವ್ಯ ಮಿಂನೊಂದೆಡೆ ಶಬ್ದಶಾಸ್ತ್ರ ಪರಿಭಾವಿತಮೆಂಬಿನೆಗಂ ವಿದಗ್ಧಾ ಮಂದಿರ ಮಾಯ್ತು ಪಲ್ಲವಪುರ ದ್ವಿಜಪಾವನಮಗ್ರಹಾರದೊಳು॥ ಹೋಮ ಸಮಾಧಿ ಯಜ್ಞ ಜಪ ಮೌನ ಮಹಾಬ್ರತ ಶೀಲಧಾರಣಾಧಾಮರನೇಕ ಶಾಸ್ತ್ರ ನಿಪುಣರ್ಪ್ಪರಮಾಗಮ ತತ್ವ ವೇದಿಗಳ್ ಶ್ರೀಮದುಪೇಂದ್ರ ಭಕ್ತಿಭರಿತರ್ಸ್ವದನುಗ್ರಹಮೆಂದು ಪಲ್ಲವ ಗ್ರಾಮದ ವಿಪ್ರರಂನ್ಯರನದೇ ಪೊಗಳ್ದಪ್ಪೆ ಮಹಾ ಪ್ರಭಾವದಿಂ॥ ಎಂದು ಆ ಗ್ರಾಮವಾಸಿಗಳ ಬಹುಮುಖ ಪ್ರತಿಭೆಯನ್ನು ಪರಿಚಯಿಸುತ್ತದೆ. ಅದೇ ದೇವಾಲಯದ ಎಡಭಾಗದ ಗೋಡೆಯ ಮೇಲಿರುವ ಶಾಸನವು[೬] ಸದ್ಗುಣ ಸಂಪನ್ನರಾದ ಅಶೇಷ ಮಹಾಜನರು ನಾನಾ ಭಾಷೆಯ ಲಿಪಿಶಾಸ್ತ್ರಜ್ಞರೆಂದು ವರ್ಣಿಸುತ್ತದೆ. ಶಾಸನದ ಪಾಠ, "ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾನ ಜಪ ಸಮಾಧಿ ಶೀಲಗುಣ ಸಂಪನ್ನರುಂ ದೇವ ದ್ವಿಜ ಗುರು ಪೂಜಾ ನಿರತರುಂ ವೇದಶಾಸ್ತ್ರದ್ಯನೇಕ ತರ್ಕ ವ್ಯಾಕರಣ ಕಾವ್ಯ

* ೪೩೩, 'ಇ' ಬ್ಲಾಕ್, ಜೆ.ಸಿ. ನಗರ, ಮೈಸೂರು - ೫೭೦ ೦೦೮

ನಾಟಕ ಭರತ ಚತುರಾನನರುಂ ಕರ್ನಾಟ ಲಾಟ ದ್ರಾವಿಳ ನಾನಾದೇಶ ಭಾಷಾ ವಿಶೇಷ ಲಿಪಿ ನಿಪುಣ ವಿದ್ಯಾಧರರುಂ ಧೈರ್ಯ ಧರಾಧರರು" ಎಂದು. ಅವರ ಪಾಂಡಿತ್ಯವನ್ನು ಪ್ರಚುರಪಡಿಸುತ್ತದೆ. ಅದೇ ರೀತಿ ಕೆಲ್ಲಂಗೆರೆಯ ವಿಪ್ರರನ್ನು ಈ ರೀತಿ ಸ್ತುತಿಸಲಾಗಿದೆ. "ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣಮೋನಾನುಷ್ಠಾನ ಜಪ ಸಮಾಧಿ ಶೀಲ ಗುಣ ಸಂಪಂನರುಂ ಯಜನ ಯಾಜನ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಶಟ್ಕರ್ಮ ನಿಯತರುಂ ರುಗ್ಯಜುಸ್ಸಾಮಾಥರ್ವ್ವಣ ಷಡಂಗ ವಂದಿವೃಂದ ದಾರಿದ್ರಾನ್ಧಕಾರ ಸಂಹರಣ ಪರಿಣತ ಮಾತ್ತಂಡರುಂ ಮುಂಜಿ ಯಜ್ಞೋಪವೀತ ಬದ್ಧರುಂ ಹೇಮ ಕರ್ಣ್ನ ಕುಂಡಲರುಂ ಕ್ಷತ್ರಿಯ ವೈಶ್ಯ ಶೂದ್ರ ತ್ರಯ ಲಲಾಟ ಪಾದಘಟ್ಟಿತರು ಆದಿ ಸಮರ್ಥರುಂ"[೭] ಎಂಬುದಾಗಿ ಶಟ್ಕರ್ಮ ಇತ್ಯಾದಿಗಳಲ್ಲಿ ಸಮರ್ಥರಾಗಿದ್ದುದನ್ನು ಪರಿಚಯಿಸಲಾಗಿದೆ.

೧೨ನೇ ಶತಮಾನದ ವೇಳೆಗೆ ಶೈವಧರ್ಮ ಹಲವು ಪಂಥಗಳಿಂದ ಕೂಡಿತ್ತು. ಲಕುಲೀಶ, ಪಾಶುಪತ, ಕಾಳಾಮುಖ ಪಂಥಗಳು ಮುಖ್ಯವಾಗಿದ್ದು, ಈ ಪರಂಪರೆಯ ಮುನಿ ಸಮೂಹದ ವರ್ಣನೆಯನ್ನು ಜಯಚಾಮರಾಜಪುರ ಶಾಸನ ದಲ್ಲಿ[೮] ದಾಖಲಿಸಲಾಗಿದೆ. ಈ ಶಾಸನದ ಪ್ರಕಾರ, "ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣಮೋನಾನುಷ್ಠಾನ ಜಪ ಸಮಾಧಿ ಎಕ್ಕೋಟಿ ಶೀಲ ಗುಣಸಂಪನ್ನರುಂ ಲಾಕುಳಾಗಮ ಸಮಯ ಸಮುದ್ಧರಣರುಂ ಎಕ್ಕೋಟಿ ಮುನೀಂದ್ರವಂದಾ ನಂದರುಂ ಕಾಳಾಮುಖ ಪ್ರತಿಬದ್ಧರುಂ ಶ್ರೀ ರಾಮನಾಥದೇವರ ಪಾದಾರಾಧಕರುಮಪ್ಪ ಕೇತಜೀಯರ ಶಿಸ್ಸ್ಯ ದೇವೇಂದ್ರ ಶಕ್ತಿ ಪಂಡಿತರು ಅವರ ಗುಡ್ಡಿ ಪ್ರತ್ಯಕ್ಷ ಗಂಗೆ ದೇಕವ್ವೆ, ದೇವೇಂದ್ರ ಶಕ್ತಿ ಪಂಡಿತರ ಶಿಸ್ಸ್ಯ ರಾಮಸಕ್ತಿ, ರಾಮಸಕ್ತಿಯ ಸಿಸ್ಸ್ಯ ಕಲ್ಯಾಣ ಶಕ್ತಿ ಕಲ್ಯಾಣ ಸಕುತಿಯ ಶಿಸ್ಯ ವಾಮಸಕುತಿ ವಾಮಸಕುತಿಯ ಸಿಸ್ಸ್ಯ ಮಹದೇವಜೀಯ ಮಹದೇವಜಿಯರ ಶಿಸ್ಸ್ಯ ಚಿಕ್ಕಕಲಿಜೀಯ" ಎಂಬುದಾಗಿ ಲಾಕುಳ ಕಾಳಾಮುಖ ಗುರು ಪರಂಪರೆಯನ್ನು ಹೆಸರಿಸಲಾಗಿದೆ. ಈ ಪಂಥಗಳಲ್ಲಿ ಹೆಚ್ಚು ವ್ಯತ್ಯಾಸವಿಲ್ಲದಿರುವುದನ್ನು ಗಮನಿಸಬಹುದು. ಈ ಮುನಿವರ್ಯರ ಶಿಷ್ಯರಲ್ಲಿ ದೇಕವ್ವೆ ಎಂಬ ಸ್ತ್ರೀಯ ಪ್ರಸ್ತಾಪ ವಿಶೇಷ.

ಒಟ್ಟಿನಲ್ಲಿ ಇದುವರೆಗಿನ ಶಾಸನೋಕ್ತ ಅಷ್ಟಾಂಗಯೋಗ ಅಧ್ಯಯನದಿಂದ ಪತಂಜಲಿ ಯೋಗಸೂತ್ರಕ್ಕಿಂತ ಅಲ್ಪ ವ್ಯತ್ಯಾಸ ವುಳ್ಳದ್ದಾಗಿದೆಯಾದರೂ ಸಾಧನೆಯಲ್ಲಿ ಜನತೆ ಹಿಂದುಳಿಯ ದಿರುವುದು ಗೋಚರಿಸುತ್ತದೆ. ಆಯಾ ಕಾಲದ ಸಾಮಾಜಿಕ-ಧಾರ್ಮಿಕ ಚರ್ಯೆಯ ಜನತೆ ದೇಹ ಮತ್ತು ಮನಸ್ಸನ್ನು ಸಮನ್ವಯಗೊಳಿಸಲು ತಾಂತ್ರಿಕ ತತ್ವಗಳನ್ನು ಅಳವಡಿಸಿ ಕೊಂಡಿದುದ್ದು ಮನವರಿಕೆಯಾಗುತ್ತದೆ.



## ಆಧಾರಸೂಚಿ ಮತ್ತು ಅಡಿ ಟಿಪ್ಪಣಿಗಳು


೧. 'ಇತಿಹಾಸ ದರ್ಶನ', ಸಂಪುಟ ೯/೧೯೯೪, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು.

೨. ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟ ೧೦., ಅರಸೀಕೆರೆ ಶಾಸನ ಸಂಖ್ಯೆ ೨೩೨, ಕ್ರಿ.ಶ. ೧೧೫೬.

೩. ಅದೇ, ಅರಸೀಕೆರೆ, ಶಾಸನ ಸಂಖ್ಯೆ, ೩೨೫, ಕ್ರಿ.ಶ. ೧೧೮೧.

೪. ಅದೇ, ಅರಸೀಕೆರೆ, ಶಾಸನ ಸಂಖ್ಯೆ, ೧೨೮, ಕ್ರಿ.ಶ. ೧೧೯೬.

೫. ಅದೇ, ಅರಸೀಕೆರೆ, ಶಾಸನ ಸಂಖ್ಯೆ, ೧೬೧, ಕ್ರಿ.ಶ, ೧೧೯೧.

೬. ಅದೇ, ಅರಸೀಕೆರೆ, ಶಾಸನ ಸಂಖ್ಯೆ, ೧೬೩, ಕ್ರಿ.ಶ. ೧೨ ನೇ. ಶ.

೭. ಅದೇ, ಅರಸೀಕೆರೆ, ಶಾಸನ ಸಂಖ್ಯೆ, ೧೪೯, ಕ್ರಿ.ಶ. ೧೧೪೨.

೮. ಅದೇ, ಅರಸೀಕೆರೆ, ಶಾಸನ ಸಂಖ್ಯೆ, ೯೬, ಕ್ರಿ. ಶ. ೧೧೭೭.

ಡಾ|| ಡಿ. ಕೆ. ಚಿತ್ತಯ್ಯ ಪೂಜಾರ್*

# ನಿಡುಗಲ್ಲಿನ ಶಾಸನಗಳಲ್ಲಿ ವರ್ತಕರು

ಮಾನವ ಜನಾಂಗದ ಆರ್ಥಿಕ ಬದುಕನ್ನು ರೂಪಿಸಿದ ಹಲವಾರು ಅಂಶಗಳಲ್ಲಿ ವರ್ತಕರು ಮತ್ತು ವರ್ತಕ ಸಂಘಗಳು ತಮ್ಮದೇ ಆದ ಪಾತ್ರ ವಹಿಸಿವೆ. ವೈಯಕ್ತಿಕವಾಗಿ, ಸಾಂಘಿಕವಾಗಿ ಈ ವರ್ತಕರು ಕೈಕೊಂಡ ವ್ಯಾಪಾರ ವೃತ್ತಿಯಿಂದ ಸಮಾಜದ ಜೀವನ ಸ್ಥಿತಿ ಗತಿಗಳು ಒಂದು ಆಕಾರ ಪಡೆಯುತ್ತವೆ. ಇವು ರಾಜರು ಮತ್ತು ಪಾಳೆಗಾರರ ಕಾಲದಲ್ಲಿ ಬಹಳ ಪ್ರಾಮುಖ್ಯತೆ ಪಡೆದವುಗಳಾಗಿದ್ದವು. ಭಾರತೀಯ ಹಿನ್ನೆಲೆಯಲ್ಲಿ ಹೇಳುವುದಾದರೆ ವರ್ತಕರ ಪ್ರಥಮ ಉಲ್ಲೇಖ ವೈದಿಕ ಸಾಹಿತ್ಯದಷ್ಟು ಪೂರ್ವದಲ್ಲಿಯೇ ಲಭಿಸುವುದು. ಮಹಾಭಾರತದಲ್ಲಿ ಸರಕು ಮೊದಲಾದ ವ್ಯಾಪಾರದ ವಿಷಯವಿದೆ. ಆದರೆ ಬೌದ್ಧ ಸಾಹಿತ್ಯದಲ್ಲಿ ವರ್ತಕರು ಹಾಗೂ ವರ್ತಕರ ಸಂಘಗಳನ್ನು ಕುರಿತು ಸವಿವರವಾದ ಸಾಮಗ್ರಿ ಇದೆ.[೧]

ವ್ಯಾಪಾರ ಪರಂಪರೆಯನ್ನು ತೋರಿಸುವ ಪ್ರಧಾನ ಆಕರಗಳೆಂದರೆ ಕಾವ್ಯಗಳು. ಆದರೆ ಸಾಂಪ್ರದಾಯಿಕತೆ, ಉತ್ಪ್ರೇಕ್ಷೆಗಳಿಂದ ಕೂಡಿದ ವಸ್ತುನಿಷ್ಠತೆಯನ್ನು ಹೊತ್ತು ನಿಂತಿರುವ ಶಾಸನಗಳು ಕಾವ್ಯಗಳಿಂಗಿಂತ ಹೆಚ್ಚು ಪ್ರಯೋಜನಕಾರಿ ಯೆನಿಸಿವೆ. ಇವು ನಾಡಿನ ಆರ್ಥಿಕ ವ್ಯವಸ್ಥೆಯ ಮೂಲಭೂತ ಘಟಕಗಳಾದ ವರ್ತಕರ ಮತ್ತು ಸಂಘಗಳ ಚರಿತ್ರೆಯನ್ನು ಪ್ರಕಟಿಸುತ್ತವೆ.

ನಿಡುಗಲ್ಲಿನ ರಾಜಕೀಯ, ಸಾಂಸ್ಕೃತಿಕ ಇತಿಹಾಸ ಈಗಾಗಲೆ ತಿಳಿದ ವಿಷಯವಾಗಿದ್ದು, ಆ ಪ್ರದೇಶದ ಅಂದಿನ ಅರ್ಥವ್ಯವಸ್ಥೆಗೆ ಅಲ್ಲಿನ ವರ್ತಕರು ನೀಡಿದ ಕೊಡುಗೆಯನ್ನು ಅದೇ ಕಾಲದ ಶಾಸನಗಳು ಮೌನವಾಗಿ ಧ್ವನಿಸುವುದನ್ನು ಕಾಣಬಹುದು. ಇಲ್ಲಿನ ವರ್ತಕ ಸಂಘಗಳಲ್ಲಿ "ಅಯ್ಯಾವೊಳೆ ಐನೂರ್ವರು, ತಂಬುಲಿಗ ಸಾಸಿರ್ವರು, ಹಂಜಮಾನಗಳು ವಿನಿಮಯ (ವರ್ತಕ) ಸಂಘಗಳಾಗಿಯೂ, ತೆಲ್ಲಿಗರೈವತ್ತೊಕ್ಕಲು, ಮಾಲೆಗಾರ ನಾಲ್ವತ್ತೊಕ್ಕಲು, ತೋಟಿಗರೈನೂರ್ವರು, ಸಾಲೆ ಸಾಸಿರ್ವರು ಅಥವಾ ಸಮಯ ಸಾಸಿರ್ವರು, ಜಪ್ಪಿಗ ಹೊತ್ತಳಿ, ಕುರುಬಸೇಣಿ"[೨] ಮುಂತಾದ ಸಂಘಗಳು ಶಾಸನಗಳಲ್ಲಿ ಕಂಡು ಬರುತ್ತವೆ. ಇದರಲ್ಲಿ ವೈಷ್ಣವ, ಜೈನ, ಶೈವಮತದ ವ್ಯಾಪಾರ (ವರ್ತಕ) ಸಂಘದವರೂ ಇರುತ್ತಾರೆ. ಇವರಲ್ಲಿ ದೇವಾಲಯ-ಕಟ್ಟಿಸುವುದು, ಜೀರ್ಣೋದ್ಧಾರ ಮಾಡಿಸುವುದು, ಕೆರೆಗಳ ನಿರ್ಮಾಣ, ವಿಗ್ರಹ, ಲಿಂಗ ಪ್ರತಿಷ್ಠಾಪನೆ, ದೇವಾಲಯಗಳ ಚೈತ್ರ-ಪವಿತ್ರಪರ್ವ, ಖಂಡಸ್ಪುಟಿತ, ಅಂಗಭೋಗ ರಂಗಭೋಗ ಮುಂತಾದ ಕಾರ್ಯಗಳಿಗೆ ವೈಯಕ್ತಿಕವಾಗಿಯೂ, ಸಾಂಘಿಕವಾಗಿ ದಾನಮಾಡಿರುವುದು ಕಂಡುಬರುತ್ತದೆ. ಇದರಿಂದ ವ್ಯಕ್ತವಾಗುವ ವರ್ತಕರ ಧರ್ಮಬುದ್ಧಿ, ಭಕ್ತಿಭಾವ, ತ್ಯಾಗ, ಮೌಲ್ಯಗಳ ಪ್ರತಿಪಾದನೆಯು ಒಂದು ಮುಖ್ಯವಾದ ಅಂಶವಾಗಿದೆ.

ವರ್ತಕರು ತಮ್ಮ ಸರಕು, ಹಣ, ಪ್ರಾಣ, ಪ್ರಾಣ ಸಂರಕ್ಷಣೆಗಾಗಿ ಇಟ್ಟಕೊಂಡಿರಬಹುದಾದ ಯೋಧಪಡೆ, ಯೋಧರ ವಿವೇಚನೆಯೂ ಪೆಣ್ಬುಯಲ್, ಊರಳಿವು, ವೀರಮರಣ ಮುಂತಾದ ಪ್ರಸಂಗಗಳಲ್ಲಿ ವರ್ತಕರು ಹೋರಾಡಿ ವೀರಮರಣ ಹೊಂದಿದ ಸಂಗತಿಗಳೂ ಸಹ ತಿಳಿದು ಬರುತ್ತವೆ. ನಿಡುಗಲ್ಲಿನ ಹಂಟಾದ ಪಟ್ಟಿಯ ಮಗ. ಕಟ್ಟಿ ಅಪ್ಪ[೩] ಮತ್ತು ವೈಸರ ರಾಮಿಸೆಟ್ಟಿಯ ಮಗ ಬೀಮಸೆಟ್ಟಿಯ[೪] ವೀರಗಲ್ಲುಗಳು ಇದೇ ತೆರನಾದವು.

ನಿಡುಗಲ್ಲಿನ ವೈಶ್ಯರ ವ್ಯಾಪಾರದ ವರ್ಣನೆಯನ್ನು ಅವರು ಕೇಳಿದುದನ್ನು ಕೊಡುವಂಥ ಕಲ್ಪವೃಕ್ಷಗಳೆರಡೂ ಒಂದು ಶಾಸನವು[೫] ಬಹಳ ಸುಂದರವಾಗಿ ವರ್ಣಿಸಿರುವುದನ್ನು ಕಾಣಬಹುದು: "ವಿನಯವಿಭೂಷಣರ್ಷತಿಹಿತಾಚರಣರ್ಬ್ಬುಹುಕಾರ್ಯ ಕಾರಣರ್ಕ್ಕನಕ ಗಿರೀಂದ್ರಧೈರ್ಯರಮೆಳೇಂಗಿತವರ್ಯ್ಯರು ದಾರಚರ್ಯರಾಮನಸಿಜ ಮೂರ್ತ್ತಿಗಳ್ವಿನುತ ಕೀರ್ತಿಗಳುತ್ತ ಮುದೇಶವರ್ತ್ತಿಗಳ್ದನದ ಸಮಾನರೆಯ್ದೆ ಸವಿಶೇಷ್ಯಯರು ನೀ ನಿಡುಗಲ ವೈಶ್ಯರುಂ" ಎಂದು ಹೇಳುವುದರ ಜೊತೆಗೆ ವ್ಯಾಪಾರಸ್ಥರಲ್ಲಿರಬಹುದಾದ ವಿಧಾನಗಳನ್ನು ಅಂದರೆ ಒಂದೇ ಕಡೆ ಇದ್ದು ವ್ಯಾಪಾರ ಮಾಡುವವರು, ದೇಶವನ್ನು ಸುತ್ತಿ ವ್ಯಾಪಾರ ಮಾಡುವವರು, ವಿದೇಶಗಳಿಗೆ ಹೋಗಿ ವ್ಯಾಪಾರ ಮಾಡಿಕೊಂಡು ಬರುವಂತಹ ವರ್ತಕರು ಅಥವಾ ನಿಡುಗಲ್ಲಿನಲ್ಲಿ ವೈಶ್ಯರು ಇದ್ದರು ಎನ್ನುವುದನ್ನು ಅವರ ಕೀರ್ತಿ ವಿಶೇಷಗಳನ್ನು ಶಾಸನ ಮುಂದು ವರೆದು ಹೇಳುವುದನ್ನು ಈ ಮುಂದೆ ಯಥಾವತ್ ನಿರೂಪಿಸ ಲಾಗಿದೆ.

... ಮನು ಮುನಿಮಾರ್ಗ್ಗರೆಂದು ಸುಜನಾಶ್ರಯರೆಂದು ಮನೋನುರಾಗರೆಂದನುಪರೆಂದು ಧರ್ಮಗುಣರೆಂದು ಸಮಸ್ತ ಸುಗಂಧವಸ್ತು ವಾ(ಹ)ನ ಕನಕಾದಿ ಲಕ್ಷಣವಿಚಕ್ಷಣರೆಂದು, ಮಹಾನುಭಾವರೆಂದನುದಿನ ಮಳ್ತಿಯಿಂ ಪೊಗಳ್ವುದುದಾರಯೇನಿಡುಗಲ್ಲ ವೈಶ್ಯರಂ|| ಧರಣಿಗೆ ಮೇರೆ ಸರಿತ್ಪತಿ ಶರಧಿಗೆ ದೆಸೆದೆಸೆಗೆ ದಿಗ್ಗಜಂ ತಾನಾಯ್ತಿಧರೆಗೆ ಶರನಿಧಿಗೀದೆಸೆ ದಿಕ್ಕರಿಗಂ ಮೆರೆದುದೈ ವೈಶ್ಯ ಜನದೊಂದು ಜಸಂ / ವಾರಿಧಿಗಂಭೀರಂ ನಾಮಾರ ಸುರೂ

* ಕನ್ನಡ ವಿಭಾಗ, ಎಸ್. ಎಮ್. ಕೆ. ಆರ್. ವಿ. ಮಹಿಳಾ ವಿದ್ಯಾಲಯ, ಜಯ.ನಗರ, ಬೆಂಗಳೂರು - ೫೬೦ ೦೧೧

ಪರನನಂತಲಕ್ಷ್ಮೀಶ್ವರರಂ / ಚಾರು ನಿಡುಗಲ್ಲಿ ವೈಶ್ಯರನೊರದೆಡೆ ಬೇಡುವಂದಿ ಕಲ್ಪದ್ರುಮರಂ॥ ಸ್ವಸ್ತಿ ಸಮಸ್ತ ಭವನೋತ್ಪತ್ತಿ ನಿಮಿತ್ತಕ... ಕಾರಣ ಮಹಾಸಂಭೂತ ವೇದಾಂಗಸತಸರ ಸಿಜನಾಭಿ ನಾಭಜನ್ಮೋತ್ಸವ ಶತನಿ....ತ್ತರ ವೈಶ್ಯಕುಲ ಕಮಲದಿವಾಕರ ರಂ ವೈಶ್ಯಕುಲವಾರ್ದ್ಧಿವರ್ದ್ಧನ ಸುಧಾಕರರಂ ವೈಶ್ಯಕುಲೋದ್ಧರಣರುಂ ಯಮನಿಯಮ ವಿಶಿಷ್ಟರುಂ ಶಿಷ್ಟಜನೇಷ್ಟರುಂ ಗೋತ್ರ ಪವಿತ್ರರುಂ ಚಾರು ಚಾರಿತ್ರರಂ ಆಶ್ರಿತಜನಕಲ್ಪವೃಕ್ಷರುಂ ಸುಜನೈಕ್ಯ ದಕ್ಷರಂ ಅಂನದಾನ ವಿನೋದಿಗಳುಂ ಕಾಲತ್ರಯ ವೇದಿಗಳುಂ ಸುವರ್ಣದಾನ ಶೂರರುಂದಯಾಬ್ಧಿತೀರರುಂ ಬಂಧುಜನ ಚಿಂತಾಮಣಿಗಳುಂ ಸುಜನ ಜನಾಗ್ರಣಿಗಳುಂ ಸು... ವಿವೇಕರುಂ ಸಕಳಬ್ಯವಹಾರಂ ನಿಕರುಂ ಸತ್ಯರಾಧೇಯಂ ಶೌಚಗಾಂಗೇಯರುಂ ಸಹನಮದಾಮೋದರರುಂ ವಿಪ್ರಪ್ರಸಾದರುಂ, ದೇವದ್ವಿಜರು ಭಕ್ತರುಂ ದಾನಗುಣ ಶಕ್ತರುಂ ವೃದ್ಧಾಭಾರ ನಿಯತ ಮಾರ್ಗ್ಗರುಂ ಪ್ರಣೀತ ಬಂಧುವರ್ಗರುಂ ಶ್ರೀಯಮೃತಲಿಂಗ ನಕರೇಶ್ವರ ದೇವರ ದಿಬ್ಯಶ್ರೀ ಪಾದಪದ್ಮಾರಾಧಕರುಂ ಪುಣ್ಯಸಾಧಕರುಮಪ್ಪ ಶ್ರೀ ಮನ್ಮಹಾವಡ್ಡವ್ಯವಹಾರಿ ವೈಶ್ಯಾಶೇಷ ನಕರಂಗಳು. ಉಭಯ ನಾನಾದೇಶೀ ಮುಖ್ಯ ಸಮಸ್ತನಕರ ಮುಮರಿ ದಂಡಂಗಳುಂ ನಿಡುಗಲ್ಲ ಕೋಂಟೆಯ ಶ್ರೀ ನಕರೇಶ್ವರ ದೇವರ . . .

ಮೊದಲೇ ಹೇಳಿದ ಹಾಗೆ ಕರ್ನಾಟಕದ ಶಾಸನಗಳಲ್ಲಿ ಕಂಡುಬರುವ ಸೆಟ್ಟಿಯರನ್ನು ವೈದಿಕ, ಜೈನ, ಶೈವ, ಇತರೆ ಎಂದು ವರ್ಗೀಕರಿಸಿಕೊಂಡು ಅಧ್ಯಯನ ಮಾಡಬಹುದಾದರೂ ಸದ್ಯಕ್ಕೆ ನಿಡುಗಲ್ಲು ಶಾಸನಗಳಲ್ಲಿ ಗುಜ್ಜನಡುವಿನ ಪಾನಕಸೆಟ್ಟಿ[೬] ಕೋಣನ ಕುರಿಕೆ ಸವಿಸೆಟ್ಟಿಮಗ...ಸೆಟ್ಟಿ ಬೊಮ್ಮಿಸೆಟ್ಟಿ ಮಗ-ತಂಮಿಸೆಟ್ಟಿ[೭] ಅರಸೀಕೆರೆ ಸೆಟ್ಟಿಗೌಡ[೮], ಮತ್ತು ಅರಸಿಕೆರೆಯ ಸೆಟ್ಟಿಗೊಂಡ ಗವಡ್[೯] ಸೆಟ್ಟಿ ಪಟ್ಟಣಸ್ವಾಮಿ[೧೦] ಕಂಟಾದ ಸೆಟ್ಟಿಯ ಮಗ ಕಟ್ಟಿ ಅಪ್ಪನು[೧೧] ಹಾಗೂ ವೈಸರ ರಾಯಿಸೆಟ್ಟಿಯರ ಮಗ ಬೀಮಿ ಸೆಟ್ಟಿ[೧೨] ಎನ್ನುವ ಉಲ್ಲೇಖಗಳಿವೆ. ನಿಡುಗಲ್ಲಿನ ಶಾಸನಗಳು[೧೩] ಒತ್ತಿ ಒತ್ತಿ ವೈಶ್ಯರು ಎಂದೇ ಪ್ರತಿಪಾದಿಸುವುದನ್ನು ಕಂಡಾಗ ಸಾಮಾನ್ಯವಾಗಿ ಇವರೆಲ್ಲಾ ವೈದಿಕ ವರ್ತಕರೇ ಇರಬಹುದೆಂದು ಖಚಿತವಾಗುತ್ತದೆ. ಆದರೂ ವೈಸರ ರಾಮಿಸೆಟ್ಟಿಯರ ಮಗ ಬೀಮಿಸೆಟ್ಟಿ[೧೪] ಯು ನಿಷಿಧಿಯನ್ನು ನೋಡಿದಾಗ ಬಹುಶಃ ಇವನು ಜೈನ ವರ್ತಕನಿರಬಹುದೆಂದು ಅನಿಸುತ್ತದೆ. ಈ ನಿಡುಗಲ್ಲಿನ ಶಾಸನವು ಹೇಳುವ ವರ್ತಕರ ವಿವಿಧ ಪ್ರಕಾರಗಳನ್ನು ಈ ಕೆಳಗಿನಂತೆ ವಿಭಾಗಿಸಿಕೊಂಡು ಅಧ್ಯಯನ ಮಾಡಬಹುದು.

೧. ವೃದ್ಧಾಚಾರನಿಯತ ಮಾರ್ಗ್ಗರುಂ, ೨. ಶ್ರೀ ಮಹಾವಡ್ಡವ್ಯವಹಾರಿ ವೈಶ್ಯರು ೩. ಆಶೇಷ! ನಕರಂರಗಳು ೪. ಉಭಯ ನಾನಾದೇಶಿಮುಖ್ಯ ೫. ಸಮಸ್ತ ನಕರ ಮುಂಮರಿ ದಂಡುಂಗಳು ಮತ್ತು ೬. ಸೆಟ್ಟಿಪಟ್ಟಣಸ್ವಾಮಿಗಳೆನ್ನುವ ವ್ಯಾಪಾರಿಗಳು ಸೇರಿ ನಿಡುಗಲ್ಲಿನಲ್ಲಿರುವ ಶ್ರೀ ನಗರೇಶ್ವರ ದೇವಾಲಯಕ್ಕೆ ಆದರ ನೈವೇದ್ಯಕ್ಕೆ ಅಂಗ ರಂಗಭೋಗಕ್ಕೆ ನಂದಾದೀವಿಗೆ ಪಾತ್ರ ಪಾವುಳಕ್ಕೆ, ಮಾಟಕೂಟಕ್ಕೆ (ರಿಪೇರಿ) ತಪೋಧನರ ಆಹಾರ ದಾನಕ್ಕೆ, ಚೈತ್ರ ಪವಿತ್ರಕ್ಕೆ ಅನೇಕ ದಾನ ದತ್ತಿಗಳನ್ನು ಬಿಟ್ಟಿದ್ದಾರೆ ಮತ್ತು ನಿಡುಗಲ್ಲಿನ ಅರಸ ಇರುಂಗೋಳ ದೇವನ ಅಪ್ಪಣೆ ಪಡೆದು ಕೆಲವು ಭೂ ಭಾಗವನ್ನು ದತ್ತಿಯಾಗಿ ಬಿಟ್ಟು ಅದರ ಜೊತೆಗೆ ತಮ್ಮ ಮೇಲೆ ರಾಜ ವಿಧಿಸುತ್ತಿದ್ದ ಕೆಲವು ತೆರಿಗೆಗಳನ್ನೂ ಸಹ ಕೊಟ್ಟಂತೆ ತಿಳಿಯುತ್ತದೆ. ಈ ಸಂಘದ ರಚನೆಯ ವಿಷಯದಲ್ಲಿ ಶಾಸನಗಳು ಹೆಚ್ಚು ಬೆಳಕನ್ನು ಬೀರುವುದಿಲ್ಲ. ಸಂಘದ ಮುಖ್ಯಸ್ಥನನ್ನು 'ಪಟ್ಟಣಸ್ವಾಮಿ' ಎಂಬುದಾಗಿ ಕರೆಯುತ್ತಿದ್ದರು. ಈ ಪಟ್ಟಣಸ್ವಾಮಿಯು ವರ್ತಕರಲ್ಲಿ ಅತಿ ಶ್ರೀಮಂತನೂ ವೃದ್ಧನೂ ಆಗಿದ್ದಿರಬಹುದು. ಪಟ್ಟಣದ ರಾಜನು ತನಗೆ ವಿವೇಕಿಯೆಂದು ಕಂಡು ಬಂದ ವ್ಯಕ್ತಿಗೆ 'ಪಟ್ಟಣಸ್ವಾಮಿ' ಪಟ್ಟಣವನ್ನು ಕೊಡುತ್ತಿದ್ದನು.[೧೫] ಪಲ್ಲವಾದಿತ್ಯನು ಕರವಯ್ಯ ಎಂಬಾತನಿಗೆ ಮುಮ್ಮಡಿ ಗವಳೆ ಪಲ್ಲವಾದಿತ್ಯ ನೊಳಂಬಸೆಟ್ಟಿ ಎಂಬ ಹೆಸರನ್ನು ಕೊಟ್ಟು ಪಟ್ಟಕಟ್ಟಿ ಕುದುರೆ, ಕೊಡೆ, ಕುಂಚ, ತಳಿಗೆ, ಗದ್ದಿಗೆ ಮುಂತಾದವನ್ನು ರಾಜ ಮರ್ಯಾದೆಯಿಂದ ಕೊಡುವ ವಿಷಯವು ಒಂದು ಶಾಸನದಲ್ಲಿದೆ.[೧೬] ಇದನ್ನು ನೋಡಿದರೆ ವರ್ತಕ ಶ್ರೇಣಿಗಳ ವಿಷಯದಲ್ಲಿ ರಾಜನು ಆಸಕ್ತನಾಗಿದ್ದನೆಂದೂ, ಅವುಗಳ ಮೇಲೆ ಅವನಿಗೆ ಒಂದು ರೀತಿಯ ಹತೋಟಿ ಇದ್ದಿರಬಹುದೆಂದೂ ಕಂಡುಬರುತ್ತದೆ. ಪಟ್ಟಣಸ್ವಾಮಿಯನ್ನು ಊರಿನ ವರ್ತಕರೇ ಆರಿಸಿಕೊಳ್ಳುತ್ತಿದ್ದುದೂ ಅಸಂಭವವಲ್ಲ. ಯಾವುದಾದರೂ ತೀರ್ಮಾನವನ್ನು ಇವನ ಎದುರಿಗೇ ವರ್ತಕರು ತೆಗೆದುಕೊಳ್ಳುತ್ತಿದ್ದರು. ಇಲ್ಲಿ ಬರುವ ವರ್ತಕ ಸಂಘಗಳ ಪಾರಿಭಾಷಿಕ ಹೆಸರುಗಳನ್ನು ಈ ಕೆಳಗಿನಂತೆ ಅರ್ಥೈಸಲಾಗಿದೆ.

*ಆಶೇಷನಕರ:* ವರ್ತಕ ಸಂಘದಲ್ಲಿ ಪಟ್ಟಣಸ್ವಾಮಿಯ ಜೊತೆಗೆ ಆರಿಸಿದ ಕೆಲವು ಸದಸ್ಯರಿರುತ್ತಿದ್ದರೆಂಬುದಕ್ಕೆ ಆಧಾರಗಳಿಲ್ಲ. ಯಾವುದಾದರೂ ತಿರ್ಮಾನವನ್ನು ಕೈಗೊಳ್ಳುವಾಗ ಎಲ್ಲಾ ವರ್ತಕರು ಪಟ್ಟಣಸ್ವಾಮಿಯ ನೇತೃತ್ವದಲ್ಲಿ ಸಭೆ ಸೇರಿ ಚರ್ಚಿಸುತ್ತಿದ್ದರೆಂದು ಕಾಣುತ್ತದೆ. ಇದನ್ನೇ ಶಾಸನಗಳು ಅಶೇಷನಕರ ಎಂದು ಹೇಳುವುದು. ಹೀಗೆ ಸಭೆ ಸೇರಿ ಯಾರೋ ಕಟ್ಟಿಸಿದ ದೇವಾಲಯಕ್ಕೆ ತಮ್ಮ ಸಂಘದ ಸದಸ್ಯರೆಲ್ಲಾ ಸೇರಿ ವೈಯಕ್ತಿಕವಾಗಿಯೂ, ಸಾಮೂಹಿಕವಾಗಿಯೂ ದಾನ ಧರ್ಮಗಳನ್ನು ಚರ್ಚಿಸಿ ಕೊಡುತ್ತಿದ್ದರು.

*ನಕರ* : ಪ್ರಾಚೀನ ಕನ್ನಡನಾಡಿನ ಇನ್ನೊಂದು ವರ್ತಕರ ಪ್ರಕಾರ ಈ ನಕರರನ್ನು ಶಾಸನಗಳಲ್ಲಿ ಅಂಗಡಿ ಸೆಟ್ಟಿಯವರೆಂದು ಕರೆದಿರುವುದರಿಂದ ಸಂತೆ, ಪಟ್ಟಣಗಳ ಸ್ಥಿರವರಿದ ಅಂಗಡಿಗಳ ವ್ಯಾಪಾರಿಗಳಿವರೆಂದು ಇವರು ಹೆಚ್ಚಾಗಿ ಪಟ್ಟಣ ಗಳಲ್ಲಿ ವಾಸಿಸುತ್ತಿದ್ದರೆಂದೂ ಈ ನಕರರು ಸಂತೇಪೇಟೆಗಳಿಂದ ಬಂದ ವಿವಿಧ ಸರಕುಗಳನ್ನು ಖರೀದಿಸಿ-ಬಯಲು ಅಂಗಡಿ ಹಾಗೂ ಮಳಿಗೆಗಳಲ್ಲಿಟ್ಟು ಮಾರಾಟ ಮಾಡುತ್ತಿದ್ದರೆಂದು ಅರ್ಥೈಸಬಹುದಾಗಿದೆ.[೧೭] ನಿಡುಗಲ್ಲಿನ 'ನಕರ'ರು ಶೈವರೆಂದೂ ಇವರು

ನಾಡಿನ ಪ್ರಮುಖ ಪಟ್ಟಣಗಳ ತುಂಬೆಲ್ಲಾ ಪಸರಿಸಿದ್ದರೆಂದೂ, ಇವರ ಆರಾಧ್ಯದೈವ ನಗರೇಶ್ವರ(ಶಿವ). ನಿಡುಗಲ್ಲಿನ ನಗರೇಶ್ವರ ದೇವಾಲಯ ಈ ದೇವರ ಹೆಸರಿನ ದೇವಾಲಯವಾಗಿದೆ. ಇವರು ಅದಕ್ಕೆ ದಾನ ಬಿಡುವುದನ್ನು ಸಹ ಶಾಸನವೊಂದು ತಿಳಿಸುತ್ತದೆ.[೧೮]

***ಮುಂಮರಿದಂಡು:*** ಮಧ್ಯಕಾಲೀನ ಕರ್ನಾಟಕದ ಪ್ರಮುಖ ವರ್ತಕರ ಒಂದು ಪ್ರಕಾರವಿದು. ಕೇಶಿರಾಜನ ಪ್ರಕಾರ 'ಮುಮ್ಮರಿ' ಪದಕ್ಕೆ ಕಾಸಿದ ಮಳಲು ಎಂದರ್ಥ. ಈ ಅರ್ಥದ ಜಾಡನ್ನು ಹಿಡಿದು ಮುಮರಿದಂಡು ವ್ಯಾಪಾರಿಗಳ ಸೈನ್ಯವೆಂಬ ಅಭಿಪ್ರಾಯವನ್ನು ವಿದ್ವಾಂಸರು ವ್ಯಕ್ತಪಡಿಸಿರುವುದನ್ನು ಬಿ. ಆರ್. ಹಿರೇಮಠ ಅವರು ತಳ್ಳಿ ಹಾಕಿ[೧೯] ಅದು ದಂಡ (ಕೋಳಲು) ಎಂದೂ ಅದು ಪೂರ್ವಜರ ಸಂಕೇತವೆಂದೂ ಹೇಳುತ್ತಾರೆ. ಒಟ್ಟಾರೆ ಅಡಿಕೆ, ಅರಿಷಿನ, ಮೆಣಸು, ಮುಂತಾದ ಧಾನ್ಯಗಳನ್ನು ದೂರದ ಪ್ರದೇಶಗಳಿಂದ ತುರುವುದು - ಕೊಂಡುಹೋಗಿ ಮಾರಾಟ ಮಾಡುವುದು ಇವರ ಕೆಲಸವಾಗಿತ್ತು. ಇವರು ಸರಕು ಹೇರಿಕೊಂಡು ಸಂತೆ-ಪೇಟೆಗಳಿಗೆ ಹೋಗಿ ಮಾರಾಟ ಮಾಡುವ ವರ್ತಕರು ಎಂದೂ ಹಾಗೂ ಕೆಲವು ಸಲ ಅಲ್ಲಿಯೇ ಸರಕು ಖರೀದಿಸಿ ಬೇರೆ ಸ್ಥಳಗಳಿಗೆ ಒಯ್ದು ಮಾರಾಟ ಮಾಡುತ್ತಿದ್ದರು. ಇದರಿಂದ ಇವರನ್ನು ಸಂಚರಿಸುವ ವರ್ತಕರೆಂದೂ ಕರೆಯುವುದುಂಟು. ನಾಡಿನ ಉದ್ದಗಲಕ್ಕೂ ಸಂಚರಿಸಿ ವ್ಯಾಪಾರ ನಡೆಸಿದವರು ಮುಮರಿದಂಡರು. ಕನ್ನಡಿಗರ ವ್ಯಾಪಾರ ಪ್ರವೃತ್ತಿ ಹಸಿರಾಗಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ.

***ಮಹಾವಡ್ಡವ್ಯವಹಾರಿ :*** ವಡ್ಡ ವ್ಯವಹಾರಿ ಹಿರಿಯ ವ್ಯಾಪಾರಿ ಎಂಬರ್ಥವುಳ್ಳ ಪದ (ವೃದ್ಧ >ವಡ್ಡ>ವಡ್ಡ) ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ವರ್ತಕ ಪ್ರಕಾರಗಳಲ್ಲಿ ಇದು ಅತ್ಯಂತ ಪ್ರಮುಖವಾದದ್ದು. ವಡ್ಡವ್ಯವಹಾರಿ ಶಬ್ದದ ಹಿಂದಿರುವ ಮಹಾ ಅವರಲ್ಲಿಯ ಉನ್ನತ ಶ್ರೇಣಿಯವರನ್ನು ಸೂಚಿಸುವಂತಿದೆ. ಮತ್ತು ಅವರಲ್ಲಿರುವ ಅಂತಸ್ತು ಸೂಚಿಸುತ್ತದೆ. ಬಹುಶಃ ವಡ್ಡ ವ್ಯವಹಾರಿಗಳಲ್ಲೇ ಹಿರಿಯ ವರ್ತಕನಾದವನಿಗೆ ಮಹಾವಡ್ಡ ವ್ಯವಹಾರಿ ಎಂದು ಗೌರವ ಸೂಚಕವಾಗಿ ಕರೆದಿರಬಹುದು. ಇವರೇ ಪಟ್ಟಣಸ್ವಾಮಿಗಳ ಹುದ್ದೆಯನ್ನು ಕೆಲವು ಸಲ ವಹಿಸಿ ಕೊಳ್ಳುತ್ತಿದ್ದರೆಂದು[೨೦] ಬಿ. ಆರ್. ಹಿರೇಮಠ ಅವರು ಅಭಿಪ್ರಾಯ ಪಡುತ್ತಾರೆ. ಶಾಸನದಲ್ಲಿ ಇವರನ್ನು ಕುಬೇರ ವಂಶದವರು, ಶ್ವೇತ ಕುಲ ವೈಶ್ಯರೆಂದೂ ವರ್ಣಿಸಿದೆ. ಸಂತೇಪೇಟೆಗಳಿಗೆ ಹೋಗಿ ವ್ಯಾಪಾರ ಮಾಡುತ್ತಿದ್ದ ಇವರು ಬಹುಶಃ ಬೆಲೆ ಬಾಳುವ ವಸ್ತುಗಳ ಸಗಟು ವ್ಯಾಪಾರ ಕೈಗೊಳ್ಳುತ್ತಿದ್ದರು ಎನಿಸುತ್ತದೆ. ಇವರಿಂದ ರಾಜ ಭಂಡಾರಕ್ಕೆ ಹೆಚ್ಚು ಆದಾಯ ಬರುತ್ತಿತ್ತು. ಇವರಲ್ಲಿ ವೈದಿಕ, ಜೈನ, ಶೈವರೂ ಇದ್ದರೆನ್ನಬಹುದು.

ಹರಪನಹಳ್ಳಿ (ತಾ) ಬಾಗಳಿಯ ಸುಮಾರು ಕ್ರಿ.ಶ. ೧೨ನೇ ಶತಮಾನದ ಶಾಸನವೊಂದರಲ್ಲಿ ಮಲೆಯಾಳ ವಡ್ಡವ್ಯವಹಾರಿ ಕೊಮರ ಮೂರ್ಖಸೆಟ್ಟಿ ಪೊನ್ಮೊರ್ಖಸೆಟ್ಟಿಯರು ಕೂಳಮೂಕ ಪಟ್ಟಣ (ಕೇರಳ)ದಿಂದ ಕನ್ನಡನಾಡಿಗೆ ಬಂದು ನೆಲಸಿದರು. ಪೊನ್ಮೊರ್ಖಸೆಟ್ಟಿ ನಿಡುಗಲ್ ನಾಡ ಮಹಾವಡ್ಡ ವ್ಯವಹಾರಿ ಎಂದು ಹೇಳುತ್ತದೆ.[೨೧]

***ನಾನಾದೇಶಿ, ಉಭಯನಾನಾದೇಶಿ :*** ಇದು ವರ್ತಕ ಪ್ರಕಾರವಲ್ಲ. ಶಾಸನಗಳಲ್ಲಿ ಕಾಣಸಿಗುವ ಈ ಪದಗಳು ನಾನಾ ದೇಶಿ-ಉಭಯ ನಾನಾದೇಶಿ ಇವು ಕರ್ನಾಟಕ ವರ್ತಕರ ಸಂಘ ಅಥವಾ ವಿಶಿಷ್ಠ ವರ್ತಕರ ಪ್ರಕಾರವಲ್ಲ. ಆದರೆ ದೇಶ ಅಥವ ಪ್ರದೇಶದ ಸೆಟ್ಟಿ, ನಕರ ಮುಂಮರಿದಂಡು, ವಡ್ಡ ವ್ಯವಹಾರಿ, ಪಟ್ಟಣಸ್ವಾಮಿ ಮುಂತಾದವು ವರ್ತಕರನ್ನು ಸೂಚಿಸುತ್ತವೆ. ದೇಶವೆಂದರೆ ಸ್ಥಳ- ಪ್ರದೇಶವೆಂದೂ; ಉಭಯವೆಂದರೆ ಸ್ವದೇಶ-ಪರದೇಶವೆಂದೂ ಅರ್ಥೈಸುತ್ತಾರೆ.[೨೨] ಆದರೂ ನಾನಾದೇಶಿ, ಉಭಯ ನಾನಾದೇಶಿಯರು ಹಲವು ಬಗೆಯ ಸರಕು ತೆಗೆದು ಕೊಂಡು ಕರ್ನಾಟಕದ ವಿವಿಧ ಗ್ರಾಮ, ಪಟ್ಟಣಗಳಿಗೆ ಹೋಗಿ ಮಾರಾಟ ಮಾಡುತ್ತಿದ್ದರು. ಜೊತೆಗೆ ಆಯಾ ಪ್ರದೇಶಗಳಲ್ಲಿ ಬೆಳೆಯುವ ವಸ್ತುಗಳನ್ನು ಖರೀದಿಸುತ್ತಿದ್ದರು. ಹೀಗೆ ಕ್ರಮ ಕ್ರಮವಾಗಿ ವ್ಯಾಪಾರ ನಡೆಸುವ ಮೂಲಕ ನಾಡಿನ ತುಂಬಾ ಸಂಚರಿಸುತ್ತಿದ್ದರು ಎಂದೇ ಹೇಳಬಹುದು.

ಮೇಲಿನ ಎಲ್ಲಾ ವರ್ತಕರ ಸಂಘ-ಸಮೂಹಗಳನ್ನು ನೋಡಿದಾಗ ಅವು ರಾಜ್ಯದ ಅಭಿವೃದ್ಧಿಗೆ, ನಗರಗಳ ಅಭಿವೃದ್ಧಿಗೆ ಸಾರ್ವಜನಿಕರ ಬೇಕು-ಬೇಡಗಳ ಪೂರೈಸುವಿಕೆಯಲ್ಲಿ ತನ್ನದೇ ಆದ ಮಹತ್ತರ ಪಾತ್ರವನ್ನು ವಹಿಸಿವೆ. ಸಾಮಾನ್ಯವಾಗಿ ಒಂದು ರಾಜ್ಯದ ಅಭಿವೃದ್ಧಿಯನ್ನು ಅಳೆಯುವಾಗ ಅಲ್ಲಿನ ವ್ಯಾಪಾರ ವಹಿವಾಟುಗಳ ತಳಹದಿಯನ್ನೇ ಮೊದಲು ನಿರ್ಧರಿಸ ಬೇಕಾಗುತ್ತದೆ. ಈ ವ್ಯಾಪಾರ, ಸಂಘ, ಸಮೂಹಗಳು ರಾಜನಿಗಿದ್ದ ರಾಜ್ಯದ ಅಧಿಕಾರದಷ್ಟೇ ಅಧಿಕಾರ ಪಡೆದಿದ್ದವು. ಅವು ರಾಜ್ಯದಲ್ಲಿ ಕ್ಷಾಮ ಮುಂತಾದ ಸಂದರ್ಭದಲ್ಲಿ ರಾಜನಿಗೆ ಅನೇಕ ರೀತಿಯ ಸಹಾಯವನ್ನು ಮಾಡುತ್ತಿದ್ದವು. ಆದ್ದರಿಂದಲೇ ರಾಜ ಈ ವರ್ತಕರನ್ನು ಎಂದೂ ವಿರೋಧ ಮಾಡಿ ಕೊಳ್ಳುತ್ತಿರಲಿಲ್ಲ. ತನ್ನ ರಾಜ್ಯದಲ್ಲಿ, ನಗರದಲ್ಲಿ, ಊರಿನಲ್ಲಿ ಬೆಳೆದ ಬೆಳೆ ಉತ್ಪಾದಿಸಿದ ಸರಕುಗಳನ್ನು ಮತ್ತೊಂದು ಕಡೆ ಕೊಂಡೊಯ್ದು ಅಲ್ಲಿಂದ ತಮಗೆ ಬೇಕಾದ ಸರಕುಗಳನ್ನು ತಂದು ಸಾರ್ವಜನಿಕ ಸೇವೆ ಮಾಡುವುದರಲ್ಲಿ ಮಹತ್ತರ ಪಾತ್ರವಹಿಸುತ್ತಿದ್ದವು ಈ ವರ್ತಕ ಸಮೂಹಗಳು. ಆದ್ದರಿಂದಲೇ ಒಂದು ರಾಜ್ಯದ, ನಗರದ, ಪಟ್ಟಣದ ಅಭಿವೃದ್ಧಿ ಆ ವರ್ತಕರ ಸಮೂಹದ ವ್ಯಾಪಾರದ ಮೇಲೆ ನಿರ್ಧರಿಸಲ್ಪಡುತ್ತಿದ್ದಿತು. ವರ್ತಕರಿಗೆ ವಿಶೇಷ ರಕ್ಷಣೆಯನ್ನು ರಾಜ್ಯವು ಒದಗಿಸುತ್ತಿದ್ದಿತು. ಈ ವರ್ತಕಸಮೂಹ ಬದುಕಿರುವ ಸ್ಥಳದ ಮೇಲೆ ಬೇರೆ ರಾಜರು ಮುತ್ತಿಗೆ ಹಾಕಿದಾಗ ಆ ರಾಜ್ಯಕ್ಕೆ ಆಘಾತಕರವಾಗುತ್ತಿತ್ತು ಎನ್ನಬಹುದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಬಿ.ಆರ್. ಹಿರೇಮಠ., **ಶಾಸನಗಳಲ್ಲಿ ಕರ್ನಾಟಕದ ವರ್ತಕರು**, ಪುಟ-೧.
೨. ಅದೇ.
೩. ಎ.ಕ. ಸಂ. XII, ಪಾವಗಡ ೪೮.
೪. ಅದೇ, ಪಾವಗಡ, ೫೬.
೫. ಅದೇ, ಪಾವಗಡ, ೫೦, ಕ್ರಿ. ಶ. ೧೨೪೮.
೬. ಎ.ಕ. XII, ಪಾವಗಡ ೨೪, ಕ್ರಿ.ಶ. ೧೫೪೦.
೭. ಅದೇ, ಪಾವಗಡ ೩೪, ಕ್ರಿ. ಶ. ೧೫೫೦.
೮. ಅದೇ, ಪಾವಗಡ ೩೭, ಕ್ರಿ. ಶ. ೧೫೬೪.
೯. ಅದೇ, ಪಾವಗಡ ೩೮, ಕ್ರಿ. ಶ. ೧೫೬೦.
೧೦. ಅದೇ, ಪಾವಗಡ ೪೦, ಕ್ರಿ.ಶ. ೧೫೫೬.
೧೧. ಅದೇ, ಪಾವಗಡ ೪೮.
೧೨. ಅದೇ, ಪಾವಗಡ ೫೬.
೧೩. ಅದೇ, ಪಾವಗಡ ೫೦, ಕ್ರಿ. ಶ. ೧೨೪೮.
೧೪. ಅದೇ, ಪಾವಗಡ ೫೬.
೧೫. ಡಾ. ಎಂ. ಚಿದಾನಂದ ಮೂರ್ತಿ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಅ. ಪುಟ. ೩೮೩.
೧೬. ಸೌ. ಇ.ಇ. IX, ೪೧, ಕ್ರಿ. ಶ. ೯೮೩.
೧೭. ಬಿ. ಆರ್. ಹಿರೇಮಠ., ಅದೇ, ಪುಟ. ೩೪.
೧೮. ಎ. ಕ. ಸಂ. XII, ಪಾವಗಡ ೫೦, ಕ್ರಿ. ಶ. ೧೨೪೮.
೧೯. ಬಿ. ಆರ್. ಹಿರೇಮಠ., ಅದೇ, ಪುಟ. ೪೩.
೨೦. ಅದೇ.
೨೧. ಎಸ್. ಐ. ಐ. IX-I, ೧೮೯, ಬಾಗಳಿ (ತಾ) ಹರಪನಹಳ್ಳಿ (೧೭).
೨೨. ಬಿ. ಆರ್. ಹಿರೇಮಠ., ಅದೇ, ಪುಟ. ೬೬.

ಡಾ॥ ಬಿ. ವ್ಹಿ. ಶಿರೂರ*
ಕು॥ ಎಸ್.ಎಸ್. ಭಗವತಿ**

# ಕೊಪ್ಪಳದ ಸಿರಸಪ್ಪಯ್ಯನ ಮಠದ ತಾಮ್ರಶಾಸನ ಮತ್ತು ವಂಶಾವಳಿ

ಜಿಲ್ಲಾ ಸ್ಥಳವಾದ ಕೊಪ್ಪಳದ ದಕ್ಷಿಣ ದಿಕ್ಕಿನಲ್ಲಿ, ಹಿಂದೂ ಮುಸ್ಲಿಂರ ಭಾವೈಕ್ಯತೆಯ ಸಂಕೇತದಂತೆ ಸಿರಸಪ್ಪಯ್ಯನ ಮಠವಿದೆ. ಶಿರಹಟ್ಟಿಯ ಫಕೀರೇಶ್ವರಮಠ, ನವಲಗುಂದದ ನಾಗಲಿಂಗಪ್ಪನಮಠ, ಸಾವಳಗಿಯ ಶಿವಲಿಂಗೇಶ್ವರ ಮಠಗಳ ಹಾಗೆ ಇದೂ ಕೂಡ ಹಿಂದೂ ಮುಸ್ಲಿಂ ಶಿಲ್ಪಕಲೆಯಿಂದ ಕೂಡಿದೆ. ಇಲ್ಲಿಯ "ವಂಶಾವಳಿ"ಯಲ್ಲಿ ಇದನ್ನು 'ದರಗಾಮಠ'ವೆಂದೇ ಕರೆಯಲಾಗಿದೆ. ಮಠದ ಒಳಭಾಗವು ವಿಶಾಲವಾಗಿದ್ದು, ಆಕರ್ಷಕವಾಗಿದ್ದು, ಅದನ್ನು ಕಟ್ಟಲು ಮೊದಲು ಇದ್ದಿರಬಹುದಾದ ಹೊಯ್ಸಳ ಮಾದರಿಯ ದೇವಾಲಯದ, ಸಾಣೆ ಹಿಡಿದ, ಕಪ್ಪು ಶಿಲೆಯ ಎರಡು ಕಂಬಗಳನ್ನು ಬಳಸಿಕೊಂಡು ಮುಸ್ಲಿಂ ಮಾದರಿಯಲ್ಲಿ ಈ ಕಟ್ಟಡವನ್ನು ಕಟ್ಟಲಾಗಿದೆ. ಅದರ ಪ್ರವೇಶ ದ್ವಾರವೂ ಭವ್ಯವಾದ ಮುಸ್ಲಿಂ ಕಲಾಮಾದರಿಯನ್ನು ಹೊಂದಿದೆ.

ಮಂದಿರದ ಒಳಗಡೆ ಒಟ್ಟು ಮೂರು ಗರ್ಭಗುಡಿಗಳಿದ್ದು ಮಧ್ಯದ ಗರ್ಭಗುಡಿಯ ಗುಹೆಯಲ್ಲಿ ಸಿರಸಪ್ಪಯ್ಯನವರು ಸಜೀವ



ಸಮಾಧಿ ಹೊಂದಿದರೆಂದು ಹೇಳಲಾಗುತ್ತಿದೆ. ಆ ಸಮಾಧಿಯ ಮೇಲೆಯೇ ಗದ್ದುಗೆಯನ್ನು ಗೋರಿರೂಪದಲ್ಲಿ ಕಟ್ಟಿರುವುದು ಹಸಿರು ಹೊದಿಕೆ ಹಾಕಿ ಇಲ್ಲಿಯ ವಿಶೇಷ. ದಿನಂಪ್ರತಿ ಈ ಗದ್ದುಗೆಯ ಅಭಿಷೇಕ ಮಾಡಿ, ಮೋಬಾನ ಹಾಕಿ, ಕೊನೆಗೆ ಮಂಗಳಾರತಿ ಮಾಡಲಾಗುತ್ತಿದೆ. ಶ್ರಾವಣಮಾಸದಲ್ಲಿ ಇಡೀ ತಿಂಗಳು



ರುದ್ರಾಭಿಷೇಕ ಮಾಡುವರು. ಎಡಬದಿಯ ಗರ್ಭಗುಡಿ ಖಾಲಿ ಇದ್ದು ಬಲಬದಿ ಗರ್ಭಗುಡಿಯಲ್ಲಿ ಸಿರಸಪ್ಪಯ್ಯನ ಮನೆತನದ ಮನೆದೇವರಾದ ಹಲಕಾಟಿ ವೀರಭದ್ರನ ದೊಡ್ಡ ತಾಮ್ರ ಫಲಕವನ್ನಿಟ್ಟು ಪೂಜಿಸಲಾಗುತ್ತದೆ. ಅಲ್ಲದೆ ವರ್ಷಕ್ಕೊಮ್ಮೆ ಈ ವಂಶದವರ ಇನ್ನೊಂದು ಮನೆದೇವರಾದ ಶ್ರೀ ಶೈಲಮಲ್ಲಿಕಾರ್ಜುನ ನಲ್ಲಿಗೆ ಹೋಗಿಬರುವ ಸಂಪ್ರದಾಯ ಈಗಲೂ ಇದೆ.



ದೊರೆತಿರುವ "ವಂಶಾವಳಿ"ಯ ಮೇಲ್ಭಾಗದಲ್ಲಿ 'ಶ್ರೀ ಶೈಲ ಗುರುವರ ಪ್ರಸನ್ನ' ಎಂದಿರುವುದು ಆ ಸ್ಥಳದೊಂದಿಗೆ ಇವರು ಹೊಂದಿರುವ ಸಂಬಂಧವನ್ನು ದೃಢಪಡಿಸುತ್ತದೆ.

ಮಠದ ಮುಂದಿನ ಆವರಣ ಬಯಲಾಗಿದ್ದು ಅದರ ಮುಂಭಾಗದಲ್ಲಿ ಕಲ್ಲಿನಲ್ಲಿ ಕಟ್ಟಲಾದ ಮಹಾದ್ವಾರವೂ ಮುಸ್ಲಿಂ

* ೧೩, ಮಂಜುನಾಥ ನಗರ, ಹುಬ್ಬಳ್ಳಿ - ೨೦
** ಸಂಶೋಧನ ವಿದ್ಯಾರ್ಥಿ

ಕಲಾಮಾದರಿ ಹೊಂದಿದೆ. ಮಠದ ಆವರಣದಲ್ಲಿ ಒಂದು ಹಳೆಯ ಶಿವದೇವಾಲಯವಿದ್ದು ಒಳಗೆ ಲಿಂಗ, ಎದುರು ಬಸವಣ್ಣನ ವಿಗ್ರಹಗಳಿವೆ. ಮಠದ ಆವರಣದಲ್ಲಿಯೇ ಸಿರಸಪ್ಪಯ್ಯನ



ಗದ್ದುಗೆಯ ಹಾಗೆಯೇ ಇರುವ ಎರಡು ಮೂರು ಗದ್ದುಗೆಗಳಿವೆ. ಸಿರಸಪ್ಪಯ್ಯನ ಮಠದ ಸಮೀಪದಲ್ಲಿಯೆ ಇತ್ತೀಚೆಗೆ ಕಟ್ಟಲಾದ ಶ್ರೀ ಕಾಳಿಕಾಕಮಠೇಶ್ವರ ದೇವಿಯ ಗುಡಿಯಿದ್ದು ಅಲ್ಲಿ ಕಾಳಿಕಾದೇವಿಯು ಪೂಜೆಗೊಳ್ಳುತ್ತಿದ್ದಾಳೆ.

ಅಕ್ಕಸಾಲಿಗ ಮನೆತನಕ್ಕೆ ಸೇರಿದ ತಿಂತಿಣಿಯ ಮೋನಪ್ಪಯ್ಯನ ವಂಶಸ್ಥರಾದ ಸಿರಸಪ್ಪಯ್ಯನವರನ್ನು



"ವಂಶಾವಳಿ"ಯಲ್ಲಿ 'ಶ್ರೀ ವಿಶ್ವಕರ್ಮ ಪಂಚಾಲ ಬ್ರಾಹ್ಮಣ'ರು ಎಂದು ಕರೆಯಲಾಗಿದೆ. ಇವರು ಮೂಲತಃ ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲೂಕಿನ ಲೆಕ್ಕಿಹಾಳ ಗ್ರಾಮದವರು. ಇವರು ಬಾಲ್ಯದಲ್ಲಿಯೇ ವೈರಾಗ್ಯ ತಾಳಿ, ೧೨ನೆಯ ವರ್ಷಕ್ಕೆ ಮೋನಪ್ಪಯ್ಯನವರಿಂದ ಉಪನಯನ ಹೊಂದಿ ಕಾಲ್ನಡಿಗೆಯಲ್ಲಿ ಸಂಚಾರ ಹೊರಟು, ಶ್ರೀಶೈಲ, ಹಂಪಿ ಮೊದಲಾದ ಕ್ಷೇತ್ರಗಳಿಗೆ



ಸಂದರ್ಶನವಿತ್ತರು. ಒಮ್ಮೆ ಇವರು, ಗಗನಾಪುರದ ಗಂಗಯ್ಯ ಮತ್ತು ಮೋನೇಶ್ವರರು ಹೊಳೆಯ ದಂಡೆಯ ಹುಣಸಿಗಿಡದ ಕಟ್ಟೆಯ ಮೇಲೆ ಕುಳಿತರು. ಮೋನಪ್ಪಯ್ಯ ಕಾಲಜ್ಞಾನ ಹೇಳುತ್ತಿರುವಾಗ ಗಂಗಯ್ಯನಿಗೆ ನಿದ್ದೆ ಬರಲು ಸಿರಸಪ್ಪಯ್ಯನಿಗೆ ಹೇಳಿ ಮಲಗಿದ. ಮುಂದೆ ಸಿರಸಪ್ಪಯ್ಯನಿಗೂ ನಿದ್ದೆ ಬರಲು ಹುಣಸಿಗಿಡಕ್ಕೆ ಹೇಳಿ ಆತನೂ ಮಲಗಿದ. ಬೆಳಗು ಹರಿದ ಮೇಲೆ ಇಬ್ಬರನ್ನೂ ಕೇಳಲು ಇದ್ದುದನ್ನು ಇದ್ದಂತೆ ಹೇಳಿದರು. ಹಾಗಾದರೆ 'ಬೆಳಗುತನಕ ಹೂಂ ಅಂದವರು ಯಾರು?' ಎಂದು ಕೇಳಲು ಸಿರಸಪ್ಪಯ್ಯ 'ಹುಣಸಿಗಿಡಕ್ಕೆ ಆಜ್ಞೆ ಮಾಡಿದ್ದೆ' ಎಂದರಂತೆ! ಅವರ ಈ ಪವಾಡಕ್ಕೆ ಮಾರು ಹೋಗಿ ಮೋನಪ್ಪಯ್ಯನವರು 'ಕರಕಟ್ಟ ಗೂಟ ಮೊದಲು ಮಾಡಿಕೊಂಡು ಕಾರಣಿಕ ನಡೆಯಲಿ' ಎಂದು ಹರಸಿದರಂತೆ. ಅವರಿಂದ ಉಪದೇಶ ಪಡೆದು ಸಂಚಾರಕ್ಕೆ ಹೊರಟು ಹೈದರಾಬಾದ ಮೊದಲಾದ ಸ್ಥಳಗಳನ್ನೆಲ್ಲ ಸುತ್ತಿ ಅಲ್ಲಿಯ ಮುಸ್ಲಿಂ ಅರಸರ ಮೆಚ್ಚುಗೆ ಪಡೆದು ಕೊಪ್ಪಳಕ್ಕೆ ಬಂದರು. ಇದೇ ಇವರು ಮುಸ್ಲಿಂ ಆಚರಣೆಗಳ ಪ್ರಭಾವಕ್ಕೆ ಒಳಗಾಗಲು ಮುಸ್ಲಿಂ ಶೈಲಿ ದೇವಾಲಯಕ್ಕೆ ಹೊಂದಲು ಕಾರಣವಾಗಿರಬೇಕು.

ಕೊಪ್ಪಳಕ್ಕೆ ಬಂದ ಮೇಲೆ ಜೀರ ತೋಟವೊಂದರಲ್ಲಿ ಉಳಿದುಕೊಂಡು 'ನಾವು ಇಲ್ಲಿಯೇ ದೇಹಬಿಡುವುದು' ಎಂದು ಹಲ್ಲುಜ್ಜುತ್ತಿದ್ದ ಬೇವಿನ ಕಡ್ಡಿಯನ್ನು ಊರಿ ಹೇಳಿದರು. ಅಲ್ಲಿಯೂ ಅನೇಕ ಪವಾಡಗಳನ್ನು ಮಾಡುತ್ತ ಶಿವನ ಆರಾಧನೆಯಲ್ಲಿ ಕಾಲಕಳೆಯ ತೊಡಗಿದರು. ಆಗ ಕೊಪ್ಪಳ ಮುಕ್ಕಾಮಿನಲ್ಲಿ ಶೃಂಗೇರಿಮಠದ ಶ್ರೀವಿದ್ಯಾನೃಸಿಂಹಭಾರತೀಸ್ವಾಮಿಗಳು ಹರಿಹರಗ್ರಾಮ ಮಧ್ಯದಲ್ಲಿ ಸಿರಸಪ್ಪಯ್ಯನ ಪವಾಡದ ಮಹಿಮೆಯನ್ನು ಕೇಳಿ ಆತನಿಗೆ ೧೫೦ ರೂಪಾಯಿಗಳನ್ನು ಮೆಚ್ಚುಗೆಯಾಗಿ ಕೊಟ್ಟರೆಂದು ಅಲ್ಲಿರುವ ಒಂದು ತಾಮ್ರಶಾಸನ ಹೇಳುತ್ತಿದೆ. *ನಾನು ದಿನಾಂಕ ೯-೬-೧೯೭೪ರಂದು ಶ್ರೀ ಮಠಕ್ಕೆ ಹೋದಾಗ ಈ ತಾಮ್ರಪತ್ರ ನೋಡಿ ಪ್ರತಿಮಾಡಿಕೊಂಡು ಬಂದಿದ್ದೆ.*

ಮತ್ತೆ ದಿನಾಂಕ ೨೬-೧೦-೨೦೦೧ರಂದು ಹೋಗಿ ಆ ತಾಮ್ರಪತ್ರದ ಬಗ್ಗೆ ವಿಚಾರಿಸಿದಾಗ 'ಕೋರ್ಟಿನ ಕೇಸಿಗಾಗಿ ಹುಬ್ಬಳ್ಳಿಗೆ ಯಾರೋ ಒಯ್ದವರು ಹಿಂದಿರುಗಿಸಿಲ್ಲ' ಎಂದು ಕಾಗದದಲ್ಲಿ ಮಾಡಿಕೊಂಡಿದ್ದ ಅದರ ನಕಲನ್ನು ತೋರಿಸಿದರು.

ಒಮ್ಮೆ ಸಿರಸಪ್ಪಯ್ಯನ ಮಠದ ಭಾವಿಯಲ್ಲಿ ಎರಡು ಅಲೈ ದೇವರು ಸಿಗಲು ಅವನ್ನು ಸಿರಸಪ್ಪಯ್ಯನ ಗದ್ದುಗೆಯ ಹಿಂದಿನ ಮಾಡದಲ್ಲಿಟ್ಟು ದಿನಂ ಪ್ರತಿ ಪೂಜಿಸುವರಲ್ಲದೆ ಮೊಹರಂ ಹಬ್ಬ ಬಂದಾಗ ದೇವರನ್ನು ಕೂಡ್ರಿಸುವ ಪದ್ಧತಿಯೂ ಪ್ರಾರಂಭವಾಯಿತು. ರಜಾಕಾರರ ಹಾವಳಿಯ ತರುವಾಯ ಈ ಸಂಪ್ರದಾಯ ನಿಂತುಹೋಗಿದೆ. ಆದರೆ ಕತಲ್‌ರಾತ್ರಿ ದಿನ ಸಿರಸಪ್ಪಯ್ಯನ ಕಾರ್ಣಿಕ ನಡೆಯುತ್ತದೆ. ಈ ಸಂದರ್ಭದಲ್ಲಿ ಮಠದ ಸ್ವಾಮಿಗಳು ಉಪವಾಸವಿದ್ದು ಸಿರಸಪ್ಪಯ್ಯ ಕನಸಿನಲ್ಲಿ ಹೇಳಿದ ಹೇಳಿಕೆಗಳನ್ನು ಭಕ್ತರಿಗೆ ತಿಳಿಸುತ್ತಾರೆ. ಈ ಹೇಳಿಕೆಗಳು ನಿಜವಾಗಿ ಪರಿಣಮಿಸಿದ ಸಂದರ್ಭಗಳೂ ಉಂಟು.

ಮೊಹರಂ ಹಬ್ಬದ ಸಂದರ್ಭದಲ್ಲಿ ಹಿಂದೂ ಮುಸ್ಲಿಂ ಎಂಬ ಭೇದವಿಲ್ಲದೆ ಈ ಮಠಕ್ಕೆ ಕರ್ನಾಟಕದ ಎಲ್ಲ ಭಾಗಗಳಿಂದಲೂ ಜನರು ಆಗಮಿಸಿ ಸಕ್ಕರೆ ಓದಿಸಿ, ಕಾಯಿ-ಕರ್ಪುರ ಮಾಡಿಸಿ, ಭಕ್ತಿಯ ಸೇವೆ ಸಲ್ಲಿಸಿ ಪುನೀತರಾಗುತ್ತಾರೆ. ಉಳಿದ ದಿನಗಳಲ್ಲೂ ಭಕ್ತರ ಸಮೂಹ ಈ ಮಠಕ್ಕೆ ಆಗಮಿಸಿ ತಮ್ಮ ಭಕ್ತಿಯ ಸೇವೆ ಸಲ್ಲಿಸುತ್ತಿರುವುದನ್ನು ನಿರಂತರ ಕಾಣಬಹುದಾಗಿದೆ.

(ಇಲ್ಲಿಯ ಹೆಚ್ಚಿನ ಮಾಹಿತಿಯನ್ನು ಹಿಂದಿನ ಮಠಾಧಿಕಾರಿಗಳಾಗಿದ್ದ ಶ್ರೀ ಅಯ್ಯಪಯ್ಯ ಅವರಿಂದ ದಿನಾಂಕ ೯-೬-೧೯೭೪ರಂದು ಪಡೆದಿದೆ. ಅಲ್ಲದೆ ದಿನಾಂಕ ೨೪-೧೦-೧೯೯೯ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ ಶ್ರೀ ಶಿವಪ್ರಸಾದ ಹಾದಿಮನಿ ಅವರ ಲೇಖನದ ಸಹಾಯವನ್ನು ಪಡೆದಿದೆ)

### ಸಿರಸಪ್ಪಯ್ಯನ ಮಠದ ವಂಶಾವಳಿ[1]

ಶ್ರೀ ವಿಶ್ವಕರ್ಮ ಪಂಚಾಲ ಬ್ರಾಹ್ಮಣರ ಮತದೊಳವತರಿಸಿರ್ದ. ನಂತ ಜನ ಅಂದರೆ ಪರಭೋಜಕರಂ ಬಸವಂತರಾಯ ಮೊದಲಾದ ಮಹಿಮಾಪುರುಷರ ಸಮುದಾಯದೊಳಗ ೬೩ ... ಕಿಲ್ಲೆ ಕೊಪ್ಪಳ ದರಗಾಮಠದ ಶ್ರೀ ಶೈಲಪತಿ ಸಿರಸಪ್ಪಯ್ಯನವರ ವಂಶೋದ್ಧಾರವಿದು. ಬರದ ಮಿತಿ ಶಕೆ ೧೮೪೩ನೆ ದುರ್ಮತಿ ನಾಮ ಸಂ। ದ ಆಶ್ವಜ ವದ್ಯ ೧೨ ಶುಕ್ರವಾರದಲ್ಲು ಶ್ರೀ




(೧ ಈ ಶಾಸನ ಮತ್ತು ವಂಶಾವಳಿಗಳು ಹಂಪಿಯ ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸಿದ "ಕೊಪ್ಪಳ ಜಿಲ್ಲೆಯ ಶಾಸನಗಳು" ಸಂಪುಟದಲ್ಲಿ ಪ್ರಕಟವಾಗಿಲ್ಲ. ಇಲ್ಲಿ ಮೊದಲಬಾರಿಗೆ ಪ್ರಕಟವಾಗುತ್ತಿದೆ.)



ಕೊಪ್ಪಳದ ಸಿರಸಪ್ಪಯ್ಯನ ಗದ್ದುಗೆ ಮತ್ತು ಮಠದ ಆವರಣ

**ಕೊಪ್ಪಳದ ಸಿರಸಪ್ಪಯ್ಯನ ಮಠದಲ್ಲಿರುವ ತಾಮ್ರ ಶಾಸನ**

ಮೋನಪ್ಪಯ್ಯಸ್ವಾಮಿ ಶ್ರೀ ಶೈಲ ಅವಧೂತ (ನಕಲ) ಶಂಕರ
ಶ್ರೀ ಮನು ಮಾಶತ
ಸದದೃಭಾಕಾಂಶ
ಹರಿಹರ ಖ್ಯಾಂತತ
ಘಾಸಕಿಲ ಘನ
ವಿದ್ಯಾಶಂಕರ ಭಾರತಿ
ಶ್ರೀಮತ್ ಪರಮಹಂಸ ಪರಿವ್ರಾಜಕಾರ್ಯ
ವರ್ಯ ಪಾದಮೇಕೈಕ ಪ್ರಮಾಣ ಪಾರಾವಾರ ಪ
ರಿಣಾಯ ಮಾನಿಯ ಆಸನ ಪ್ರಾಣಾಯಾ
ಮ ಅಧ್ಯಾಹಾರ ಧ್ಯಾನ ಧಾರಣ ಸಮಾಧ್ಯ
ಷ್ಠಾಂಗಯೋಗ ಅನುಷ್ಠಾನ ನಿಷ್ಠಿತಃ ತಪಃ
ಚಕ್ರವರ್ತೆ ನಾಥೇವಿಚ್ಛಿನ್ನ ಗುರುಪಾರ
ಪಾರ ಪ್ರಾಚ್ಯ ಷಡ್‌ದರ್ಶನ ಸಂಸ್ಥಾಪನಾ
ಚಾರ್ಯ ವ್ಯಾಖ್ಯಾಯನ ಸಿಂಹಾಸನ ನಶ್ವ
ರ ಸಕಲ ನಿಗಮ ಆಗಮಸಾರ ಹೃದಯ
ಶಾಖ್ಯೋಭಯ ಪ್ರತಿಪಾದಿತ ವೈದಿಕ ಮಾರ್ಗ
ಪ್ರವರ್ತಕ ಸರ್ವಸ್ವಂತಂತ್ರ ಶ್ರೀ ಮಹಾರಾಜ
ಧಾನಿ ಶ್ರೀ ಮಹಾಜೋಧಿರಾಜ, ಗುರುಭೂಮಂ
ಡವಾಚಾರ್ಯ ಶಿಷ್ಪ ಶ್ರಿಂಗಪುರವರಾಧೀಶ
ಪಂಚಗಂಗಾತೀರವಾಸ ಕಮಲನಿಖೇತ
ನರವರವೀರ ಸಿಂಹಾಸನಾಧೀಶ್ವರ ಶ್ರೀ
ಮಂಚಕರ ಭಗವತ್ಪಾದ ಜನವಿಜನಿ
ತ ಶ್ರೀ ವಿದ್ಯಾಶಂಕರ ಪಾದಪದ್ಮಾರಾಧಕ
ಶ್ರೀ ವಿದ್ಯಾನೃಸಿಂಹ ಭಾರತೀ ಸ್ವಾಮಿವ
ಲ್ಲಭ ಭಕ್ತ ಪರಿವಾರಣ ಮನುಧೀ
ನ ಭೇದಮಾನಭಯ ಪ್ರಧಾನಾರಾಯ
ಣ ಸ್ಮರಣಾಮಿ॥

ತೀರ್ಥಸ್ವರೂಪ ರಾಜಮಾನ್ಯರಾಜೇ ಶ್ರೀ ಮುಕ್ಕಾಂಮಠ ಕೊಪ್ಪಳ ಯಾಂಸಕ್ಷಾತಗಾಯತೆ ಶಕೆ ೧೧೬೩ ಪ್ಲವಂಗನಾಮ ಸಂವತ್ಸರ ಪುಷಶು॥ ೭ ಬುಧವಾರ ಮೇ, ಶೃಂಗೇರಿ ಮಠ ನರಸಿಂಹ ಭಾರತಾ ವಿಜ್ಞಾಪನಾ ತುಮಾಸಿ ದಕ್ಷಿಣಾದಿ ಚಲರೂಪಯೇ ಅಕ್ಷರಿ ದೀಡಸೇ ಹೋ ಆಹೇತ ಸಹಿ ಆಹೇತ ಆವಾ ಪುನಃ ಕೋಣ ದುಸರೇ ಜಬಾಬ ದೇಣಾರ ನಹಿ ಆಮಚೆ ರಾಜಿನೆ ಲಿಹೂನ್ ದಿಲೆಚೆ ಪನ್ನಾಸಟಿ ದಕ್ಷಿಣ ಹರಿಹರಾ ಗಾ ಆಹೇತ ಸರ್ವನ....

ಸಾಕ್ಷಿಗುದಾರ

೧. ರಾಮರಾವ ಕಾರಕೂನ ದಸ್ತೂರ್ ಖುದ್ ಸಹಿ
೨. ನರಸಿಂಹೇರಾವ ಕಾರಕೂನ ದ.ಖ. ಸಹಿ
೩. ರಾಮಭಟ ವೈದಿಕ ಖುದ ದ. ಸಹಿ
೪. ಯಂಕಣಭಟ ವೈದಿಕ ಖು. ದಸ್ತೂರ ಸಹಿ
೫. ಪಾಂಡುರಂಗ ವೈದಿಕ ಬುದ ದಸ್ತೂರ ಸಹಿ

**ಶಾಸನದ ಅನುವಾದ**

ಮನುಕುಲ ಅಂಶವುಳ್ಳಂಥ, ಸಾತ್ವಿಕ ಗುಣನೋಪೇತ ವಾದ, ನಾಶರಹಿತವಾದ ಪ್ರಕಾಶವುಳ್ಳಂಥ, ಹರಿಹರರ ಮಹಿಮೆಯನ್ನು ಖ್ಯಾತಗೊಳಿಸಿದ, ವೈರಾಗ್ಯ ಸಂಪನ್ನರಾದ ಪ್ರಸಿದ್ಧರಾದ ವಿದ್ಯಾಶಂಕರ ಭಾರತಿ.

ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ ಶ್ರೇಷ್ಠರಾದ, ಸಮುದ್ರದಂತೆ ವಿಶಾಲವಾದ ಪ್ರಾಮಾಣಿಕವಾದ ವೇದಾಂತ ಪ್ರಪಂಚದ ರಕ್ಷಕರಾದ, ನಿತ್ಯ ಪ್ರಾಣಾಯಾಮ, ಯೋಗಾಸನ ಧ್ಯಾನಾದಿಗಳನ್ನು ಆಚರಿಸುವ, ಸಮಾಧಿಯಲ್ಲಿ ಅಷ್ಟಾಂಗಯೋಗ

ವನ್ನು ಅನುಷ್ಠಾನಿಸುತ್ತ ತಪಗೈಯುವ (ಸಂನ್ಯಾಸ) ಚಕ್ರವರ್ತಿಗಳಾದ, ಗುರು ಪರಂಪರೆಯನ್ನು ಅವಿಚ್ಛಿನ್ನವಾಗಿ ನಡೆಸಿಕೊಂಡು ಬಂದ, ಷಡ್‌ದರ್ಶನಗಳನ್ನು ವ್ಯಾಖ್ಯಾನಿಸುವ, ಸಕಲ ವೇದ-ವೇದಾಂಗಗಳ ಹೃದಯವನ್ನರಿತ ಉಭಯಶಾಸ್ತ್ರ (ವೇದ-ಉಪನಿಷತ್ತು)ಗಳಿಂದ ಪ್ರತಿಪಾದಿತವಾದ ವೈದಿಕ ಮಾರ್ಗದ ಪ್ರವರ್ತಕರಾದ, ಸರ್ವತಂತ್ರ ಸ್ವತಂತ್ರರಾದ, ಮಹಾತೇಜಸ್ವಿಗಳಲ್ಲಿ ತೇಜಗಳಾದ ಭೂಮಂಡಲದ ಗುರುಗಳಿಗೆ ಗುರುಗಳಾದ, ಐದು ಬಾರಿ ಗಂಗಾ ತೀರದಲ್ಲಿ ವಾಸಿಸಿದ (ಪಂಚಗಂಗೆಯನ್ನು ಸೇವಿಸಿದ) ಭಕ್ತಿ ಪರಿವಾರದಿಂದೊಡಗೂಡಿದ ಭೇದ ಪ್ರಾಮಣ್ಯ ಭಯವನ್ನು ತೊಲಗಿಸಿದ, ಮಾನವೀಯಗುಣ ಸಂಪನ್ನರಾದ, ವೇದಾಂತ ಸಾಮ್ರಾಜ್ಯದ ಸಿಂಹಾಸನವನ್ನು ಅಲಂಕರಿಸಿದ ಭಕ್ತಜನಾನುಕಂಪಿಗಳಾದ, ಶ್ರೀ ವಿದ್ಯಾಶಂಕರಪಾದ ಪದ್ಮಾರಾಧಕರಾದ ಶ್ರೀ ವಿದ್ಯಾನರಸಿಂಹಭಾರತೀಸ್ವಾಮಿ ವಲ್ಲಭರನ್ನು ಸ್ಮರಿಸುತ್ತೇನೆ.

ತೀರ್ಥಸ್ವರೂಪ ರಾಜಮಾನ್ಯ ರಾಜಶ್ರೀ ಮುಕ್ಕಾಂಮಠ ಕೊಪ್ಪಳ ಶಕೆ ೧೧೬೩ ಪ್ಲವಂಗನಾಮ ಸಂವತ್ಸರ ಪುಷ ಶು॥ ೭ ಬುಧವಾರದಲ್ಲಿ* ಶೃಂಗೇರಿಮಠದ ನರಸಿಂಹ ಭಾರತಿ ಸ್ವಾಮಿಗಳು ದೀಡನೂರು ರೂಪಾಯಿ (೧೫೦) ಗಳನ್ನು ಕೊಟ್ಟರು. ಇದಕ್ಕೆ ಯಾರದೂ ತಕರಾರು ಇಲ್ಲ. ಇದನ್ನು ಹೃದಯ ಪೂರ್ವಕವಾಗಿ ಕೊಟ್ಟಿದ್ದೇವೆ.

ಸಾಕ್ಷಿದಾರರು

೧ ರಾಮರಾವ ಕಾರಕೂನ ದಸ್ತೂರ ಖುದ್ ಸಹಿ
೨ ನರಸಿಂಹೇರಾವ ಕಾರಕೂನ ದ. ಖ. ಸಹಿ
೩ ರಾಮಭಟ ವೈದಿಕ ಖುದ ದ. ಸಹಿ
೪ ಯಂಕಣಭಟ ವೈದಿಕ ಖು. ದಸ್ತೂರ ಸಹಿ
೫ ಪಾಂಡುರಂಗ ವೈದಿಕ ಖುದ ದಸ್ತೂರ ಸಹಿ



(ಈ ಕಾಲಮಾನದಲ್ಲಿ ಏನೋ ದೋಷವಿದ್ದಂತಿದೆ. ಏಕೆಂದರೆ ಸಿರಸಪ್ಪಯ್ಯನ ಗುರು ಮೋನಪ್ಪಯ್ಯನ ಕಾಲ ಸು. ೧೫೭೦ ಎಂದು ನಿರ್ಧಾರಿತವಾಗಿದೆ. ಹೀಗಾಗಿ ಇದು ೧೬ನೆಯ ಶತಮಾನದ ತರುವಾಯದ್ದು. ಮಠದ ಕಟ್ಟಡವೂ ಇದಕ್ಕೆ ಪುಷ್ಟಿಯನ್ನೀಯುತ್ತದೆ).

ಎಸ್. ಕೆ. ಮೇಲಕಾರ*

# ಕೊಪ್ಪಳ ಜಿಲ್ಲೆಯ ಶಾಸನೋಕ್ತ ಘೈಸಾಸರು

ಸ್ವಾತಂತ್ರ್ಯ ಪೂರ್ವ ಹೈದ್ರಾಬಾದ ಕರ್ನಾಟಕದಲ್ಲಿ ಜಿಲ್ಲಾ ಸ್ಥಾನ ಹೊಂದಿದ್ದ ಕೊಪ್ಪಳವು ಈಗ ಪುನಃ ಜಿಲ್ಲಾ ಸ್ಥಾನದ ಸ್ವರೂಪವನ್ನು ಪಡೆದುಕೊಂಡು ಸಾಮಾಜಿಕ, ರಾಜಕೀಯ, ಧಾರ್ಮಿಕ, ಶಿಕ್ಷಣ, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪದಲ್ಲಿ ಪ್ರಾಚೀನ ಕಾಲದಿಂದಲೂ ಇತಿಹಾಸದ ಕಾಲಘಟ್ಟದಲ್ಲಿ ಅನೇಕ ತಿರುವು ಮುರುವುಗಳಲ್ಲಿ ಅಪಾರ ಕೊಡುಗೆಯನ್ನು ನೀಡಿದ್ದು ಇದು ಸಂಶೋಧಕರಿಗೆ, ಕನ್ಯಾ ನೆಲವಾದ ಜಿಲ್ಲೆಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ ನನ್ನ ಅಧ್ಯಯನದಲ್ಲಿ ಅನೇಕ ಹೊಸ ಅಂಶಗಳು "ಕೊಪ್ಪಳ ಜಿಲ್ಲೆಯ ಶಾಸನೋಕ್ತ ಘೈಸಾಸರ" ಕುರಿತಂತೆ ನನ್ನ ಗಮನಕ್ಕೆ ಬರಲಾಗಿ ಈ ಪ್ರಬಂಧದಲ್ಲಿ ಅದನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

ಇಲ್ಲಿಯವರೆಗೆ ಕೊಪ್ಪಳ ಜಿಲ್ಲೆಯಲ್ಲಿ ೪೪೩ ಶಾಸನಗಳು ಪ್ರಕಟವಾಗಿದ್ದು ಕೊಪ್ಪಳ ತಾಲೂಕಿನ[೧] ಅಳವಂಡಿ, ಕೂವಲೂರು, ಮಾದಿನೂರು, ಯಲಬುರ್ಗಿ ತಾಲೂಕಿನ ಇಟಗಿ, ಕುಕನೂರು, ತಳಕಲ್ಲು, ಮುದೋಳು, ಬಳಗೇರಿ ಕುಷ್ಟಗಿ ತಾಲೂಕಿನ, ಚಳಗೇರಿ ಶಾಸನಗಳಲ್ಲಿ ಅಗ್ರಹಾರಗಳು ಬಗ್ಗೆ ಉಲ್ಲೇಖ ಬರುತ್ತಿದ್ದು ಕೆಲವು ಘಟಿಕಾಸ್ಥಾನಗಳಾಗಿದ್ದ ಬಗ್ಗೆ ಶಾಸನಗಳ ಅಧ್ಯಯನದಿಂದ ತಿಳಿದು ಬರುತ್ತದೆ.

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಶಿವಪುರಿ, ಮಠಗಳು, ದೇವಾಲಯಗಳು ಅಗ್ರಹಾರಗಳು, ಬ್ರಹ್ಮಪುರಿಗಳು ಘಟಿಕಾಸ್ಥಾನಗಳಾಗಿ ಪ್ರಾಥಮಿಕ ಶಿಕ್ಷಣ ಮತ್ತು ಉನ್ನತ ಶಿಕ್ಷಣದ ವಿದ್ಯಾಭ್ಯಾಸದಂಥ ಚಟುವಟಿಕೆಗಳು ನಡೆಯುವ ಶಿಕ್ಷಣದ ಕೇಂದ್ರಗಳಾಗಿದ್ದವು. ಅಗ್ರಹಾರಗಳು ವೈದಿಕ ಸಂಪ್ರದಾಯದ ವಿದ್ಯಾಕೇಂದ್ರಗಳು, ಮಹಾಜನರು ಮಹಾವಿದ್ವಾಂಸರು, ಚರ್ಚಿಸುವ ಸ್ಥಳವಾದ ಬ್ರಹ್ಮಪುರಿಗಳು ನಗರಗಳಲ್ಲಿ ಪಟ್ಟಣಗಳಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸಿಸುವ ಭಾಗವಾಗಿದ್ದವು. ಪ್ರಾಚೀನಕಾಲದಲ್ಲಿ ಹಳ್ಳಿಗಳ ಸಂಖ್ಯೆ ಹೆಚ್ಚು. ನಗರಗಳ ಸಂಖ್ಯೆ. ಕಡಿಮೆ. ಅಗ್ರಹಾರಗಳಲ್ಲಿ ಬ್ರಾಹ್ಮಣರು, ಆ ಊರುಗಳ ಒಡೆಯರು, ಬ್ರಹ್ಮಪುರಿಗಳಲ್ಲಿ ಬ್ರಾಹ್ಮಣರು ಆ ಊರಿನ ಇತರ ಪಂಗಡಗಳ ಜನರಿರುತ್ತಿದ್ದರು. ಅಲ್ಲದೆ ಇದು ಬ್ರಾಹ್ಮಣರು ಒಂದೆಡೆ ಸೇರುತ್ತಿದ್ದ ಸಾರ್ವಜನಿಕ ಮಂದಿರವಾಗಿತ್ತು. ಅಂದರೆ, ಉಪಾಧ್ಯಾಯರು, ವಿದ್ವಾಂಸರು ವಿದ್ಯಾರ್ಥಿಗಳು ಒಟ್ಟಾಗಿ ಸೇರಿ ಪರಸ್ಪರ ಚರ್ಚೆಯಿಂದ ಧರ್ಮದ ವಿಷಯದಲ್ಲಿ ಹೆಚ್ಚಿನ ಜ್ಞಾನವನ್ನು ಪಡೆಯಲು ಸಾಧ್ಯವಾಗಿಸಿದ್ದ ಸಂಸ್ಥೆ ಇದಾಗಿತ್ತು. ಘಟಿಕಾಸ್ಥಾನವು ಸಹ ಅಗ್ರಹಾರ, ದೇವಾಲಯಗಳಲ್ಲಿ ಒಂದು ಅಂಗವಾಗಿತ್ತು. ವಿದ್ವಾಂಸರು ಗಮನಿಸಿದಂತೆ ಘಟಿಕಾಸ್ಥಾನಗಳು ಉಚ್ಚ ಶಿಕ್ಷಣದ ವಿದ್ಯಾಭ್ಯಾಸದ ಕೇಂದ್ರವಾಗಿದ್ದವು. ಇಲ್ಲಿ ವಿದ್ವಾಂಸರು ಚರ್ಚೆ, ವಾದ-ವಿವಾದಗಳಲ್ಲಿ ತೊಡಗಿರುತ್ತಿದ್ದರು. ಈ ಚರ್ಚೆಗಳಲ್ಲಿ ತೊಡಗಿದವರನ್ನು ಶಾಸನಗಳಲ್ಲಿ ಘಟಿಕಾವಾದಿ, ಘಟಿಕಾಸಾಹಸಿ, ಘಟಿಕಾಸಾಹಸ, ಘಳಿಸಾಸ, ಘೈಸಾಸ ಎಂದು ಕರೆದಿರಬೇಕು, ಈ ಹೆಸರು ಇಂದಿನ ಮಹಾರಾಷ್ಟ್ರದಲ್ಲಿ ಉಳಿದುಕೊಂಡಿದ್ದು ಅದು ಪ್ರಾಚೀನ ಸಾಂಸ್ಕೃತಿಕ ಪ್ರತೀಕವಾಗಿದೆ ಎಂದು ವಿದ್ವಾಂಸರ ಅಭಿಪ್ರಾಯವಾಗಿದೆ.[೨] ಒಟ್ಟಾರೆ ಹೇಳುವುದಾದರೆ ಅಲ್ಲಿನ ಚರ್ಚೆ ವಾದಗಳು ವಿದ್ವಾಂಸರ ಬುದ್ಧಿವಂತಿಕೆ, ವಿದ್ಯಾಸಾಮರ್ಥ್ಯ ಪ್ರತಿಭೆ ಇತ್ಯಾದಿಗಳ ಪರೀಕ್ಷೆಗೆ ಗುರಿಯಾಗಿದ್ದವೆಂದು ತಿಳಿಯುತ್ತದೆ. ಅಂತಹ ಪರೀಕ್ಷೆಗಳಲ್ಲಿ ಜಯಶಾಲಿಯಾದವನಿಗೆ ಇಂತಹ ಬಿರುದಿನಿಂದ ಕರೆಯುತ್ತಿದ್ದರೆಂದು ಡಾ. ಚಿದಾನಂದಮೂರ್ತಿ ಯವರು ಸಹ ಸ್ಪಷ್ಟ ಪಡಿಸಿದ್ದಾರೆ.[೩] ಇದನ್ನೇ ಬಲವಾಗಿ ಪ್ರತಿಪಾದಿಸುತ್ತ ಡಾ. ಎಚ್. ಎಸ್. ಗೋಪಾಲರಾವ್ ಅವರು ಘಟಿಕಾಸ್ಥಾನಗಳಲ್ಲಿ ನಡೆಸಲಾಗುತ್ತಿದ್ದ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗೆಲವು, ಪಡೆದವನೇ ಘಟಿಕಾ ಸಾಹಸಿ; ಘಟಿಕಾ ಸಾಹಸಿಯೇ ಘಳಿಸಾಸಿ, ಘೈಸಾಸ ಎಂದಾಗಿರಬೇಕೆಂದು ಸಮರ್ಥಿಸಿರುವುದು ಸೂಕ್ತವೆನಿಸುತ್ತದೆ.[೪]

ಪ್ರಸ್ತುತ ಕೊಪ್ಪಳ ಜಿಲ್ಲೆಯ ಹನುಮನಾಳ ಶಾಸನದಲ್ಲಿ[೫] ೬೪ ಘಟಿಕಾಸ್ಥಾನ ಪಟ್ಟಣಗಳಿದ್ದವೆಂದು ತಿಳಿಸುತ್ತದೆ. ಇನ್ನೊಂದು ಕಡೆ ಶ್ರೀ ಗೋಪಾಲರಾವ್ ಅವರು ಸಹ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ೬೪ ಘಟಿಕಾಸ್ಥಾನಗಳಿದ್ದವೆಂದು ತಿಳಿಸಿರುವ ಅಂಶವನ್ನು ಗಮನಿಸಲಾಗಿ ಅವುಗಳು ಯಾವವು ಎಲ್ಲೆಲ್ಲಿ ಇದ್ದವೆಂದು ಗುರ್ತಿಸುವ ಕೆಲಸ ಆಗಬೇಕಾಗಿದೆ. ಆ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆಯ ಶಾಸನಗಳನ್ನು ಸಂಶೋಧಿಸಿ ಪರಿಶೀಲಿಸಲಾಗಿ ಈ ಜಿಲ್ಲೆಯ ಮಾದಿನೂರು[೬] ಕೂಕನೂರು[೭] ಇಟ್ಟಗೆ[೮] ಅಗ್ರಹಾರ ಮತ್ತು ಬ್ರಹ್ಮಪುರಿ ಘಟಿಕಾಸ್ಥಾನಗಳಾಗಿದ್ದವೆಂದು ತಿಳಿದುಬರುತ್ತದೆ.

ಈ ವಿದ್ಯಾಸಂಸ್ಥೆಗಳು ಮಠಗಳು, ದೇವಾಲಯಗಳಿಗೆ ಹೊಂದಿಕೊಂಡಿರುವವರಿಂದ ಅಲ್ಲಿರುವ ಶಿವ, ವಿಷ್ಣು, ಮತ್ತು ಆದಿತ್ಯ ಅಥವಾ ಸರಸ್ವತಿ, ದೇವಾಲಯ ತ್ರೈಪುರುಷರ ದೇವರುಗಳ ಶಾಲೆಗಳೇ ಅಗ್ರಹಾರ, ಬ್ರಹ್ಮಪುರಿಗಳು ಘಟಿಕಾಸ್ಥಾನಗಳಾಗಿ ರೂಪುಗೊಂಡಿರುವುದರಿಂದ ಅಲ್ಲಿಯ ವಿದ್ವಾಂಸರು ಆಯಾ ದೇವರುಗಳ ಹೆಸರುಗಳನ್ನು ತಮ್ಮ ಹೆಸರಿನ ಹಿಂದೆ ಬಿರುದುಗಳಾಗಿ ಸೇರಿಸಿಕೊಂಡಿರಬೇಕೆಂದು ಕಂಡುಬರುತ್ತದೆ. ಕೆಲವು ವಿದ್ವಾಂಸರ

* ಮ್ಯೂಜಿಯಂ ಮೇಲ್ವಿಚಾರಕರು, ಕನ್ನಡ ಸಂಶೋಧನ ಸಂಸ್ಥೆ, ಕವಿವಿ ಧಾರವಾಡ - ೫೮೦ ೦೦೩

ಹೆಸರುಗಳ ಹಿಂದೆ ಘಟಿಕಾಸಾಹಸಿ ಎಂಬ ವಿಶೇಷಣ ಇರುವುದನ್ನು ಉದಾಹರಣೆ ಸಹಿತವಾಗಿ ಡಾ. ಚಿದಾನಂದಮೂರ್ತಿಯವರು ಕ್ರಿ. ಶ. ೭೧೩ರಲ್ಲಿ ಶಾಸನದಲ್ಲಿ ಉಲ್ಲೇಖ ಬರುವ ಮಾಧವಶರ್ಮನ ಹೆಸರಿನಿಂದ ಆತ ಘಟಿಕಾಸಾಹಸಿ ಆಗಿದ್ದನೆಂದು ಸ್ಪಷ್ಟಪಡಿಸಿದ್ದಾರೆ.[೯] ಅಂದರೆ ಘಟಿಕಾಸ್ಥಾನಗಳಲ್ಲಿ ಜ್ಞಾನದ ಸಾಹಸವನ್ನು ಪ್ರದರ್ಶಿಸಿದವನು ಎಂದು ಆ ವಿಶೇಷಣಕ್ಕೆ ಅರ್ಥ ಮಾಡಬೇಕಾಗುತ್ತದೆ; ಹಾಗೂ ವಿದ್ವಾಂಸರು ಇತರ ವಿದ್ವಾಂಸರನ್ನು ಈಗಿನಂತೆ ಶಾಸ್ತ್ರಾರ್ಥಕ್ಕೆ ಕರೆಯುತ್ತಿದ್ದರು. ಆ ಶಾಸ್ತ್ರಾರ್ಥಗಳು ಇಂತಹ ಘಟಿಕಾಸ್ಥಾನಗಳಲ್ಲಿ ನಡೆಯುತ್ತಿದ್ದವು. ಹೀಗಾಗಿ ಅಲ್ಲಿ ಜಯಶಾಲಿ ಆದವನನ್ನು ಅಲ್ಲಿಯ ಘಟಿಕಾಸ್ಥಾನದ ಆ ದೇವರುಗಳ ಹೆಸರಿನಿಂದ ಅವರನ್ನು ಕರೆದಿರಬೇಕು. ಬೇರೆ ಜಿಲ್ಲೆಯ ಅಂಥ ಶಾಸನಗಳಲ್ಲಿ ಉಲ್ಲೇಖಗಳು ಸಿಗುತ್ತವೆ. ಉದಾಹರಣೆಗಾಗಿ ವಿಷ್ಣುದೇವ ಘಟಿಕಾವಾದಿ ಎಂಬ ಉಲ್ಲೇಖ ನಾಡಿನ ಬೇರೆ ಶಾಸನಗಳಲ್ಲಿ ಕಂಡುಬರುತ್ತದೆ. ಮತ್ತು ಆ ಕಾಲದ ವಿದ್ವಾಂಸರ ವಿಶೇಷಣಗಳಲ್ಲಿ ಪರವಾದಿ ಭಯಂಕರ ಇತ್ಯಾದಿ ಅಂಶಗಳು ಗಮನಿಸಿದ ಆಗಿನ ಜನರು ಇವರನ್ನು ಘಟಿಕಾಸ್ಥಾನದಲ್ಲಿ ಮನ್ನಣೆ ಪಡೆದವನು ವಿದ್ವತ್ತಿನ ಶಿಖರವನ್ನು ಮುಟ್ಟಿದವನು ಎಂದು ಭಾವಿಸಿರಬೇಕು. ಆದ್ದರಿಂದ ಶಾಸನಗಳಲ್ಲಿ ಕಂಡು ಬರುವ ಘಟಿಕಾ ಸಾಹಸಿ ಎಂಬುದೆ ಘಳಿಸಾಸ, ಘೈಸಾಸ ಎಂದಾಗಿ ಘೈಸಾಸ, ಘೈಸಾಸ, ಘೈಸ ಆಗಿರಬೇಕೆಂಬುದೇ ನನ್ನ ಅಭಿಪ್ರಾಯವೂ ಆಗಿದೆ. ಕೊಪ್ಪಳ ಜಿಲ್ಲೆಯ ಕುಕನೂರಿನ ಶಾಸನದಲ್ಲಿ ಉಲ್ಲೇಖ ಬಂದಿರುವ ವಾಸುದೇವ ಘೈಸಾಸ ಎಂಬ ವಿದ್ವಾಂಸನ ಹೆಸರು ಹರಿಹರನ ಬಸವರಾಜದೇವರ ರಗಳೆಯಲ್ಲಿ ವಾಸುದೇವ ಘೈಸಾಸರ, ಕೇಶವಭೈಸಾಸರ ಹೆಸರಿರುವುದನ್ನು ತಿಳಿಯ ಬಹುದಾಗಿದೆ.[೧೦]

ಅದೇ ಊರಿನ ಕ್ರಿ. ಶ. ೧೧೨೭ರ ಶಾಸನದಲ್ಲಿ[೧೧] ಅಗ್ರಹಾರ ಕುಕನೂರಿನ ಸರಸ್ವತಿ ದೇವಾಲಯದ ವಿವಿಧ ಕಾರ್ಯ ಚಟುವಟಿಕೆಗಳಿಗೆ ಅಗ್ರಹಾರದ ಮಹಾಜನರ ಕೈಯಲ್ಲಿ ಅರಸು, ಅಧಿಕಾರಿಗಳು ದಾನದತ್ತಿ ನೀಡಿದ ವಿಷಯದೊಂದಿಗೆ ಅಲ್ಲಿಯ ಮೂಲಸ್ಥಾನ ದೇವರ ನೈವೇದ್ಯಕ್ಕೆ "ಚತುರ್ವೇದಿಭಟ್ಟರ ತಿಪ್ಪೆ ಘೈಸಾಸನು ಅವನ ಅಳಿಯ ಶಂಕರವಿಕ್ರವಿನ್ತನು, ೫೦೦ ಕಮ್ಮ ಗದ್ದೆಯನ್ನು" ಬಿಟ್ಟದ್ದು ಕುರಿತು ತಿಳಿಸುತ್ತದ.

ಅದೇ ಶಾಸನದ ಮುಂದುವರೆದ ಭಾಗದಲ್ಲಿ "ರುದ್ರಾದಿತ್ಯ ಘೈಸಾಸನು" ಅಗ್ರಹಾರ ಕುಕನೂರಿನ ಮೂಲಸ್ಥಾನ ದೇವರ ನೈವಿದ್ಯಕ್ಕೆ ಗದ್ದೆ ೧ ಮತ್ತರ ೧೦೦ ಕಮ್ಮ ಭೂಮಿ ಬಿಟ್ಟನೆಂದಿದೆ. ಅದೇ ಶಾಸನದ ನಾಲ್ಕನೆ ಭಾಗದಲ್ಲಿ ಮಲ್ಲಿಕಾರ್ಜುನ ದೇವರ ಬ್ರಹ್ಮಪುರಿಯ ೧೫ ಮನುಷ ಬ್ರಾಹ್ಮಣರ್ಗ್ಗೆ ಮಾಚಂ ಎಡೆಹಳ್ಳಿಯ ಆದಾಯ ಬಿಟ್ಟರೆಂದು, ಕುಕನೂರಿನ ಬೇದವಟ್ಟೆ ಎಡೆಹಳ್ಳಿ, ಬಳ್ಳಿಂಗೆರೆ ಕೆರೆಯಿಂ; ಸಿರವುಣಸಿ ಊರುಗಳ ಸೀಮೆಯಲ್ಲಿ ಬರುವ ಹೊಲಗಳ ಆದಾಯದ ಅರ್ಧಭಾಗ ದೇವರಿಗೆ, ಇನ್ನರ್ಧ ಭಾಗ ಬ್ರಹ್ಮಪುರಿಯ ನಾರಾಯಣಬಟ್ಟೋಪಾಧ್ಯಾಯರು, ಪುರುಷೋತ್ತಮಜ್ಯರುಂ, ಕಾಳಿದಾಸ ದೀಕ್ಷಿತರು ಚಂದ್ರಸೋಮ ಯಾಜ್ಯರು, ಮಹಾದೇವಭಟ್ಟೋಪಾಧ್ಯಾಯರು, ನರಸಿಂಹ ಬಟ್ಟೋಪಾಧ್ಯಾಯರು ರುದ್ರದೀಕ್ಷಿತರು, ಚೌಂಡಭಟ್ಟೋ ಪಾಧ್ಯಾಯರು ಆದಿತ್ಯಾಘೈಸಾಸರು ಹಾಗು ಅಲ್ಲಿಯ ಮಾದವದೇವ ಇನ್ನಿವರ್ಸ್ಸಮಾನವಾಗಿ ಹಂಚಿಕೊಳ್ಳವುದೆಂದಿರುವುದು. ಕ್ರಿ. ಶ. ೧೧೪೪ನೇ ಶಾಸನದಲ್ಲಿ[೧೨] ವೇದಾಡ್ಯರಿಂದ ಯಜ್ಞದೀಕ್ಷಿತ ರಿಂದ ಶಾಸ್ತ್ರ ಪುರಾಣ, ತರ್ಕವಿದರಿಂದ ಕೂಡಿದ ಕುಕನೂರಿನ ಮಲ್ಲಿಕಾರ್ಜುನ ದೇವರಿಗೆ ಅಧಿಕಾರಿಗಳು, ಭಟ್ಟೋಪಾಧ್ಯಾಯ, ಗಂಗಾಧರಭಟ್ಟರು, ಇನ್ನಿತರ ಅಧಿಕಾರಿಗಳು, "ಭಕುತ ವಿಷ್ಣು ಘೈಸಾಸರು" ಸೇರಿ ಹೊನ್ನು ಸಹಿತ ಭೂಮಿ, ಎಣ್ಣೆ, ಗದ್ದೆ ಇತ್ಯಾದಿಯಾಗಿ ದಾನ ಬಿಟ್ಟರೆಂದು ತಿಳಿಸುವುದು. ಅದರಂತೆ ಕ್ರಿ. ಶ. ೧೧೭೦ರ ಕಾಲದ ಕುಕನೂರಿನ ಶಾಸನದಲ್ಲಿ ಅರಸ ಕಳಚೂರಿಯರ ವಂಶಾವಳಿ, ಕವಿ ಸಜ್ಜನ ತಿಲಕ, ಸಾಸಿರ್ವರು, ಉಲ್ಲೇಖಿತ ಅರಸರು, ಅಧಿಕಾರಿಗಳು, ಅಗ್ರಹಾರ ಕುಕನೂರಿಗೆ ಬಂದು ಬೆಳ್ವಲನಾಡಿನ ಗಡಿಯಲ್ಲಿರುವ ಭೂಮಿ ಆದಾಯವನ್ನು ಮಲ್ಲಿಕಾರ್ಜುನ ದೇವರ್ಗೊಂದು ಭಾಗ ದೇವರ ಬ್ರಹ್ಮಪುರಿಗಳಪ್ಪ ಭೂಮೊವರ್ಗ್ಗೊಂದು ಭಾಗ, ದೇವರ ಪೂಜೆ, ನೈವೇದ್ಯ ಅಂಗಭೋಗ ರಂಗಭೋಗಕ್ಕೆ ಬ್ರಾಹ್ಮಣರಿಗೆ - ಅರ್ಧಭಾಗ ಇನ್ನುಳಿದ ಅರ್ಧಭಾಗವನ್ನು ಕಸವಳ್ಳಿಯ ನಾರಾಯಣ ಭಟ್ಟೋಪಾಧ್ಯಾಯರು, ಸೋಮೇಶ್ವರ ಭಟ್ಟೋಪಾಧ್ಯಾಯರು ಕಾಳಿದಾಸ ಭಟ್ಟ ದೀಕ್ಷಿತರು, ವೇದಾನ್ತದ ಸೋಮೇಶ್ವರ ಭಟ್ಟೋಪಾಧ್ಯಾಯರು ಪುರುಷೋತ್ತಮ ಬಟ್ಟ, ಸೋಮಯಾಜ್ಯರು, ಮಾದೇವಭಟ್ಟೋಪಧ್ಯಾರು ಚಂದ್ರ ಸೋಮಯಾಜಿ, ಚೌನ್ದಭಟ್ಟೋಪಾಧ್ಯಾಯರು "ನಾರಾಯಣ ಘಳಿಸಾಸರು" ಹಿಟ್ಟಿಯ ಭಟ್ಟೋಪಾಧ್ಯಾಯರು ಪಟ್ಟವರ್ಧನ "ಆದಿತ್ಯಘಳಿಸಾಸರು", ಕೇಶವ ಭಟ್ಟೋಪಾಧ್ಯಾಯರು, ಹರಿಹರ ಭಟ್ಟರು, ಗೋವಿಂದ ಭಟ್ಟರು, ಬೆಣೆಯ ಮಾಧವಭಟ್ಟರು, ಯೋಗೇಶ್ವರ ಭಟ್ಟೋಪಾಧ್ಯಾಯರು "ಶಂಕರಘಳಿಸಾಸರು" ಸೋಮೇಶ್ವರ ಘಳಿಸಾಸರು, ವಿಶ್ವೇಶ್ವರ ಘಳಿಸಾಸರು, ಶ್ರೀಧರ ಭಟ್ಟರು, ನಾರಾಯಣ ಷಡಂಗಿಯರು, ಶಿವದೇವರು, ಗೋವಿಂದ ದೇವರು, "ಕೇಶವ ಘಳಿಸಾಸರು" ಇನ್ನಿವರ್ ಸಮನಾಂಶಮಾಗೆ ಹಚ್ಚಿಕೊಳ್ವದು, ಆ ದೇಶದ ಮೇಲಾರೈಯದೇವರ ಬ್ರಹ್ಮಪುರ ಗಳಾರಯ್ವರು ಎಂದು ವಿವರಿಸುತ್ತದೆ. ಇನ್ನೊಂದು ಶಾಸನದಲ್ಲಿ ದೇಮೆಯಕಣಂಗಿಯ ಗಣೇಶ್ವರ ದೇವಾಲಯದಲ್ಲಿ ರುದ್ರಾದಿತ್ಯ ಘೈಸಾಸನು ಮಾಡಿಸಿದ ಸತ್ರದ ಮನೆಯಲ್ಲಿ ಪ್ರತಿದಿವಸವು ೬ ಜನ ಬ್ರಾಹ್ಮಣರು ಊಟ ಮಾಡುವಂತೆ ಮತ್ತೆ ೧೨ ಜನರು ಊಟ ಮಾಡಲು "ರುದ್ರಾದಿತ್ಯಘೈಸಾಸನು" ಭೂಮಿದಾನ

ನೀಡಿರುವುದಾಗಿ ತಿಳಿಸುತ್ತ ಕಡಲಗೆರೆಯ ಮತ್ತರು ೨೨ ಕಮ್ಮ ೬೦೦; ಮಹಾದೇವ ಘೈಸಾಸರು ಬಿಟ್ಟಕೆಯಿಂ ಘೈಸಾಸರ ಕೆರೆಯಂಗೆರ್ದೆ ಮತ್ತರು ೧, ಬೇರೆ ಬೇರೆಯವರು ದೇವರ ಬೇರೆ ಬೇರೆ ಕಾರ್ಯಗಳಿಗೆ ದಾನ ನೀಡಿರುವುದಾಗಿ ತಿಳಿಯುವುದು.*[೧೩]

ಯಲಬುರ್ಗಿ ತಾಲೂಕಿನ 'ಇಟ್ಟಿಗೆ' ಶಾಸನದಲ್ಲಿ ಕಲ್ಯಾಣಚಾಲುಕ್ಯ ಅರಸ ತೈಲಪನಿಂದ ೬ನೇ ವಿಕ್ರಮಾದಿತ್ಯನ ವರೆಗಿನ ವಂಶಾವಳಿಯಿಂದ ಪ್ರಾರಂಭಗೊಂಡ ಈ ಶಾಸನ ಬೆಳವಲ ನಾಡಿನ ನರೆಯಂಗಲ್ಲು ೧೨ರಲ್ಲಿ ಬರುವ ಇಟ್ಟಗೆ ಅಗ್ರಹಾರದ ತೋಟ, ಗ್ರಾಮಶಾಸ್ತ್ರಜ್ಞರನ್ನು, ೪೦೦ ಜನ ಬ್ರಾಹ್ಮಣರನ್ನು ಅವರ ವಿಶೇಷ ಕರ್ತವ್ಯಗಳನ್ನು ಎಣಿಸುವುದು. ಅಲ್ಲದೆ ಮಹಾದೇವ ದಂಡನಾಥನು ಇಟ್ಟಗೆಯಲ್ಲಿ ೧. ತನ್ನ ಹೆಸರಿನಿಂದ ಈಶ್ವರ ದೇವಾಲಯ ೨. ತಂದೆ ಹೆಸರಿನಿಂದ ನಾರಾಯಣ ದೇವಾಲಯ ೩. ತಾಯಿಯ ಹೆಸರಿನಿಂದ ಚಂದ್ರಲೇಶ್ವರ ದೇವಾಲಯಗಳ, ಅಂಗಭೋಗ ರಂಗಭೋಗ, ಪ್ರಜೆ, ನೈವಿದ್ಯ ಪಾತ್ರವಳ, ಅನ್ನದಾನ ಭಟ್ಟವೃತ್ತಿ, ಘಳಿಯಾರ ಮುಂತಾದವುಗಳು ನಡೆಯುವಂತೆ ೫೦೦ ಮತ್ತರು ಹೊಲ, ಆಳುಕಾಳಿಗಾಗಿ ೨೫ ಮನೆಗಳನ್ನು ಕಟ್ಟಿಸುತ್ತಾನೆ ಮತ್ತು ಋಗ್ವೇದದ ಬಾಲಶಿಕ್ಷೆ ಯಜುರ್ವೇದ ಬಾಲಶಿಕ್ಷೆ ಮುಂತಾದವುಗಳಿಗೆ ದಾನ-ದತ್ತಿಗಳನ್ನು ಬಿಟ್ಟುಕೊಟ್ಟಿರುವುದಾಗಿ ಹೇಳುವುದು, ಮುಂದುವರೆದು ಮುದಿಯನೂರ ವಿಷ್ಣು ಘೈಸಾಸರ ಮನೆಯಿಂದ ಮೂಡ ಮುಖದೆಕ್ಕೆ ೬೫ ಅಲ್ಲಿ ಮೂಡಲು ಬಟ್ಟೆಯಿಂ ತೆಂಕಲು ೨೧ಕ್ಕೆ ನೀಳದ ಮೂಡ ಮುಖದೆ ತೆಲುಗರ ಮಾಗೆಯಕ್ರವಿತರ ಮುಟ್ಟೆಯಗಲಂ ೭೬ ಅದರೊಳಗೆ ದೇವರ ನಂದಾದೀಪಕ್ಕೆ ಮನೆ ಸಹಿತಂ ಗಾಣ ೨ ಹೀಗೆ ಅನೇಕ ರೀತಿಯ ದಾನದತ್ತಿಗಳು ಬಿಟ್ಟ ಬಗ್ಗೆ ಹೇಳುವುದು.*[೧೪] ಮಾದೆನೂರಿನ ಶಾಸನದಲ್ಲಿ*[೧೫] ಅಗ್ರಹಾರ ತ್ರೈಪುರುಷ ದೇವರ ಉಲ್ಲೇಖ ಬಂದಿದ್ದು ಮಾದೇನೂರು ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನ ವಾಗಿತ್ತೆಂದು ಶಾಸನಗಳಿಂದ ತಿಳಿಯುತ್ತದೆ.[೧೫] ಅಲ್ಲದೆ ಮಾದಿನೂರು ವಿಷ್ಣುಘೈಸಾಸರು, ಚಟ್ಟೋಪಾಧ್ಯಾಯ ಸೋಮಯಾಜಿಯರ ಕುರಿತು ಹಾಗು ಘಟಿಕಾಸ್ಥಾನದ ಪೂರಕ ಮಾಹಿತಿ ಸಿಗುವುದು.

ಕುಷ್ಟಗಿ ತಾಲೂಕಿನ ಚಳಗೇರಿ ಶಾಸನದಲ್ಲಿ ಅರಸ ಕಳಚೂರಿ ಚಕ್ರವರ್ತಿ ರಾಯಮುರಾರಿ ಸೋವಿದೇವ ಕಿಸುಕಾಡು ೭೦ನ್ನು ಆಳುತ್ತಿರುವಾಗ ಗೊಬ್ಬೂರು ಯಜ್ಞನಾರಾಯಣಭಟ್ಟೋಪಾಧ್ಯಾಯಗಳರೆಯ ಕೊಯಿಮತ್ತರು-೧೦ ಹರಳು, ಮತ್ತರು-೪, ವೆಂಗೆರೆಯ ನಾರಾಯಣ ಘಳಿಸಾಸರ್ಗ್ಗೆರೆಯ ಕೊಯಿಮತ್ತರು ೪ ಹರಳಮತ್ತರು - ೨, ಖಂಡಕ್ಕೆರೆಯ ಕೆಯು ಮತ್ತರು ೬ ಹರಳ ಮತ್ತರು ೨, ಭೋಗವ ಘಳಿಸಾಸರ್ಗೆರೆಯ ಕೆಯ ಮತ್ತರು ೬, ಹೊಳತೆಭಟರ್ಗೆರೆ ಕೆಯ ಮತ್ತರು ೬, ಹೊಳತೆ ಭಟರ್ಗೆರೆ ಕೆಯ ಮತ್ತರು ೬, ಹರಳು ೨ ಮತ್ತರು ೨, ವಾದಿಭಟ್ಟರ್ಗ್ಗೆರೆಯ ಮತ್ತರು ೬ ಹರಳು ಮತ್ತರು ೨ ದೇವನಾಯಕರ್ಗೆರೆಯ ಮತ್ತರು ೬ ಹರಳು ಮತ್ತರು ೨, ಘಳಿ ಸಾಸರ್ಗೆರೆಯ ಕೆಯಮತ್ತರು ೪ ಹರಳ - ೨ ಇತ್ಯಾದಿಯಾಗಿ ದಾನದತ್ತಿ ಬಿಟ್ಟ ಉಲ್ಲೇಖದ ಜೊತೆಗೆ ಅಲ್ಲಿಯ ನಖರಿಗಳು ಪ್ರಜೆಗಳು, ಸುಂಕದ ಅಧಿಕಾರಿಗಳು, ಸಾಸಿರ್ವರು ಆಡಳಿತ ಅಧಿಕಾರಿಗಳು ಸೇರಿ ಚಳಗೇರಿಯ ಕಲ್ಲಂಗೆರೆಯ ಲಕ್ಷ್ಮೀನಾರಾಯಣ ದೇವರ ದೇವಾಲಯದ ಚೈತ್ರ ಪಾವಿತ್ರಕ್ಕೆ, ಪೂಜಾರಿಗೆ ನಂದಾದೀಪಕೆ ಭೂಮಿಯ ಆದಾಯವನ್ನು ಮೇಲೆ ಉಲ್ಲೇಖಿತ ಬ್ರಾಹ್ಮಣರಿಗೆ ಹಂಚಿರುವದಾಗಿ ತಿಳಿಸುವುದು.[೧೬] ಇಲ್ಲಿ ಮುಖ್ಯವಾಗಿ ಗಮನಿಸುವುದೇನಂದೆರೆ ಘಟಿಕಾಸ್ಥಾನದಲ್ಲಿರುವ ವಿದ್ವಾಂಸರ ಕೇರಿ (ಓಣೆಗಳು) ಗಳ ಬಗ್ಗೆ ಪ್ರಸ್ತಾಪ ಕಾಣುವುದರಿಂದ ಇಂದಿನ ಹಾಗೆ ಅವರಿಗೆ ಒಂದೇ ಕಡೆ ಇರಲು ಉಪಾಧ್ಯಾಯರ ಕ್ವಾಟರ್ಸ್ ಇದ್ದಹಾಗೆ ಅವರು ವಾಸಿಸುವ ಕೇರಿಗಳಾಗಿದ್ದವೆಂದು ತಿಳಿಯುತ್ತದೆ.

ಹೀಗೆ ಶಾಸನಗಳಲ್ಲಿ ಉಲ್ಲೇಖ ಬರುವ (ಘಳಿಸಾಸರು) ಘೈಸಾಸರು ಮತ್ತು ಅವರ ಹಿಂದಿನ ಹೆಸರುಗಳು ಅವರು ಪಡೆದ ವಿದ್ವತ್ತಿನ ಪದವಿ ಬಿರುದುಗಳಾಗಿ ಘಳಿಸಾಸರ್ಗೆರೆಯ, ಘಳಿಸರ್ಗೆರೆಯ (ಕೇರಿ) ಅಥವಾ ಓಣಿ ಅವರು ವಾಸಿಸುವ ಸ್ಥಳವಾಗಿರಬೇಕು. ಅಷ್ಟೊಂದು ವಿದ್ವಾಂಸರ ಗುಂಪು ಇಲ್ಲಿ ಇತ್ತೆಂದು ತಿಳಿಯುತ್ತದೆ. ಶಿಕ್ಷಣಕ್ಕೆ ಹೆಸರಾದ ಕೊಪ್ಪಳ ಜಿಲ್ಲೆ ಶಾಸನಗಳಲ್ಲಿ ಶಾಸನೋಕ್ತ ಕವಿಗಳ ಉಲ್ಲೇಖ ಬರುತ್ತಿದ್ದು ಸಾಹಿತ್ಯ ದೃಷ್ಟಿಯಿಂದಲೂ ಸಹ ಇಲ್ಲಿಯ ಶಾಸನಗಳು ಅಮೂಲ್ಯವಾಗಿವೆ. ಇದಕ್ಕೆಲ್ಲಾ ಈ ಪ್ರದೇಶದಲ್ಲಿ ಬರುವ ಶಿಕ್ಷಣ ಕೇಂದ್ರಗಳಾದ ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನಗಳು ಕಾರಣವಾಗಿವೆ. ಅವೆಲ್ಲವುಗಳು ಬೆಳೆಯಲು ಕಾರಣವಾದ ಇಲ್ಲಿಯ ಜನರು ತೋರಿದ ಉದಾರ ಭಾವನೆಗಳು ಮುಖ್ಯವಾಗಿವೆ. ಅಂತೆಯೇ ಘೈಸಾಸ ವಿದ್ವಾಂಸರ ಪ್ರಸ್ತಾಪಗಳು ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನಗಳಂಥ ಶಿಕ್ಷಣ ಕೇಂದ್ರಗಳ ಉಲ್ಲೇಖಗಳತ್ತ ಇಲ್ಲಿ ಗಮನಹರಿಸಲಾಗಿದೆ.

ಒಟ್ಟಿನಲ್ಲಿ ಹೇಳಬೇಕೆಂದರೆ ಕೊಪ್ಪಳ ಜಿಲ್ಲೆಯಲ್ಲಿ ಸಹ ಘಟಿಕಾಸ್ಥಾನಗಳು ಇದ್ದು ಅಲ್ಲಿ ವಿದ್ವಾಂಸರೆಲ್ಲರು ಸೇರಿ ಚರ್ಚಿಸಿ ವಾದ, ಸ್ಪರ್ಧೆಗಳಲ್ಲಿ ತೊಡಗಿ ಜಯಶೀಲಗಳಾಗಿ ಪ್ರಸಿದ್ಧಗೊಂಡಿದ್ದರು ಮತ್ತು ಅವರು ಈ ಪ್ರದೇಶದಲ್ಲಿ ವಾಸಿಸುತ್ತಿದ್ದರು ಹಾಗು ಅವರಿಗೆ ಕೊಟ್ಟ ಶಾಸನಗಳು ದಾನ ದತ್ತಿಗಳ ಬಗ್ಗೆ ಸಾಕಷ್ಟು ಮಾಹಿತಿಯನ್ನು ಇದರಿಂದ ಈ ಪ್ರದೇಶ ಶಿಕ್ಷಣಕ್ಕೆ ಹೆಸರಾಗಿದ್ದು, ವಿದ್ವಾಂಸರ ಬಳಗವೆ ಇಲ್ಲಿತ್ತು ಎಂದಾಗುತ್ತದೆ. ಹೀಗಾಗಿ ಅಧಿಕ ಸಂಖ್ಯೆಯಲ್ಲಿ ಘೈಸಾಸರ ಉಲ್ಲೇಖಗಳು ಶಾಸನಗಳಲ್ಲಿ ಕಾಣಿಸಿಕೊಂಡಿರುವುದನ್ನು ಆಧಾರವಾಗಿಟ್ಟುಕೊಂಡ ಶಿಕ್ಷಣದಲ್ಲಿ ಅವರ ಪಾತ್ರ ಏನು ಎಂಬುದು ತಿಳಿಯುತ್ತದೆ. 

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨.**, (೧೯೯೯), 'ಕೊಪ್ಪಳ ಜಿಲ್ಲೆಯ ಶಾಸನಗಳು'.
೨. ಶ್ರೀ ಸೂರ್ಯನಾಥ ಕಾಮತ್, ಶ್ರೀ ಜಿ. ಎಸ್. ದೀಕ್ಷಿತರು, ಶ್ರೀಮತಿ ಜ್ಯೋತ್ಸ್ನಾ ಕಾಮತ್ ಅವರುಗಳ ಅಭಿಪ್ರಾಯವಾಗಿದೆ.
೩. ಡಾ. ಚಿದಾನಂದ ಮೂರ್ತಿ. ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪು-೨೨೩.
೪. ಡಾ. ಗೋಪಾಲರಾವ್ ಎಚ್. ಎಸ್., **ಕಲ್ಯಾಣ ಚಾಲುಕ್ಯರ ದೇವಾಲಯಗಳು ಒಂದು ಸಾಂಸ್ಕೃತಿಕ ಅಧ್ಯಯನ**, ಪುಟ ೧೬೩.
೫. **ಕ. ವಿ. ವಿ. ಶಾಸನ.**, ಸಂಪುಟ-೨, ಹನುಮನಾಳ ಶಾಸನ, ಪುಟ-೩೦೩, ಕ್ರಿ.ಶ. ೧೦೯೯.
೬. ಅದೇ, ಮಾದಿನೂರು, ಕ್ರಿ. ಶ. ೧೧೩೬, ಪುಟ - ೩೨.
೭. ಅದೇ, ಕುಕ್ಕನೂರು, ಕ್ರಿ.ಶ. ೧೧೦೭, ೧೧೨೭, ೧೧೩೨, ಪುಟ-೧೯೭.
೮. ಅದೇ, ಇಟ್ಟಗಿ ಕ್ರಿ.ಶ. ೧೧೦೮, ೧೧೧೨, ೧೧೧೩, ಪುಟ-೨೫೯.
೯. ಚಿದಾನಂದ ಮೂರ್ತಿ., ಎಂ., ಅದೇ, ಅ. ಪುಟ. ೨೨೩-೨೪.
೧೦. **ಬಸವರಾಜ ದೇವರ ರಗಳೆ.**, ಟಿ. ಎಸ್. ವೆಂಕಣ್ಣಯ್ಯ, (ಸಂ), ಪುಟ - ೬೭.
೧೧. ಕ.ವಿ.ವಿ. ಶಾಸನ ಸಂಪುಟ-೨, ಕ್ರಿ. ಶ. ೧೧೨೭, ಕುಕ್ಕನೂರು, ಪುಟ-೧೯೭ ರಿಂದ ೨೦೨.
೧೨. ಅದೇ, ಕುಕ್ಕನೂರು ೩೯, ಕ್ರಿ.ಶ. ೧೧೪೯, ಪುಟ-೨೦೨.
೧೩. ಅದೇ, ಸಂ-೨, ಕುಕ್ಕನೂರು ೪೧ (ಯ.ತಾ), ಕ್ರಿ.ಶ. ೧೧೭೦ ಪುಟ-೨೦೯.
೧೪. ಅದೇ, ಇಟಗಿ ೬೭ (ಯ.ತಾ), ಕ್ರಿ. ಶ. ೧೧೦೮, ೧೧೧೨, ೧೧೧೩, ಪುಟ-೨೫೯.
೧೫. ಅದೇ ಸಂ. ೨, ಮಾದನೂರು ೨೬ (ಕೊ. ತಾ), ಕ್ರಿ.ಶ. ೧೧೩೬, ೧೧೯೦, ಪುಟ-೩೧.
೧೬. ಅದೇ ಸಂ. ೨, ಬಳಗೇರಿ ೨೧ (ಕೊ. ತಾ), ಕ್ರಿ.ಶ. ೧೧೭೨, ಪುಟ-೨೯೮.

ಡಾ॥ ಎಚ್. ಎಸ್. ಗೋಪಾಲ ರಾವ್*

# ಮಣ್ಣೆಯ ಶ್ರೀವಿಜಯನ ಬಗ್ಗೆ ಕೆಲವು ಅನುಮಾನಗಳು

ಮಣ್ಣೆಯು ಇತ್ತೀಚೆಗೆ ಇತಿಹಾಸಾಸಕ್ತರ, ವಿಶೇಷವಾಗಿ ಸಂಶೋಧಕರ ಗಮನವನ್ನು ಸೆಳೆಯುತ್ತಿದೆ. ಶ್ರೀ ಸಿ. ಹಯವದನ ರಾಯರ ಪ್ರಕಾರ ೧೯೩೦ಕ್ಕೆ ಮೊದಲು, ಕಲಿತುಂಗನನ್ನು ಕುರಿತ ಕ್ರಿ.ಶ. ಸು. ೯೭೦ರ ಒಂದು ಶಿಲಾ ಶಾಸನ[1] ಮತ್ತು ಎರಡು ತಾಮ್ರಶಾಸನಗಳು ಅಲ್ಲಿ ಆಗಲೇ ಪತ್ತೆ ಆಗಿದ್ದವು. ಅವುಗಳ ಹಿನ್ನೆಲೆಯಲ್ಲಿ ಮಣ್ಣೆಯು ಗಂಗ ದೊರೆಗಳ ಕಾಲದಲ್ಲಿ ಒಂದು ರಾಜ ನೆಲೆವೀಡು ಅಥವಾ ಉಪರಾಜಧಾನಿ ಆಗಿತ್ತು ಎಂದು ತಿಳಿಯಲಾಗಿದೆ. ಅಲ್ಲಿ ಅತ್ಯಂತ ದುಸ್ಥಿತಿಯಲ್ಲಿ ಉಳಿದಿರುವ ದೇವಾಲಯಗಳು ಈ ಅಭಿಪ್ರಾಯವನ್ನು ಕೇವಲ ಊಹೆಯ ಹಂತಕ್ಕೇ ಬಿಡುವುದಿಲ್ಲ. ಸೋಮೇಶ್ವರ ದೇವಾಲಯದ ವಿನಹ ಉಳಿದ ಎಲ್ಲಾ ದೇವಾಲಯಗಳೂ ಹಾಳುಬಿದ್ದಿವೆ. ಸೂಳೆಯರ ದೇವಾಲಯ ಎಂದು ಕರೆಯಲ್ಪಡುವ ಜೈನ ಬಸದಿಯಂತೂ ನಮ್ಮ ದಿವ್ಯ ನಿರ್ಲಕ್ಷ್ಯಕ್ಕೆ ಉತ್ತಮ ಉದಾಹರಣೆ ಆಗಿದೆ. ಸಿ. ಹಯವದನರಾಯರು ಇದನ್ನು ಗಮನಿಸಿದಾಗ ಅದರ ಮುಂದೆ ಒಂದು ನಂದಿ ಮಂಟಪವಿತ್ತು. ನಂದಿಮಂಟಪ ಮತ್ತು ನವರಂಗಗಳ ಒಳಛಾವಣಿ(ಭುವನೇಶ್ವರಿ)ಯಲ್ಲಿ ಬಳ್ಳಿಯ ನಡುವೆ ನಾಗನಹೆಡೆಯ ಕೆಳಗೆ ನಾಗ-ನಾಗಿಣಿಯರ ಶಿಲ್ಪವಿದೆ ಎಂದು ಅವರು ದಾಖಲಿಸಿದ್ದಾರೆ. ಈಗ ನಂದಿ ಮಂಟಪವೂ ಇಲ್ಲ; ಅದರೊಳಗಿನ ಭುವನೇಶ್ವರಿಯೂ ಇಲ್ಲ. ಆದರೆ ನವರಂಗವಿದೆ ಮತ್ತು ಅಲ್ಲಿನ ಭುವನೇಶ್ವರಿಯಲ್ಲಿ ಸಿ. ಹಯವದನ ರಾಯರು ಗುರುತಿಸಿರುವ ಶಿಲ್ಪವಿದೆ. ಇದು ಕೇವಲ ನಾಗ-ನಾಗಿಣಿಯರ ಶಿಲ್ಪವಾಗಿರದೆ ಧರಣೇಂದ್ರ ಯಕ್ಷ ಮತ್ತು ಅವನ ಜೊತೆಗಿನ ಪದ್ಮಾವತಿ ಯಕ್ಷಿಯ ಶಿಲ್ಪವಾಗಿದೆ. ಈ ಧರಣೇಂದ್ರನು ೨೩ನೆಯ ತೀರ್ಥಂಕರನಾದ ಪಾರ್ಶ್ವನಾಥನ ಯಕ್ಷ ಎಂದು ಜೈನ ಧರ್ಮದ ಪರಿಚಯ ಇರುವ ಯಾರಿಗಾದರೂ ತಿಳಿಯುತ್ತದೆ. ಅಂದರೆ ಸೂಳೆಯರ ಗುಡಿ ಎಂದು ಕರೆಸಿಕೊಳ್ಳುವ ಈ ವಾಸ್ತುವು ನಂದಿ ಮಂಟಪವಿದ್ದ ಶಿವನ ದೇವಾಲಯವಲ್ಲ. ಬದಲಿಗೆ ಪಾರ್ಶ್ವನಾಥ ಬಸದಿಯಾಗಿದೆ.

ದೊರೆತಿರುವ ಒಂದು ತಾಮ್ರಶಾಸನದ ಪ್ರಕಾರ ಗಂಗ ವಂಶದ ಮಾರಸಿಂಹನ ಆಳ್ವಿಕೆಯ ಸಂದರ್ಭದಲ್ಲಿ ಅವನ ಎಲ್ಲಾ ಸಾಮನ್ತರ ಸೇನಾಧಿಪತಿಯಾಗಿದ್ದ ಶ್ರೀವಿಜಯ ಎನ್ನುವವನು, ಮಾರಸಿಂಹನ ಅನುಜ್ಞೆಯಂತೆ ಮಾನ್ಯಪುರದಲ್ಲಿ ಭಗವದರ್ಹ ದಾಯತನವನ್ನು ನಿರ್ಮಿಸಿದ್ದಾನೆ.[2] ಈ ಶ್ರೀವಿಜಯನನ್ನು ಶಾಸನವು ಆರಂಭದಲ್ಲಿ 'ಪರಮಾರ್ಹತಃ ಪರಮಧಾರ್ಮಿಕಃ ಮನ್ತ್ರಪ್ರಭೂತ್ಸಾಹಶಕ್ತಿ ಸಮ್ಪನ್ನಃ' ಎಂದು ಹೊಗಳಿ ಮುಂದುವರಿದು 'ಸಹಸ್ರದೀಧಿತಿರಿವತಿ ರೋಹಿತಾಖಿಳ ಪರತೇಜಃ ಪ್ರಸರೋಪಿ ಅಸನ್ತಾಪಿತ ಭೂತಲಃ ಸುನಾಸೀರಿವಾಖಣ್ಡಿತ ಸಕಳ ಜನಾಜ್ಞೋಪಿ ಅಗೋತ್ರ ಭೇದನಕರಃ....' ಇತ್ಯಾದಿಯಾಗಿ ಹೊಗಳುತ್ತಾ 'ಝಷಕೇತನ ಇವ ಸ್ವವಶೀಕೃತ ಸಕಲ ಜನೋಪಿ ಅಪಹ್ರಿತ ಬಾಳಾಬಳಾ ತಪಸ್ವೀಯಶ್ಚ ಅಮೃತಮಯೋ ಭೃತ್ಯಾನಾಂ ಸುಖಮಯೋ ಮಿತ್ರಾನಾಂ ಸುಧಾಮಯೋ ರಾಮಾಣಾಂ ಉತ್ಸಾವಮಯಃ ಪ್ರಜಾನಾಂ ವಿನಯಮಯೋ ಗುರೂಣಾಂ ನಯಸ್ಖಳದ್ವೃತ್ತೀನಾಂ ಅಗ್ರಣೀ ರಸಿಕಾನಾಂ ಸ್ರಷ್ಟೋ ಕಾವ್ಯರಚನಾನಾಂ' ಎಂದೂ ವರ್ಣಿಸಿದೆ. ಶಾಸನದಲ್ಲಿ ಉಲ್ಲೇಖಿತ ನಾಗಿರುವ ರಾಜನು ಗಂಗವಂಶದ ಮಾರಸಿಂಹ. ಇವನು ೨ ನೆಯ ಶಿವಮಾರನ ಮಗ. ಇವನ ಜೀವಿತದ ಬಹು ಭಾಗ ಯುವರಾಜನಾಗಿಯೇ ಇದ್ದವನು. ಕೇವಲ ಒಂದು ವರ್ಷ ಮಾತ್ರ ರಾಜನಾಗಿ ಅಧಿಕಾರ ಪಡೆದಿದ್ದಂತೆ ತೋರುತ್ತದೆ. ಅದು ಶಿವಮಾರನು ರಾಷ್ಟ್ರಕೂಟರ ಬಂದಿಯಾಗಿದ್ದ ಅವಧಿ ಎಂದು ತಿಳಿಯಲಾಗಿದೆ. ಈ ಶಾಸನವು ಮಾರಸಿಂಹನ ಆಳ್ವಿಕೆಯನ್ನೇ ದಾಖಲಿಸಿರುವುದರಿಂದ, ಇದರ ಕಾಲವೇ ನಮ್ಮ ಊಹೆಯ ಕಾಲವೆಂದು ಭಾವಿಸಬಹುದಾಗಿದೆ. ಅಂದರೆ ಕ್ರಿ.ಶ. ೭೯೭ರಲ್ಲಿ ಮಾರಸಿಂಹ ಆಳುತ್ತಿದ್ದಾಗ, ಅವನ ಸಮಸ್ತ ಸಾಮನ್ತರ ಸೇನಾಧಿಪತಿಯಾಗಿದ್ದ ಶ್ರೀ ವಿಜಯನು ಇಲ್ಲಿನ ಜಿನೇಂದ್ರ ಭವನವನ್ನು ನಿರ್ಮಿಸಿದ್ದಾನೆ. ಇವನು ಕಾವ್ಯ ರಚನೆಯಲ್ಲೂ ಪರಿಣಿತನಾಗಿದ್ದ ಎಂಬ ಅಂಶವನ್ನು ಶಾಸನವೇ ತಿಳಿಸಿದೆ.

ಶ್ರೀ ವಿಜಯ ನಿರ್ಮಿಸಿದ್ದ ಜಿನಭವನಕ್ಕೆ, ನಂತರದ ಐದನೆಯ ವರ್ಷದಲ್ಲಿ ರಾಷ್ಟ್ರಕೂಟ ದೊರೆ ನಿರುಪಮದೇವ ಪ್ರಭೂತ ವರ್ಷ, ಎಂದರೆ ಮೂರನೆಯ ಗೋವಿಂದನು ದಾನ ನೀಡಿದ್ದಾನೆ. ಜಿನೇಂದ್ರ ಭವನದ ನಿರ್ಮಾಣದ ಸಮಯದಲ್ಲಿ ಮಾನ್ಯಪುರವು ಇನ್ನೂ ಗಂಗವಂಶದ ಆಳ್ವಿಕೆಯಲ್ಲೇ ಇತ್ತು. ನಂತರದ ಐದು ವರ್ಷಗಳ ಅವಧಿಯಲ್ಲಿ ಯಾವಾಗಲೋ ಅದು ರಾಷ್ಟ್ರಕೂಟರ ಅಧಿಕಾರಕ್ಕೆ ಸೇರಿಹೋಗಿತ್ತು.

ಮಣ್ಣೆಯಲ್ಲಿ ಜಿನ ಭವನವನ್ನು ನಿರ್ಮಿಸಿದ ಶ್ರೀ ವಿಜಯನು ಉನ್ನತಾಧಿಕಾರಿಯಾಗಿದ್ದ ಮತ್ತು ಗಂಗವಂಶದ ಮಾರಸಿಂಹ ಮತ್ತು ರಾಷ್ಟ್ರಕೂಟ ಮೂರನೆಯ ಗೋವಿಂದ ಇಬ್ಬರ ಕಾಲದಲ್ಲೂ

* 'ಸ್ವಸ್ತಿಶ್ರೀಸ್ಕಂದ', ಅರಸಿನ ಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ-೫೬೨ ೧೨೩

ಪ್ರಭಾವಶಾಲಿ ವ್ಯಕ್ತಿಯಾಗಿದ್ದ. ಈಗ ತಿಳಿದಿರುವಂತೆ ರಾಷ್ಟ್ರಕೂಟ ಮೂರನೆಯ ಗೋವಿಂದನ ಆಳ್ವಿಕೆಯ ಕಾಲ ಕ್ರಿ.ಶ. ೭೯೩ರಿಂದ ೮೧೪. ಆ ನಂತರ ಆಳಿದ ರಾಷ್ಟ್ರಕೂಟ ದೊರೆಯೇ ಅಮೋಘವರ್ಷ ನೃಪತುಂಗ. ಅವನ ಆಳ್ವಿಕೆಯ ಅವಧಿ ಕ್ರಿ.ಶ. ೮೧೪ರಿಂದ ೮೭೮.

ಸದ್ಯಕ್ಕೆ ದೊರೆತಿರುವ ಕನ್ನಡದ ಮೊಟ್ಟ ಮೊದಲ ಅಲಂಕಾರ ಗ್ರಂಥ 'ಕವಿರಾಜ ಮಾರ್ಗ'. ಅದರ ಕರ್ತೃ ಶ್ರೀ ವಿಜಯ. ಅವನ ಕಾಲ ಕ್ರಿ.ಶ. ಸು. ೮೫೦ ಎಂದು ನಿರ್ಧಾರಿತವಾಗಿದೆ. ಶ್ರೀ ವಿಜಯನು ಕವಿರಾಜ ಮಾರ್ಗವನ್ನು ಬರೆದದ್ದು ನೃಪತುಂಗನ ಅಭಿಮತದಂತೆ. ಅಂತಾಗಿ ನೃಪತುಂಗನ ಕಾಲಕ್ಕೆ ಶ್ರೀ ವಿಜಯನ ಕಾಲವನ್ನೂ ಸೇರಿಸಬೇಕಾದ್ದು ಅನಿವಾರ್ಯ. ಆದ್ದರಿಂದ ಶ್ರೀ ವಿಜಯನ ಕಾಲವನ್ನು ಕ್ರಿ.ಶ. ಸು. ೮೫೦ ಎಂದು ನಿರ್ಧರಿಸಲಾಗಿದೆ. ಶ್ರೀ ವಿಜಯನ ಸ್ಥಳದ ಬಗ್ಗೆ ಖಚಿತವಾಗಿ ಈವರೆಗೆ ತಿಳಿದಿಲ್ಲವಾದರೂ, ಇವನು ಮಾನ್ಯಖೇಟ ನಗರಿಗೆ ಆಕರ್ಷಿತನಾದವನು ಎಂಬ ಮಾತನ್ನು.

ಕವಿರಾಜಮಾರ್ಗದ

*ವ್ಯಾಕರಣ ಕಾವ್ಯ ನಾಟಕ*
*ಲೋಕಕಳಾ ಸಮಯಮಾದಳಂಕೃತಿಗಳೊಳಂ.*
*ವ್ಯಾಕುಳನಲ್ಲದೇಕೆ ವಿ*
*ವೇಕ ಬೃಹಸ್ಪತಿಯ ನಗರಮಂ ಪುಗುತರ್ಪಂ॥*[೪]

- ಎಂಬ ಪದ್ಯದಿಂದ, ಅವನು ಮಾನ್ಯಖೇಟದವನಲ್ಲ, ಬೇರೆಲ್ಲಿಂದಲೋ ಮಾನ್ಯಖೇಟಕ್ಕೆ ಬಂದವನು ಎಂಬ ಅಭಿಪ್ರಾಯ ದೊರೆಯುತ್ತದೆ. ಹಾಗಾದರೆ ಅವನ ಮೂಲ ಸ್ಥಳ ಯಾವುದು ಎಂಬ ಪ್ರಶ್ನೆ ಉಳಿಯುತ್ತದೆ.

ಕನ್ನಡದ ಹಲವು ಶಾಸನಗಳಲ್ಲಿ ಶ್ರೀ ವಿಜಯ ಎಂಬ ವ್ಯಕ್ತಿಯ ಹೆಸರನ್ನು ಕಾಣಬಹುದು. ಅವುಗಳಲ್ಲಿ ಕಾಲದ ದೃಷ್ಟಿಯಿಂದ ೯ನೆಯ ಶತಮಾನದ ಕೆಲವು ಶಾಸನಗಳನ್ನಷ್ಟೇ ಇಲ್ಲಿ ಪರಿಶೀಲಿಸಲಾಗಿದೆ. ಕಡಪ ಜಿಲ್ಲೆಯ ದಾನವುಲಪಾಡುವಿನ ಒಂದು ಶಾಸನದಲ್ಲಿ 'ಅನುಪಮ ಕವಿ', 'ಅಜಿವಿಂಗೋಜ' ಇತ್ಯಾದಿ ವಿಶೇಷಣಗಳುಳ್ಳ ಒಬ್ಬ ಶ್ರೀ ವಿಜಯನ ಉಲ್ಲೇಖವಿದೆ. ಈ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಆದರೆ ಲಿಪಿ ಸ್ವರೂಪ ಮತ್ತು ಉಕ್ತನಾಗಿರುವ ರಾಜನ ಹೆಸರನ್ನು ಆಧರಿಸಿ, ಅವನ ಕಾಲವನ್ನು ಕ್ರಿ. ಶ. ಸು. ೯೧೫-೯೧೭ಕ್ಕೆ ನಿರ್ಧರಿಸಲಾಗಿದೆ. ಶ್ರೀ ಆರ್. ನರಸಿಂಹಾಚಾರ್ ಮತ್ತು ಶ್ರೀ ಎಚ್. ಕೃಷ್ಣ ಶಾಸ್ತ್ರಿ ಇಬ್ಬರೂ, ಇವನಿಗೂ ಕವಿರಾಜಮಾರ್ಗದ ಶ್ರೀವಿಜಯನಿಗೂ ಯಾವುದೇ ಸಂಬಂಧ ಇಲ್ಲ ಎಂದು ತಿಳಿಸಿದ್ದಾರೆ.

ಬಾದಾಮಿ ಚಲುಕ್ಯ ವಿಕ್ರಮಾದಿತ್ಯನ ಕಾಲದ ಲಕ್ಷ್ಮೇಶ್ವರದ ಒಂದು ಶಾಸನದಲ್ಲಿ 'ಶ್ರೀವಿಜಯದೇವ ಪಂಡಿತಾಚಾರ್ಯ'ರ ಉಲ್ಲೇಖವಿದೆ. ಇದರ ಕಾಲ ಕ್ರಿ.ಶ. ೭೫೫. ಈ ಕಾಲವು ಕವಿರಾಜಮಾರ್ಗಕಾರನ ಕಾಲಕ್ಕಿಂತ ಸುಮಾರು ನೂರು ವರ್ಷ ಹಿಂದಾಗುತ್ತದೆ. ಆದ್ದರಿಂದ ಈ ಶಾಸನದ ಶ್ರೀ ವಿಜಯನನ್ನೂ ಕವಿರಾಜಮಾರ್ಗದ ಶ್ರೀವಿಜಯನ ಕಾಲಕ್ಕೆ ಸೇರಿಸಲಾಗುವುದಿಲ್ಲ.

ಪ್ರಸ್ತಾಪಿಸುತ್ತಿರುವ ಮಣ್ಣೆಯ ತಾಮ್ರಶಾಸನಗಳನ್ನು ಉಲ್ಲೇಖಿಸಿ, ಡಾ॥ ಎಂ. ಎಂ. ಕಲಬುರ್ಗಿ ಅವರು, ಈ ಶಾಸನಗಳ ಶ್ರೀ ವಿಜಯನೇ ಕವಿರಾಜಮಾರ್ಗದ ಶ್ರೀ ವಿಜಯ ನಿರಬೇಕು ಎಂಬ ಪ್ರಮೇಯವೊಂದನ್ನು ಮುಂದಿಟ್ಟಿದ್ದಾರೆ.[೫] ಈ ಪ್ರಮೇಯದ ಹಿನ್ನೆಲೆಯಲ್ಲಿ ಕವಿರಾಜಮಾರ್ಗಕಾರನೇ ಮಣ್ಣೆಯ ಶ್ರೀ ವಿಜಯ ಎಂಬ ಅಭಿಪ್ರಾಯವನ್ನು ಖಚಿತಪಡಿಸಬೇಕಾಗಿದೆ. ಡಾ॥ ಎಂ.ಎಂ. ಕಲಬುರ್ಗಿ ಅವರು ತಮ್ಮ ಪ್ರಮೇಯವನ್ನು ಮಂಡಿಸುವಾಗ ಕವಿರಾಜಮಾರ್ಗಕಾರನು ತನ್ನ ಕೃತಿಯಲ್ಲಿ ಕರ್ನಾಟಕದ ಮೇರೆಗಳನ್ನು ಪರಿಚಯಿಸುವಾಗ, ಗೋದಾವರಿಯನ್ನು ಉಲ್ಲೇಖಿಸುವ ಸಂದರ್ಭದಲ್ಲಿ ಪ್ರದೇಶ ಸೂಚಿಯಾಗಿ ಬಳಸುವ ಸರ್ವನಾಮವು 'ಆ' ಎಂದು, ಕವಿಯು ಇರುವ ಸ್ಥಳದಿಂದ ಕಾವೇರಿಯನ್ನು ಸಮೀಪದಲ್ಲಿಯೂ, ಗೋದಾವರಿಯನ್ನು ದೂರದಲ್ಲಿಯೂ ಇರುವಂತೆ ಸೂಚನೆ ನೀಡುತ್ತದೆ.

*ಕಾವೇರಿಯಿಂದಮಾ ಗೋ*
*ದಾವರಿವರಮಿರ್ದನಾಡದಾ ಕನ್ನಡದೊಳ್।*
*ಭಾವಿಸಿದ ಜನಪದಂ ವಸು*
*ಧಾವಲಯವಿಲೀನವಿಶದ ವಿಷಯ ವಿಶೇಷಂ।*[೬]

ಕಾವೇರಿಯಿಂದ ಆ ಗೋದಾವರಿಯವರೆಗಿನ ನಾಡು ಕನ್ನಡ ನಾಡು ಎನ್ನುವುದು ಅವನ ಅಭಿಪ್ರಾಯ. ಅಂದರೆ ಕವಿಯು ಗೋದಾವರಿಗೆ ದೂರದ ಮತ್ತು ಕಾವೇರಿಗೆ ಹತ್ತಿರದ ಪ್ರದೇಶದವನೂ ಆಗಿರಬೇಕು ಎಂಬ ಡಾ॥ ಎಂ. ಎಂ. ಕಲಬುರ್ಗಿ ಅವರ ಅಭಿಪ್ರಾಯವನ್ನು ಗಂಭೀರವಾಗಿಯೇ ಸ್ವೀಕರಿಸಬೇಕು. ಈ ಅಭಿಪ್ರಾಯದ ಹಿನ್ನೆಲೆಯಲ್ಲಿ ಕವಿರಾಜಮಾರ್ಗಕಾರನು ಕಾವೇರಿಗೆ ಸಮೀಪದ ಪ್ರದೇಶದವನಾಗಿರಬೇಕು. ಆದ್ದರಿಂದ ಕರ್ನಾಟಕದ ದಕ್ಷಿಣದ ಯಾವುದೋ ಒಂದು ಸ್ಥಳದಿಂದ ಮಾನ್ಯಖೇಟಕ್ಕೆ ಹೋದವನಾಗಿರಬೇಕು. ಆ ಸ್ಥಳವು ಹಿಂದಿನ ಮಾನ್ಯಪುರ ಏಕಾಗಿರಬಾರದು ಮತ್ತು ಆ ಶ್ರೀ ವಿಜಯನು ಮಣ್ಣೆಯ ಎರಡು ತಾಮ್ರ ಶಾಸನಗಳಲ್ಲಿ ಉಲ್ಲೇಖಿತನಾಗಿರುವ ಶ್ರೀ ವಿಜಯನೇ ಏಕಾಗಿರಬಾರದು ಎಂಬ ಪ್ರಮೇಯವನ್ನು ಮಂಡಿಸಲಾಗಿದೆ.

ಈ ಲೇಖನದ ಆರಂಭದಲ್ಲಿ ತಿಳಿಸಿದಂತೆ, ಬಹಳ ವರ್ಷಗಳ ಕಾಲ ಮಣ್ಣೆಯ ಜಿನ ಭವನವನ್ನು ಗುರುತಿಸಲಾಗಿರಲಿಲ್ಲ. ಶ್ರೀ ವಿಜಯ ನಿರ್ಮಿಸಿದ ಆ ಜಿನ ಭವನವೇ ಈಗಿನ ಸೂಳೆಯರ ಗುಡಿ ಎಂದು ಈಗ ಸ್ಪಷ್ಟವಾಗಿದೆ. ಎರಡು ವರ್ಷಗಳ ಹಿಂದೆ ಇಲ್ಲಿ ನಡೆದ ಎನ್. ಎಸ್. ಎಸ್. ಶಿಬಿರದಲ್ಲಿ, ಸೂಳೆಯರ ಗುಡಿಯ ಪಕ್ಕದ ಹಗೇವಿನಿಂದ ತೀರ್ಥಂಕರನ

ವಿಗ್ರಹದ ರುಂಡ ಭಾಗವನ್ನು ಹೊರ ತೆಗೆಯಲಾಯಿತು. ಸೂಳೆಯರ ಗುಡಿಯೇ ಶ್ರೀವಿಜಯ ಜಿನಾಲಯ ಎಂಬುದು ಮತ್ತಷ್ಟು ಸ್ಪಷ್ಟವಾಗಿದೆ.

ಮಣ್ಣೆಯ ಶ್ರೀ ವಿಜಯ ಜಿನಾಲಯ ನಿರ್ಮಾಣದ ವಿಷಯವನ್ನು ದಾಖಲಿಸುವ ಶಾಸನದಲ್ಲಿ 'ಝಷಕೇತನ' ಎಂಬ ಪದ ಪ್ರಯೋಗವಿದೆ. ಈ ಪದವನ್ನು ಕವಿರಾಜಮಾರ್ಗದಲ್ಲೂ ಕಾಣಬಹುದು[೭]. ಅಲ್ಲದೆ, ಮಣ್ಣೆಯ ಶಾಸನದಲ್ಲಿ ವಿಷ್ಣುಪರ ವರ್ಣನೆಗಳಿವೆ.[೮] ಕವಿರಾಜಮಾರ್ಗದಲ್ಲಿಯೂ ರಾಮಾಯಣ ಕಥೆಗೆ ಸಂಬಂಧಪಟ್ಟ ಕೆಲವು ಲಕ್ಷ್ಯ ಪದ್ಯಗಳಿವೆ.

ಕವಿರಾಜಮಾರ್ಗದ 'ಜಿನಚರಣ ನಖಾದರ್ಶಂ। ವಿನತಾಮರ ರಾಜ ರಾಜವದನಪ್ರತಿಮಂ'[೯] ಎಂಬ ಮಾತಿಗೆ ಮಣ್ಣೆಯ ಶಾಸನದಲ್ಲಿನ 'ಭಗವದರ್ಹ ಭಟಾರಕ ಚರಣ ಪರಿಚರಣ ಪ್ರಣತ'[೧೦] ಎಂಬ ಮಾತುಗಳು ಸಂವಾದಿ ಎನಿಸುತ್ತವೆ-

ಈ ಹಿನ್ನೆಲೆಯಲ್ಲಿ ಮಣ್ಣೆಯ ಶ್ರೀ ವಿಜಯನೇ ಕವಿರಾಜಮಾರ್ಗಕಾರ ಶ್ರೀವಿಜಯ ಎಂಬ ಊಹೆಯನ್ನು ಬಲಪಡಿಸುತ್ತಾ, ಗಂಗ ಮಾರಸಿಂಹನ ಕಾಲದಲ್ಲಿ ಅಧಿಕಾರಿಯಾಗಿದ್ದ ಶ್ರೀ ವಿಜಯನು, ಅದೇ ಅಧಿಕಾರದಲ್ಲಿ ರಾಷ್ಟ್ರಕೂಟ ಮೂರನೆಯ ಗೋವಿಂದನ (ಕ್ರಿ.ಶ. ೭೯೩-೮೧೪) ಕಾಲದಲ್ಲೂ ಮುಂದುವರಿದಿರಬಹುದು ಮತ್ತು ಆಗ ಅವನು ಇನ್ನೂ ಯೌವನಾವಸ್ಥೆಯಲ್ಲಿದ್ದು, ನಂತರ ನೃಪತುಂಗನ ಕಾಲಕ್ಕೆ (ಕ್ರಿ.ಶ. ೮೧೪-೮೭೮) ಮಾನ್ಯಖೇಟಕ್ಕೆ ಹೋಗಿ, ವೃದ್ಧಾಪ್ಯದಲ್ಲಿ ಕವಿರಾಜಮಾರ್ಗವನ್ನು ರಚಿಸಿರುವ ಸಾಧ್ಯತೆಗಳಿವೆ ಎಂದು ತಿಳಿದರೆ ತಪ್ಪಾಗಲಾರದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಮೈಸೂರು ಗ್ಯಾಸಿಟಿಯರ್.**, (೧೯೩೦), ಸಿ. ಹಯವದನರಾವ್., (ಸಂ. ೫), ಬೆಂಗಳೂರು.

೨. **ಎ. ಕ. IX.**, ನೆಲ ೬೦, ಕ್ರಿ.ಶ. ೭೯೭.

೩. ಎ. ಕ. IX., ನೆಲ ೬೧, ಕ್ರಿ. ಶ. ೮೦೨.

೪. **ಕವಿರಾಜಮಾರ್ಗಂ.**, (೧೯೭೩), ಪ್ರಥಮ ಪರಿಚ್ಛೇಧ, ಪದ್ಯ-೬, ಮದರಾಸ್.

೫. ಡಾ|| ಎಂ. ಎಂ. ಕಲಬುರ್ಗಿ., (೧೯೭೩), **ಕವಿರಾಜಮಾರ್ಗ ಪರಿಸರ ಮತ್ತು ಕನ್ನಡ ಸಾಹಿತ್ಯ** ಪು. ೩೦-೩೨.

೬. **ಕವಿರಾಜಮಾರ್ಗಂ.**, ಅದೇ, ಪದ್ಯ-೩೬.

೭. ಶಶಿಧರ ಬಿಂಬಾನನೆಯಂ
ಝಷಕೇತನ ಕೇತನಾಭ ತನು ತನುವಂ ತಾಂ
ಬಿಸವಿಶದ ವರ್ಣೆಯಂ ಕಂ
ಡೊಸೆದಂ ಬನದೊಳಗೆ ಜನಕತನಯಳನನುವಂ||.. **ಕವಿರಾಜಮಾರ್ಗಂ**, ದ್ವಿತಿಯ ಪರಿಚ್ಛೇಧ, ಅದೇ, ಪದ್ಯ-೪೦.

೮. 'ಸುಖಮಯೋ ಮಿತ್ರಾಣಾಂ ಸುಧಾಮಯೋ ರಾಮಾಣಾಂ'.

೯. **ಕವಿರಾಜಮಾರ್ಗಂ**, ತೃತೀಯ ಪರಿಚ್ಛೇಧ, ಅದೇ, ಪದ್ಯ-೧೮.

೧೦. ಎ.ಕ. IX., ನೆಲ ೬೧, ಕ್ರಿ. ಶ. ೮೦೨.

ಪು. ಶ್ರೀನಿವಾಸ ಭಟ್ಟ*

# ಕವುಲೆದುರ್ಗದ ಶಾಸನದಲ್ಲಿ ಉಡುಪಿಯ ಪರಿಸರ

ವಿಜಯನಗರ ಸಾಮ್ರಾಜ್ಯದ ಇಳಿಗಾಲದ ಬಳಿಕ, ಸಾಧಾರಣ ಎರಡು ಶತಮಾನಗಳ ಕಾಲ ತುಳುನಾಡು, ಕೆಳದಿ ಸಂಸ್ಥಾನದ ಆಡಳಿತಕ್ಕೆ ಒಳಪಟ್ಟಿತ್ತು. ಆ ಕಾಲದ ಅನೇಕ ಭಗ್ನಾವೇಷಗಳು ಇಂದಿಗೂ ಅಲ್ಲಲ್ಲಿ ಉಳಿದುಕೊಂಡಿವೆ. ಇಲ್ಲಿಯ ಅನೇಕ ಹಳ್ಳಿಗಳು ಕೆಳದಿಯ ನೇರ ಸಂಪರ್ಕವನ್ನು ಹೊಂದಿದ್ದವು. ಇಂತಹ ಊರುಗಳಲ್ಲಿ ಉಡುಪಿ ಜಿಲ್ಲೆಯ ಕೆಲವು ಸ್ಥಳಗಳು ಸೇರಿವೆ. ಇದನ್ನು ತಿಳಿಯಪಡಿಸುವ ತಾಮ್ರಶಾಸನವೊಂದರ ಪರಿಚಯವನ್ನು ಇಲ್ಲಿ ಮಾಡಲಾಗಿದೆ.

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಕವುಲೆದುರ್ಗದ ಮಂಡಳಿ ಮಠದ ತಾಮ್ರಶಾಸನದಲ್ಲಿ ತುಳು ನಾಡಿನ 'ಬೆಳ್ಮಣ್ಣು' ಹಾಗೂ ಮತ್ತೆ ಕೆಲವು ಊರುಗಳನ್ನು ಹೆಸರಿಸಿರುವುದು ಕಂಡು ಬರುತ್ತದೆ. ಕೆಳದಿ ವೆಂಕಟೇಶ ಜೋಯಿಸರು ಸಂಪಾದಿಸಿದ **ಕೆಳದಿ ಅರಸರ ಶಾಸನ ಸಂಪುಟ** ದಲ್ಲಿ ೨೯೦ ಶಾಸನಗಳಿವೆ. ೨೨೬ನೇ ನಂಬ್ರದ ಶಾಸನವು ಎರಡು ತಾಮ್ರಪತ್ರಗಳ ನಾಲ್ಕು ಪುಟಗಳಲ್ಲಿ ಬರೆಯಲ್ಪಟ್ಟಿದೆ. ಇದರ ಕಾಲ, ಕ್ರಿ. ಶ. ೧೭೭೮. ಕೆಳದಿ ರಾಣಿ ಚೆನ್ನಮಾಜಿಯ ಮಗ ಹಿರಿಯ ಬಸವಪ್ಪನಾಯಕನು, ಕವುಲೆದುರ್ಗದ ಮಂಡಳಿ ಮಠದ ಮುಳ್ಳುಸೂಜಿ ಸ್ವಾಮಿಗಳ ಸನ್ನಿಧಿಗೆ, ದತ್ತಿ ಬಿಟ್ಟಿರುವುದನ್ನು ಶಾಸನ ಪ್ರಸ್ತಾಪಿಸಿದೆ. ವಿಶಾಲವಾದ ಕೆಳದಿ ಸಾಮ್ರಾಜ್ಯದ, ಬೇರೆ ಬೇರೆ ಸ್ಥಳಗಳಿಂದ, ಮಠಕ್ಕೆ ಸಲ್ಲ ಬೇಕಾದ ಕಾಣಿಕೆಗಳನ್ನು ಇದರಲ್ಲಿ ಸೂಚಿಸಲಾಗಿದೆ. ೧೧೮ ಸಾಲುಗಳಲ್ಲಿ ಬರೆಯಲ್ಪಟ್ಟಿರುವ ಶಾಸನದ ೬೯ರಿಂದ ೭೯ರ ವರೆಗಿನ ಸಾಲುಗಳಲ್ಲಿ, ಪ್ರಸ್ತುತ ವಿಷಯ ಸೇರಿಕೊಂಡಿದೆ. ಅದರ ಮೂಲಪಾಠ ಹೀಗಿದೆ.

*೬೯ ಆರಮನೆಗೆ ತೆಗೆದುಕೊಂಡು ಉತ್ತಾರ ಕೊಟ್ಟದ್ದು ಸಿಸ್ತಿನಿಂದ ಗ೫ ಉಭಯಂ ಗ ೫೨ ಲ್ ೪॥ ಬಾರಕೂರಹೆಂ*

*೭೦ ಬಳಿಯ ವಳಗಣ ಪಿಲಿಯಾರ. ಸಾತ್ತೂರಿನಿಂದ ಪ್ರಾಕುರೇಖೆ ೧ ಕೆಲ್ ೪ ಲು ಗ ೫೨೮॥ ೧*

*೭೧ ಬಿರಾಡಗ ೨೬೪ಲ್ ೩ ಸ್ಥಳ ವೆಚ್ಚ ಬಿರಾಡ ೯೯ ಕೋಟೆ ಬಿರಾಡ ಗ ೫ ಅಂತ್ತು ಗ ೮೦೬॥ ೪ ಹೆಚ್ಚಿದ್ದು*

*೭೨ ರಾಕ್ಷಸ ಸಂವತ್ಸರದಲು **ಕುಂದಹೆಗ್ಗಡೆ** ಹೊಂನ ಬಡ್ಡಿಯಿಂದ ಗ ೩೦, **ಬೆಳುಮಂಣುಯಿಂದ** ಚವು*

*೭೩ ಹೆಚ್ಚಿದ್ದು ಮಂತನವಮಿ ಕಾಣಿಕೆ ಗ ೨. ದೀವಳಿಗೆ ಯುಗಾದಿ ಹಬ್ಬ ಕಾಣಿಕೆ ಗ ೨. ಉಭಯಂಗಳ ಉಭಯ*

*೭೪ ಗೆ ೪೩॥ ೧ ತೆಂಗಿನ ಮರನಿಂದ ಕ್ಷಯ ಸಂವಂತ್ಸರದಲ್ಲು ಯಣಿಕ ಫಲ ಮರ ೫೦೩ ಸರ್ವಜಿತು ಸಂವತ್ಸರದಲೂ*

*೭೫ ಮೆಡಸಪಿ ೨೬೯ ಖರ ಸಂವತ್ಸರದಲೂ ಕೂಡಿದು ಜೋಕುಮರ ೩೦೬ಕೆ ಪಾಲುಣ, ಮರ*

*೭೬ ಅಂತುಮ ೭೬ರ ೮ ಕೆ ವಿವರ ತೋಟಮರ ೨೩೬ ಕೆ ಗ ೧೩॥ ೩ ಗದ್ದೆ ಮರ ೫೭೯ ಕೆ ಗ ೨೦ ಲ್ ೨॥ ಉಭಯಂ ಮರ ೮೫೫ಕ*

*೭೭ ಗ ೩೪॥ ಅಂತುಗ ೮೮೪॥೦॥ ಕೆ ವಿಂಗಡ **ಯಿರುವತ್ತೂರಿಗೆ** ಸಿರಿಯೂರ ಶಿರಿಮಂಜದಿಂದ ಗ ೮೦ ಚ।*

*೭೮ ಉಬ್ಬರಿಗೆ ಕುಂಜತಾಲಸದಿಂ ಜತ್ತಲೆ ಪಾಡಿ **ಮುಳ್ಳಡಕ** ದಿಂದ ಸಹ ಗ ೧೫೦ **ಬಳಸಾವಿರದ ಸೀಮೆಗೆ** ಬೆ।*

*೭೯ **ಳುಮಂಣ್** ಗ್ರಾಮಕೆ ಗ ೭೬॥ ೩॥ ಅಂತು ಗ ೩೦೬ ॥೩॥ ಉತ್ತಾರ ಪುರಾಣದ **ಚವಟ್ಟ ದೇವರಿಗೆ** ಗ ೩೧॥೦*

*೮೦ ಉಭಯಂ ಗ ೩೧೦ ಲ್ ೩ ।।। ೯ ಶುಧ ಗ ೫೩೪ಲ್ ೧।।। ದಾಸೋಹ ಗಲ್ಲ್ ೧। = ಉಭಯಂ ಗ ೫೭೭*

*೮೧ ಲ್೩ = ಕೆ ವಿವರ ಸಿಸ್ತಿನಿಂದ ಗ ೫೦೧॥೪॥ - ಪ್ರಾಕು ವಿಚಾರ ಮುಖದ ನಷ್ಟದಿಂದ ಗ ೫೩೮*

- ಇಲ್ಲಿ ಹೇಳಿರುವ ಅನೇಕ ಸ್ಥಳಗಳು ಈಗಲೂ ಅದೇ ಹೆಸರಿನಿಂದ ಉಳಿದುಕೊಂಡಿವೆ. ಬಾರಕೂರು ಹೋಬಳಿ (ಹಿಂದೆ ಬಾರಕೂರು ಮಂಗಳೂರು ಹೋಬಳಿಗಳೆಂಬ ಆಡಳಿತ ವಿಭಾಗ ವಿತ್ತು), ಪಿಲಿಯಾರ (ಈಗಿನ ಪಿಲಾರು ಅಥವಾ ಪಿಲಿಯೂರು) ಸಾತ್ತೂರು (ಈಗಿನ ಸಾಂತೂರು), ಕುಂದಹೆಗ್ಗಡ (ಯಲ್ಲೂರು ಎಂಬಲ್ಲಿಯ ತುಂಡರಸ); ಬೆಳುಮಂಣು ಗ್ರಾಮ (ಈಗಲೂ ಅದೇ ಹೆಸರಿನಲ್ಲಿದೆ. ಇಲ್ಲಿ ೮ನೇ ಶತಮಾನದ ಒಂದು ತಾಮ್ರಶಾಸನ ಸಿಕ್ಕಿದೆ. ದಿ। ಡಾ। ಗುರುರಾಜ ಭಟ್ಟರು ಇದನ್ನು ಓದಿದ್ದರು); ಯಿರುವತ್ತೂರು (ಯಿಲ್ಲಿ ಜಂಗಮ ಮುನಿ ಸ್ಥಾಪಿಸಿದ ಲಿಂಗವಿದೆ ಈಗ ಇದೆ ಹೆಸರಿನಲ್ಲಿದೆ); ಶಿರುಮಂಜ (ಈಗ ಶಿಮುಂಜೆ ಯೆಂದಾಗಿದೆ. ಚವುಟ್ಟರು (ಮೂಡಬಿದಿರೆಯ ಚವುಟರು), ಮುಳ್ಳಡಕ (ಈಗಲೂ ಇದೇ ಹೆಸರಿನ ಗ್ರಾಮವಾಗಿದೆ), ಮುಳ್ಳುಸಿದ್ಧೇಶ್ವರ ಸ್ವಾಮಿಗಳಿಗೆ ಸಂಬಂಧಿಸಿ ಮುಳ್ಳಡಕ ಹೆಸರು ಬಂದಿರಬಹುದು. ಬಳಿಸಾಗರ (ಕಟಪಾಡಿಯ ಬಳಿಯ ಯೇಣ ಗುಡ್ಡೆಯ ಹೆಸರು) ಇತ್ಯಾದಿ ಹೆಸರುಗಳು ಕಾಣಬರುತ್ತವೆ. ಕವಲೇ ದುರ್ಗದ ಶಾಸನೋಕ್ತ ಉಡುಪಿ ಕುರಿತು ನನ್ನ ಲೇಖನ ವೊಂದರಲ್ಲಿ ಪ್ರಸ್ತಾಪಿಸಲಾಗಿದೆ.

ತುಳುನಾಡಿನಿಂದ ಬಹಳ ದೂರದ ಶಾಸನದಲ್ಲಿ ಈ ಹೆಸರುಗಳಿವೆ, ಎನ್ನುವುದು ಸ್ಥಳೀಯ ಇತಿಹಾಸ ಆಸಕ್ತರಿಗೆ, ಅಧ್ಯಯನಯೋಗ್ಯ ವಿಷಯವಾಗಿದೆ.



* ನಿವೃತ್ತ ಶಿಕ್ಷಕ, ಪಂಚವಟಿ, ಅಜೌರು - ಕಟೀಲು, ದ. ಕನ್ನಡ - ೫೭೪ ೧೪೮

ಎಸ್. ಎಂ. ನಾಗಭೂಷಣ*

# ಬೆಳಗಾವಿ ಜಿಲ್ಲೆಯ ಶಾಸನ ಕವಿಗಳು ಲಿಪಿಕಾರರು ರೂವಾರಿಗಳು

ಕನ್ನಡ ನಾಡಿನ ಶಾಸನ ಕವಿಗಳನ್ನು ಕುರಿತಂತೆ, ಆರ್. ನರಸಿಂಹಾಚಾರ್, "ಕರ್ನಾಟಕ ಕವಿ ಚರಿತೆ" ಹಾಗೂ ಮೇವುಂಡಿ ಮಲ್ಲಾರಿಯವರ "ಕನ್ನಡ ಶಾಸನ ಕವಿಗಳು" ಕೃತಿಗಳಲ್ಲಿ ಹಾಗೂ ಇತರರ ಬಿಡಿ ಲೇಖನಗಳಲ್ಲಿ ಕೇವಲ ಶಾಸನ ಕವಿಗಳನ್ನು ಗುರುತಿಸಿ, ಶಾಸನ ಲಿಪಿಗಾರರನ್ನು ಹಾಗೂ ರೂವಾರಿಗಳನ್ನು, ಶಿಲಾಲಿಪಿ ಶಿಲ್ಪಿಗಳನ್ನು ಗಮನಿಸಿಲ್ಲ. ಎಂ. ಎಂ. ಕಲಬುರ್ಗಿ, ಶ್ರೀನಿವಾಸ ರಿತ್ತಿ, ಆರ್. ಎನ್. ಗುರವ, ಆರ್. ಎಲ್. ಪಾಟೀಲ ಹಾಗೂ ಇತರರು, ಈ ನಿಟ್ಟಿನಲ್ಲಿ ಸಂಶೋಧನೆ ಮಾಡಿ ಶಾಸನ ಕವಿಗಳ ಜೊತೆಗೆ ಲಿಪಿಕಾರರನ್ನೂ, ರೂವಾರಿಗಳನ್ನೂ ಗುರುತಿಸುವ ಸ್ಮರಣೀಯ ಶೋಧನಾ ಕಾರ್ಯ ಮಾಡಿದ್ದಾರೆ.

ಸಾಮಾನ್ಯವಾಗಿ ಶಿಲಾ ಶಾಸನಗಳು ಹಾಗೂ ತಾಮ್ರ ಶಾಸನಗಳು ಸಿದ್ಧವಾಗುವಾಗ ಮೊದಲು ಕವಿಗಳು ಪಠ್ಯವನ್ನು ರಚಿಸಿ ಲಿಪಿಕಾರರಿಂದ ಸ್ಪಷ್ಟ ಲಿಪಿಯಲ್ಲಿ ಬರೆಸಿ, ನಂತರದಲ್ಲಿ ಶಿಲೆಯ ಮೇಲೆ ಅಥವಾ ಲೋಹಪಟಗಳಲ್ಲಿ ಬರೆಯಲು ಅಥವಾ ಕೆತ್ತಿಸಲು ರೂವಾರಿಗಳಾದ ಶಿಲಾಲಿಪಿಕಾರ ಅಥವಾ ಲೋಹಲಿಪಿಕಾರರಿಗೆ ವಹಿಸುತ್ತಿದ್ದರು. ಹೀಗೆ ಶಾಸನ ರಚಿಸಲು ಶ್ರಮಿಸಿದ್ದ ಶುದ್ಧ ಲಿಪಿಕಾರರ, ರೂವಾರಿಗಳ ಶಾಸನ ಶಿಲ್ಪಿ ಲಿಪಿಕಾರರ ಹೆಸರುಗಳನ್ನು ಕೆಲವೇ ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಶಿಲೆಯಲ್ಲಿ ಸುಂದರ ಲಿಪಿಯನ್ನು ಶ್ರಮವಹಿಸಿ ಲಿಪಿಸಿದ ಲಿಪಿಕಾರರನ್ನು ಸ್ಮರಿಸುವುದು ನಾಡಿನ ಸಂಸ್ಕೃತಿಯ ಒಂದು ಲಕ್ಷಣ.

೫ನೇ ಶತಮಾನದ ನಂತರದ ಕೆಲವೇ ಶಾಸನಗಳಲ್ಲಿ ಕವಿಗಳ, ಲಿಪಿಕಾರರ, ರೂವಾರಿಗಳ, ಹೆಸರುಗಳ ಉಲ್ಲೇಖಗಳಿವೆಯಾದರೂ, ಈ ಮೂವರ ಹೆಸರುಗಳ ಉಲ್ಲೇಖಗಳೂ ಬಹಳ ವಿರಳ. ಕೇವಲ ಕವಿಯ ಹೆಸರು ಅಥವಾ ಕೇವಲ ಲಿಪಿಕಾರನ ಹೆಸರು ಸಿಗುತ್ತದೆ. ರೂವಾರಿಗಳ ಹೆಸರುಗಳು ಉಲ್ಲೇಖಿಸಿರುವುದು ಬಹಳ ವಿರಳ. ಇಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ದೊರೆತ ಸುಮಾರು ೧೨೦ ಶಾಸನಗಳಲ್ಲಿ (ಕ್ರಿ. ಶ. ೫-ರಿಂದ ಕ್ರಿ. ಶ. ೧೩ನೇ ಶತಮಾನದವರೆಗೆ) ಕೇವಲ ೨೭ ಶಿಲಾ ಹಾಗು ತಾಮ್ರ ಶಾಸನಗಳಲ್ಲಿ ಉಲ್ಲೇಖಿತ ಶಾಸನ ಕವಿ, ಲಿಪಿಗಾರ ಹಾಗು ರೂವಾರಿಗಳು, ಅಥವಾ ಶಿಲಾಲಿಪಿ ಶಿಲ್ಪಿಗಳು, ಅವರ ಕಾಲಮಾನ, ವಂಶಪರಂಪರೆ ವೃತ್ತಿ, ರಾಜಾಶ್ರಯ, ಲಭ್ಯವಿರುವ ಅವರ ಬಿರುದು, ಹಾಗು ಅವರ ಸ್ವಂತ ಊರು ಮುಂತಾದ ವಿಷಯಗಳನ್ನು ಸದ್ಯ ಪ್ರಬಂಧದಲ್ಲಿ ಪರಿಶೀಲಿಸಲಾಗಿದೆ.

ಕೆಲ ರೂವಾರಿಗಳು ವಂಶಾನುಗತ ಒಂದೇ ರಾಜಮನೆತನದಲ್ಲಿ ೪-೫ ತಲೆಮಾರಿನವರೆಗೆ ವೃತ್ತಿಯಲ್ಲಿ ನಿರತರಾಗಿದ್ದ ನಿದರ್ಶನಗಳನ್ನು ಬೆಳಕಿಗೆ ತರಲಾಗಿದೆ. ಕೆಲಶಾಸನಗಳಲ್ಲಿ ಇವರ ಪಾಂಡಿತ್ಯ ಹಾಗೂ ಬಿರುದುಗಳನ್ನು ಅವರ ವಂಶವೃತ್ತಾಂತ ಪರಂಪರೆಯನ್ನು ಅವರ ಸ್ವಸ್ಥಳಗಳನ್ನು ಅವರ ಆರಾಧ್ಯ ದೇವರುಗಳನ್ನು ಅಭಿಮಾನದಿಂದ ಹೇಳಿಕೊಂಡದ್ದನ್ನು ಗುರುತಿಸಲಾಗಿದೆ.

ಶಾಸನಗಳಲ್ಲಿ ಕವಿಗಳನ್ನು "ರಚಿಸಿದಪಂ, ಪೇಳ್ದಪಂ, ವಿರಚಿಸಿದಪಂ, ಎಂಬ ಶಬ್ದಗಳಿಂದ ಹಾಗೂ ಲಿಪಿಗಾರ" ಎಂದು ಹೇಳಿದರೆ, ರೂವಾರಿಗಳು ಅಥವಾ ಶಿಲಾಶಿಲ್ಪಿಗಳು ಅಥವ ತಾಮ್ರಶಾಸನ ಲೋಹ ಲಿಪಿಶಿಲ್ಪಿಗಳನ್ನು ರೂವಾರಿ, ಸೂತ್ರಧಾರಿ, ಕಂಡರಿಸಿದಪಂ, ಕಣ್ಡರಿಸಿದಂ, ಕಣ್ತರಣೆ, ಕಲ್ಲುಕುಟಿಗ, ಎಂದು ಹೇಳುವುದರ ಮೂಲಕ ಹೆಸರು, ಬಿರುದು, ಆರಾಧ್ಯ ದೇವರ ಹೆಸರು ಸ್ಥಳನಾಮಗಳನ್ನು ಉಲ್ಲೇಖಿಸಲಾಗಿದೆ. ಇಂಥ ಶಾಸನಗಳು ಬಹಳ ವಿರಳವಾಗಿ ಸಿಗುತ್ತವೆ.

ಬೆಳಗಾವಿ ಜಿಲ್ಲೆಯಲ್ಲಿ ಮೊಟ್ಟಮೊದಲ ಶಿಲಾ ಶಾಸನವೆಂದರೆ ವಡಗಾಂ ಮಾಧವಪುರ ಉತ್ಖನನದಲ್ಲಿ ದೊರೆತ ಕಂಬ ಶಾಸನ ೧ನೇ ಶತಮಾನಕ್ಕೆ ಸೇರಿದ್ದು, ವೈದಿಕ ಪರಂಪರೆಗೆ ಸೇರಿದ ಶಾಸನ.[೧] ಇದಾಗಿದೆ.

ಕಾಪಾಲಿ ಗ್ರಾಮದ ಅಸಂಕಿತವರ್ಮನ ೫ನೇ ವರ್ಷದ ತಾಮ್ರ ಶಾಸನವನ್ನು **"ಗೋವಿಂದ ಬೋಗಿಕನ ಮಗ ಮಾಧವನ ಲಿಖಿತಂ ಸ್ವಸ್ತಿ"**[೨] ಎಂದು ಉಲ್ಲೇಖಿಸಲಾಗಿದೆ. ಇಲ್ಲಿ ಕೇವಲ ಬರಹಗಾರ ಅಥವ ಲಿಪಿಕಾರನನ್ನು ಹೆಸರಿಸಿದ್ದು ರೂವಾರಿಯನ್ನು ಹೆಸರಿಸಿಲ್ಲ. ಕೆಲಸಂದರ್ಭದಲ್ಲಿ ಶಿಲಾಲಿಪಿಗಳಲ್ಲಿ 'ಲಿಖಿತಂ', 'ಲಿಪಿಸಿದಂ' ಎಂಬ ಶಬ್ದಗಳು ಬಳಕೆಯಾಗಿವೆ. ಆದ್ದರಿಂದ ಇಲ್ಲಿ ಉಲ್ಲೇಖಿಸಿರುವ "ಮಾಧವ" ಬ್ರಾಹ್ಮಣನ ಹೆಸರಿರುವುದರಿಂದ ಈತ ಲಿಪಿಗಾರನಾಗಿರಬಹುದು, ಶಿಲಾ ಲಿಪಿಗಾರ ಆಗಿರಲು ಸಾಧ್ಯವಿಲ್ಲ. ಎರಡನೇ ಪುಲಕೇಶಿಯ ಎಕ್ಕೇರಿ ಬಂಡೆ ಶಾಸನದಲ್ಲಿ **ರೂವಾರಿ ಇಷ್ಟು ಲಿಖಿತಾ**[೩] ಎಂದು ಸ್ಪಷ್ಟವಾಗಿ ರೂವಾರಿಯ ಹೆಸರನ್ನು ಉಲ್ಲೇಖಿಸಲಾಗಿದೆ. ಇದರ ನಂತರ ಕ್ರಿ.ಶ. ೯೫೦ರ ಸೌಂದತ್ತಿ ಶಿಲಾ ಶಾಸನವನ್ನು[೪] ರಚಿಸಿದುವ **ಮಹಾ ರುದ್ರಭಟ್ಟನು** ಬನಹಟ್ಟಿ ಗ್ರಾಮದವನೆಂದು, ರಾಷ್ಟ್ರಕೂಟ ಕನ್ನರನಿಂದ ಕೊಡಲ್ಪಟ್ಟ ೧೮ ಗ್ರಾಮಗಳ ಪ್ರಭುವಾಗಿದ್ದನೆಂದು ತಿಳಿದು ಬರುತ್ತದೆ"[೫] ಸೊಗಲ ಕ್ರಿ. ಶ. ೯೮೦ ರ ಶಿಲಾಶಾಸನ[೬]ವನ್ನು ಕವಿ ಕಮಲಾದಿತ್ಯನು ರಚಿಸಿದ್ದಾನೆ. ಈತ ಕವಿತೇಶ ಮದಪ್ರಭಂಜನ ಎಂಬ ಬಿರುದುನಿಂದ ಕರೆದು ಕೊಂಡಿದ್ದಾನೆ.[೭] ಬೆಡಕಿಹಾಳ ತಾಮ್ರ ಶಾಸನ (ಸು. ಕ್ರಿ. ಶ. ೧೦೦೦)[೮] ವನ್ನು

* ೭ / ೧೨೮೫, ೩ನೇ ಕ್ರಾಸ್, ಮಹಂತನಗರ, ಪಂಡಿತ ನಾಗಭೂಷಣ ಶಾಸ್ತ್ರಿ ರಸ್ತೆ, ಧಾರವಾಡ - ೫೮೦ ೦೦೭

ತ್ತಿದ ಶಾಸನ ಶಿಲ್ಪಿ 'ಬಂಕೊಳ್ಳ'ನೆಂದು ಉಲ್ಲೇಖಿತವಾಗಿದೆ. ಇಲ್ಲಿ ವಿ ಮತ್ತು ಲಿಪಿಗಾರನನ್ನು ಹೆಸರಿಸಿಲ್ಲ. ಕೊಕಟನೂರು ಶಿಲಾ ಶಾಸನವನ್ನು "ಜಿನವರ್ಮಪಂಡಿತ" ಎಂಬ ಕವಿ ರಚಿಸಿದ್ದಾನೆ. ಈತನು ವಿದ್ವಾಂಸನಾಗಿದ್ದನೆಂದು ವರ್ಣಿಸಲಾಗಿದೆ. ಕಾದರೊಳ್ಳಿ ಶಿಲಾಶಾಸನವನ್ನು (ಕ್ರಿ. ಶ. ೧೦೭೫) *ಸಂಬೋಜನ ಮಗ ಸಿಂಗೋಜಗ ಬರೆದಪರ್*[೧೦] ಎಂದಿದ್ದು, ಇಲ್ಲಿ ಕೇವಲ ಶಾಸನ ಲಿಪಿಶಿಲ್ಪಿಯನ್ನು ಉಲ್ಲೇಖಿಸಲಾಗಿದೆ. ರಾಮದುರ್ಗ ತಾಲೂಕಿನ ಅದ್ದಿ ೬ ನೇ ವಿಕ್ರಮಾದಿತ್ಯನ ಕ್ರಿ. ಶ. ೧೦೮೫ರ ಶಾಸನವನ್ನು 'ಕವಿ ಕರ್ಪರಸ' ರಚಿಸಿದ್ದಾನೆ.[೧೧] ಈತನು ತಾನು ಕವಿತಾ ಮನೋಹರನೆಂದು ಶೈವ ಬ್ರಾಹ್ಮಣ ದಂಪತಿಗಳಾದ ಚಂದ್ರ ಮತ್ತು ಚಾಮಾಂಬಿಕೆಯರ ಮಗನೆಂದು ಮಹಾಸಂಧಿವಿಗ್ರಹಿ ಹಾಗೂ ದಂಡನಾಯಕನಾದ ಕಾಳಿದಾಸನ ಅಳಿಯನೆಂದು ಹೇಳಿ ಕೊಂಡಿದ್ದಾನೆ.[೧೨] ಕ್ರಿ. ಶ. ೧೧೦೭ ರ ಹೊಸೂರ ಶಾಸನವನ್ನು ರಚಿಸಿದ ಶಾಸನ ಕವಿ ವಿಬುಧಜನವಂದ್ಯನಾದ ಅಗ್ಗಳದೇವ. ಇವನ ಮಗ ಲಕ್ಷ್ಮಣ ಅದನ್ನು ಬರೆದನೆಂದು ಶಾಸನ ತಿಳಿಸುತ್ತದೆ.[೧೩] ಗೋವೆ ಕದಂಬರ ೨ನೇ ಜಯಕೇಶಿಯ ಅಸೋಗದ (ಕ್ರಿ. ಶ. ೧೧೩೪ರ) ತಾಮ್ರಶಾಸನವನ್ನು ರಚಿಸಿದ ಕವಿ ತ್ರೈಲೋಕ್ಯ ದೇವನ ಮಗ ಸೋಮಗದೇವ. ಇದನ್ನು "ರಾಮದೇವ" ಎಂಬ ರೂವಾರಿಯು ತಾಮ್ರಪಟದಲ್ಲಿ ಕೆತ್ತಿದನೆಂದು ಶಾಸನದಲ್ಲಿ ಉಕ್ತವಾಗಿದೆ.[೧೪] ಕ್ರಿ. ಶ. ೧೧೪೮ರ ಶಿರಸಂಗಿಯ ೪ನೇ ಸೋಮೇಶ್ವರನ ಶಾಸನದ ೫೯ನೇ ಸಾಲಿನಲ್ಲಿ *ಶ್ರೀಮತ್ ಭುವನಚಂದ್ರ ಸಿದ್ಧಾನ್ತ ದೇವರ ಕಲಿದೇವ ಪಂಡಿತರು ಪೇಳ್ದರು ಧರೆಯ ರೂವಾರಿ ಚಕ್ರವರ್ತಿ ಸುಮತೋಜರ ಕಣ್ಡರಣೆ*[೧೫] ಎಂದಿದೆ. ಕ್ರಿ. ಶ. ೧೧೫೨ರ ಮುನವಳ್ಳಿ ಶಿಲಾ ಶಾಸನವನ್ನು ರಚಿಸಿದ ಕವಿಯನ್ನು ಹೆಸರಿಸದೇ ಕೇವಲ ಶಿಲ್ಪಿಯನ್ನು ಲಿಪಿಕಾರನನ್ನು ತಿಳಿಸಲಾಗಿದೆ. 'ಬೊಮ್ಮರಸ ಬರೆದ ಶಾಸನಕ್ಕೆ ರೂವಾರಿ ಗುರುಪಾದ ಭಕ್ತ ನಾಗೋಜ ಮಾಡಿದ'[೧೬] ಎಂದು ಮಾತ್ರವಿದೆ. ಕ್ರಿ. ಶ. ೧೧೬೨ರ ಹೂಲಿ ತಾಮ್ರ ಶಾಸನವನ್ನು ಕವಿ ಕಾಳಿದಾಸ ರಚಿಸಿದ್ದಾನೆ.[೧೭] ಇಲ್ಲಿ ಲಿಪಿಕಾರ ಹಾಗೂ ರೂವಾರಿಗಳನ್ನು ಹೆಸರಿಸಿಲ್ಲ. ಕ್ರಿ.ಶ. ೧೧೬೭ರ ರಾಮತೀರ್ಥ ಶಾಸನವು 'ಕವಿ ಚಂಪೂವತಿ ಮಲ್ಲಿಕಾರ್ಜುನ ಮಲ್ಲಿದೇವ' ರಚಿಸಿದನೆಂದು[೧೮] ಉಲ್ಲೇಖಿಸಿದೆ. ಲಿಪಿಕಾರನನ್ನು ಹೆಸರಿಸಿಲ್ಲ. ಕ್ರಿ.ಶ. ೧೧೪೭ರ ದೇಗಾವಿ ಶಿಲಾಶಾಸನವನ್ನು 'ಗೋವಿಂದ ದೇವ' ಎಂಬ ಕವಿ ರಚಿಸಿದ; 'ಚಂದ್ರೇಶ್ವರನ ಮಗ ಸುಜನೇನಾಣ್ಣಯ್ಯ'[೧೯] ಎಂಬ ಶುದ್ಧ ಲಿಪಿಗಾರ ಬರೆದನೆಂದು ಹೇಳಿ ಶಾಸನ ಲಿಪಿಶಿಲ್ಪಿಯನ್ನು ತಿಳಿಸಿಲ್ಲ. ದೇಗಾವಿಯ ಮತ್ತೊಂದು ಶಾಸನ (ಕ್ರಿ. ಶ. ೧೧೭೨ರ) ದಲ್ಲಿ ಆ ದೇವಾಲಯದ ಶಿಲ್ಪಿಗಳನ್ನು ಹೆಸರಿಸಲಾಗಿದೆ. ಶಿಲ್ಪಿಗಳಾದ ಹಾಲೋಜನ ಮಗ ಸೂತ್ರಧಾರಿ ತಿಪ್ಪೋಜ ಮತ್ತು ಇವನ ಮಗ ಪ್ರತಾಪ ಸೂತ್ರಧಾರಿ ಬಾಗೋಜರು, ದೇಗಾವೆಯ ಶ್ರೀಕಮಲ ನಾರಾಯಣ ದೇವರ ಹಾಗೂ ಶ್ರೀಮಹಾಲಕ್ಷ್ಮೀ ದೇವಾಲಯಗಳಂ ಮಂಟಪ ಸಹಿತ ಕಳಸ ನಿರ್ಮಾಣಂ ಮಾಡಿದರು"[೨೦] ಎಂದಿದೆ. ಇಲ್ಲಿ ಅಪರೂಪವಾಗಿ ಶಿಲಾಶಾಸನದಲ್ಲಿ ದೇವಾಲಯ ನಿರ್ಮಿಸಿದ ಶಿಲ್ಪಿಗಳನ್ನು ಹೆಸರಿಸಿದ್ದಾರೆ. ದೇಗಾವೆಯ ಮತ್ತೊಂದು ಶಾಸನ (ಕ್ರಿ. ಶ. ೧೧೭೨ರ) ದಲ್ಲಿ ಶಾಸನ ಕವಿ, ರೂವಾರಿಯನ್ನು ಬಿಟ್ಟು ಕೇವಲ ಶುದ್ಧ ಬರಹಗಾರರನ್ನು "ಶಾಸನಮಣ್ಣಮಯ್ಯ ಬರೆದಪಂ" ಎಂದು ಉಲ್ಲೇಖಿಸಲಾಗಿದೆ.[೨೧] ಗೋವೆ ಕದಂಬರ ವಿಜಯಾದಿತ್ಯನ (ಕ್ರಿ. ಶ. ೧೧೭೨) ಹಲಸಿ ಶಿಲಾಶಾಸನವನ್ನು 'ದೇವಶರ್ಮ'ನೆಂಬ ಕವಿ ರಚಿಸಿದ, 'ಯಜ್ಞೇಶ್ವರಸೂರಿ' ಶುದ್ಧ ಬರಹ ತಯಾರಿಸಿ, 'ಶಂಕರಾರ್ಯ' ಎಂಬ ರೂವಾರಿಯು ಕಲ್ಲಿನ ಮೇಲೆ ಕೊರೆದನೆಂದು,[೨೨] ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಈ ಶಾಸನದಲ್ಲಿ ಶಾಸನ ಕವಿ, ಬರಹಗಾರ ಹಾಗೂ ರೂವಾರಿ ಮೂವರನ್ನು ಹೆಸರಿಸಿರುವುದು ಒಂದು ವಿಶೇಷವಾಗಿದೆ. ಇದೇ ರೀತಿ ಶಿರಸಂಗಿ ಶಿಲಾಶಾಸನವು (ಕ್ರಿ. ಶ.೧೧೮೬)[೨೩] ಸಹ ಮೂವರನ್ನು ಉಕ್ತಮಾಡಿ *"ರಿಶ್ಯಶೃಂಗ ಮಹಿಮೋಂನತಿಯ ಭಾಸುರಮತಿ ಬಂಣ್ಣಿಸಿದಂ ಶ್ರೀ ಸಜ್ಜನತಿಳಕನೊಸೆದು ಪೊಸಗಂನ್ನಡದಿಂ॥ ಧರೆಯ ರೂವಾರಿ ಚಕ್ರವರ್ತಿ ಚಂಡೋಜನ ಮಂಮಂ ಸಾತೋಜನು ಕಂಡರಣೆ ಮಂಗಳ ಮಹಾಶ್ರೀ ಶ್ರೀ......."*[೨೪] ಇಲ್ಲಿ ಕವಿ; ಸಜ್ಜನ ತಿಳಕನೆಂಬ ಬಿರುದು ಇರುವ ಭಾಸುರಮತಿ ಎಂಬುವನು. ಶಿಲಾಲಿಪಿಕಾರ ರೂವಾರಿ ಚಕ್ರವರ್ತಿ ಚಂಡೋಜನ ಮೊಮ್ಮಗ ಸಾತೋಜ. ಹೀಗೆ ಶಿಲಾಲಿಪಿಗಾರನ ತಾತ ಚಂಡೋಜನಿಗಿದ್ದ ರೂವಾರಿ ಚಕ್ರವರ್ತಿ ಎಂಬ ಬಿರುದನ್ನು ಹೆಸರಿಸಿರುವುದು ಒಂದು ವಿಶೇಷವಾಗಿದೆ. ಕನ್ನಡ ಸಂಶೋಧನ ಸಂಸ್ಥೆಯಲ್ಲಿನ ಕ್ರಿ. ಶ. ೧೧೮೨ ತಾಮ್ರ ಶಾಸನವು[೨೫] ಬೆಳಗಾವಿ ಜಿಲ್ಲೆಯ ಕೂಹುಂಡಿ - ೩೦೦೦ ಪ್ರಾಂತಕ್ಕೆ ಸಂಬಂಧಿಸಿದ ಶಾಸನವಾಗಿದೆ. ಇದನ್ನು ಆದಿತ್ಯದೇವನೆಂಬ ಕವಿ ರಚಿಸಿದ್ದು ಲಕ್ಷ್ಮೀಧರ ಬರೆದಪಂ ಎಂದು ಉಕ್ತವಾಗಿದೆ. ೪ ನೇ ಸೋಮೇಶ್ವರನ ಕ್ರಿ. ಶ. ೧೧೮೩ ನೇ ಮುರುಗುಂಡಿ ತಾಮ್ರಪಟ[೨೬] ವನ್ನು ಚತುರ್ಭಾಷಾ ಕವಿ, ಕವಿ ಚಕ್ರವರ್ತಿ ಅಗ್ನಿಶರ್ಮ ರಚಿಸಿದನೆಂದೂ ಲಕ್ಷ್ಮೀಧರ ಬರೆದನೆಂದು ನಿರೂಪಿಸಿ ರೂವಾರಿಯನ್ನು ಹೆಸರಿಸಿಲ್ಲ. ಕದಂಬ ೩ ನೇ ಜಯಕೇಶಿಯ ಕ್ರಿ. ಶ. ೧೧೯೯ ಕಿರುವಳಸಗಿ ತಾಮ್ರಶಾಸನವನ್ನು ಬರೆದ *ಲಿಪಿಗಾರ ಯಜ್ಞೇಶ್ವರ ಸೂರಿಯ ಮಗನಾದ ಗಂಗಾಧರ ಸೂರಿ*[೨೭] ಎಂದು ಉಲ್ಲೇಖಿಸಿದೆ. ಕ್ರಿ. ಶ. ೧೨೦೪ರ ಬೆಳಗಾವಿಯ ಎರಡೂ ಶಾಸನಗಳನ್ನು ಕವಿ ಕಂದರ್ಪ ಬಾಳಚಂದ್ರದೇವ[೨೮] ನೆಂಬ ಕವಿಯು ರಚಿಸಿದ್ದಾನೆಂದು, ಕೋಹಳ್ಳಿ ಕ್ರಿ. ಶ. ೧೨೦೫ರ ಶಾಸನವನ್ನು ಪಾರ್ಶ್ವಪಂಡಿತ[೨೯] ರಚಿಸಿದನೆಂದು, ಈ ಶಾಸನಗಳಲ್ಲಿ ಶಾಸನ ಕವಿಗಳನ್ನು ಹೇಳಿ ಶಿಲಾಲಿಪಿಕಾರನ್ನು ಹೆಸರಿಸಿಲ್ಲ. ಕ್ರಿ.ಶ. ೧೨೦೮ ರ ಬೋಜ ತಾಮ್ರಪಟವನ್ನು ಆದಿತ್ಯ ದೇವನೆಂಬ ಕವಿ ರಚಿಸಿ, ಸೂತ್ರಧಾರಿ ಪಿತಾಮಹಾ ಬಾಲವರ್ಮನು ಬರೆದಂ[೩೦]; ಕ್ರಿ. ಶ. ೧೨೦೯ರ ೩ ನೇ ಜಯಕೇಶಿಯ ದೊಡ್ಡವಾಡ ತಾಮ್ರಪಟವನ್ನು ರಚಿಸಿದ ಕವಿ ಸೋಮದೇವನ ಮಗ ಚಿತ್ತನಾರ್ಯ, ಲಿಕಿತಂ ನರಣ ದುಗ್ಗಲನ ಮಗ[೩೧] ಎಂದೆಲ್ಲ ಇವೆ. ಕ್ರಿ. ಶ. ೧೨೨೮ರ ಸೌಂದತ್ತಿ ರಟ್ಟರ ದೊರೆ ೪ ನೇ ಲಕ್ಷ್ಮಿದೇವರಸನ ಶಾಸನದ ೯೩ನೇ ಸಾಲಿನಲ್ಲಿ "ಇದಾ ಕೇಶಿರಾಜನ ವಚನ ॥ ಎಸೆವೀ ಶಾಸನಂ ವಿರಚಿಸಿ ಬರೆದಂ ಪೂರ್ವಜನ್ಮದೊಳ್ ಸುಕೃತಮನರ್ಜಿಸಿ ಕೇಶಿರಾಜ ವಿಭುವಿನ ಸಿಸುವೆನಿಸಿದ ಮಾದಿರಾಜನ ವಿಭುಮತದಿಂ"[೩೨] -

ಕವಿ ಕೇಶಿರಾಜ ವಿರಚಿಸಿ, ಮಗನಾದ ಮಾದಿರಾಜ ಬರೆದಪಂ ಎಂದು ಹೇಳಿ ಶಿಲಾಲಿಪಿಯ ಶಿಲ್ಪಿಯನ್ನು ಅಥವಾ ರೂವಾರಿಯನ್ನು ಉಲ್ಲೇಖಿಸಿಲ್ಲ. ಮೇಲಿನ ಶಾಸನಕವಿಗಳಲ್ಲಿ ದೊಡ್ಡವಾಡದ ತಾಮ್ರಶಾಸನವನ್ನು ರಚಿಸಿದ ಕವಿ ಸೋಮನಾಥನ ಮಗ ಜಾತವೇದನ ಮೊಮ್ಮಗ ಚಿತ್ತನಾರ್ಯನೆಂದು ಶಾಸನ ಕವಿ ಹೇಳಿಕೊಂಡಿದ್ದಾನೆ.[೩೩] ಕ್ರಿ. ಶ. ೧೨೫೦ರ ಗೋವೆ ಕದಂಬರ ೩ ನೇ ಷಷ್ಠನ ಗೋವಾ ತಾಮ್ರ ಶಾಸನವನ್ನು 'ಸೋಮನಾಥನ ಮಗ ಹಾಗೂ ಯಜ್ಞವಾರ್ಯನ ಮೊಮ್ಮಗನಾದ ಚಿತ್ತನಾರ್ಯ'[೩೪] ಆದ್ದರಿಂದ ಕ್ರಿ. ಶ. ೧೨೫೦ ಗೋವಾ ತಾಮ್ರಶಾಸನ ಹಾಗೂ ಕ್ರಿ. ಶ. ೧೨೦೯ರ ದೊಡ್ಡವಾಡ ತಾಮ್ರ ಶಾಸನವನ್ನು ರಚಿಸಿದಾತ ಕವಿ ಚಿತ್ತನಾರ್ಯನೆ ಆಗಿದ್ದಾನೆ. ಇದರಿಂದ ಇವನು ಗೋವೆ ಕದಂಬರ ರಾಜಾಶ್ರಯದಲ್ಲಿ ಸುಮಾರು ೪೧ ವರ್ಷಗಳ ಕಾಲ ಶಾಸನ ರಚನಕಾರನಾಗಿದ್ದನೆಂದು ಕಂಡುಬರುತ್ತದೆ. ನಂತರ ಇವನ ವಂಶಸ್ಥರಾದ ಯಜ್ಞವಾರ್ಯ ಮತ್ತು ಜಾತವೇದ ನಂತರ ೩ ನೇ ಷಷ್ಠನ ಗಾದಿವೂರ ತಾಮ್ರಪಟವನ್ನು (೧೨೫೭ ಕ್ರಿ. ಶ.)[೩೫] ಚಿತ್ತನಾರ್ಯನ ಮಗ ಪದ್ಮನಾಭ ರಚಿಸಿದ್ದಾನೆ. ಇವನು ಸೋಮನಾಥನ ಮೊಮ್ಮಗ. ಕ್ರಿ. ಶ. ೧೧೭೨ ಹಲಸಿ ತಾಮ್ರಶಾಸನ [೩೬]ವನ್ನು ವಿಜಯಾದಿತ್ಯನ ಕಾಲದಲ್ಲಿ ಯಜ್ಞೇಶ್ವರಸೂರಿ ರಚಿಸಿದ. ೩ ನೇ ಜಯಕೇಶಿಯ ಕ್ರಿ. ಶ. ೧೧೯೯ ರ ಕಿರುವಳಸಿಗಿ ತಾಮ್ರ ಶಾಸನವನ್ನು ಯಜ್ಞೇಶ್ವರ ಸೂರಿಯ ಮಗ ಗಂಗಾಧರ ಸೂರಿಯು ಬರೆದನು. ಇದರಿಂದ ಇಲ್ಲಿ ಯಜ್ಞವಾರ್ಯನಿಂದ ಪ್ರಾರಂಭಿಸಿ ಪದ್ಮನಾಭನವರೆಗೆ ೪-೫ ತಲೆಮಾರಿನ ಇವರ ಕುಟುಂಬದವರು, ಶಾಸನ ಕವಿಗಳಾಗಿ, ಬರಹಗಾರರಾಗಿ ಗೋವೆಯ ಕದಂಬರ ಆಶ್ರಯದಲ್ಲಿದ್ದುದು ಕಂಡುಬರುತ್ತದೆ. ಈ ಕೆಳಗೆ ಇವರ ವಂಶಾವಳಿಯನ್ನು ಕೊಟ್ಟಿದೆ.

ಯಜ್ಞಾವಾರ್ಯ ಅಥವ ಯಜ್ಞೇಶ್ವರ ಸೂರಿ ಅಥವ ಉಪನಾಮ




ಇದೇ ರೀತಿ ರೂವಾರಿಗಳು ಅಥವಾ ಶಿಲಾಲಿಪಿ ಶಿಲ್ಪಿಗಳು ಸಹ ವಂಶಾನುಗತವಾಗಿ ರಾಜಾಶ್ರಯದಲ್ಲಿದ್ದುದು ಕಂಡುಬರುತ್ತದೆ. ದೊಡ್ಡವಾಡ ಶಾಸನವನ್ನು ಕೆತ್ತಿದ ರೂವಾರಿ ನರಣ, ದುಗ್ಗಲನ ಮಗನೆಂದು ತಾನು ಹೇಳಿಕೊಂಡಿದ್ದಾನೆ. ಅಲ್ಲದೆ ಇವನ ಮತ್ತೊಂದು ಶಾಸನವಾದ ಗೋವೆ ತಾಮ್ರಶಾಸನವನ್ನು ದುರಗಣ್ಣನ ಮಗ ನಾರಾಯಣ ಕೆತ್ತಿದ ಲಿಪಿ ಶಿಲ್ಪಿ ಎಂದು ಉಲ್ಲೇಖಿಸಿದೆ. ಇಲ್ಲಿ ಅಕ್ಷರಗಳ ವ್ಯತ್ಯಾಸಗಳಾಗಿರಬಹುದು, ಎರಡೂ ಶಾಸನದ ಲಿಪಿ ಶಿಲ್ಪಿ ಒಬ್ಬನೇ ಆಗಿದ್ದಾನೆ ಎಂದು ಆರ್. ಎನ್. ಗುರವ ಅಭಿಪ್ರಾಯಪಟ್ಟಿದ್ದಾರೆ.[೩೭]

ಕಲ್ಯಾಣ ಚಾಲುಕ್ಯರ ೪ ನೇ ಸೋಮೇಶ್ವರನ ಮುರುಗುಂಡಿ ಶಾಸನದ ಕವಿ ಅಗ್ನಿಶರ್ಮ ತಾನು ಚತುರ್ಭಾಷಾ ಪಂಡಿತನೆಂದು ಹೇಳಿಕೊಂಡಿದ್ದಾನೆ.[೩೮] ಕ್ರಿ.ಶ. ೧೧೮೬ರ ದೊಕ್ಕಿಗೊಳ್ಳಿ ತಾಮ್ರಪಟವನ್ನು ಸಹ ಇವನೇ ರಚಿಸಿದ್ದಾನೆ. ಈ ಎರಡೂ ತಾಮ್ರ ಶಾಸನಗಳನ್ನು ಬರೆದ ಬರಹಗಾರ ಅಥವ ಲಿಪಿಗಾರ ಲಕ್ಷ್ಮೀಧರ.[೩೯] ಅಲ್ಲದೇ ಕ. ವಿ. ವಿಯದ ಕನ್ನಡ ಸಂಶೋಧನ ಸಂಸ್ಥೆಯಲ್ಲಿರುವ ಕ್ರಿ. ಶ. ೧೧೮೨ರ ಕೂಹುಂಡಿ ತಾಮ್ರ ಶಾಸನವನ್ನು[೪೦] ಲಕ್ಷ್ಮೀಧರನೇ ಲಿಪಿಸಿದ್ದಾನೆ. ಇದಲ್ಲದೆ ಕಲಚೂರ್ಯರ ರಾಯಪುರದ ಕ್ರಿ. ಶ. ೧೧೮೨ರ ಶಾಸನವನ್ನು ಸಹ ಲಕ್ಷ್ಮೀಧರನೆ ಬರೆದಿದ್ದಾನೆ.[೪೧] ಇದರಿಂದ ಲಕ್ಷ್ಮೀಧರ ಅನೇಕ ವರ್ಷಗಳ ಕಾಲ ಈ ಭಾಗದಲ್ಲಿನ ಕಲಚೂರಿ ರಾಜರ ನಂತರ ಬಂದ ಕಲ್ಯಾಣಿ ಚಾಲುಕ್ಯರ ದೊರೆ ೪ ನೇ ಸೋಮೇಶ್ವರನ ಆಶ್ರಯದಲ್ಲಿ ರಾಜಾಜ್ಞೆಯ ಬರಹಗಾರನಾಗಿ, ಲಿಪಿಕಾರನಾಗಿ ಇದ್ದನೆಂದು ತಿಳಿದು ಬರುತ್ತದೆ.

ಬೆಳಗಾವಿ ಜಿಲ್ಲೆಯಲ್ಲಿ ಇದುವರೆಗೆ ಲಭ್ಯವಾಗಿರುವ ಒಟ್ಟೂ ೧೨೦ ಶಿಲಾ ಹಾಗೂ ತಾಮ್ರಶಾಸನಗಳಲ್ಲಿ ಕೇವಲ ೧೦ ಶಾಸನಗಳಲ್ಲಿ ಮಾತ್ರ ರೂವಾರಿಗಳ ಅಥವಾ ಶಿಲಾಲಿಪಿ ಶಿಲ್ಪಿಗಳ ಹೆಸರುಗಳ ಉಲ್ಲೇಖವಾಗಿವೆ. ಇವರು ತಮ್ಮ ವಂಶದ ಬಗೆಗೆ ಹೇಳಿಕೊಳ್ಳದೆ, ಕೇವಲ ತಂದೆಯ ಹೆಸರನ್ನಷ್ಟೇ ಹೇಳಿಕೊಂಡಿದ್ದಾರೆ. ಕೆಲವರು ಬಿರುದುಗಳನ್ನು ಬರೆದುಕೊಂಡಿದ್ದಾರೆ. ಕಾದರೊಳ್ಳಿ ಶಾಸನದಲ್ಲಿ "ಸಂಬೋಜನ ಮಗ ಸಿಂಗೋಜ ಬರೆದಂ", ಶಿರಸಂಗಿ ಶಿಲಾಶಾಸನದಲ್ಲಿ "ಧರೆಯ ರೂವಾರಿ ಚಕ್ರವರ್ತಿ ಚಂಡೋಜನ ಮಗ ಸಂತೋಜನ ಕಂಡರಣೆ", ದೊಡ್ಡವಾಡ ತಾಮ್ರಪಟದಲ್ಲಿ "ದುಗ್ಗಲನ ಮಗ ನರಣ", ಎಂದೂ ಹಾಗೂ ದೇಗಾವಿ ಶಾಸನದಲ್ಲಿ ದೇವಾಲಯ ನಿರ್ಮಾಣ ಮಾಡಿದ ಶಿಲ್ಪಿಗಳನ್ನು ಕುರಿತು ಹೇಳಲಾಗಿದೆ. "ಹಾಲೋಜನ ಮಗ ಸೂತ್ರಧಾರಿ ತಿಪ್ಪೋಜ ಮತ್ತು ಇವನ ಮಗ ಪ್ರತಾಪ ಸೂತ್ರಧಾರಿ ಬಾಗೋಜ, ಶ್ರೀಕಮಲನಾರಾಯಣ ದೇವಾಲಯ ಹಾಗೂ ಶ್ರೀ ಲಕ್ಷ್ಮೀದೇವಾಲಯಂ ಮಾಡಿದರು, ಹೀಗೆ ಸೂತ್ರಧಾರಿಗಳು ದೇವಾಲಯ ಶಿಲ್ಪಿಗಳ ಜೊತೆಗೆ ಲಿಪಿಶಿಲ್ಪಿಗಳಾಗಿಯೂ ಕೆಲಸವನ್ನು ಮಾಡುತ್ತಿದ್ದದು ಎಂದು ಇಲ್ಲಿ ಅವರೇ ಬರೆಸಿರುವ ರೂವಾರಿ, ಸೂತ್ರಧಾರಿ, ಧರೆಯ ರೂವಾರಿ ಚಕ್ರವರ್ತಿ ಎಂಬ ಬಿರುದುಗಳು, ಶಿಲ್ಪಶಾಸ್ತ್ರದ ಸರ್ವ ಕೆಲಸದಲ್ಲಿ ಪರಿಣತರಾಗಿದ್ದರೆಂದು ತಿಳಿಯಬಹುದು.

ಒಟ್ಟಿನಲ್ಲಿ ಈ ಪ್ರಬಂಧದಲ್ಲಿ ಬೆಳಗಾವಿ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖಿಸಿರುವ ರೂವಾರಿಗಳ ಜೊತೆಗೆ ಲಿಪಿಗಾರರೂ ಹಾಗೂ ಕವಿಗಳನ್ನು ಗುರುತಿಸಲಾಗಿದೆ. ಅಲ್ಲದೇ ಅವರ ವಂಶ ಪರಂಪರೆ, ವಂಶಾವಳಿ, ಬಿರುದುಗಳು ಹಾಗು ರಾಜಾಶ್ರಯ, ಕಾರ್ಯವ್ಯಾಪ್ತಿ, ಪ್ರಾದೇಶಿಕ ವ್ಯಾಪ್ತಿಯನ್ನು ಇಲ್ಲಿ ಗುರುತಿಸುವ ಸಣ್ಣ ಪ್ರಯತ್ನ ಮಾಡಲಾಗಿದೆ. ಶಾಸನ ಲಿಪಿಕಾರರ, ಕವಿಗಳ, ಕಂಡರಣೆಕಾರರ ಈ ವಿಶೇಷ ಮಾಹಿತಿ ಇತಿಹಾಸತಜ್ಞರಿಗೆ ಮಹತ್ವಪೂರ್ಣದ್ದಾಗಿರುತ್ತದೆ. ಎಲ್ಲ ಜಿಲ್ಲೆಗಳಲ್ಲಿ ಇರಬಹುದಾದ ಇಂತಹ ಮಾಹಿತಿ ಸಂಗ್ರಹಿಸಿದರೆ 'ಕರ್ನಾಟಕದ ಕವಿ ಚರಿತ್ರೆ'ಯಂತೆ ಕನ್ನಡ ಶಾಸನ ಕವಿ - ಲಿಪಿಕಾರರ - ಶಿಲ್ಪಿಗಳ ಕಿರು ಇತಿಹಾಸವಾದರೂ ನಿರ್ಮಾಣವಾಗಬಹುದಾಗಿದೆ.



# ಬೆಳಗಾವಿ ಜಿಲ್ಲೆಯ ಶಾಸನ ಕವಿಗಳು, ಲಿಪಿಗಾರರು ಹಾಗೂ ರೂವಾರಿಗಳು

(ಪ್ರಾರಂಭದಿಂದ ೧೩ ನೇ ಶತಮಾನದವರೆಗೆ)

| ಅ.ಸಂ. | ಶಾಸನಗಳು (ಶಿಲೆ ಮತ್ತು ತಾಮ್ರ) | ಕಾಲ | ಶಾಸನ ಕವಿ | ಬರಹಗಾರ | ರೂವಾರಿಗಳು ಶಾಸನ ಲಿಪಿಕಾರ, ಶಿಲ್ಪಿ ಕಲ್ಲುಕುಟಿಕ, ಕಂಡರಿಸಿದವ | ಪ್ರಕಟಣೆ |
|---|---|---|---|---|---|---|
| ೧ | ೨ | ೩ | ೪ | ೫ | ೬ | ೭ |
| ೧. | ಕಾಪಾಲಿ ಪ್ಲೇಟ್ಸ್ ಅಂಸಂಕಿತವರ್ಮ ೫ ನೇ ವರ್ಷ | ೬ ಮತ್ತು ೭ನೇ ಶತಮಾನ | -- | ಗೋವಿಂದ - ಬೋಗಿಕನ ಮಗ ಮಾದವ | | E. I. Vol. 31. p. 234 |
| ೨. | ಯಕ್ಕೆರಿ ಬಂಡೆ ಶಾಸನ ೨ನೇ ಪುಲಕೇಶಿ | ಪುಲಕೇಶಿ II | | - - | ಇಷ್ಣ (Isana) | A. I. V p. 6 |
| ೩. | ಸೌದತ್ತಿ ಶಾಸನ | ಕ್ರಿ. ಶ. ೯೫೦ | ವರಕವಿ, ರುದ್ರಭಟ್ಟ | - - | - - - | JBBRAS X.p. ಮತ್ತು (ಕನ್ನಡ ನಾಡಿನ ಶಾಸನ ಕವಿಗಳು, ಪು. ೧೬) |
| ೪. | ಸೊಗಲ ಶಾಸನ | ಕ್ರಿ. ಶ. ೯೮೦ | ಕವಿ ಕಮಲಾದಿತ್ಯ | - - | - - - | A.I. EI. XVI p. I |
| ೫. | ಬೆಡಕಿಹಾಳ ಪ್ಲೇಟ್ಸ್ | ಕ್ರಿ. ಶ. ೧೦೦೦ | - - | - - | ಬೆಂಕೊಳ್ವನೆಂಬ | K. I. IV No. 55, p. 126 |
| ೬. | ಕೋಕಟನೂರು | ಕ್ರಿ. ಶ. ೧೦೫೦. | ಜೇನವರ್ಮ ಪಂಡಿತ | - - | | K.B. Nov. 1970 (ಕನ್ನಡನಾಡಿನ ಶಾಸನಕವಿಗಳು, ಪು. ೪೪) |
| ೭. | ಕಾದರೊಳ್ಳಿ | ಕ್ರಿ. ಶ. ೧೦೭೫ | - - | - - | ಸಿಂಗೋಜ ತಂದೆ ಸಂಭೋಜ | I.A. Vol. I. p. 141 |
| ೮. | ಆದ್ಲಿ (ರಾಮದುರ್ಗ. ತಾ.) | ಕ್ರಿ. ಶ. ೧೦೮೪. | ಕವಿ ಕರ್ಪರಸ | - - | - - | B.K. IV. No. 57 (ಕ. ನಾ. ಶಾಸನಕವಿಗಳು, ಪು - ೭೭) |
| ೯. | ಹೊಸೂರು | ಕ್ರಿ. ಶ. ೧೧೦೭ | ಶಾಸನಕವಿ ವಿಬುಧನ ವಂದ್ಯನಾದ, ಅಗ್ಗಳದೇವ | ಲಕ್ಷ್ಮಣ ತಂದೆ ಅಗ್ಗಳದೇವ | - - | ಕ.ಸಾ.ಪ.ಪ. ಸಂ-೪, ಪು - ೫೫ ಕ.ನಾ.ಶಾಸನಕವಿಗಳು-ಪು. ೯೮ |
| ೧೦. | ಅಸೋಗ ಪ್ಲೇಟ್ಸ ಶಕ ೧೦೫೫ ಕದಂಬ ೨ ನೇ ಜಯಕೇಶಿ | ಕ್ರಿ. ಶ. ೧೧೩೪ | ತ್ರೈಲೋಕ್ಯ ದೇವನ ಮಗ ಸೋಮದೇವ ಉಪಮಾನ್ಯ ಗೋತ್ರ | - - | ರಾಮದೇವ | E.I. XXVI, p. 307 |
| ೧೧. | ಶಿರಸಂಗಿ ಶಾಸನ | ಕ್ರಿ. ಶ. ೧೧೪೮. | ಶ್ರೀಮಧ ತ್ರಿಭುವನ ಭುವನ ಚಂದ್ರ ಸಿದ್ಧಾಂತ ದೇವರ ಗುಡ್ಡಂ ಕಲಿದೇವ ಪಂಡಿತರು ಪೇಳ್ದರು | | ಧರೆಯ ರೂವಾರಿ ಚಕ್ರವರ್ತಿ | KI. I. No. 24, p. 38 ಕ.ನಾ. ಶಾಸನಕವಿಗಳು |
| ೧೨. | ಮುನವಳ್ಳಿ ಶಾಸನ | ಕ್ರಿ. ಶ. ೧೧೫೨ | - - | ಸುಮತೋಜರ ಕಣ್ದರಣೆ ಬೊಮ್ಮರಸ ಬರೆದ ಶಾಸನ | ಗುರುಪಾರಭಕ್ತ ನಾಗೋಜ | KI. I.No. 31. p. 74 |
| ೧೩. | ಹೂಲಿ ಪ್ಲೇಟ್ಸ್ | ಕ್ರಿ. ಶ. ೧೧೬೨ | ಕಾಳಿದಾಸ | - | - - | EI. Vol. I, p. 53 ಕ.ನಾ.ಶಾಸನಕವಿಗಳು ಪು. ೯೩ |
| ೧೪. | ರಾಮತೀರ್ಥ ಶಾಸನ | ಕ್ರಿ. ಶ. ೧೧೬೭ | ಚಂಪೂಪತಿ ಮಲ್ಲಿಕಾರ್ಜುನ ಪಾಲ್ಲಿದೇವ | - - | - - | KI-II. No. 24, p. 88 |
| ೧೫. | ದೇಗಾವಿ ಶಾಸನ | ಕ್ರಿ. ಶ. ೧೧೪೭-೯೨ | ಗೋವಿಂದ ದೇವ | ಸುಜನೇನಾಣ್ಣಯ್ಯ ತಂದೆ ಚಂದ್ರೇಶ್ವರ | - - | JBBRAS. IX. ೩ನೇ ಶಾಸನ, ಪು. ೨೮೭ |

| ೧ | ೨ | ೩ | ೪ | ೫ | ೬ | ೭ |
|---|---|---|---|---|---|---|
| ೧೬. | ದೇಗಾವಿ ಶಾಸನ (೪) | ಕ್ರಿ. ಶ. ೧೧೭೩ | - - | - - | ಹಾಲೋಜನ ಮಗ ಸೂತ್ರಧಾರಿ ತಿಪ್ಪೋಜ ಮತ್ತು ಇತನ ಮಗ ಪ್ರತಾಪ ಸೂತ್ರಧಾರಿ ಬಾಗೋಜ ದೇವಾಲಯ ಶಿಲ್ಪಿಗಳು | JBBRAS.IX.No. 4, p. |
| ೧೭. | ದೇಗಾವಿ ಶಾಸನ(೭) | ಕ್ರಿ. ಶ. ೧೧೭೨ | - - | ಶಾಸನಮನಣ್ಣಮಯ್ಯಂ ಬರೆದಂ | | JBBRAS.IX. No. 7, p. 310 |
| ೧೮. | ಹಲಸಿ ಶಿಲಾಶಾಸನ ವಿಜಯಾದಿತ್ಯ | ಕ್ರಿ. ಶ. ೧೧೭೨ | ದೇವಶರ್ಮ | ಯಜ್ಞೇಶ್ವರ ಸೂರಿ | ಶಂಕರಾರಯ (ಕಂಡರಣೆಕಾರ) | JBBRAS.IX.No. 2, p. 278<br>KI-V, No.63, p. 231 |
| ೧೯. | ಕೆ.ಆರ್.ಐ.ತಾಂಬ್ರ ಶಾಸನ ಧಾರವಾಡ ಹೊರಗಟ್ಟ ೨೦ ಕುಂಡಿ-೩೦೦೦ | ಕ್ರಿ. ಶ. ೧೧೮೨ | ಆದಿತ್ಯದೇವ | ಲಕ್ಷ್ಮೀಧರ | - - | K.I-II, No.29, p.106<br>J.K.U. ss, I. 1965. p. 31 |
| ೨೦. | ಆನೇ ಸೋಮೇಶ್ವರನ ಮುರುಗುಂಡಿ ಪ್ಲೇಟ ಅಥಣಿ.ತಾ | ಕ್ರಿ. ಶ. ೧೧೮೩ | ಚತುರ್ಭಾಷಾ ಕವಿಚಕ್ರವರ್ತಿ ಅಗ್ನಿಶರ್ಮ | ಲಕ್ಷ್ಮೀದೇವ (ಲಕ್ಷ್ಮೀಧರ) | | JKU, s, I-1965, p. 31 |
| ೨೧. | ಶಿರಸಂಗಿ ಶಿಲಾ ಶಾಸನ | ಕ್ರಿ. ಶ. ೧೧೮೬ | ಬಾಸುರಮತಿ ಬಾಣ್ನಸಿದಂ | ಶ್ರೀ ಸಜ್ಜನ ತಿಳಕ ನೊಸೆದು ಪೊಸಗನ್ನಡ ದಿಂ॥ | ಧರೆಯ ರೂವಾರಿ ಚಕ್ರವರ್ತಿ ಚಂಡೋಜನ ಮಂಮಂ ಸಾತೋಜನ ಕಂಡರಣೆ | KI-I, No. 25, p. 51 |
| ೨೨. | ಕಿರುವಳಸಗಿ ಪ್ಲೇಟ್ ಜಯಕೇಶಿ III | ಕ್ರಿ. ಶ. ೧೧೯೯ | - - | ಗಂಗಾಧರ ಸೂರಿ (ತಂದೆ ಯಜ್ಞೇಶ್ವರ ಸೂರಿ) | - - | J.K.V. ss XI-1975, p. 150 |
| ೨೩. | ಬೆಳಗಾವಿ ಶಾಸನ A & B | ಕ್ರಿ. ಶ. ೧೨೦೪ | ಕವಿ ಕಂದರ್ಪ ಬಾಳ ಚಂದ್ರ ದೇವ ಮಾಧವಚಂದ್ರರ ಶಿಷ್ಯ | | | EI. XIII, p. 15 |
| ೨೪. | ಕೋಹಳ್ಳಿ ಕಾರ್ತವೀರ್ಯ IV | ಕ್ರಿ. ಶ. ೧೨೦೫ | ಪಾರ್ಶ್ವಪಂಡಿತ | | | JBBRAS.X, p. 229 |
| ೨೫. | ಬೋಜ ಪ್ಲೇಟ್ಸ್ ಆಫ್ ಮಹಾಮಂಡಳೇಶ್ವರ ಆನೇ ಕಾರ್ತವೀರ್ಯ | ಕ್ರಿ. ಶ. ೧೨೦೮ | ಆದಿತ್ಯದೇವ | ಸೂತ್ರಧಾರಿ ಪಿತಾಮಹಾ ಬಾಲವರ್ಮನ | - - | I.A. XIX, p. 249 |
| ೨೬. | ದೊಡ್ಡವಾಡ ಪ್ಲೇಟ್ ೩ನೇ ಜಯಕೇಶಿ | ಕ್ರಿ. ಶ. ೧೨೦೯ | ಚಿತ್ತನಾರ್ಯ (ತಂದೆ ಸೋಮದೇವ) (ಮೊಮ್ಮಗ ಜಾತದೇವ) | | ನರಣ (ತಂದೆ ದುಗ್ಗಲ) | J.K.U. XI, 1975, p. 146 |
| ೨೭. | ಸೌಂದತ್ತಿ ಶಿಲಾಶಾಸನ | ಕ್ರಿ. ಶ. ೧೨೨೮ | ಕೇಶಿರಾಜ ವಿರಚಿಸಿದಂ | ಮಗ ಮಾದಿರಾಜ ಬರೆದಪಂ | - - | SII XX, No. 248, p. 303<br>JBBRAS, X, p. 272<br>KI-I, No. 73, p. 260 |

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. EI. Vol. XXXIX No. 28 p. 183.
೨. EI. Vol. XXXI p. 234.
೩. AIV P. 6.
೪. JBBRAS, Vol. X. p.
೫. ಮೇವುಂಡಿ ಮಲ್ಲಾರಿ., (೧೯೭೪), ಕನ್ನಡ ನಾಡಿನ ಶಾಸನಕವಿಗಳು ಧಾರವಾಡ, ಪುಟ. ೧೬.
೬. EI - Vol. XVI, p. 1 & IA; LVP - 73.
೭. ಮೇವುಂಡಿ ಮಲ್ಲಾರಿ, ಅದೇ, ಪು. ೪೪.
೮. KI, Vol. IV, No. 55 p. 126.
೯. ಮೇವುಂಡಿ ಮಲ್ಲಾರಿ, ಅದೇ, ಪು. ೪೪.
೧೦. IA, Vol. I, p. 141.
೧೧. ಮೇವುಂಡಿ ಮಲ್ಲಾರಿ, ಅದೇ, ಪು. ೭೭.
೧೨. ಅದೇ, ಪು. ೯೮.
೧೩. ಅದೇ, ಪು. ೯೮.
೧೪. EI, Vol. XXVI, p. 307.
೧೫. KI, Vol. I, No. 24, p. 38.
೧೬. KI, Vol. I, No. 31, p. 74.
೧೭. EI, Vol. I, p. 53.
೧೮. KI, Vol. II, No. 24, p. 88.
೧೯. JBBRAS, Vol. IX, No.3, p. 287.
೨೦. Ibid No. 4, p. 294.
೨೧. Ibid No. 7, p. 130.
೨೨. JBBRAS, Vol. IX, No. 2, p. 278; KI, I & V, No 63, p. 231.
೨೩. KI, Vol. I, No. 25, p. 51.
೨೪. Ibid.
೨೫. KI; II, No. 29 p. 106.
೨೬. JKU (ss) Vol. I. 1965, p. 31.
೨೭. JKU (ss) XI, 1975, p. 150.
೨೮. EI, Vol. XIII, p. 15.
೨೯. JBBRAS, Vol. X, p. 229.
೩೦. IA, Vol. XIX, p. 249.
೩೧. JKU, Vol. XI, 1975, p. 146.
೩೨. SII, Vol. XX, No. 248, p. 303 & KI; VI, No. 73 p. 260.
೩೩. JKU ss, Vol. XI, 1975, p. 162.
೩೪. Ibid, p. 149.
೩೫. EI, Vol. XXXIV, p. 105-110.
೩೬. JBBRAS, Vol. IX, p. 278.
೩೭. JKU ss XI, Vol. 1975, p. 150.
೩೮. JKU, Vol. I, 1965, p. 31.
೩೯. Ibid, p. 31.
೪೦. KI, Vol. II, No. 29, p. 106.
೪೧. JKU, Vol. I, 1965, p. 31.

ವ. ರಮೇಶ ಕಾರಂತ್*

# ಕೆಳದಿ ಅರಸರ ಕಾಲದ ಅಪ್ರಕಟಿತ ನಂದಿನಾಗರಿ ಲಿಪಿಯ ನಿರೂಪಗಳು

ಕ್ರಿ.ಶ. ೧೪೯೯ ರಿಂದ ಕ್ರಿ.ಶ. ೧೭೬೩ರ ವರೆಗೆ ಸ್ವತಂತ್ರ ಅರಸೊತ್ತಿಗೆಯಾಗಿ ಆಳಿದ ಕೆಳದಿಯ ಇತಿಹಾಸ ಕರ್ನಾಟಕ ರಾಜ್ಯದ ಇತಿಹಾಸದ ಪುಟಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ.

ವೀರಶೈವ ಪಂಥದ ಅನುಯಾಯಿಗಳಾದರೂ ಕೆಳದಿಯ ಅರಸರು ಶೃಂಗೇರಿ ಪೀಠಕ್ಕೆ ಅನನ್ಯ ಶ್ರದ್ಧೆಯನ್ನು ತೋರಿ ಅದನ್ನು ಗುರುಪೀಠವೆಂದು ಆದರಿಸಿದ್ದುದು ತಿಳಿದುಬರುತ್ತದೆ. ಅಲ್ಲದೆ ಈ ಅರಸರುಗಳು ಮೊದಲಿನಿಂದಲೂ ಪರಮತ ಸಹಿಷ್ಣುಗಳಾಗಿದ್ದು ಹಲವಾರು ಅಗ್ರಹಾರಗಳಿಗೆ, ಜೈನಬಸದಿಗಳಿಗೆ, ಮಸೀದಿಗಳಿಗೆ ಆಶ್ರಯದಾತರಾಗಿದ್ದುದು ಕಂಡುಬರುತ್ತದೆ. ಅಂತಹವುಗಳಲ್ಲಿ ಸೊರಬ ತಾಲೂಕಿನ ಕುಪ್ಪಗಡ್ಡೆ ಅಗ್ರಹಾರ, ಮಾಳೂರು ಶೀಮೆಯ ವಿರುಪಾಕ್ಷದ ಅಗ್ರಹಾರ, ಕೇದಿಗೆರೆ, ಕಂಣೂರು, ರಂಗಪ್ಪಯ್ಯನ ಅಗ್ರಹಾರ, ಮಹಿಷಿ, ಚಡಕಲ್ಲು, ಹರಿಹರಪುರದ ಅಗ್ರಹಾರಗಳೂ ಸೇರಿವೆ.

ಕೆಳದಿಯ ಅರಸೊತ್ತಿಗೆಯ ಬಗೆಗೆ ವ್ಯಾಪಕ ಸಂಶೋಧನೆ ನಡೆಸುತ್ತಿರುವ ಕೆಳದಿಯ ಪ್ರಾಚ್ಯವಸ್ತು ಸಂಶೋಧನಾಲಯ ಇದರ ಬಗೆಗೆ ಸಂಬಂಧಿಸಿದ ಅಪಾರ ದಾಖಲೆಗಳನ್ನು ಸಂಗ್ರಹಿಸಿ ಸಂರಕ್ಷಿಸಿ ಇಟ್ಟಿದೆ. ಆದರೂ ಆ ಕಾಲದ ಇನ್ನೂ ಅದೆಷ್ಟೋ ದಾಖಲೆಗಳು ಚದುರಿ ಹೋಗಿವೆ. ಇಂತಹ ಹಲವು ದಾಖಲೆಗಳು ಸೊರಬ ತಾಲೂಕು ಕುಪ್ಪಗಡ್ಡೆ ಹೋಬಳಿ ಕಸಬಾ ಗ್ರಾಮದ ಜನ್ನೆಭಟ್ಟರ ವಂಶಸ್ಥರ ಮನೆಯಲ್ಲಿ (ಹಾಲಿ ಕುಂದಾಪೂರ ತಾಲೂಕು ಬವಲಾಡಿ ಶ್ರೀನಿವಾಸ ಹೆಬ್ಬಾರರು ವಾಸವಾಗಿದ್ದಾರೆ.) ದೊರಕಿದ್ದು ಅವು ಆ ಕಾಲದ ಕೆಳದಿ ಅರಸರ ಆಡಳಿತದ ಬಗೆಗೆ ಬೆಳಕು ಚೆಲ್ಲುತ್ತವೆ.

ಕುಪ್ಪಗಡ್ಡೆ ಅಗ್ರಹಾರ ಕ್ರಿ. ಶ. ೧೦ ರಿಂದ ೧೮ ರ ತನಕ ಪ್ರಮುಖ ಅಗ್ರಹಾರವಾಗಿದ್ದು ಮೊದಲಿಗೆ ಕುಂತಳ ರಾಜ್ಯದ ತದನಂತರ ಕೆಳದಿಯ ಅರಸರ ಪೋಷಣೆಯನ್ನು ಪಡೆದು ಬೆಳೆದು ಬಂದಿದೆ. ಈ ಅಗ್ರಹಾರವು ನೆರೆಯ ಕೇದಿಗೆರೆ, ವಿರುಪಾಕ್ಷದ, ಮಹಿಷಿ, ಚಡಕಲ್ಲು, ರಂಗಪ್ಪಯ್ಯನ ಅಗ್ರಹಾರಗಳೊಂದಿಗೆ ಸಂಪರ್ಕ ಹೊಂದಿದ್ದು ಅಲ್ಲಿನ ಅನೇಕ ವೈದಿಕರು, ವಿದ್ವಜ್ಜನರು, ಜ್ಯೋತಿಷ್ಯಾಸ್ತ್ರಜ್ಞರು, ಜ್ಞಾನಾರ್ಥಿಗಳು ಕುಪ್ಪಗಡ್ಡೆ ಅಗ್ರಹಾರಕ್ಕೆ ಬಂದು ವಿವಿಧ ವೃತ್ತಿಗಳನ್ನು ಕೈಗೊಂಡಿದ್ದರಲ್ಲದೆ ಕೆಲವರು ಅಲ್ಲಿಯೇ ನೆಲೆಸಿದ್ದುದಾಗಿ ತಿಳಿದು ಬರುತ್ತದೆ.

ಕುಪ್ಪಗಡ್ಡೆ ಅಗ್ರಹಾರದಲ್ಲಿ ದೊರೆತ ಕ್ರಿ. ಶ. ೧೬ನೇ ಶತಮಾನದಿಂದ ಕ್ರಿ. ಶ. ೧೭ ನೇ ಶತಮಾನದ ಆರಂಭದ ಕಾಲದ ೫ ನಿರೂಪಗಳು ಹಾಗೂ ಒಂದು ಕ್ರಯದಾನ ಪತ್ರವು ಕೆಳದಿಯ ಹಿರಿಯ ವೆಂಕಟಪ್ಪನಾಯಕ, ವೀರಭದ್ರನಾಯಕ ಹಾಗೂ ಇಮ್ಮಡಿ ವೆಂಕಟಪ್ಪನಾಯಕನ ಕಾಲದವುಗಳಾಗಿವೆ. ಇವು ಕನ್ನಡ ಭಾಷೆಯಲ್ಲಿದ್ದು ನಂದಿನಾಗರಿ ಲಿಪಿಯಲ್ಲಿ ಓಲೆಗರಿಗಳ ಮೇಲೆ ಬರೆದವುಗಳಾಗಿವೆ. ಈ ನಿರೂಪಗಳು ಕೆಳದಿಯ ಅರಸರ ಶಾಸನ ಸಂಪುಟಗಳಲ್ಲಿ ಈ ತನಕ ಪ್ರಕಟವಾಗಿರುವುದಿಲ್ಲ. ಕೆಳದಿ ಅರಸರ ಕಾಲದ ಆರ್ಥಿಕ ಸಾಮಾಜಿಕ ಅಂಶಗಳಿಂದ ಕೂಡಿದ ಈ ನಿರೂಪಗಳನ್ನು ವಿದ್ವಾಂಸರ ಅವಗಾಹನೆಗೆ ತರಬಯಸುತ್ತೇನೆ.

ಇಲ್ಲಿ ಕಾಣಿಸಿದ ೫ ನಿರೂಪಗಳು ಹಾಗೂ ಕ್ರಯದಾನ ಪತ್ರವು ನಂದಿನಾಗರಿ ಲಿಪಿಯಲ್ಲಿ ಬರೆದಿದ್ದು ಭಾಷೆ ಕನ್ನಡ ವಾಗಿರುತ್ತದೆ.

ಇವು ಓಲೆಗರಿಯಲ್ಲಿ ಬರೆದವುಗಳಾಗಿದ್ದು ಓಲೆಗರಿಯ ಗಾತ್ರವು ೨೪ ಸೆಂ.ಮೀ.x೫ ಸೆಂ.ಮೀ. ಆಗಿರುತ್ತದೆ.

***ನಿರೂಪಗಳ ಕಾಲ***

ಅ. ಸರ್ವಧಾರಿ ಸಂವತ್ಸರ - ಹಿರಿಯ ವೆಂಕಟಪ್ಪ ನಾಯಕ - ಕ್ರಿ.ಶ. ೧೫೮೭

ಆ. ಪ್ಲವಂಗ ಸಂವತ್ಸರ - ವೀರಭದ್ರನಾಯಕ - ಕ್ರಿ. ಶ. ೧೬೦೭

ಇ. ಸಾಧಾರಣ ಸಂವತ್ಸರ - ಇಮ್ಮಡಿ ವೆಂಕಟಪ್ಪ ನಾಯಕ - ಕ್ರಿ.ಶ.೧೬೧೦

ಈ. ವಿರೋಧಿ ಕೃತು ಸಂ. ಇಮ್ಮಡಿ ವೆಂಕಟಪ್ಪ ನಾಯಕ - ಕ್ರಿ.ಶ. ೧೬೧೧

ಉ. ಪ್ಲವಂಗ ಸಂವತ್ಸರ ಇಮ್ಮಡಿ ವೆಂಕಟಪ್ಪ ನಾಯಕ - ಕ್ರಿ.ಶ. ೧೬೦೭

**ಕ್ರಯದಾನಪತ್ರ** ಪ್ಲವಂಗ ಸಂ. ಇಮ್ಮಡಿ ವೆಂಕಟಪ್ಪನಾಯಕ - ಕ್ರಿ. ಶ. ೧೬೦೭

ಈ ನಿರೂಪಗಳಲ್ಲಿ ಕಾಣಿಸಿದ ಮುಂಡಕಾರ ಸೀಮೆಯಲ್ಲಿನ ಕೇದಿಗೆರೆ ಅಗ್ರಹಾರವು ಈಗಿನ ಹೊಸನಗರ ತಾಲೂಕಿನಲ್ಲಿದೆ. ಅಲ್ಲದೆ ಇದರಲ್ಲಿ ಕಾಣಿಸಿದ ಜನ್ನಿಭಟ್ಟನ ಸಂತತಿಯವರು ಸೊರಬ ತಾಲೂಕ ಕುಪ್ಪಗಡ್ಡೆ ಗ್ರಾಮದಲ್ಲಿ ವಾಸವಾಗಿದ್ದಾರೆ. ಈ ಓಲೆಗರಿಗಳು ಜನ್ನಿಭಟ್ರ ವಂಶಸ್ಥರಾದ ಜನ್ನಿಕಾಳಿಂಗಭಟ್ಟರ ಮನೆಯಿಂದ ಸಂಗ್ರಹಿಸಲಾಗಿದೆ.

೧. ಸರ್ವಧಾರಿ ಸಂವತ್ಸರದ ಚೈತ್ರ ಶು ೫ಲು ಶ್ರೀಮತ್ ಕೆಳದಿ ವೆಂಗಟಪ್ಪ ನಾಯಕರು ಬಲ್ಲರಸ ಹೆಗ್ಗಡಿಕೆ ಬರಶಿ ಕಳುಹಿದ ಕಾರ್ಯ ಮುಂಡಕಾ। ರ ಶೀಮೆ ಜಂನಿ ಭಟ್ಟನಿಂದ ಯಿ ಸೀಮೆ ಬದುಕು ಮಾಡಿದ ಬಗ್ಯೆ ಯೀತನಿಂದ ಹೇರಳಹಣ ಬರಬೇಕು ಯೆಂದು ಸೆನಭೋವ ಮಲ್ಲಿಕಾರ್ಜುನಯ್ಯನು ಬ

* ವಿಜಯಾ ಬ್ಯಾಂಕ್ ಉದ್ಯೋಗಿ, ಉಳವಿ, ತಾ: ಸೊರಬ, ಶಿವಮೊಗ್ಗಾ ಜಿಲ್ಲೆ - ೫೭೭ ೪೩೪

ರಶಿದ್ದು ಗ ೧೦೦೦ ಕೆ ಪಣಕಾಸು ಕಂಚು, ತಾಂಬ್ರ ಮುಂತಾಗಿಯಲಾ। ಪೆಗಡೆಯು ತೆಗೆದುಕೊಂಡ। ನನಗೆ ಯಾತುಕು ಅವಕಾಶವಿಲ್ಲಾ. ಕದಿ ಗೆರೆಯಲ್ಲು ಯಜಮಾನಿಕೆ ಅಂಶಕೆ ತೋಟಮರ ಸಾ ೨೩೦೦ ಅದೆ. ಮತ್ತೆ ಯಾತಕು ಅವಕಾಶವಿಲ್ಲವೆಂದು ಹೇಳಿಕೊಂಡಲ್ಲಿ ಆ ತೋಟವಂನು ಅರಮನಿಗೆ ಕಟ್ಟಿಕೊಂಡು ಮೇಲಾಗಿ ಯೇನು ಬರಬೇಕು ಆಗಿ ಯಿದರು ಬಪದನಲು ಯೀತಕೆ ಶಿವಾರ್ಪಿತ ವಾಗಿ ಬಿಟ್ಟು ಯಿಧೇವೆ ಯಿತನ ತಲ ಹೊಗಲಾಗದು। ಯಿ ಕಾಗದ ಸೆನಭೋವರ ಕಡತಕ್ಕೆ ಬರಶಿ ತಿರಗಾ ಯೀ ಕಾಗದ ಯಿತನ ವಶಕ್ಕೆ ಕೊಡುವದಾಗಿ।। ನಿರೂಪ ।।-।।-।। ಪ್ಲವಂಗ ಸಂವತ್ಸರದ ಆಶ್ವೀಜ ಶು ೧ ಲು

ಶ್ರೀಮತ್ ಕೆಳದಿ ವೀರಭದ್ರನಾಯಕರು ಆವಿನಹಳ್ಳಿ ಕೃಷ್ಣಯಗೆ ಬರಶಿ ಕಳುಹಿದ ಕಾರ್ಯ, ಕೇದಿಗೆರ ಅಗ್ರಹಾರದ ಮಹಾಜನಂಗಳು ತಂಮ ಅಗ್ರಹಾರಕೆ ಯಿತ್ತಲಾಗಿ ವಿರೂದಿ ಹೆಚಿಗೆ ಗ ೧೫ ಕಟ್ಟಿಕೊಂಡ ಸ್ವಾಸ್ಥೆಯಿಂದ ಜಂನಿಭಟ್ಟನ ಸ್ವಾಸ್ಥೆಯಿಂದ ಗ ೪೦ ।। ೧ ನಾರಣಯನ ಸಂಕಣನ ಸ್ವಾಸ್ಥೆಯಿಂದ ಗ ೧೩।।೨ ಸುಂಕದ ಬೊಂಮ್ಮಂಣನ ಸ್ವಾಸ್ಥೆಯಿಂದ ಗ ೮ ಅಂತು ೭೭ ಹ್ವ ವಿನಾಯ (ಕ) ದೇವರ ಸ್ವಾಸ್ಥೆಯಿಂದ

**ಹಿಂಪುಟ**

ಗ ೧।।೩। ಉಭಯಂ ಗ ೭೯ಹ೧। ಹೇರಳ ನಷ್ಟವಾಗಿ ಅದೆ ಹುಟ್ಟುವಳಿಯಲ್ಲಿ ಪಾಲಿಶಿಕೊಳ್ಳಬೇಕು, ಯಂದು ಹುಜುರು ಬಂದು ಹೇಳಿಕೊಂಡ ಸಂ.

X X

ಧಾ ಹೆಚಿಗೆ ಅರ್ಧಾಯ ಗ ೩೯।।೦।। ಮೂವತ್ತೊಂಭತ್ತು ಹೊಂನು ಅಡುಬೆಲೆಯಂನು ಪ್ರಾಕು ಶುದ್ಧ ೧ಸ್ಥಿರವಾರ ಹಿರಕರ್ತನ್ಯೆಯನವರ ಪ್ರಥಮಾಭ್ಧಿಕ ಪುಂಣ್ಯಕಾಲದಲು ಶಿವಾರ್ಪಿತವಾಗಿ ಬಿಟ್ಟುಯಿಧೆವೆ ಯಿ ಹಣ ಹೊರತಾಗಿ ಮೇಲಾದ ಹಣ ತರಿಶಿಕೊಳುತ್ತಬಾಹದು। ಯಿ ಕಾಗದ ಸನಭೋವರ ಕಡತಕ್ಕೆ ಬರಶಿ ತಿರಗಾ ಯಿವರ ವಶಕ್ಕೆ ಕೊಡುವದಾಗಿ।। ।। ನಿರೂಪು ೧ ।। ।। ।।

**ಹಾಳೆ-೨**

ಸಾಧಾರಣ ಸಂವತ್ಸರದ ಪುಷ್ಯ ಶು ೧೫ಲು ಶ್ರೀಮತ್ ಕೆಳದಿ ವೆಂಗಟಪ ನಾಯಕರು ಮಲ್ಲರಸ ಹೆಗ್ಗಡಿಗೆ ಬರಶಿ ಕಳುಹಿದ ಕಾರ್ಯ ಜಂನಿಭಟ್ಟನು ಹುಜುರು ಬಂದು ಮುಂಡಕಾರ ಶೀಮೆ ಕೇದಿಗೆರೆ ಅಗ್ರಹಾರದ ಥಾವಣೆ ಗಂಗಾದೇವಿಯಲು ನಂನ ಅಜ್ಜನ ಹೆಸರಲ್ಲು ಜನಾರ್ದನ ದೇವರ ಪ್ರತಿಷ್ಠೆಯ ಮಾಡಿ ಯಿಧೇನೆ ಆ ದೇವರ ಅಮೃತಪಡಿ ನಂದಾದೀಪ ಅಭಿಷೇಕ ಸಹಸ್ರನಾಮ ಮಂತ್ರಪುಷ್ಪ ಕಾರ್ತಿಕ ಮಾಸ ಧನುರ್ಮಾಸಕೆ ಸಹ ಯಿ ದೇವಸ್ಥಾನದಧಾಗಿನಾರಭ್ಯ ಸುಳಗೂಡ ಶಟ್ಟಿಪಾಲಗದ್ದೆ ಪರಿಯಂತ ಬೀಜವರಿ ಯಂತ್ರ ಬೀಜ ಖ೧೦।। ಕೆರವಡಲು ಬೀಜವರಿ ಖ೪।। ಉಭಯಂ ಖ೧೫ ಹದಿನೈದು ಖಂಡುಗ ಗದ್ದೆಯನ್ನು ಕ್ರಯಕೆ ಕೊಟ್ಟು ಯಿಧೇವೆ ಆಗಾಮಿ ಮಕ್ಕಿ ಬೀಜ ಖ ೫ ಉಭಂ ಬೀಜವರಿ ಖ ೨೦ ಸಂವತ್ಸರದಲು ಮಾಗಣ ವಟ್ಟು ವೂದಿಕೆಯಲು ಹೆಚಿ ಉ ಬೀಜ ಖ೪ ಉಭಯಂ ಬೀಜ ಖ೨೪ಕೆ ಸಿದ್ದಾಯ ಬಿರಾಡ ಬೇಡಿಕೆ ಸಹ ಗ ೧೨ ವರಹಾಂನು ದೇವರ ಕಟ್ಟಳೆ (ಕಂ) ಕಂದಾಚಾರಕೆ ಬಿಡಬೇಕು ಯಂದು ಹೇಳಿಕೊಂಡ ಸಂಮಂಧಾ ಯೀತನ ಕೈಯಲು ಕಾಣಿಕೆ ಗ ೧೨ ಹನೆರಡು ವರಹಾಂನು ಅರಮನಿಗೆ ತೆಗೆದುಕೊಂಡು ದೇವರ ಕಟ್ಟಳೆ ಕಂದಾಚಾರಕೆ ಬಿಟ್ಟು ಯಿಧೇವೆ ಯೀ ಭೂಮಿ ವಕಲು ಸಹ ಯೀತನ ಅಧೀನ ಮಾಡಿಕೊಟ್ಟು ಉಪಾದಿ ಸಾಂಗವಾಗಿ ನಡಸುವ ಹಾಗೆ ಕಟ್ಟು ಮಾಡಿಶಿ ಯೀ ಸಿಸ್ತು ಹೊರತಾಗಿ ಮೇಲಾದ ಹಣವಂನು ತರಿಶಿಕೊಳುತ ಬಾಹದು। ಯೀ ಕಾಗದ ಸೆ

**ಹಿಂಪುಟ**

ನಭೋವರ ಕಡಿತಕ್ಕೆ ಬರಶಿ ತಿರಗ ಯೀತನ ವಶಕೆ ಕೊಡುವದಾಗಿ।। ನಿರೂಪು ೧।। ।। ವಿರೋಧಿ ಕ್ರತು ಸಂವತ್ಸರದ ಪಾಲ್ಗುಣ ಶು ೧೫ಲು ಶ್ರೀಮತು ಕೆಳದಿ ವೆಂಗಟಪ ನಾಯಕರು ಮಲ್ಲರಸ ಹೆಗಡಿಗೆ ಬರಶಿ ಕಳುಹಿದ ಕಾರ್ಯ ಮುಂಡಾಕಾರ ಶೀಮೆ ಕೇದಿಗೆರೆ ಅಗ್ರಹಾರದಲು ಹೇರಳ ಶಿಸ್ತು ಆಗಿ ಅದೆ ಯಿಗ್ರಾಮವೆ ಗ ೧೪೭।। ವರಹಾನು ತರುತ್ತ ಅದೆ. ತೋಟ ಮ ೫೫೧೦ ಗದ್ದೆ ಬೀಜವರಿ ಖಂ ೧೧೧ಕೆ ಸಹ ಯಿ ಶಿಸ್ತು ತರಲಾರೆಲು ಯಂದು ಹೇಳಿಕೊಂಡ ಸಂಮಂದ ಯಿ ಜಂನಿಭಟ್ಟನ ಕೈಲು ಕಾಣಿಕೆ ಗ ೪೦ ಹ್ ನಾಲುವತ್ತು ವರಹಾಂನ್ನ ಅರಮನಿಗೆ ತೆಗೆದುಕೊಂಡು ಯೀ ಕೇದಿಗೆರೆಗೆ ಹಾಕಿಕೊಟ್ಟೆಲು। ಬೆಳಂಜಿ ಕೃಷ್ಣಭಟ್ಟನ ಸ್ವಾಸ್ತೆಯಿಂದ ಹೆಚಿಗೆ ಸಹ ತೋಟ ಮರ ಸಾ ೧೦೦೦ ಕೆ ಸಿಸ್ತು ಗ ೧೦ ಹ್ ಯಿ ಶೀಮೆಯಲು ಯೀ ಜಂನಿ ಭಟ್ಟನು ಕ್ರಯಕೆ ತೆಗೆದುಕೊಂಡಲು ಸರುಹಿನ ತೋಟಮರ ೮೦೦ಕೆ ಮೆಲುಹಣ ಸಹ ಗ ೧೧ ಹ್ ಕಕಮಾನಿ ತೋಟಮರ ಸಾ ೧೦೦೦ ಕೆ ಗ ೧೦ ಹ್ ಉಭಯಂ ಗ ೨೧ ಉಭಯಂ ಗ ೩೧ ನ್ನ ಯೀ ಶುದ್ಧ ೧೫ಲು ಸೋಮೊಪರಾಗ ಪುಣ್ಯಕಾಲದಲು ಶಿವಾರ್ಪಿತವಾಗಿ ಬಿಟ್ಟು ಯಿಧೇವೆ ಯೀ ಮೂವತ್ತು ವಂದು ವರಹಾನ ಕೇದಿಗೆರೆ ಅಗ್ರಹಾರ ಶಿಸ್ತು ಗ ೧೪೭।। ಯಂನ್ನ ಶಿಸ್ತು ಮಾಡಿ ಕಳುಹಿ ಅದೆ ಯೀ ಮೂವತ್ತು ವಂದು ವರಹ ಹೊರತಾಗಿ ಮೇಲಾದ ಹಣ ತರಿಶಿಕೊಳುತ್ತಬಾಹುದು. ಯೀ ಕಾಗದ ಶೇನಬೋವರ ಕಡಿತಕೆ ಬರಶಿ ತಿರಗ ಯೀ ಕಾಗದ ಯೀತನ ವಶಶೆ ಕೊಡುವದಾಗಿ ।। ನಿರೂಪು ೧ ।।

**ಹಾಳೆ-೩**

ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೆ ತ್ರೈಲೋಕ್ಯ ನಗರಾರಂಭೆ ಮೂಲಸ್ಥಂಭಾಯ ಶಂಭವೇ ।। ಸ್ವಸ್ತಿ ಶ್ರೀ ಜಯಾಭ್ಯುದಯ ಶಾ

**(ನಿರೂಪು)**

ಲಿವಾಹನ ಶಕವರ್ಷ ೧೫೩೭ನೆಯ ಸೌಮ್ಯ ಸಂವತ್ಸರದ ಆಶ್ವೀಜ ಶು೫ಲು ಶ್ರೀಮತ್ ಕೇದಿಗೆರೆ ತಂಮಂಣ ಭಟ್ಟರ ಮಗ ಜಂನಿಭಟ್ಟರಿಗೆ ಹಿರಿಯಂಣ ಹೆಗ್ಗಡೆಯ ಬರಶಿಕೊಟ್ಟ ಭೂದಾನದ ಪತ್ರ ಕ್ರಮವೆಂತೆಂದರೆ ನಮಗೆ ಕುಳಕಾಲಂಚಿಗೆ ಸಲುವ ಮುಂಡಕಾರ ಶೀಮೆ ಹೆದ್ದೂರ ಪಾಲವಳಗಣ ಸುಳಿಗೋಡ ಗದ್ದೆ ಮತ್ತಿನಲು ಇರುವ ಸರುಹು ೧ ಕ ತೋಟಮರದ ಸ್ಥಳ ಹಾಲಿತಮರ ೮೦೦ ಸ್ಥಳವನ್ನು ನಿಮಗೆ ಕ್ರಯಕ್ಕೆ ಕೊಟ್ಟು ಕ್ರಯದ ಹಣ ಗ ೧೫ ಹದಿನೈದು ವರಹಂನು ನಿಮ್ಮ ಕೈಯಲು ತೆಗೆದುಕೊಂಡು ನಿಂಮ ಸಂತಾನ ಪಾರಂಪರ್ಯವಾಗಿ ಸಸಿಹಾಕಿಕೊಂಡು ಫಲಬರುತ್ತಲೆ ಕಟ್ಟುಗುತ್ತಿಗೆ ಸಿಸ್ತಿನ ಹಣ ಗದ್ಯಾಣ ೧೮ ವರಹಾಂನು ತೆತ್ತುಕೊಂಡು ನಿಂಮ ಸಂತಾನ ಪಾರಂಪರ್ಯವಾಗಿ ಆಚಂದ್ರಾರ್ಕ ಸ್ಥಾಯಿಗಳಾಗಿ ಅನುಭವಿಸಿಕೊಂಡು ಬಹಿರಿ ಎಂದು ಬರಶಿ ಕೊಟ್ಟ ಕ್ರಯದಾನ ಪಟ್ಟೆ ಇದರ ಸಾಕ್ಷಿಗಳು ಸೂರಭಟ್ಟರು । ಶಂಕರ ವಾರಣಾಶಿಗಳು ಅಪ್ಪಯ್ಯ ವಡೇರು । ಬಹುದಾಯನವ ನಾಶಿ ಭಟ್ಟರು। ಕರ್ತುವಿನ ವಪ್ಪಿತಾ। ಹಿರಿಯಂಣ ಹಗಡೆ ಬರಹ ಸಾಕ್ಷಿಗಳ ವಪ್ಪಿತಾ ಯೀ ಪಟ್ಟೆ ಬರೆದಾತ ಹಿರಿಯಂಣ ಹೆಗಡೆ ಶಾನುಭೋಗ ವ್ಯಂಕಪಯ್ಯ

**ಹಿಂಪುಟ**

ಪ್ಲವಂಗ ಸಂವತ್ಸರದ ಮಾಘ ಬ. ೧೧ಲು ಶ್ರೀಮತು ಕೆಳದೆ ವೆಂಗಟಪ ನಾಯಕರು ಮುಂಡಕಾರ ಶೀಮೆ ಮಲ್ಲರಸ ಹೆಗಡಿಗೆ ಬರಶಿ ಕಳುಹಿದ ಕಾರ್ಯ, ಕೇದಿಗೆರೆ ತಂಮ್ಮಭಟ್ಟರ ಜಂನಿಭಟ್ಟನು ಹುಜರು ಬಂದು ಮುಂಡಕಾರ ಶೀಮೆ ಕೇದಿಗೆರೆ ಅಗ್ರಹಾರದಲು ನಂನ ಗದ್ದೆ ವತ್ತಿನಲು ಯಿರುವ ಸರುಹಂನು ಹಿರಿಯಂಣ ಹೆಗಡೆ ಕೂಡ ಕ್ರಯಕ್ಕೆ ತೆಗೆದುಕೊಂಡು ಸಸಿಹಾಕಿಯಿಧೆನೆ, ಸಸಿ ಫಸಲು ಬರುತಲೆ ಕಾಣಿಕೆ ಕೊಟ್ಟೆನು. ನಂನ ಹೆಸರಲು ನಿರುಪಕೆ ಅಪ್ಪಣೆಯಾಗಬೇಕು. ಯಂದು ಹೇಳಿಕೊಂಡ ಸಂಮಂಧ ಯೀತನು ಕ್ರಯಧಾನವಾಗಿ ತಗೆದುಕೊಂಡದು ಸುಳಿಗೊಡಗದ್ದೆ ಸರುಹತೋಟಮರ ೮೦೦ ಯೀತಗೆ ಕೊಟ್ಟು ಅದೆ. ಅರಮನಿಗೆ ಸಲುವ ಶಿಸ್ತು ಪ್ರಮಾಣ ಬಿರಾಡ ಸಹಾ ಗಲ ಯಂಟು ವರಹಾಂನು ಕಾಲಕಾಲಂ ಪ್ರತಿಯಲು ನಿಲವಾಗದಂತೆ ತರಿಶಿಕೊಳುತ್ತಬಹುದು.
ಯಿ ಕಾಗದ ಶೇನಬೊವರ ಕಡತಕ್ಕೆ ಬರಶಿ ತಿರಗಾ ಯೀತನ ವಶಕ್ಕೆ ಕೊಡುವುದಾಗಿ ॥ ॥ ೧ ॥



ಡಾ॥ ಎ. ಕೆ. ಶಾಸ್ತ್ರಿ*

# ಶೃಂಗೇರಿ ಮಠದ ಕಡತಗಳಲ್ಲಿ ಪೇಜಾವರ ಮಠದ ಉಲ್ಲೇಖ

ಆದಿ ಶಂಕರಾಚಾರ್ಯರು ಸುಮಾರು ಹನ್ನೆರಡು ನೂರು ವರ್ಷಗಳ ಹಿಂದೆ ಶೃಂಗೇರಿಯನ್ನು ಮಠವನ್ನು ಸ್ಥಾಪಿಸಿದರು.[೧] ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಶೃಂಗೇರಿ ಮಠದ ಗುರುಪರಂಪರೆ ಇಂದಿಗೂ ಅವಿಚ್ಛಿನ್ನವಾಗಿ ಸಾಗಿಬಂದಿದೆ. ದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಮಧ್ವಾಚಾರ್ಯ ಸ್ಥಾಪಿತ ಅಷ್ಟಮಠಗಳಲ್ಲೊಂದಾದ ಪೇಜಾವರ ಮಠದ ಗುರು ಪರಂಪರೆಯೂ ಅವಿಚ್ಛಿನ್ನವಾಗಿ ಸಾಗಿಬಂದಿದೆ. ಇವೆರಡೂ ಪೀಠಗಳು ಭಿನ್ನ ಸಿದ್ಧಾಂತಗಳನ್ನು ಪ್ರತಿಪಾದಿಸುವ ಕೇಂದ್ರ ಗಳಾದರೂ, ಪರಸ್ಪರ ಸೌಹಾರ್ದಯುತವಾದ ಸಂಬಂಧವನ್ನಿರಿಸಿ ಕೊಂಡಿದ್ದವೆಂಬುದಕ್ಕೆ ಶೃಂಗೇರಿಮಠದ ಕಡತ[೨]ಗಳಲ್ಲಿ ಉಲ್ಲೇಖವಾದ ಕೆಲವು ದಾಖಲೆಗಳು ನಿದರ್ಶನ. ಆ ದಾಖಲೆ ಗಳಲ್ಲಿಯ ಮುಖ್ಯಾಂಶಗಳನ್ನು ಗಮನಿಸೋಣ.

ವಿಭವ ಸಂವಂತ್ಸರದ ಮಾಘ ಬಹುಳ ೩೦, ಸೋಮವಾರ[೩], ಶತತಾರಾ ನಕ್ಷತ್ರ, ಸೂರ್ಯೋಪರಾಗ ಪುಣ್ಯ ಕಾಲದಲ್ಲಿ, ಕೆಳದಿಯ ವೆಂಕಟಪ್ಪನಾಯಕರು ರಾಜ್ಯಭಾರ ಮಾಡುತ್ತಿದ್ದಾಗ, ಸೋದೆ, ಕೆಳದಿ, ಬಿಳಗಿ ಮತ್ತು ಗೇರಸಪ್ಪೆ ಸಂಸ್ಥಾನದೊಳಗಿದ್ದ ವೈಶ್ಯ ಕೊಂಕಣಿಗರು, ಸಮುದ್ರತೀರದಲ್ಲಿಯ ಶ್ರೀ ಗೋಕರ್ಣ ಕ್ಷೇತ್ರದ ಶ್ರೀ ಮಹಾಬಲೇಶ್ವರ ದೇವರ ಸನ್ನಿಧಿಯಲ್ಲಿ, ಶ್ರೀ ನರಸಿಂಹಭಾರತೀ ಗುರುಕರಕಮಲ ಸಂಜಾತರಾದ ಶೃಂಗೇರಿ ಮಠದ ಶಂಕರ ಭಾರತೀ ಸ್ವಾಮಿ[೪]ಗಳ ಚರಣಯುಗ್ಮಂಗಳಿಗೆ, ಸ್ವರ್ನವಲ್ಲೀ (ಸ್ವರ್ಣಾವಲ್ಲಿ) ಮಠದ ರಾಮಚಂದ್ರ ಸರಸ್ವತೀ ಶ್ರೀಪಾದಂಗಳವರಿಗೆ, ಶ್ರೀಮನ್ನೆಲೆಮಾವಿನ ಮಠದ ಕೃಷ್ಣಭಾರತೀ ಶ್ರೀ ಪಾದಂಗಳವರಿಗೆ, ಸೋದೆ ಹಯಗ್ರೀವ ಮಠದ ವಿಶ್ವವಂದ್ಯತೀರ್ಥ ಶ್ರೀಪಾದಂಗಳವರಿಗೆ, ಗೋಕರ್ಣ ಮಠದ ರಾಘವೇಶ್ವರ ಭಾರತೀ ಶ್ರೀಪಾದಂಗಳವರಿಗೆ, ಪಲಿಮಾರು, ಅದಮಾರು, ನೆರಂಬಳಿ ಪೇಜಾವರ, ತೀರ್ಥಹಳ್ಳಿ, ಮುಳುವಾಗಿಲ, ಸತ್ಯಪೂರ್ಣ ಮತ್ತು ಸುಮತೇಂದ್ರ ಮಠಾಧೀಶರಿಗೆ, ರಾಮಾನುಜ ಮತಸ್ಥರಾಗಿರುವ ಕಂದರಾಚಾರ್ಯ, ನವಾಚಾರ್ಯ, ಭಟ್ಟಾಚಾರ್ಯ ಮತ್ತು ತಿರುಮಠಾಚಾರ್ಯ ಮಠಾಧಿಪತಿಗಳಿಗೆ, ವಿದೇಹಿ ಅವಧೂತ ಮಠ, ಶ್ರೀ ಯೋಗೀಂದ್ರರ ಮಠ, ಶ್ರೀ ಯೋಗೀಶ್ವರ ಮಠ, ವೀರ ಮಹೇಶ್ವರ ವಿರಕ್ತ ಮಹಂತಿನ ಮಠ, ಮುಂತಾದ ಒಟ್ಟೂ ೨೪ ಮಠಾಧೀಶರಿಗೆ ಬರೆದ ಬಿನ್ನವತ್ತಳೆಯಲ್ಲಿ[೫] ಪೇಜಾವರ ಮಠವನ್ನೂ ಉಲ್ಲೇಖಿಸಿರುವದು ಗಮನಾರ್ಹ ಅಂಶ.

ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಾಶ್ರಮ ಗಳು, ಆಚಾರ, ಗ್ರಾಮಪಟ್ಟಿ, ಪುರೋಹಿತಿಕೆ, ವೇದಾಧ್ಯಯನ, ಮಠ-ದೇವಸ್ಥಾನಗಳಲ್ಲಿ ಪೂಜೆ, ಬೀದಿ ಮೆರವಣಿಗೆ, ತಳಿಗೆ, ತೋರಣ, ಕಲಶ, ಕನ್ನಡಿ, ದಂಡಿಗೆ, ಬಾಸಿಂಗ, ಗದ್ದಿಗೆ, ತಕಡಿ, ತೂಕ, ಮುಂತಾದ ವಿಶೇಷ ಅಧಿಕಾರ ಮತ್ತು ಲಾಂಛನಗಳಿಗೆ ತಾವು ಅಧಿಕಾರಸ್ಥರೋ? ಅಥವಾ ಅಲ್ಲವೋ? ಎಂಬುದಾಗಿ ವೈಶ್ಯ ಕೊಂಕಣಿಗರು ಕೇಳಿಕೊಳ್ಳಲಾಗಿ, ಸೋದೆಯಿಂದ ಬಂದವರು, ಬಿಳಗಿ ವೀರಪ್ಪ ವಡೆರು, ಕೆಳದಿ ವೀರಭದ್ರನಾಯಕರು ಮತ್ತು ನಗರ ಸಿಂಹಾಸನದ ಗೇರಸಪ್ಪೆ ಕೃಷ್ಣರಾಯ ವಡೆರು ತಾವು ಪ್ರತಿಪಾಲಿಸುತ್ತ ಇದ್ದ ದಯಿವ ತುಳುವ ಕೊಂಕಣ ರಾಜ್ಯದೊಳಗಿನ, ಪಂಚದ್ರಾವಿಡ ಪಂಚಗೋಡ ಬ್ರಾಹ್ಮಣರನ್ನು ರಾಜದ್ವಾರಕ್ಕೆ ಕರೆಸಿ, ಮಹಾನಾಡು ದೈಯಿವ ಕ್ಷತ್ರಿಯ ಕೊಮಟಿ ಬಣಾಜಿಗರ ಸಭೆಯಲ್ಲಿ, ವೈಶ್ಯ ಕೊಂಕಣಿಗರಿಗೆ ಆಶ್ರಮ ಅಧಿಕಾರ ಉಂಟೋ ಅಥವಾ ಇಲ್ಲವೋ ಎಂಬುದನ್ನು ತೀರ್ಮಾನಿಸಲು, ಒಂದು ಶಾಸ್ತ್ರ ವಿಚಾರ ಮಾಡಿ ನಿರ್ಣಯಿಸುವ ಬಗ್ಗೆ, ನಾಲ್ಕೂ ಸಂಸ್ಥಾನಗಳಿಂದ ಹೊರಡಿಸಲಾದ ತಾಕಿತಿ ನಿರೂಪ ಪ್ರಮಾಣ, ಶ್ರೀ ಶೃಂಗೇರಿ ಮಠದಲ್ಲಿ ಶ್ರೀ ಪಾದಂಗಳವರು, ಇನ್ನಿತರ ಶ್ರೀಪಾಂದಗಳವರು ಮತ್ತು ಪಂಚದ್ರಾವಿಡ ಪಂಚಗೌಡ ಬ್ರಾಹ್ಮಣರು ಸೇರಿ, ಮಯೂಖ, ಹೇಮಾದ್ರಿ, ಪರಾಶರ, ವಿಜ್ಞಾನೇಶ್ವರ, ನಿರ್ಣಯಸಿಂಧು ಮತ್ತು ಭೈರವ ಪುರಾಣ ಮೊದಲಾದ ಧರ್ಮಶಾಸ್ತ್ರ ಗ್ರಂಥಗಳನ್ನು ಆಧಾರವಾಗಿರಿಸಿ ಕೊಂಡು, ಮೇಲ್ಕಾಣಿಸಿದ ಅಧಿಕಾರ ಮತ್ತು ಲಾಂಛನಗಳು ವೈಶ್ಯ ಕೊಂಕಣಿಗರಿಗೆ ಸಲ್ಲವು, ಎಂಬ ಒಂದು ಮಹತ್ವದ ತೀರ್ಪು, ಅಂದಿನ ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳ ಮೇಲೆ ವಿಶೇಷ ಬೆಳಕು ಚೆಲ್ಲುತ್ತದೆ.

ಶ್ರೀ ಗಣಾಧಿಪತಿಯ ಸ್ತುತಿಯೊಂದಿಗೆ ಪ್ರಾರಂಭವಾದ ಬಿನ್ನವತ್ತಳೆಯು ಆಧಿಭಾಗದಲ್ಲಿ *"ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರಿಣ ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗಾನುಷ್ಠಾನ ನಿಷ್ಠ ತಪಃ ಚಕ್ರವರ್ತ್ಯನಾದ್ಯವಿಛಿಂನ ಗುರುಪರಂಪರಾ ಪ್ರಾಪ್ತ ಷಡ್ದರುಶನ ಪ್ರತಿಸ್ಥಾಪನಾಚಾರ್ಯ್ಯ ವ್ಯಾಖ್ಯಾನ ಸಿಂಹಾಸನಾಧಿಶ್ವರ ಸಕಲ ನಿಗಮಾಗಮ ಸಾರ ಹ್ರುದಯ ಸಾಂಖ್ಯತ್ರಯಃ ಪ್ರತಿಪಾದಕಃ ವೈಯಿದಿಕ*

* 'ಭವಾನಿ' ವಿ. ಎಸ್. ಎಸ್. ರೈಸ್‌ಮಿಲ್ ಹತ್ತಿರ, ಸಿರಸಿ - ೫೮೧ ೪೦೨

ಮಾರ್ಗ ಪ್ರವರ್ತಕ ಸರ್ವತಂತ್ರ ಸ್ವತಂತ್ರ ಆದಿ ರಾಜಧಾನಿ ಮಹಾರಾಜಧಾನಿ ಕರ್ನಾಟಕ ಸಿಂಹ್ಮಾಸನಾಧಿಶ್ವ [ರ] ಸ್ಥಾಪನಾಚಾರ್ಯ ಶ್ರೀ ಮದ್ರಾಜಾಧಿರಾಜಗುರು ಭೂಮಂಡಲಾಚಾರ್ಯ ರುಶ್ಯಶ್ರುಂಗ ಪುರವರಾಧಿಶ್ವರ ತುಂಗಭದ್ರಾತೀರವಾಸ ಶ್ರೀ ಮದ್ವಿದ್ಯಾಶಂಕರ ಪಾದಪದ್ಮಾ ರಾಧಕ..." ಎಂಬ ಶೃಂಗೇರಿ ಮಠದ ಜಗುದ್ಗುರುಗಳ ಬಿರುದಾವಳಿಗಳು ಉಲ್ಲೇಖಗೊಂಡಿವೆ.

ಮೇಲ್ಕಾಣಿಸಿದ ಬಿನ್ನವತ್ತಳೆಯಲ್ಲಿ ಪೇಜಾವರ ಮಠದ ಹೆಸರಷ್ಟೇ ಉಲ್ಲೇಖವಾಗಿದ್ದರೆ, ಇನ್ನೊಂದು ಕಡತದಲ್ಲಿಯ ದಾಖಲೆಯು[೭] ಪೇಜಾವರ ಮತ್ತು ಶೃಂಗೇರಿ ಮಠಗಳ ನಡುವಿನ ಸೌಹಾರ್ದಯುತವಾದ ಸಂಬಂಧವನ್ನು ಕುರಿತು ತಿಳಿಸುತ್ತದೆ. ಉಡುಪಿಯ ಶ್ರೀ ಕೃಷ್ಣದೇವರ ಪೂಜಾ ಪರ್ಯಾಯ ಕಾಲದಲ್ಲಿ ಶೃಂಗೇರಿ ಸ್ವಾಮಿಗಳು ಉಡುಪಿಗೆ ತೆರಳಿ, ಶ್ರೀ ಕೃಷ್ಣದೇವರ ದರ್ಶನ ಪಡೆದು, ತಮ್ಮನ್ನು ಸಂತೋಷಪಡಿಸಬೇಕಾಗಿ, ಪೇಜಾವರ ಮಠದ ಶ್ರೀಮದ್ವಿಶ್ವಪ್ರಿಯ ತೀರ್ಥ ಶ್ರೀಪಾದಂಗಳವರ ಕರಕಮಲ ಸಂಜಾತರಾದ ಶ್ರೀಮದ್ವಿಶ್ವರ್ಯತೀರ್ಥ ಶ್ರೀಪಾದಂ ಗಳವರು ಶೃಂಗೇರಿ ಮಠದ ಸುಬೇದಾರ ಪುಟ್ಟರಾಯರಿಗೆ ಬರೆದ ಆಶೀರ್ವಾದ ಪತ್ರವು ಈ ದಿಶೆಯಲ್ಲಿ ಅತ್ಯಂತ ಮಹತ್ವವಾದದ್ದು. ದಾಖಲೆಯ ಪಾಠದ ಕೆಲವು ಸಾಲುಗಳು ಇಂತಿವೆ:

*"....ಶ್ರೀಮದ್ವಿಶ್ವವರ್ಯತ್ತಿರ್ಥ ಶ್ರೀಪಾದಂಗಳವರ್‍ರು - ನಂಮ ಸಂಸ್ಥಾನಕ್ಕೆ ಮುಖ್ಯಾಭಿಮಾನಿಗಳಾದ ಶ್ರಿಂಗೆರ್‍ರಿ ಮಟದ ಸರ್‍ರ ಶುಬೆದಾರ್‍ರು ಪುಟ್ಟರಾಯರ್‍ರಿಗೆ ಮಾಡುವ ಶ್ರೀಮಂನಾರ್‍ರಾಯಣ ಸ್ಮರ್‍ರಣೆಗಳು ನಾಲು ಶ್ರೀ ಕ್ರಿಷ್ಣ ದೆವರ್‍ರ ಪುಜಾ ಜಪಃ ವ್ಯಾಖ್ಯಾನಾದಿಗಳ ಮಾಡಿಕೊಳ್ಳುತ್ತಾ ಕ್ಷೆಮೆಸಾ ಯಿಧವೆ! ನಿಂಮ ಕ್ಷೆಮ ಸಮಾಚಾರ್‍ರಕ್ಕೆ ನಂಮ ಮೆಲೆ ವಿಶ್ವಾಸದಿಂದಾ ಬರ್‍ರಶಿ ಕಳುಹಿಸುವ ರ್‍ರಿತ್ತಿ ಮಾಡ್ತಬೆಕು।। ಸಾಂಪ್ರತ್ತಾ।। ಯಿಾಗ ನಿಮಗೆ ಪ್ಲವ ಸಂವತ್ಸರದ ಶ್ರಾವಣ ಶು ೧೫ಲು ಶ್ರೀ ಕೃಷ್ಣ ದೆವರ್‍ರಿಗೆ ಪಡಿತ್ತರೂಪನವಾದ ಕರ್‍ರಿ ಶ್ರೀಮುಡಿ ಗಂಧ ಪ್ರಸಾದ ನಾರಿಕೆಳ ಖಂಡ ಕದಳಿ ಫಲ ಮಂತ್ರಾಕ್ಷತ್ತೆ ಮುಂತ್ತಾಗಿ ಕೊಟ್ಟು ಕಳುಹಿದೆವೆ ಬಂದಲ್ಲಿ ತ್ತೆಗದುಕೊಂಬಂತ್ತೆ ಮಾಡ್ತಬೇಕು - ಪರ್‍ರಂತ್ತು ನಾಲು ಯಿಲಿ ಮಾಡಿಬರ್‍ರುವ ಶ್ರೀಕೃಷ್ಣ ದೆವರ್‍ರ ಪೂಜಾ ಪರ್‍ರಿಯಾಯಾ ಕಾಲದಲ್ಲು ಶ್ರೀ ಸ್ವಾಮಿಗಳವರ ಕರಶಿಕೊಂಡು ಶ್ರೀ ದೆವರ ಸಂದರ್ಶನಾದಿಗಳ ಮಾಡಿಶಿ ಅವರ ಭೆಟ್ಟಿಯು ನಮಗೆ ಲಭ್ಯ ಆಗಬೆಕೆಂಬದಾಗಿ ಬಹಳ ಅಪೆಕ್ಷೆ ಯಿರ್‍ರುವ ಪ್ರಯುಕ್ತಾ ನಂಮ ಅಪೆಕ್ಷೆ ಪೂರ್ನಾ ಆಗುವಗೊಸ್ಕರ್‍ರ ಶ್ರೀ ಸ್ವಾಮಿಗಳವರ್‍ರಿಗೆ ಯಾವ ಪ್ರಕಾರ್‍ರಾ ನಿ ಉ ಅರ್‍ರಿಕೆ ಮಾಡಬೆಕೊ ಅಪ್ರಕಾರ್‍ರಾ ಮಾಡಿ ಬರ್‍ರುವ ಕಾರ್ತಿಕ ಮೊಹತ್ಸವಕ್ಕೆ ಕರಕೊಂಡು ಬಂದು ಮೆಲೆ ಬರದ ಪ್ರಕಾರ್‍ರ ಶ್ರೀದೇವರ ಸಂದರ್ಶನಾದಿಗಳ ಮಾಡ್ಡಿಕೊಂಡು ನಮುಗು ಭೆಟ್ಟಿಲಾಭ ಕೊಟ್ಟು ಮನಃಸಂತ್ತೊಷ ಬಡಿಶಿ ನಿಲು ಪ್ರಸಾದ ಮಂತ್ರಾಕ್ಷತ್ತೆ ತ್ತೆಗದುಕೊಂಡು ಹೊಗುವಂತ್ತೆ ಮಾಡ್ತಬೆಕು .......... ಸರ್ವ ವಿಷಯದಲ್ಲು ಸಂಸ್ಥಾನದ ಮೆಲೆ ಅಭಿಮಾನವಿಟ್ಟು ನಡ್ಸುವಂತ್ತವರ್‍ರಿಗೆ ಪತ್ರಿಕಾ ಮುಖದಿಂದಾ ವಿಶೆಷಾ ಬರ್‍ರಶಿ ಕಳುಹ್ಸಿತಕ್ಕದ್ದೆನಧೆ ಯಿತ್ತ್ಯನೆಕ ಶ್ರೀಮಂನಾರ್‍ರಾಯಣ ಸ್ಮರ್‍ರಣೆಗಳು। ಯೀ ಸ್ವಾಮಿಗಳವರ್‍ರು ತ್ತಂಮ ಸ್ವಹಸ್ತದಿಂದಾ ತ್ತುಳು ಬರಹಾದಲ್ಲು ಶ್ರೀಕಾರ್‍ರ ಗುರ್‍ರತ್ತು ಹಾಕಿ ಯಿಧಾರ್‍ರೆ ಯಥಾ ಪ್ರತ್ತಿ ಮೆಲೆ ಶ್ರೀ ಕ್ರಿಷ್ಣಾ ಯಂತಾ ತ್ತುಳು ಬರಹಾದಲ್ಲು ಬರ್‍ರದು ಯಿಧಾರ್‍ರೆ ಯಿಾ ಅಸಲು ಕಾಗದವಂನ್ನು ಭಾದ್ರಪತ್ತ ಶು ೭ ದಿವಸ ಸೊಮವಾರ್‍ರ ರಾತ್ರೆ ಘಳಿಗೆ ೫ ಲ್ಲು ಬೊಕ್ಸದ ಸುಬಾಭಟರ್‍ರ ವಶಕೊಟ್ಟು ಯಿದೆ!"*

ಉಡುಪಿಯ ಶ್ರೀಮದ್ವಿಶ್ವವರ್ಯತೀರ್ಥ ಶ್ರೀಪಾದಂಗಳವರ ಸಮಕಾಲೀನರಾದ ಶ್ರೀ ಅಷ್ಟಮ ನರಸಿಂಹ ಭಾರತಿಗಳು (ಪೀಠಾಧಿಪತ್ಯ: ಕ್ರಿ. ಶ. ೧೮೧೭ - ೧೮೭೯) ಶೃಂಗೇರಿ ಜಗದ್ಗುರು ಪೀಠ ಪರಂಪರೆಯಲ್ಲಿ ೩೨ನೆಯವರು ಎಂಬುದಾಗಿ ತಿಳಿದು ಬರುತ್ತದೆ. ದಾಖಲೆಯ ಪಾಠ ಸರಳವಾಗಿರುವುದರಿಂದ ಹೆಚ್ಚಿನ ವಿವರಣೆ ಅನಗತ್ಯ.

ಶೃಂಗೇರಿ ಮಠದ ಸ್ವಾಮಿಗಳು ಶ್ರೀ ಕೃಷ್ಣದೇವರ ದರ್ಶನಾರ್ಥವಾಗಿ ಉಡುಪಿಗೆ ತೆರಳುವ ಸಂಬಂಧ, ರಹದಾರಿಗೆ ಸಂಬಂಧಿಸಿದ ನಂ. ೩೭೬ ನೇ ರಹದಾರಿ ನಕಲು, ಸುಪ್ರಿಂಟೆಂಡೆಂಟ್ ಸಾಹೇಬರ ಬಿನ್ನವತ್ತಳೆ ನಕಲು, ಸಾಹೆಬ ಮಲಪೂಪ ರಹದಾರಿ ನಕಲು, ಕಮೀಷನರ್ ಸಾಹೇಬರವರ ಬಿನ್ನಹ ಪತ್ರಿಕೆ ನಕಲು, ರಹದಾರಿ ನಕಲು ಮತ್ತು ಶಿ। ನಂ ೧೧೫ನೇ ಬಿನ್ನಹ ಪತ್ರಿಕೆ ನಕಲು, ಹೀಗೆ ಒಟ್ಟೂ ಆರು ನಕಲುಗಳನ್ನು, ಕಳಿಸಿರುವದಾಗಿ, ಉಡುಪಿ ತಾಲೂಕಿನ ತಹಶೀಲದಾರ ಶ್ರೀನಿವಾಸರಾಯರು ಸನ್ ೧೨೫೧ ನೇ ಫಸಲಿ, ಅಕ್ಟೋಬರ ತಾರೀಕ ೧೬ ರಂದು, ಶ್ರೀಮನ್ಮಧ್ವಶಾಸ್ತ್ರ ಪ್ರವಚನಕಾರರಾದ, ವೇದಮೂರ್ತಿಗಳಾದಂಥ, ರಾಜಮಾನ್ಯ ರಾಜಶ್ರೀ ಉಡುಪಿ ಪೇಜಾವರ ಮಠದ ಪಾರುಪತ್ಯಗಾರ ವಿಠಲಾಚಾರ್ಯರಿಗೆ ಬರೆದ ಪತ್ರವೂ[೮] ಕಡತವೊಂದರಲ್ಲಿ ಲಭ್ಯವಾಗಿದೆ. ಸ್ವಾಮಿಗಳು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ತೆರಳುವಾಗ ಕಮೀಷನರ ಸಾಹೇಬರದಿಂದ ರಹದಾರಿ ಪಡೆಯುವದು ಅವಶ್ಯವಾಗಿತ್ತೆಂದು ಮೇಲ್ಕಾಣಿಸಿದ ಪತ್ರದಿಂದ ಖಚಿತವಾಗುತ್ತದೆ.

ಒಟ್ಟಿನಲ್ಲಿ, ಶೃಂಗೇರಿ ಮಠದ ಕಡತಗಳಲ್ಲಿಯ ಮೇಲ್ಕಾಣಿಸಿದ, ಮೂರು ದಾಖಲೆಗಳಲ್ಲಿ ಪೇಜಾವರ ಮಠದ ಉಲ್ಲೇಖವಿರುವದು ಸುಸ್ಪಷ್ಟ. ವೈಶ್ಯ ಕೊಂಕಣಿಗರಿಗೆ ಸಂಬಂಧಿಸಿದ ಬಿನ್ನವತ್ತಳೆಯು, ಅಂದಿನ ಸಾಮಾಜಿಕ ಮತ್ತು ಧಾರ್ಮಿಕ ಕಟ್ಟುಪಾಡುಗಳು ಹೇಗಿದ್ದವೆಂಬುದನ್ನು ತಿಳಿಸುವದರ ಜೊತೆಗೆ, ಅಂದಿನ ಅರಸರು, ರಾಜ್ಯಗಳು, ಮಠಗಳು ಮತ್ತು ಶೃಂಗೇರಿ ಮಠದ ಘನತೆ ಕುರಿತೂ ನಿವೇದಿಸುತ್ತದೆ. ಉಳಿದೆರಡು ದಾಖಲೆಗಳು; ಕ್ರಮವಾಗಿ, ಶ್ರೀಮದ್ವಿಶ್ವವರ್ಯತೀರ್ಥ ಶ್ರೀ ಪಾದಂಗಳವರು, ಉಡುಪಿಗೆ ಬಂದು ಶ್ರೀ ಕೃಷ್ಣ ದೇವರ ದರ್ಶನ ಪಡೆಯುವಂತೆ, ಶೃಂಗೇರಿ ಸ್ವಾಮಿಗಳಿಗೆ ನೀಡಿದ ಆಮಂತ್ರಣ ಮತ್ತು ಶೃಂಗೇರಿ ಶ್ರೀಗಳವರ ಪ್ರಯಾಣಕ್ಕೆ ಸಂಬಂಧಿಸಿದ ರಹದಾರಿ, ಕುರಿತು ತಿಳಿಸುತ್ತವೆ. ಅದ್ವೈತ ಮತ್ತು ದ್ವೈತ ಸಿದ್ದಾಂತಗಳನ್ನು ಪ್ರತಿಪಾದಿಸುವ ಈ ಉಭಯ ಮಠಗಳ ನಡುವಿನ ಸೌಹಾರ್ದಯುತವಾದ ಸಂಬಂಧ ಚರಿತ್ರಾರ್ಹವಾದುದು. 

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಆದಿಶಂಕರರುಮುಖ್ಯವಾಗಿ ಚತುರಾಮ್ನಾಯ ಮಠಗಳನ್ನು ಸ್ಥಾಪಿಸಿದರು. ಪೂರ್ವದ ಜಗನ್ನಾಥಪುರಿಯ ಗೋವರ್ಧನ ಪೀಠಕ್ಕೆ ಹಸ್ತಾಮಲಕರು, ದಕ್ಷಿಣದ ಶೃಂಗೇರಿ ಪೀಠಕ್ಕೆ ಸುರೇಶ್ವರರು, ಪಶ್ಚಿಮದ ದ್ವಾರಕೆಯ ಶಾರದಾ ಪೀಠಕ್ಕೆ ಪದ್ಮಪಾದರು ಮತ್ತು ಉತ್ತರದ ಬದರಿಕಾಶ್ರಮದ ಜ್ಯೋತಿರ್ಮಠಕ್ಕೆ ತೋಟಕರನ್ನು ಆದಿಶಂಕರರು ಗುರುಗಳನ್ನಾಗಿ ನೇಮಿಸಿದರು.

೨. 'ಕಡತ' ಇಲ್ಲವೆ 'ಕಡಿತ' ವು ಪುಸ್ತಕರೂಪದಲ್ಲಿ ಮಡಿಚಿದ ಉದ್ದನೆಯ ದಪ್ಪ ಕಪ್ಪು ಬಟ್ಟೆಯಾಗಿದ್ದು, ಇದರ ಮೇಲೆ ಸೀಸದಂಥ ಬಳಪದ ಕಲ್ಲಿನಿಂದ ಬರೆಯಲಾಗುತ್ತಿತ್ತು. ಹೆಚ್ಚಿನ ಮಾಹಿತಿಗಾಗಿ ಲೇಖಕರ **ಕನ್ನಡದಲ್ಲಿ ಕಡತಗಳು**, (೧೯೯೭), ಕನ್ನಡ ಸಾಹಿತ್ಯ ಪರಿಷತ್ತು,ಬೆಂಗಳೂರು, ನೋಡಿರಿ.

೩. ಕ್ರಿ. ಶ. ೧೬೨೯.

೪. ಕಾಲ : ಕ್ರಿ. ಶ. ೧೫೮೨-೧೬೨೯.

೫. ದಾಖಲೆಯಲ್ಲಿ ನಮೂದಿಸಲಾದ ವಿಭವ ಸಂವತ್ಸರವು (ಕ್ರಿ. ಶ.೧೬೨೯), ಶಂಕರಭಾರತೀ ಸ್ವಾಮಿಗಳ ಕಾಲಕ್ಕೆ (ಕ್ರಿ. ಶ. ೧೪೪೮-೧೪೫೪) ಸರಿಹೊಂದುವದಿಲ್ಲ. ಪೀಠದಲ್ಲಿ ೨೫ನೆಯವರಾದ ಪ್ರಥಮ ಶ್ರೀ ಸಚ್ಚಿದಾನಂದ ಭಾರತೀಗಳು (ಕ್ರಿ. ಶ. ೧೬೨೨-೧೬೬೩), ವಿಭವ ಸಂವತ್ಸರದಲ್ಲಿ ಶೃಂಗೇರಿ ಪೀಠದಲ್ಲಿದ್ದರು. ದಾಖಲೆಯಲ್ಲಿಯ ಉಳಿದೆಲ್ಲ ಅಂಶಗಳೂ ಐತಿಹಾಸಿಕವಾಗಿ ಸತ್ಯವಾಗಿರುವದರಿಂದ, ಶೃಂಗೇರಿ ಮಠದ ಗುರುಪರಂಪರೆಯ ಪುನಃ ಪರಿಶೀಲನೆ ಅಗತ್ಯವೆಂದು ತೋರುತ್ತದೆ.

೬. ಕ (ಕಡತ) ೨೫, ದಾ(ಧಾಖಲೆ) ೫೨.

೭. ಕ. ೫೭, ದಾ. ೩೫, (ಕ್ರಿ. ಶ ೧೮೪೨).

೮. ಕ. ೪೦, ದಾ. ೧೭, (ಕ್ರಿ. ಶ. ೧೮೪೨).

೯. ಶೃಂಗೇರಿ ಮಠದ ಚರಿತ್ರೆಯನ್ನು ತಿಳಿಸುವ ಲೇಖಕರ ಎ **ಹಿಸ್ಟೊರಿ ಆಫ್ ಶೃಂಗೇರಿ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ,ಪ್ರಥಮ ಆವೃತ್ತಿ, ದ್ವಿತೀಯ ಆವೃತ್ತಿ; ಮತ್ತು **ಶೃಂಗೇರಿ ಧರ್ಮಸಂಸ್ಥಾನ**; ಶೃಂಗೇರಿ ಮಠ, ೧೯೮೩, ಓದಿ. ಪೇಜಾವರ ಮಠದ ವ್ಯವಸ್ಥಿತವಾದ ಚರಿತ್ರೆ ಬರೆಯಲು, ಮುಖ್ಯವಾಗಿ, ಆ ಮಠಕ್ಕೆ ಸಂಬಂಧಿಸಿದ ಚಾರಿತ್ರಿಕ ದಾಖಲೆಗಳ ಶೋಧನೆ ಅಗತ್ಯ. ಪೇಜಾವರ ಮತ್ತು ಶೃಂಗೇರಿ ಮಠಗಳ ನಡುವಿನ ಸೌಹಾರ್ದಯುತವಾದ ಹಿತ ಸಂಬಂಧವನ್ನು ಅರಿತ ಹಿನ್ನೆಲೆಯಲ್ಲಿ, ಇಂದಿನ ಶ್ರೀ ಶ್ರೀ ವಿಶ್ವೇಶತೀರ್ಥರು ಅದ್ವೈತ ಪೀಠಗಳೊಂದಿಗೆ ಇರಿಸಿಕೊಂಡ ಸೌಹಾರ್ದಯುತವಾದ ಹಿತಸಂಬಂಧವನ್ನು ತಿಳಿಯಲು ಲೇಖಕರ 'ಶೃಂಗೇರಿ ಧರ್ಮ ಸಂಸ್ಥಾನ', ಶೃಂಗೇರಿ ಮಠ, ೧೯೮೩, ಓದಿರಿ.

ಡಾ॥ ಕರುಣ ಮಂಗಳವೇಢೆ*

# ಬಾದಾಮಿ ಕುಬ್ಜರು

ಬಾದಾಮಿ ಚಲುಕ್ಯರ ಕಾಲದ ಶಿಲ್ಪಗಳಲ್ಲಿ ವೈವಿಧ್ಯತೆ ಇದೆ. ಸಾಮಾನ್ಯ ಪ್ರಮಾಣದಿಂದ ಅತಿ ಎತ್ತರವಾದ, ಅತಿಚಿಕ್ಕದಾದ ಶಿಲ್ಪಗಳ ರಚನೆ ಗಮನವನ್ನು ಸೆಳೆಯುತ್ತದೆ. ಈ ಬಾದಾಮಿ ಚಲುಕ್ಯರ ಕಾಲದ ಶಿಲ್ಪಗಳನ್ನು ಮೂರು ರೀತಿಯಾಗಿ ವಿಂಗಡಿಸಬಹುದು.

೧. **ಸಾಮಾನ್ಯ ಎತ್ತರದ ಶಿಲ್ಪಗಳು** - ಮನುಷ್ಯನ ಸಮಾನ ಅಳತೆ

೨. **ಅತಿ ಎತ್ತರವಾದ ಶಿಲ್ಪಗಳು** - ಮನುಷ್ಯನಿಗಿಂತ ಅತಿ ಎತ್ತರದ ಅಳತೆ

೩. **ಅತಿ ಕುಳ್ಳಗಿನ ಶಿಲ್ಪಗಳು** - ಮನುಷ್ಯನಿಗಿಂತ ಅತಿ ಚಿಕ್ಕ ಅಳತೆ.

೧. ಸಾಮಾನ್ಯ ಎತ್ತರದ ಶಿಲ್ಪಗಳ ವರ್ಗದಲ್ಲಿ ನೃತ್ಯಮೂರ್ತಿ ಶಿವ, ದೇವಿಯರು, ಇತರ ದೇವತೆಗಳು, ಸಪ್ತ ಮಾತೃಕೆಯರು, ಇಂದ್ರ, ಗಂಧರ್ವರು ಮತ್ತು ದ್ವಾರ ಪಾಲಕರನ್ನು ಹೆಸರಿಸಬಹುದು.

೨. ಅತಿ ಎತ್ತರವಾದ ಶಿಲ್ಪಗಳ ವರ್ಗದಲ್ಲಿ ವಿಷ್ಣುವಿಗೆ ಸಂಬಂಧಿಸಿದಂತೆ ದಶಾವತಾರದ ಕೆಲವು ಅವತಾರಗಳನ್ನು ಚಿತ್ರಿಸಿರುವುದನ್ನು ಕಾಣಬಹುದು. ಈ ರೀತಿಯ ಶಿಲ್ಪಗಳು ಹೆಚ್ಚಾಗಿ ಬಾದಾಮಿ ಗುಹೆ ೧, ೨, ೩ ರಲ್ಲಿ ಕಾಣಬಹುದು. ಬಾದಾಮಿ ಚಲುಕ್ಯರ ಕಾಲದಲ್ಲಿ ಕಟ್ಟಿದ ದೇವಾಲಯಗಳಲ್ಲಿ ಇಂತಹ ಬೃಹದಾಕಾರದ ಶಿಲ್ಪಗಳು ಕಂಡುಬರುವುದಿಲ್ಲ. ವಿಷ್ಣುವಿನ ಅವತಾರಗಳನ್ನು ತೋರಿಸುವಾಗ ಅತಿ ಎತ್ತರದಲ್ಲಿ ಚಿತ್ರಿಸಿರುವ ಈ ದಶಾವತಾರ ಶಿಲ್ಪಗಳು (ವರಾಹ, ತ್ರಿವಿಕ್ರಮ, ನರಸಿಂಹ) ದುಷ್ಟ ಶಿಕ್ಷಣ, ಶಿಷ್ಟ ರಕ್ಷಣದ ಹಿನ್ನೆಲೆಯಲ್ಲಿ ಮನುಷ್ಯನಿಗಿಂತ ಒಂದು ಅತೀತವಾದ ಶಕ್ತಿಯಿಂದಲೇ ಈ ಕಾರ್ಯವು ಸಾಧ್ಯ ಎಂಬ ತತ್ವವನ್ನು ಸಾರಿ ಹೇಳುವಂತೆ ಕಾಣುತ್ತದೆ. ರಾವಳಫಡಿ ಗುಹೆಯಲ್ಲಿ ಶಿವನ ನೃತ್ತ ಭಂಗಿ ಹಾಗೂ ಸಪ್ತಮಾತೃಕೆಯರ ಶಿಲ್ಪಗಳನ್ನು ಮನುಷ್ಯನಿಗಿಂತ ಸ್ವಲ್ಪ ಎತ್ತರವಾಗಿಯೇ ಬಿಡಿಸಲಾಗಿದೆ. ಇವುಗಳು ಸಾಮಾನ್ಯಕ್ಕಿಂತ ಸ್ವಲ್ಪ ಎತ್ತರದಲ್ಲಿ, ಅತಿ ಎತ್ತರದ ಶಿಲ್ಪಗಳಿಗಿಂತ ಕಡಿಮೆ ಪ್ರಮಾಣದಲ್ಲಿರುವುದನ್ನು ಕಾಣಬಹುದು.

೩. ಅತಿ ಚಿಕ್ಕದಾದ ಶಿಲ್ಪಗಳ ವರ್ಗದಲ್ಲಿ ಅತೀ ಕುಳ್ಳಗಿನ ಚಿಕ್ಕದಾದ ಶಿಲ್ಪಗಳಲ್ಲಿ, ದಪ್ಪದೇಹ, ಸಾಮಾನ್ಯ ಅಳತೆಗಿಂತ ಅತೀ ಚಿಕ್ಕದಾದ ಕೈ ಕಾಲುಗಳು, ಅಗಲವಾದ ಮುಖ, ಮುಗ್ಧ ಮುಖಭಾವವನ್ನು ಕಾಣಬಹುದು. ಈ ರೀತಿಯ ಶಿಲ್ಪಗಳನ್ನು 'ಕುಬ್ಜಶಿಲ್ಪಗಳು' ಅಥವಾ 'ಗಣಗಳು' ಎಂದು ಕರೆಯಲಾಗಿದೆ. ಕೆಲವೊಮ್ಮೆ 'ಯಕ್ಷರು' ಎಂದು ಸಂಬೋಧಿಸಿರುವುದೂ ಇದೆ. ಸಾಮಾನ್ಯವಾಗಿ ಜೈನ ತೀರ್ಥಂಕರ ಶಿಲ್ಪಗಳ ಅಕ್ಕಪಕ್ಕದಲ್ಲಿ ಬರುವ ಶಿಲ್ಪಗಳನ್ನು 'ಯಕ್ಷರು' ಎಂದು ಕರೆಯಲಾಗುತ್ತದೆ. ಕುಬ್ಜ ಶಿಲ್ಪಗಳಿಗೂ ಹಾಗೂ ಈ ರೀತಿಯ ಯಕ್ಷ ಶಿಲ್ಪಗಳಿಗೂ ಬಹಳ ವ್ಯತ್ಯಾಸಗಳಿರುವುದರಿಂದ ಇವುಗಳನ್ನು 'ಯಕ್ಷರು' ಎಂದು ಕರೆಯಲಾಗುವುದಿಲ್ಲ.

**ಕುಬ್ಜರು** : ಬಾದಾಮಿ ಚಲುಕ್ಯರ ಕಾಲದ ವಾಸ್ತುಶೈಲಿಯಲ್ಲಿ ಇವರು ಗುಹಾ ದೇವಾಲಯದ ಅಧಿಷ್ಠಾನದ ಪಟ್ಟಿಕೆ, ದೇವತಾ ಶಿಲ್ಪಗಳ ಅಡಿ ಪಟ್ಟಿಕೆಗಳಲ್ಲಿ, ದೇವಾಲಯಗಳ ಕಂಬಗಳ ಮಣಿ ಪಟ್ಟಿಕೆಗಳಲ್ಲಿ ಮುಖಮಂಟಪ ಛತ್ತಿನ ಸುತ್ತಲಿನ ಪಟ್ಟಿಕೆಗಳಲ್ಲಿ, ಗರ್ಭಗೃಹ ದ್ವಾರದ ಪಟ್ಟಿಕೆಗಳಲ್ಲಿ ಕಂಡು ಬರುತ್ತಾರೆ. ಈ ರೀತಿಯ ಪಟ್ಟಿಕೆಗಳಲ್ಲಿ ಸಾಲಾಗಿ ಒಬ್ಬರ ಹಿಂದೆ ಒಬ್ಬರಂತೆ ಇವರನ್ನು ಚಿತ್ರಿಸಲಾಗಿದೆ. ಈ ಕುಬ್ಜ ಶಿಲ್ಪಗಳನ್ನು ನೋಡಿದ ಕ್ಷಣ ಪುಟ್ಟ ಮಕ್ಕಳನ್ನು ಕಂಡಂತೆ ಭಾಸವಾಗುತ್ತದೆ. ಮುಖದಲ್ಲಿನ ಮುಗ್ಧ ನಗು ನೋಡುಗರ ಮನಸ್ಸನ್ನು ಸೆಳೆಯುತ್ತದೆ.

ಸುಮಾರು ಕ್ರಿ. ಶ. ಐದನೇ ಶತಮಾನದಿಂದ ಕ್ರಿ. ಶ. ಒಂಭತ್ತನೇ ಶತಮಾನದ ವರೆಗೆ ದಕ್ಷಿಣಭಾರತದ ಶಿಲ್ಪಗಳಲ್ಲಿ ಮುಖ್ಯವಾಗಿ ಉತ್ತರ ಕರ್ನಾಟಕದ ಚಲುಕ್ಯರ ಆಳ್ವಿಕೆಯ ಕಾಲದ ವಾಸ್ತುಶೈಲಿಯಲ್ಲಿ ಹಾಗೂ ಮಹಾಬಲಿಪುರದ (ಪಲ್ಲವರ ಕಾಲದ) ದೇವಾಲಯಗಳ ವಾಸ್ತುಶೈಲಿಯಲ್ಲಿ ಕುಬ್ಜರು ಕಂಡುಬರುತ್ತಾರೆ.

***ವೇಷಭೂಷಣ** :* ಸಣ್ಣದಾದ ಲಂಗೋಟಿಯಂತಹ ವಸ್ತ್ರವನ್ನು ಸೊಂಟದಿಂದ ಕೆಳಗೆ ಕಚ್ಚೆಯಾಗಿ ಕಟ್ಟಿಕೊಂಡಿರುವುದು ಕಂಡುಬರುತ್ತದೆ. ಕೈಯ್ಯಲ್ಲಿ ಕಡಗ, ಕಾಲಲ್ಲಿ ಕಡಗ ಕೆಲವೊಮ್ಮೆ ಹೊಟ್ಟೆಯ ಮೇಲೆ ಇಳಿಬಿದ್ದಿರುವಂತೆ, ಭಾರದ ಹೊಟ್ಟೆಯನ್ನು ಎತ್ತಿ ಹಿಡಿದು ಕಟ್ಟಿರುವಂತೆ ಸೊಂಟದ ಪಟ್ಟಿಯನ್ನು ಕಟ್ಟಿಕೊಂಡಿರುವಂತೆ ಚಿತ್ರಿಸಲಾಗಿದೆ. ದುಂಡಾದ ಕೊರಳಲ್ಲಿ ಅಡ್ಡಿಕೆಯಂತಹ ಆಭರಣ. ಅಗಲವಾದ, ನೀಳವಾದ ಬಳೆಯಂತಹ ಕಿವಿಯೋಲೆ ಹಾಕಿರುತ್ತಾರೆ. ತಲೆಗೂದಲು ಹೆಚ್ಚು ಒತ್ತೊತ್ತಾಗಿ ಗುಂಗುರು ಕೂದಲನ್ನು ಕೆಲವೊಮ್ಮೆ ಇಳಿಬಿಟ್ಟ ಹಾಗೆ

* ನಂ. ೮೬೬, ೧೪ನೇ ಕ್ರಾಸ್, ಮಹಾಲಕ್ಷ್ಮಿ ಬಡಾವಣೆ, ಬೆಂಗಳೂರು - ೫೬೦ ೦೮೬



ಮಧ್ಯೆ ಬೈತಲೆ ತೆಗೆದು ಎರಡು ಭಾಗ ಮಾಡಿ ಇಳಿ ಬಿಟ್ಟಂತೆ, ಎಲ್ಲ ಕೂದಲು ಸೇರಿಸಿ ನೆತ್ತಿಯ ಮೇಲೆ ಜಡೆಯನ್ನು ಕಟ್ಟಿದಂತೆ ಇರುತ್ತದೆ. ಅಗಲವಾದ ದುಂಡಾದ ಮುಖ ಅಗಲವಾದ ಕಣ್ಣು, ತುಂಬಿದ ಕಪೋತ, ಅಗಲವಾದ ಹಾಗು ಕೆಲವೊಮ್ಮೆ ನೀಳವಾದ ಕಿವಿ, ದಪ್ಪನೆಯ ಕೆಳತುಟಿ, ಮುಖದಲ್ಲಿ ಮುಗ್ಧ ಮಂದಹಾಸ ಈ ಕುಬ್ಜರ ಲಕ್ಷಣಗಳಾಗಿವೆ. ಕೈ ಕಾಲುಗಳನ್ನು ಪುಟ್ಟದಾಗಿ ಹಾಗೂ ಮುಖ ಮತ್ತು ಹೊಟ್ಟೆಗಳನ್ನು ಎದ್ದು ಕಾಣುವಂತೆ ಚಿತ್ರಿಸಿರುವುದು ಈ ಶಿಲ್ಪಗಳ ವೈಶಿಷ್ಟ್ಯವಾಗಿದೆ.

***ಕುಬ್ಜ - ಪದದ ಅರ್ಥ :*** ಕನ್ನಡ ನಿಘಂಟಿನಲ್ಲಿ 'ಕುಬ್ಜ' ಪದಕ್ಕೆ ಕುಬುಜ (ನಾ) ಕುಬ್ಜ : ಕುಳ್ಳ, ಗಿಡ್ಡ, ಕುಬುಜ, ವಾಮನ, ವಿಕೃತಿ ಎಂದೂ, ಕುಬುಜಿಸಿ (ಕ್ರಿ): ದೇಹವನ್ನು ಸಂಕೋಚಗೊಳಿಸಿ ಕುಳ್ಳುಮಾಡು, ಬಾಗು ಎಂಬ ಅರ್ಥಗಳು ದೊರಕುತ್ತವೆ.[೧] ದೊರಕುವ ಈ ಅರ್ಥಗಳ ಹಿನ್ನೆಲೆಯಲ್ಲಿ ಬಾದಾಮಿ ಚಲುಕ್ಯರ ಕಾಲದ ಶಿಲ್ಪಿಗಳು ಈ ವಿಶಿಷ್ಟ ಶಿಲ್ಪಗಳನ್ನು ಬೇಕೆಂದೇ ದೇಹವನ್ನು ಸಂಕೋಚಗೊಳಿಸಿ, ಕುಳ್ಳುಮಾಡಿ ಚಿತ್ರಿಸಿದ್ದಾರೆ ಎಂದು ಹೇಳಬಹುದು. ಶಿಲ್ಪ ಶಾಸ್ತ್ರದಲ್ಲಿ ಈ ರೀತಿಯ ಶಿಲ್ಪಗಳನ್ನು ಗಣಗಳು [*Demigods*] ಎಂದು ಕರೆಯಲಾಗುತ್ತದೆ. ಟಿ. ಎ. ಗೋಪಿನಾಥರಾವ್ ಅವರು 'ಎಲಿಮೆಂಟ್ಸ್ ಆಫ್ ಹಿಂದು ಐಕೊನೊಗ್ರಫಿ' ಗ್ರಂಥದಲ್ಲಿ ಗಣಗಳ ಬಗ್ಗೆ ಈ ರೀತಿಯಾಗಿ ಹೇಳುತ್ತಾರೆ: "ವೇದಕಾಲದಲ್ಲಿ ಇವರು ಭೂಮಿತಾಯಿಯ ಮಕ್ಕಳು. ಇವರನ್ನು ಪ್ರಶ್ನಿ ಎಂದೂ, ರುದ್ರರು ಎಂದೂ, ಸಮುದ್ರರಾಜನ ಮಕ್ಕಳು ಎಂದೂ ಕರೆಯುತ್ತಾರೆ. ಇವರು ಇಂದ್ರನ ಮಕ್ಕಳಂತೆ ವರ್ತಿಸಬೇಕು ಎಂದು ಹೇಳಲಾಗುತ್ತದೆ. ಇವರು ಮೋಡಗಳನ್ನು ಸಂಘಟಿಸಿ ಮಳೆತರಿಸಲು ಇಂದ್ರನ ಸಹಾಯಕರಾಗಿ ಕೆಲಸಮಾಡುವವರು ಎಂದೂ ಹೇಳಲಾಗುತ್ತದೆ,[೨] ಎಂದು ತಿಳಿಸುತ್ತಾರೆ. ಡಾ।। ಚೂಡಾಮಣಿ ನಂದಗೋಪಾಲ್ ಅವರು 'ಶಿವನ ಅನುಚರರು, ಸಹಾಯಕರನ್ನು ಗಣಗಳು ಎಂದು ಕರೆಯುತ್ತಾರೆ' ಎಂದು ತಿಳಿಸುತ್ತಾ[೩] ಮುಂದೆ ಮುಖ್ಯ ಮೂರ್ತಿ ಶಿಲ್ಪಗಳಲ್ಲಿ ಚಿತ್ರಿಸಲಾಗದ ಕೆಲವು ಕರಣಗಳನ್ನು, ಅಂಗಹಾರ ಗಳನ್ನು, ವ್ಯಾಯಾಮದ ರೀತಿಯಲ್ಲಿ ಬರುವ ನೃತ್ತಭಂಗಿಗಳನ್ನು ಈ ಗಣಗಳ ಸಹಾಯಕವಾಗಿ ಹೇಳಲು ಪ್ರಯತ್ನಿಸಿರುವುದನ್ನು ಕಾಣಬಹುದು ಎಂದು ಅಭಿಪ್ರಾಯ ಪಡುತ್ತಾರೆ.[೪] ಡಾ।। ಅ. ಸುಂದರ ಅವರು ಕುಬ್ಜರ ಬಗ್ಗೆ ಹೀಗೆ ಹೇಳುತ್ತಾರೆ.

*"The humurous Kubja - Ganas are Sculptured in the plinth level or on the Pitha of the wall Sculptured in all the Vishnu structural temples at Badami. But in the upper most zones just below the Kapota of only two or three structural temples in the other two places, these Ganas in*



*Badami are found indulging in mischiefs or acrobatic activities or playing various musical instruments while the one in the other temples are considerably different in the Style of depiction.*[೫]

ಡಾ।। ಅ. ಸುಂದರ ಅವರ ಈ ಅಭಿಪ್ರಾಯವನ್ನು ಒಪ್ಪಲು ಕಷ್ಟವಾಗುತ್ತದೆ. ಬಾದಾಮಿ ಚಲುಕ್ಯರಿಗೆ ಸಂಬಂಧಪಟ್ಟ ಎಲ್ಲ ದೇವಾಲಯಗಳ ಅಧಿಷ್ಠಾನದಿಂದ ಗರ್ಭದ್ವಾರದವರೆಗಿನ ಪಟ್ಟಿಕೆಗಳಲ್ಲಿ ಕುಬ್ಜರನ್ನು ಚಿತ್ರಿಸಿರುವುದನ್ನು ಕಾಣಬಹುದು. ಒಂದು ದೇವಾಲಯದಿಂದ ಇನ್ನೊಂದು ದೇವಾಲಯದಲ್ಲಿ ಚಿತ್ರಿಸಿರುವ ಶೈಲಿಯಲ್ಲಿ ವೈಶಿಷ್ಟ್ಯವಿರುವುದು ಕಂಡುಬರುತ್ತದೆ. ಕಾಲಾನುಕ್ರಮದಲ್ಲಿ ಬಾದಾಮಿ ಚಲುಕ್ಯರ ಕಾಲದ ದೇವಾಲಯಗಳನ್ನು ಗಮನಿಸಿದಾಗ ಈ ವಿಷಯವು ಸ್ಪಷ್ಟವಾಗುತ್ತದೆ.

ಬಾದಾಮಿ ಚಲುಕ್ಯರ ಪೂರ್ವಕ್ಕೆ ಇದ್ದಿರಬಹುದೆಂದು ನಂಬಲಾಗಿರುವ ಗೌಡರ ಗುಡಿ (ಕ್ರಿ. ಶ. ೫ ನೇ ಶತಮಾನ) ಯ ದ್ವಾರ ಬಂಧದ ಮೇಲೆ, ಛತ್ತಿನ ಮಣಿ ಬಂಧದ ಪಟ್ಟಿಕೆಯಲ್ಲಿ ಕುಬ್ಜರ ಶಿಲ್ಪಗಳಿದ್ದು ಅವು ಕೆಲವು ನರ್ತನ ಭಂಗಿ ಹಾಗೂ ಕರಣಗಳಲ್ಲಿರುವಂತೆ ತೋರಿ ಬರುತ್ತವೆ. ವಾದ್ಯವೃಂದದವರು ಇರುವುದು ಕಂಡುಬರುತ್ತದೆ. ದೇವಾಲಯದ ಕಲ್ಲುಗಳು ಬಹಳ ಮಾಸಿರುವುದರಿಂದ ಸ್ಪಷ್ಟವಾಗಿ ಕಾಣುವುದಿಲ್ಲ. ಕಾಲದ ದೃಷ್ಟಿಯಿಂದ ಕ್ರಿ. ಶ. ಐದನೇ ಶತಮಾನದಲ್ಲಿ ನಿರ್ಮಾಣವಾಗಿರುವ ಲಾಡಖಾನ ದೇವಾಲಯದ ನವರಂಗ ಕಂಬಗಳಲ್ಲಿ ಕುಬ್ಜರನ್ನು ಕಾಣಬಹುದು. ಗರ್ಭಗೃಹದ ಎಡಭಾಗದ ಕಂಬದಲ್ಲಿ ೨ ಕುಬ್ಜರ ಚಿತ್ರಗಳಿವೆ. ಎಡದಿಂದ ಮೊದಲನೆಯವನು 'ಊರ್ಧ್ವಕ' ವಾದ್ಯವನ್ನು ನುಡಿಸುತ್ತಿದ್ದಾನೆ. ಇದನ್ನು ಶಾಸ್ತ್ರೀಯ ನೃತ್ಯದಲ್ಲಿ ಮುಖ್ಯವಾಗಿ ತಾಂಡವ ನೃತ್ಯಕ್ಕೆ ಹೆಚ್ಚಾಗಿ ಬಳಸಲಾಗುತ್ತಿತ್ತು - ಎಂದು ಡಾ।। ಚೂಡಾಮಣಿ ನಂದಗೋಪಾಲ್ ತಿಳಿಸುತ್ತಾರೆ.[೬] ಬಲಭಾಗದ ಇನ್ನೊಬ್ಬ ಕುಬ್ಜನು ಸುಶಿರವಾದ್ಯವನ್ನು ನುಡಿಸುತ್ತಿದ್ದಾನೆ. ಮಧ್ಯದಲ್ಲಿನ 'ನರ್ತಕ', ಗಜಕ್ರೀಡಿತ ಕರಣದಲ್ಲಿರುವಂತೆ ಭಾಸವಾಗುತ್ತದೆ. ಈ ಮೂರು ಕುಬ್ಜರು ತಮ್ಮ ಕಲೆಗಳನ್ನು ಪ್ರಸ್ತುತ ಪಡಿಸುವಲ್ಲಿ ತಲ್ಲೀನರಾಗಿರುವಂತೆ ಕಂಡು ಬರುತ್ತದೆ. ಇವು ಬಹಳ ವೈಶಿಷ್ಟ್ಯ ಪೂರ್ಣವಾದ ಶಿಲ್ಪಗಳಾಗಿವೆ ಎಂದು ಹೇಳಬಹುದು.

ಲಾಡಖಾನ ದೇವಾಲಯದ ಕಂಬಗಳಲ್ಲಿ ನರ್ತನಕ್ಕೆ ಸಂಬಂಧಿಸಿದಂತೆ ಕಂಡುಬರುವ ವಿವರಣೆಗಳಿಂದ ಇಲ್ಲಿ 'ಪ್ರದರ್ಶನ ನೃತ್ಯವು' ಪ್ರಸ್ತುತವಾಗುತ್ತಿತ್ತು ಎಂದು ಊಹಿಸಬಹುದಾಗಿದೆ.

***ಬಾದಾಮಿ ಗುಹಾ ದೇವಾಲಯಗಳು :*** ಬಾದಾಮಿಯ ಕುಬ್ಜರು ಎಂದಾಕ್ಷಣ ಗುಹಾದೇವಾಲಯದ ಅಧಿಷ್ಠಾನದ ಪಟ್ಟಿಕೆಗಳಲ್ಲಿನ ಶಿಲ್ಪಗಳು ನೆನಪಿಗೆ ಬರುತ್ತವೆ. ಬಾದಾಮಿ ಗುಹಾದೇವಾಲಯಗಳ ಕುಬ್ಜರಲ್ಲಿ ಕಾಣುವ ವೈಶಿಷ್ಟ್ಯತೆ, ಮುಗ್ಧಭಾವಗಳು ಕಟ್ಟಿದ ದೇವಾಲಯಗಳ ಕುಬ್ಜರಲ್ಲಿ ಕಂಡುಬರುವುದಿಲ್ಲ.

ಬಾದಾಮಿ ಗುಹೆ ೧ ರ ಕಾಲ ಸುಮಾರು ಕ್ರಿ. ಶ. ೫೦೦ ರಿಂದ ೫೪೦ ಎಂದು ನಿರ್ಧರಿಸಲಾಗಿದೆ. ಈ ಗುಹಾದೇವಾಲಯದ ಮುಖಮಂಟಪದ ಒಳಗೂಡುಗಳಲ್ಲಿ ಮಹಿಷಮರ್ದಿನಿ, ಕಾರ್ತಿಕೇಯ, ಬಲಗಡೆಗೆ ಗಣಪತಿ (ವಾತಾಪಿ) ಶಿಲ್ಪಗಳಿವೆ. ಈ ದೇವತೆಗಳ ಶಿಲ್ಪದ ಅಡಿಯಲ್ಲಿ ಕುಬ್ಜರನ್ನು ಚಿತ್ರಿಸಲಾಗಿದೆ. ಗುಹಾದೇವಾಲಯದ ಅಧಿಷ್ಠಾನದ ಪಟ್ಟಿಕೆಗಳಲ್ಲಿ ಕುಬ್ಜರನ್ನು ಚಿತ್ರಿಸಲಾಗಿದೆ. ಇಲ್ಲಿನ ಕುಬ್ಜರು ವಿವಿಧ ನರ್ತನ ಭಂಗಿಗಳಲ್ಲಿರುವುದು ತಿಳಿದರೂ ಕಲ್ಲಿನ ಸವೆತದಿಂದಾಗಿ ಸ್ಪಷ್ಟವಾಗಿ, ಕಾಣುವುದಿಲ್ಲ. ಮಹಿಷಾಸುರ ಮರ್ದಿನಿಯ ಕೆಳಗೆ ಒಟ್ಟು ಒಂಭತ್ತು ಜನ ಕುಬ್ಜರಿದ್ದಾರೆ. ಇಬ್ಬರು ಕುಬ್ಜರನ್ನು ಹೊರತುಪಡಿಸಿ ಉಳಿದೆಲ್ಲ ಕುಬ್ಜರನ್ನು ವಿವಿಧ ಕರಣಗಳಲ್ಲಿ ಚಿತ್ರಿಸಲಾಗಿದೆ. ವಿಷ್ಣು ಶಿಲ್ಪದ ಕೆಳಗೆ ಒಟ್ಟು ೮ ಜನ ಕುಬ್ಜರನ್ನು ವಿವಿಧ ಕರಣಗಳಲ್ಲಿ ಚಿತ್ರಿಸಲಾಗಿದೆ. ೮ ಜನರಲ್ಲಿ ಮೂವರು ವಾದ್ಯಗಳನ್ನು ನುಡಿಸುವುದನ್ನು ಕಾಣಬಹುದಾಗಿದೆ. ಬಾದಾಮಿ ಗುಹೆ ೧ ರಲ್ಲಿನ ಕೆಲವು ಕುಬ್ಜರ ಮುಖಭಾವವು ಬಹಳ ಗಂಭೀರವಾಗಿರುವಂತೆ ತೋರಿ ಬರುತ್ತದೆ. ಈ ಗುಹೆಯ ಹೆಚ್ಚಿನ ಶಿಲ್ಪಗಳು ತ್ರುಟಿತವಾಗಿರುವುದರಿಂದ ಹೆಚ್ಚಿನ ವಿವರಗಳು ತಿಳಿದು ಬರುವುದಿಲ್ಲ. ಇಲ್ಲಿನ ಕುಬ್ಜರ ನೃತ್ಯ ಭಂಗಿಗಳು ಕರಣಗಳಲ್ಲಿದ್ದರೂ ಕೆಲವೊಮ್ಮೆ ಒಂದುಕರಣದಿಂದ ಇನ್ನೊಂದು ಕರಣವನ್ನು ಮಾಡಲು ಪ್ರಯತ್ನಿಸುತ್ತಿರುವಂತೆ ಕೈ ಕಾಲುಗಳು ಚಲನೆ ಇರುವುದು ಕಂಡುಬರುತ್ತದೆ.

ಬಾದಾಮಿ ಗುಹಾದೇವಾಲಯ ೨ ಕ್ರಿ. ಶ. ಆರನೆಯ ಶತಮಾನಕ್ಕೆ ನಿರ್ಮಾಣವಾಗಿರಬಹುದಾದ ವೈಷ್ಣವ ಗುಹಾ ದೇವಾಲಯ. ಈ ಗುಹಾದೇವಾಲಯದ ಅಧಿಷ್ಠಾನದ ಎರಡೂ ಭಾಗಗಳಲ್ಲಿಯೂ ಒಟ್ಟು ೧೪ ಜನ ಕುಬ್ಜರನ್ನು ಚಿತ್ರಿಸಲಾಗಿದೆ. ಈ ಕುಬ್ಜರ ನರ್ತನವು ಶಾಸ್ತ್ರೀಯವಾಗಿದ್ದು ಭರತಮುನಿ ರಚಿತ 'ನಾಟ್ಯಶಾಸ್ತ್ರ' ದಲ್ಲಿನ ಕರಣಗಳ ಸ್ಪಷ್ಟ ಭಂಗಿಗಳಾಗಿವೆ ಎಂಬುದು ಗಮನಾರ್ಹ. ಗುಹೆಯ ಬಲಭಾಗದ ಅಧಿಷ್ಠಾನದ ಎಡದಿಂದ ಮೊದಲನೆಯ ಕುಬ್ಜನು 'ನಿಕುಂಚಿತ' ಕರಣದಲ್ಲಿ, ಎರಡನೆಯ ಕುಬ್ಜನು 'ಅರ್ಧಸೂಚಿ' ಕರಣದಲ್ಲಿ, ಮೂರನೆಯ ಮತ್ತು ನಾಲ್ಕನೆಯ ಕುಬ್ಜರು 'ವೈಷ್ಣವ' (ಪುರುಷ) ಸ್ಥಾನಕದಲ್ಲಿದ್ದು ಇವರಿಬ್ಬರಲ್ಲಿ ಕ್ರಮವಾಗಿ ಒಬ್ಬನು ಘನವಾದ್ಯ ತಾಳವನ್ನು ನುಡಿಸುತ್ತಿದ್ದಾನೆ. ಇನ್ನೊಬ್ಬನು ಬಹುಷಃ ಸಂಗೀತವನ್ನು ಹಾಡುವುದರಲ್ಲಿ ಮಗ್ನನಾಗಿದ್ದಾನೆ. ಐದನೆಯ ಕುಬ್ಜನು 'ಲಲಿತ'' ಕರಣದಲ್ಲಿ, ಆರನೆಯ ಕುಬ್ಜನು 'ವೈಷ್ಣವ' ಸ್ಥಾನಕದಲ್ಲಿ, ಏಳನೆಯ ಕುಬ್ಜನು 'ಭುಜಂಗ ತ್ರಸ್ತರೇಚಿತ' ಕರಣವನ್ನು ಮಾಡಲು ಚಲನೆಯಲ್ಲಿರುವಂತೆ ಕಂಡುಬರುತ್ತದೆ. ಇದು 'ಚತುರ' ಕರಣವೂ ಆಗಿರುವ ಸಾಧ್ಯತೆಗಳಿವೆ. ಒಂಭತ್ತನೆಯ ಕುಬ್ಜನು 'ಭುಜಂಗ

ತ್ರಾಸಿತ' ಕರಣದಲ್ಲಿ, ಹತ್ತನೆಯ ಕುಬ್ಜನು 'ಅತಿಕ್ರಾಂತ' ಕರಣದಲ್ಲಿ, ಹನ್ನೊಂದನೆಯ ಕುಬ್ಜನು ಕುಂಚಿತ ಕರಣದಲ್ಲಿದ್ದು ಬಲಭುಜದ ಮೇಲೆ ದರ್ಧುರವಾದ್ಯವನ್ನು ಹಿಡಿದಿದ್ದಾನೆ. ಹನ್ನೆರಡನೆಯ ಕುಬ್ಜನು 'ಭುಜಂಗತ್ರಾಸಿತ' ಕರಣದಲ್ಲಿಯು ಹದಿಮೂರನೆಯ ಕುಬ್ಜನು 'ನಿವೃತ್ತ' ಕರಣವನ್ನು ಮಾಡಲು ಮಂಡಿಯೂರಿ ಕುಳಿತುಕೊಳ್ಳುವ ಪ್ರಯತ್ನದಲ್ಲಿರುವಂತೆಯೂ (ಇಲ್ಲಿ ಕುಬ್ಜನ ಎಡಭಾಗ ಸ್ಪಷ್ಟವಾಗಿ ತಿಳಿದು ಬರುವುದಿಲ್ಲ) ಹದಿನಾಲ್ಕನೆಯ ಕುಬ್ಜನು 'ವಿವರ್ತಿತಕ' ಕರಣದಲ್ಲಿ ಹೀಗೆ ೧೪ ಜನ ಕುಬ್ಜರು ವಿವಿಧ ಕರಣಗಳಲ್ಲಿ ಚಿತ್ರಿತರಾಗಿದ್ದಾರೆ.

ಎರಡನೇ ಗುಹಾದೇವಾಲಯದ ಎಡಭಾಗದ ಅಧಿಷ್ಠಾನದಲ್ಲಿ ಎಡಭಾಗದಿಂದ ಮೊದಲನೆಯ ಕುಬ್ಜನಭಂಗಿ ತಿಳಿದು ಬರುವುದಿಲ್ಲ. ಎರಡನೆಯ ಕುಬ್ಜನು ಅರ್ಧ ಸೂಚಿ ಕರಣದಲ್ಲಿ, ಮೂರನೆಯ ಕುಬ್ಜನು ತಂತಿವಾದ್ಯವನ್ನು ನುಡಿಸುತ್ತಿರುವಂತೆಯೂ, ನಾಲ್ಕನೆಯ ಕುಬ್ಜನು ಬಹುಶಃ ಕೊಂಬು ಎಂಬ ಸುಶಿರ ವಾದ್ಯವನ್ನು ನುಡಿಸುತ್ತಿರುವಂತೆಯೂ, ಐದನೆಯ ಕುಬ್ಜನು ಚರ್ಮವಾದ್ಯವನ್ನು ನುಡಿಸುತ್ತಿರುವಂತೆಯೂ ಆರನೆಯ ಕುಬ್ಜನು ಪುರುಷ ಸ್ಥಾನಕವಾದ 'ವೈಷ್ಣವ' ಸ್ಥಾನಕದಲ್ಲಿಯೂ, ಏಳನೆಯ ಕುಬ್ಜನು 'ಚತುರ' ಕರಣದಲ್ಲಿ, ಎಂಟನೆಯ ಕುಬ್ಜನು 'ಭುಜಂಗಾಂಚಿತಕ' ಕರಣದಲ್ಲಿ ೪ ಕೈಗಳೊಡನೆ ಹಿಂದಿನ ಕೈಗಳಲ್ಲಿ ತಲೆಯಿಂದ ಮೇಲೆ ಶಂಖವನ್ನು ಮುಂದಿನ ಕೈಗಳಲ್ಲಿ ಕೆಳಮುಖ ವಾಗಿ ಹಾವುಗಳನ್ನು ಹಿಡಿದಂತೆ, ಒಂಭತ್ತನೆಯ ಕುಬ್ಜನು 'ವ್ಯಂಸಿತ' ಕರಣದಲ್ಲಿ, ಹತ್ತನೆಯ ಕುಬ್ಜನು ಏಲಕಾ ಕ್ರೀಡಿತ ಕರಣದಲ್ಲಿ ಹಾಗೂ ಕೊನೆಯ ನಾಲ್ಕು ಕುಬ್ಜರು ವಾದ್ಯಗಾರರಾಗಿ ಚಿತ್ರಿತರಾಗಿದ್ದಾರೆ. ಈ ಕುಬ್ಜರ ಮುಖಭಾವ ಸಂತೋಷದಲ್ಲಿ ರುವಂತೆ ಭಾಸವಾಗುತ್ತದೆ. ಇವರು ಕ್ರಮವಾಗಿ ತಂತಿ, ಅವನದ್ಧ, ತಂತಿ, ಘನವಾದ್ಯಗಳನ್ನು ನುಡಿಸುತ್ತಿರುವಂತೆ ಚಿತ್ರಿತರಾಗಿದ್ದಾರೆ. ಮುಖಮಂಟಪದ ಬಲಭಾಗದಲ್ಲಿ ತ್ರಿವಿಕ್ರಮನ ಪಟ್ಟಿಕೆಯಲ್ಲಿ ಆರು ಜನ ಕುಬ್ಜರು ಚಿತ್ರಿತವಾಗಿದ್ದಾರೆ. ಇಲ್ಲಿನ ಕುಬ್ಜರು ವಿವಿಧ ವಾದ್ಯಗಳನ್ನು ನುಡಿಸುವಂತಹ ವಾದ್ಯಗಾರರಾಗಿದ್ದಾರೆ. ಸೂಕ್ಷ್ಮವಾಗಿ ಗಮನಿಸಿದಾಗ ೨ನೇ ಗುಹೆಯಲ್ಲಿ ದಟ್ಟವಾದ ಗುಂಗುರು ಕೂದಲನ್ನು ಹೊಂದಿರುವಂತೆ ಚಿತ್ರಿತ ಕುಬ್ಜರು ವಾದ್ಯಗಾರರಾಗಿರುವುದು ಕಂಡುಬರುತ್ತದೆ. ಗುಹಾ ದೇವಾಲಯದ ಬಲಭಾಗಕ್ಕೆ ಪಶ್ಚಿಮಾಭಿಮುಖವಾಗಿ ವಿಷ್ಣು ದೇವತೆಯ ಕೆಳಗೆ ನಾಲ್ಕು ಜನ ಕುಬ್ಜರನ್ನು ಚಿತ್ರಿಸಲಾಗಿದೆ. ಗುಹೆಯ ಬಲಭಾಗಕ್ಕೆ ಪೂರ್ವಾಭಿಮುಖವಾಗಿ ನಿಂತಿರುವ ಮೂರ್ತಿಯ ಕೆಳಗೆ ನಾಲ್ಕುಜನ ಕುಬ್ಜರ ಮೂರ್ತಿಯ ಪೀಠವನ್ನು ಎತ್ತಿಹಿಡಿದಂತೆ ಚಿತ್ರಿತರಾಗಿದ್ದಾರೆ. ಮೂರ್ತಿಯನ್ನು ಎತ್ತಿರುವ ಭಾರಕ್ಕೆ ಕುಗ್ಗಿರುವಂತೆ ಕುಬ್ಜರ ತಲೆಗಳು ಓರೆಯಾಗಿ ಬಾಗಿವೆ. ಅವರೆಲ್ಲ ವಿವಿಧ ಕರಣಗಳಲ್ಲಿ ಚಿತ್ರಿತರಾಗಿದ್ದಾರೆ. ಬಾದಾಮಿ ೨ನೇ ಗುಹಾದೇವಾಲಯದ ಕುಬ್ಜರನ್ನು ಹೆಚ್ಚು ಶಾಸ್ತ್ರಬದ್ಧವಾಗಿ ವಿವಿಧ ಕರಣಗಳಲ್ಲಿ ಚಿತ್ರಿಸಲಾಗಿದೆ.

ಮೂರನೆಯ ಗುಹಾದೇವಾಲಯವು ವಾಸ್ತುಶೈಲಿಯ ಹಿನ್ನೆಲೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದಿದೆ. ಕ್ರಿ. ಶ. ೫೭೮ರಲ್ಲಿ ಬಾದಾಮಿ ಚಲುಕ್ಯ ದೊರೆ ಮಂಗಳೀಶನಿಂದ ನಿರ್ಮಾಣವಾದ ದೇವಾಲಯವೆಂದು ಅಲ್ಲಿಯದೇ ಶಾಸನದಿಂದ ತಿಳಿದು ಬರುತ್ತದೆ.

ದೇವಾಲಯವು ಹೆಚ್ಚು ವಿಶಾಲವಾಗಿರುವುದರಿಂದ ಅಗಲವಾದ ಅಧಿಷ್ಠಾನ ಇದೆ. ಅಧಿಷ್ಠಾನದ ಪಟ್ಟಿಕೆಗಳಲ್ಲಿ ಚೌಕವಾದ ಮಾಡುಗಳನ್ನು ನಿರ್ಮಿಸಿ, ಒಂದರಲ್ಲಿ ಇಬ್ಬರು ಕುಬ್ಜರಂತೆ ಒಟ್ಟು ೧೫ ಗೂಡುಗಳಲ್ಲಿ ಒಟ್ಟು ೩೦ ಜನ ಕುಬ್ಜರನ್ನು ಚಿತ್ರಿಸಲಾಗಿದೆ. ಇಲ್ಲಿನ ಕುಬ್ಜರು ಈವರೆಗೆ ಕಂಡ ಕುಬ್ಜರಿಂದ ಬೇರೆಯಾಗಿದ್ದಾರೆ. ಈ ಕುಬ್ಜರ ಶಿಲ್ಪ ಶೈಲಿಯೇ ಬೇರೆಯಾಗಿದೆ. ಈ ಕುಬ್ಜರು ವರ್ತಕರಂತೆ ಕಂಡುಬರುತ್ತಾರೆ. ಮತ್ತು ಇವರ ನರ್ತನದಲ್ಲಿ ಶಾಸ್ತ್ರೀಯತೆ, ಖಚಿತವಾದ ಭಂಗಿಗಳನ್ನು ಕಾಣಲು ಸಾಧ್ಯವಾಗುವುದಿಲ್ಲ. ಇಲ್ಲಿನ ಕುಬ್ಜರು ನರ್ತನವನ್ನು ಕಲಿಯುತ್ತಿರುವಂತೆ, ಕಲಿತದ್ದನ್ನು ಮಾಡಲು ಪ್ರಯತ್ನಿಸುತ್ತಿರುವಂತೆ ಚಿತ್ರಿತರಾಗಿದ್ದಾರೆ. ಈ ಗುಹಾದೇವಾಲಯದ ಕುಬ್ಜರನ್ನು ಮುಖಚರ್ಯೆ, ವೇಷಭೂಷಣಗಳನ್ನು ಚಿತ್ರಿಸಿರುವ ರೀತಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಹೊರಗಿನಿಂದ ಬಂದ ವಿದೇಶಿ ವರ್ತಕರು ಇಲ್ಲಿನ ಲಲಿತಕಲೆಗಳನ್ನು ಕಲಿಯಲು ಪ್ರಯತ್ನಿಸುತ್ತಿರು ವಂತೆ ಕಂಡು ಬರುತ್ತದೆ. ಇಲ್ಲಿ ಕಲೆಗಳ ವಿನಿಮಯವಾಗುತ್ತಿರುವ ಸಾಧ್ಯತೆ ಇದೆ. ಇದು ದೊರೆತಿರುವ ಸಾಕ್ಷಿ ಆಧಾರಗಳ ಹಿನ್ನೆಲೆ ಯಲ್ಲಿ ಒಂದು ಊಹೆ ಮಾತ್ರವೇ ಆಗಿದೆ.

ದೇವಾಲಯದ ಒಳಗೆ ಸರ್ಪಾಸೀನ ವಿಷ್ಣುವಿನ ಶಿಲ್ಪದ ಕೆಳಪಟ್ಟಿಯಲ್ಲಿ ಆಜಾನುಬಾಹು ವರಾಹಮೂರ್ತಿಯ ಕೆಳಗಿನ ಪಟ್ಟಿಕೆಯಲ್ಲಿ ಕುಬ್ಜರು ನರ್ತಕರಾಗಿ, ವಾದ್ಯಗಾರರಾಗಿ ಚಿತ್ರಿತ ರಾಗಿದ್ದಾರೆ. ಹೀಗಾಗಿ ಈ ಗುಹಾದೇವಾಲಯದ ಅಧಿಷ್ಠಾನದ ಪಟ್ಟಿಕೆಗಳಲ್ಲಿ ಚಿತ್ರಿತ ಶಿಲ್ಪಗಳಿಗೂ ದೇವಾಲಯದ ಒಳಗೆ ದೇವತಾ ಶಿಲ್ಪಗಳ ಪೀಠದ ಪಟ್ಟಿಕೆಯಲ್ಲಿ ಚಿತ್ರಿತ ಕುಬ್ಜ ಶಿಲ್ಪಗಳಿಗೂ ಬಹಳ ವ್ಯತ್ಯಾಸವಿರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಗುಹಾ ದೇವಾಲಯದ ಒಳಗೆ 'ಬೃಹದಾಕಾರದ ದೇವತಾ' ಶಿಲ್ಪಗಳಿಗೆ ಹೋಲಿಕೆಯಲ್ಲಿ 'ಅತೀ ಚಿಕ್ಕದಾಗಿ' ಕುಬ್ಜರನ್ನು ಚಿತ್ರಿಸಿರುವ ರೀತಿ ಬಹಳ ವೈಶಿಷ್ಟ್ಯ ಪೂರ್ಣವಾಗಿ ಕಾಣುತ್ತದೆ.

ಕ್ರಿ. ಶ. ಆರನೆಯ ಶತಮಾನಕ್ಕೆ ನಿರ್ಮಾಣವಾಗಿರ ಬಹುದಾದ ದುರ್ಗಿಗುಡಿಯ ಮುಖಮಂಟಪದ ಇಕ್ಕೆಲ ಕಂಬಗಳ ತಳಭಾಗದ ೪ ಚೌಕಗಳಲ್ಲಿ ಕುಬ್ಜರನ್ನು ವಿವಿಧ ಕರಣಗಳಲ್ಲಿ ಹಾಗೂ ವೇಷ ಭೂಷಣದಲ್ಲಿ ಸೈನಿಕರಂತೆ ಯುದ್ಧದ ಸನ್ನಿವೇಶದಲ್ಲಿರು ವಂತೆ ಚಿತ್ರಿಸಲಾಗಿದೆ. ದೇವಾಲಯದ ಪ್ರದಕ್ಷಿಣಾಪಥವಾಗಿ ಎಡಭಾಗದ ಮೊದಲ ಕಂಬದಲ್ಲಿ ಪೂರ್ವಾಭಿಮುಖವಾಗಿ

ಮುತ್ತಿನ ಸರಪಟ್ಟಿಕೆಯ ನಂತರ ಏಳು ಜನ ಕುಬ್ಜರನ್ನು ವಿವಿಧ ವಾದ್ಯಗಳನ್ನು ನುಡಿಸುತ್ತಿರುವಂತೆ ಚಿತ್ರಿಸಲಾಗಿದೆ. ಈ ದೇವಾಲಯದ ಮುಖಮಂಟಪದ ಕುಬ್ಜರು ಹೆಚ್ಚು ಸ್ಪಷ್ಟವಾಗಿ, ಸುಂದರವಾಗಿ ಚಿತ್ರಿತರಾಗಿದ್ದಾರೆ. ದೇವಾಲಯದ ಒಳಭಾಗ ನವರಂಗದ ಬಲಭಾಗದ ಕಂಬದಲ್ಲಿ ಪ್ರತಿಯೊಬ್ಬ ಕುಬ್ಜರನ್ನು ಪ್ರತ್ಯೇಕ ಚೌಕಗೂಡುಗಳಲ್ಲಿ ಚಿತ್ರಿಸಲಾಗಿದೆ. ಎಡಭಾಗದ ಕಂಬದಲ್ಲಿ ಸಾಲಾಗಿ ಬಹಳ ಒತ್ತೊತ್ತಾಗಿ ಚಿತ್ರಿಸಲಾಗಿದೆ. ಇಲ್ಲಿನ ಕುಬ್ಜರನ್ನು ನೃತ್ಯ ನಿರತರನ್ನಾಗಿ ಚಿತ್ರಿಸಲಾಗಿದೆ. ಕಂಬದ ಕಲ್ಲುಗಳು ಬಹಳ ಮಾಸಿರುವುದರಿಂದ ಶಿಲ್ಪಗಳು ಸ್ಪಷ್ಟವಾಗಿ ಕಾಣುವುದಿಲ್ಲ; ದೇವಾಲಯದ ಪ್ರದಕ್ಷಿಣಾಪಥದ ಸುತ್ತಲೂ ಅಧಿಷ್ಠಾನದಲ್ಲಿ ಮಧ್ಯೆ ಮಧ್ಯೆ ಚಚ್ಚೌಕ, ಲತಾಪಟ್ಟಿಕೆಯ ಗೂಡುಗಳಲ್ಲಿ ಬಿಡಿ ಬಿಡಿಯಾಗಿವೆ. ಮತ್ತೊಮ್ಮೆ ಸಾಲಾಗಿ ಹಾಗೂ ದೇವಾಲಯದ ವಿನ್ಯಾಸದ ತಿರುವುಗಳ ಪಟ್ಟಿಗಳಲ್ಲಿ ಕುಬ್ಜರನ್ನು ಚಿತ್ರಿಸಲಾಗಿದೆ.

ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವು ಕ್ರಿ. ಶ. ಸುಮಾರು ಎಂಟನೆಯ ಶತಮಾನದಲ್ಲಿ ನಿರ್ಮಾಣ ಗೊಂಡಿರುವ ದೇವಾಲಯ. ನೃತ್ಯಕಲೆಗೆ ಸಂಬಂಧಪಟ್ಟಂತೆ ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆದಿರುವ ದೇವಾಲಯವೆಂದು ಹೇಳಬಹುದು. ದೇವಾಲಯದ ಒಳಗೆ ವಿಶಾಲವಾದ ನವರಂಗದಲ್ಲಿ ಮುಖ್ಯದ್ವಾರದಿಂದ ಗರ್ಭಗುಡಿಯವರೆಗೆ ಆರು ಕಂಬಗಳು ಎಡಭಾಗ ಮತ್ತು ಬಲಭಾಗಕ್ಕೆ ೩ ರಂತೆ ಒಟ್ಟು ೧೮ + ೧೮ = ೩೬ ಕಂಬಗಳಿವೆ. ಈ ಪ್ರತಿಯೊಂದು ಕಂಬವನ್ನು ಅಲಂಕಾರಿಕವಾಗಿ ಕೆತ್ತಲಾಗಿದೆ. ಕಂಬದ ಮಧ್ಯಭಾಗದಲ್ಲಿ ಮೂರು ಪಟ್ಟಿಕೆಗಳು ಬರುತ್ತವೆ. ಕೆಳಗಿನಿಂದ ಮೊದಲ ಪಟ್ಟಿಕೆಯಲ್ಲಿ ಮಣಿಸರಗಳ ಅಲಂಕಾರ ದಲ್ಲಿ ಕುಬ್ಜರ ನರ್ತನಭಂಗಿಗಳನ್ನು ಎರಡು ಮತ್ತು ಮೂರನೇ ಪಟ್ಟಿಕೆಗಳಲ್ಲಿ ರಾಮಾಯಣ, ಮಹಾಭಾರತ, ಪುರಾಣಕಥೆಗಳಿಗೆ ಸಂಬಂಧಪಟ್ಟ ಶಿಲ್ಪಗಳನ್ನು ಚಿತ್ರಿಸಲಾಗಿದೆ. ಕುಬ್ಜರ ಎಲ್ಲ ನರ್ತನ ಭಂಗಿಗಳು ಕರಣಗಳಿಗೆ ಸಂಬಂಧ ಪಟ್ಟಿರುವುದಾಗಿದೆ. ಇದೇ ದೇವಾಲಯದ ಗರ್ಭಗುಡಿಯಿಂದ ಎಡಭಾಗದ ಮೊದಲನೇ ಕಂಬದಲ್ಲಿ ಒಂದೇ ರೂಪದ ಎರಡು ಕುಬ್ಜ ನರ್ತನ ಶಿಲ್ಪಗಳನ್ನು ಕಾಣಬಹುದು. ಇದು ಆ ಕಾಲದ ಶಾಸನ ಉಲ್ಲೇಖಿತ ನರ್ತನ ಆಚಾರ್ಯ 'ಅಚಲನ್' ನ ಪ್ರತಿರೂಪವಾಗಿರಬಹುದೆಂದು ಊಹಿಸಲಾಗಿದೆ.

ವಿರೂಪಾಕ್ಷ ದೇವಾಲಯಕ್ಕೆ ಸಂಬಂಧ ಪಟ್ಟಂತೆ ಕುಬ್ಜರನ್ನು ಸಂಪೂರ್ಣವಾಗಿ ಶಾಸ್ತ್ರೀಯ ನೃತ್ಯದ ಚಿತ್ರಣಗಳಿಗೆ ಬಳಸಿ ಕೊಂಡಿರುವುದನ್ನು ಕಾಣಬಹುದು.

ಬಾದಾಮಿಯ ಜಂಬುಲಿಂಗ ದೇವಾಲಯವು ಸುಮಾರು ಕ್ರಿ. ಶ. ಒಂಭತ್ತನೆಯ ಶತಮಾನದಲ್ಲಿ ನಿರ್ಮಾಣವಾಗಿರುವ ದೇವಾಲಯ. ನವರಂಗದ ಛತ್ತಿನಲ್ಲಿ ಬಹಳ ಸುಂದವಾಗಿ ಕುಬ್ಜರನ್ನು ಚಿತ್ರಿಸಲಾಗಿದೆ. ನವರಂಗದ ಛತ್ತಿನ ಆಯತಾಕಾರದ ಪಟ್ಟಿಗಳಲ್ಲಿ ಉದ್ದವಾಗಿ ದೇವತೆಗಳನ್ನು, ಅಡ್ಡಲಾಗಿ ಕುಬ್ಜರನ್ನು ಚಿತ್ರಿಸಲಾಗಿದೆ. ಇಲ್ಲಿನ ಕಬ್ಜರನ್ನು ನರ್ತನ, ಗಾಯನ, ವಾದನಗಳಲ್ಲಿ ಚಿತ್ರಿಸಲಾಗಿದೆ. ಶಿಲ್ಪಗಳ ಮೇಲೆ ಇತ್ತೀಚೆಗೆ ಸುಣ್ಣ ಲೇಪನವಾಗಿರುವುದರಿಂದ ಕರಣಗಳನ್ನು ವರ್ಗೀಕರಿಸುವುದು ಸಾಧ್ಯವಾಗುವುದಿಲ್ಲ. ಚಲುಕ್ಯರ ಕಾಲದ ವೈವಿಧ್ಯಮಯವಾದ ಅನೇಕ ವಾದ್ಯಗಳು ಇಲ್ಲಿ ಚಿತ್ರಿತವಾಗಿವೆ. ಅವುಗಳಲ್ಲಿ ಸಣ್ಣಕೊಳಲು, "ಕೋನ" ಎಂಬ ತಂತಿವಾದ್ಯ, 'ಅಡ್ಡವುಜ' ಎಂಬ ಚರ್ಮವಾದ್ಯ, 'ರುದ್ರವೀಣೆ' ಎಂಬ ತಂತಿವಾದ್ಯ- ಕೆಲವು ವಾದ್ಯಗಳಾಗಿವೆ. ಜಂಬುಲಿಂಗ ದೇವಾಲಯದ ಛತ್ತಿನಲ್ಲಿ ಮಾತ್ರ ಕುಬ್ಜರನ್ನು ಕಾಣಬಹುದು.

ಮಾಲಗಿತ್ತಿ ದೇವಾಲಯ ಅತ್ಯಂತ ಎತ್ತರದಲ್ಲಿ ಒಂದು ಗುಡ್ಡದ ಮೇಲೆ ನಿರ್ಮಾಣವಾಗಿರುವ ದೇವಾಲಯ. ದೇವಾಲಯದ ಸುತ್ತಲೂ ಅಧಿಷ್ಠಾನದಲ್ಲಿ ಕುಬ್ಜರನ್ನು ಚಿತ್ರಿಸಲಾಗಿದೆ. ಇಲ್ಲಿ ಶಿಲ್ಪರಚನೆಯ ಪ್ರಾರಂಭಿಕ ಹಂತವನ್ನು ಕಾಣಲು ಸಾಧ್ಯವಾಗುತ್ತದೆ. ಶಿಲ್ಪ ರಚನೆಯ ಮೊದಲು ರೇಖೆಗಳಲ್ಲಿ ಆಕಾರಗಳನ್ನು ರಚಿಸಿಕೊಳ್ಳುತ್ತಿದ್ದುದು ಇದರಿಂದ ತಿಳಿದು ಬರುತ್ತದೆ. ಇಲ್ಲಿನ ಅನೇಕ ಶಿಲ್ಪಗಳು ಮಾಸಿಹೋಗಿವೆ. ದೇವಾಲಯದ ಬಲಭಾಗದ ಕೆಲವು ಶಿಲ್ಪಗಳು ಸ್ಪಷ್ಟವಾಗಿ ಕಂಡು ಬರುತ್ತವೆ. ಈ ಕುಬ್ಜ ಶಿಲ್ಪ ಶೈಲಿ ಬೇರೆಯಾಗಿದೆ. ವೇಷ ಭೂಷಣದಲ್ಲಿ ವಸ್ತ್ರವನ್ನು ಸೊಂಟಕ್ಕೆ ಕಟ್ಟಿ ಎರಡೂ ಕಾಲುಗಳ ನಡುವೆ ನೀಳವಾಗಿ ಕಾಲಿನವರೆಗೆ ಬಿಟ್ಟಿರುವಂತೆ ಚಿತ್ರಿಸಲಾಗಿದೆ. ಕೈ ತೋಳುಗಳಿಗೆ, ಎದೆ, ಹೊಟ್ಟೆ ಸೊಂಟದ ಭಾಗಗಳಿಗೆ ವಿಶೇಷವಾದ ಆಭರಣಗಳನ್ನು ತೊಡಿಸಿರುವಂತೆ ಚಿತ್ರಿಸಲಾಗಿದೆ. ಇಲ್ಲಿನ ಕುಬ್ಜರು ಹೆಚ್ಚಾಗಿ 'ತ್ರಿಭಂಗಿ' ಸ್ಥಾನಕದಲ್ಲಿ ಚಿತ್ರಿಸಲ್ಪಟ್ಟಿದ್ದಾರೆ.

ಗಳಗನಾಥ ಗುಡಿಗಳ ಗುಂಪಿನ ಪಶ್ಚಿಮಾಭಿಮುಖ ಒಂದು ಪಾಳು ದೇವಾಲಯದ ದ್ವಾರ ಬಂಧದಲ್ಲಿ ಕುಬ್ಜರು ವಿವಿಧ ನರ್ತನ ಭಂಗಿಗಳಲ್ಲಿ ಚಿತ್ರಿತರಾಗಿದ್ದಾರೆ.

ಈ ರೀತಿಯಾಗಿ ಬಾದಾಮಿ ಚಲುಕ್ಯರ ಕಾಲದಲ್ಲಿ 'ಕುಬ್ಜರು' ಆ ಕಾಲಕ್ಕೆ ನಿರ್ಮಾಣವಾಗಿರುವ ದೇವಾಲಯಗಳಲ್ಲಿ ಹೊರಭಾಗದ ಅಧಿಷ್ಠಾನದಿಂದ ಗರ್ಭದ್ವಾರದ ಪಟ್ಟಿಕೆಯವರೆಗೆ ಎಲ್ಲ ಕಡೆಗಳಲ್ಲೂ, ಕೆಲವೊಮ್ಮೆ ಯಾವುದಾದರೂ ಒಂದು ಭಾಗದಲ್ಲಿ ನಿರ್ದಿಷ್ಟವಾಗಿ ಚಿತ್ರಿತರಾಗಿರುವುದನ್ನು ಕಾಣಬಹುದು. ಚಲುಕ್ಯರ ಕಾಲದ ಇನ್ನೊಂದು ವಿಶೇಷವೆಂದರೆ 'ಶಿವ' ಮತ್ತು ಅವನ ಅನುಚರರು ಎಂದು ಕರೆಯಲ್ಪಡುವ "ಗಣಗಳು" ಮಾತ್ರ ಶಾಸ್ತ್ರೀಯ ನೃತ್ಯಕ್ಕೆ ಸಂಬಂಧಪಟ್ಟಂತೆ ಚಿತ್ರಿತರಾಗಿದ್ದಾರೆ.

ಗಣಗಳನ್ನು *(Demigods)* ದೇವತೆಗಳಂತೆಯೂ, ಮನುಷ್ಯರಂತೆಯೂ ಪರಿಗಣಿಸಲಾಗುತ್ತದೆ. ಆ ಕಾಲದಲ್ಲಿ ಪ್ರಸ್ತುತವಾಗುತ್ತಿದ್ದಿರಬಹುದಾದ ನರ್ತನವನ್ನು ಈ ಗಣಗಳ / ಕುಬ್ಜರ ಮುಖೇನ ಆ ಕಾಲದ ಶಿಲ್ಪಿಗಳು ಚಿತ್ರಿಸಿರುವ

ಸಾಧ್ಯತೆಗಳಿವೆ. ಸಾಮಾನ್ಯವಾಗಿ ಎಲ್ಲ ಕುಬ್ಜರನ್ನು ನರ್ತನ, ಗಾಯನ, ವಾದ್ಯಗಳ ವಾದನಕ್ಕೆ ಸಂಬಂಧಪಟ್ಟಂತೆಯೇ ಚಿತ್ರಿಸಲಾಗಿದೆ. ಕೆಲವೊಮ್ಮೆ ಶಾಸ್ತ್ರೀಯ ಚೌಕಟ್ಟಿನಿಂದ ಹೊರಬಂದು ಪ್ರಾಯೋಗಿಕ ಪ್ರಸ್ತುತಿಗೆ ಅನುಕೂಲವಾಗುವಂತೆ 'ಕರಣ'ಗಳನ್ನು ಉಪಯೋಗಿಸಿ ಕೊಂಡಿರುವುದು ಅನೇಕ ನೃತ್ತ ಭಂಗಿಗಳ ಅಧ್ಯಯನದಿಂದ ತಿಳಿದು ಬರುತ್ತದೆ. ಕೆಲವು ಸಂದರ್ಭಗಳಲ್ಲಿ ನರ್ತನವಲ್ಲದೆ, ಕೆಲವು ಸಾಮಾಜಿಕ ಜೀವನದ ವಿಷಯಗಳನ್ನು ಚಿತ್ರಿಸಲು ಕುಬ್ಜರನ್ನು ಉಪಯೋಗಿಸಿ ಕೊಳ್ಳಲಾಗಿದೆ. ಆದರೆ ಈ ರೀತಿಯ ವಿಷಯಗಳು ಸಹ ನರ್ತನ ರೂಪದಲ್ಲೇ ಚಿತ್ರಿತವಾಗಿರುವುದು ವೈಶಿಷ್ಟ್ಯವಾಗಿದೆ. ಈ ನಿಟ್ಟಿನಲ್ಲಿ ಗಮನಿಸಿದಾಗ ಆ ಕಾಲಕ್ಕೆ ಪ್ರಸ್ತುತವಾಗುತ್ತಿದ್ದ ನರ್ತನವನ್ನು ಮತ್ತು ನರ್ತನದಲ್ಲಿ ಅಳವಡಿಸಿಕೊಂಡಿರಬಹುದಾದ ವಿಷಯಗಳನ್ನು ಮತ್ತು ಪ್ರಸ್ತುತವಾಗುತ್ತಿದ್ದ ಸಂದರ್ಭಗಳನ್ನು ತಿಳಿಸಲು 'ಶಿಲ್ಪಿಗಳು - ಕಲಾವಿದರು' ಪ್ರಯತ್ನಿಸಿದ್ದಾರೆ ಎಂದು ಹೇಳಬಹುದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕನ್ನಡ ನಿಘಂಟು, ಸಂಪುಟ ೨., (೧೯೩೯), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨. Gopinath Rao. T. A., (1997), *Elements, of Hindu Iconography,* Vol Two P. II, New Delhi, P - 569 (ಅನುವಾದಿಸಲಾಗಿದೆ).

೩. Dr. Choodamani Nandagopal., (1990), *Dance & Music in Temple Architechture,* Delhi, p. 93 (ಅನುವಾದಿಸಲಾಗಿದೆ).

೪. Ibid, p. 63 (ಅನುವಾದಿಸಲಾಗಿದೆ).

೫. Dr. Sundara A., 'Architecture and Art under the Badami Chalukyas', *South Indian Studies,* (Ed) Dr. H.M. Nayak and Dr. B.R. Gopal., Mysore, p. 589.

೬. Choodamani Nandagopal, - Opp. cit., *Architecture,* pp. 153-154.

ಕೋಳಿ ಮಹೇಶ್*

# ಸಿರುಗುಪ್ಪದ ಜೈನಮೂರ್ತಿ ಶಿಲ್ಪಗಳು



ಕರ್ನಾಟಕಕ್ಕೆ ಬಹಳ ಪ್ರಾಚೀನ ಕಾಲದಲ್ಲಿಯೇ ಪ್ರವೇಶಿಸಿದ ಜೈನಧರ್ಮವು ನೊಳಂಬರ ನಾಡಾದ ಬಲ್ಲಕುಂದೆ - ೩೦೦ ನಾಡಿನಲ್ಲಿಯೂ ಪ್ರಚಾರದಲ್ಲಿದ್ದುದನ್ನು ಕಾಣುತ್ತೇವೆ. ಈ ನಾಡಿನ ಪರಿಮಿತಿಯಲ್ಲಿ ಅದು ಬಲ್ಲಕುಂದೆ ಮತ್ತು ಕುರುಗೋಡು, ಸಿರಿಗೇರಿ ಗ್ರಾಮಗಳಲ್ಲಿ ಮಾತ್ರ ಗಟ್ಟಿಯಾಗಿ ನೆಲೆನಿಂತಿರುವುದು ಕಂಡು ಬರುತ್ತದೆ. ಬಾದಾಮಿ ಚಲುಕ್ಯರು ಮತ್ತು ರಾಷ್ಟ್ರಕೂಟರು ಜೈನಧರ್ಮಕ್ಕೆ ಪ್ರೋತ್ಸಾಹ ನೀಡಿದ್ದರಾದರೂ ಬಲ್ಲಕುಂದೆನಾಡಿನಲ್ಲಿ ಅವರು ಬಸದಿಗಳನ್ನು ನಿರ್ಮಿಸಿದ ಬಗ್ಗೆ ಯಾವುದೇ ಪುರಾವೆಗಳಿಲ್ಲ. ಆದರೆ ಕಲ್ಯಾಣ ಚಾಳುಕ್ಯರ ಕಾಲದಲ್ಲಿ ಬಲ್ಲಕುಂದೆ ಗ್ರಾಮದಲ್ಲಿ ಕೆಲವರು ಜೈನ ಬಸದಿಗೆ ದಾನ ನೀಡಿರುವುದು ಶಾಸನಗಳಿಂದ ತಿಳಿದುಬರುತ್ತದೆ. ನೊಳಂಬರಾಜ ಚಿತ್ರವಡಂಗ ಘುಟೆಯಂಕ ಕಾರನ ನಿಯೋಗಿಯಾದ ಶ್ರೀಧರಾರ್ಯನು "ಬಲ್ಲಕುದ್ದ ವಸತೌಕೃತ ಜೈನ ಬಿಂಬ"ಕ್ಕೆ ಪಂಚ ನಿವರ್ತನ ಭೂಮಿಯನ್ನು ದಾನವಾಗಿ ಬಿಡುತ್ತಾನೆ.[೧] ಕೃತದೇವ ಮತ್ತು ಕರಿಗಾರ ಕನ್ದರಿಕರು ಸಂಯುಕ್ತವಾಗಿ ಬಲ್ಲಕುಂದೆಯ ಬಸದಿಗೆ ದಾನಬಿಟ್ಟ ಉಲ್ಲೇಖ ಅಲ್ಲಿಯ ಇನ್ನೊಂದು ಶಾಸನದಲ್ಲಿದೆ.[೨] ಮತ್ತೊಂದು ಶಾಸನವು ಜಿನಪಾದಪಂಕಜ ರಜೋ[೩] ಎಂದಿದೆ. ಕೇಸರಿ ಮಹಾಧರ್ಮ ಪ್ರಭು ತನ್ನ ಪತ್ನೀಸಮೇತನಾಗಿ ಜೈನರಿಗೆ ದಾನಬಿಟ್ಟಿದ್ದನ್ನು ಉಲ್ಲೇಖಿಸಿದೆ. ಈ ಕೆಲವು ಶಾಸನಗಳ ಉಲ್ಲೇಖಗಳನ್ನು ಬಿಟ್ಟರೆ ಹೆಚ್ಚಿನವಾಗಿ ಈ ಪ್ರದೇಶದ ಶಾಸನಗಳು ಸಿಗುವುದಿಲ್ಲ.

ಬಲ್ಲಕುಂದೆನಾಡಿನ ಶಿರಿಗೇರಿ ಗ್ರಾಮದಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿಯ ಮೂಲತಃ ಜೈನ ದೇವಾಲಯವಿದ್ದು ಈಗ ಅದರಲ್ಲಿ ವೀರಭದ್ರಮೂರ್ತಿ ಇರುವುದನ್ನು ಕಾಣುತ್ತೇವೆ. ಈ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ ಹಾಗೂ ಮುಖಮಂಟಪಗಳಿಂದ ಕೂಡಿದೆ. ಅಂತರಾಳದ ಬಾಗಿಲುವಾಡದ ಲಲಾಟ ಬಿಂಬದಲ್ಲಿ ಜೈನ ತೀರ್ಥಂಕರನ ಶಿಲ್ಪವಿದೆ. ದೇಗುಲದ ಗರ್ಭಗುಡಿಯ ಹೊರಬದಿಯ ಗೋಡೆಯ ಮೂರು ಬದಿಗಳಲ್ಲಿ ಜೈನ ತೀರ್ಥಂಕರರನ್ನು ಕೆತ್ತಲಾಗಿದೆ. ಬಹುಶಃ ವಿಜಯನಗರೋತ್ತರ ಕಾಲದಲ್ಲಿ ಜೈನ ದೇವಾಲಯವನ್ನು ಶೈವ ದೇಗುಲವಾಗಿ ಮಾರ್ಪಡಿಸಿ ವೀರಭದ್ರಮೂರ್ತಿಯನ್ನು ಪ್ರತಿಷ್ಠಾಪಿಸಿರಬಹುದು.[೪] ಈ ದೇವಾಲಯವನ್ನು ಬಿಟ್ಟರೆ ಬೇರೆ ಕಡೆಗಳಲ್ಲಿ ಜೈನ ದೇವಾಲಯಗಳು ದೊರೆಯುವುದಿಲ್ಲ. ಬಲ್ಲಕುಂದೆ ಗ್ರಾಮದಲ್ಲಿ ಜೈನಮೂರ್ತಿಗಳು ನೆಲೆಸಿ ದಾನದತ್ತಿಗಳನ್ನು ಪಡೆದಿದ್ದುದರ ಬಗ್ಗೆ ಶಾಸನವಿರುವುದನ್ನು ಶ್ರೀ ಚನ್ನಬಸವಯ್ಯ ಹಿರೇಮಠ ರವರು ಉಲ್ಲೇಖಿಸಿದ್ದಾರೆ. *(ಕುರುಗೋಡು ಸಿಂಧರು ಒಂದು ಅಧ್ಯಯನ - ಪಿಎಚ್. ಡಿ. ನಿಬಂಧ)*

ಬಲ್ಲಕುಂದೆ-೩೦೦ ನಾಡಿನಲ್ಲಿ ತೆಕ್ಕೆಕಲ್ಲು - ೧೨ ಗ್ರಾಮಕ್ಕೆ ಸೇರಿದ ಸಿರುಗುಪ್ಪೆಯು ಅಂದಿನ ರಾಜರ ಆಳ್ವಿಕೆಗೆ ಒಳಪಟ್ಟ ಪ್ರದೇಶವು ಅನೇಕ ದೇವಾಲಯಗಳ ಶಿಲ್ಪಗಳ ಉಗಮಕ್ಕೆ ಕಾರಣವಾಯಿತು. ಸಿರುಗುಪ್ಪೆಯ ಗಾಂಧಮ್ಮ ದೇವಾಲಯದ ಎದುರಿರುವ ಹನುಮಂತ ದೇವಾಲಯದ ಮುಂದಿನ ರಸ್ತೆಯ ಪಕ್ಕದಲ್ಲಿ ನೀರು ಬತ್ತಿದ ಒಂದು ಹಳೆಯ ಕಾಲದ ಬಾವಿ ಇದೆ. ಈ ಬಾವಿಯು ಇಂದು ದುಸ್ಥಿತಿಯಲ್ಲಿದೆ. ಈ ಬಾವಿಗೆ ದಕ್ಷಿಣಾಭಿ ಮುಖವಾಗಿ ಮೆಟ್ಟಿಲುಗಳಿವೆ. ಇದು ಅಷ್ಟೇನು ದೊಡ್ಡದಲ್ಲ. ಆದರೆ

* ಸಂಶೋಧಕ, ವಸ್ತುಸಂಗ್ರಹಾಲಯ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ವಿದ್ಯಾರಣ್ಯ, ಬಳ್ಳಾರಿ ಜಿಲ್ಲೆ - ೫೮೩ ೨೭೬

ಕಟ್ಟಡವನ್ನು ದೊಡ್ಡ ದೊಡ್ಡ ಸೈಜು ಗ್ರಾನೈಟ್ ಕಲ್ಲಿನಿಂದ ರಚಿಸಿದ್ದಾರೆ. ಇದರಲ್ಲಿ ಒಳಗಡೆಯ ಕಟ್ಟಡದ ಪೂರ್ವ ಮತ್ತು ಉತ್ತರ ಮುಖವಾಗಿ ಎರಡು ಜೈನ ಶಿಲ್ಪಗಳನ್ನು ಕಾಣಬಹುದು. ಇವೆರಡೂ ಒಂದೇ ತೆರನಾದ ಜೈನಮೂರ್ತಿಗಳಾಗಿವೆ. ಈ ಮೂರ್ತಿಗಳು ಮಹಾವೀರನ ಮೂರ್ತಿಗಳ ರೀತಿಯಲ್ಲಿ ಕಂಡು ಬರುತ್ತಿವೆ. ಪದ್ಮಾಸನದಲ್ಲಿ ಧ್ಯಾನಮಗ್ನರಾಗಿ ಕುಳಿತಿರುವ ಜೈನಮೂರ್ತಿಗಳ ಭಂಗಿಯು ಕಾಣುತ್ತಿದೆ. ಮೂರ್ತಿಗಳ ಸುತ್ತಲೂ ಪ್ರಭಾವಳಿ ಬಳ್ಳಿಗಳು ಇವೆ. ಜೈನಮೂರ್ತಿಗಳು ಸುಮಾರು ೨ ಅಡಿ ಎತ್ತರವಾಗಿವೆ. ಈ ಮೂರ್ತಿಗಳ ಕಲ್ಲು ಈಗ ಸವೆದು ಹೋಗಿ ಮುಖಗಳು ಸರಿಯಾಗಿ ಕಂಡುಬರುವುದಿಲ್ಲ. ಈ ಹಿಂದೆ ಇಲ್ಲೊಂದು ಜೈನರ ಬಾವಿ ಇದ್ದಿರಲು ಸಾಧ್ಯವಿದೆ.

ಇಲ್ಲಿರುವ ಸ್ವಯಂಭೂ ಕೇತಲೇಶ್ವರ ದೇವಾಲಯದ ರಕ್ಷಣಾ ಗೋಡೆಯನ್ನು ಕ್ರಿ. ಶ. ೧೬೨೭ರಲ್ಲಿ ಮಲಿಕ ಅಬ್ದುಲನು ಕಟ್ಟಿಸಿದ. ಬಾವಿ ಮತ್ತು ರಕ್ಷಣಾ ಗೋಡೆಯಲ್ಲಿ ಇನ್ನೊಂದು ಜೈನಮೂರ್ತಿ ಇರುವುದು ಕಂಡುಬಂದಿದೆ. ಈ ಮೂರ್ತಿಯು ತುಂಗಭದ್ರ ನದಿಯ ಕಡೆ ಅಂದರೆ ಪಶ್ಚಿಮಕ್ಕೆ ಮುಖ ಮಾಡಿದೆ. ಈ ಶಿಲ್ಪವು ಕೂಡ ಬಾವಿಯಲ್ಲಿನ ಶಿಲ್ಪಗಳಂತೆ ಕಂಡುಬರುತ್ತದೆ. ಈ ಶಿಲ್ಪವು ೨೧/೩ ಅಡಿ ಎತ್ತರ ೧೧/೩ ಅಡಿ ಅಗಲವಾಗಿದ್ದುದು, ಇಂದು ಭಗ್ನವಾಗಿದೆ. ಮುಖದ ಮೇಲಿನ ಕಲ್ಲುಚಕ್ಕೆಯು ಉದುರಿಹೋಗಿದೆ. ಹೊಟ್ಟೆ ಮತ್ತು ಕೈಭುಜಗಳ ಚಕ್ಕೆಯು ಕಿತ್ತಿಹೋಗಿ ದುಸ್ಥಿತಿಯಲ್ಲಿದೆ. ಈ ಶಿಲ್ಪಗಳಲ್ಲಿ ಮೂರ್ತಿ ಮತ್ತು ಪ್ರಭಾವಳಿ ಹಾಗೂ ಬಳ್ಳಿಗಳನ್ನು ಬಿಟ್ಟರೆ ಇತರೆ ಯಾವುದೇ ಲಕ್ಷಣಗಳು ಕಂಡುಬರುವುದಿಲ್ಲ. ಈ ಶಿಲ್ಪಗಳಿಂದ ನಮಗೆ ತಿಳಿದುಬರುವುದೇನೆಂದರೆ ಬಲ್ಲಕುಂದೆ-೩೦೦ ನಾಡಿಗೆ ಸೇರಿದ ಸಿರುಗುಪ್ಪೆಯಲ್ಲಿಯೂ ಜೈನಧರ್ಮ ಪ್ರಚಾರದಲ್ಲಿತ್ತು ಎಂದು ಕಂಡು ಕೊಳ್ಳಬಹುದಾಗಿದೆ. ಈ ಜೈನ ಮೂರ್ತಿಗಳನ್ನು ಬೇರೆ ಅಲ್ಲಿನ ಸುತ್ತಮುತ್ತಲ ಕಡೆಯಿಂದಲೂ ತೆಗೆದುಕೊಂಡು ಬಂದು ಕಟ್ಟಡವನ್ನು ಕಟ್ಟುವಾಗ ಸೇರಿಸಿರಬಹುದು. ಅಲ್ಲದೆ ಸಿರುಗುಪ್ಪೆಯ ಸುತ್ತಮುತ್ತ ಜೈನ ನೆಲೆ ಇರುವುದು ಕಂಡುಕೊಳ್ಳುವ ವಿಷಯವಾಗಿದೆ. ಈ ಪ್ರದೇಶದಲ್ಲಿ ಜಿನಪ್ರತಿಮೆಗಳನ್ನು ಮಾಡಿಸಿದ್ದುರಿಂದ ಅಂದಿನ ಜನರ ಜಿನ ಭಕ್ತಿ, ನಿಷ್ಠೆ, ಶ್ರದ್ಧೆ ತಿಳಿಯುತ್ತಿದೆ. ಇವುಗಳು ಅಂದಿನ ಜೈನ ಸಮಾಜದ ಎಲ್ಲೆಯನ್ನು ಅರಿಯಲು ಸಹಾಯಕವಾಗಿವೆ. ಆದರೆ ಮುಂದಿನ ಕ್ರಿ. ಶ. ೧೧ನೇ ಶತಮಾನದ ಮಧ್ಯಭಾಗದಿಂದ ಬಂದ ಶೈವ ಮತ್ತು ವೈಷ್ಣವ ಧರ್ಮಗಳ ಚಟುವಟಿಕೆಗಳ ನಡುವೆ ಕಲ್ಯಾಣ ಚಾಳುಕ್ಯರು ಹಾಗೂ ಹೊಯ್ಸಳ ಮನೆತನಗಳನ್ನು ಜೈನಧರ್ಮ ಆಶ್ರಯಿಸಿತು. ಅವರ ಹೊಸ ಧಾರ್ಮಿಕ ಪ್ರಭಾವದ ಕಾರಣ ಜೈನಧರ್ಮ ಕ್ರಮೇಣ ತನ್ನ ಪ್ರಭಾವದಿಂದ ಹಿನ್ನಡೆಯಿತು. ಈ ದೃಷ್ಟಿಯಿಂದ ಸಿರುಗುಪ್ಪೆ ಪರಿಸರವು ಜೈನಧರ್ಮದ ಸಾಂಸ್ಕೃತಿಕ ಪರಿಸರವನ್ನು ಒಂದು ಕಾಲಕ್ಕೆ ಒಳಗೊಂಡಿತ್ತೆಂಬುದನ್ನು ಇಲ್ಲಿನ ಜೈನಮೂರ್ತಿ ಶಿಲ್ಪಗಳು ತೋರುತ್ತವೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಎ. ಆರ್. ಐ. ಇ., ಬಿ.ನಂ. ೮೬: ೭೭-೭೮-೯೯೮ ಬಲ್ಲಕುಂದೆ, ಸಿರುಗುಪ್ಪ ತಾ.

೨. ಅದೇ, ಬಿ ನಂ. : ೬೦: ೮೫-೮೬-೧೧ನೇ ಶತಮಾನ, ಸಿರುಗುಪ್ಪ ತಾ.

೩. ಅದೇ, ಬಿ. ನಂ. ೮೮: ೭೭-೭೮-೧೧ನೇ ಶತಮಾನ ಸಿರುಗುಪ್ಪ ತಾ.

೪. **ಕರ್ನಾಟಕ ದೇವಾಲಯ ಕೋಶ**, ಬಳ್ಳಾರಿ (ಜಿ), ಸಿರುಗುಪ್ಪ (ತಾ) ಶಿರಿಗೇರಿ, ಪು. ೧೫೩.

೫. ಎ. ಆರ್. ಐ. ಇ., ಬಿ. ನಂ. ೮೩: ೭೭-೭೮-೯೫೬ ಬಲ್ಲಕುಂದೆ, ಸಿರುಗುಪ್ಪ ತಾ.

೬. ಕಲ್ಯಾಣ ಚಾಲುಕ್ಯ ಜಯಸಿಂಹನ ರಾಣಿ ಸುಗ್ಗಲೆ ವೀರಶೈವ ಧರ್ಮವನ್ನು ಸ್ವೀಕರಿಸಿದ್ದರೆ, ಹೊಯ್ಸಳ ವಿಷ್ಣುವರ್ಧನ ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿರುವುದನ್ನು ಗಮನಿಸಬೇಕು.

ಡಾ॥ ಚೆನ್ನಕ್ಕ ಪಾವಟೆ*

# ಗೋವೆ ಕದಂಬರ ಕಾಲದ ಪ್ರಾಚ್ಯ ದಾಖಲೆಗಳು

ಕರ್ನಾಟಕದ ಪ್ರತಿಷ್ಠಿತ ಸಾಮ್ರಾಜ್ಯಗಳಲ್ಲಿ ಕಲ್ಯಾಣ ಚಾಲುಕ್ಯರದು ಮಹತ್ವದ ಅಧ್ಯಾಯ. ಅವರ ಮಹಾಮಂಡಲೇಶ್ವರ ರಾಗಿ ಮೂರು ನೂರು ವರ್ಷ ಗೋವೆಯನ್ನು ಕೇಂದ್ರವನ್ನಾಗಿಸಿ ಕೊಂಡು ಆಡಳಿತ ನಿರ್ವಹಿಸಿದವರು ಗೋವೆಯ ಕದಂಬರು. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ನೆಚ್ಚಿನ ಕುವರಿ ಮಾಳಲದೇವಿಯನ್ನು ಗೋವೆಯ ಮಂಡಲೇಶ್ವರ ಜಯಕೇಶಿ ವಿವಾಹವಾದ ಸಂದರ್ಭವನ್ನು ಧಾರವಾಡ ತಾಲೂಕಿನ ಶಾಸನ ವಿವರಿಸಿದೆ.

ಗೋವೆ ಕದಂಬರು 'ಹರಧರಣೀ ಪ್ರಸೂತ'ರೆಂದು ಶಿವಮುತಮೂಲವನ್ನು ಹೇಳಿಕೊಂಡ ಇವರ ಮನೆದೈವತ ಸೌರಾಷ್ಟ್ರದ ಸೋಮೇಶ್ವರ 'ಧರ್ಮಾವತಾರ' ಎಂದು ಶಾಸನಗಳಲ್ಲಿ ಕರೆಸಿಕೊಂಡ ಈ ಮನೆತನದ ಇಮ್ಮಡಿ ಚಟ್ಟಯಿದೇವ ರಾಜ್ಯತ್ಯಾಗ ಮಾಡಿ ಧರ್ಮಾಸಕ್ತನಾಗಿದ್ದರೆ ಇದೇ ಮನೆತನದ ಕಾದಂಬ ಶಿವಚಿತ್ತ ಶ್ರೀವಜ್ರದೇವನನ್ನು ಸಮಕಾಲೀನ ಕನ್ನಡ ಕೃತಿ ಸಾನಂದಚರಿತೆ ವೀರಶೈವ ಶಿವಶರಣರ ಮಾಲಿಕೆಗೆ ಸೇರಿಸಿದ್ದು ಇವನ 'ಶಿವಚಿತ್ತ' ವಿಶೇಷಣವಾಗಿ ಗಮನಿಸುವಂತಿದೆ.

**ಶಿವಶರಣರ ಕಾರ್ಯಕ್ಷೇತ್ರ**

ಕಲ್ಯಾಣಕ್ರಾಂತಿಯ ತರುವಾಯ ವೀರಶೈವಧರ್ಮ ಅನುಭಾವ ಸಾಹಿತ್ಯವೆನಿಸಿದ ವಚನಸಾಹಿತ್ಯ ಸಂರಕ್ಷಣೆಯ, ಜವಾಬ್ದಾರಿ ಹೊತ್ತ ಶಿವಶರಣರು ಚೆನ್ನಬಸವಣ್ಣ ಅಕ್ಕನಾಗಮ್ಮ ಮಡಿವಾಳ ಮಾಚೀದೇವರ ನೇತೃತ್ವದಲ್ಲಿ ಕಲ್ಯಾಣದಿಂದ ಉಳವಿತ್ತ ಮುನ್ನಡೆದ ಸಂದರ್ಭದಲ್ಲಿ ಕಾರವಾರ ಜಿಲ್ಲೆಯ ಸುಪಾ ಮುಂಡಗೋಡ, ಹಳಿಯಾಳ ಮತ್ತು ಯಲ್ಲಾಪುರ ತಾಲೂಕುಗಳಲ್ಲಿ ಅಲ್ಲಲ್ಲಿಗೆ ಬೀಡುಬಿಟ್ಟ ಬಿಜ್ಜಳನ ಸೈನಿಕರೊಂದಿಗೆ ಹೋರಾಡಿದ, ಕೆರೆ ದೇವಾಲಯದಾವರಣಗಳಲ್ಲಿ ಪೂಜೆ, ಧ್ಯಾನ ಕೈಕೊಂಡ ವಿಶೇಷ ಕುರುಹುಗಳು ಶರಣರ ಸ್ಮರಣೆಯ ಸಂಕೇತಗಳೆನಿಸಿವೆ.

**ಹಳಿಯಾಳ ತಾಲೂಕಿನಲ್ಲಿ ಕ್ಷೇತ್ರಕಾರ್ಯ**

ಗೋವೆ ಕದಂಬರ ಪ್ರಮುಖ ಪಟ್ಟಣಗಳಲ್ಲಿ 'ಹಣದ ಪೆಟ್ಟಿಗೆ' ಎನಿಸಿದುದು ಹಳಿಯಾಳ ಪಟ್ಟಣ. ಈ ಪ್ರದೇಶದ ಮಾದಿನಕೊಪ್ಪ, ಕಳಸಾಪುರ, ರಾಯಪಟ್ಟಣ ಮತ್ತು ಮುಂಡಿಕೆ ಪ್ರದೇಶಗಳಲ್ಲಿ ಕೈಕೊಂಡ ಕ್ಷೇತ್ರಕಾರ್ಯದ ಮೂಲಕ ಸಾದರ ಪಡಿಸಿದ ಪ್ರಾಚ್ಯ ದಾಖಲೆಗಳು ಅದನ್ನು ವಿಶೇಷವಾಗಿಸಿವೆ. ಕದಂಬದೊರೆಗಳು ಆಡಳಿತದಲ್ಲಿ ರೂಢಿಸಿಕೊಂಡು ಬಂದ ಶಿಸ್ತು ಅಚ್ಚುಕಟ್ಟುತನ ಪ್ರಾಚ್ಯವಾಸ್ತು ಶಿಲ್ಪ ಸೌಂದರ್ಯ, ಕೆರೆ ಕಾಲುವೆಗಳು, ಹಳಿಯಾಳದ ಕೋಟೆ, ಪ್ರಾಚ್ಯ ದೇವಸ್ಥಾನಗಳು, ಸುಂದರವಾದ ಉದ್ಯಾನವನಗಳು ಅಲ್ಲಲ್ಲಿಗೆ ಚದುರಿದಂತೆ ಶಿಲ್ಪದ ಕಲಾತ್ಮಕ ವೈಭವ ವೈಶಿಷ್ಟ್ಯಪೂರ್ಣವಾಗಿವೆ.

ಊರಮಧ್ಯದ ತುಳಜಾಭವಾನಿ, ಮಲ್ಲಿಕಾರ್ಜುನ ಗಣಪತಿ ದೇವಸ್ಥಾನಗಳು ಹಳಿಯಾಳದ ಆರಾಧನೆಯ ಪ್ರವೃತ್ತಿ ಸೂಚಿಸುವಂತಿವೆ. ಹಳಿಯಾಳ ಪಟ್ಟಣ ತಲುಪುವ ಮುನ್ನವೇ ನೇರ ಹೆದ್ದಾರಿಯಿಂದ ೩ ಕಿ. ಮೀ. ಒಳಗಿರುವ ಮುಂದಿನ ಕೊಪ್ಪ ಗ್ರಾಮವು ಒಂದು ಪ್ರಾಚೀನ ಗ್ರಾಮ. ಅತ್ಯಂತ ಕಡಿಮೆ ಜನವಸತಿ, ಕುರುಚಲು ಕಾಡು ಒತ್ತುವರಿಯಾಗಿದ್ದು ಈಗ ಬೇಚರಾಕ್ ಆಗಿದೆ. ಅಲ್ಲಲ್ಲಿಗೆ ಸಿಗುವ ಮನೆಗಳ ತಳಪಾಯ ಗಡಿಗೆ ಮಡಿಕೆಗಳ ಚೂರು ಇಲ್ಲಿ ಜನವಸತಿಯನ್ನು ನೆನೆಸುವಂತಿವೆ. ಮಾವಿನಕೊಪ್ಪದ ಅವಶೇಷಗಳಲ್ಲಿ ನಸುಬಾಗಿದ ಕಲಾತ್ಮಕ ವಿನ್ಯಾಸಪೂರ್ಣ ಕಲೆಯನ್ನೊಳಗೊಂಡ ನಾರಾಯಣನ ವಿಗ್ರಹ ಅಕ್ಕಪಕ್ಕದ ಶ್ರೀದೇವಿ ಭೂದೇವಿಯರ ವಿಗ್ರಹಶಿಲ್ಪದ ವಿನ್ಯಾಸ ಸುಂದರವಾಗಿದೆ.



* ಪ್ರವಾಚಕರು, ಡಾ॥ ಆರ್. ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ, ಕ.ವಿ.ವಿ., ಧಾರವಾಡ-೫೮೦ ೦೦೩

ಶ್ರೀ ವಿಷ್ಣು ಶಿಲ್ಪ ೪ ಪೂಟು ಎತ್ತರ, ೩ ಪೂಟು ಅಗಲದ ದಪ್ಪ ಶಿಲೆ. ವಿಷ್ಣು ಸಮಭಂಗದಲ್ಲಿದ್ದು ಚತುರ್ಧಾರಿಯಾಗಿರುವನು. ನಿಂತ ನಿಲುವು ಸರಳ ಮುಖದ ಮೇಲೆ ಮಂದಹಾಸ, ತರುಣ ಮುಖಮುದ್ರೆ, ಸೌಮ್ಯಭಾವ ಅರ್ಧವೃತ್ತಾಕಾರದ ಶಿರಶ್ಚಕ್ರ ಕಿರೀಟ ಮಕುಟ ಕೊರಳಹಾರ ಕರ್ಣಕುಂಡಲ ಯಜ್ಞೋಪವೀತ ನಡುಪಟ್ಟಿ ಕೈಯ ಕಂಕಣ, ಅಭಯಹಸ್ತ, ಶಂಖ ಚಕ್ರಗಳಿದ್ದು ಉಟ್ಟ ಧೋತರದ ನಿರಿಗೆಗಳನ್ನು ಎಣಿಸಲು ಬರುವಂತೆ ವಿನ್ಯಾಸಪೂರ್ಣ ಗೆರೆಗಳನ್ನೊಳಗೊಂಡ ಕಲಾತ್ಮಕ ಶಿಲ್ಪ ಇದಾಗಿದ್ದು ಶಿಲ್ಪದ ಮೇಲ್ಭಾಗಕ್ಕೆ ಹಿಂಬದಿಯಲ್ಲಿ ಷಟ್‌ಕೋನಾಕೃತಿಯ ಕಮಾನು ಶಿಲ್ಪವಿನ್ಯಾಸಕ್ಕೆ ಮೆರುಗನ್ನಿತ್ತಿದ್ದು ಇದುಬಹುಶಃ ೧೩ನೆಯ ಶತಮಾನದ ಶಿಲ್ಪವಾಗಿದೆ.

ಮಾವಿನಕೊಪ್ಪದ ಎರಡು ಎತ್ತರದ ಪ್ರದೇಶಗಳಲ್ಲಿ ಸುಂದರವಾದ ಶಿವಲಿಂಗ, ಕೊರಳಗಂಟೆ ಹಣೆ ಪಟ್ಟಿ ಧರಿಸಿದ ಎರಡು ನಂದಿ ವಿಗ್ರಹಗಳು ಚೇತೋಹಾರಿಯಾಗಿವೆ. ಹಳಿಯಾಳದ ಗಣ್ಯ ನಾಗರಿಕ ಹಿರಿಯರಾರ ಶ್ರೀ ಸಿ.ಜಿ. ಆನೆಗುಂದಿ ಅವರ ಪ್ರಯತ್ನದಿಂದಾಗಿ ಶಿಲ್ಪಗಳು ಜೀರ್ಣೋದ್ಧಾರಗೊಂಡು ನಿಂತಿವೆ.

ಹಳಿಯಾಳದಿಂದ ೧೨ ಕಿ. ಮೀ. ದೂರದ ರಾಯಪಟ್ಟಣ, ಕದಂಬ ಕಾಲದ ರಾಯರ ಹೆಸರಿನಲ್ಲಿ ನಿರ್ಮಾಣಗೊಂಡಿದೆ. ಈಗ ಪಟ್ಟಣದ ಸುತ್ತ ದಟ್ಟಕಾಡು ಬೆಳೆದಿದ್ದು ಅಲ್ಲಲ್ಲಿ ಗೌಳಿಗರ ತಾಂಡಾದವರ ವಾಸದ ಕೇಂದ್ರಗಳಾಗಿವೆ. ಕಾಡಿನ ಮಧ್ಯದ ಕಲ್ಲಿನ ಕೊಂಪೆಗಳನ್ನು ದಾಟಿ ಮುಂದುವರೆದರೆ ಕದಂಬರ ಕಾಲದ ದೇವಸ್ಥಾನದ ಅವಶೇಷಗಳು ಇಲ್ಲಿ ವಿಶೇಷವಾಗಿ ಕಾಣಬರುತ್ತವೆ. ರಾಯ ಪಟ್ಟಣದ ಗೌಳಿಗರ ತಾಂಡಾ ತಲುಪಿದಾಗ ಕೆಲವು ದಿವಸಗಳ ಹಿಂದೆ ಬಚ್ಚಿಟ್ಟ ದಿವ್ಯಕ್ಕೆ ಅಂಜನ ಪ್ರಯೋಗ ಕೈಕೊಳ್ಳಲು ನೆರವು ನೀಡಿದ ಆಪಾದನೆಯ ಮೇರೆಗೆ ಎಷ್ಟೋ ಗ್ರಾಮಸ್ಥರನ್ನು ದಂಡಿಸಿದ್ದರಿಂದ ಕ್ಷೇತ್ರಕಾರ್ಯಕ್ಕೆ ಹೋದ ನಮ್ಮನ್ನು ಕಂಡು ಯಾವುದೇ ವಿಷಯ ತಿಳಿಸಲು ಹಿಂಜರಿದರು. ಆದರೂ ಅವರಲ್ಲಿ ವಿಶ್ವಾಸ ಪಡೆದು ಕಾಡಿನಲ್ಲಿ ಮುಂದುವರೆದರೆ ಹೆಜ್ಜೆ ಹೆಜ್ಜೆಗೆ ನಿರಾಸೆ ಆದರೂ ಕಾಡಿನ ಮಧ್ಯದಲ್ಲಿ ಬಂದು ನೋಡಲು ವಿನ್ಯಾಸಪೂರ್ಣ ವಾದ ಕದಂಬರ ಕಾಲದ ವೀರಗಲ್ಲು ಕಾಣಬಂತು. ಕಲಾತ್ಮಕವಾದ ಸ್ಮಾರಕ ೬ ಪೂಟು ಎತ್ತರ ೩$^{1}/_{2}$ ಪೂಟು ಅಗಲದ್ದು ಗೋವೆ ಕದಂಬರ ಕಾಲದ ಹೋರಾಟ ಒಂದಕ್ಕೆ ಬೆರಳು ತೋರುವಂತಿದೆ.

ಮೂರು ಪಟ್ಟಿಕೆಗಳಲ್ಲಿನ ಶಿಲ್ಪವು ಶಿಲ್ಪಿಯ ಕಲಾ ನೈಪುಣ್ಯತೆಗೆ ಸಾಕ್ಷಿಯಾಗಿದೆ. ಗೋವೆ ಕದಂಬರ ಕಾಲದ ಯುದ್ಧನೀತಿಯ ಚಾಕಚಕ್ಯತೆಯನ್ನು ವ್ಯಕ್ತಪಡಿಸಿದೆ; ವೀರಗಲ್ಲಿನ ಅರ್ಧಭಾಗದಷ್ಟು ಹೋರಾಟದ ಚಿತ್ರ, ರಥ ಕುದುರೆ ಕಾಲ್ದಳಗಳ ಯುದ್ಧ, ಸತ್ತು ಬಿದ್ದವರ ದೃಶ್ಯ ಹೋರಾಡುತ್ತಿರುವ ವೀರಾಧಿವೀರರ ಆಟಾಟೋಪ, ಕುದುರೆಗಳ ಓಟ, ಯುದ್ಧವೀರರನ್ನು ದೇವತೆಗಳನ್ನು ವೀರಸ್ವರ್ಗದತ್ತ ಕರೆದೊಯ್ಯುತ್ತಿರುವ ದೃಶ್ಯ, ಅಂದಿನ ಕಾಲದ ವೀರರು ಧರಿಸುವ ಬಟ್ಟೆ ಬರೆ ಕಿವಿಯೋಲೆಗಳು, ತಲೆಯ ಮೇಲೆ ಬೆಳ್ಗೊಡೆ, ಹಿಡಿದ ಬಿಲ್ಲುಬಾಣ, ಕೊಂಡ, ಖಡ್ಗ, ಢಾಲುಗಳನ್ನು ಚಿತ್ರಿಸಿದ ಸೂಕ್ಷ್ಮ ಸುಳುಹು ಹೊಳಹುಗಳ ವಿನ್ಯಾಸಪೂರ್ಣ ಶಿಲ್ಪವಾಗಿದೆ. ವೀರಗಲ್ಲು ಕಾಡಿನ ಬಯಲಲ್ಲಿರುದರಿಂದ ಪ್ರಕೃತಿ ಪ್ರಕೋಪಕ್ಕೆ ಸವಕಳಿಗೊಂಡಿದ್ದರೂ ಮೂಲಶಿಲ್ಪ ತನ್ನ ಸೌಂದರ್ಯ ವಿನ್ಯಾಸವನ್ನು ಮಬ್ಬಾದರೂ ಕಾಯ್ದುಕೊಂಡು ಬಂದಿದೆ.



ಹಳಿಯಾಳದಿಂದ ೮ ಕಿ.ಮೀ. ದೂರದ ಮುಂಡಿಕೆ ಪ್ರಾಚೀನ ಸೂರ್ಯದೇವಾಲಯದಿಂದ ಪ್ರಸಿದ್ಧಿ ಪಡೆದ ಪ್ರದೇಶ. ಪ್ರಾಚೀನವಾದ ಸೂರ್ಯನಾರಾಯಣನ ವಿಗ್ರಹ ಈ ಭಾಗದಲ್ಲಿ ಸೂರ್ಯೋಪಾಸನೆ ಸೂಚಿಸುವ ಅಂಶ. ಮುಂಡಿಕೆ ಎತ್ತರದ ದಿಗ್ಭಾಗದಲ್ಲಿ ಈ ಹಳೆಯ ದೇವಸ್ಥಾನವನ್ನು ಇತ್ತೀಚಿಗೆ ಜೀರ್ಣೋದ್ಧಾರಗೊಳಿಸಿರುವರು. ಗರ್ಭಗುಡಿಯಲ್ಲಿ ಎತ್ತರದ ಚತುರಸ್ರ ಪಾಣಿಪೀಠದ ಮೇಲೆ ಸುಂದರವಾದ ವಿಶೇಷ ವಿನ್ಯಾಸಗಳಿಂದ ಕೂಡಿದ ಸೂಕ್ಷ್ಮಕೆತ್ತನೆಯ ಸಮಭಂಗಿಯ

ಸೂರ್ಯ ವಿಗ್ರಹ ಕಣ್ಮನ ತಣಿಸುವಂತಿದೆ. ದ್ವಿಭುಜ ಸೂರ್ಯನು, ಪದ್ಮಪೀಠದ ಮೇಲೆ ನಿಂತಿದ್ದು ಧರಿಸಿದ ಕೈ ಬಳೆ, ತೋಳಬಂಧ, ಭುಜಬಂಧ, ಕೈಯಲ್ಲಿ ಉಂಗುರಗಳು, ಕಾಲುಗೆಜ್ಜೆ, ಕಾಲ್ಗಡಗ, ಮೇಖಲೆ, ಕಾಲುಂಗುರ, ಪದ್ಮ ಪದಕದ ಮಾಲೆ, ಯಜ್ಞೋಪವೀತ, ವೈಜಯಂತಿಮಾಲೆಯಂತಹ ಸೂಕ್ಷ್ಮ ಸುಳುವಿನ ಆಭರಣಗಳಿಂದ ಸೂರ್ಯನಾರಾಯಣ ಅಲಂಕೃತ ಗೊಂಡಿರುವನು. ತಲೆಯ ಮೇಲೆ ಕರಂಡಕಿರೀಟ, ಸಿಂಹಮುಖ ದಿಂದ ಹೊರಹೊರಟ ಮುತ್ತಿನ ಕುಚ್ಚು ಕಲಾತ್ಮಕವಾಗಿದೆ. ಕಿರೀಟದ ನಡುವೆ ಪದಕವಿದೆ. ಕಿರೀಟದ ಅಕ್ಕ ಪಕ್ಕ ಮುತ್ತಿನ ಸರ ನೇತಾಡುತ್ತಿದ್ದು, ಸೂರ್ಯನ ಹಿಂದೆ ಒಂದು ಕಾಲದಲ್ಲಿ ಸುಂದರ ಪ್ರಭಾವಳಿ ಇದ್ದು ಅದು ಕಾಲಾಂತರದಲ್ಲಿ ತುಂಡು ತುಂಡಾಗಿ ಹೋಗಿದೆ. ಆ ತುಂಡುಗಳಲ್ಲಿಯೂ ಕಲಾತ್ಮಕ ಹೂಬಳ್ಳಿ, ಅಷ್ಟದಿಕ್ಪಾಲಕರು, ಉಷಾ ಪ್ರತ್ಯುಷೆಯರನ್ನು ನೋಡಬಹುದು.

ಸೂರ್ಯನ ಎಡಬಲದಲ್ಲಿ ಚಾಮರಧಾರಣಿಯರು ಒಂದು ಕೈಯಲ್ಲಿ ಚಾಮರ ಇನ್ನೊಂದು ಕೈಯಲ್ಲಿ ಪೂರ್ಣಫಲ ಹಿಡಿದು ನಿಂತಂತಿದ್ದು ಆ ಶಿಲ್ಪದ ತಲೆಯ ಮೇಲೆ ಹೂಗೊಂಚಲು ಇದೆ. ಸೂರ್ಯ ಪೀಠದ ಉಬ್ಬುಶಿಲ್ಪದಲ್ಲಿ ಏಳು ಕುದುರೆಗಳ ನಡುವೆ ಸಾರಥಿ ಅರುಣನ ಶಿಲ್ಪ ಕಲಾತ್ಮಕಮಾದರಿಯ ಶಿಲ್ಪವೆನಿಸಿದೆ. ಇಷ್ಟು ವಿನ್ಯಾಸಪೂರ್ಣವಾದ ಸೂರ್ಯನಾರಾಯಣನ ಕಂಡರಿಸುವಲ್ಲಿ ಶಿಲ್ಪಿಯ ಧನ್ಯತೆ ವ್ಯಕ್ತಗೊಂಡಿದೆ.



ಇಲ್ಲಿಯ ಪರಿವಾರ ದೇವತೆಗಳಲ್ಲಿ ಭೈರವ, ಮಹಿಷಾಸುರ ಮರ್ದಿನಿ, ಗಣಪತಿ ವಿಗ್ರಹಗಳಿವೆ. ದೇವಸ್ಥಾನದ ಆವರಣದಲ್ಲಿ ತೀರ್ಥಂಕರರ ಪ್ರತಿಮೆಯೊಂದಿದ್ದು ಕುಳಿತ ನಿಲುವಿನ ವಿಗ್ರಹವಿದು.

ಇಕ್ಕೆಲಗಳಲ್ಲಿ ಎರಡು ಚಾಮರಗಳಿವೆ. ಅಕ್ಕಪಕ್ಕದಲ್ಲಿ ಇಬ್ಬರು ಭಕ್ತರ ಚಿತ್ರ ಇದ್ದು ವಿಗ್ರಹದ ಸುತ್ತ ಸುಂದರ ಮಕರತೋರಣವಿದೆ. ತಲೆಯ ಮೇಲೆ ಅರ್ಧವೃತ್ತಾಕಾರದ ಪ್ರಭಾಮಂಡಲ, ಕಿರೀಟ ರಹಿತ ತಲೆ, ಕರ್ಣಕುಂಡಲ, ಕೊರಳಲ್ಲಿ ಯಜ್ಞೋಪವೀತ, ತೋಳಬಳೆ ಸಹಿತವಾದ ವಿಗ್ರಹ ಗಂಭೀರವಾಗಿದೆ.



ಮುಂಡಿಕೆಯನ್ನು ಗಮನಿಸಿದ ಸಂಶೋಧಕರು ಈಗಾಗಲೇ ಸೂರ್ಯದೇವಸ್ಥಾನದ ಬಗ್ಗೆ ವಿವರಿಸಿರುವರು. ಜೀರ್ಣಗೊಂಡ ಕಲ್ಮೇಶ್ವರ ಮತ್ತು ಸೂರ್ಯನಾರಾಯಣ ದೇವಾಲಯದ ಹತ್ತು ಹೆಜ್ಜೆಯಲ್ಲಿ ರಾಷ್ಟ್ರಕೂಟಕಾಲದ ವೀರಗಲ್ಲೊಂದು ಇದ್ದು ಗೋವೆ ಕದಂಬರ ಮೇಲೆ ಬೆಳಕು ಬೀರುವಂತಿದೆ. ಹೀಗೆ ಒಂದೊಂದಾಗಿ ಗೋವೆ ಕದಂಬರ ಗ್ರಾಮಗಳ ಕ್ಷೇತ್ರಕಾರ್ಯ, ಇನ್ನು ಹೆಚ್ಚಿನ ಪ್ರಾಚ್ಯ ಇತಿಹಾಸ ಅರಿಯಲು ಸಹಕಾರಿಯಾಗುವಂತಿದೆ.

(ಕ್ಷೇತ್ರಕಾರ್ಯದಲ್ಲಿ ನೆರವು ನೀಡಿದ ಹಿರಿಯರು ಪೂಜ್ಯರು ಆದ ಹಳಿಯಾಳದ ಗೃಹಸ್ಥರಾದ ಶ್ರೀ ಸಿ. ಜಿ. ಆನೆಗುಂದಿಯರು ಹಾಗೂ ಸೋದರ ಸುಭಾಷ ಪಾಟೀಲರಿಗೆ ಕೃತಜ್ಞತೆಗಳನ್ನು ಸಲ್ಲಿಸುವೆ)



ಡಾ।। ಜಿ. ವಿ. ಕಲ್ಲಾಪುರ*

# ಯಿಕ್ಕೇರಿ ಅಘೋರೇಶ್ವರ ದೇವಾಲಯದ ಕಾಷ್ಠ ಶಿಲ್ಪಗಳು

ಶಿವಮೊಗ್ಗ ಜಿಲ್ಲೆಯ ಸಾಗರ ಗುಡಿಕಾರಿಕೆಗೆ ಅತ್ಯಂತ ಹೆಸರುವಾಸಿ ಕೇಂದ್ರವಾಗಿದೆ. ಈ ಪ್ರಾಂತ್ಯದಲ್ಲಿ ಗುಡಿಗಾರಿಕೆ ತಲತಲಾಂತರದಿಂದ ಸಾಗಿ ಬಂದಿದೆ. ಶ್ರೀಗಂಧ, ಚಂದನ, ಹಲಸು, ಬೀಟೆ, ಸಾಗುವಾನಿ ಮುಂತಾದ ಮರಗಳನ್ನು ಬಳಸಿ ಗುಡಿ ಗೋಪುರದ ವಿನ್ಯಾಸ, ಶಿಲ್ಪಕಲೆ, ವಿವಿಧ ಅಲಂಕಾರಗಳಿಂದ ಕೂಡಿದ ಕಂಭಗಳ ನಿರ್ಮಾಣ, ಅಲಂಕೃತ ದೇವತಾ ವಿಗ್ರಹಗಳ, ಭಿತ್ತಿ ಫಲಕಗಳ ನಿರ್ಮಾಣ ಇವುಗಳಲ್ಲಿ ಇಲ್ಲಿನ ಗುಡಿಗಾರರ ಕಲಾಕೌಶಲ್ಯ ಎದ್ದು ಕಾಣುತ್ತದೆ. ಕಾಷ್ಠಶಿಲ್ಪದ ಇತಿಹಾಸಕ್ಕೆ ಸಂಬಂಧಿಸಿದಂತೆ ಇದುವರೆಗೂ ಸಂಶೋಧನೆಗಳು ವಿರಳವೆಂದೇ ಹೇಳಬಹುದು. ಮಹಾರಾಷ್ಟ್ರದಲ್ಲಿ ಇದರ ಬಗ್ಗೆ ಗ್ರಂಥಗಳಿವೆ. ಕರ್ನಾಟಕದಲ್ಲಿ ಅಲ್ಲೊಂದು ಇಲ್ಲೊಂದು ಲೇಖನಗಳನ್ನು ಮಾತ್ರ ಗುರುತಿಸಬಹುದಾಗಿದೆ.

ಕೆಳದಿ ಅರಸರು ಕಾಷ್ಠಶಿಲ್ಪಗಳಿಗೆ ಆಶ್ರಯ ನೀಡಿದ್ದರು ಎಂಬುದಕ್ಕೆ ಕೆಳದಿಯ ಪಾರ್ವತೀ ದೇವಾಲಯದ ಛತ್ತಿನಲ್ಲಿರುವ (ಸೀಲಿಂಗ್) ವಿವಿಧ ದೇವತೆಗಳ ಫಲಕಗಳೇ ಸಾಕ್ಷಿ. ಕೆಳದಿ ಅರಸರ ದೊಡ್ಡಸಂಕಣ್ಣನಾಯಕನು ತೀರ್ಥಯಾತ್ರೆಗೆ ಹೋದಾಗ ಭೂಪಾಲ್‌ನಿಂದ ಕಾಷ್ಠಶಿಲ್ಪಿಗಳ ಒಂದು ಕುಟುಂಬವನ್ನು ಕರೆತಂದು ಅವರಿಂದ ಆ ಕೆಲಸವನ್ನು ಮಾಡಿಸಿದನೆಂದೂ, ಅವರ ಅದ್ಭುತ ಕೌಶಲವನ್ನು ನೋಡಿ ಅವರಿಗೆ ಒಂದು ನಿಲುವಂಗಿಯನ್ನು ಕೊಟ್ಟನೆಂದು ಹೇಳುತ್ತಾರೆ. ಅಂತಹ ಒಂದು ಕುಟುಂಬ ಸಾಗರದಲ್ಲಿ ಇಂದಿಗೂ ಇದ್ದು ನಿಲುವಂಗಿಯ ತುಂಡನ್ನು ನೋಡಬಹುದಾಗಿದೆ.[೧] ಈ ನಿಟ್ಟಿನಲ್ಲಿ ಕೆಳದಿ ಇತಿಹಾಸವನ್ನು ಅಧ್ಯಯನ ಮಾಡಲು ಕಾಷ್ಠ ಶಿಲ್ಪಗಳ, ಗುಡಿಗಾರರ ಇತಿಹಾಸವನ್ನು ಸಂಶೋಧನೆಗೆ ಒಳಪಡಿಸುವುದು ಅವಶ್ಯಕವಾಗಿದೆ.

ಯಿಕ್ಕೇರಿ ಅಘೋರೇಶ್ವರ ದೇವಾಲಯದಲ್ಲಿ ಅನೇಕ ಬಿಡಿ ಬಿಡಿ ಕಾಷ್ಠಶಿಲ್ಪಗಳಿದ್ದು ಅವುಗಳನ್ನು ಇದುವರೆಗೂ ಯಾರೂ ಗುರುತಿಸಿಲ್ಲ. ಅಲ್ಲಿನ ಕೆಲವು ಕಾಷ್ಠಶಿಲ್ಪಗಳ ಕುರಿತು ಇಲ್ಲಿ ಸಚಿತ್ರವಾಗಿ ವಿವರಿಸಲಾಗಿದೆ. ಯಿಕ್ಕೇರಿ ಅಘೋರೇಶ್ವರ ದೇವಳದ ಗರ್ಭಗೃಹ ಪ್ರವೇಶಿಸುವ ಪ್ರಧಾನ ದ್ವಾರದ ಬಲಭಾಗದಲ್ಲಿ ಒಂದು ಕತ್ತಲ ಕೋಣೆಯಿದ್ದು ಅಲ್ಲಿ ಈ ವಿಗ್ರಹಗಳು ರಕ್ಷಣೆ ಇಲ್ಲದೆ ಅನಾಥವಾಗಿ ಬಿದ್ದಿವೆ. ಬಹುಶಃ ಈ ಕಾಷ್ಠಶಿಲ್ಪಗಳನ್ನು ಹಿಂದೆ ರಥೋತ್ಸವದಲ್ಲಿ ಬಳಸುತ್ತಿದ್ದರು ಎಂದು ಕಾಣುತ್ತದೆ. ಕ್ರಿ. ಶ. ೧೬೨೩ರಲ್ಲಿ ಯಿಕ್ಕೇರಿಯನ್ನು ಸಂದರ್ಶಿಸಿದ ಇಟಲಿಯ ಪ್ರವಾಸಿ ಪಿಯತ್ರೊಡೆಲ್ಲಾವಲ್ಲೆ ರಥೋತ್ಸವವನ್ನು ನೋಡಿದ್ದು ತನ್ನ ಪ್ರವಾಸಿ ಕಥನದಲ್ಲಿ ಹೀಗೆ ಹೇಳಿದ್ದಾನೆ[೨]: "ದೇವಸ್ಥಾನದ ಎದುರುಗಡೆ ಇವರ ದೇವರನ್ನು ಸಾಗಿಸುತ್ತಿದ್ದ ದೊಡ್ಡ ರಥವನ್ನು ಕಂಡೆ. ರಥದ ಮೇಲೆ ಜನ ತುಂಬಿಕೊಂಡಿದ್ದರು. ರಥದ ಚಕ್ರಗಳ ವ್ಯಾಸ ನನ್ನ ಕೈಯಲ್ಲಿ ಹದಿನಾಲ್ಕು ಗೇಣುಗಳಷ್ಟು ಇತ್ತು. ಅಸಹ್ಯವಾದ ಭಂಗಿಯಲ್ಲಿರುವ ಮರದ ವಿಗ್ರಹಗಳನ್ನು ಅದರಲ್ಲಿ ನಿಲ್ಲಿಸಿದ್ದರು. ಅವುಗಳಿಗೆ ತಕ್ಕ ಬಣ್ಣ ಹಚ್ಚಿದ್ದರು. ರಥದೊಳಗೆ ಅನೇಕ ಜನ ನಿಲ್ಲುವಷ್ಟು ಜಾಗವಿತ್ತು. ರಥ ಎಷ್ಟು ದೊಡ್ಡದಾಗಿತ್ತೆಂದರೆ ಅದು ಸಾಗಲು ರೋಮಿನ ಅತ್ಯಂತ ಅಗಲವಾದ ಬೀದಿ ಬೇಕಾಗುತ್ತದೆ" ಎಂದೆಲ್ಲ ಇದೆ. ಹಿಂದಿನ ರಥ ಈಗ ಇದ್ದಂತೆ ಕಾಣುವುದಿಲ್ಲ. ಹಳೆಯ ರಥವೊಂದಿದ್ದು ಅದಕ್ಕೆ ೬೦ ವರ್ಷ ಆಗಿದೆ ಎಂದು ದೇವಳದ ಸಮಿತಿಯವರು ತಿಳಿಸಿದ್ದಾರೆ. ಈಗ ನಾಲ್ಕು ವರ್ಷದ ಕೆಳಗೆ ಹೊಸ ರಥವೊಂದನ್ನು ಮಾಡಿಸಿದ್ದಾರೆ. ಇದು ಸುಂದರವಾದ ಕಾಷ್ಠಶಿಲ್ಪಗಳಿಂದ ಕೂಡಿದೆ.

ಹಿಂದಿನ ಕಾಷ್ಠಶಿಲ್ಪಗಳು ಜೀರ್ಣಾವಸ್ಥೆಯಲ್ಲಿದ್ದು ಅವುಗಳ ರಕ್ಷಣೆ ಅವಶ್ಯಕವಾಗಿದೆ. ಉತ್ತಮ ಸ್ಥಿತಿಯಲ್ಲಿರುವ ಕಾಷ್ಠಶಿಲ್ಪಗಳ ಕುರಿತು ವಿವರಗಳನ್ನು ಇಲ್ಲಿ ಕೊಡಲಾಗಿದೆ.

**ಕುದುರೆ ಶಿಲ್ಪ**

ಮುಖವನ್ನು ರಾಜಗಾಂಭೀರ್ಯದಿಂದ ಕೂಡಿರುವಂತೆ ಕೆತ್ತಲಾಗಿದೆ. ಕಂಠದಲ್ಲಿ ಎರಡು ಕಂಠೀಹಾರಗಳಿದ್ದು, ಮೊದಲನೆಯದು ಕುತ್ತಿಗೆಗೆ ಅಂಟಿಕೊಂಡಿರುವಂತೆ ಕೆತ್ತಲಾಗಿದ್ದು ನಾಲ್ಕು ಸಾಲಿನ ಮಣಿಗಳಿಂದ ಕೂಡಿರುವ ಕುಸುರಿ ಕೆತ್ತನೆಯು ಸೂಕ್ಷ್ಮಹಾರವಾಗಿದೆ. ಎರಡನೆಯ ಹಾರವು ಬೆನ್ನಿಂದ ಪ್ರಾರಂಭಿಸಿ ಕುತ್ತಿಗೆಯ ಕೆಳಭಾಗದವರೆಗೂ ಹೂವಿನ ಹಾರದಂತೆ ಸುಂದರವಾಗಿ ಕೆತ್ತಲಾಗಿದೆ. ಅದರ ಪದಕವು ಸುಂದರವಾಗಿ ಕೆತ್ತಲಾಗಿದೆ. ಕಾಲಿನ ಮಣಿಕಟ್ಟಿನಲ್ಲಿ ಕಾಲ ಖಡಗಗಳನ್ನು ಕೆತ್ತಲಾಗಿದೆ. (ಅಳತೆ : ೨೯"x೯"x೯")

**ಸಿಂಹ ಶಿಲ್ಪ**

ಎರಡು ಕಾಲುಗಳನ್ನು ಎತ್ತಿ ನಿಂತ ಭಂಗಿಯಲ್ಲಿ ಕೆತ್ತಲಾಗಿರುವ ಸುಂದರಶಿಲ್ಪ. ಸಿಂಹದ ಯಡಗಾಲಿನ ಭಾಗ ಮುರಿದು ಹೋಗಿದೆ. ಬಲಗಾಲನ್ನು ಸುಂದರವಾದ ಕೆತ್ತನೆಯ ಬಳ್ಳಿಯಿಂದ ಕೂಡಿದ ಕಂಬದ ಮೇಲೆ ಇಟ್ಟಿದ್ದು, ಅದರ ಪಾದ ಹಾಗೂ ಉಗುರುಗಳ ಕೆತ್ತನೆ ಗಮನಾರ್ಹ. ಕಂಠಹಾರಗಳು,

* ಕೆಳದಿ ವಸ್ತು ಸಂಗ್ರಹಾಲಯ, ಕೆಳದಿ, ಶಿವಮೊಗ್ಗಾ ಜಿಲ್ಲೆ

ಬೆನ್ನಮೇಲಿನ ಹಾಸುಬಟ್ಟೆಯಲ್ಲಿನ ಕೆತ್ತನೆಗಳು ಶಿಲ್ಪಿಯ ಕುಶಲತೆಗೆ ಉದಾಹರಣೆಯಾಗಿವೆ. ತೆರೆದ ಬಾಯಿಯ ಸಿಂಹದ ನಾಲಿಗೆ, ದಂತಪಂಕ್ತಿ, ಕೋರೆಹಲ್ಲುಗಳು, ದೊಡ್ಡದಾಗಿ ತೆರೆದಿರುವ ಕಣ್ಣುಗಳ ಕೆತ್ತನೆಗಳು ಅಪೂರ್ವವಾಗಿವೆ. (ಅಳತೆ : ೩೨"x೨೧"x೯")

**ನಿಂತ ಭಂಗಿಯ ಶಿಲ್ಪ**

ನೃತ್ಯಭಂಗಿಯಲ್ಲಿ ಕೆತ್ತಲ್ಪಟ್ಟಿರುವ ಸುಂದರ ಕಾಷ್ಠ ಶಿಲ್ಪವೊಂದಿದ್ದ, ಕೈಗಳು ಮುರಿದು ಹೋಗಿವೆ. ತಲೆಯ ಮೇಲಿನ ಪೇಟದ ಕೆತ್ತನೆ ಸುಂದರವೂ ವಿಚಿತ್ರವೂ ಆಗಿದೆ. ದೊಡ್ಡ ದೊಡ್ಡ ಕಣ್ಣುಗಳು, ಕಿವಿಗಳು, ಕರ್ಣಕುಂಡಲಗಳು ಹಾಗೂ ಕೋರೆ ಹಲ್ಲುಗಳನ್ನು ಕೆತ್ತಲಾಗಿದೆ. ಎರಡು ಕಂಠಿಹಾರಗಳಿದ್ದು ಎರಡಕ್ಕೂ ಪದಕಗಳನ್ನು ಕೆತ್ತಲಾಗಿದೆ. ಸೊಂಟದ ಬಟ್ಟೆಯನ್ನು ಅಂದವಾಗಿ ಶೃಂಗರಿಸಲಾಗಿದೆ. (ಅಳತೆ : ೪೦"x೧೨"x೯")

**ಕುಳಿತ ಭಂಗಿಯ ಶಿಲ್ಪಗಳು**

ಬಲಗಾಲ ಮಂಡಿ ಹಾಗೂ ಯಡಗಾಲ ಪಾದವೂರಿ ಬಲಗೈಯನ್ನು ಸೊಂಟದ ಮೇಲಿಟ್ಟು ಕುಳಿತಿರುವ ಭಂಗಿಯಲ್ಲಿ ಕೆತ್ತಲಾಗಿದೆ. ಬಲಗಾಲ ಪಾದ ಮುರಿದಿದೆ. ತಲೆಯ ರುಮಾಲನ್ನು ವಿಚಿತ್ರವಾಗಿ ಕೆತ್ತಲಾಗಿದೆ. ಕಿವಿಯಲ್ಲಿ ಓಲೆ, ಕಂಠಹಾರಗಳನ್ನು ಕೆತ್ತಲಾಗಿದೆ. ಅಗಲವಾದ ಕಣ್ಣುಗಳು, ದೊಡ್ಡ ಕಿವಿಗಳು, ಮೂಗು, ಕೋರೆ ಹಲ್ಲುಗಳನ್ನು ಕೆತ್ತಲಾಗಿದೆ. ದುಂಡಾದ ದೇಹವನ್ನು ಬಿಡಿಸಲಾಗಿದೆ. ಇದರಲ್ಲಿ ಯಡಗಿವಿ, ತೆರದ ಬಾಯಿ, ಕೈಯಲ್ಲಿನ ಬುಜಗಳಲ್ಲಿನ ಕಡಗಗಳು ಹಾಗೂ ಮಣಿಕಟ್ಟಿನ ಕಡಗಗಳ ಸುಂದರ ಕೆತ್ತನೆಗಳು ಅಂದವಾಗಿ ಕೆತ್ತಲ್ಪಟ್ಟಿವೆ.

**ಕುಳಿತ ಭಂಗಿಯ ಶಿಲ್ಪಗಳು**

ಯಡಗಾಲಿನ ಮಂಡಿಯೂರಿ ಬಲಗಾಲನ್ನು ಅರ್ಧಮಡಚಿ ಪಾದ ಊರಿ ಕುಳಿತ ಭಂಗಿಯನ್ನು ಶಿಲ್ಪ ಎರಡು ಪಾರ್ಶ್ವಗಳಿಂದ ಛಾಯಾಚಿತ್ರ ತೆಗೆಯಲಾಗಿದೆ. ಇದು ಗರುಡನ ಕಾಷ್ಠ ಶಿಲ್ಪ. ತಲೆಯ ಮೇಲೆ ಕಿರೀಟ ಅದರ ಮೇಲೆ ಹೆಡೆ ಎತ್ತಿ ಕುಳಿತಿರುವ ನಾಗನ ಕೆತ್ತನೆ ಅಂದವಾಗಿದೆ. ಸುಂದರವಾದ ಕಣ್ಣುಗಳು, ಮೂಗು ಹಾಗೂ ಮಂದಹಾಸದ ಬಾಯಿಗಳನ್ನು ಕೆತ್ತಲಾಗಿದೆ. ಕರ್ಣ ಕುಂಡಲಗಳನ್ನು ಕಿರೀಟಕ್ಕೆ ಸೇರಿಸಿ ಕೆತ್ತಲಾಗಿದೆ. ಕಲಾತ್ಮಕವಾದ ಕಂಠಹಾರಗಳು ಪದಕಗಳನ್ನೊಳಗೊಂಡಿವೆ. ಭುಜದ ಮೇಲಿನ ಕೆತ್ತನೆ, ಸೊಂಟದಲ್ಲಿನ ವಸ್ತ್ರದ ಕೆತ್ತನೆ ಸುಂದರವಾಗಿದೆ. ಎರಡು ಕೈಗಳ ಮುಂಭಾಗಗಳು ಕಳೆದು ಹೋಗಿದೆ. ಕಾಲುಗಳಲ್ಲಿ ಕಡಗಗಳ ಕೆತ್ತನೆ ಉತ್ತಮವಾಗಿದೆ. (ಅಳತೆ : ೨೯"x೧೯"x೯")

**ಬಸವನ ಮೇಲೆ ಕುಳಿತಿರುವ ವ್ಯಕ್ತಿ ಶಿಲ್ಪ**

ಮುಂಗಾಲುಗಳನ್ನು ಬಗ್ಗಿಸಿ ಹಿಂಗಾಲುಗಳನ್ನು ನೇರ ವಾಗಿರುವ ಬಸವನ ಮೇಲೆ ಕುಳಿತಿರುವ ವ್ಯಕ್ತಿಯದು ಕಲಾತ್ಮಕ ಶಿಲ್ಪ. ಬಸವನಿಗೆ ಮೂಗುದಾರ, ಕಂಠಹಾರ, ಬೆನ್ನುಹಾಸುಗಳಿಂದ ಹಾಸಲಾಗಿದೆ. ವ್ಯಕ್ತಿಯ ಎಡಕೈಯಲ್ಲಿ ಗುರಾಣಿಯಿದ್ದು, ಬಲಗೈಯನ್ನು ಮೇಲಕ್ಕೆ ಎತ್ತಿ ಹಿಡಿದಿದ್ದಾನೆ. ಬಲಗೈಯಲ್ಲಿದ್ದ ಖಡ್ಗ ಮುರಿದು ಹೋಗಿರಬಹುದು. ವಿಚಿತ್ರವಾದ ರುಮಾಲು, ಅಗಲವಾದ ಕಣ್ಣುಗಳು, ಕಿವಿಗಳು ಹಾಗೂ ಕೋರೆ ಹಲ್ಲುಗಳನ್ನು ಕೆತ್ತಲಾಗಿದೆ. (ಅಳತೆ : ೩೫"x೨೪"x೧೧")

ಯಿಕ್ಕೇರಿಯು ಸೇರಿದಂತೆ ಕೆಳದಿ ಸಂಸ್ಥಾನದ ಇತಿಹಾಸ ಅಧ್ಯಯನಕ್ಕೆ ಸಹಾಯಕವಾಗುವ ಅನೇಕ ಕಾಷ್ಠಶಿಲ್ಪಗಳು ಕೆಳದಿ, ಶಂಕರನಾರಾಯಣ, ಕಾನೆಲೆ ಮುಂತಾದೆಡೆ ಉಪಲಬ್ಧವಿದ್ದು ಅವುಗಳ ಅಧ್ಯಯನ ಅತ್ಯಂತ ಅವಶ್ಯಕವಾಗಿದೆ.



(ಕಾಷ್ಠಶಿಲ್ಪಗಳ ಛಾಯಾಚಿತ್ರ ತೆಗೆಯಲು ಸಹಕರಿಸಿದ ದೇವಾಲಯದ ಚೌಕಿದಾರರಿಗೆ ಧನ್ಯವಾದಗಳು)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಈ ವಿಚಾರವನ್ನು ಡಾ|| ಕೆಳದಿ ವೆಂಕಟೇಶ್ ತಿಳಿಸಿರುತ್ತಾರೆ.

೨. ಪವಾಸಿ ಕಂಡ ಇಂಡಿಯಾ, ಸಂಪುಟ ೪., ಪು. ೨೯೧-೯೫ ; ಡಾ|| ಸಿ. ಮಹದೇವ ಅವರ ವಿಜಯನಗರ ಕಾಲದ ಕಾಷ್ಠಶಿಲ್ಪ.

ಅಶೋಕ ಕೆ. ಕಂದಗಲ್ಲ*

# ರಾಮಥಾಳದ ಪ್ರಾಚೀನ ಅವಶೇಷಗಳು

ರಾಮಥಾಳ ಮಲಪ್ರಭಾ ನದಿ ದಂಡೆಯ ಮೇಲಿನ ಒಂದು ಸಣ್ಣ ಗ್ರಾಮ. ಜಿಲ್ಲಾ ಕೇಂದ್ರವಾದ ಬಾಗಲಕೋಟೆಯಿಂದ ೨೫ ಕಿ. ಮೀ. ದೂರದಲ್ಲಿದೆ. ಈ ಗ್ರಾಮದ ಪಶ್ಚಿಮಕ್ಕೆ ಗುಡ್ಡದ ಸಾಲು ಇದ್ದು, ಒಂದು ಫರ್ಲಾಂಗ್ ದೂರದ ಗುಡ್ಡದಲ್ಲಿ ಮ್ಯಾಂಗ್‌ನೀಸ್ ಅದಿರು ದೊರೆಯುತ್ತದೆ. ಈ ಗ್ರಾಮದಲ್ಲಿ ಒಂದು ಅಪ್ರಕಟಿತ ಶಾಸನ ಮತ್ತು ಅನೇಕ ಮೂರ್ತಿ ಶಿಲ್ಪಗಳು ನಮಗೆ ದೊರೆಯುತ್ತವೆ.

**ಪ್ರಾಚೀನ ನೆಲೆಯ ಸ್ಥಳೀಯ ಹೆಸರು :** ಈ ಗ್ರಾಮದ ಪ್ರಾಚೀನತೆಯ ಕುರುಹನ್ನು ತಿಳಿಸಲು ಲಭ್ಯವಾಗಿರುವ ಅವಶೇಷಗಳಲ್ಲಿ ನಮಗೆ ನಿರ್ದಿಷ್ಟ ಮಾಹಿತಿ ಲಭ್ಯವಾಗುವುದಿಲ್ಲ. ಹೀಗಿದ್ದಾಗ್ಯೂ ಕೂಡಾ ನಾವು ಈ ಗ್ರಾಮದ ಪ್ರಾಚೀನತೆಯನ್ನು ಅವಲೋಕಿಸಿದಾಗ

೧. ರಾಮನು ವಾಸಿಸಿದ ಸ್ಥಳ ರಾಮಥಾಳ ಆಗಿರಬಹುದು.

೨. ರಾಮನಾಳ - 'ನಾಳ್' ಎಂದರೆ 'ನಾಡು' ಎಂಬರ್ಥವನ್ನು ಸೂಚಿಸುವುದರಿಂದ ರಾಮನ ನಾಡು ಎಂಬರ್ಥವನ್ನು ಹೊಂದಿರಬಹುದು. ಈ ಪ್ರದೇಶದಲ್ಲಿ ಬೇರೆ ಬೇರೆ ಗ್ರಾಮಗಳ ಹೆಸರನ್ನು, ಗಮನಿಸಿದಾಗ ಬೇನಾಳ, ಬಸವನಾಳ ಮುಂತಾದ 'ನಾಳ್' ಎಂದು ಕೊನೆಗೊಳ್ಳುವ ಹೆಸರಿನ ಹಳ್ಳಿಗಳು ನಮಗೆ ಕಂಡುಬರುತ್ತವೆ. ಈ ಗ್ರಾಮದಲ್ಲಿ ರಾಮಲಿಂಗೇಶ್ವರ ದೇವಾಲಯವಿದ್ದುದರಿಂದ ಈ ಊರನ್ನು ರಾಮಥಾಳ ಎಂದು ಕರೆಯುತ್ತಾರೆ, ಎಂಬುದು ಜನರಾಡಿಕೆ.

**ಪ್ರಾಚೀನ ಅವಶೇಷಗಳು**

ಈ ಗ್ರಾಮದ ಹೊರಗೆ ನದಿಯ ಸಮೀಪದಲ್ಲಿರುವ ರಾಮಲಿಂಗೇಶ್ವರ ದೇವಾಲಯವಿದ್ದು, ಅದು ಇಂದು ಪುನರ್ ನಿರ್ಮಾಣಗೊಂಡಿದೆ. ಈ ದೇವಾಲಯದ ಆವರಣದಲ್ಲಿ ಸೂರ್ಯ, ವಿಷ್ಣು, ಗಣಪತಿ, ನಂದಿ ವಿಗ್ರಹಗಳು, ನಾಗಶಿಲ್ಪಗಳು, ಪೀಠದ ಮುಂಭಾಗದಲ್ಲಿ ಹಾರುತ್ತಿರುವ ಕುಬ್ಜ ಸ್ತ್ರೀಯರ ಶಿಲ್ಪಗಳನ್ನು ಕಾಣುತ್ತೇವೆ. ದೇವಾಲಯದ ಕಟ್ಟಡಕ್ಕೆ ಸಂಬಂಧಿಸಿದ ಇನ್ನಿತರ ಯಾವುದೇ ಅವಶೇಷಗಳು ನಮಗೆ ಸಿಗುವುದಿಲ್ಲ. ಇಲ್ಲಿರುವ ಶಿಲ್ಪಗಳು ವಾಡಿಕೆಯಂತೆ ಈ ಪ್ರದೇಶದಲ್ಲಿ ಹೇರಳವಾಗಿ ದೊರೆಯುವ ನಸುಗೆಂಪು ವರ್ಣದ ಮರಳುಗಲ್ಲಿನಿಂದ ನಿರ್ಮಾಣವಾಗಿದೆ.

**ಸೂರ್ಯ :** ಕರ್ನಾಟಕದಲ್ಲಿ ಸೂರ್ಯರಾಧಕರಾದ ಸೌರಮತದವರು ಹೆಚ್ಚಾಗಿರಲಿಲ್ಲ. ಸೂರ್ಯನಿಗೆ ಮೀಸಲಾದ ದೇವಾಲಯಗಳು ಹಿಂದೆ ಇದ್ದಿರಬಹುದಾದರೂ ಇಂದು ಹೆಚ್ಚಾಗಿ ಕಂಡುಬರುವದಿಲ್ಲ. ಶಾಸನಗಳಲ್ಲಿ ಸೂರ್ಯ ಮತ್ತು ಚಂದ್ರರ ಶಿಲ್ಪಗಳು ಕಂಡು ಬಂದರೂ ಅವು ಕೇವಲ ವೃತ್ತಾಕಾರವಾಗಿ ಮಾತ್ರ ಕಾಣುತ್ತೇವೆ. ಇತರೇ ದೈವ ಬಿಂಬಗಳಲ್ಲಿ ವೈವಿಧ್ಯವನ್ನು ತೋರಿದ ಶಿಲ್ಪಿ ಸೂರ್ಯಬಿಂಬದಲ್ಲಿ ವೈವಿಧ್ಯವನ್ನು ತೋರಿಸಿರುವದಿಲ್ಲ. ಇದಕ್ಕೆ ಸಾಂಪ್ರದಾಯಿಕ ಕಟ್ಟು ನಿಟ್ಟು ಅಥವಾ ಮುಂದೆ ನಾರಾಯಣನ ವಿಗ್ರಹದ ಪ್ರಭೇದವಾಗಿ ಮೂಡಿ ಬಂದಿರವುದು ಕಾರಣವಾಗಿರಬಹುದು. ಶಾಸನಗಳಲ್ಲಿ ಕಣ್ಣಿಗೆ ಕಾಣುವ ಸೂರ್ಯನ ರೂಪವನ್ನು ಬಿಡಿಸಿದರೆ, ಶಿಲ್ಪಗಳಲ್ಲಿ ಕಾಲ್ಪನಿಕ ರೂಪವನ್ನು ಬಿಡಿಸಿರುತ್ತಾರೆ.[೧]

ಸೂರ್ಯ ಆರಾಧನೆ ಕರ್ನಾಟಕಕ್ಕೆ ಸೌರಾಷ್ಟ್ರದಿಂದ ಬಂದಿರಬೇಕು. ಬಾದಾಮಿಯ ಚಾಲುಕ್ಯರು ಸೌರಾಷ್ಟ್ರದಲ್ಲಿ ತಮ್ಮ ಅಧಿಪತ್ಯವನ್ನು ಸ್ಥಾಪಿಸಿದ್ದರು. ಹೀಗಾಗಿ ಎರಡೂ ದೇಶಗಳ ಸಂಪರ್ಕದಿಂದ ಈ ಉಪಾಸನೆ ಬಂದಿರಬೇಕು.[೨] ಈ ಸೂರ್ಯ ವಿಗ್ರಹ ದೊರೆತಿರುವ ಪ್ರದೇಶ ಚಾಲುಕ್ಯರ ಪ್ರಮುಖ ಪಟ್ಟಣಗಳಾದ ಐಹೊಳೆ, ಪಟ್ಟದಕಲ್ಲು, ಬಾದಾಮಿಗೆ ಹತ್ತಿರವಿರುವದನ್ನು ಗಮನಿಸಬಹುದು. ಬಾದಾಮಿಯ ಚಾಲುಕ್ಯರು ಸೂರ್ಯನಿಗಾಗಿಯೇ ಪ್ರತ್ಯೇಕ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅಲ್ಲದೇ, ಅನೇಕ ದೇವಾಲಯಗಳಲ್ಲಿ ಸೂರ್ಯನ ಮೂರ್ತಿಯನ್ನು ಕಾಣಬಹುದು. ಇದಕ್ಕೆ ಕೊಂತಿಗುಡಿ, ದುರ್ಗಾ ಮತ್ತು ಸೂರ್ಯ ದೇವಾಲಯಗಳನ್ನು ಉದಾಹರಿಸಬಹುದು.

ಇಲ್ಲಿರುವ ಸೂರ್ಯನ ವಿಗ್ರಹವು ೩ ಅಡಿ ಎತ್ತರವಾಗಿದ್ದು, ಪೀಠದ ಮೇಲೆ ನಿಲ್ಲಿಸಲಾಗಿದೆ ಸೂರ್ಯನು ಸಮಭಂಗಿಯಲ್ಲಿ ನಿಂತಿದ್ದು ತನ್ನ ಎರಡೂ ಕೈಗಳಲ್ಲಿ ಉದ್ದನೆಯ ಗಂಟುಳ್ಳ ಕಮಲದ ಮೊಗ್ಗುಗಳನ್ನು ಹಿಡಿದಿದ್ದಾನೆ. ಅವನನ್ನು ಅತ್ಯಂತ ಶ್ರೀಮಂತ ಆಭರಣಗಳಾದ ಮುಕುಟ, ಕುಂಡಲ, ಕಂಠಹಾರ, ಉದರಬಂಧ, ಕಟಿಬಂಧ, ಯಜ್ಞೋಪವೀತ, ವೈಜಯಂತಿಮಾಲಾ, ಕಂಕಣ ಮತ್ತು ಕಡಗಗಳಿಂದ ಶೃಂಗರಿಸಲಾಗಿದೆ. ಕಟಿಯ ಮುಂಭಾಗದಲ್ಲಿ ಬಟ್ಟೆಯ ಗಂಟು ಇಳಿಬಿದ್ದಿದೆ. ಸೂರ್ಯನ ಇಕ್ಕೆಲಗಳಲ್ಲಿ ಚಾಮರ ಹಿಡಿದಿರುವ ರಾಜ್ಞಿ ಮತ್ತು ನಿಷ್ಕುಂಬರು ಸೂರ್ಯನ ಕಡೆಯ ಕೈಗಳನ್ನು ನಡುವಿನ ಮೇಲಿರಿಸಿ, ಹೊರಕೈಗಳಲ್ಲಿ ಚಾಮರ ಹಿಡಿದಿದ್ದಾರೆ. ಈ ವಿಗ್ರಹ ಕೆಂಪು ಉಸುಕುಮಿಶ್ರಿತ ಒರಟಾದ ಕಲ್ಲಿನಲ್ಲಿ ಕಂಡರಿಸಿರುವದರಿಂದ ಇಲ್ಲಿ ನುಣುಪಾದ ಕೆತ್ತನೆಯನ್ನು

* ಇತಿಹಾಸ ಉಪನ್ಯಾಸಕರು, ಶಂಕ್ರಪ್ಪ ಸಕ್ರಿ ಪ.ಪೂ. ಮಹಾವಿದ್ಯಾಲಯ, ಬಾಗಲಕೋಟೆ





ಕಾಣುವುದಿಲ್ಲ. ವಿಗ್ರಹದ ಪೀಠದ ಕೆಳಭಾಗದಲ್ಲಿ ಏಳು ಅಶ್ವಗಳನ್ನು ಕಂಡರಿಸಿದ್ದಾರೆ.

**ವಿಷ್ಣು** : ಇಲ್ಲಿರುವ ವಿಷ್ಣುವಿನ ವಿಗ್ರಹವು ಯೋಗಸ್ಥಾನಕ ಮೂರ್ತಿಯಾಗಿದ್ದು ಪೀಠದ ಮೇಲೆ ನಿಂತಿದ್ದಾನೆ. ಸುಮಾರು ೩ ಅಡಿ ಎತ್ತರವಿದ್ದು. ಶಂಖ, ಚಕ್ರ, ಗದಾ, ಪದ್ಮಕೈಯಲ್ಲಿ ಹಿಡಿದಿದ್ದಾನೆ. ಕಿರೀಟಮುಕುಟ, ಉದರಬಂಧ, ಯಜ್ಞೋಪವೀತ, ಮುಂತಾದುವುಗಳ ಧಾರಣ ಹೊಂದಿದ್ದಾನೆ. ಈ ವಿಗ್ರಹ ಕೂಡಾ ಒರಟಾದ ಕಲ್ಲಿನಿಂದ ನಿರ್ಮಾಣವಾಗಿರುವದರಿಂದ ಇಲ್ಲಿ ಸುಂದರವಾದ ಕೆತ್ತನೆಯನ್ನು ಕಾಣುವುದಿಲ್ಲ.

**ಗಣಪತಿ** : ರುದ್ರನ ಆಕಾಶಭಾಗದ ಸಂಕೇತವಾದ ಗಣಪತಿಯು, ದ್ವಿಭಂಗದಲ್ಲಿದ್ದು, ಸುಮಾರು ೨ ೧/೨ ಅಡಿ ಎತ್ತರವಿದ್ದಾನೆ. ಕೈಗಳಲ್ಲಿ ತ್ರಿಶೂಲ, ಅಂಕುಶ, ಮೋದಕವನ್ನು ಹಿಡಿದಿದ್ದಾನೆ. ಯಜ್ಞೋಪವೀತ, ಉದರಬಂಧ, ಕಿರೀಟ ಮುಕುಟ ಮುಂತಾದುವುಗಳನ್ನು ಧರಿಸಿದ್ದಾನೆ. ಈ ವಿಗ್ರಹ ಕೂಡಾ ನುಣುಪಾದ ಕೆತ್ತನೆಯನ್ನು ಹೊಂದಿರುವದಿಲ್ಲ.

**ಕುಬ್ಜ ಸ್ತ್ರೀ ವಿಗ್ರಹದ ಪೀಠ** : ಇದೇ ಆವರಣದಲ್ಲಿ ತ್ರುಟಿತವಾದ ಒಂದು ಪೀಠವಿದ್ದು, ಅದರ ಮುಂಭಾಗದಲ್ಲಿ ಹಾರುತ್ತಿರುವ ಭಂಗಿಯಲ್ಲಿರುವ ಏಳು ಕುಬ್ಜ ಸ್ತ್ರೀ ವಿಗ್ರಹಗಳನ್ನು ಕಂಡರಿಸಿದ್ದಾರೆ. ಬಹುಶಃ ಆ ಪೀಠದಲ್ಲಿ ಸ್ಥಾಪನೆಯಾದ ವಿಗ್ರಹವನ್ನು ಹೊತ್ತೊಯ್ಯುವಂತೆ ಈ ಕುಬ್ಜ ಸ್ತ್ರೀ ವಿಗ್ರಹಗಳನ್ನು ಕಂಡರಿಸಿದ್ದಾರೆ. ಇವರನ್ನು ಹಾರುತ್ತಿರುವ ಗಂಧರ್ವ ಕನ್ಯೆಯರೆಂದು ಕರೆಯಬಹುದೇ?

**ನಾಗಶಿಲ್ಪ** : ನಾಗ ಆರಾಧನೆ ಸಾಕಷ್ಟು ಪ್ರಾಚೀನತೆಯನ್ನು ಹೊಂದಿದ್ದು, ಈ ನಾಗನನ್ನು ಶೈವ, ವೈಷ್ಣವ, ಜೈನ ಮತ್ತು ಬೌದ್ಧ ಧರ್ಮದೊಂದಿಗೆ ಕಾಣುತ್ತೇವೆ. ಇಲ್ಲಿ ಅನೇಕ ನಾಗಶಿಲ್ಪಗಳಿದ್ದು ಅವುಗಳಲ್ಲಿ ಒಂದು ನಾಗ ಹೆಡೆ ಬಿಚ್ಚಿ ನಿಂತಿರುವ ಶಿಲ್ಪ ಮತ್ತು ಎರಡು ನಾಗಗಳು ಒಂದಕೊಂಡು ತಳುಕು ಹಾಕಿದ ರೀತಿಯಲ್ಲಿ ಕಲ್ಲಿನಲ್ಲಿ ಕಂಡರಿಸಲಾಗಿದೆ.

**ನಂದಿ** : ದೇವಾಲಯಗಳಲ್ಲಿ ನಂದಿಯನ್ನು ಲಿಂಗದ ಮುಂಭಾಗದಲ್ಲಿ, ಅಂತರಾಳ ಅಥವಾ ನವರಂಗದಲ್ಲಿ ಪ್ರತಿಷ್ಠಾಪಿಸಿರುತ್ತಾರೆ. ಪ್ರತ್ಯೇಕ ಮಂಟಪಗಳನ್ನು ಕಾಣುತ್ತೇವೆ. ಈ ಆವರಣದಲ್ಲಿ ಮೂರು ನಂದಿ ವಿಗ್ರಹಗಳಿದ್ದು ಅವು ಕೊರಳಲ್ಲಿ ಗಂಟೆಯ ಸರ ಮುಂತಾದ ಅಲಂಕಾರವನ್ನು ಹೊಂದಿವೆ.

**ಲಿಂಗು** : ಈಶ್ವರನ ಪ್ರತಿರೂಪವಾದ ಲಿಂಗುವನ್ನು ಗರ್ಭಗೃಹದಲ್ಲಿ ಪಾಣೀಪೀಠದಲ್ಲಿ ಪ್ರತಿಷ್ಠಾಪಿಸಿದ್ದು ಪೀಠ ಸೇರಿದಂತೆ ಸುಮಾರು ೪ ಅಡಿ ಎತ್ತರವಾಗಿದೆ. ಇದು ಕಪ್ಪು ಕಲ್ಲಿನಲ್ಲಿ ನಿರ್ಮಾಣವಾಗಿದ್ದು, ಅಷ್ಟಬಂಧವನ್ನು ಹೊಂದಿದೆ.

ಇಲ್ಲಿರುವ ಮೂರ್ತಿಶಿಲ್ಪಗಳು ನಸುಗೆಂಪು ವರ್ಣದ ಮರಳುಗಲ್ಲಿನಲ್ಲಿ ತಯಾರಾಗಿದ್ದು, ಇವುಗಳು ಹೆಚ್ಚು ಅಲಂಕರಣೆಯನ್ನು ಹೊಂದಿರುವುದಿಲ್ಲ. ಈ ಮೂರ್ತಿಗಳ ಕಿರೀಟ ಮತ್ತು ಬಾದಾಮಿ ಚಾಲುಕ್ಯರ ದೇವಾಲಯಗಳಲ್ಲಿರುವ ಸೂರ್ಯನ

ಶಿಲ್ಪಗಳನ್ನು ಆಧರಿಸಿ ಇವು ಅದೇ ಕಾಲಕ್ಕೆ ಸಂಬಂಧಿಸಿವೆಯೆಂದು ಹೇಳಬಹುದು.

ಇದೇ ಗ್ರಾಮದ ಮಧ್ಯದಲ್ಲಿರುವ ಹನುಮನ ದೇವಾಲಯದ ಮುಂಭಾಗದಲ್ಲಿ ಒಂದು ಶಾಸನವಿದ್ದು ಇದು ೪ ಅಡಿ ಎತ್ತರ ನಸುಗೆಂಪು ವರ್ಣದ ಮರಳುಗಲ್ಲಿನಲ್ಲಿಯೇ ಇದೆ. ಈ ಶಾಸನದಲ್ಲಿ ಆರು ಸಾಲುಗಳನ್ನು ಕಾಣುತ್ತೇವೆ. ಇದು ವೈಷ್ಣವ ಧರ್ಮದ ದಾನಶಾಸನವಾಗಿದ್ದು, ಮೇಲ್ಭಾಗದಲ್ಲಿ ಸೂರ್ಯ - ಚಂದ್ರ, ಶಂಖ ಮತ್ತು ಚಕ್ರದ ಉಬ್ಬು ಶಿಲ್ಪವನ್ನು ಕಾಣುತ್ತೇವೆ.



ಕೆಳಭಾಗದ ಬಲತುದಿಯಲ್ಲಿ ಕರುವಿಗೆ ಹಾಲುಕುಡಿಸುತ್ತಿರುವ ಹಸುವಿನ ಚಿತ್ರವೂ ಇದೆ.

*ಶಾಸನದ ಪಠ್ಯ*

೧ ಗಿರಿಯ ಮೇಲೆ ತಿರುಮಲ
೨ ದೇವರಿಗೆ ಅಐವ
೩ ತನೆಯವಿದ್ಯೆ
೪ ಕೆಮಿನಿರಾಯ
೫ -ಉ ಸು ರ
೬ ವಾ ಗ

ಈ ಶಾಸನದ ಪಠ್ಯವನ್ನು ನೋಡಲಾಗಿ ಗಿರಿಯ (ಬೆಟ್ಟ) ಮೇಲಿರುವ ತಿರುಮಲ ದೇವರಿಗೆ ಐವತ್ತನೆ ನೈವಿದ್ಯೆಗೆ ಕೆಮಿನಿರಾಯ ಎಂಬ ಉಲ್ಲೇಖವನ್ನು ಕಾಣುತ್ತೇವೆ. ತಿರುಮಲ ದೇವರ ನೈವೆದ್ಯಕ್ಕಾಗಿ ದಾನ ಬಿಟ್ಟ ವಿಷಯವಿದ್ದರೂ ಅದು ಅಸ್ಪಷ್ಟವಾಗಿದೆ.

ಈ ಶಾಸನದಲ್ಲಿರುವ ಅಕ್ಷರಗಳ ಶೈಲಿಯನ್ನು ಆಧರಿಸಿ ಮತ್ತು ಶಾಸನ ಕಲ್ಲಿನ ಮೇಲ್ಭಾಗದಲ್ಲಿರುವ ಶಂಖ, ಚಕ್ರಗಳನ್ನು ಆಧರಿಸಿ ಇದು ವಿಜಯನಗರ ಕಾಲಕ್ಕೆ ಸಂಬಂಧಿಸಿದ್ದೆಂದು ಹೇಳಬಹುದು. ಅಲ್ಲದೆ ಮಲಪ್ರಭಾನದಿಯ ಎಡ ದಂಡೆಯ ಮೇಲಿರುವ ಕಮತಗಿಯಲ್ಲಿ ವಿಜಾಪೂರದ ಆದಿಲ್‌ಷಾಹಿಗಳ ಕಾಲದ ಒಂದು ತಾಮ್ರಪಟ ಶಾಸನವಿರುವದರಿಂದ ಈ ನದಿಯ ಎಡದಂಡೆ ವಿಜಪೂರದ ಆದಿಲ್‌ಷಾಹಿಗಳಿಗೆ ಸೇರಿದರೆ ಬಲದಂಡೆ ವಿಜಯನಗರದ ಅರಸರಿಗೆ ಸೇರಿತ್ತೆನ್ನಬಹುದು. ಅಲ್ಲದೇ ಇದನ್ನು ಪುಷ್ಟೀಕರಿಸಲು ಕಮತಗಿಯ ಶ್ರೀ ಹೊಳೆಹುಚ್ಚೇಶ್ವರಮಠಕ್ಕೆ ವಿಜಾಪೂರದ ಆದಿಲ್‌ಷಾಯಿಗಳು ಭಕ್ತರಾಗಿದ್ದು, ಆ ಪ್ರದೇಶಕ್ಕೆ ಅವರು ಭೇಟಿ ನೀಡಿದ ವಿಷಯವನ್ನು ಶ್ರೀ ಹೊಳೆಹುಚ್ಚೇಶ್ವರ ಮಹಾತ್ಮೆ ಎಂಬ ಪುರಾಣದ ಮೂಲಕ ತಿಳಿದುಕೊಳ್ಳ ಬಹುದಾಗಿದೆ.

ಒಟ್ಟಾರೆಯಾಗಿ ರಾಮಥಾಳ ಗ್ರಾಮದಲ್ಲಿ ಲಭ್ಯವಿರುವ ಅವಶೇಷಗಳಲ್ಲಿ ಮೂರ್ತಿಶಿಲ್ಪಗಳನ್ನು ಗಮನಿಸಿದರೆ ಅವುಗಳ ಶೈಲಿಯ ಆಧಾರದ ಮೇಲೆ ಅವು ಬಾದಾಮಿ ಚಾಲುಕ್ಯರ ಕಾಲಕ್ಕೆ ಸೇರಿದವೆಂದು ಹೇಳಬಹುದು. ಇಲ್ಲಿರುವ ಶಾಸನವು ವಿಜಯನಗರದ ಅರಸರ ಕಾಲಕ್ಕೆ ಸೇರಿದ್ದಾಗಿದೆ.



(ಈ ಪ್ರಬಂಧವನ್ನು ರಚಿಸುವಲ್ಲಿ ನೆರವಾದಂತಹ ಗುರುಗಳಾದ ಶ್ರೀ ಬಿ. ಎನ್. ಹಲಗತ್ತಿ, ಶ್ರೀ. ಜ. ಬಿ. ಕುಲಕರ್ಣಿ. ಶ್ರೀ ಡಿ. ಜ. ಕುಲಕರ್ಣಿ ಹಾಗೂ ನಮ್ಮ ಪ್ರಾಚಾರ್ಯರು ಹಾಗೂ ಸಹೋದ್ಯೋಗಿ ಗುರುಗಳಿಗೂ ಸ್ನೇಹಿತ ಮಹೇಶ ಪಾಟೀಲ ಇನ್ನುಳಿದ ಸ್ನೇಹಿತರಿಗೂ ನನ್ನ ನೆಚ್ಚಿನ ವಿದ್ಯಾರ್ಥಿ ವಿದ್ಯಾರ್ಥಿನಿಯರೂ ಸೇರಿದಂತೆ ಎಲ್ಲರನ್ನೂ ಸ್ಮರಿಸುತ್ತೇನೆ)

## ಆಧಾರ ಗ್ರಂಥಸೂಚಿ

೧. ಡಾ|| ದೇವರಕೊಂಡಾರಡ್ಡಿ., **ಗಂಗರ ಶಿಲ್ಪ ಕಲೆ**, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.
೨. ಜೆ. ಟಿ. ಜಯರಾಮಯ್ಯ., 'ಸೂರ್ಯ', **ಶಿಲ್ಪ ಕಲಾ ಪ್ರಪಂಚ**, ಅ. ಲ. ನರಸಿಂಹನ್ (ಸಂ.), ಕರ್ನಾಟಕ ಲಲಿತ ಅಕಾಡೆಮಿ, ಬೆಂಗಳೂರು.
೩. ಎಸ್. ಕೆ. ರಾಮಚಂದ್ರರಾವ್., (೧೯೭೫), **ಮೂರ್ತಿಶಿಲ್ಪ ನೆಲೆ - ಹಿನ್ನೆಲೆ**, ಬೆಂಗಳೂರು ವಿ. ವಿ.

ಡಾ|| ಎಸ್. ಕೆ. ಜೋಶಿ*

# ಕದಂಬರ ವಾಸ್ತುಶಿಲ್ಪ ವೈಶಿಷ್ಟ್ಯ

ಕದಂಬ ಮನೆತನದ ಅರಸರು ತಮ್ಮ ಇಡೀ ಸಾಮ್ರಾಜ್ಯವನ್ನೇ ಬನವಾಸಿಕದಂಬರು, ಹಾನಗಲ್ಲ ಕದಂಬರು, ಹಲಸಿ (ಪಲಶಿಕಾ), ಕದಂಬರು, ಗೋವೆ ಕದಂಬರು ಹೀಗೆ ವಿಭಾಗಗಳನ್ನಾಗಿ ಮಾಡಿ ಆಯಾ ಕದಂಬ ಭ್ರಾತೃಗಳು ಅಲ್ಲಲ್ಲಿ ಮುಂದೆ ಬಹುಕಾಲದವರೆಗೂ ಆಳಿದರು. ಕ್ರಿ. ಶ. ೫೨೫ರ ಬನವಾಸಿ ಕದಂಬರ ಆಡಳಿತ ಕ್ಷೀಣವಾಗುತ್ತ ನಡೆದಾಗ, ಕ್ರಿ. ಶ. ೫೦೦ರ ಸ್ಥಾಪಿತ ಪ್ರಬಲ ಬಾದಾಮಿ ಚಾಲುಕ್ಯ ಸಾಮ್ರಾಜ್ಯದಲ್ಲಿ, ತದನಂತರ ಕ್ರಿ. ಶ. ೭೩೫ರ ಬಾದಾಮಿ ಚಾಲುಕ್ಯರು ಕ್ಷೀಣರಾಗಿ, ಮಳಖೇಡದ ರಾಷ್ಟ್ರಕೂಟರು ಪ್ರಬಲರಾದಾಗ, ಅವರಂತೆಯೇ ನಡೆದುಕೊಂಡು ಕಲ್ಯಾಣದ ಚಾಲುಕ್ಯರು ಕ್ರಿ. ಶ. ೯೭೩-೧೧೫೮) ಪ್ರಸಿದ್ಧರಾದಾಗ, ಅವರ ರಾಜಛತ್ರಿಯಲ್ಲಿ ಕದಂಬರು ಆಶ್ರಯ ಪಡೆದರು. ದೇವಗಿರಿಯ ಯಾದವರ ವರೆಗೂ (ಕ್ರಿ. ಶ. ೧೨-೧೩ ಶತಮಾನ), ಈ ನಾಲ್ಕು ವಿಭಾಗಗಳಾದ ಕದಂಬರು ಮಂಡಲರಾಜರಾಗಿ ಉಳಿದೇ ಇದ್ದರು. ಈ ಕದಂಬ ಮನೆತನ ಬೇರೆ ಬೇರೆ ಮಂಡಳಗಳಲ್ಲಿ, ಕ್ರಿ. ಶ. ೩೨೫ರಿಂದ - ಕ್ರಿ.ಶ. ೧೪೯೦ರವರೆಗೆ, ಅಂದರೆ "ಸುಮಾರು ಒಂದು ಸಾವಿರ ವರುಷಗಳವರೆಗೆ ಆಳುತ್ತ ಬಂದ ಶ್ರೇಯ ಈ ವಂಶಜರಿಗೆ ಸಲ್ಲತಕ್ಕದ್ದು. ಪ್ರಾಯಶಃ ಇಷ್ಟು ದೀರ್ಘವಾಗಿ ಆಡಳಿತೆಯಲ್ಲಿ ಇದ್ದಂಥ ಅರಸು ಮನೆತನಗಳು ಇತಿಹಾಸ ಸಂಪುಟಗಳಲ್ಲಿ ಇಲ್ಲವೇ ಇಲ್ಲ ಎಂದು, ಹೇಳಬಹುದು" (ಡಾ. ಡಿ. ಸಿ. ಸರ್ಕಾರ್). ತದನಂತರ, ಕದಂಬ ಸಾಮ್ರಾಜ್ಯದ ಈ ತುಕಡಿಗಳು ಮಿಣುಕುತ್ತವೆ. ವಿಜಯನಗರ (೧೩೩೬- ೧೫೬೫) ಕಾಲದಲ್ಲಿ ಗೋವೆಯ ಕದಂಬ ಆಮಾತ್ಯ, ಮಾಧವಾಮಾತ್ಯ 'ಗೋವಾನಗರ ವಿರಾಜಮಾನ' ನೆಂದು ಹರಿಹರನ ಶಾಸನ ತಿಳಿಸುತ್ತದೆ! ಮುಂದೆ ಬೀಳಗಿ, ಸ್ವಾದಿ, ಅರಸುಮನೆತನಗಳೂ ಕೊನೆಯ ಕೊಂಡಿಗಳಾಗಿ ಕದಂಬ ಮನೆತನಕ್ಕೆ ಸಂಬಂಧಿಸಿವೆ.

ಕದಂಬರು ರಾಜಕೀಯ ಚಟುವಟಿಕೆಯಲ್ಲಿ ಪ್ರಥಮ ಸಾಮ್ರಾಜ್ಯವನ್ನು ಕರ್ನಾಟಕದಲ್ಲಿ ನಿರ್ಮಿಸಿ, ರಾಜ ಹಾಗೂ ರಾಜ್ಯ ವ್ಯವಸ್ಥೆಯಲ್ಲಿ ಪ್ರಥಮರೆನ್ನಿಸಿಕೊಂಡಂತೆ, ಸಾಂಸ್ಕೃತಿಕವಾಗಿಯೂ ಪ್ರಥಮರೆನ್ನಿಸಿದ ಶ್ರೇಯ ಹೊಂದಿದ್ದಾರೆ. ಅವರು ತಮ್ಮ ಇತಿಹಾಸದುದ್ದಕ್ಕೂ ನೀಡಿದ ಶಿಲಾಶಾಸನಗಳು, ಕೋಟೆ ಕೊತ್ತಲಗಳು, ದೇವಸ್ಥಾನಗಳು, ಕೆರೆಗಳು, ಶಿಲಾಮೂರ್ತಿಗಳು, ಅವರ ಬೌದ್ಧಿಕ ಹಿರಿಮೆಯನ್ನೂ ಮಾನಸಿಕ ಹರವನ್ನೂ, ಅವರ ಶ್ರದ್ಧೆಯ ದೈವ ನಂಬುಗೆಯನ್ನೂ, ಸಾಮಾಜಿಕ ಕಳಕಳಿಯ ವ್ಯವಸ್ಥೆಯನ್ನೂ ತೋರಿಸುತ್ತವೆ.

ಹಾಗೆ ನೋಡಿದಲ್ಲಿ, ಶಿಲಾ ಶಾಸನಗಳ ಸಂಬಂಧವಾಗಿ ಹೇಳಬೇಕಾದರೆ ಅವರದು ಎತ್ತಿದ ಕೈ. ಬನವಾಸಿಯ ನಾಗ ಪ್ರತಿಮೆಯ ಶಿಲಾಲೇಖನವು ನಾಗಪ್ರತಿಮಾ ಸೌಂದರ್ಯವನ್ನು ದ್ವಿಗುಣತಗೊಳಿಸಿದೆ. ಈ ಶಾಸನ ಹಾಗೂ ನಾಗಪ್ರತಿಮೆಕೊರೆದ ರೂವಾರಿ ಸಂಜಯಂತೀ ನಗರದ (ಬನವಾಸಿಯ) ನಟಕನೆಂದು ಅಭಿಮಾನದಿಂದ ಹೇಳುತ್ತದೆ. ಮೃಗೇಶವರ್ಮನ (ಕ್ರಿ. ಶ. ೪೫೫-೪೮೦) ಶಾಸನ ಲಿಪಿ ಸುಂದರವಾದ ಪೇಟಿಕಾಸಿರದ ಲಿಪಿಯಲ್ಲಿ ಜೋಡಿಸಿದಂತಿದೆ. ರವಿವರ್ಮ (ಕ್ರಿ. ಶ. ೪೮೫-೫೧೪) ನ ಸ್ತಂಭ ಶಿಲಾ ಶಾಸನದ ಬನವಾಸಿಯ ಸಮೀಪ, ಗುಡ್ನಾಪುರ, ಕೆಳಗಿನಿಂದ ಮೇಲಕ್ಕೆ ಕೆತ್ತಲಾದ ಲೇಖ-ವೈಶಿಷ್ಟ್ಯ. ಗುಡ್ನಾಪುರದ ವಿಶಾಲವಾದ ಸರೋವರವನ್ನು ವರ್ಣಿಸುತ್ತ, ಅಲ್ಲಿಯ ದಡದಲ್ಲಿ ಕಾಮಜಿನಾಲಯ ಹಾಗೂ ಅಂತಃಪುರ ಇತ್ತೆಂದು ಹೇಳುತ್ತ, ವಂಸತೋತ್ಸವದ ಬಗ್ಗೆಯೂ ಹೇಳಿದೆ. ತಾಳಗುಂದ ಶಿಲಾಲೇಖ ಕದಂಬ ವಂಶದ ಪ್ರಾರಂಭಿಕ ಅರಸರುಗಳನ್ನು ಸ್ಮರಿಸುತ್ತದೆ. ಹೀಗೆ ಕದಂಬರು ಪುರಾಭಿಲೇಖ ಶಾಸ್ತ್ರದಲ್ಲಿ, ಕರ್ನಾಟಕದ ಇತಿಹಾಸದಲ್ಲಿ, ಮಹತ್ತರ ಕೊಡುಗೆ ನೀಡಿದ್ದಾರೆ.

ಕಂದಬರ ವಾಸ್ತು ನೆಲೆಗಳು ಹಾಗೂ ವಾಸ್ತುಶಿಲ್ಪಗಳನ್ನು ಮೂರು ಪ್ರಕಾರಗಳಲ್ಲಿ ವಿಭಾಗಿಸಬಹುದುಃ೧. ರಕ್ಷಣಾ ವಾಸ್ತು, ೨. ಧಾರ್ಮಿಕ ವಾಸ್ತು ಹಾಗೂ ೩. ಸರ್ವಜನೀಯ ವಾಸ್ತು-ಈ ಮೂರೂ ವಾಸ್ತು ಕ್ಷೇತ್ರಗಳಲ್ಲಿ ಹಾಗೂ ಮೂರ್ತಿಶಾಸ್ತ್ರದಲ್ಲಿ ಅವರ ಕೊಡುಗೆ ವಿಶೇಷವಾಗಿದೆ;

೧. **ರಕ್ಷಣಾ ಸ್ಮಾರಕಗಳು** : ಕದಂಬರ ರಾಜ್ಯವಿಸ್ತಾರ ಸಾಮಾನ್ಯವಾಗಿ ಮಲೆನಾಡು ಹಾಗೂ ಅದರ ಸೆರಗು ಹಾಗೂ ಕರಾವಳಿ ಪ್ರದೇಶದಲ್ಲಿ ಹಬ್ಬಿಕೊಂಡಿದ್ದರಿಂದ, ವನದುರ್ಗ, ಜಲದುರ್ಗ ಹಾಗೂ ಮೃದ್‌ದುರ್ಗಗಳಿಗೆ ಎಡೆಮಾಡಿಕೊಡ ಬೇಕಾಯಿತು. ಸುತ್ತಲಿನ ಪರಿಸರ ಹಾಗೂ ನಿಸರ್ಗ ನೀಡಿದ ವಸ್ತುಗಳನ್ನು ಉಪಯೋಗಿಸಿ ಕದಂಬರು ರಕ್ಷಣಾ ಕೋಟೆಗಳನ್ನು ಕಟ್ಟಿದರು. ಕೌಟಿಲ್ಯನ 'ಅರ್ಥಶಾಸ್ತ್ರ'ದಲ್ಲಿ ನಮೂದಿಸಿದ ರಕ್ಷಣಾ ನಿರ್ಮಾಣಾವ್ಯವಸ್ಥೆಯನ್ನು ಅವರು ಉಪಯೋಗಿಸಿದ್ದಾರೆ ಎಂದು ಸೂಚಿಸಬಹುದು. ಬನವಾಸಿಯಲ್ಲಿ ಸುತ್ತುವರಿದ ವರದಾ ನದಿಯ ರಕ್ಷಣಾ-ಜಲಬಲವನ್ನು ಉಪಯೋಗಿಸಿ ಅದರ ಅಂಚಿನಲ್ಲಿ,

* ಪುರಾತತ್ವವಿದ, 'ಶ್ರೀಕೃಪಾ', ಸಿಲ್ವರ್ ಆರ್ಚರ್ಡ್, ಶ್ರೀರಂಗ ರಸ್ತೆ, ಧಾರವಾಡ - ೫೮೦ ೦೦೧









ಹಂಪಿ - ಜೈನಬಸದಿಗಳ ಸಮೂಹ
ಕದಂಬ ನಾಗರ ಶೈಲಿ ವಿಜಯನಗರದ ಅರಸರ ಕಾಲದವರೆಗೂ
(ಕ್ರಿ. ೧೩೩೬-೧೫೬೫) ಹಬ್ಬಿ, ಉಪಯೋಗಿಸಲ್ಪಟ್ಟಿತು.




ಕದಂಬರ ಕಾಲದ
ಗೋಪಕ ಪಟ್ಟಣದ ನಕ್ಷೆ

ಎತ್ತರವಾದ ದಿಬ್ಬಗಳಿಂದ ಜೋಡಿಸಿದ ಮೃದ್‌ದುರ್ಗವನ್ನು ಕಟ್ಟಿದ್ದಾರೆ. ಅವುಗಳ ಮೇಲೆ ಎತ್ತರವಾದ ಗಿಡಗಳನ್ನೂ ಬೆಳೆಯಿಸಿ, ಆಕ್ರಮಣವನ್ನು ತಡೆಯಲು ಸೈನಿಕರನ್ನು ನಿಯಮಿಸುತ್ತಿದ್ದರು. ಅಲ್ಲಲ್ಲಿ ವೀಕ್ಷಣಾ ದಿಬ್ಬಗಳನ್ನು ಏರಿಸಿದ್ದಾರೆ. ಈ ಮಣ್ಣಿನ ಗೋಡೆಯ ಹೊರಬದಿಗೆ ವಿಶಾಲವಾದ ನೀರಿನ ಅಗಳನ್ನು ರಚಿಸಿದ್ದಾರೆ. ಉತ್ತರ ಹಾಗೂ ಆಗ್ನೆಯ ದಿಕ್ಕಿನಲ್ಲಿ, ಆಯಕಟ್ಟಾದ ಸ್ಥಳಗಳಲ್ಲಿ, ಎರಡು ಪ್ರವೇಶ ದ್ವಾರಗಳನ್ನು ಕಟ್ಟಿದ್ದಾರೆ. ಈ ರಕ್ಷಣಾ ಗೋಡೆಯ ಒಳಗಡೆ ಮಧುಕೇಶ್ವರ ದೇವಾಲಯ, ಶ್ರೀ ಕಂಠೇಶ್ವರ ದೇವಾಲಯ, ಶ್ರೀ ನರಸಿಂಹ ದೇವಾಲಯಗಳನ್ನು ನಿರ್ಮಿಸಿದ್ದಾರೆ. ರಥಬೀದಿ, ರಾಜ ಬೀದಿ, ಕೆಳಗಿನ ಕಿರಿ ಬೀದಿ, ಮೇಲಿನ ಕಿರಿ ಬೀದಿ ಹೀಗೆ ವಿಶಾಲ ಬೀದಿಗಳು ಇನ್ನೂ ಉಪಯೋಗದಲ್ಲಿವೆ. ನದಿಗೆ ಇಳಿಯಲು ಸೋಪಾನ ಕಟ್ಟಿಸಿದ್ದಾರೆ. ಇನ್ನು ಇದಕ್ಕೆ ಹೊಂದಿಕೊಂಡು ಉತ್ತರಕ್ಕೆ 'ಗುಡ್ನಾಪುರ' ವೆಂಬ ಸುಂದರ ತಟಾಕವುಳ್ಳ ನಗರಭಾಗವಿದೆ. ಇಲ್ಲಿ ಕೂಡ ಸುತ್ತಲೂ ಗೋಡೆ (ಈಗ ಅಲ್ಪಸ್ವಲ್ಪ ಉಳಿದಿದೆ) ಇದೆ. ಹಾಗೂ ವಸಂತೋತ್ಸವದಲ್ಲಿ ಈ ಕೆರೆಯ ಸುತ್ತ ಸಾವಿರಾರು ಉತ್ಸುಕರು ಭಾಗವಹಿಸುತ್ತಿದ್ದ ವಿಷಯ ಶಿಲಾಲೇಖದಲ್ಲಿ ಪ್ರಕಟವಾಗಿದೆ.

'ಬೇಲಗ್ರಾಮ' - ಈಗಿನ ಬೆಳಗಾಂವಿಯ ಕೋಟೆ, ಮೇಲ್ ನೋಟಕ್ಕೆ ಆದಿಲ್‌ಶಹನ ಕಾಲದ ಮುಸ್ತಾಫಾಖಾನನೆಂಬ ಸರದಾರನು ಕಟ್ಟಿಸಿದ ಬಗ್ಗೆ ಐತಿಹಾಸಿಕ, (೧೭ನೇ ಶತಕ) ವಿವರ ದೊರೆಯುತ್ತಿದ್ದರೂ, ಸಮೀಪದ ಖಾನಾಪುರದ ಹತ್ತಿರವಿರುವ ಪ್ರಾಚೀನ ಪಲಾಸಿಕಾ (ಹಲಸಿ)ಯಲ್ಲಿ ಆಳುತ್ತಿದ್ದ ಕದಂಬರು ಬೆಳಗಾವ ಕೋಟೆಯನ್ನು ಬಹು ಶತಮಾನಗಳ ಪೂರ್ವದಲ್ಲಿಯೇ (ಕ್ರಿ. ಶ. ೪-೫ ಶತಮಾನದಲ್ಲಿ) ಕಟ್ಟಿಸಿದ್ದುದು ತಿಳಿಯುತ್ತದೆ. ಕೆಳಸ್ತರದಲ್ಲಿ ಕೆಂಗರಸುಗಲ್ಲುಗಳ *(Laterite Stones)* ಬುನಾದಿ ಹಾಗೂ, ಅಗಳಕ್ಕೆ ಜೋಡಿಸಿದ ಕಲ್ಲುಗಳ ಸ್ತರಗಳು ಇದನ್ನು ಸೂಚಿಸುತ್ತದೆ. ಮತ್ತು ಈ ಕೋಟೆಯೊಳಗೆ ಕದಂಬ - ನಾಗರ ಶೈಲಿಯ ದೇವಸ್ಥಾನಗಳನ್ನೂ ಕಾಣಬಹುದು. ಸಮೀಪದ ಹಲಸಿಯಲ್ಲಿಯೂ ಕೂಡ ಕದಂಬರ ಕಾಲೀನ ಪಾಳು ಬಿದ್ದ ಮೃದ್ ದುರ್ಗವನ್ನೂ ನೋಡಬಹುದು.

ಆದರಂತೆ, 'ಗೋಪಕ ಪಟ್ಟಣ', 'ಗೋಮಾಂತ ಶಿಖರಿ ವಿರಾಜಮಾನ', 'ಗೋವಾನಗರ ಸನ್ನಿವೇಶ' ಮುಂತಾಗಿ ಕರೆಯಿಸಿಕೊಂಡ ಗೋವೆಯು ಕೂಡ ಕದಂಬರ ಭಾಗವೇ ಆಗಿತ್ತು. ಇಲ್ಲಿ ಈಗ ಕರೆಯಲ್ಪಡುವ 'ಚಾಂದೋರ್' 'ಚಂದ್ರಪುರ'ವೆಂದು ಪ್ರಾಚೀನ ಗೋವೆಯಲ್ಲಿ ಪ್ರಸಿದ್ಧವಾಗಿತ್ತು. ಈ ಪುರವು ಗೋವೆಕದಂಬರ ರಾಜಧಾನಿಯೂ ಆಗಿತ್ತು. ಇದರ ಸುತ್ತಲೂ ಈಗಲೂ ಅಲ್ಲಲ್ಲಿ ಆಳಿದುಳಿದ ಕೋಟೆ ಇದೆ. ಇದರ ಸುತ್ತಲ ಸತತವಾಗಿ ತುಂಬಿರುವ ಅಗಳವಿದೆ. ಇದರ ಪಶ್ಚಿಮದಿಕ್ಕಿನಲ್ಲಿ ಆನತಿ ದೂರದಲ್ಲಿ ಒಂದು ತಟಾಕವಿದೆ. ಅದರ ಮಧ್ಯದಲ್ಲಿರುವ ನಡುಗಡ್ಡೆಯ ಮೇಲೆ ಒಂದು ಈಶ್ವರ ದೇವಾಲಯ ಭಗ್ನಾವಸ್ಥೆಯಲ್ಲಿದೆ. ಇಲ್ಲಿ ೧೯೭೭ರಲ್ಲಿ ಕೈಕೊಂಡ (ಡಾ।। ಎಸ್. ಆರ್. ರಾವ್) ಉತ್ಖನನದಲ್ಲಿ ಶಾತವಾಹನರ ಕಾಲದ ಇಟ್ಟಿಗೆಯ ದೇವಾಲಯ ಸ್ತರಗಳು (ಈ ಲೇಖಕನೂ ಭಾಗಿಯಾದಂತೆ) ಹೊರತೆಗೆಯಲ್ಪಟ್ಟಿದೆ. ಇದಲ್ಲದೆ ಗೋವೆಯಲ್ಲಿ ಬ್ರಹ್ಮಪುರಿ ಎಂಬ ಕದಂಬಕಾಲೀನ ಪ್ರಾಚೀನ ನಗರ ಭಾಗವನ್ನೂ (ಡಾ. ಪಿ. ಪಿ. ಸಿರೋಡಕರ್ ಹಾಗೂ ಪ್ರೊ।। ಬಿ. ಎಸ್. ಶಾಸ್ತ್ರಿ) ಕೆಲವರುಷಗಳ ಹಿಂದೆ ಶೋಧಿಸಲಾಗಿದೆ. ಈ ಬ್ರಹ್ಮಪುರಿ ಸಮುದ್ರಯಾನದ ಬಂದರ ಸ್ಥಳವೂ ಕದಂಬರ ಕಾಲಕ್ಕೆ ಸಂಬಂಧ ಪಟ್ಟಿದ್ದೆಂದು ಈ ಮೇಲಿನ ಸಂಶೋಧಕರ ಅಭಿಪ್ರಾಯ.

ಚಿತ್ರದುರ್ಗ ಜಿಲ್ಲೆಯ ಉಚ್ಚಂಗಿದುರ್ಗ ಮೂಲತಃ ಬನವಾಸಿ ಕದಂಬರಿಗೆ ಸಂಬಂಧಿಸಿದ್ದು, ತದನಂತರ ವಿಜಯನಗರ ನಾಯಕರ ಕಾಲದಲ್ಲಿ ಹಾಗೂ ಹೈದರಲಿ ಟಿಪ್ಪುಸುಲ್ತಾನರ ಸಮಯದಲ್ಲಿ ಬಹಳಷ್ಟು ಮಾರ್ಪಾಡು ಹೊಂದಿದೆ.

ಹಾಗೆಯೇ, 'ಹಾನುಂಗಲ್' - ಹಾನಗಲ್ಲ ಕದಂಬರನ್ನು ಮರೆಯುವಂತಿಲ್ಲ. ಹಾನಗಲ್ಲಿನಲ್ಲಿ ದೊಡ್ಡ ತಟಾಕವೊಂದಿದೆ, ಅದು ಕದಂಬ ಅರಸರ ಕೊಡುಗೆ; ಸಾಮಾಜಿಕ ಹಾಗೂ ಆರ್ಥಿಕ ಜೀವನದ ಪ್ರಜಾಮೇಲ್ಮೆಗಾಗಿ ಅದು ಕಟ್ಟಲಾಯಿತು. ಅದಲ್ಲದೆ ಇಲ್ಲಿ ೭ ಸುತ್ತಿನ ಮಣ್ಣಿನ ಕೋಟೆಯಿದೆ. ಕದಂಬ ಅರಸ ಕಾಮದೇವನು ಇದನ್ನು ಆಳುತ್ತಿದ್ದಾಗ, (೧೨ನೇ ಶತಕ) ಹೊಯ್ಸಳರ ವಿಷ್ಣುವರ್ಧನನು ಈ ಕೋಟೆಯನ್ನು ಮುತ್ತಿದ್ದ ವಿಷಯ ಇತಿಹಾಸದಲ್ಲಿ ದಾಖಲೆಯಾಗಿದೆ. ಊರಮಧ್ಯದಲ್ಲಿದ್ದ ಬೃಹತ್ ಆದ ಈಶ್ವರ ದೇವಾಲಯವು ಕದಂಬನಾಗರ ಶೈಲಿಯ ಶಿಖರವನ್ನೊಳಗೊಂಡಿದೆ. ಊರಿನ ಆಗ್ನೇಯ ದಿಕ್ಕಿನಲ್ಲಿ ಎತ್ತರವಾದ ಮಣ್ಣಿನ ದಿಬ್ಬದಿಂದ ಜೋಡಿಸಿದ ಮತ್ತೊಂದು 'ಮೃದ್‌ದುರ್ಗ' ವಿದೆ. ಇಲ್ಲಿ ಪಾಂಡವರ ಕಾಲೀನ ಕೀಚಕನ ವಧಾ ಸ್ಥಾನವನ್ನೂ ತೋರಿಸಲಾಗುತ್ತದೆ. ಪ್ರಾಯಶಃ ಈ ಮೃದ್ ಕೋಟೆಯು ಅತ್ಯಂತ ಒಳಕೋಟೆಯಾಗಿರಲೂಬಹುದು. ಸುತ್ತಲೂ ಅಗಳವಿದೆ. ಅದಕ್ಕೆ ಮಣ್ಣಿನ ಒಡ್ಡುಗಳನ್ನು ಜೋಡಿಸಲಾಗಿದೆ. ಇವು ಕದಂಬ ರಕ್ಷಣಾ ಸ್ಮಾರಕಗಳು ಅಲ್ಲದೆ, ಬೀಳಗಿ, ಸೊಂದಾ, ಸಿರಸಿ, ಗೇರುಸೊಪ್ಪೆ, ಗೋಕರ್ಣ, ತದಡಿ, ಉಡುಪಿ, ಮಂಗಳೂರು, ಮುಡಿಗೆರೆ ಬ್ರಹ್ಮಗಿರಿ, ಹರಿಹರ ಪುರಗಳಲ್ಲಿಯೂ ಚಿಕ್ಕ ಪ್ರಮಾಣದ ಕದಂಬ ಕೋಟೆಗಳು ಕಾಣ ಸಿಗುತ್ತವೆ.

**೨. ಧಾರ್ಮಿಕ ವಾಸ್ತು : ಗುಡಿಗುಂಡಾರಗಳು**

ಧಾರ್ಮಿಕ ವಾಸ್ತುಗಳೆಂದರೆ ಧರ್ಮದ ಆಚರಣೆಗೆ, ನಂಬುಗೆಗೆ ಸಂಬಂಧಪಟ್ಟ ದೇವಸ್ಥಾನಗಳು, ತೀರ್ಥಗಳು, ಪುಷ್ಕರಣಿಗಳು ಮುಂತಾದವು. ಇವುಗಳ ರಚನೆಗೆ ಸಂಬಂಧಿಸಿದ ರೂಪರೇಷೆಗಳು. ಕದಂಬರ ದೇವಸ್ಥಾನಗಳ ವಾಸ್ತುವಿಶೇಷವನ್ನು

ಬಹಳಷ್ಟು ಪ್ರಾಚ್ಯವಿದ್ವಾಂಸರು ಅಭ್ಯಸಿಸುತ್ತ ಬಂದು, ಅವುಗಳಲ್ಲಿ ಅಡಗಿದ ಗುಣವಿಶೇಷತೆಯನ್ನು ಹೊರಗೆಡವಿದ್ದಾರೆ. ಅಂಥವರಲ್ಲಿ ಪ್ರೊ॥ ಮೊರಾಯಿಸ್ ಜಿ.ಎಂ., ಸ್ಟೆಲ್ಲಾ ಕ್ರಾಮರಿಶ್, ಗ್ರಾವಲೀ ಎಫ್. ಎಚ್., ಸೇಂದರ್‌ರಾಜನ್ ಕೆ. ವಿ., ರಾಮಚಂದ್ರನ್ ಟಿ. ಎನ್., ಶ್ರೀನಿವಾಸನ್ ಕೆ. ಆರ್., ಥಾಕೀ ಎಂ. ಎ., ಕಝಿನ್ಸ್ ಎಚ್., ಶೆಟ್ಟರ್ ಎಸ್., ರಘುನಾಥ ಭಟ್ ಎಚ್. ಆರ್., ಗೋಪಾಲ ಬಿ. ಆರ್., ನರಸಿಂಹಾಚಾರ್ಯ ಆರ್. ಮುಂತಾದವರಲ್ಲಿ ಇನ್ನೂ ಹೆಸರಿಸದ ಹತ್ತಾರು ವಿದ್ವಾಂಸರು.

ಕಂದಬರ ವಾಸ್ತು - ಹಾಗೂ ಶಿಲ್ಪಗಳಲ್ಲಿ ಸರಳತೆ, ವಿಸ್ತಾರ ಹಾಗೂ 'ವಾತ' ಪ್ರೋತಗಳಿಗೆ ಹೆಚ್ಚು ಮಹತ್ವ ನೀಡಲಾಗಿದೆ. ಮುಖಮಂಟಪ, ಸಭಾ ಮಂಟಪ ರಂಗಮಂಟಪಗಳಿಗೆ ಕಪೋತ (ನೀರನ್ನು ಒಳಗೆ ಬರದಂತೆ ತಳ್ಳುವ) ಗಳನ್ನು, ಆಶೀನಕ್ಕಾಗಿ ಕಕ್ಷಾಸನಗಳನ್ನೂ ಜೋಡಿಸಲಾಗಿದ್ದು, ಅಂತರಾಳ - ಗರ್ಭ ಗೃಹಗಳ ಮೇಲೆ ವಿಶಿಷ್ಟವಾದ ಶಿಖರವನ್ನು ಬೇಕಾದ ಹಾಗೂ ಮೇಲೆ ಹೋದಂತೆ ಚಿಕ್ಕ ಚಿಕ್ಕದಾಗುವ ಕಟ್ಟೆಗಳಂತೆ - ಕಂಠ ಮತ್ತು ಪಟ್ಟಿಕೆ - ಕಾಣುವ ಶಿಖರಾಂಗಗಳನ್ನು ಜೋಡಿಸಲಾಗಿದೆ. ದೂರದಿಂದ ಕಟ್ಟೆ ಕಟ್ಟೆಯಾಕಾರದ ಪಿರ್‍ಯಾಮಿಡ್‌ನಂತೆ ಶಿಖರ ಗೋಚರವಾಗುತ್ತದೆ. ಶಿಖರ ಪಟ್ಟಿಕೆಯಲ್ಲಿ ಕಲಾವೈಭವಕ್ಕೆ, ಮೂರ್ತಿ ಅಳವಡಿಕೆಗೆ ಬಹಳಷ್ಟು ಸ್ಥಾನವಿಲ್ಲ. ಇದು ಕದಂಬ - ನಾಗರ ಶೈಲಿ ಎಂದು ಪ್ರಸಿದ್ಧಿ ಪಡೆದಿದೆ.

ಈ ತರಹದ ಕದಂಬ-ನಾಗರ ಶೈಲಿಯ ದೇವಾಲಯಗಳು ಕದಂಬ ರಾಜ್ಯದಲ್ಲಿ ಸಾಕಷ್ಟು ಇವೆ. ಹೆಸರಿಸಬೇಕಾದರೆ, *ಬನವಾಸಿ, ಹಾನಗಲ್, ಸೊಂದಾ, ಗುಡ್ನಾಪುರ, ಬೀಳಗಿ, ಜೆಡೆ, ಬಂಕಾಪುರ, ಹಲಸಿ, ಚಾಂದೊರ್-ಗೋವೆ, ತಾಂಬಡಿ-ಸುರ್ಲಾ -ಗೋವೆ, ಐಹೊಳೆ, ಹಂಪಿ, ಮಹಾಕೂಟ, ಕುಪ್ಪಗದ್ದೆ, ಹೊಳಲು, ಮುಡಿಗೆರೆ, ಗೊರೂರು, ಹರಿಹರಪುರ, ಬ್ರಹ್ಮಗಿರಿ, ಹಿರೇಹಡಗಲಿ, ಗದಗ, ಬೆಲಗ್ರಾಮ,* ಇವೆಲ್ಲ ಕರ್ನಾಟಕದಲ್ಲಿವೆ. ಇದೇ ಶೈಲಿಯ ದೇವಾಲಯುಗಳು ಆಂಧ್ರಪ್ರದೇಶದ ಪಾಮಗಲ್, ವಡ್ಡಮಾನ, ಆಲಂಪುರ, ಮೂಖಲಿಂಗಮ್‌ಗಳಲ್ಲಿ ಕಂಡು ಬರುತ್ತದೆ. ಆದಾಗಿ ಈ ತರಹದ ಕದಂಬ-ನಾಗರ ಶೈಲಿಯ ದೇವಾಲಯಗಳನ್ನು 'ಕದಂಬ-ನಾಗರ' ಎಂದು ಕರೆಯಬೇಕೋ? 'ಕದಂಬ-ಚಾಲುಕ್ಯ' ಶೈಲಿ ಎಂತಲೋ? 'ಕಂದಬ - ಕಲಿಂಗ' ಎಂದೋ, 'ಕದಂಬ- ಪೀಡ-ದೇವುಳ' (ಏಕೆಂದರೆ ಓಡಿಸಾದಲ್ಲಿ ಈ ತರಹದ ಶಿಖರವುಳ್ಳ ದೇವಾಲಯುಗಳು ಬಹಳ ಇವೆ) ಎಂದು ನವೀಕರಿಸಿದ ಹೆಸರಿಡಬೇಕೊ ಎಂದು ಪ್ರೊ॥ ಎಚ್. ಆರ್. ರಘುನಾಥಭಟ್ ಅವರು *[National Seminar an Kadambas: Banavasi, 12-13, 1983]* ರಾಷ್ಟ್ರೀಯ ಮಟ್ಟದ ಕದಂಬ ವಿಚಾರ ಸಂಕಿರಣದಲ್ಲಿ ಪ್ರಶ್ನೆ ಎತ್ತಿದ್ದಾರೆ. ಇದಕ್ಕೆ ಪ್ರೊ॥ ಎಂ. ಎ. ಥಾಕಿ ಅವರು ಉತ್ತರಿಸುತ್ತ 'ಈ ಶೈಲಿಯು ರಾಷ್ಟ್ರೀಯ ವಾಸ್ತು ಶೈಲಿಯಲ್ಲಿ ಬರುವುದಿಲ್ಲ. ಆದರೆ ಇದನ್ನು ಬನವಾಸಿ ಮಂಡಲವು ಸಾಕಷ್ಟು ಪ್ರಸಾರ ಮಾಡಿತು' ಎಂದಿದ್ದಾರೆ.

**ಶಿವಮೊಗ್ಗ ಜಿಲ್ಲೆಯ : ಕದಂಬರ ಸ್ಮಾರಕಗಳು**

ತುಂಗಾ, ಭದ್ರಾ, ಶರಾವತಿ, ವರದಾಗಳು ಇಲ್ಲಿಯ ಸಾಂಸ್ಕೃತಿಕ ಜೀವನಕ್ಕೆ ಪುಷ್ಟಿ ನೀಡಿದವು.

| | |
|---|---|
| *೧. ಬಳ್ಳಿಗಾವಿ* | : *ಕೇದಾರೇಶ್ವರ ದೇವಾಲಯ ಕದಂಬರಿಂದ ಪ್ರಣೀತ, ತದನಂತರ ೯-೧೦ ಶತಕಗಳಲ್ಲಿ ವೃದ್ಧಿ (ಹೊಯ್ಸಳರ ಕಾಲ)* |
| *೨. ಕೆಳದಿ* | : *ರಾಮೇಶ್ವರ ದೇವಾಲಯ, (ಮೂಲ ಕದಂಬರದು) ಮೂಲತಃ ಕಟ್ಟಿಗೆಯದು ನಂತರ ಶಿಲೆಯದು.* *ವೀರಭದ್ರ ದೇವಾಲಯ ಕೆಳದಿ ನಾಯಕರ ಕಾಲದಲ್ಲಿ ವೃದ್ಧಿಗೊಂಡಿತು. ಕೋಟೆ ಪ್ರಸಿದ್ಧ.* |
| *೩. ಇಕ್ಕೇರಿ* | : *ಅಘೋರೇಶ್ವರ ದೇವಾಲಯ (ಮೂಲ ಕದಂಬರದು) ಇಂಡೋ - ಸಾರ್‌ಸೆನಿಕ್ ಕಲೆಯ ಸಂಗಮ (ನಾಯಕರ ಕಾಲ)* |
| *೪. ನಾಡಕಲಸಿ* | : *ನೀಲಕಂಠೇಶ್ವರ ದೇವಾಲಯ ಮಲ್ಲಿಕಾರ್ಜುನ ದೇವಾಲಯ ಹೊಯ್ಸಳರ ಕಾಲದಲ್ಲಿ ವೃದ್ಧಿಗೊಂಡವು.* |
| *೫. ಕವಲೆದುರ್ಗ* | : *ಭುವನಗಿರಿದುರ್ಗವೆಂದು ಈ ಕೋಟೆ ಕರೆಯಲ್ಪಡುತ್ತಿತ್ತು. ಕಾಶಿವಿಶ್ವೇಶ್ವರ ದೇವಾಲಯ, ಆಂಜನೆಯ ದೇವಾಲಯ ಅರಮನೆ, ಕಲ್ಯಾಣ ಮಂಟಪ ಇತ್ಯಾದಿಗಳಿವೆ.* |
| *೬. ಬಂದಳಿಕೆ* | : *ಹಲವು ಶಿಥಿಲ ದೇವಾಲಯಗಳು. ಹಲವಾರು ಶಿಲಾಶಾಸನಗಳು. ಜೈನ ಬಸದಿ ಸೋಮೇಶ್ವರ ದೇವಸ್ಥಾನ, ತ್ರಿಮೂರ್ತಿ ಗುಡಿ, (೧೧೬೦, ಚಾಲುಕ್ಯ ಶೈಲಿಯಲ್ಲಿ ನವೀಕೃತವಾಗಿದೆ).* |
| *೭. ಮಳವಳ್ಳಿ* | : *೧೨೦೦೦ ಬನವಾಸಿಯ ಕದಂಬರ ಉಪರಾಜಧಾನಿ. ಬಲಿಪುರ, ಬೆಳಗಾವಿ, ಬಲ್ಲಿ ಎಂಬ ಹೆಸರುಗಳು ಇದಕ್ಕಿದೆ ಕೇದಾರೇಶ್ವರ (ತ್ರಿಕೂಟ ಮಾದರಿ)* |
| *೮. ಸ್ಥಾನ ಕುಂದೂರು* | : *ಅಗ್ರಹಾರವಿದ್ದುದು ಕದಂಬರ ಕಾಲದಲ್ಲಿ ಶಿರಾಳ ಕೊಪ್ಪದಿಂದ ೫ ಕಿ. ಮೀ. ದೂರ ಕದಂಬರ ಮೂಲ ಪುರುಷ ಇಲ್ಲಿಯವ. ಬಸವೇಶ್ವರ ದೇವಾಲಯದ ಎದುರಿನಲ್ಲಿ ೫ನೇ ಶತಕದ ಸ್ತಂಭ ಶಾಸನವು ಬನವಾಸಿ ಕದಂಬರ ಬಗ್ಗೆ ಉಪಯುಕ್ತ ಮಾಹಿತಿ ನೀಡಿದೆ. ಈ ಬೃಹದ್ ಲಿಂಗವನ್ನು ಶಾತಕರ್ಣಿಯರು ಪೂಜಿಸಿದ್ದಾರೆಂದುಈ ಶಾಸನ ತಿಳಿಸುತ್ತದೆ.* |
| *೯. ಚಂದ್ರಗುತ್ತಿ* | : *ಸೊರಬದಿಂದ ೧೬ ಕಿ. ಮೀ. ದೂರದ ಬನವಾಸಿ, ಕದಂಬರ ಆಳ್ವಿಕೆಯಲ್ಲಿ ಪ್ರಸಿದ್ಧಿ* |

ಪಡೆದಿತ್ತು. ನಂತರ ವಿಜಯನಗರ, ಕೆಳದಿ ಅರಸರ ಅಧೀನಲ್ಲಿತ್ತು. ರೇಣುಕಾಂಬ ದೇವಾಲಯ, ಸ್ವಾಭಾವಿಕ ಗುಹೆಯಲ್ಲಿ ಪರಶುರಾಮ, ಜಮದಗ್ನಿ ನಿರ್ಮಿತ ವಾಗಿದೆ. ಇವರ ಕಥೆ ಹೇಳುತ್ತಿದೆ.

ಇಲ್ಲಿನ ಕೋಟೆ ಪ್ರಸಿದ್ಧ : ದರಬಾರು, ಕುದುರೆ ಲಾಯ, ಮದ್ದಿನ ಮನೆ ನಾಯಕರ ಕಾಲದವುಗಳು.

೧೦. ಕಪ್ಪೆಗುಡ್ಡ : ಪುಷ್ಪನಗರ, ಪುಷ್ಪಾವತಿ ಎಂಬ ಪ್ರಾಚೀನ ಹೆಸರುಗಳು ಅನೇಕ ದೇವಾಲಯಗಳಿಗಿವೆ. ಅವುಗಳಲ್ಲಿ ಅತ್ಯಂತ ಪ್ರಸಿದ್ಧ ೨೪ ಕಂಬಗಳ ರಾಮೇಶ್ವರ ದೇವಾಲಯ. ೨ಮೀ ಎತ್ತರದ ವೇಣುಗೋಪಾಲನ ಮೂರ್ತಿ ಬಹು ಸುಂದರ

**೩. ಸಾರ್ವಜನೀಯ ವಾಸ್ತು ಸ್ಮಾರಕಗಳು**

ಸಾರ್ವಜನಿಕವಾಗಿ ಅಂದರೆ ಸಭೆ, ಸಮಾರಂಭ, ಮನರಂಜನೆ ರಸ್ತೆಗಳು, ಅರಮನೆ ಕಾರಂಜಿ, ಕೂಟ, ನ್ಯಾಯ, ವ್ಯಾಪಾರ, ವಸತಿಗಳಿಗಾಗಿ ಉಪಯೋಗಿಸುವಂತಹ ಸ್ಮಾರಕಗಳು. ಇವು ಕದಂಬ ರಾಜ್ಯದಲ್ಲಿ ಬಹಳ ವಿರಳ.

ಅಲ್ಲೊಂದು ಇಲ್ಲೊಂದು ಮಾತ್ರ. ಉಳಿದಿವೆ. ಬನವಾಸಿಯಲ್ಲಿ ಕದಂಬರ ಪ್ರಾಚೀನ ರಸ್ತೆಗಳು : ರಥಬೀದಿ, ಹಳೆಮಠ ಬೀದಿ, ರಾಜ ಬೀದಿ ಮತ್ತು ಕಂಚೆಗಾರಬೀದಿ, ಮೇಲಿನ ಕೇರಿ ಬೀದಿ, ಹೀಗೆ ಸಾರ್ವಜನಿಕ ಉಪಯೋಗಿಕ ಬೀದಿಗಳು ಇನ್ನೂ ವಾಸ್ತವದಲ್ಲಿವೆ. ಸಮೀಪದ ಗುಡ್ನಾಪುರದ ಸರೋವರ ದಂಚಿನ ಮೇಲೆ, ಕಾಮಜಿನಾಲಯ ಹಾಗೂ ರಾಣೀಗೃಹಗಳು ವಸಂತೋತ್ಸವ ದರ್ಶನ ಕಟ್ಟೆಗಳು, ಇತ್ತೀಚಿನ ಪ್ರಾಚ್ಯ ಉತ್ಖನನದಲ್ಲಿ ೧೯೮೪-೮೫ರಲ್ಲಿ (ಈ ಲೇಖಕನೂ ಭಾಗಿಯಾದಂತೆ) ಡಾ. ಕೆ. ಪಿ. ಪೂಣಚ್ಚರ ಮಾರ್ಗದರ್ಶನದಲ್ಲಿ ದೊರೆತಿವೆ.



ಚಂದ್ರಗುತ್ತಿ : ರೇಣುಕಾಂಬ ದೇಗುಲ ಕದಂಬ ವಾಸ್ತುವಿನ ಇಳಿಜಾರದ ಛಾವಣಿ.

ಬನವಾಸಿಯಲ್ಲಿ ವರದೆಗೆ ಜೋಡಿಸುವ 'ನದೀ-ಸೋಪಾನ' ಸಾರ್ವಜನಿಕ ಉಪಯೋಗಕ್ಕಾಗಿ ಕಾಣಸಿಗುವುದು. ಗೋಡೆಯ ಚಂದ್ರಪುರದಲ್ಲಿ ಜಟ್ಟಿಯಿಂದ ಸರಕನ್ನು ಇಳಿಸುವ ಕಟ್ಟೆ ಹಿನ್ನೀರಿನ ಒತ್ತಿನಲ್ಲಿ ದೊರೆತಿದೆ. ಅಲ್ಲಿಯೇ ಬ್ರಹ್ಮಪುರಿಯಲ್ಲಿ ಚಿಕ್ಕ ಹಾಗೂ ಮಧ್ಯಮತರದ ಡೋಣಿಗಳ ತಂಗುದಾಣ. *'Dockyard'*, ಹಾಗೂ ವಿಶಾಲವಾಗಿ ಅದನ್ನು ಜೋಡಿಸುವ ರಸ್ತೆಗಳು ದೊರೆತಿವೆ. (ಡಾ॥ ಪಿ. ಪಿ. ಸಿರೋಡಕರ್ ಹಾಗೂ ಪ್ರೊ॥ ಬಿ. ಎಸ್. ಶಾಸ್ತ್ರಿ) ಹೀಗೆ ಸಾರ್ವಜನೀಯ ಉಪಯೋಗಿ ತಾಣಗಳು ಸಂಶೋಧಿಸಿದರೆ, ಇನ್ನೂ ದೊರೆಯಬಹುದು.

ಹೀಗೆಲ್ಲ ಕನ್ನಡನಾಡಿನಲ್ಲಿ ಪ್ರಥಮ ಸಾಮ್ರಾಜ್ಯ ಕಟ್ಟಿದ ಕದಂಬರಿದ್ದರು! ಇಲ್ಲಿ ರಾಜಕೀಯವಾಗಿ, ಹಾಗೂ ಸಾಂಸ್ಕೃತಿಕವಾಗಿ - ಅದರಲ್ಲೂ ವಾಸ್ತುಶಿಲ್ಪಗಳ ಕ್ಷೇತ್ರದಲ್ಲಿ - ಅವರು ನಡೆದು ಬಂದ ದಾರಿಯನ್ನು ಸಮೀಕ್ಷಿಸಲಾಗಿದೆ. ಇಂಥ ರಾಜ್ಯಗಳನ್ನು ಕಟ್ಟಿದವರೆಲ್ಲ, ಸಂಸ್ಕೃತಿ ಬೆಳೆಸಿದವರೆಲ್ಲ ಇತಿಹಾಸ ನಿರ್ಮಿಸಿದವರು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Prof. Moraes G. M., (1931), *Kadmba Kula*, Bombay.
೨. Stella Kramrisch., (1946), *Hindu Temples*, Calcutta, (I x II).
೩. Soundara Rajan K. V., *'The Matrix of South Indian Architeture'.*
Soundara Rajan K. V., (1969), *Early Temple Architectere in Karnataka*, Dharwar.
೪. Srinivasan K. R., (1969), *Temples of South India*, Delhi.
೫. Dhaky, M. A., (1977), *Indian Temple Forms in Karnataka Inscriptions & Architecture*, New Delhi.
೬. ಡಾ. ಗೋಪಾಲ ಬಾ. ರಾ., (೧೯೮೮), ಬನವಾಸಿ, ಬೆಂಗಳೂರು.
೭. Prof. K. A. Nilakantha Sastri., (1976), *An Advanced History of India*, Bombay, (Rev. Ed.).
೮. ಡಾ. ಕಾಮತ ಸೂರ್ಯನಾಥ., **ಬೆಳಗಾಂ ಮತ್ತು ಧಾರವಾಡ ಜಿಲ್ಲೆ ಗ್ಯಾಸೆಟಿಯರ್.**
೯. ಲೇಖಕನ ಕ್ಷೇತ್ರ ಕಾರ್ಯ ಹಾಗೂ *National Seminar on Kadami Banavasi*, 1985.
೧೦. Dr. Joshi, S. K., *Defence Architectcure in Early Karnataka.*
೧೧. Dr. H. R. Raghunath Bhat., (1983), 'Banavasi', *National, Seminar on Kadamabas.*

ಜಯಪ್ರಕಾಶ ದ. ಕಬ್ಬೂರ*

# ಕಲ್ಲೋಳಿಯ ಐತಿಹಾಸಿಕ ದೇವಾಲಯಗಳು

ಬೆಳಗಾವಿ ಜಿಲ್ಲೆ ಗೋಕಾಕ ತಾಲೂಕಿನ ಕಲ್ಲೋಳಿ ಗ್ರಾಮವು ಬೆಳಗಾವಿ - ವಿಜಾಪೂರ ಮತ್ತು ಹುಬ್ಬಳ್ಳಿ-ಅಥಣಿ ರಸ್ತೆಯಲ್ಲಿ ಗೋಕಾಕದಿಂದ ಈಶಾನ್ಯಕ್ಕೆ ೧೨ ಕಿ. ಮೀ. ಅಂತರದಲ್ಲಿದೆ. ಹುಬ್ಬಳ್ಳಿ-ಮಿರಜ ರೈಲುಮಾರ್ಗದಲ್ಲಿ ಘಟಪ್ರಭಾ ರೈಲುನಿಲ್ದಾಣ ದಿಂದ ಪೂರ್ವಕ್ಕೆ ೧೨ ಕಿ. ಮೀ. ಅಂತರದಲ್ಲಿದೆ.

ಕಲ್ಲೋಳಿಯ ಸಮೀಪದ "ಇಂದ್ರವೇಣಿ" ನದಿ ಸದಾ ಹರಿದು ಗ್ರಾಮದ ಜೀವನಾಡಿ ಹಾಗೂ ಯಾತ್ರಿಕರಿಗೆ ಪವಿತ್ರಸ್ನಾನದ ಸ್ಥಾನವಾಗಿದೆ. ಈ ನದಿಯ ತಟದಲ್ಲಿ ಹಸಿರು ಕ್ರಾಂತಿಯಿಂದ ಕಂಗೊಳಿಸುತ್ತಿರುವ ಕಲ್ಲೋಳಿಯ ಇತಿಹಾಸವನ್ನು ಅರಿಯುವ ಮುನ್ನ ಬೆಳಗಾವಿ ಜಿಲ್ಲೆ ಸಂಕ್ಷಿಪ್ತ ಪ್ರಾಚೀನ ಇತಿಹಾಸದ ವಿಹಂಗಮನೋಟ ಸಮಯೋಚಿತವಾಗಿದೆ.

'ಕುಂತಳನಾಡು' ಎಂದು ಪ್ರಸಿದ್ಧವಾಗಿದ್ದ ಒಂದು ಭಾಗವು "ಕುಹುಂಣ ಮೂರುಸಾವಿರ" ಎಂದು ಕರೆಯಲ್ಪಡುತ್ತಿತ್ತು. ಇದು ಇಂದಿನ ಅಥಣಿ ಮತ್ತು ಖಾನಾಪೂರ ತಾಲೂಕುಗಳನ್ನು ಬಿಟ್ಟು ಉಳಿಯುವ ಬೆಳಗಾವಿ ಜಿಲ್ಲೆಯ ಪ್ರದೇಶವಾಗಿತ್ತು. ಈ ರಾಜಕೀಯ ಭಾಗವು ಉತ್ತರಕ್ಕೆ ಕೃಷ್ಣಾನದಿ ಮತ್ತು ದಕ್ಷಿಣಕ್ಕೆ ಮಲಪ್ರಭಾ ನದಿ ಹಾಗೂ ಸವದತ್ತಿಯನ್ನು ಒಳಗೊಂಡಿತ್ತು. ನಾಶವಾಗಿ ಹೋಗಿರಬಹುದಾದ "ಕೂಂಡಿಪಟ್ಟಣ" ಈ ಪ್ರದೇಶದ ಮುಖ್ಯ ಪಟ್ಟಣವಾಗಿತ್ತು. ಕಲ್ಯಾಣದ ಚಾಲುಕ್ಯರ ಮಾಂಡಲಿಕರಾದ "ರಟ್ಟ" ಮನೆತನದ ಅರಸರು ಈ ಭಾಗವನ್ನು ಆಳುತ್ತಿದ್ದರು. ಈಗಿನ ಸೌಂದತ್ತಿ (ಸುಗಂಧವರ್ತಿ) ಅವರ ರಾಜಧಾನಿಯಾಗಿತ್ತು. ನಂತರ ರಟ್ಟರು ರಾಜಧಾನಿಯನ್ನು ಇಂದಿನ ಬೆಳಗಾವಿ (ವೇಣುಗ್ರಾಮ)ಕ್ಕೆ ಸ್ಥಳಾಂತರಿಸಿದರು. ರಟ್ಟರ ಕಾಲವು ಕ್ರಿ. ಶ. ೯೩೦-೧೨೩೦. ಇವರು ಮೊದಲು ರಾಷ್ಟ್ರಕೂಟರ, ಕಲ್ಯಾಣ ಚಾಲುಕ್ಯರ ನಂತರ ಕಳಚೂರ್ಯರ ಸಾಮಂತರಾಗಿದ್ದರು. ೧೧೬೫ರಲ್ಲಿ ಸ್ವತಂತ್ರರಾದರು. ಈ ವಂಶದ ನಾಲ್ಕನೆಯ ಕಾರ್ತವೀರ್ಯನು ೧೨೦೨ರಿಂದ ೧೨೨೦ರ ವರೆಗೆ ವೈಭವದಿಂದ ಆಳಿದನು. ಕಲ್ಲೋಳಿಯ ಶಾಸನದಲ್ಲಿ ಇವರ ಆಡಳಿತ ಕಾಲವನ್ನು "ಸಾಮ್ರಾಜ್ಯ ಲಕ್ಷ್ಮಿಯನ್ನುಭವಿಸುತ್ತಮಿರೆ" ಎಂದು ವರ್ಣಿಸಲಾಗಿದೆ. ಇವನ ಕಾಲದಲ್ಲಿ ಲಾಟ ಕೇರಳದಿಂದ ವ್ಯಾಪಾರಸ್ಥರು ಬರುತ್ತಿದ್ದರು. ರಟ್ಟರು ದಕ್ಷತೆ, ಉದಾರನೀತಿ, ಧರ್ಮಕಾರ್ಯಗಳಿಗೆ ಹೆಸರುವಾಸಿಯಾಗಿದ್ದರು. ನಾಲ್ಕನೆಯ ಕಾರ್ತವೀರ್ಯನು ವಿದ್ಯಾಭಿಮಾನಿಯೂ, ಕಾವ್ಯನಿಪುಣನೂ, ವಿದ್ವಾಂಸರಿಗೆ ಆಶ್ರಯದಾತನೂ ಆಗಿದ್ದನು. ಇವನ ಕಾಲದಲ್ಲಿ ಅನೇಕ ದೇವಾಲಯಗಳು ನಿರ್ಮಾಣವಾದವು. ಈತನ ಪತ್ನಿ "ಏಚಲದೇವಿ" ಯು ಧರ್ಮಕಾರ್ಯಗಳಿಗೆ ಪ್ರೋತ್ಸಾಹ ನೀಡುತ್ತಿದ್ದಳು. ಈಕೆಯು ಚಕ್ರವರ್ತಿಯ ತನುಜೆ ಎನ್ನಲಾಗಿದೆ. ಆದರೆ ಆ ಚಕ್ರವರ್ತಿ ಯಾರು? ಎನ್ನುವುದು ಸ್ಪಷ್ಟವಾಗಿ ತಿಳಿಯುವುದಿಲ್ಲ. ನಂತರ ಬಂದ 'ರಾಜ'ನೆಂಬ ದೊರೆಯ ಕಾಲದಲ್ಲಿ ಅನೇಕ ಜಿನಾಲಯಗಳು ನಿರ್ಮಾಣವಾದವು. ಎರಡನೆಯ ೧೨೨೮ರ ಲಕ್ಷ್ಮೀದೇವನು ಈ ವಂಶದ ಕೊನೆಯ ದೊರೆಯಾದ. ದೇವಗಿರಿಯ ಯಾದವರಿಂದ ಈ ವಂಶ ನಾಶ ಆಯಿತು.

ರಟ್ಟ ವಂಶದ ದೊರೆಗಳು ಜೈನಧರ್ಮದ ಅನುಯಾಯಿ ಗಳಾಗಿದ್ದರೂ ಕೂಡ ಎಲ್ಲ ಧರ್ಮಗಳನ್ನು ಸಮನಾಗಿ ಕಾಣುತ್ತಿದ್ದರು. ರಟ್ಟ ವಂಶದ ೧೪ ಅರಸರು ತಮ್ಮ ಕಾಲದಲ್ಲಿ ಜೈನ, ವೈಷ್ಣವ, ಶೈವ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಬೆಳಗಾವಿ ಜಿಲ್ಲೆಯ ರಾಯಭಾಗ, ಜಮಖಂಡಿ ತಾಲೂಕು ತೇರದಾಳ ಮತ್ತು ಚಿಕ್ಕೋಡಿ ತಾಲೂಕು ಯಕ್ಸಂಬಾ ಮತ್ತು ಭೋಜ ಗ್ರಾಮಗಳಲ್ಲಿ ಹುಕ್ಕೇರಿ ತಾಲೂಕು ಸಂಕೇಶ್ವರದಲ್ಲಿ ಗೋಕಾಕ ತಾಲೂಕು ಕೊಣ್ಣೂರು ಗ್ರಾಮಗಳಲ್ಲಿ ಜಿನಾಲಯಗಳನ್ನು ನಿರ್ಮಿಸಿದ್ದಾರೆ.

ಸಂಕೇಶ್ವರ, ನೇಸರಗಿ, ಬೈಲಹೊಂಗಲ, ಸೊಗಲಗಳಲ್ಲಿ ಶೈವ ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅಸುಂಡಿ, ಬಡ್ಲಿ ಗ್ರಾಮಗಳಲ್ಲಿ ವೈಷ್ಣವ ದೇವಾಲಯಗಳನ್ನು ನಿರ್ಮಿಸಿದ್ದಾರೆ.

ಈಗ ಕಲ್ಲೋಳಿಯ ಐತಿಹ್ಯದ ಸೀಳುನೋಟ ನೋಡೋಣ. ಈ ಗ್ರಾಮಕ್ಕೆ "ಸಿಂಧನ ಕಲ್ಹೊಳೆ" ಎಂಬ ಹೆಸರಿತ್ತು. ಮತ್ತು ಇನ್ನೊಂದು ರೀತಿಯಲ್ಲಿ ಗ್ರಾಮದ ಪಕ್ಕದಲ್ಲಿ ಹರಿದಿರುವ 'ಇಂದ್ರವೇಣಿ' ನದಿ (ಹಳ್ಳಿ) ಯು ಕರೀ ಕಲ್ಲಿನ ಹಾಸಿಗೆಯ ಮೇಲೆ ಹರಿದಿದೆ. ಕಲ್ಲುಹೊಳೆ > ಕಲ್ಹೊಳೆ > ಕಲ್ಲೋಳಿ ಎಂದೂ ರೂಪಾಂತರವಾಗಿರಬಹುದು. ಚರಿತ್ರೆಯಲ್ಲಿ ಬಹಳ ಮಹತ್ವವನ್ನು ಪಡೆದ ಇದು ರಟ್ಟರ ಒಂದು ಪ್ರಮುಖ ಧಾರ್ಮಿಕ ಕೇಂದ್ರ ವಾಗಿತ್ತು. ಸಮರ್ಥ ದೊರೆಯಾಗಿದ್ದ ४ನೇ ಕಾರ್ತವೀರ್ಯನ ತಾಯಿ ಚಂದಲದೇವಿಯು ಪರಮ ಜಿನಭಕ್ತಳಾಗಿದ್ದಳು. ಹಗರಟಗೆ ನಾಡಿನ (ಇಂದಿನ ವಿಜಾಪೂರ ಜಿಲ್ಲೆಯ ಮುದ್ದೇಬಿಹಾಳ, ಸಿಂದಗಿ ತಾಲೂಕಿನ ಪೂರ್ವಭಾಗ ಹಾಗೂ ಗುಲಬರ್ಗಾ ಜಿಲ್ಲೆಯ ಸುರಪೂರ ತಾಲೂಕ ಪ್ರದೇಶ) ಪ್ರಭು

* ಕಲ್ಲೋಳಿ, ತಾ॥ ಗೋಕಾಕ, ಜಿ॥ ಬೆಳಗಾವಿ - ೫೯೧ ೨೨೪

ರಾಜ'ನು ಹಾಗೂ ಅವನ ಪತ್ನಿ ಚಂದಲದೇವಿ ಒಡಗೂಡಿ ಕಲ್ಲೋಳಿಯ ಜೈನಬಸದಿಯನ್ನು ಕಟ್ಟಿಸಿ ಬಂಗಾರದ ಕಳಸ, ಮಕರತೋರಣ, ಮಾನಸ್ತಂಭ ನಿರ್ಮಿಸಿದನು. ಮತ್ತು ಇದನ್ನು ರಾಜಗುರುಗಳಾದ ಶುಭಚಂದ್ರ ಭಟ್ಟಾರಕರಿಗೆ ಒಪ್ಪಿಸಿದನು.

ಪಾರ್ಶ್ವಪಂಡಿತರು ರಚಿಸಿದ ಶಾಸನದಲ್ಲಿ ಕಲ್ಲೋಳಿಯು "ಜಗತ್ತಿನಲ್ಲಿಯೇ ಅತೀ ಶ್ರೇಷ್ಠ ನಗರ" ವೆಂದು ವರ್ಣಿಸಲ್ಪಟ್ಟಿದೆ. ಈ ಪ್ರದೇಶವು ಸಮೃದ್ಧ ಹಾಲು ಕೊಡುವ ಪಶು ಸಂಪತ್ತಿನಿಂದಲೂ ಧನಧಾನ್ಯಗಳಿಂದಲೂ, ಪರಿಶುದ್ಧ ಜನಸಮುದಾಯದಿಂದಲೂ, "ಚಂದ್ರಲೇಖೆ" ಯಂತೆ ಕಂಗೊಳಿಸುತ್ತಿತ್ತು, ಎಂದು ಹೇಳಲಾಗಿದೆ. ಈ ಶಾಸನದ ಪ್ರಕಾರ ಕಲ್ಲೋಳಿಯ ಸಂಪರ್ಕದಲ್ಲಿ ಬರುವ ಇತರ ಗ್ರಾಮ, ಪಟ್ಟಣಗಳು - ವೇಣುಗ್ರಾಮ (ಬೆಳಗಾವಿ) ಹಗರಟಗೆ ನಾಡು, ಕುಪುಣಪುರ (ಕೊಪ್ಪಳ), ಕುರುಂಬೆಟ್ಟು (ಶಿಂದಿಕುರಬೇಟ), ಕಂಕನೂರು (ಕಂಕಣವಾಡಿ), ರಾಯಭಾಗ, ಬೆಳಗಳೆ ಇತ್ಯಾದಿ.

***ಕಲ್ಲೋಳಿಯ ತ್ರಿಕೂಟ ಮಂಡಿತ ಚಿಂತಾಮಣಿ ಪಾರ್ಶ್ವನಾಥ ಬಸದಿ***

ಈ ಜಿನಾಲಯವು ಕ್ರಿ. ಶ. ೧೨೦೨-೨೦೮ ಅವಧಿಯಲ್ಲಿ ನಿರ್ಮಿತವಾಗಿದೆ. ಈ ಪಾರ್ಶ್ವನಾಥ ಬಸದಿಯನ್ನು ಈಗ ಶಾಂತಿನಾಥ ಬಸದಿ ಎನ್ನುತ್ತಾರೆ. ಪರಂಪರಾಗತ ಹೇಳಿಕೆಗಳ ಪ್ರಕಾರ ಹಿಂದೂ ವಾಸ್ತುಶಾಸ್ತ್ರದ ಪ್ರಕಾರ ಶಿವದೇವಾಲಯದ ಎದುರಿಗೆ ಗ್ರಾಮ ಇರಬಾರದು. ಮತ್ತು ವಿಷ್ಣು ದೇವಾಲಯದ ಹಿಂದೆ ಗ್ರಾಮ ಇರಬಾರದು, ಎಂಬ ನಂಬಿಕೆ ಇದೆ. ಅದೇ ರೀತಿ ಜೈನ ವಾಸ್ತುಶಾಸ್ತ್ರದ ರೀತಿಯಲ್ಲಿ ಪಾರ್ಶ್ವನಾಥ ತೀರ್ಥಂಕರರ ಎದುರಿಗೆ ಗ್ರಾಮ ಇರಬಾರದು, ಎಂಬ ನಂಬಿಕೆ ಇದೆ. ಕಾರಣ ಊರ ಎದುರಿಗೆ ಇರುವ ಪಾರ್ಶ್ವನಾಥ ಮೂರ್ತಿಯನ್ನು ಪಕ್ಕದ ಕಕ್ಷೆಯಲ್ಲಿ ಪ್ರತಿಷ್ಠಾಪಿಸಿ, ಎದುರಿಗೆ ಶಾಂತಿನಾಥ ತೀರ್ಥಂಕರರ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ.

ಈಗ ಗ್ರಾಮದ ಮಧ್ಯದಲ್ಲಿ ಕಂಗೊಳಿಸುತ್ತಿರುವ ಈ ಬಸದಿಗೆ ಶಾಸನದಲ್ಲಿ ಉಲ್ಲೇಖಿಸಿರುವ ಪ್ರಕಾರ ಬಂಗಾರದ ಕಳಸ, ಮಕರತೋರಣಗಳಿಲ್ಲ. ವಿಶಾಲವಾದ ಹೊರಾಂಗಣದಲ್ಲಿ ದಕ್ಷಿಣಾಭಿಮುಖವಾಗಿ ನಕ್ಷತ್ರಾಕಾರದ ತಳಪಾಯ ಹೊಂದಿರುವ ಈ ಬಸದಿಯ ಹೊರ ಮೈ ಕಲಾಕೃತಿಗಳು ನಾಶವಾಗುತ್ತಲಿವೆ. ಕಲ್ಯಾಣದ ಚಾಲುಕ್ಯರ ಶೈಲಿಯಲ್ಲಿ ರಚನೆಯಾದ ಈ ಬಸದಿಯಲ್ಲಿ ಪ್ರವೇಶವಾದೊಡನೆ ಮೊದಲು ಕಂಡು ಬರುವುದು ಸಭಾಮಂಟಪ. ಇಲ್ಲಿ ನಾಲ್ಕು ನಿಟ್ಟಿನಲ್ಲಿ ಆಸನ ಶಿಲೆಗಳಿವೆ. ಈ ಭಾಗದಲ್ಲಿಯೇ ಪಾರ್ಶ್ವಪಂಡಿತರು ರಚಿಸಿದ ಶಿಲಾಶಾಸನವಿದೆ. ದ್ವಾರಗಳ ಶಿಲ್ಪ ಕಲೆಯು ರಟ್ಟರ ಕಲಾಪ್ರೌಢಿಮೆಯನ್ನು ಎತ್ತಿ ತೋರಿಸುತ್ತದೆ. ಬಾಗಿಲು ತೋಳುಗಳ ಅಲಂಕಾರ, ಜಾಲಂಧರ ಕಿಟಕಿಗಳು, ಗೋಡೆಗಳಲ್ಲಿ ಶಿಖರ - ಆಕೃತಿಗಳು ಸುಂದರವಾಗಿವೆ. ನವರಂಗದ ಕಂಭಗಳನ್ನು ನುಣಪಾಗಿ ಕಲಾತ್ಮಕವಾಗಿ ಕೆತ್ತಲಾಗಿದೆ.

ನವರಂಗದಲ್ಲಿ ಒಂದೂವರೆ ಅಡಿ ಎತ್ತರದ ಒಂದು ವಿಗ್ರಹವಿದೆ. ಇದನ್ನು ಜಿನ ಸರಸ್ವತಿ ಎಂದು ಆರಾಧಿಸುತ್ತಾರೆ. ಇದೊಂದು ವಿಶಿಷ್ಟಬಿಂಬ. ಸ್ತ್ರೀ ವಿಗ್ರಹವಾದರೂ ಸ್ತನಗಳಿಲ್ಲ. ಬಹುಶಃ ಶಿಲ್ಪಿ ಮರೆತಿರಬಹುದೆ?

ನವರಂಗಕ್ಕೆ ಹೊಂದಿಕೊಂಡಂತೆ ಮೂರು ಗರ್ಭಗೃಹಗಳು ಶುಕನಾಸಿಯ ನಂತರ ಬರುತ್ತವೆ. ಬಲಬದಿಯ ಉಪಸ್ಥಾನ ಗರ್ಭಗೃಹದಲ್ಲಿ ಪಾರ್ಶ್ವನಾಥ ತೀರ್ಥಂಕರರ ಐದು ಅಡಿ ಎತ್ತರದ ವಿಗ್ರಹವಿದೆ. ಇದು ೧೧ನೇ ಶತಕದ ಬಿಂಬವು. ನಾಗರಹೆಡೆಯ ನೆರಳಲ್ಲಿ ನಿಂತ ಈ ವಿಗ್ರಹದ ವಿಶಿಷ್ಟತೆ ಎಂದರೆ ಧರಣೇಂದ್ರ ಯಕ್ಷನ ಮೂರ್ತಿಯು ಆಮೆಯ ಲಾಂಛನ ಹೊಂದಿದೆ.- ಸಾಮಾನ್ಯವಾಗಿ ಈ ಯಕ್ಷನಿಗೆ ಗಜಲಾಂಛನವಿರುತ್ತದೆ. ಎದುರಿನ ಗರ್ಭಗುಡಿಯಲ್ಲಿ ಧ್ಯಾನಮುದ್ರೆಯಲ್ಲಿ ಕುಳಿತ ಶಾಂತಿನಾಥ ತೀರ್ಥಂಕರರ ವಿಗ್ರಹ ಆಕರ್ಷಕವಾಗಿದೆ. ಈ ಗರ್ಭಗುಡಿಯ ಮೇಲೆ ಕದಂಬನಾಗರ ಶೈಲಿಯ ಶಿಖರವಿದೆ. ಎಡಭಾಗದ ಉಪಸ್ಥಾನದ ಗರ್ಭಗೃಹದಲ್ಲಿ ಚಂದ್ರನಾಥ ತೀರ್ಥಂಕರರ ವಿಗ್ರಹವಿದೆ. ನವರಂಗದ ಒಂದು ಬದಿಯಲ್ಲಿ ನೇಮಿನಾಥ ತೀರ್ಥಂಕರರ ವಿಗ್ರಹವಿದೆ. ನವರಂಗದ ಮೇಲ್ಛಾವಣಿಯಲ್ಲಿ ಕಮಲದ ಆಕಾರದ ಕೆತ್ತನೆಯ ಕೆಲಸ ಮಾಡಿದ್ದಾರೆ. ಈ ಬಸದಿಯಲ್ಲಿರುವ ಶಾಸನದ ಪ್ರಕಾರ ಈ ಬಸದಿಯು ಕೇವಲ ಒಂದು ಜಿನಾಲಯವಾಗಿರದೇ ವಿದ್ಯೆ, ಧರ್ಮ, ಹಾಗೂ ಸಾಂಸ್ಕೃತಿಕ ಕೇಂದ್ರವಾಗಿತ್ತು. ಔಷಧ, ಧರ್ಮಶಾಸ್ತ್ರ ಅರಿತ ಗುರುಗಳಿಗೆ ದೊರೆಗಳು ಎಲ್ಲ ರೀತಿಯ ಸಹಾಯ ಮಾಡುತ್ತಿದ್ದರು. ವರ್ತಕರು ಸಭೆ ಸೇರಿ ಬಸದಿಯಲ್ಲಿ ಜರುಗುವ ಧಾರ್ಮಿಕ ಕಾರ್ಯಗಳಿಗೆ ಧನಸಹಾಯ ಮಾಡುತ್ತಿದ್ದರು. ನಾಲ್ಕನೆಯ ಕಾರ್ತವೀರ್ಯನು ಈ ಬಸದಿಗೆ ೨೦೦೦ ಕಂಬ ಭೂಮಿಯನ್ನು ಹಾಗೂ ೩೦ ಕಂಬ ಹೂ ತೋಟವನ್ನು ದಾನವಾಗಿ ನೀಡಿದನು ಎಂದೆಲ್ಲ ಇದೆ.

ಹೀಗೆ ಒಂದು ಕಾಲದಲ್ಲಿ ವೈಭವವನ್ನು ಹೊಂದಿದ ಈ ಬಸದಿಯು ಈಗ ಶಿಥಿಲವಾಗಿದ್ದು ವಿನಾಶದ ಅಂಚಿನಲ್ಲಿದೆ. ಸರಿಯಾದ ಜೀರ್ಣೋದ್ಧಾರವಾಗದಿದ್ದರೆ ಈ ಐತಿಹಾಸಿಕ ಜಿನಾಲಯವು ಬರೀ ಗ್ರಂಥದಲ್ಲಿ ಮಾತ್ರ ಉಳಿಯುವ ಸಾಧ್ಯತೆ ಇದೆ. ಈ ಬಸದಿಯಲ್ಲಿ ನಿತ್ಯ ಪೂಜೆಯ ವ್ಯವಸ್ಥೆ ಇದ್ದು ಕೊಣ್ಣೂರ ಗ್ರಾಮದ ಪಂಡಿತರು (ಉಪಾಧ್ಯೆಯವರು) ಈ ಕಾರ್ಯ ನಿರ್ವಹಿಸುತ್ತಾರೆ. ಮಾರ್ಗಶಿರ ಮಾಸದಲ್ಲಿ ಮಹಾಭಿಷೇಕ ಜರುಗುತ್ತದೆ. ಆ ಸಮಯದಲ್ಲಿ ಸುತ್ತಲಿನ ಜೈನ ಸಮಾಜದ ಶ್ರಾವಕರು ಸಮಾವೇಶಗೊಳ್ಳುತ್ತಾರೆ. ಇಂಥ ಬಸದಿ ಇರುವ ಈ ಗ್ರಾಮದಲ್ಲಿ ಜೈನ ಸಮಾಜದ ಒಂದೆರಡು ಮನೆಗಳು ಮಾತ್ರ ಇರುತ್ತವೆ. ಒಂದು ಕಾಲದಲ್ಲಿ ಇಲ್ಲಿ ಜೈನರು ಬಹುಸಂಖ್ಯಾತ ರಾಗಿದ್ದರು. ರಟ್ಟರ ಅವನತಿಯ ನಂತರ ಇವರಿಗೆ ರಾಜಾಶ್ರಯ ದೊರಕದೆ ವಲಸೆ ಹೋಗಿಬರಹುದು.

### ಶ್ರೀರಾಮಲಿಂಗೇಶ್ವರ ದೇವಾಲಯ

ಕಲ್ಲೋಳಿಯ ಅಗಸೆ ಬಾಗಿಲು (ಈಗ ಬಿದ್ದುಹೋಗಿದೆ) ಹತ್ತಿರ ಇರುವ ಈ ದೇವಾಲಯ ಚಾಲುಕ್ಯ ಮಾದರಿ ಶಿಲ್ಪ ಕಲೆಯಿಂದ ಕೂಡಿದ್ದು ಪೂರ್ವಾಭಿಮುಖವಾಗಿದೆ. ೧೦ನೇ ಶತಕದಲ್ಲಿ ನಿರ್ಮಿತ ಈ ದೇವಾಲಯ ಹೋಲಿಕೆಯಲ್ಲಿ ಜಿನಾಲಯದಂತೆ ಇದ್ದರೂ ಶೈವ ದೇವಾಲಯದ ಲಕ್ಷಣಗಳಿಂದ ಕೂಡಿದೆ. ದೇವಾಲಯದ ಸುತ್ತಲೂ ಎತ್ತರವಾದ ಕಟ್ಟೆ ಇದ್ದು ದಕ್ಷಿಣ ದಿಕ್ಕಿಗೂ ಒಂದು ದ್ವಾರವಿದೆ. ಪೂರ್ವದ ದ್ವಾರಮಂಟಪ ದಲ್ಲಿ ಎರಡುಬದಿಗೆ ಆಸನಶಿಲೆಗಳಿವೆ. ನವರಂಗದಲ್ಲಿ ಕಂಭಗಳು ಆಕರ್ಷವಾಗಿವೆ. ನವರಂಗದ ಮೇಲ್ಛಾವಣಿಯಲ್ಲಿ ಆಸನ ಭಂಗಿಯ ಶಿವನಮೂರ್ತಿ ಇರುವ ಶಿಲೆಯನ್ನು ಜೋಡಿಸಿದ್ದಾರೆ. ಜೀರ್ಣೋದ್ಧಾರ ಸಮಯದಲ್ಲಿ ತಪ್ಪಾಗಿ ಕೂಡ್ರಿಸಿರಬಹುದು. ಶುಕನಾಸಿ, ಗರ್ಭಗುಡಿ, ದ್ವಾರ, ಮೇಲ್ಛಾವಣಿಯಲ್ಲಿ ಸುಂದರವಾದ ಕಲಾಕೃತಿಗಳಿವೆ. ಗರ್ಭಗುಡಿಯಲ್ಲಿರುವ ಲಿಂಗವು ದೇವಾಲಯ ನಿರ್ಮಿತ ಕಾಲದ್ದಲ್ಲ.

ಮೊದಲು ಇದು ಗಣಪತಿ ದೇವಸ್ಥಾನವಾಗಿತ್ತು. ದೇವಾಲಯದಲ್ಲಿರುವ ಲಲಾಟ ಲಾಂಛನಗಳು ಈ ವಿಚಾರಕ್ಕೆ ಪುಷ್ಟಿ ನೀಡುತ್ತವೆ. ಕಾಲಾಂತರದಲ್ಲಿ ಈ ಗಜಾನನ ಮೂರ್ತಿ ಭಿನ್ನವಾಗಿದ್ದು ಅದನ್ನು ಸ್ಥಳಾಂತರಿಸಿ ಆ ಸ್ಥಳದಲ್ಲಿ ಲಿಂಗಸ್ಥಾಪನೆ ಯಾಗಿರಬಹುದು ಎಂಬ ವಿಚಾರ ತಿಳಿದು ಬರುತ್ತದೆ. ಗಣಪತಿ ದೇವಾಲಯಕ್ಕೆ ಇರಬೇಕಾದ ಶಿಲ್ಪಕಲೆಯ ಲಕ್ಷಣಗಳು ಇಲ್ಲಿ ಸ್ಪಷ್ಟವಾಗಿವೆ. ಮೂಲವಿಗ್ರಹ ಎನ್ನಬಹುದಾದ ಗಣಪತಿ ಮೂರ್ತಿಯು ನವರಂಗದ ಒಂದು ಚಿಕ್ಕ ಮಂಟಪದಲ್ಲಿ ಇಡಲ್ಪಟ್ಟಿದೆ. ಈ ಗಣಪತಿ ವಿಗ್ರಹವು ವಿಶಿಷ್ಟವಾಗಿದೆ. ಯೋಗಪಟ್ಟದ ರೀತಿಯಲ್ಲಿ ಸರ್ಪಬಂಧವನ್ನಾಂತ ನಿರ್ದೇಶನದಲ್ಲಿ ಸರ್ಪದ ಹೆಡೆಯ ಮೇಲೆ ಗಣೇಶನ ಬಲಗೈ ಇದೆ. ಈ ಗಣೇಶ ತ್ರಿನೇತ್ರನಾಗಿದ್ದಾನೆ. ಹಣೆಯ ಮೇಲೆ ನಾಮಪಟ್ಟಿ ಇದ್ದು ವೈಜಯಂತ ಮಾಲೆ ಧರಿಸಿದ ದ್ವಿದಂತಿಯಾಗಿದ್ದಾನೆ. ಎರಡೂವರೆ ಅಡಿ ಎತ್ತರದ ಈ ವಿಗ್ರಹ ನೇಪಾಳ ಮಾದರಿಯ ಶಿಲ್ಪಕಲಾ ಶೈಲಿಯನ್ನು ಹೊಂದಿದೆ.

ಪ್ರತಿವರ್ಷ ಯುಗಾದಿಯ ದಿವಸ ಸೂರ್ಯೋದಯ ಕಾಲದಲ್ಲಿ ಸೂರ್ಯಕಿರಣಗಳು ರಾಮಲಿಂಗೇಶ್ವರ ಲಿಂಗದ ಮೇಲೆ ಬೀಳುವ ವ್ಯವಸ್ಥೆ ಇದೆ. ಪ್ರತಿವರ್ಷ ಅಕ್ಷಯ ತೃತೀಯ ದಿವಸ ರಥೋತ್ಸವ ಜರುಗುತ್ತದೆ. ಮೊದಲು ಕಲ್ಲಿನ ದೊಡ್ಡಗಾಲಿಗಳಿದ್ದವು. ಈಗ ಕಟ್ಟಿಗೆಯ ಸುಂದರವಾದ ಕಲಾತ್ಮಕವಾದ ರಥವನ್ನು ನಿರ್ಮಿಸಲಾಗಿದೆ. ಶ್ರಾವಣಮಾಸದಲ್ಲಿ ಪುರಾಣ ಪ್ರವಚನ ಮುಂತಾದ ಧಾರ್ಮಿಕ ಕಾರ್ಯಕ್ರಮಗಳು ಜರುಗುತ್ತವೆ. ೧೯೩೦ ಹಾಗೂ ೧೯೯೦ರಲ್ಲಿ ಈ ದೇವಾಲಯವನ್ನು ಸಾಮಾನ್ಯ ರೀತಿಯಲ್ಲಿ ಜೀರ್ಣೋದ್ಧಾರ ಮಾಡಲಾಗಿದೆ.

ಸಂಪೂರ್ಣ ನಾಶವಾಗಿ ಹೋಗಿದ್ದ 'ಗಜಲಕ್ಷ್ಮಿ' ದೇವಾಲಯದ ಮುಖ್ಯ ದೇವತಾ ಮೂರ್ತಿಯನ್ನು ಶ್ರೀ ರಾಮಲಿಂಗೇಶ್ವರ ದೇವಾಲಯದ ಸಭಾಮಂಟಪದಲ್ಲಿ ಇರಿಸಲಾಗಿದೆ. ಇಲ್ಲಿಯ ಹಳ್ಳದ ದಂಡೆಯಲ್ಲಿ ದೊರೆತ ಮಹಾಸತಿ ಕಲ್ಲನ್ನು ಈ ದೇವಾಲಯದ ಆವರಣದಲ್ಲಿ ಇಡಲಾಗಿದೆ.

### ಶ್ರೀಕಲ್ಲೋಳಪ್ಪ (ಮಾರುತಿ) ದೇವಾಲಯ

ಉತ್ತರ ಕರ್ನಾಟಕದಲ್ಲಿ ಆಯಾ ಗ್ರಾಮಗಳಲ್ಲಿಯ ಮಾರುತಿ ದೇವರಿಗೆ ಆ ಊರಿನ ಅಪ್ಪ ಎಂದು ಹೆಸರಿಸಿ ಕರೆಯಲಾಗುತ್ತದೆ. ಕಲ್ಲೋಳಿಯ ಮಾರುತಿಯು ಕಲ್ಲೋಳಪ್ಪ ನೆಂದು ಹೆಸರುವಾಸಿಯಾಗಿದ್ದಾನೆ.

ಇತ್ತೀಚೆಗೆ ಕಲ್ಲೋಳಿ ಗ್ರಾಮ ಹೆಚ್ಚಿಗೆ ಬೆಳಕಿಗೆ ಬಂದದ್ದು ಈ ದೇವಾಲಯದಿಂದ. ಬೆಳಗಾವಿ, ವಿಜಾಪೂರ, ಜಿಲ್ಲೆಗಳಲ್ಲಿ ಹಾಗೂ ನೆರೆಯ ಮಹಾರಾಷ್ಟ್ರ ರಾಜ್ಯದಲ್ಲಿ ಈ ದೇವಾಲಯ ಪ್ರಸಿದ್ಧಿ ಪಡೆದಿದೆ.

ಆಳೆತ್ತರದ ಬಲಭೀಮನ ವಿಗ್ರಹ ಆಕರ್ಷವಾಗಿದ್ದು ಉತ್ತರ ಭಾರತದ ಮಾದರಿಯ ಶಿಲ್ಪಕಲೆಯನ್ನು ಹೊಂದಿದೆ. ಇದು ೧೩-೧೪ನೇ ಶತಕದ ವಿಗ್ರಹವಾಗಿದೆ. ದೇವಾಲಯ ಇತ್ತೀಚಿನದು.

ಒಂದು ಅಧ್ಯಯನದ ಪ್ರಕಾರ ಈ ಮಾರುತಿ ವಿಗ್ರಹವು ಮೂಲದಲ್ಲಿ ಮಹಾರಾಷ್ಟ್ರ ರಾಜ್ಯದಲ್ಲಿದ್ದು ಪರಕೀಯರ ದಾಳಿಯ ಭೀತಿಯಿಂದ ಅದರ ವ್ಯವಸ್ಥಾಪಕರು ಸುರಕ್ಷಿತ ಸ್ಥಳವೆಂದು ದಕ್ಷಿಣದ ಈ ಸ್ಥಳದಲ್ಲಿ ಪ್ರತಿಷ್ಠಾಪಿಸಿದರು. ಕಾಲಕ್ರಮದಲ್ಲಿ ಈ ವಿಗ್ರಹ ಇಲ್ಲಿಯೇ ಉಳಿಯಿತು. ಮಹಾರಾಷ್ಟ್ರದ, ಸಾತಾರಾ ಮುಂಬಯಿ, ಸೊಲ್ಲಾಪೂರ, ಕೊಲ್ಹಾಪೂರ ಜಿಲ್ಲೆಗಳಿಂದ ಇಂದಿಗೂ ಭಕ್ತರೂ ಈ ದೇವಾಲಯಕ್ಕೆ ನಿಯಮಿತವಾಗಿ ಬಹುಸಂಖ್ಯೆಯಲ್ಲಿ ಬರುತ್ತಾರೆ.

ಇನ್ನೊಂದು ಪರಪಂರಾಗತ ಹೇಳಿಕೆಯಪ್ರಕಾರ ಈ ಭಾಗದ ವಡ್ಡರ ಜನಾಂಗದ ಬಹಳಷ್ಟು ಜನರು ಉದ್ಯೋಗಕ್ಕಾಗಿ ಮಹಾರಾಷ್ಟ್ರಕ್ಕೆ ವಲಸೆ ಹೋಗಿದ್ದು ತಮ್ಮ ಅರಾಧ್ಯದೈವ ಮನೆದೇವರು ಬಲಭೀಮನ ದರ್ಶನಕ್ಕೆ ನಿರ್ದಿಷ್ಟ ಅವಧಿಯಲ್ಲಿ ಬರುತ್ತಾರೆ. ಈ ದೇವಾಲಯಕ್ಕೆ ಬರುವ ಭಕ್ತರಲ್ಲಿ ಶೇಕಡಾ ೭೦ ರಷ್ಟು ಜನರು ಮಹಾರಾಷ್ಟ್ರದವರು, ಶೇಕಡಾ ೩೦ ರಷ್ಟು ಜನ ಕರ್ನಾಟಕದವರು. ಎರಡು ರಾಜ್ಯಗಳಿಂದ ಭಕ್ತರನ್ನು ಹೊಂದಿರುವ ಈ ದೇವಾಲಯ ಭಾಷಾ ಭಾವೈಕ್ಯತೆಗೆ ಹೆಸರಾಗಿದೆ.

ಈ ದೇವಾಲಯದಲ್ಲಿ ಪ್ರವೇಶ ಮಾಡಲು ಒಬ್ಬನೇ ವ್ಯಕ್ತಿ ಬಾಗಿ ಹೋಗಲು ಸಾಧ್ಯವಿರುವಂತಹ 'ದಿಡ್ಡೀ ಬಾಗಲು' ಇದೆ. ಬಲಭೀಮನಿಗೆ ಎಲ್ಲರೂ ತಲೆ ಬಾಗಿಯೇ ಹೋಗಬೇಕು. ವಿಸ್ತಾರವಾದ ರಾಜಾಂಗಳದಲ್ಲಿ ತುಳಸಿಕಟ್ಟೆ, ಗೋಪಾಳಕಟ್ಟೆ, ವಿಷ ಪರಿಹಾರಕಟ್ಟೆಗಳಿವೆ. ಒಂದು ಚಿಕ್ಕ ಗುಡಿಯಲ್ಲಿ

ವಿಲಕ್ಷಣವಾದ ಕಾಟಮುತ್ತೆಪ್ಪ ದೇವರಗುಡಿ ಇದೆ. ಇಲ್ಲಿ ಕೆಲವು ಜಿನ ಬಿಂಬಗಳಿವೆ.

ಶ್ರೀ ಮಾರುತಿ ದೇವರಿಗೆ ವಿಶೇಷ ಹಬ್ಬ ಹರಿದಿನಗಳಲ್ಲಿ 'ಬಾಗೀನು ಪೂಜೆ' ಎಂಬ ಅಲಂಕಾರ ಮಾಡುತ್ತಾರೆ. ನೀಟಾಗಿ ಉಡಿಸಿದ ದೋತರ, ವಿವಿಧ ಆಭರಣಗಳು, ಕಲಾತ್ಮಕವಾದ ಕಿರೀಟ ತೊಡಿಸಿದ ಈ ಸರ್ವಾಲಂಕಾರಭೂಷಿತ ಮಾರುತಿಯ ದರ್ಶನ ಮಾಡಿದರೆ ಎಂಥವರಿಗೂ ಭಕ್ತಿಯಿಂದ ತಲೆಬಾಗುವಂತಾಗುತ್ತದೆ. ಈ ವಿಗ್ರಹವು ಸಮರ್ಥ ರಾಮದಾಸರಿಂದ ಸ್ಥಾಪಿತವಾದದ್ದು ಎಂಬ ಪ್ರತೀತಿಯೂ ಇದೆ.

ಪ್ರತಿವರ್ಷ ಮಾರ್ಗಶಿರಮಾಸದಲ್ಲಿ ಮಾರುತಿದೇವರ ಕಾರ್ತಿಕೋತ್ಸವ ಜರುಗುತ್ತದೆ. ಒಂದು ವಾರ ನಡೆಯುವ ಈ ಉತ್ಸವದಲ್ಲಿ ಸಹಸ್ರಾರು ಭಕ್ತರು ದರ್ಶನ ಪಡೆಯುತ್ತಾರೆ. ಈ ಸಂದರ್ಭದಲ್ಲಿ ಜುರುಗುವ 'ಮದಾಲಸಿ'ಯಲ್ಲಿ ಶಾಸ್ತ್ರಿಯ ಸಂಗೀತ ಆಧರಿಸಿದ ವಾದ್ಯ ವೇಳ ಜರುಗುತ್ತದೆ.

### ಶ್ರೀಲಕ್ಷ್ಮೀದೇವಾಲಯ

ಇಪ್ಪತ್ತನೆಯ ಶತಕದ ನೂತನ ದೇವಾಲಯವಾದರೂ ವಿಗ್ರಹ ಮಾತ್ರ ೭ನೇ ಶತಮಾನಕ್ಕೆ ಸೇರಿದ್ದು ಆಗಿದೆ. ಚಾಲುಕ್ಯರ ಶೈಲಿಯ ಎರಡುವರೆ ಅಡಿ ಎತ್ತರದ ಚತುರ್ಬಾಹು ಮಹಿಷಮರ್ದಿನಿ ವಿಗ್ರಹವು ಬಹಳ ಸುಂದರವಿದೆ. ಈ ಮೂಲ ವಿಗ್ರಹ ಯಾವುದೋ ಕಾರಣದಿಂದ ಭಿನ್ನವಾಗಿರಬಹುದು. ಇದೇ ರೀತಿಯ ಇನ್ನೊಂದು ವಿಗ್ರಹ ತಯಾರಿಸಿ ಎರಡೂ ವಿಗ್ರಹಗಳನ್ನು ಜೊತೆಯಾಗಿಯೇ ಪ್ರತಿಷ್ಠಾಪಿಸಿದ್ದಾರೆ. ಭಿನ್ನವಾದ ಮೂಲ ಮೂರ್ತಿಯನ್ನು ಪಾಳುಭಾವಿಯಲ್ಲಿ ಒಗೆದಿದ್ದರೆಂದೂ ಹೊಸ ದೇವಾಲಯ ಕಟ್ಟಿಸಿದ ನಂತರ ಹೊಸ ವಿಗ್ರಹದ ಜೊತೆಗೆ ಬಾವಿಯಲ್ಲಿ ಚಲ್ಲಿದ್ದ ವಿಗ್ರಹವನ್ನು ತೆಗೆದುಕೊಂಡು ಕೂಡ್ರಿಸಿದ್ದಾರೆಂದು ಹೇಳಿಕೆ ಇದೆ. ಬಿಂಬ ಮಹಿಷಮರ್ದಿನಿ ಯಾದರೂ ರೂಡಿಯಲ್ಲಿ ಲಕ್ಷ್ಮೀದೇವಾಲಯವೆನ್ನುತ್ತಾರೆ. ಈ ಕುರಿತು ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯಗಳಿವೆ.

### ಶ್ರೀಕಲ್ಮೇಶ್ವರ ದೇವಾಲಯ

೬ನೇ ಶತಮಾನದ ಈ ದೇಗುಲವು ನವರಂಗ ಗರ್ಭಗುಡಿ, ಈ ರೀತಿ ಎರಡೇ ಭಾಗ ಹೊಂದಿ ಈ ವಿಜಯನಗರ ಶೈಲಿಯಲ್ಲಿ ಕಂಡು ಬರುತ್ತಿದೆ. ವಿಜಯನಗರ ಕಾಲದಲ್ಲಿ ಜೀರ್ಣೋದ್ಧಾರವಾಗಿರಬಹುದು. ಈಗ ಈ ದೇವಾಲಯ ಪೂರ್ವ ಹಾಳಾಗಿರುತ್ತದೆ. ನಂದಿ ವಿಗ್ರಹ ಹಾಳಾಗಿದೆ. ಲಿಂಗ ಭಿನ್ನವಾಗಿದೆ. ಜೀರ್ಣೋದ್ಧಾರ ಮಾಡದಿದ್ದರೆ ಈ ದೇವಾಲಯಕ್ಕೆ ಗ್ರಾಮದಲ್ಲಿ ಅಸ್ತಿತ್ವ ಉಳಿಯಲಾರದು.

ಊರ ಅಗಸಿಯ ಹೊರವಲಯದಲ್ಲಿ ಒಂದು ಜೈನ ಮುನಿಗಳ ಸಮಾಧಿ ಇದೆ. ಎತ್ತರವಾದ ಕಟ್ಟೆ ಇದೆ. ಪೂರ್ವಕ್ಕೆ ಬಾಗಿಲು ಇದೆ. ಕೆಳಗೆ ಇಳಿಯಲು ಮೆಟ್ಟಿಲುಗಳಿವೆ. ಇತ್ತೀಚೆಗೆ ಈ ಕಟ್ಟೆಯನ್ನು ದುರಸ್ತಿ ಮಾಡಿ ಧ್ವಜಸ್ತಂಭ ನಿಲ್ಲಿಸಿದ್ದಾರೆ. ಗಾಂಧೀಜಿಯವರ ವಿಗ್ರಹ ಕೂಡ್ರಿಸಿದ್ದಾರೆ. ಇಂತಹ ಇನ್ನೂ ಎರಡು ಸಮಾಧಿಗಳು ಊರಲ್ಲಿ ಇದ್ದವು. ಇತ್ತೀಚೆಗೆ ಊರು ವಿಸ್ತರಣೆಯಾಗಿದ್ದು ಅವೆಲ್ಲ ನಾಶವಾಗಿವೆ.

ಇದಲ್ಲದೆ ಗ್ರಾಮದೇವತೆ ದ್ಯಾಮವ್ವ, ಎಲ್ಲಮ್ಮ, ಬೀರಪ್ಪ, ದುರ್ಗಾದೇವಿ ದೇವಾಲಯಗಳಿವೆ. ಶ್ರೀ ಸಿದ್ಧಾರೂಢಮಠ, ಶ್ರೀ ಸತ್ಯಸಾಯಿ ಪ್ರಾರ್ಥನಾ ಮಂದಿರ ಮುಂತಾದ ಧಾರ್ಮಿಕ ಆಧ್ಯಾತ್ಮಿಕ ಕೇಂದ್ರಗಳಿವೆ.

ಗ್ರಾಮದ ಅನೇಕ ಕಡೆಗೆ ಜಿನ ಬಿಂಬಗಳು, ಮುರಿದು ಬಿದ್ದ ಅವಶೇಷಗಳು, ಅನೇಕ ಪ್ರಭಾವಳಿಗಳು, ಕಲಾಕೃತಿಗಳು ಕಂಡುಬರುತ್ತವೆ. ಭೂಮಿ ಅಗಿಯುವಾಗ ಕಟ್ಟಡ ಪಾಯ ತೆಗೆಯುವಾಗ ಅನೇಕ ಶಿಲಾಕೃತಿಗಳು ದೊರಕಿವೆ. ಇಂಥ ಕೆಲವನ್ನು ಇಲ್ಲಿಯ ಪಿ. ಎಚ್. ಎನ್. ಹಾಯಸ್ಕೂಲದಲ್ಲಿ ಸಂಗ್ರಹಿಸಿ ಇಡಲಾಗಿದೆ. ಇತ್ತೀಚೆಗೆ ನೆಲ ಅಗಿಯುವಾಗ ದೊರಕಿದ ಪಾರ್ಶ್ವನಾಥ ತೀರ್ಥಂಕರರ ಚಿಕ್ಕ ಮೂರ್ತಿಯನ್ನು ಜೈನ ಬಸದಿಯಲ್ಲಿ ಇಡಲಾಗಿದೆ. ಈ ಕುರಿತು ಇನ್ನೂ ಹೆಚ್ಚಿನ ಸಂಶೋಧನೆಯ ಅವಶ್ಯಕತೆ ಇದೆ.



(ಸರ್ವಶ್ರೀ ಹಣಮಂತ ಶೆ. ಕಂಕಣವಾಡಿ, ರನ್ನ ಶುಗರ್ಸ ಮಧೋಳ; ಮಲ್ಲಪ್ಪ. ಬ. ಹೂಗಾರ, ಪ್ರಭುಲಿಂಗ ಶುಗರ್ಸ್; ಶ್ರೀ ಆರ್. ಬಿ. ಬೆಳಗಲಿ ಗ್ರಂಥಪಾಲಕರು, ಗೋಕಾಕ; ವ್ಹಿ. ಸಿ. ಪಟ್ಟಣ ಶೆಟ್ಟಿ, ಕಲ್ಲೋಳಿ; ಪಿ. ಆರ್. ಗರಗಟ್ಟಿ, ಕಲ್ಲೋಳಿ; ಎಸ್. ಎಮ್. ಮನಗುತ್ರಿ ಇತಿಹಾಸ ಪ್ರಾಧ್ಯಾಪಕರು; ಇವರಿಗೆ ಲೇಖಕ ಕೃತಜ್ಞ)

### ಆಧಾರ ಗ್ರಂಥಸೂಚಿ


೧. **ಕರ್ನಾಟಕ ಗ್ಯಾಝೆಟೀಯರ.**, (ಸಂ) ಡಾ. ಸೂರ್ಯನಾಥ ಕಾಮತ (ಬೆಂಗಳೂರು).

೨. ಡಾ. ಎಮ್. ವ್ಹಿ. ಶ್ರೀನಿವಾಸ., ಇವರ ಲೇಖನಗಳು.

೩. ದಿ. ಡಾ. ಪಿ. ಗುರುರಾಜ ಭಟ್., ಉಡುಪಿ ಇವರ ಸಂಶೋಧನೆಗಳು.

೪. ದಿ. ಡಾ. ಆರ್. ಎಸ್. ಗುರವ., ಇವರ ಸಂಶೋಧನೆಗಳು.

೫. ಡಾ. ಎ. ಜಿ. ಕೆಂಪಣ್ಣವರ., ಬಿ. ಬಿ. ಕರ್ಣವಾದಿ., **ಜೈನ ಕ್ಷೇತ್ರಗಳ ಐತಿಹ್ಯ** ಹಾರೂಗೇರಿ.

೬. ಫೆರಿಸ್ತಾ, ಗೆಮೆಲ್ಲಿ ಕಾರೇರಿ, ಕ್ಯಾಪ್ಟನ ಮೂರ್ ಅವರುಗಳ ಬರಹಗಳು.

ಪ್ರೊ॥ ಕೆ. ಸಿ. ಮಲ್ಲಿಗವಾಡ*

# ಬೀರವಳ್ಳಿಯ ಕೆಂದದೋಕುಳಿ ಕಲ್ಮೇಶ್ವರ ದೇವಾಲಯ

ಧಾರವಾಡ - ಜಿಲ್ಲೆಯ ತಲಘಟಗಿ ತಾಲೂಕಿನ ಬೀರವಳ್ಳಿ ಗ್ರಾಮವು, ಮೊದಲು ಗೋವಾ ಕದಂಬರ ಆಳಿಕೆಗೆ ಒಳಪಟ್ಟಿತ್ತು. ಕ್ರಿ. ಶ. ೧೦ನೇ ಶತಮಾನದ್ದೆಂದು, ಹೇಳಲಾದ ನೆರೆಯ ಆಸ್ತಕದಳ ಗ್ರಾಮದ ಹೊಲ ಒಂದರಲ್ಲಿ ಸಿಕ್ಕ ಗೋವಲದೇವನ ಶಾಸನದ ರೀತ್ಯಾ ಧೀರವಳ್ಳಿಯು ಬೀರವಳ್ಳಿಯಾಗಿತ್ತು. ಇಲ್ಲಿ ಪುರವರೀಶ್ವರ ಕಲ್ಮೇಶ್ವರ ದೇವರ ಗುಡಿ ಇದ್ದು ಇದರ ಜೀರ್ಣೋದ್ಧಾರಕ್ಕೆ ಭೂಮಿಯನ್ನು ದಾನ ಕೊಡಲಾಗಿದೆ. ಎಂದೂ ಶಾಸನದಲ್ಲಿ ವಿವರಿಸಲಾಗಿದೆ.

ಕಲ್ಯಾಣದ ಚಾಲುಕ್ಯರು ತಮ್ಮ ಪ್ರಾಬಲ್ಯವನ್ನು ದಕ್ಷಿಣ ಭಾರತದಲ್ಲಿ ಹೆಚ್ಚಿಸಿಕೊಳ್ಳಲು ದಿಗ್ವಿಜಯ ಸಾಧಿಸಿಲು ದಂಡಯಾತ್ರೆ ಕೈಗೊಂಡಾಗ ವಿಜಯವು ಸಿಕ್ಕ ಸ್ಮರಣಾರ್ಥ, ಕೆಲಸ್ಥಳಗಳಲ್ಲಿ, ಮಹತ್ವದ ದೇವಾಲಯಗಳನ್ನು ನಿರ್ಮಿಸಿದ ಕುರುಹುಗಳು ಉಳಿದಿವೆ. ಇಲ್ಲಿಯೂ ಸಹ ಕಲ್ಯಾಣಿ ಚಾಲುಕ್ಯರ ಕಾಲದ ಮಹತ್ವದ ದೇವಾಲಯವೆಂದರೆ ಕಲ್ಮೇಶ್ವರ ದೇವಸ್ಥಾನ. ಸ್ಥಳೀಯರು ಇದಕ್ಕೆ ಕಲ್ಲಪ್ಪಜ್ಜನ ಗುಡಿ ಎಂದೇ ಕರೆಯುತ್ತಾರೆ. ಇದರ ಸುತ್ತಲೂ ವಿಶಾಲವಾದ ಪೌಳಿ *(Compound)*ನ್ನು ಮಟ್ಟಿಕಲ್ಲಿನಿಂದ ನಿರ್ಮಿಸಲಾಗಿದೆ. ಸುಮಾರು ೨-೩ ಎಕರೆ ಪ್ರದೇಶದಷ್ಟು ಜಾಗ ಇದ್ದು ಇದರ ಮಧ್ಯದಲ್ಲಿಯೇ ಕಲ್ಮೇಶ್ವರ ದೇವಸ್ಥಾನವನ್ನು ಬಹು ಅಚ್ಚುಕಟ್ಟಾಗಿ ನಿರ್ಮಿಸಲಾಗಿದೆ. ದೇವಾಲಯದ ಸುತ್ತಲೂ ವಿಶಾಲವಾದ ಪ್ರದಕ್ಷಣಪಥವಿದ್ದು. ಒಳಭಾಗದಲ್ಲಿಯೇ ಸುಂದರವಾದ ಕಲ್ಲಿನ ಕಂಬಗಳನ್ನು ಅಳವಡಿಸಿ ಶಿಲಾಮಂಟಪ ನಿರ್ಮಿಸಿ ಅದರ ಮೇಲೆ ಕಲ್ಲಿನ ಹೊದಿಕೆಯನ್ನು ಹೊದಿಸಿದೆ. ಈ ಮೊದಲಿಗೆ ಅನ್ಯಧರ್ಮೀಯ ದಾಳಿಯನ್ನು ಎದುರಿಸಲಾಗಿದೇ ದೇವಾಲಯವನ್ನು ಮಣ್ಣಿನಿಂದ ಮುಚ್ಚಲಾಗಿತ್ತು.

ಕಲ್ಮೇಶ್ವರ ದೇವಾಲಯವು ಪೂರ್ವಾಭಿಮುಖವಾಗಿದ್ದು, ಪ್ರವೇಶದ್ವಾರ, ಸಭಾಮಂಟಪ, ಚೈತ್ರಗೃಹ, ಗರ್ಭಗೃಹ, ದ್ವಾರಗರ್ಭಗೃಹಗಳಿದ್ದು ಮೂರು ಅಂಕಣಗಳುಳ್ಳ ಈ ದೇವಾಲಯವು ವಿಶಾಲವಾಗಿದೆ. ಕಲ್ಯಾಣ ಚಾಲುಕ್ಯರ ಕಾಲದ ಶೈಲಿಯನ್ನು ಹೋಲುವಲ್ಲಿ ಇದನ್ನು ೧೧-೧೨ನೇ ಶತಮಾನದಲ್ಲಿ ನಿರ್ಮಿಸಿದರೆನ್ನಬೇಕು. ದೇವಾಲಯಕ್ಕೆ ಯಾವದೇ ಜಾಲಂಧ್ರಗಳಿರುವದಿಲ್ಲ. ಬೆಳಕು ಮುಖ್ಯದ್ವಾರದಿಂದಲೇ ಬರಬೇಕು. ೨೪ ಮಜಭೂತಾದ ಕಂಬಗಳನ್ನು ಕಡೆದು ದೇವಾಲಯ ನಿರ್ಮಿಸಿದ್ದಾರೆ. ಸಭಾಮಂಟಪದ ಸುತ್ತಲೂ ಪ್ರದಕ್ಷಿಣಾ ಪಥದಂತೆ ವಿಶಾಲವಾದ ೬ ಅಡಿ ಜಾಗೆ ಇದ್ದು, ಇದೊಂದು ವೈಶಿಷ್ಟ್ಯಪೂರ್ಣವಾದ ಸ್ಥಳವಾಗಿದೆ. ಸಭಾಮಂಟಪದಲ್ಲಿದ್ದ ಕಂಬಗಳೆಲ್ಲವೂ ಸುಂದರವಾಗಿ ಕೆತ್ತಲ್ಪಟ್ಟಿದ್ದು ಗಜ್ಜರಿಗಂಬಗಳಾಗಿವೆ. ಕಂಬವನ್ನು ಗಾಡಕ್ಕೆ ಹಚ್ಚಿ ತೆರೆದಂತೆ ಭಾಸವಾಗುತ್ತದೆ. ಕಂಬಗಳಿಗೆ ಸಂದರಗೊಳಿಸಲು ಗಗ್ಗಲಿ ಹೂಬಳ್ಳಿಗಳನ್ನು ಕೆತ್ತಲಾಗಿದೆ. ಮಸ್ತಕಟ್ಟದ ಕಂಬಗಳು ದೇವಸ್ಥಾನವನ್ನು, ಹೊತ್ತು ನಿಂತಿವೆ. ಗೋಡೆಗೆ ನಿಲ್ಲಿಸಿದ ಕಂಬಗಳು ಅರ್ಧ, ಅಲಂಕೃತಗೊಂಡಿವೆ.

ಕಲ್ಮೇಶ್ವರ ದೇವಾಲಯವು ಅಂತರಾಳದಲ್ಲಿ ವಿಶಾಲ ಜಾಗೆಯನ್ನು ಹೊಂದಿದ್ದು ಅಲ್ಲಿ ಯಾವುದೇ ರೀತಿಯ ಅಲಂಕಾರ ಕಂಡುಬರುತ್ತಿಲ್ಲ. ದೇವಾಲಯವು ೨೦ ಅಡಿ ಅಗಲ ೧೦ ಅಡಿ ಉದ್ದವಾಗಿದೆ. ಗರ್ಭಗೃಹವು ಚಿಕ್ಕದಾಗಿದ್ದು, ಮೇಲ್ಭಾಗದಲ್ಲಿ ಅಷ್ಟಕೋನಾಕೃತಿಯಲ್ಲಿ ಕಲ್ಲುಗಳನ್ನು ಜೋಡಿಸಲಾಗಿದೆ. ಅಲ್ಲಿಯೇ, ಸಹಸ್ರದಳ ಕಮಲವನ್ನು ಕೆತ್ತಲಾಗಿದೆ. ಸಭಾಮಂಟಪವು ತ್ರುಟಿತಗೊಂಡಿದ್ದು ಇದರಲ್ಲಿ ಸುಂದರವಾಗಿ ಒಂದು ಕಲ್ಲನ್ನು ವೃತ್ತಾಕಾರದಲ್ಲಿ ಕೆತ್ತಿ ನಿರ್ಮಿಸಲಾಗಿದೆ. ದೇವಾಲಯದ ಕಂಬಗಳು ಸುಂದರವಾಗಿದ್ದು ಸಭಾಮಂಟಪದ ಕಂಬಗಳು ಮಾತ್ರ ದುಂಡಗೆ ಕೆತ್ತಲ್ಪಟ್ಟಿದೆ. ಹಸಿರು ಮಿಶ್ರಿತ ಕರಿಯ ಬಳಪದ ಕಲ್ಲನ್ನು ಬಳಸಲಾಗಿದೆ. ದೇವಾಲಯದ ಗೋಡೆಗಳಿಗೆ ಚೌಕಾಕಾರದ ಕಲ್ಲುಗಳನ್ನು ಕೊರೆದು ಜೋಡಿಸಲಾಗಿದೆ. ಕೆಲಸ್ಥಳಗಳಲ್ಲಿ ಚಮಡೆಲ್ಲುಗಳನ್ನು ಅಚ್ಚುಕಟ್ಟಾಗಿ ಜೋಡಿಸಲಾಗಿದೆ. ಕಂಬಗಳ ಮೇಲೆ ಬೋದುಗೆಗಳನ್ನು ಕೂಡಿಸಿದ್ದು, ಯಾವುದೇ ಅಲಂಕಾರವು ಕಂಡು ಬರುತ್ತಿಲ್ಲ. ತೊಲೆಯ ಮುಖಕ್ಕೆ ಕುದುರೆ ಮುಖವನ್ನು ಕೆತ್ತಲಾಗಿದೆ. ಅದಕ್ಕೆ, ಸಂಬಂಧಪಟ್ಟ ಗಡಿಗೆಯೂ ಸಹ ಯಾವ ಅಲಂಕಾರವಿಲ್ಲದೇ ಸಪಾಟಾಗಿದೆ. ದೇವಾಲಯದ ಒಳಾಂಗಣದಲ್ಲಿ. ಅಚ್ಚು ಕಟ್ಟಾಗಿ ತಳಪಾಯದಲ್ಲಿ, ಕಲ್ಲನ್ನು ಹೊಂದಿಸಲಾಗಿದೆ. ದೇಗುಲದ ಮೇಲೆ ಮಣ್ಣಿನ ಹೊದಿಕೆಯನ್ನು ಹಾಕಲಾಗಿ ಇದು ಬೃಹದಾಕಾರವಾದ ಗುಡ್ಡದಂತೆ ಕಂಡುಬರುತ್ತಿರುವದರಿಂದ ಯಾರೇ ಆಗಲಿ ಇದನ್ನು ದೇವಾಲಯವೆಂದು ಗುರುತಿಸಲು ಕಷ್ಟಸಾಧ್ಯವಾಗುತ್ತದೆ. ಹೀಗೇಕೆ ಮಣ್ಣು ಮುಚ್ಚಿರಬಹುದು? ಕರ್ನಾಟಕದ ದೇಗುಲಗಳ ಮೇಲೆ ಹಿಂದಿನಿಂದಲೂ ಮುಸ್ಲಿಮರು ಮೊಗಲರು, ಶಾಹಿಸುಲ್ತಾನರು ಧಾಳಿಮಾಡುತ್ತಲೇ ಬಂದಿದ್ದಾರೆ. ಆದ್ದರಿಂದಲೇ ಇಂತಹ ದುರವಸ್ಥೆಯೂ ಈ ದೇವಾಲಯಗಳಿಗೆ

* ಜೆ.ಇಸಿ. ಕಾಲೇಜ, ರೊಟ್ಟಿಗವಾಡ, ತಾ॥ ಕುಂಗೋಳ, ಜಿ॥ ಧಾರವಾಡ - ೫೮೧ ೧೧೩

ಬರಬಾರದೆಂದು ಮೇಲ್ಛತ್ತಿ ಮೇಲೆ ಮಣ್ಣಿನ ರಾಶಿಯನ್ನು ಹಾಕಿ ಅದಕ್ಕೆ ರಕ್ಷಣೆ ಒದಗಿಸಿದ್ದರಿಂದ ವೈರಿ ಪಡೆಗಳು ದೂರದಿಂದ ನೋಡಿದರೆ ಇದು ಮಣ್ಣಿನ ಮಡ್ಡಿ (ಗುಡ್ಡ) ವೆಂದು ತಿಳಿದು ಮುಂದೆ ಹೋಗಬಹುದಿತ್ತೆಂಬ ಆಸೆಯಿಂದ ಹೀಗೆ ಮಾಡಿರ ಬಹುದೆನಿಸುತ್ತದೆ. ಈಚೆಗೆ ಜೀರ್ಣೋದ್ಧಾರ ಮಾಡಿ ಗಾಳಿ ವಿದ್ಯುತ್ ಬೆಳಕಿನ ವ್ಯವಸ್ಥೆ ಮಾಡಲಾಗಿದೆ.

ಕಲ್ಮೇಶ್ವರ ದೇವಸ್ಥಾನವು ಯಾವುದೇ ಅಲಂಕಾರಿಕ ಸುಳಿಯ ಕೆತ್ತನೆಗಳನ್ನು ಹೊಂದಿಲ್ಲ. ಕಲಘಟನಿ ತಾಲೂಕಿನಲ್ಲಿಯೇ ಇಂತಹ ಇನ್ನೊಂದು ಕಲ್ಮೇಶ್ವರ ದೇವಾಲಯವು ಕಾಮಧೇನು ಗ್ರಾಮದಲ್ಲಿದೆ. ಅದು ಇದರ ಸಮಕಾಲಿನ ದೇಗುಲವಾಗಿದೆ. ಹಾಗೆಯೇ ತಂಬೂರ ಗ್ರಾಮದಲ್ಲಿಯೂ ಸಹ ಕಲಾತ್ಮಕ ಬಸವೇಶ್ವರ ದೇವಸ್ಥಾನ ಕಂಗೊಳಿಸುತ್ತದೆ. ಬೀರವಳ್ಳಿ ಗ್ರಾಮವು ಕಲಘಟನಿ ತಡಸ ರಸ್ತೆಗೆ ಕಲಘಟಗಿಯಿಂದ (ದಕ್ಷಿಣಕ್ಕೆ) ಪೂರ್ವಕ್ಕೆ ೧೮ ಕಿ. ಮೀ. ಅಂತರದಲ್ಲಿದೆ. ತಡಸದಿಂದ ಪಶ್ಚಿಮಕ್ಕೆ ೫ ಕಿ.ಮೀ. ದೂರದಲ್ಲಿದೆ. ಈ ರಸ್ತೆಗೆ ಹೊಂದಿಕೊಂಡಂತೆ, ಕಲ್ಮೇಶ್ವರ ದೇವಾಲಯವು ವಿಶಾಲವಾದ ಜಾಗೆಯಲ್ಲಿ ನೆಲೆಗೊಂಡಿದೆ. ಚೌಕಾಕಾರವಾದ ಬಯಲಿನಲ್ಲಿ ಸುಂದರವಾದ ದೇವಾಲಯ ನಿರ್ಮಾಣವಾಗಿದೆ. ದೇವಾಲಯದ ಒಳಭಾಗದಲ್ಲಿ ಹಲವಾರು ಶೈವಧರ್ಮಕ್ಕೆ ಸಂಬಂಧಿಸಿದ ತ್ರುಟಿತ ವಿಗ್ರಹಗಳು ಕಂಡು ಬರುತ್ತವೆ. ಸಭಾಮಂಟಪದ ಬಲಭಾಗದಲ್ಲಿ ಸಾಲಂಕೃತ ಸಪ್ತ ಮಾತೃಕೆಯರ ಸಾಲಭಂಜಿಕೆಯರ ವಿಗ್ರಹಗಳಿವೆ. ಇವೆಲ್ಲವೂ ವಿವಿಧ ಭಂಗಿಯಲ್ಲಿವೆ. ಸ್ಥಳೀಯವಾಗಿ ಇವುಗಳನ್ನು ದೇವತೆ ಯರ ಕಲ್ಲುಗಳೆಂದು ಕರೆಯುತ್ತಾರೆ. ಇದರ ಪಕ್ಕದಲ್ಲಿ ಗಣಪತಿಯು ವಿಗ್ರಹವಿದೆ. ಇದರ ಎಡಭಾಗವು ತ್ರುಟಿತವಾಗಿದ್ದು, ನಯನ ಮನೋಹರವಾಗಿದೆ. ಚತುರ್ಭುಜಗಳನ್ನು ಹೊಂದಿ ಆಸೀನ ಭಂಗಿಯಲ್ಲಿದ್ದ ಗಣಪತಿ ಅಭಯಹಸ್ತನಾಗಿ, ತ್ರಿಶೂಲ, ಲೇಖನಿಯನ್ನು ಹಿಡಿದಿದ್ದಾನೆ. ಉಬ್ಬಿದ ಹೊಟ್ಟೆಯನ್ನು ಹಾವಿನಿಂದ ಕಟ್ಟಿಕೊಂಡಿದ್ದು ನೋಡಲು ಆಕರ್ಷಣೆಯವಾಗಿದೆ. ಆಸೀನ ಭೈರವನ ತ್ರುಟಿತ ವಿಗ್ರಹವೂ ಇಲ್ಲಿ ಕಂಡುಬರುತ್ತದೆ. ಎಡಗೈಯಲ್ಲಿ ಪಾನಪಾತ್ರೆ, ಬಲಗೈಯಲ್ಲಿ ಅಭಯಹಸ್ತ ಹೊಂದಿದೆ. ಇತ್ತೀಚಿನ ದಿನಗಳಲ್ಲಿ ಜೀರ್ಣೋದ್ಧಾರಗೊಂಡ ೫ ಅಂಕಣಗಳನ್ನು ಹೊಂದಿದ ದೇವಾಲಯದ ಎಡಭಾಗದಲ್ಲಿ ಬ್ರಹ್ಮದೇವರ ಚಿಕ್ಕ ಕಲ್ಲಿದೆ. ಇದನ್ನು ಸಹ ಈಗ ಜೀರ್ಣೋದ್ಧಾರಗೊಳಿಸಲು ಪ್ರಾರಂಭಿಸಿದ್ದಾರೆ.

ನೂತನವಾಗಿ ನಿರ್ಮಿಸಿದ ದೇವಾಲಯದ ಹೊರಗೆ ಕಟ್ಟೆ ಇದ್ದು ಇಲ್ಲಿ ಸ್ಥಾನಕ ಭೈರವದೇವರ ವಿಗ್ರಹವಿದೆ. ಇದು ಬಹಳ ಸುಂದರವಾಗಿದ್ದು ಮಳೆ, ಗಾಳಿಗೆ ಮೈ ಮಾಡಿದ್ದರಿಂದ ಸೂಕ್ಷ್ಮ ಕೆತ್ತನೆ ಮಾಯವಾಗಿದೆ. ನಿಂತ ಭಂಗಿಯಲ್ಲಿದ್ದ ವೀರಭದ್ರ ದೇವರು ಕೊರಳಲ್ಲಿ ರುಂಡಮಾಲೆ ಧರಿಸಿ ಬಲಗಾಲು ಮುಂದೆಮಾಡಿ ನಿಂತು ಎಡ ಬಲ ತೋಳುಗಳಲ್ಲಿ ನಾಗಗಳನ್ನು ಹೊಂದಿದ್ದಾನೆ. ಬಲಗೈಯಲ್ಲಿ ಖಡ್ಗ, ಇನ್ನೊಂದು ಕೈಯಲ್ಲಿ ತ್ರಿಶೂಲ ಹಿಡಿದಿರುವದು ಕಂಡು ಬರುತ್ತದೆ. ಪಾದಗಳು ತ್ರುಟಿತಗೊಂಡಿದ್ದು



ಎದೆಯಲ್ಲಿ ಲಿಂಗದ ಕಾಯಿ (ಕರಡಿಗೆ) ಹಾಕಿಕೊಂಡು ನಡುವಿಗೆ ಧೋತರವನ್ನು ಉಟ್ಟಿಕೊಂಡಂತೆ ಕಂಡುಬರುತ್ತದೆ. ಎಡಬಲ ಗಳಲ್ಲಿ ಪ್ರೇತಗಳು ಹಾಗೂ ಮತ್ತೊಂದು ನಾಯಿ ಸಹಿತವಾದ ಭೈರವ ವಿಗ್ರಹವನ್ನು ದೇವಾಲಯದಲ್ಲಿಯೇ ಪ್ರತಿಷ್ಠಾಪನೆ ಗೊಳಿಸಿದ್ದಿರಬಹುದಾಗಿದ್ದರೂ ಅದನ್ನು ಕಿತ್ತುತಂದು ಹೊರ ಗೋಡೆಗೆ ಆನಿಸಿ ನಿಲ್ಲಿಸಿದ್ದಾರೆ. ಪೂರ್ವ ಮುಖ ಭೈರವ ರುದ್ರಾವತಾರ ಭಂಗಿಯಲ್ಲಿದ್ದಾನೆ. ಆದರೆ ನಗೆ ಮುಖದ ಸ್ಥಾನಕ ಭೈರವನಾಗಿದ್ದಾನೆ.

ಈ ವಿಗ್ರಹಗಳ ಪಕ್ಕದಲ್ಲಿ ಹಲವಾರು ತ್ರುಟಿತಗೊಂಡ ವಿಗ್ರಹಗಳಿದ್ದು ಕೆಲವು ಕೈ ಕಾಲು ಮುಖ, ಶರೀರಗಳ ಶಿಥಿಲ ಶಿಲ್ಪವಾಗಿವೆ. ಅವುಗಳಲ್ಲಿ ಶ್ರೀಲಕ್ಷ್ಮಿ ಶಿವ ವಿಷ್ಣು ಮೊದಲಾದವುಗಳು ಅನಾಥ ಸ್ಥಿತಿಯಲ್ಲಿ ಚೆಲ್ಲಾಪಿಲ್ಲಿಯಾಗಿ ಕಾಣಿಸಿ ಕೊಳ್ಳುತ್ತಿವೆ. ಜೊತೆಗೆ ಲಿಂಗಮುದ್ರೆಕಲ್ಲು ಸಹ ಇಲ್ಲಿದೆ. ಸುಮಾರು ೧೦೦೦ ಚದರ ಅಡಿಯಲ್ಲಿರುವ ಜಾಗೆಯಲ್ಲಿ ಕಲ್ಮೇಶ್ವರ ದೇವಾಲಯ ನಿರ್ಮಿಸಿದ್ದಾರೆ. ದೇಗುಲದ ಮುಂದೆ ಕಲ್ಮೇಶ್ವರ ದೇವರ ಜಾತ್ರೆಯಲ್ಲಿ ಕೆಂಡದೋಕಳಿ ಆಡುತ್ತಾರೆ.

**ಜಾತ್ರೆಯ ವೈಶಿಷ್ಟ್ಯ :** ಬೀರವಳ್ಳಿ ತಾವರೆಗೇರಿ ಯಲವಧಾಳ ಗ್ರಾಮಗಳ ಮೂವರು ಸೋದರರು, ಪ್ರತಿವರ್ಷವೂ ಕಲ್ಮೇಶ್ವರ ಜಾತ್ರೆ ನಡೆದಾಗ ಹಾಜರಾಗಿರುತ್ತಾರೆ. ಈ ಗ್ರಾಮದಲ್ಲಿ ವರ್ಷಕ್ಕೊಮ್ಮೆ ನಡೆಯುವ ಬೀರವಳ್ಳಿ ಕೆಂಡದೋಕುಳಿ ಮಾಡಲು ೩ ಜನ ಸೋದರಮೇಲೆ ಬಂದ ಕಲ್ಮೇಶ್ವರರೂ ಪಾಲಕಿ ಸಮೇತ ಹಾಜರಿರುತ್ತಾರೆ. ಜಾತ್ರೆಯ ನಡೆಯುವ ಮುನ್ನಾದಿನ ಅಂದರೆ ದವನದ ಹುಣ್ಣಿಮೆಯ ನಂತರ ಗ್ರಾಮಸ್ಥರು ಬಂಡಿಗಳನ್ನು, ಕಟ್ಟಿಕೊಂಡು, ಮಜಭೂತಾಗಿ ತಯಾರಿದ್ದ ಎತ್ತುಗಳನ್ನು

ಹೂಡಿಕೊಂಡು ಅಡವಿಗೆ ಹೋಗಿ ೫ ಚಿಕ್ಕಡಿ ಕಟ್ಟಿಗೆಯನ್ನು ತಂದು ಊರು ಸೇರುತ್ತಾರೆ. ಮೆರವಣಿಗೆಯಲ್ಲಿ ತಂದ ಕಟ್ಟಿಗೆ ಗಾಡಿಯು ನೇರವಾಗಿ ಕಲ್ಮೇಶ್ವರ ದೇವಸ್ಥಾನಕ್ಕೆ ಹೋಗಿ ಕಟ್ಟಿಗೆಯನ್ನು ಕೆಳಗಿಳಿಸಿ ಅವುಗಳನ್ನು ತುಂಡರಿಸಿ ರಾತ್ರಿ ೮ ಘಂಟೆಗೆ ಅಗ್ನಿಸ್ಪರ್ಶ ಮಾಡುತ್ತಾರೆ. ಇದಾದ ನಂತರ ರಾತ್ರಿಯಲ್ಲಿ ಮೆರವಣಿಗೆ, ಗಡ್ಡೆತೇರು ಎಳೆಯುವುದು, ಕರಡಿ ಮಜಲಿನ ನಂತರ, ದೇವರುಗಳನ್ನು ಪಾಲಕಿಯಲ್ಲಿ ತಂದು ಊರಹೊರವಲಯದಲ್ಲಿರುವ ಕಲ್ಮೇಶ್ವರ ದೇವಾಲಯಕ್ಕೆ ಹೋಗಿ ಗದ್ದುಗೆ ಮೇಲೆ ಪ್ರತಿಷ್ಠಾಪಿಸುತ್ತಾರೆ.

ಇಷ್ಟೊತ್ತಿಗೆ ಕಟ್ಟಿಗೆ ಸುಟ್ಟು ನಿಗಿನಿಗಿ ಕೆಂಡವಾಗಿರುತ್ತದೆ. ಇದನ್ನೆ ರಾಶಿ ಕೆಂಡದುಂಡೆಗಳನ್ನಾಗಿ ಮಾಡುತ್ತಾರೆ ಆಮೇಲೆ ಕೆಂಡದೋಕುಳಿಯಲ್ಲಿ ಭಾಗವಹಿಸುವವರು ಯಾರೇ ಇದ್ದರೂ ಅವರೆಲ್ಲರೂ, ಮಡಿನೀರಿನ ಸ್ನಾನ ಮಾಡಿ ಕೇವಲ, ಪಂಚಿಯನ್ನಷ್ಟೆ ಮೈಮೇಲೆ ಧರಿಸಿ ಬರಿಮೈಯಿಂದ ಕೆಂಡದೋಕಳಿಯಲ್ಲಿ ಪ್ರವೇಶಿಸಲು ಸಾಲುಗಟ್ಟಿ ನೂರಾರು ಜನರು ನೂಕುನುಗ್ಗಲಿನಲ್ಲಿ ಇರುತ್ತಾರೆ. ದೇವರಿಗೆ ಮಣ್ಣಿನ ಪರಾತದಲ್ಲಿ ನಿಗಿ ನಿಗಿ ಕೆಂಡವನ್ನು ಒಯ್ದು ನೈವೇದ್ಯ ಮಾಡುತ್ತಾರೆ. ನಂತರ ಊರ ಗೌಡನನ್ನು ಸಭಿಕರ ಎದುರಿಗೆ ಕೂಡಿಸಿ ಅವನ ತಲೆಯ ಮೇಲೆ ಧೋತರ ಹಾಕಿ ಬೆಂಕಿ ಎರೆಯುವ ವಾಡಿಕೆ ಇದೆ. ನಂತರ ಶ್ರೀ ದೇವರನ್ನು ಹೊತ್ತ ಶಾವಿಕಾರರು ಗಂಟೆ ಜಾಗಟಿ ಹಿಡಿದು ಹರಹರ ಮಹಾದೇವ ಎನ್ನುತ್ತ ಬೆಂಕಿಯ ರಾಶಿಯನ್ನು ಪ್ರವೇಶಿಸಲು ಸಜ್ಜಾಗಿರುತ್ತಾರೆ.

ಜನರೆಲ್ಲರೂ ಸೇರಿ ನಾಮುಂದೆ ತಾಮುಂದೆ ಎನ್ನುತ್ತಾ (ಕೆಂಡದ) ಬೆಂಕಿಯ ರಾಶಿಯನ್ನು ಪ್ರವೇಶಿಸಲು ನಿಂತಾಗ ಊರ ಹರಿಜನರು ಚರ್ಮದ ಹಲಗೆಯನ್ನು ಬಾರಿಸುತ್ತಾ ಹರಹರ ಮಹಾದೇವ ಎನ್ನುವ ನಾಮಸ್ಮರಣೆ ಮಾಡುತ್ತಾ ಮೊದಲು ಅವರೆ ಬೆಂಕಿಯ ರಾಶಿಯಲ್ಲಿ ಕಾಲಿಟ್ಟು ತಮಗೆ ಸಿಕ್ಕಷ್ಟ ಬೆಂಕಿಯನ್ನು ಕೈಯಲ್ಲಿ ತೆಗೆದುಕೊಂಡು ನಿಂತ ಭಕ್ತರ ಮೇಲೆ ತೂರಾಡುತ್ತಾರೆ ಹೀಗೆಯೆ ೨೦೦-೩೦೦ ಜನ ಕೆಂಡದ ರಾಶಿ ಪ್ರವೇಶಿಸಿ ಕೆಂಡದೋಕುಳಿ ಆಡುತ್ತಾರೆ. ಬೆಳಗಿನ ೫ ಘಂಟೆಗೆ ಓಕುಳಿ ಮುಗಿದು ನಂತರ ಭಕ್ತರು ತಮ್ಮ ಬಟ್ಟೆಯಲ್ಲಿ ಸುಟ್ಟ ಇದ್ದಲಿಗಳನ್ನು ಕಟ್ಟಿಕೊಂಡು ತಮ್ಮ ಗ್ರಾಮಗಳಿಗೆ ತೆರಳುತ್ತಾರೆ. ಕೆಂಡದೋಕುಳಿ ನಂತರ ಭಕ್ತರೆಲ್ಲರಿಗೂ ಅಳ್ಳೆಂಬಲಿಯ ಪ್ರಸಾದ ನೀಡುತ್ತಾರೆ. ಮುಂದೆ ಪಾಲಕಿಗಳು ಶ್ರೀ ದೇವರನ್ನು ಗದ್ದಿಗೆಯ ಮೇಲೆ ದೇವರನ್ನು ಪ್ರತಿಷ್ಠಾಪನೆಗೊಳಿಸಿದ ಮೇಲೆ ಜಾತ್ರೆಯು ಮುಕ್ತಾಯವಾಗುತ್ತದೆ.

**ಬೀರವಳ್ಳಿಗ್ರಾಮದಲ್ಲಿಯ ವಿವಿಧ ದೇವಾಲಯಗಳು :** ಹನುಮಂತ ದೇವರ ಗುಡಿಯು ಗ್ರಾಮದ ಮಧ್ಯದಲ್ಲಿರುವ ದೇವಸ್ಥಾನವಾಗಿದೆ. ಸುಮಾರು ೩೦೦ ವರ್ಷಗಳ ಹಿಂದೆ ನಿರ್ಮಾಣಗೊಂಡಿರಬಹುದಾಗಿದ್ದು ದಕ್ಷಿಣಾಭಿಮುಖವಾಗಿದೆ. ಇಲ್ಲಿಯೇ ಕಲ್ಮೇಶ್ವರ ದೇವರ ತೇರು ಎಳೆಯಲಾಗುವುದು. ಹನುಮಂತದೇವರ ಗುಡಿಯು ಸುಮಾರು ೩ ಅಂಕಣಗಳನ್ನು ಹೊಂದಿದ್ದು, ಇತ್ತೀಚಿನ ದಿನಗಳಲ್ಲಿ ಇದರ ಜೀರ್ಣೋದ್ಧಾರ ಮಾಡಿದ್ದಾರೆ. ಪ್ರವೇಶದ್ವಾರ ಇಲ್ಲ. ಒಳಭಾಗದಲ್ಲಿ ವಿಶಾಲವಾದ ಸ್ಥಳವಿದೆ. ಸುಮಾರು ೩೦ ಅಡಿ ಅಗಲ ೩೦ ಅಡಿ ಉದ್ದವಾದ ಯಾಗಶಾಲೆ ಇದ್ದು ಇದು ೯ ಕಂಬಗಳ ಶಿಲಾಮಂಟಪವಾಗಿದೆ. ಚೌಕಾಕಾರವಾದ ಕಂಬಗಳು ತಲೆಯ ಮೇಲೆ ಬೋದಿಗೆ ತೊಲೆಗಳನ್ನು ಹೊತ್ತು ನಿಂತಿವೆ. ನಂತರ ಗೃಹವಿದ್ದು, ಮೇಲಿನ ಕಟ್ಟಿನಲ್ಲಿ ಗಣಪತಿಯ ವಿಗ್ರಹವಿದ್ದು, ಎಡ ಬಲದ ಬಾಗಿಲ ತೋಳಿನಲ್ಲಿ ದ್ವಾರಪಾಲಕೆಯರು ನಿಂತ ಭಂಗಿಯಲ್ಲಿದ್ದಾರೆ. ಬೃಹದಾಕಾರವಾದ ಹೊಸ್ತಿಲನ್ನು, ಹೊಂದಿದ್ದು ಗರ್ಭಗೃಹವು ವಿಶಾಲವಾಗಿದೆ. ಚೌಕಾಕಾರವಾದ ಶೈಲಿಯಲ್ಲಿದ್ದು, ಮೇಲ್ಭಾಗದಲ್ಲಿ ಗೋಪುರವನ್ನು ನಿರ್ಮಿಸಲಾಗಿದೆ. ಹಾಗೂ ಅದರ ಮೇಲೆ ಕಳಸಾರೋಹಣವೂ ಸಹ ಕಂಡು ಬರುತ್ತದೆ.

ನಿಂತ ಭಂಗಿಯಲ್ಲಿದ್ದು ಆಂಜನೇಯ ಹನುಮಂತ ದೇವರ ವಿಗ್ರಹವು ಪೂರ್ವಕ್ಕೆ ಮುಖ, ಮಾಡಿದ್ದು ನೆತ್ತಿಯ ಮೇಲೆ ಜುಟ್ಟನ್ನು ಹೊಂದಿ ಬಲಗೆಯನ್ನು ನಡದ ಮೇಲಿಟ್ಟು ಅಭಯ ಹಸ್ತ ಹೊಂದಿದ್ದಾನೆ.

ಇದರ ಎದುರಿನಲ್ಲಿಯೇ ಪೂರ್ವಾಭಿಮುಖವಾಗಿರುವ ಬೀರವಳ್ಳಿ ಗ್ರಾಮದ ಮಧ್ಯವರ್ತಿ ಸ್ಥಳದಲ್ಲಿರುವ ಗ್ರಾಮದೇವತೆ ದೇವಾಲಯದಲ್ಲಿ ದ್ಯಾಮವ್ವ ದುರುಗಮ್ಮರ ವಿಗ್ರಹಗಳಿವೆ. ಗ್ರಾಮದ ಎಲ್ಲ ಕಾರ್ಯಗಳೂ ಇಲ್ಲಿಂದಲೇ ಪ್ರಾರಂಭವಾಗಿ ಪ್ರತಿವರ್ಷವೂ ದೇವತೆಗಳ ಉಡಿತುಂಬುವ ಕಾರ್ಯಕ್ರಮವು ನಡೆಯುತ್ತದೆ. ಇತ್ತೀಚಿನ ದಿನಗಳಲ್ಲಿ ಕಟ್ಟಿಗೆಯಿಂದ ಮಾಡಿಗೆ ಕೆಂಪು ಹೆಂಚಿನ ಹೊದಿಕೆ ಹಾಕಿದ್ದಾರೆ. ಮೊಗಸಾಲೆ, ಗರ್ಭ ಗೃಹಗಳಿದ್ದು ಹಜಾರದಲ್ಲಿ ಕಬ್ಬಿಣದ ಕಟಾಂಜನಗಳನ್ನು ಜೋಡಿಸಿ ವಿಶೇಷವಾಗಿ ಬೆಳಕಿಗೆ ಅನುಕೂಲ ಕಲ್ಪಿಸಿದ್ದಾರೆ. ಒಳಗಡೆ ಕಟ್ಟಿಕೆಯಿಂದ ನಿರ್ಮಿಸಿದ ಶ್ರೀ ದೇವಿಯರ ವಿಗ್ರಹಗಳು, ಉಡುಗೆ ತೊಡುಗೆಗಳು ಜನಾಕರ್ಷಣೆಯಾಗಿವೆ.

**ಶ್ರೀರಾಮಲಿಂಗೇಶ್ವರ ವಂತಿ (ದೇವಸ್ಥಾನ) :** ಇದೊಂದು ವೀರಶೈವ ಸಂಪ್ರದಾಯದ ಜಂಗಮ ಮಠವಾಗಿದೆ. ಶ್ರೀ ರಾಮಲಿಂಗದೇವರ ಲಿಂಗ ಪ್ರತಿಷ್ಠಾಪನೆ ಮಾಡಲಾಗಿದೆ. ಇದೊಂದು ಪವಾಡ ಸದೃಶವಾದ ಪೀಠವಾಗಿವೆ. ಈ ದೇವರಿಗೆ ಪ್ರತಿವರ್ಷ ಶ್ರಾವಣಮಾಸದಲ್ಲಿ ನಯನ ಮನೋಹರ ಅಕ್ಕಿ ಪೂಜೆಯನ್ನು ಕಟ್ಟುತ್ತಾರೆ. ಇದಲ್ಲದೇ ಗ್ರಾಮದಲ್ಲಿ ಬಸವೇಶ್ವರ ದೇವಸ್ಥಾನ, ಹುಲಿಗೆಮ್ಮ ದೇವಸ್ಥಾನ, ಮರುಳ ಸಿದ್ದೇಶ್ವರ ದೇವಾಲಯಗಳೂ ಇವೆ.



(ಈ ಲೇಖನ ರಚಿಸಲು ಸಹಾಯ ಸಹಕಾರ ನೀಡಿದ ಕಾಲೇಜಿನ ಪ್ರಾಚಾರ್ಯರಾದ ಶ್ರೀ ಎ. ಎಲ್. ಪೋಲಿಸ್ ಪಾಟೀಲರು ಹಾಗು ಬೀರವಳ್ಳಿ ಗ್ರಾಮದ ಶ್ರೀ ನಿಂಗನಗೌಡ ಪಾಟೀಲ ಬಸನಗೌಡ ಪಾಟೀಲ ಶ್ರೀ ಮಹಾದೇವಪ್ಪ ಕುಂಕುರ, ಬಸವನ್ನೆಪ್ಪ ಕುಂತೂರು ಕಲ್ಲಪ್ಪ ಕರತರಿಗಿ, ಶ್ರೀ ನಿಂಗಪ್ಪ ಮಣ್ಣಪ್ಪ ತಡಸ, ತಾವರಗೇರಿಯ ಶ್ರೀ ಗುರುಸಂಗಪ್ಪ ಮುತ್ತನಿ, ಚನ್ನವಿರಪ್ಪ ಮಲ್ಲಿಗವಾಡ ಕಲ್ಲಪ್ಪರೇವಡ್ಯಾಳ ಇವರೆಲ್ಲರಿಗೂ ಅನಂತ ಧನ್ಯವಾದಗಳು)

ಡಾ|| ಜ್ಯೋತಿಬಾಯಿ*

# ಸಾಮ್ರಾಜ್ಯಶಾಹಿ ಆಳ್ವಿಕೆಯಲ್ಲಿ ಮೈಸೂರು ಪ್ರಸನ್ನ ಕೃಷ್ಣಸ್ವಾಮಿ ದೇವಾಲಯ

ವಸಾಹತುಶಾಹಿ ಸಾಮ್ರಾಜ್ಯದ ಆಳ್ವಿಕೆಯಲ್ಲಿ ಬದಲಾವಣೆ ಸಹಜ. ಆದರೆ ಬಿರುಗಾಳಿಯಲ್ಲಿ ಕೊಚ್ಚಿಹೋಗದ ದೃಢತೆ ಸ್ಥಿರತೆಯ ಪ್ರತೀಕವಾಗಿ ಮೈಸೂರುನಗರದ ಸಂಸ್ಕೃತಿಯ ವೈಶಿಷ್ಟ್ಯವಾಗಿ ಈ ಕಾಲಗರ್ಭದಲ್ಲಿ ದೇವಾಲಯಗಳಲ್ಲಾದ ಮಾರ್ಪಾಡುಗಳ ನಡುವೆಯೂ ಅವು ಉಳಿದದ್ದು ಗಮನಾರ್ಹವಾದುದು.

ಅನೇಕ ಅರಮನೆ ಮತ್ತು ಕೋಟೆ ದೇವಾಲಯಗಳು ಅರಸರಂತೆ ತಮ್ಮ ಪಾತ್ರಗಳನ್ನು ವೈಶಿಷ್ಟ್ಯತೆಯನ್ನು ಕಳೆದುಕೊಂಡವು. ಪ್ರಸನ್ನ ಕೃಷ್ಣಸ್ವಾಮಿ ದೇವಾಲಯ ಅರಮನೆ ದೇವಾಲಯವಾಗಿದ್ದು ಮೈಸೂರು ಅರಸರಿಂದ ಪ್ರತಿಷ್ಠಾಪಿಸಲ್ಪಟ್ಟಿತು. ಒಂದೇ ಶತಮಾನದ ಕಾಲಾವಧಿಯಲ್ಲಿ ತನ್ನ ಸಂಪೂರ್ಣ ದಿವ್ಯಕಳೆಯನ್ನು ಕಳೆದುಕೊಂಡು ಇಂದಿಗೂ ನಾಮ ಮಾತ್ರಕ್ಕೆ ಉಳಿದಿದೆ. ದೇವಾಲಯದ ನಿತ್ಯ-ನೈಮಿತ್ಯಗಳಲ್ಲಿ ಬದಲಾವಣೆಯಾಗದೆ ಮೂಡಿರುವ ನಿರ್ಲಿಪ್ತತೆಗೆ ಕಾರಣಗಳನ್ನು ಈ ಪ್ರಬಂಧದಲ್ಲಿ ಸಂಶೋಧಿಸಲಾಗಿದೆ. ಮುಮ್ಮಡಿ ಕೃಷ್ಣರಾಜ ವೊಡೆಯರ್ ಅವರು ಅರಮನೆಯ ಬಲಗಡೆಯಲ್ಲಿ ಬಾಲಾಲಯ ಪೂರ್ವಕವಾಗಿ ಪಂಚೋಪನಿಷನ್ಮಯವಾದ ಇಪ್ಪತ್ತೊಂದು ಸುವರ್ಣ ಕಳಸಗಳಿಂದ ಕೂಡಿದ ಹದಿಮೂರು ವಿಮಾನಗಳಿಂದ ಶೋಭಿಸುತ್ತಿರುವ ಗುಡಿಗೋಪುರಗಳನ್ನು, ಕೈಸಾಲೆಯನ್ನು, ಕೊಠಾರೋತ್ಸವಕ್ಕೆ ಬೇಕಾದ ಮಂಟಪಗಳನ್ನು ಕಟ್ಟಿಸಿದರು. ಮೇಲುಕೋಟೆಯಂತೆ ಸರ್ವದಾ ತೀರ್ಥಪ್ರಸಾದಗಳನ್ನು ಸ್ವೀಕರಿಸಿ ಕೃತಾರ್ಥರಾಗಬೇಕೆಂದು ಮೈಸೂರಿನಲ್ಲಿ ಪ್ರಖ್ಯಾತವಾಗಿದ್ದ ಯಾದವಾದ್ರಿಯಿಂದ ಚೆಲುವರಾಯ ಸ್ವಾಮಿಯ ಪಾದುಕೆಯನ್ನು[೧], ಗುಂಡ್ಲುಪೇಟೆಯ ವರದರಾಜ ದೇವಾಲಯದಿಂದ ಅಂಬೆಗಾಲ ಕೃಷ್ಣನನ್ನು, ಕಂಚಿಯಿಂದ ಬಂದು ತೆರಕಣಾಂಬಿಯಲ್ಲಿ ನೆಲೆಸಿದ್ದ ಪೆರುಂದೇವಿ ಅಮ್ಮನವರನ್ನು[೨] ಬಿಜಯಮಾಡಿಸಿಕೊಂಡು ಬಂದರು. ರುಕ್ಮಿಣಿ, ಸತ್ಯಭಾಮ, ಕೃಷ್ಣಸ್ವಾಮಿ, ರಂಗನಾಥ, ಚೆಲುವರಾಯ, ಸೀತಾರಾಮಲಕ್ಷ್ಮಣ ಸಮೇತ ಲಕ್ಷ್ಮೀನರಸಿಂಹ, ವರದರಾಜ, ವೆಂಕಟರಮಣ, ಅನಂತ, ಗರುಡ, ವಿಶ್ವಕ್ಸೇನ, ಮೊದಲಾದ ದೇವರುಗಳ ಮತ್ತು ನಮ್ಮಾಳ್ವಾರರು ರಾಮಾನುಜಾಚಾರ್ಯರು, ವೇದಾಂತಾಚಾರ್ಯರು ಜೀಯರು ಮುಂತಾದ ೨೪ ಆಳ್ವಾರಾಚಾರ್ಯರುಗಳ ಶಿಲಾವಿಗ್ರಹಗಳನ್ನು ಉತ್ಸವಗಳಿಗೆ ಉಭಯನಾಚ್ಚರು ಸಹಿತವಾಗಿರುವ ಲೋಹದ ವೇಣುಗೋಪಾಲ ಸ್ವಾಮಿಯವರನ್ನೂ ಮತ್ತು ಶಯನೋತ್ಸವಕ್ಕೆ ಅಮ್ಮನವರ ಸಹಿತವಾದ ವೇಣುಗೋಪಾಲನನ್ನು ದೇವಾಲಯದ ಮಹಾದ್ವಾರದ ಎಡಬಲಗಳಲ್ಲಿ ಗಣಪತಿಯನ್ನು ಭೈರವನನ್ನು ಶಾಲಿವಾಹನಶಕ ೧೭೫೧ನೇ ಸರ್ವಧಾರಿ ಸಂವತ್ಸರದ ಪಾಲ್ಗುಣ ಶುದ್ಧ ೧೦ ಸ್ಥಿರವಾರದಲ್ಲಿ ಎಂದರೆ ೧೫ನೇ ಮಾರ್ಚಿ ತಿಂಗಳು ೧೮೨೯ರಲ್ಲಿ ಪಾಂಚರಾತ್ರಾಗಮ ಉಕ್ತ ಪ್ರಕಾರವಾಗಿ ಪ್ರತಿಷ್ಠೆ ಮಾಡಿದರು.[೩] ದೊರೆಗಳು ಮೂಲಸ್ಥಾನದಲ್ಲಿ ಪ್ರತಿಷ್ಠಾಪಿಸಿದ ಅಂಬೆಗಾಲು ಕೃಷ್ಣ ದೇವರಿಗೆ ಪ್ರಸನ್ನ ಕೃಷ್ಣಸ್ವಾಮಿ ಎಂಬ ನಾಮಧೇಯವನ್ನುಂಟುಮಾಡಿ ಶ್ರೀಕೃಷ್ಣ ಜಯಂತ್ಯುತ್ಸವ, ಕೊಠಾರೋತ್ಸವ, ರಥೋತ್ಸವ, ಮುಂತಾದ ಉತ್ಸವಗಳಲ್ಲಿ ಸ್ವಾಮಿಗೂ ಅಮ್ಮನವರಿಗೂ ಅಲಂಕಾರಕ್ಕೋಸ್ಕರ ನವರತ್ನಮಯವಾದ ಪದಕಗಳಿಂದೊಡಗೂಡಿರುವ ಅನೇಕ ಮುಕ್ತಾಹಾರಗಳನ್ನು ಬಂದಿ ಮೊದಲಾದ ಬಗೆಬಗೆಯ ರತ್ನಾಭರಣಗಳನ್ನು ಒಪ್ಪಿಸಿದರು. ಕವಚ, ಪದ್ಮ ಕಿರೀಟ ಕೋರಂಬ ಹಸ್ತಾಭರಣಗಳೇ ಮುಂತಾದ ಚಿನ್ನ-ಬೆಳ್ಳಿಗಳಿಂದ ಮಾಡಿದ ಅನೇಕ ಪಾತ್ರೆಗಳನ್ನು ರಥೋತ್ಸವಕ್ಕೆ ಬೊಂಬೆಯ ರಥವನ್ನು ಬೆಳ್ಳಿಯ ಗರುಡ, ಆಂಜನೇಯ ವಾಹನಗಳನ್ನು ಮೊದಲಾಗಿ ಅನೇಕ ವಾಹನಗಳನ್ನೂ ಪಲ್ಲಕ್ಕಿ, ಛತ್ರ, ಚಾಮರ, ಸೋಪಾನ ಮುಂತಾದ ಸೇವೋಪಕರಣಗಳನ್ನೂ ದೇವಸ್ಥಾನಕ್ಕೆ ಒಪ್ಪಿಸಿದರು.[೪]

ಇವುಗಳಷ್ಟೇ ಅಲ್ಲದೆ ಕೆಳಗೆ ನಮೂದಿಸಿರುವ ಅರಮನೆಯ ಮರ್ಯಾದೆಗಳು ಮೈಸೂರಿನ ಅನೇಕ ಕೋಮಿನ ದೇಗುಲಗಳಿಗೂ ಸಂದಾಯವಾಗುತ್ತಿದ್ದುವು. ಕೃಷ್ಣೋತ್ಸವ ಕಾಲದಲ್ಲಿ ಪ್ರಸನ್ನ ಕೃಷ್ಣಸ್ವಾಮಿ ದೇವಾಲಯಕ್ಕೆ, ಜಿಲ್ಲಾ ಕಛೇರಿಯಿಂದ ನೀಡಲಾಗುತ್ತಿದ್ದ ಮರ್ಯಾದೆಗಳೆಂದರೆ:

**ಬೆಳೆಬಾಲ್ಕ ೧೨; ಗೆಗ್ರಿಬಾಲ್ಕ ೮; ರಾಚಾವರಬಾಲ್ಕ – ೧೦;**

ಸಿಂಗು ಮತ್ತು ತಾಸ ಮರ್ಫೆ, ಗನ್‌ಸೆಟ್ ಬಾಜಾ ಮತ್ತು ಕರ್ನಾಟಕ ಬ್ಯಾಂಡ್ ಹಳೆ ಪೈಕದವರು ೩; ರಾಚಾವರದ ಚುಂಟಿ ಸೆಂಟ್ರಿಗಳು - ೭; ಹೋಬಳಿದಾರ್ - ೧; ಅರಮನೆ ಗ್ಯಾರಾಜ್‌ನಿಂದ ಚಟ್ಟು, ತರಬೇತಿ ಹೊಂದಿದ ಸೇವಕರು - ೬; ಮರಾಮತ್ ಇಲಾಖೆಯಿಂದ ರಜನಿಕಾಂತಗಳನ್ನು ಹೊರಲು ೪೦ ಜನ ಕೂಲಿಗಳು; ಇಲಾಲ್ ಮತ್ತು ಪರ್‌ಬೀನ್ಸ್ ಅವರಸರದ ಹೋಬಳಿಯಿಂದ ರಾಜ ಚಿಹ್ನೆ ೭ ಜೊತೆ; ದಲ್ ದೀವಟಿಗೆ - ತಾಪೆ ಹರಿಕಾರ - ೧; ಕಛೇರಿ ಕೆಲಸದ ನೌಕರ ೧; ಗಜಶಾಲೆಯಿಂದ ಬೆಳ್ಳಿ ನಗಾರಿ ಮತ್ತು ನಗಾರಿ ಆನೆಗಳು; ಖಾಸ್ ಸಮ್ಮುಖದಿಂದ ಚೌರಿ ಒಂದು ಜೊತೆ.

* ಇತಿಹಾಸ ಪ್ರಾಧ್ಯಾಪಕರು, ಮಹಾರಾಣಿ ಮಹಿಳಾ ಕಲಾಕಾಲೇಜು, ಬೆಂಗಳೂರು

ಸಾಧಾರಣವಾದ ನಿತ್ಯಕಟ್ಲೆಯ ಕೊತಾರೋತ್ಸವ ಮತ್ತು ರಥೋತ್ಸವ ಕಾಲದಲ್ಲಿ ಸಂದಾಯವಾಗುತ್ತಿದ್ದ ಅರಮನೆ ಮರ್ಯಾದೆಗಳೆಂದರೆ: ಜಿಲ್ಲಾ ಕಛೇರಿಯಿಂದ ಬೆಳ್ಳಿ ಬಾಲ್ಯ - ೬; ಸಿಂಗು ಮತ್ತು ತಾಸಮರ್ಫೆ; ಅವಸರದ ಹೋಬಳಿಯಿಂದ ಕಟ್ಟಿಗೆಯವನು ಮತ್ತು ಚೋಪುದಾರರು ೧೦; ಕಂಭ, ಚಾಮರ, ಉಡಸ್ ಪಾವಡೆ, ಓಲಗದ ಸೆಟ್ಟು ೧; ಬೆಳ್ಳಿಯ ದೀವಟಿಗೆಗಳು - ೧೦; ಪಂಚ ಕಳಸದ ಕಿಂಕಾಪಿನ ಛತ್ರಿ, ಇತ್ಯಾದಿಗಳು ಸೂಕ್ತ ಸಮಯಕ್ಕೆ ತಲುಪುತ್ತಿದ್ದವು. ನಿತ್ಯ ನೈಮಿತ್ತಿಕ ಕಟ್ಟಳೆಗಳು ಅತ್ಯಂತ ವಿಜೃಂಭಣೆಯಿಂದ ಆಚರಿಸಲ್ಪಡುತ್ತಿದ್ದವು.

ಪ್ರಸನ್ನ ಕೃಷ್ಣದೇವಾಲಯದ ನಿತ್ಯಕಟ್ಲೆ, ಹೆಚ್ಚಿನ ಕಟ್ಲೆಗಳಿಗಾಗಿ ಪಡಿತರ, ದೀಪಾರಾಧನೆ, ರಾಮಾನುಜಕೂಟದಲ್ಲಿ ಸಂತರ್ಪಣೆ ನಡೆಯುವುದಕ್ಕೂ, ನಿತ್ಯೋತ್ಸವ, ವಾರೋತ್ಸವ, ನಕ್ಷತ್ರೋತ್ಸವ, ರಥೋತ್ಸವದಲ್ಲಿ ಸಹಸ್ರ ಕಲಶಾಭಿಷೇಕ ಮುಂತಾದ ಅನೇಕ ಉತ್ಸವಗಳು ನಡೆಯುವುದಕ್ಕೆ ಅರ್ಚಕ, ಅಧ್ಯಾಪಕ ಮೊದಲಾದ ಉಪಾದ್ರಿ ಬ್ರಾಹ್ಮಣರು, ಓಲಗ, ತಾಳ, ಮೇಳ, ನೌಪತ್ತು, ದೇವಾಲಯದ ಮೇಲ್ವಿಚಾರಕ್ಕಾಗಿ ಸ್ಥಾನಿಕ, ಮಣೆಯ, ಅದ್ದಿಕ ಮುದ್ರೆ ಮತ್ತು ದೇವಾಲಯದ ಆಡಳಿತಕ್ಕಾಗಿ ಸುಭೇದಾರ, ಶಿರಸ್ತೆದಾರ ಗುಮಾಸ್ತ, ಕೈವಾಡದ ಜನರನ್ನು ನೇಮಕ ಮಾಡಲಾಗಿತ್ತು. ಅಲ್ಲದೆ ಇವರುಗಳ ಜೀವನ ನಡೆಯುವುದಕ್ಕೆ ಐದು ಸಾವಿರ ವರಹ ನಿಷ್ಕರ್ಷೆ ಮಾಡಿ ಮೈಸೂರು ಆಠಾವಣೆ ಸುಭೇದಾರನ ಹೆಸರಿಗೆ ನಿರೂಪಕಟ್ಲೆ ಮಾಡಿಸಿ ತಸ್ತೀಕು ನಿಷ್ಕರ್ಷೆ ಮಾಡಿ ಈ ದೇವಸ್ಥಾನ ದಲ್ಲಿ ಈ ಸೇವೆಗಳು ಆಚಂದ್ರಾರ್ಕವಾಗಿ ನಡೆಯಲು ಏರ್ಪಾಡು ಮಾಡಿದರು.[೪] ತಮ್ಮ ಪತ್ನಿಯರಿಂದ ಒಡಗೂಡಿದ ಖಾಸಾ ಭಕ್ತಿ ವಿಗ್ರಹಗಳನ್ನು ಶಿಲೆಯಿಂದಲೂ ಲೋಹದಿಂದಲೂ ಮಾಡಿಸಿದರು. ಈ ಭಕ್ತಿ ವಿಗ್ರಹಗಳಿಗೆ ಪ್ರತಿ ದಿನದಲ್ಲಿಯೂ ದೇವತಾಸೇವೆ ಆದ ನಂತರ ದೀವಟಿಗೆ ಸಲಾಂ, ವರದಿ ಮುಂತಾದ ಮರ್ಯಾದೆಗಳು ನಡೆಯುವಂತೆ ಕಟ್ಟಳೆ ಮಾಡಿಸಿದರು ಮತ್ತು ಈ ದೇವತಾಸೇವೆಯು ಸಾರೋದ್ಧಾರವಾಗಿ ನಡೆಯುವಂತೆ ಶಿಲಾಶಾಸನವೊಂದನ್ನು ದೇವಾಲಯದಲ್ಲಿ ಕೆತ್ತಿಸಿದರು. ಇದೇ ಸಂದರ್ಭದಲ್ಲಿ ಪರಕಾಲ ಸ್ವಾಮಿಗಳವರು ರಥೋತ್ಸವಕ್ಕಾಗಿ ಒಂದು ರಥವನ್ನು ದೇಗುಲಕ್ಕೆ ಬಳುವಳಿಯಾಗಿ ನೀಡಿದರು.[೫] ಅರಸರು ಮತ್ತು ಪುಟ್ಟ ತಾಯಮ್ಮನವರು, ತುಲಾಭಾರ ಸೇವಾರ್ಥ ನಡೆಸಿಕೊಟ್ಟರು.

ಮುಮ್ಮಡಿ ಕೃಷ್ಣರಾಜ ಒಡೆಯರು ಪ್ರಸನ್ನ ಕೃಷ್ಣಸ್ವಾಮಿ ದೇವಾಲಯಕ್ಕೆ ಒಂದು ಸನ್ನದನ್ನು ರಚಿಸಿ ಆ ಪ್ರಕಾರ ನಾಲ್ವರು ಸ್ಥಾನಿಕರನ್ನು ನೇಮಕ ಮಾಡಿದ್ದರು. ಅವರುಗಳೆಂದರೆ, ಶ್ರೀನಿವಾಸ ಜೋಯಿಸ, ಗೊಮ್ಮಟ ಶಿಂಗಲಾಚಾರ್ಯ, ಗುಂಜಾಜೋಯಿಸ್ ಮತ್ತು ವೆಂಕಟಾಚಾರ್ಯ. ಇವರು ಸಲ್ಲಿಸಬೇಕಾದ ಸೇವೆಗಳನ್ನು ಆ ಸನ್ನದಿನಲ್ಲಿ ಈ ರೀತಿ ತಿಳಿಸಲಾಗಿದೆ: ತಿರುಪಡಗವಲ್ಲಿ ಮೊಗರ್ಪ, ಚೆಂಗೋಲು, ಕರದೀಪ, ಕವಿಲೂಲಿಗ ಮತ್ತು ಸಾಮದೇವ ಪಾರಾಯಣ, ಬೊಕ್ಕಸದ ಶಾನುಭೋಗ, ಪುರೋಹಿತ, ಜೀಯರ್, ಸನ್ನಿಧಿ ಕೈಂಕರ್ಯ, ಋತ್ವಿಕ ಮತ್ತು ಯಜಮಾನಿಕೆ. -ಹೀಗೆ ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿನ ಕೋಟೆ ಆವರಣದಲ್ಲಿ ಅರಮನೆಯ ಅಂಬಾವಿಲಾಸ ತೊಟ್ಟಿ ಎದುರಿಗೆ ತೀರ್ಥಕ್ಷೇತ್ರಗಳ ಸಮೂಹವನ್ನೇ ಪ್ರತಿಷ್ಠಾಪಿಸಿ ದೇವಾಲಯದ ಆರ್ಥಿಕ, ಆಡಳಿತ ಮತ್ತು ಆಚರಣೆಗಳ ವ್ಯವಸ್ಥೆಯನ್ನು ಮಾಡಿದರು.

ಇಷ್ಟು ಸಮಗ್ರ ವ್ಯವಸ್ಥೆಯನ್ನು ಹೊಂದಿದ ದೇವಾಲಯ ಸಾಮ್ರಾಜ್ಯಶಾಹಿಯ ಆಳ್ವಿಕೆಯ ಪರಿಣಾಮವಾಗಿ, ೧೯ನೆಯ ಜೂನ್ ೧೯೩೦ರ ವೇಳೆಗೆ ಅಲಕ್ಷ್ಯ, ಅದಕ್ಷತೆ, ಅವ್ಯವಸ್ಥೆಗೆ ಗುರಿಯಾಗಿ ಅಲ್ಲಿನ ಅರ್ಚಕನಿಗೆ ವರಮಾನ ಸಾಲದೆ ದೇವರ ಆಭರಣಗಳನ್ನು ಒಂದೊಂದಾಗಿ ಅಡವಿಟ್ಟು ಜೀವನ ಸಾಗಿಸಿದ. ಮೊದಲು ಅಷ್ಟದಳದ ಗುಂಡುಗಳ ಸರ ಗಿರವಿ ಇಟ್ಟು ನಂತರ ದೇವಸ್ಥಾನಗಳ ನಗಗಳನ್ನೆಲ್ಲಾ ಒಂದೇ ಸಲ ತೆಗೆದುಕೊಂಡು ಹೋಗಿ ಮನೆಯಲ್ಲಿಟ್ಟುಕೊಂಡು ಆಗಾಗ್ಗೆ ವರ್ತಕರಿಗೆ ಕೊಟ್ಟು ತನ್ನ ಸಾಲಗಳನ್ನು ತೀರಿಸಿಕೊಳ್ಳುತ್ತಾ ತನ್ನ ಹೆಣ್ಣುಮಕ್ಕಳ ಮದುವೆಗಳನ್ನು ಮಾಡಿದ. ಈತನು ೧೯೨೮ರಲ್ಲಿ ಬರ್ಮಾದೇಶದ ರಂಗೂನ್ ಪಟ್ಟಣದಲ್ಲಿ ರಾವ್ ಬಹದ್ದೂರ್ ರಾಮನಾಥ ರೆಡ್ಡಿಯವರ ದೇವಸ್ಥಾನ ಪ್ರತಿಷ್ಠೆಗಾಗಿ ಸಮುದ್ರಯಾನ ಮಾಡಿದವನಾದ ಕಾರಣ ಈತನನ್ನು ಯಾರೂ ದೇವತಾ ಕಾರ್ಯಗಳ ಪೌರೋಹಿತ್ಯಕ್ಕೆ ಕರೆಯುತ್ತಿರಲಿಲ್ಲ. ಆದ್ದರಿಂದ ಈತ ಮೊದಲು ಯೋಚಿಸಿದಂತೆ ಗಿರವಿ ಇಟ್ಟ ಒಡವೆಗಳನ್ನು ಬಿಡಿಸಿಕೊಳ್ಳುವುದು ಅಸಾಧ್ಯವಾಯಿತು. ಇದೇ ಸಂದರ್ಭದಲ್ಲಿ ದೇವಸ್ಥಾನದ ಪಾರುಪತ್ಯಗಾರ ವೆಂಕಟನಾರಾಯಣಪ್ಪ ಕೆಲಸಕ್ಕೆ ರಾಜೀನಾಮೆ ಕೊಟ್ಟರೆಂದೂ, ಸುಬ್ಬಾಶಾಸ್ತ್ರಿಗಳು ಈ ಕೆಲಸಕ್ಕೆ ನೇಮಕವಾಗಿ ಬರುತ್ತಾರೆಂದು ಅರ್ಚಕ ತಿಳಿದ. ಆಗ ನಗಗಳ ವಿಲೇವಾರಿ ನಡೆದು ಸಿಕ್ಕಿ ಬೀಳುವೆನೆಂದು ದೇವರ ಮೇಲಿದ್ದ ಕಿರೀಟ, ಕೋರಂಬ, ಕರ್ಣಪತ್ರ, ಪದ್ಮಹಸ್ತ, ವರದಹಸ್ತ, ಅಭಯ ಹಸ್ತ, ಏಕಾವಳಿಹಾರ, ನಾಗಾಭರಣ ಸಹಿತ ಡಾಬು ತಿರುಮಾಂಗಲ್ಯ ಸಹಿತ ಬಂದಿಗಳನ್ನು ಕಳವು ಮಾಡಿ, ಕೃಷ್ಣಸ್ವಾಮಿ ದೇವರ ಚಿನ್ನದ ಮುಲಾಮಾಗಿದ್ದ ಒಡವೆಗಳನ್ನು, ಅಂಡಾಳಮ್ಮ ದೇವತೆಯ ನಾಲ್ಕು ಬಂದಿಗಳೂ ಚಿನ್ನದ ಮುಲಾಮಾಗಿದ್ದ ಹಿತ್ತಾಳೆ ಆಭರಣಗಳನ್ನು ಅಲ್ಲೇ ಬಿಟ್ಟು ಈ ಅರ್ಚಕ ಪರಾರಿಯಾಗಿದ್ದ. ಒಂದು ವಾರದ ನಂತರ ಸಿಕ್ಕಿ ಬಿದ್ದ. ತನ್ನ ಇತಿಹಾಸವನ್ನು ತನ್ನೆಲ್ಲಾ ದುಷ್ಕಾರ್ಯಗಳಿಗೆ ಕಾರಣಗಳನ್ನು ತಾನೇ ಕೋರ್ಟಿನಲ್ಲಿ ತೋಡಿಕೊಂಡ.[೬]

ಅಪರಾಧಿಯು ನ್ಯಾಯಾಲಯದಲ್ಲಿ ಹೇಳಿಬರೆಸಿರುವ ಈ ಕಳುವಿನ ಕಥೆ ಎಂಥವರಿಗಾದರೂ ಭಯ ಮತ್ತು ಆಶ್ಚರ್ಯ ವನ್ನುಂಟುಮಾಡುವುದು ಸಹಜವಾಗಿದೆ. ಆದರೆ ೨೦ನೆಯ ಶತಮಾನದ ಪೂರ್ವದಶಕಗಳಲ್ಲಿ ನಡೆದ ಈ ಘಟನೆಯು ಅಪರೂಪವಂತೂ ಅಲ್ಲ. ಇದೇ ವರ್ಷದಲ್ಲಿ ನಂಜನಗೂಡಿನ ದೇವಸ್ಥಾನದಲ್ಲಿ ಗೋಲಕವನ್ನು ಒಡೆದು ಕಾಣಿಕೆ ದ್ರವ್ಯವನ್ನು ಅಪಹರಿಸಲು ಯತ್ನಿಸಿದ ದೇವಸ್ಥಾನದ ನೌಕರನ ಸೆರೆಯಾಯಿತು. ಈ ದಶಕಗಳಲ್ಲೇ ಕೋಟೆವರಾಹಸ್ವಾಮಿ ದೇಗುಲದಲ್ಲಿ ಕಾಳಿಕಾಂಬ ದೇವಾಲಯಗಳಲ್ಲೂ ಕಳ್ಳತನವಾಯಿತು. ಮೈಸೂರು ಸಂಸ್ಥಾನಕ್ಕೆ ಈ ಆರ್ಥಿಕ ದುರ್ದೆಸೆಯು ಒಂದೆರಡು ವರ್ಷಗಳಲ್ಲಿಯೇ ಉಂಟಾಗಲಿಲ್ಲ. ಇದು ಕ್ರಮಕ್ರಮವಾಗಿ ಬೆಳೆಯುತ್ತಾ ಬಂದು ಸುಮಾರು ಒಂದು ಶತಮಾನದ ನಂತರ ತನ್ನ ಕರಾಳ ರೂಪವನ್ನು ಪ್ರಕಟಿಸಿತು. ಮೊದಲಿನಿಂದಲೂ ಒಳಗೊಳಗೇ ಬೆಳೆದುಕೊಂಡು ಬಂದ ವ್ಯಾಧಿಯು ಕೊನೆಗೆ ಅಪಾಯಕರವಾಗಿ ಪರಿಣಮಿಸುವಂತೆ ಮೈಸೂರಿನ ಈ ಆರ್ಥಿಕ ದುಸ್ಥಿತಿಯು ಬಹಳ ಹಿಂದಿನಿಂದಲೂ ನಾನಾ ಕಾರಣಗಳಿಂದ ಬೆಳೆದು ಬಂದು ಕೊನೆಗೆ ಪರಿಹರಿಸಲು ಅಸಾಧ್ಯವಾದ ಸಮಸ್ಯೆಯಾಗಿ ನಿಂತು ಬಿಟ್ಟಿತು.

ದೇವಸ್ಥಾನವು ಪ್ರತಿಷ್ಠಾಪಿಸಲ್ಪಟ್ಟ ಕಾಲಕ್ಕಾಗಲೇ ಮೈಸೂರು, ಸಾಮ್ರಾಜ್ಯಶಾಹಿಯ ಆಳ್ವಿಕೆಯ ಕಪಿಮುಷ್ಠಿಯಲ್ಲಿ ಸೆರೆಯಾಗಿತ್ತು; ಆರ್ಥಿಕ ಬಿಕ್ಕಟ್ಟಿಗೆ ಒಳಪಟ್ಟಿತ್ತು. ಆದರೂ ಅರಸರು ತಮ್ಮ ನವರತ್ನಗಳೆಂಬ ಸೇವೆಯಲ್ಲಿ ಸೇರ್ಪಡೆಯಾಗಿದ್ದ ಈ ದೇವಾಲಯ ಗಳನ್ನು ಜನಸೇವೆಗಾಗಿ ಕಟ್ಟಿಸಿದರೆಂದು ದೇವಾಲಯದ ಗೋಡೆಯಲ್ಲಿರುವ ಶಾಸನ ತಿಳಿಸುತ್ತದೆ.[೭] ಇಷ್ಟು ವೈಭವ, ಸಂಭ್ರಮಗಳಿಂದ ಕೂಡಿದ ದೇವಾಲಯವು ಇಂದು ಸ್ತಬ್ಧವಾಗಿರಲು ಹಲವಾರು ಕಾರಣಗಳಿವೆ. ೧೮೧೨ ರಿಂದ ೧೮೩೧ರವರೆಗೆ ಮುಮ್ಮಡಿ ಕೃಷ್ಣರಾಜ ಒಡೆಯರು ಸ್ವತಃ ತಾವೇ ರಾಜ್ಯಪರಿಪಾಲನೆ ಮಾಡಿದರು. ೧೮೧೭ರಲ್ಲಿ ಬ್ರಿಗೇಡಿಯರ್ ಸರ್ಜಾನ್ ಮಾಲ್ಕಂ ಸಾಹೇಬರು ಮರಾಠ ಪೇಶ್ವೆ ಹೋಳ್ಕರನ ಮೇಲೆ ಯುದ್ಧ ಮಾಡಲು ಮುಮ್ಮಡಿಯವರಿಂದ ಮೈಸೂರಿನ ಫೌಜನ್ನು ಪಡೆದು ಕ್ರಾಫ್ಟನ್ ಗ್ರಾಂಟರ್ ಅಧೀನಕ್ಕೆ ಒಳಪಡಿಸಿದರು. ಅದರ ಮೆಹನತ್ತಿನ ಮೇಲೆ ಮಹೀದ್‌ಪುರದಲ್ಲಿ ನಡೆದ ಘೋರ ಯುದ್ಧದಲ್ಲಿ ಮೈಸೂರಿನ ಸೈನ್ಯಕ್ಕೆ ಗೆಲುವಾಯಿತು. ಶತ್ರುಗಳ ಆನೆ, ಒಂಟೆ, ಸಾಮಾನು, ಸರಂಜಾಮು, ಮುಂತಾದವುಗಳನ್ನು ಹಾಗೂ ಹೋಳ್ಕರ್ ಮಹಾರಾಜರ ಜವಾಹಿರಿ ಹಿಡಿ ಮತ್ತು ಮೆಕಮಲ್ ಒರೆ ಸಹಿತವಾದ ಕತ್ತಿಯನ್ನು ಮೈಸೂರು ಫೌಜು ಸೂರೆಮಾಡಿ ಅವುಗಳನ್ನು ಮಾಲ್ಕಂ ಅವರಿಗೆ ಮುಮ್ಮಡಿಯವರ ಆಜ್ಞೆಯಂತೆ ನೀಡಿದರು.

ಅನಂತರ ಮೈಸೂರು ಸವಾರರು ಕೇಫರ್ಟ್ ಗ್ರಾಂಟ್‌ರವರ ಸಂಗಡಹೋಗಿ ಮಂಡಿಸೂರೆಂಬ ಸ್ಥಳದ ಬಲಿ ಹೋಳ್ಕರ್ ರಾಜರ ದಂಡಿನ ಮೇಲೆ ಯುದ್ಧಮಾಡಿ ಬ್ರಿಟೀಷರಿಗೆ ವಿಜಯ ದೊರಕಿಸಿ ಕೊಟ್ಟರು. ಯುದ್ಧವೇನೋ ರಾಜಿಯಲ್ಲಿ ಮುಕ್ತಾಯವಾಯಿತು. ಸೂರೆ ಮಾಡಿದ ಬೆಲೆಬಾಳುವ ವಸ್ತು ವಾಹನಗಳೆಲ್ಲವನ್ನು ಬ್ರಿಟೀಷರು ತಾವೇ ಸ್ವೀಕರಿಸಿ, ಖರ್ಚಿನ ಬಾಬ್ತುಗಳನ್ನು ಮೆಚ್ಚುಗೆಯ ಮಾತುಗಳೊಡನೆ ಮುಮ್ಮಡಿಯವರಿಗೆ ಬಿಟ್ಟು ಕೊಟ್ಟರು.[೮] ಇಷ್ಟು ಸಾಲದೆಂಬಂತೆ ಆಂಗ್ಲ ಅಶ್ವದಳದ ಪದ್ಧತಿ ಯಂತೆ ಉತ್ತಮ ತರಬೇತಿ ಪಡೆದಿದ್ದ ಮೈಸೂರು ಸವಾರರನ್ನು ಬಾರ್ಗಿರ್ ಎಂದು ಕರೆಯುತ್ತಿದ್ದು, ಬ್ರಿಟೀಷರು ತಮ್ಮ ಅಂಗರಕ್ಷಕರಾಗಿಯೂ, ಮರಾಠರ ಮೇಲೆ ನಡೆಸಿದ ಯುದ್ಧಗಳಲ್ಲಿ, ಪಿಂಡಾರಿಗಳನ್ನು ನಿಗ್ರಹಿಸುವುದಕ್ಕೂ ಬಳಸಿಕೊಂಡರು. ಉದಾ: ಮೈಸೂರಿನ ಬಕ್ಷಿ ರಾಮರಾಯರು ಭೀಮರಾಯರನ್ನೊಳಗೊಂಡ ಮೈಸೂರಿನ ಬಾರ್ಗಿರ್ ಸೈನ್ಯ ೮ ಪಟಾಲಂ ಎಂದರೆ ಪ್ರತಿ ಪಟಾಲಂನಲ್ಲಿ ೫೦೦ ಮಂದಿಯಂತೆ ಒಟ್ಟು ४೦೦೦ ಸಿಪಾಯಿಗಳ ವೆಚ್ಚವನ್ನು ಮುಮ್ಮಡಿಯವರ ಆಡಳಿತ ನಿರ್ವಹಿಸಬೇಕಿತ್ತು. ಈ ಖರ್ಚಿನೊಡನೆ ಮತ್ತೊಂದು ನಷ್ಟದ ಸಂಗತಿ ಎಂದರೆ ಯುದ್ಧ ನಡೆದ ಕಾಲದಲ್ಲಿ ಕಾಲರಾ ಜಾಡ್ಯ ಮೈಸೂರನ್ನು ವ್ಯಾಪಿಸಿತ್ತು. ಇದರ ಪರಿಣಾಮವಾಗಿ ಜನಬಲ ದೊಡನೆ ಬೊಕ್ಕಸವೂ ಬರಿದಾಯಿತು.

೧೮೨೫ರಲ್ಲಿ ಗವರ್ನರ್ ಜನರಲ್ ಲಾರ್ಡ್ ೯ ಹೇಸ್ಟಿಂಗ್ಸ್ ಇಂಗ್ಲೆಂಡಿನ ಅಧಿಕಾರಿಗಳಿಗೆ ಬರೆದ ಲೇಖನದಲ್ಲಿ ತಾವು ನಡೆಸಿದ ಸಂಗ್ರಾಮದಲ್ಲಿ ಮೈಸೂರು, ಬ್ರಿಟೀಷ್ ಸರಕಾರಕ್ಕೆ ಮಾಡಿದ ಸಾರ್ಥಕವಾದ ಸಹಾಯವನ್ನು ಪ್ರಸ್ತಾಪಿಸಿ ಮುಮ್ಮಡಿ ಕೃಷ್ಣರಾಜ ಒಡೆಯರು ಸನ್ಮಾನಾರ್ಹರೆಂಬ ಅಂಶವನ್ನು ಶ್ರುತಪಡಿಸಿದರು. ಅದೇ ವರ್ಷ ಜುಲೈ ಮತ್ತು ಆಗಸ್ಟ್ ತಿಂಗಳಲ್ಲಿ ಇದಕ್ಕೆ ತದ್ವಿರುದ್ಧವಾದ ಫಲಿತಾಂಶ ನಿರೀಕ್ಷಿಸಬಹುದಾದ ಪತ್ರವನ್ನು ಅಂದಿನ ಮೈಸೂರಿನ ರೆಸಿಡೆಂಟ್ ಕೋಲ್ ಸಾಹೇಬರು ಮದ್ರಾಸ್ ಸರ್ಕಾರದವರಿಗೆ ಈ ರೀತಿ ಬರೆದರು - "ಸಂಸ್ಥಾನದ ಆರ್ಥಿಕ ಸ್ಥಿತಿಯು ಬಹಳ ಮಟ್ಟಿಗೆ ಹದಗೆಟ್ಟಿರುತ್ತದೆ. ಸರ್ಕಾರದ ಅಧಿಕಾರಿಗಳಿಗೂ ಸೇವಾ ಜನಗಳಿಗೂ ಸರಿಯಾಗಿ ಸಂಬಳಗಳನ್ನು ಕೊಡುತ್ತಿಲ್ಲ. ಅವರ ಸಂಬಳಗಳೆಲ್ಲ ಬಾಕಿ ನಿಂತಿವೆ. ಪೊಗದಿ ಹಣವನ್ನು ಕೊಡುವುದು ಸಹ ಸ್ವಲ್ಪ ಮಟ್ಟಿಗೆ ದುಸ್ತರವಾಗಿದೆ. ಕಂಪನಿ ಸರ್ಕಾರದವರು ಮಹಾರಾಜರ ಆಡಳಿತದಲ್ಲಿ ಪ್ರವೇಶಿಸಿ ಸರಿಪಡಿಸಬೇಕಾದುದು ಅತ್ಯಾವಶ್ಯವಾಗಿದೆ", ಎಂಬ ಬರೆಹ ಅದಾಗಿತ್ತು.[೯]

ಅರಮನೆಯ ವಿದ್ಯಾಮಾನಗಳನ್ನು ಗುಟ್ಟಾಗಿ ಸಂಗ್ರಹಿಸುತ್ತಿದ್ದ ಇವರು ರಾಜರು ದೇವಾಲಯಗಳಿಗೆ ನೀಡುತ್ತಿರುವ ಒಡವೆ ಗಳೆಲ್ಲವೂ ಅಪ್ಪಟ ಬಂಗಾರವೆಂದೇ ನಂಬಿ ಮದ್ರಾಸ್ ಸರ್ಕಾರಕ್ಕೆ ಧರ್ಮಕಾರ್ಯಗಳಿಗಾಗಿ ಅನೇಕ ಭೂಮಿಗಳು, ಗ್ರಾಮಗಳನ್ನು ಅಗ್ರಹಾರಗಳನ್ನು ಮತ್ತು ನಗನಾಣ್ಯಗಳನ್ನು ವಿಶೇಷವಾಗಿ ದಾನ ಮಾಡಿದ್ದರಿಂದ ಸಂಸ್ಥಾನದ ವರಮಾನ ಕಡಿಮೆಯಾಯಿತು ಎಂದು ತಿಳಿಸಿದರು. ೧೮೩೦ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಇಂದು ಬಾರ್ತಾಲೋಮಿಯೋ ಚರ್ಚ್‌ನ ಕಟ್ಟಡವಿರುವ ದೊಡ್ಡ ಕೆರೆಯ ಪ್ರದೇಶವನ್ನು ಬ್ರಿಟೀಷ್ ಕ್ರೈಸ್ತರಿಗಾಗಿ ನೀಡಿದ್ದರು.[೧೦] ಕ್ಷಾಮಕಾಲದ ಸಿಬ್ಬಂದಿಗಳ ತಲಬೂ, ಸೈನಿಕರಿಗೆ ಬಹುಮಾನ ಇವುಗಳ ಬಗ್ಗೆ ಅವರ ವರದಿಯಲ್ಲಿ ಹೆಚ್ಚಿನ ಮಾಹಿತಿ ಕಂಡು ಬರಲಿಲ್ಲ. ೧೮೫೧ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಪ್ರಸನ್ನ ಕೃಷ್ಣಸ್ವಾಮಿ ದೇವಾಲಯದ ಪೂರ್ಣ ಜವಾಬ್ದಾರಿಯನ್ನು ಪಡೆದುಕೊಳ್ಳಲು ಇಚ್ಛಿಸುತ್ತಿರುವುದು ಅಂದಿನ ಕಮೀಷನರನಾಗಿದ್ದ ಕಬ್ಬನ್ ತಿಳಿದು ಪ್ರಸನ್ನ ಕೃಷ್ಣಸ್ವಾಮಿ ದೇವಾಲಯದ ಮಾಸಿಕ ತಸ್ತಿಕ್ ಅನ್ನು ಕ್ರಮವಾಗಿ ಮಹಾರಾಜರ ಕೈಸೇರುವಂತೆ ಆಜ್ಞೆ ಮಾಡಿದನು.[೧೧] ಅಷ್ಟೇ ಅಲ್ಲದೆ ಮೈಸೂರು ನಗರದಲ್ಲಿದ್ದ ಕೆಲವು ಸಂಸ್ಥೆಗಳನ್ನು ಅರಮನೆ ಅಧಿಕಾರಿಗಳ ಅಧೀನವಾಗಿಸಿದನು. ಆಗ ಪ್ರಸನ್ನ ಕೃಷ್ಣಸ್ವಾಮಿ ದೇವಾಲಯವು ರೂ. ೧४, ४೭೦ ವಾರ್ಷಿಕ ಅನುದಾನದೊಂದಿಗೆ ಅರಮನೆ ಅಧಿಕಾರಿಗಳ ವ್ಯಾಪ್ತಿಗೆ ಒಳ ಪಟ್ಟಿತು. ಇದರಿಂದ ಪ್ರಸನ್ನ ಕೃಷ್ಣಸ್ವಾಮಿ ದೇವಾಲಯಕ್ಕೆ ಕಿಂಚಿತ್ ಆಡಳಿತಾಧಿಕಾರ ದೊರೆತು ದೇವಸ್ಥಾನದ ಚಟುವಟಿಕೆಗಳು ಅರಸರ ನೇರ ಮೇಲ್ವಿಚಾರಣೆಗೆ ಒಳಪಟ್ಟವು. ೧೮೬೭ರಲ್ಲಿ ಅರಸರು ಸ್ವರ್ಗಸ್ಥರಾದರು.

೨೯-೯-೧೮೭೦ರಲ್ಲಿ ವಂಶಪಾರಂಪರ್ಯವಾಗಿ ದೇವಾಲಯಗಳಲ್ಲಿದ್ದ ಹುದ್ದೆಗಳನ್ನು ತುಂಬಲು ಜವಾಬ್ದಾರಿಯನ್ನು ಪೋಷಕರಿಗೆ ಕೊಡಲಾಯಿತು. ಮತ್ತು ದೇಗುಲಕ್ಕೆ ಸಂಬಂಧಿಸಿದ ತಕರಾರುಗಳ ಬಗ್ಗೆ ಅದರ ಪೋಷಕರಾದ ಮಹಾರಾಜರಿಗೆ ದೂರು ಸಲ್ಲಿಸುವುದಾಗಿ ತಿಳಿಸಲಾಯಿತು.

೧೮೭೩ರಲ್ಲಿ ವಂಶಪಾರಂಪರ್ಯದ ಹುದ್ದೆಗಳನ್ನು ಹೊಂದಿದ್ದ ಕೆಲವು ದೇವಾಲಯಗಳನ್ನು ಅರಮನೆಯ ವ್ಯವಸ್ಥೆಗೆ ಒಳಪಡಿಸಲಾಯಿತು. ಇದರ ಜೊತೆಗೆ ಮೈಸೂರನ್ನು ಮಹಾರಾಜರೇ ಸ್ವತಃ ರಾಜ್ಯಪರಿಪಾಲನೆ ಮಾಡುತ್ತಿದ್ದ ಕಾಲದಲ್ಲಿ ದಿವಾನರಾಗಿದ್ದವರುಗಳಲ್ಲಿ ಯಾರೊಬ್ಬರೂ ಆಡಳಿತದಲ್ಲಿ ಸಮರ್ಥರಾಗಿರಲಿಲ್ಲ. ಸ್ವಕಾರ್ಯದುರಂಧರರು ಸ್ವಾಮಿದ್ರೋಹಿಗಳು ವಿಶ್ವಾಸಘಾತುಕರೂ ಸೇರಿಕೊಂಡಿದ್ದರು.

ದಿವಾನ್ ಪೂರ್ಣಯ್ಯನವರು ಕೂಡಿಟ್ಟ ಕಂಠೀರಾಯಗಳೆಲ್ಲವೂ ಕರಗಿ ಹೋಯಿತು. ಕ್ರಮೇಣ ಮೈಸೂರು ತನ್ನ ವಸಂತ ಕಾಲವನ್ನು ಕಳೆದುಕೊಂಡು ಬಡತನದ ಬೆಂಕಿಗೆ ಬಿದ್ದಿತು. ಕ್ರಿ.ಶ. ೧೮೩೧ ಅಕ್ಟೋಬರ್ ೧೯ನೆಯ ತಾರೀಕಿನಂದು ರಾಜ್ಯಾಡಳಿತ ಸೂತ್ರಗಳನ್ನು ಬ್ರಿಟೀಷ್ ಅಧಿಕಾರಿಗಳಿಗೆ ವಹಿಸಿಕೊಟ್ಟು ಬ್ರಿಟೀಷರಿಂದ ಅವರ ಮತ್ತು ಅವರ ಕುಟುಂಬದ ನಿರ್ವಹಣೆಗೆ ಸ್ವೀಕರಿಸುತ್ತಿದ್ದ ಅಲ್ಪ ದ್ರವ್ಯದಿಂದ ಸಾಹಿತ್ಯ-ಕಲೆ ಮುಂತಾದ ವಿಷಯಗಳಲ್ಲಿ ಆಸಕ್ತಿ ತೋರಿದರು. ಈ ಸಂದರ್ಭದಲ್ಲಿ ಬೈರವಿರಾಗಕ್ಕೆ ಅಳವಡಿಸಿದ ಜಾವಳಿಯೊಂದು[೧೨] ಅವರ ಸ್ಥಿತಿಯನ್ನು ಬಿಂಬಿಸುತ್ತದೆ. ಅದು ಇಂತಿದೆ:

*ಮಾಡಿ ಮಾಡಿ ಮೂಢನಾದ ಆಡಿ ಆಡಿ ದುಷ್ಟಾರೊಡನೆ*
*ಜಾಡನು ತಿಳಿಯದೆ ಕೂಡಿ ಮುಂದೆ ಕಾರ್ಯಗಳನು ॥ ಪ॥*
*ಚೆಂಡಿಸುತ ಪಂಡಿತರನು ಕಂಡುದುದಕೆ ಕಂಣನಿಷ್ಟು*
*ಪುಂಡತನದಿ ಭ್ರಮಿಸಿಕೊಂಡು ಪುಂಡರೀಕಾಕ್ಷನ ನೆನೆಯದನೆ ॥ ೧॥*
*ಧನವ ಬಿರಿದೆ ಸೂರೆಮಾಡಿ ಮನಸಿನಲ್ಲಿ ಮಾನರತಿಯಾ*
*ಕನಸಿನಲ್ಲೂ ನೆನಸಿನಸಿತನಂವನೆಲ್ಲಾ ಬಳಲಸುತ ನಾ ॥ ೨॥*
*ಸತಿಸುತರಿಗೆ ಮನವ ಸೋತು ನುತಿಸಲಿಲ್ಲ ಹಿರಿಯ ಜನರ*
*ಸ್ತುತಿಗಳಲ್ಲಿ ಮರೆಯಟ್ಟೆ ಗತಿಯ ಮುಂದೆ ಕಾಣದ ನಾ ॥ ೩॥*
*ಬಂಧು ಜನರು ಬಯಸಿದುದನು ತಂದುಕೊಟ್ಟು ತವಕದಿಂದ*
*ಬಂಧದೊಡನೆ ಶಿಲುಕಿ ಮಿಡುಕಿ ಹಿಂದೆ ಮುಂದೆ ತಿಳಿಯದೆ ನಾ ॥೪॥*
*ನೇಮಗಳನ್ನು ತ್ಯಜಿಸಿ ಹರನ ನಾಮ ಭಜನೆ ಮಾಡಲಿಲ್ಲ*
*ಕಾಮ ಮೋಹ ಲೋಭದಿಂದ ಚಾಮುಂಡಿಯನು*
*ಸ್ಮರಿಸಿದೆ ನಾ ॥ ೫॥*

೧೮೬೭ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರವರು ಮರಣ ಹೊಂದುವವರೆಗೂ ಪ್ರಸನ್ನ ಕೃಷ್ಣ ದೇವಾಲಯದ ಎಲ್ಲಾ ಆಚರಣೆಗಳೂ ಆಯಾ ಮುಹೂರ್ತದಲ್ಲಿಯೇ ಜರುಗುತ್ತಿದ್ದವು. ದೇವಾಲಯದ ಒಡವೆಗಳು ದೇವಸ್ಥಾನದ ಪಾರುಪತ್ತೆಗಾರ ಮತ್ತು ಅರ್ಚಕನ ಜವಾಬ್ದಾರಿಯಲ್ಲಿರಿಸಲಾಯಿತು. ಇದು ಹೀಗೇ ಮುಂದುವರೆಯಿತು. ಮುಮ್ಮಡಿಯವರು ನಾಲ್ಕು ಜನರನ್ನು ಸ್ಥಾನಿಕರ ಹುದ್ದೆಗೆ ನೇಮಕ ಮಾಡಿದ್ದು ಇವರು ತಮ್ಮ ಸಂಬಳದ ೧/೩ ಭಾಗವನ್ನು ತಮ್ಮ ಗುಮಾಸ್ತರಿಗೆ ನೀಡಿ ಅವರ ಕರ್ತವ್ಯಗಳನ್ನು ನೆರವೇರಿಸುವ ಸಲುಗೆಯನ್ನು ನೀಡಿದ್ದರು.

೧೮೯೭ರಲ್ಲಿ ಪ್ರಸನ್ನ ಕೃಷ್ಣದೇವಾಲಯದ ಸ್ಥಾನಿಕರು ದೇವಾಲಯದ ಹಣವು ಪೋಲಾಗುತ್ತಿರುವುದಾಗಿಯೂ, ಆಯವ್ಯಯದ ಲೆಕ್ಕಾಚಾರವನ್ನು ನಿಖರವಾಗಿ ದಾಖಲಿಸುತ್ತಿಲ್ಲವೆಂಬ ಸಂಗತಿಯನ್ನು ಮುಜರಾಯಿ ಅಧಿಕಾರಿಗಳಿಗೆ ದೂರು, ಸಲ್ಲಿಸಿ ಕೂಡಲೇ ಧರ್ಮದರ್ಶಿಗಳು ದೇವಾಲಯದ ಹಣದ ತನಿಖೆ ಮಾಡಿಸಬೇಕೆಂಬ ಮನವಿಯನ್ನು ಸಲ್ಲಿಸಿದರು. ಆದರೆ ಇದರ ಬಗ್ಗೆ ಮುಜರಾಯಿ ಕಾರ್ಯದರ್ಶಿಗಳು ಗಮನಹರಿಸಿದಂತೆ ಕಂಡು ಬರುವುದಿಲ್ಲ.[೧೩]

೧೮೯೨ರಲ್ಲಿ ಮುಜರಾಯಿ ಸೂಪರಿಂಟೆಂಡೆಂಟ್ ಆಗಿದ್ದ ಶ್ರೀನಿವಾಸಚಾರ್ಲು ದೇವಾಲಯಗಳನ್ನು ತನಿಖೆ ಮಾಡಿದಾಗ, ಅರ್ಚಕರು ಆಯಾ ದೇವತಾಗಮ ರೀತ್ಯಾ ಆರಾಧನಾ ಪದ್ಧತಿ ವಿಧಿಯನ್ನು ಅನುಸರಿಸುತ್ತಿಲ್ಲವೆಂಬುದು ಕಂಡು ಬಂದು, ಅರ್ಚಕರು ಅವರವರ ವೃತ್ತಿಗೆ ಬೇಕಾದ ಆಗಮಗಳಲ್ಲಿ ಇಂತಿಷ್ಟು ಕಾಲದಲ್ಲಿ ಉತ್ತೀರ್ಣರಾಗದಿದ್ದರೆ ತಮ್ಮ ಹುದ್ದೆಗಳನ್ನು ಕಳೆದುಕೊಳ್ಳುವರೆಂಬ ಸುತ್ತೋಲೆಯನ್ನು ಹೊರಡಿಸಿದರು. ಪರಿಶುದ್ಧ ಜೀವನ ಕ್ರಮ, ಸಮಾಜದಲ್ಲಿ ಉತ್ತಮ ಹೆಸರುಗಳಿಸುವುದು ಅವರ ಅರ್ಹತೆಯ ಮಾನದಂಡವಾಗಿದ್ದವು. ಹಣ ಮತ್ತು ಧಾನ್ಯಗಳ ರೂಪದಲ್ಲಿ ಅವರಿಗೆ ಸಂಬಳವು ಸಂದಾಯವಾಗುತ್ತಿತ್ತು.

೧೮೯೯ರಲ್ಲಿ ಮುಜರಾಯಿ ಕಾರ್ಯದರ್ಶಿಗಳು ತಸ್ತೀಕ್ ಪಟ್ಟಿಯನ್ನು ಪರಿಶೀಲನೆ ಮಾಡಿದಾಗ ಪ್ರಸನ್ನ ಕೃಷ್ಣ ದೇವಾಲಯದ ಸ್ಥಾನಿಕರು ತಮ್ಮ ಹುದ್ದೆಗೆ ಸರಿಯಾಗಿ ಹಾಜರಾಗುತ್ತಿಲ್ಲವೆಂಬುದು ತಿಳಿದು ಬಂದಿತು. ಅವರು ತಮ್ಮ ಗುಮಾಸ್ತರ ಮೂಲಕ ತಮ್ಮ ಕರ್ತವ್ಯಗಳನ್ನು ನಿರ್ವಹಿಸುವುದು ತಿಳಿದು ಬಂತು. ಈ ಪದ್ಧತಿಯು ಮುಮ್ಮಡಿಯವರ ಕಾಲದಲ್ಲಿ ಪ್ರಾರಂಭವಾಗಿತ್ತಾದರೂ ಸ್ಥಾನಿಕರು ಕರ್ತವ್ಯ ನಿರ್ವಹಣೆಯ ಜವಾಬ್ದಾರಿಯನ್ನು ಕಳೆದುಕೊಂಡಿರುವ ಕಾರಣದಿಂದ ಸು. ೧೮೯೯ರಲ್ಲಿ ಸ್ಥಾನಿಕರನ್ನು ಕೆಲಸದಿಂದ ಹೊರತುಪಡಿಸಿ ಅವರಿಂದ ನೇಮಕವಾಗಿದ್ದ ಗುಮಾಸ್ತರನ್ನೇ ನಿರಂತರವಾಗಿ ಹುದ್ದೆಗೆ ದಾಖಲು ಮಾಡಲಾಯಿತು. ಇವರ ಪೂರ್ಣ ಸಂಬಳವನ್ನು ಮುಜರಾಯಿ ಇಲಾಖೆಯೇ ನೀಡುವಂತಾಯಿತು. ಇದರಿಂದ ಪ್ರಸನ್ನ ಕೃಷ್ಣಸ್ವಾಮಿ ದೇವಾಲಯವನ್ನು ನಿರ್ವಹಿಸುವ ಕೆಲಸ ಗುಮಾಸ್ತರಿಗೆ ಸೀಮಿತವಾಯಿತು. ೧೯೦೩ ವರೆಗೆ ನಿತ್ಯ ನೈಮಿತ್ತಿಕ ಕಟ್ಟಳೆಗಳ ಸೂಕ್ತ ನಿರ್ವಾಹಕರನ್ನು ಹುಡುಕುವುದು ಸ್ಥಾನಿಕರ - ಜವಾಬ್ದಾರಿಯಾಗಿದ್ದು, ಇನ್ನು ಮುಂದೆ ಅದನ್ನು ಮುಜರಾಯಿ ಇಲಾಖೆಯು ವಹಿಸಿಕೊಂಡಿತು.

ಹೀಗೆ ದೇವಾಲಯವು ೨೦ನೆಯ ಶತಮಾನದ ಮೊದಲ ದಶಕದಲ್ಲೆ ಆಡಳಿತಾತ್ಮಕವಾಗಿ ನರಳುವಂತಾಯಿತು. ಅರಮನೆ ಕಂಟ್ರೋಲರ್ ಮತ್ತು ಮುಜರಾಯಿ ಇಲಾಖೆಯವರ ಆಡಳಿತಕ್ಕೆ ಒಳಗಾಯಿತು. ಈ ಮುನ್ನ ಸ್ಥಾನಿಕರು ಹಲವು ಧಾರ್ಮಿಕ ಹಕ್ಕು

ಬಾಧ್ಯತೆಗಳನ್ನು ಹೊಂದಿದ್ದರು. ಕೃಷ್ಣ ದೇವಾಲಯದ ಪ್ರತಿ ದೇವರಿಗೂ ಆಗಮೋಕ್ತವಾಗಿ ಆಚರಿಸಬೇಕಾದ ನಿತ್ಯ ನೈಮಿತ್ತಿಕ ಕಟ್ಲೆಗಳ ಮೇಲ್ವಿಚಾರಣೆ ಮತ್ತು ದೇವಾಲಯದ ಆಡಳಿತದಲ್ಲಿ ಪ್ರಮುಖವಾದ ಹುದ್ದೆಗಳಿಗೆ ಸೂಕ್ತ ವ್ಯಕ್ತಿಗಳ ಆಯ್ಕೆ, ಅವರಿಗೆ ಸಂಬಳದ ವಿತರಣೆ, ಅವರಲ್ಲಿ ಅಸಂಬದ್ಧ ವ್ಯವಹಾರಗಳು ಕಂಡು ಬಂದಾಗ ಸ್ಥಾನಿಕರು ಅರಸನ ಗಮನಕ್ಕೆ ತಂದು ಗುಮಾಸ್ತ ಮತ್ತಿತರರನ್ನು ಕೆಲಸದಿಂದ ಹೊರಗೆ ಹಾಕಲಾಗುತ್ತಿತ್ತು. ಆದರೆ ಪ್ರಸನ್ನ ಕೃಷ್ಣ ಮತ್ತು ಇತರ ದೇವಾಲಯಗಳು ಅರಮನೆ ಕಂಟ್ರೋಲರ್ ಮತ್ತು ಮುಜರಾಯಿ ಕಾರ್ಯದರ್ಶಿಗಳ ಹಸ್ತಾಂತರವಾಗಿ ಸ್ಥಾನಿಕರು ತಮ್ಮ ಹುದ್ದೆಗಳನ್ನು ಕಳೆದುಕೊಂಡರು. ಪ್ರಸನ್ನ ಕೃಷ್ಣ ದೇವಾಲಯವು ಮೈಸೂರು ನಗರದ ಇತರ ಸಾಮಾನ್ಯ ದೇವಾಲಯಗಳಲ್ಲಿ ಒಂದಾಗಿ ಸೇರ್ಪಡೆಯಾಯಿತು. ಸ್ಥಾನಿಕರಿಲ್ಲದೆ ದೇವಾಲಯದಲ್ಲಿ ಹೆಚ್ಚಿನ ಕಟ್ಲೆಗಳಿಗೆ ಶುಭಮುಹೂರ್ತಗಳನ್ನು ನಿಗದಿ ಮಾಡುವುದು ಅರಮನೆ ಮರ್ಯಾದೆಗಳನ್ನು ತರಿಸಿಕೊಳ್ಳುವುದು ಸಾಧ್ಯವಾಗಲಿಲ್ಲ ; ೧೮೯೧ರ ವೇಳೆಗೆ ಮೈಸೂರಿನ ವಿಸ್ತೀರ್ಣ ೭$^{1}/_{3}$ ಚದರ ಮೈಲಿಗಳಾಗಿ ಅದರ ಜನಸಂಖ್ಯೆಯು ೫೭, ೮೧೫ ಆಗಿತ್ತು. ಮೈಸೂರಿನ ಸ್ವಚ್ಛತೆ ಬಹಳ ಕಲುಷಿತಗೊಂಡಿತ್ತು.

೧೮೭೮ರ ಜೂನ್ ೨೦ ರಂದು ಮೈಸೂರಿನ ಚೀಫ್ ಕಮಿಷನರ್ ಆಗಿದ್ದ ಸರ್ ಜೇಮ್ಸ್ ಗಾರ್ಡನ್ ನಗರವನ್ನು ಸಂದರ್ಶಿಸಿ ಅಲ್ಲಿನ ನೈರ್ಮಲ್ಯದ ಬಗ್ಗೆ ತನ್ನ ಅತೃಪ್ತಿಯನ್ನು ಸೂಚಿಸಿ ವಿವರಿಸಲಸಾಧ್ಯವಾದಷ್ಟು ಕೊಳಚೆಯಿಂದ ತುಂಬಿದೆ ಎಂದು ವರದಿ ನೀಡಿದನು.[೧೪] ಕೂಡಲೆ ಮೈಸೂರು ಸರ್ಕಾರವು ಅರಮನೆ ಕಂಟ್ರೋಲರ್ (ಟೌನ್) *Town* ಮ್ಯಾಜಿಸ್ಟ್ರೇಟ್ ಮತ್ತು ಎಕ್ಸಿಕ್ಯುಟಿವ್ ಇಂಜಿನಿಯರ್‌ಗಳನ್ನು ವಿಶೇಷವಾಗಿ ನಿಯೋಜಿಸಿ, ಮೈಸೂರಿನಲ್ಲಿ ಶುಚಿತ್ವಕ್ಕೆ ಬೇಕಾದ ಎಲ್ಲಾ ಅಗತ್ಯ ಕಾರ್ಯಕ್ರಮಗಳನ್ನು ಕೈಗೊಳ್ಳಲು ಆಜ್ಞೆ ನೀಡಿತು. ದೊಬಿನ್ ಎಂಬ ಎಕ್ಸಿಕ್ಯುಟಿವ್ ಇಂಜಿನಿಯರ್ ಒಂದು ಮೆಮೊರಂಡಂ ಮೂಲಕ ೩೦ನೇ ಜನವರಿ ೧೮೭೯ ರಲ್ಲಿ ಕೋಟೆಯ ಮುಖ್ಯ ಚರಂಡಿಯ ಮೇಲಿರುವ ಎಲ್ಲಾ ಮನೆಗಳನ್ನು ನೆಲಸಮ ಮಾಡುವಂತೆ ತಿಳಿಸಿದ.

೧೮೯೦ರಲ್ಲಿ ಮೈಸೂರಿನಲ್ಲಿ ಪ್ಲೇಗ್ ಸಾಂಕ್ರಾಮಿಕ ರೋಗ ಪ್ರಾರಂಭವಾಯಿತು. ಇದಕ್ಕಾಗಿ ಒಂದು ಕಮಿಷನ್ ಸ್ಥಾಪಿಸಿ ಮುನ್ಸಿಪಾಲಿಟಿಯ ನೆರವಿನಿಂದ ಹೊಸ ರಸ್ತೆಗಳನ್ನು ಹಾಕಿಸಿ ಅಲ್ಲಿಗೆ ಕೆಲವು ಮನೆಗಳನ್ನು ಕೆಲವು ದೇವಾಲಯಗಳನ್ನು ಸ್ಥಳಾಂತರಿಸಿದರು. ೧೯೦೬ರ ವೇಳೆಗೆ ದಿವಾನ್ ಎನ್. ಮಾಧವರಾವ್ ಅವರು ಕೋಟೆಯನ್ನು ಸಂದರ್ಶಿಸಿ ಅಲ್ಲಿ ಕಟ್ಟಲ್ಪಟ್ಟಿದ್ದ ಮನೆ, ಅಂಗಡಿಗಳು, ಗಲ್ಲಿಗಳ ಬಗ್ಗೆ ನೂತನ ರೀತಿಯ ನೈರ್ಮಲ್ಯ ಪದ್ಧತಿಗಳನ್ನು ಸೂಚಿಸಿದರು.

೧೯೧೮-೧೯೨೧ರ ವೇಳೆಗೆ ಈ ಎಲ್ಲಾ ಮನೆಗಳನ್ನು ಬೇರೆಡೆಗೆ ಸ್ಥಳಾಂತರಿಸಿ ಇಂದು ನಮಗೆ ಕಾಣುವ ಪೆರೇಡ್ ಗ್ರೌಂಡ್ ಮೈದಾನದಂತೆ ಮೈಸೂರು ಕೋಟೆಯ ಆವರಣವನ್ನು ತಯಾರಿಸಲಾಯಿತು. ಇದರಿಂದ ಪ್ರಸನ್ನ ಕೃಷ್ಣದೇವಾಲಯ ಪ್ರದೇಶವು ನಿರ್ಜನವಾಯಿತು. ಅಲ್ಲಿ ನಡೆಯುವ ಹಬ್ಬ, ಉತ್ಸವಗಳಿಗೆ ಜನ ಬರುವುದು ಅಸಾಧ್ಯವಾಯಿತು. ದೇವಾಲಯದ ಆದಾಯವನ್ನು ನಿಷ್ಕರ್ಷೆ ಮಾಡಿ ಅನೇಕ ಹುದ್ದೆಗಳನ್ನು ಬಡ್ತಿ ಮಾಡಲು ಮುಜರಾಯಿ ಇಲಾಖೆಯು ನಿರಾಕರಿಸಿತು. ಮುಖ್ಯವಾಗಿ ತಾಫೆ ಹುದ್ದೆಯನ್ನು ಸರ್ಕಾರಿ ಆಜ್ಞೆಯ ಮೂಲಕವೇ ತೊಡೆದು ಹಾಕಲಾಯಿತು. ಕೊನೆಗೆ ಪ್ರಸನ್ನ ಕೃಷ್ಣ ದೇವಾಲಯದಲ್ಲಿ ಉಳಿದವರೆಂದರೆ ಪಾರುಪತ್ತೆಗಾರರು, ಒಬ್ಬ ಜವಾನ, ಅರ್ಚಕ.

ಇಂದಿಗೂ ದೇವಾಲಯವು ಅನೇಕ ದೇವ-ದೇವತೆಯರಿಂದ, ಆಳ್ವಾರರು ಆಚಾರ್ಯರುಗಳಿಂದ ಕೂಡಿದ್ದು ಭಾಗವತದ ಅನೇಕ ಸಂದರ್ಭಗಳ ವರ್ಣಚಿತ್ರ ಕಲೆಯಿಂದ ರಂಜಿಸುತ್ತಿದೆ. ಆದರೆ ಮಬ್ಬು ಮುಸುಕಿದ ಕತ್ತಲಲ್ಲಿ ನಿರ್ಜೀವಂತಿಕೆಯು ಅರ್ಚಕನನ್ನು ಆವರಿಸಿಬಿಟ್ಟಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಶ್ರೀಮನ್ಮಹಾರಾಜರವರ ವಂಶಾವಳಿ** (ದ್ವಿತೀಯ ಸಂಪುಟ)., ೫ನೇ ಅ. ಪು. ೧೪೩ ಮತ್ತು ೧೪೫.
೨. ಮಂಜುನಾಥ., ಕೌಂಡಿನ್ಯ ಪುಟ ೧೯, I K.S., ಮೈಸೂರು.
೩. ಅದೇ.
೪. EC. Vol. 5 Mysore 37 (XIV ಮೈ 61) ಶಾ. ಸಾಲು ೩೧.೩೪.
೫. *Temples of Mysore - A cultural study.* Thesis By : Dr. Jothi Bai Page - 251 P. 2.
೬. **ವೃತ್ತಾಂತ ಬೋಧಿನಿ.**, (೧೯೩೦), ಅಕ್ಟೋಬರ್.
೭. E. C. Vol - V (ಪ.ಅ) 1976 ಮೈ. ಅ. ಸಂ.
೮. **ಶ್ರೀ ಮನ್ಮಹಾರಾಜರವರ ವಂಶಾವಳಿ.**, ದ್ವಿತೀಯ ಭಾಗ, ಪುಟ - ೫೧.
೯. ಓ. ಎನ್. ಲಿಂಗಣ್ಣಯ್ಯ., (೧೯೪೦), **ಮುಮ್ಮಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರು**, ಬಸವನಗುಡಿ ಬೆಂಗಳೂರು, ಪುಟ. ೬೩-೬೪.
೧೦. *Temples of Mysore City. A cultural study.* Page No. 32.
೧೧. ಮುಜರಾಯಿ ಮೆಮೊರಂಡಂ. ರಿಜಿಸ್ಟರ್ ಬಿ. ೬೭೧೫ ಪುಟ-೨೮-೨೯.
Muzrai memorandam - No.: 3351, Rev 51 dated 20th Sep. 1873.
೧೨. ಎ. ಎನ್. ನಿರಂಜನ ಅರಸು., **ಮುಮ್ಮಡಿ ಶ್ರೀಕೃಷ್ಣರಾಜ ಮಹಿಪಾಲ ವಂಶರತ್ನಾಕರ**, ಅಧ್ಯಾಯ - ೩, ಪುಟ - ೧೩೭.
೧೩. G & R.S. Muzrai file No. 252 1902-1903.
೧೪. Standish Lee., (1900), *Reports On Water Supply, Drainage, Sanitary and Munciple Matters Mysore state Bangalore .*

ಡಾ|| ಬೆಂ. ಶಾ. ಶ್ಯಾಮಲಾ ರತ್ನ ಕುಮಾರಿ*

# ವಡ್ಡಹಳ್ಳಿ ಗುಹಾದೇವಾಲಯ

ವಡ್ಡಹಳ್ಳಿ ಕೋಲಾರಜಿಲ್ಲೆಯ ಚಿಂತಾಮಣಿ ತಾಲ್ಲೂಕಿನಲ್ಲಿದೆ. ಬೆಂಗಳೂರಿನಿಂದ ಚಿಂತಾಮಣಿಗೆ ಹೋಗುವ ಮಾರ್ಗದಲ್ಲಿ ಸು ೬೫ ಕಿ. ಮೀ. ಕ್ರಮಿಸಿದರೆ ಎಡಬದಿಗೆ ಸಿಕ್ಕುವ ಕನ್ನಂಪಲ್ಲಿಯ ಬಳಿ ಕೈಲಾಸಕ್ಷೇತ್ರಕ್ಕೆ ದಾರಿ, ವಡ್ಡಹಳ್ಳಿ ಗವಿ ಚನ್ನರಾಯಸ್ವಾಮಿ, ಅನಂತಪದ್ಮನಾಭ ಸ್ವಾಮಿ ಗುಹೆಗೆ ದಾರಿ ಎಂಬ ನಾಮಫಲಕ ಕಣ್ಣಿಗೆ ಬೀಳುತ್ತದೆ. ಆ ನಾಮಫಲಕವಿರುವೆಡೆ ಪಶ್ಚಿಮದ ಕಡೆಗೆ ಹೋಗುವ ರಸ್ತೆಯಲ್ಲಿ ೩ ಕಿ.ಮೀ. ಮುನ್ನಡೆದರೆ ಬಲಗಡೆಗೆ ವಡ್ಡಹಳ್ಳಿ ಸಿಗುತ್ತದೆ. ಹಳ್ಳಿಯೊಳಗಿನ ಬಂಡಿದಾರಿಯಲ್ಲಿ ಸ್ವಲ್ಪದೂರ ಹೋಗಿ ೩೦-೪೦ ಮೆಟ್ಟಿಲುಗಳನ್ನು ಹತ್ತಿ ಹೋದರೆ ಈ ಗುಹಾ ದೇವಾಲಯವನ್ನು ಸೇರಬಹುದಾಗಿದೆ.

ಪ್ರಸ್ತುತ ಲೇಖನದಲ್ಲಿ ಗುಹೆ, ಗುಹೆಯ ಮುಂಭಾಗದ ವಿಸ್ತರಣೆಯಲ್ಲಿ ನಿರ್ಮಿಸಿರುವ ರಾಮಾನುಜ, ಅನಂತಪದ್ಮನಾಭ ಗುಡಿಗಳು ಹಾಗೂ ಶಿಲ್ಪಗಳ ವಿವರಗಳನ್ನು; ಪೂಜೆ, ಜಾತ್ರೆ ಮುಂತಾದುವುಗಳ ವಿವರಗಳನ್ನು ನೀಡಲಾಗಿದೆ.

ವಡ್ಡಹಳ್ಳಿಯನ್ನು ವಡಿಗಾಪುರ ಅಥವಾ ವಡಿಗೇನಹಳ್ಳಿ ಯೆಂದೂ, ಗುಹಾಲಯವಿರುವ ಬೆಟ್ಟವನ್ನು ಶೇಷಾದ್ರಿ ಬೆಟ್ಟವೆಂದೂ ಕರೆಯಲಾಗುತ್ತಿತ್ತು.[೧] ಗುಹೆಯಲ್ಲಿ ಎರಡು ಕವಲುಗಳಿವೆ. ಪ್ರವೇಶದ್ವಾರಕ್ಕೆದುರಾಗಿದೆ ಗುಹೆಯ ಒಂದು ಕವಲು. ಇದರ ಬಲಬದಿಯಲ್ಲಿದೆ ಗುಹೆಯ ಇನ್ನೊಂದು ಕವಲು. ಈ ಕವಲು ವೈಶಿಷ್ಟ್ಯಪೂರ್ಣವಾಗಿದೆ. ಎರಡು ದೊಡ್ಡ ಬಂಡೆಗಳ ನಡುವೆ ಮೆಟ್ಟಿಲುಗಳಿದ್ದು ಅವುಗಳನ್ನು ಏರಿ ಹೋದರೆ ಮೇಲ್ಗಡೆಯಲ್ಲಿ ಎರಡು ಚಿಕ್ಕ ಗವಿಗಳಿವೆ. ಒಂದು ಗವಿಯಲ್ಲಿ ಹುತ್ತವೂ, ಇನ್ನೊಂದು ಗವಿಯಲ್ಲಿ ಚನ್ನಕೇಶವ ಮತ್ತು ಅನಂತ ಪದ್ಮನಾಭರ ಉದ್ಭವಮೂರ್ತಿಗಳೆನ್ನಲಾದವು ಇದ್ದು. ಅವು ಗವಿ ಚನ್ನರಾಯಸ್ವಾಮಿ ಹಾಗೂ ಅನಂತಪದ್ಮನಾಭಸ್ವಾಮಿ ಗುಹೆ ಎಂಬ ಜನ ಪ್ರತೀತಿ ಬೆಳೆದು ಬಂದಿದೆ. ಮೆಟ್ಟಲು ಮಾರ್ಗದ ಇಕ್ಕೆಡೆಯ ಬಂಡೆಗಳ ಮೇಲೆಲ್ಲಾ ನಾಗರ (ಹೆಡೆಬಿಚ್ಚಿದ) ಗಳ ಆಕಾರದ ಕಲ್ಲಿನ ಪೊರೆಗಳು ಕಂಡುಬರುತ್ತವೆ. ಈ ನಾಗರ ಪೊರೆಗಳು ಹಾಗೂ ಗವಿಯಲ್ಲಿರುವ ಹುತ್ತ ಇವುಗಳ ಕಾರಣದಿಂದ ಶೇಷಾದ್ರಿ ಗುಹೆ ಎಂಬ ಹೆಸರು ಬಂದಿದೆ. ದ್ವಾರಕ್ಕೆ ಎದುರಾಗಿ ಇರುವ ಗುಹೆಯ ಕವಲಿನ ಮೇಲ್ಭಾಗದಲ್ಲಿ ಒಂದು ಗವಿ ಇದೆ. ಇಲ್ಲಿಯೇ ೧೮ನೇ ಶತಮಾನದ ಸಂತವರೇಣ್ಯ ಕೈವಾರದ ಯೋಗಿನಾರೇಯಣರು ಕೆಲವು ದಿನಗಳ ಕಾಲ ಧ್ಯಾನನಿರತರಾಗಿದ್ದು ಗವಿ ಚನ್ನರಾಯನ ಬಗ್ಗೆ ಕೀರ್ತನೆಗಳನ್ನು ರಚಿಸಿದರೆಂದು ಹೇಳಲಾಗುತ್ತಿದೆ. ಗುಹೆಯ ಮೇಲ್ಭಾಗದಲ್ಲಿ ಕಲ್ಯಾಣಿಯೊಂದಿದೆ. ಗುಡ್ಡದ ಮೇಲ್ಭಾಗದಲ್ಲೂ ಅನೇಕ ಕಲ್ಮನೆಗಳೂ ಕಂಡುಬರುತ್ತವೆ.

೧೯೧೯ರಲ್ಲಿ ತುಪ್ಪದ ವ್ಯಾಪಾರಿ ನಾರಣಪ್ಪನವರು ಗುಹಾದ್ವಾರವನ್ನು, ೨೧/₂ ಅಡಿ ಎತ್ತರದ ದ್ವಾರಪಾಲಕ ಪ್ರತಿಮೆಗಳನ್ನೂ, ಗುಹೆಯಲ್ಲಿ ೫ ನಾಗರಕಲ್ಲುಗಳನ್ನೂ ಹಾಗೂ ೧೧/₂ ಅಡಿ ಎತ್ತರದ ಶ್ರೀದೇವಿ ಭೂದೇವಿ ಸಹಿತವಾದ ಚನ್ನಕೇಶವ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿಸಿದ್ದಾರೆ. ಅಲ್ಲದೆ ಗುಹೆಯ ಮುಂಭಾಗವನ್ನು ಎರಡು ಭಾಗಗಳಲ್ಲಿ ವಿಸ್ತರಿಸಿ ಎಡಭಾಗದಲ್ಲಿ ಶ್ರೀರಾಮಾನುಜಾಚಾರ್ಯರ ಗುಡಿ ಮತ್ತು ಮುಂಭಾಗದಲ್ಲಿ ಜಗಲಿ, ಬಲಭಾಗದಲ್ಲಿ ಅನಂತಪದ್ಮ ನಾಭಸ್ವಾಮಿ ಗುಡಿ, ಜಗಲಿ, ಜಗಲಿಯ ಈಶಾನ್ಯ ಭಾಗದಲ್ಲಿ ನವಗ್ರಹಗಳನ್ನೂ ನಿರ್ಮಿಸಿ ಕೊಟ್ಟಿದ್ದಾರೆ. ಗುಡಿಯ ಮೇಲ್ಭಾಗದಲ್ಲಿ ಚಿಕ್ಕದಾದ ಗೋಪುರವನ್ನು ಆಧುನಿಕ ಶೈಲಿಯಲ್ಲಿ ನಿರ್ಮಿಸಲಾಗಿದೆ. ಗುಡಿಯ ಹೊರಾಂಗಣದಲ್ಲಿ ಬಲಗಡೆಗೆ ಚಿಕ್ಕ ಛತ್ರದಂತಹ ಕಟ್ಟಡವನ್ನೂ, ಗೂಡಿನೊಳಗೆ ಗರುಡನನ್ನೂ ಅದರ ಹಿಂಭಾಗದಲ್ಲಿ ಸ್ತಂಭವನ್ನೂ, ತುಳಸಿ ಬೃಂದಾವನವನ್ನೂ ನಿರ್ಮಿಸಲಾಗಿದೆ.

ದೇವತಾ ಶಿಲ್ಪಗಳು ಸಾಲಿಗ್ರಾಮಶಿಲೆಯಿಂದ ಕಡೆ ಯಲ್ಪಟ್ಟಿವೆ. ಶಿಲ್ಪಗಳು ಪ್ರಮಾಣದಲ್ಲಿ ಚಿಕ್ಕವೆನಿಸಿದರೂ ಭಾವ ಸೌಂದರ್ಯದಿಂದ ಕೂಡಿ ಆಕರ್ಷಕವಾಗಿದೆ. ಗುಹೆಯಲ್ಲಿರುವ ಚನ್ನಕೇಶವನು ಚತುರ್ಭುಜ ಮೂರ್ತಿಯಾಗಿದ್ದು ಶಂಖ ಚಕ್ರಗಳನ್ನು ಮೇಲಿನ ಕೈಗಳಲ್ಲಿ ಧರಿಸಿದ್ದಾನೆ. ಕೆಳಗಿನ ಎರಡು ಕೈಗಳು ಅಭಯ ಮತ್ತು ವರದ ಮುದ್ರೆಗಳಲ್ಲಿವೆ. ವಾಮಭಾಗದಲ್ಲಿರುವ ಶ್ರೀ ದೇವಿ ಬಲಗೈಯಲ್ಲಿ ಕಮಲಪುಷ್ಪ ಎಡಗೈಯನ್ನು ಲೀಲಾಭಾವದಿಂದ ತೊಡೆಗೆ ಆನಿಸಿಕೊಂಡಿದ್ದಾಳೆ. ದಕ್ಷಿಣಭಾಗದಲ್ಲಿರುವ ಭೂದೇವಿಯು ಎಡಗೈಯಲ್ಲಿ ಹಿಡಿದಿರುವುದು ಏನೆಂಬುದು ಸ್ಪಷ್ಟವಿಲ್ಲ. ಬಲಗೈಯನ್ನು ಲೀಲಾಭಾವದಿಂದ ತೊಡೆಗೆ ಆನಿಸಿ ಕೊಂಡಿದ್ದಾಳೆ. ಮಂದಸ್ಮಿತ ಮುಖಭಾವದಿಂದ ಕೂಡಿದ್ದಾಳೆ. ಎಲ್ಲ ಶಿಲ್ಪಗಳೂ ಕಿರೀಟ, ಕರ್ಣಾಭರಣ, ಹಾರ ಕಂಕಣ, ಕಟಿಬಂಧ ಮುಂತಾದ ಆಭರಣಗಳಿಂದ ಭೂಷಿತವಾಗಿವೆ. ಲೋಹದ ಕವಚಗಳನ್ನು ಅಳವಡಿಸಲಾಗಿವೆ. ಸಿಂಹಮುಖದಿಂದ ಕೂಡಿದ ಪ್ರಭಾವಳಿಯನ್ನೂ ಅಳವಡಿಸಲಾಗಿದೆ.

ಗುಡಿಯಲ್ಲಿನ ಅನಂತಪದ್ಮನಾಭ ಶಿಲ್ಪವು ಮೂರು ಅಡಿ

* ಮುಖ್ಯಸ್ಥರು, ಚರಿತ್ರೆ ವಿಭಾಗ; ಬಸವೇಶ್ವರ ಪ್ರಥಮ ದರ್ಜೆ ಕಾಲೇಜು, ರಾಜಾಜಿನಗರ, ಬೆಂಗಳೂರು-೫೬೦ ೦೧೦

೧



೨



೧. ಆಂಜನೇಯ ಶಿಲ್ಪ
೨. ಸೀತಾರಾಮ ಲಕ್ಷ್ಮಣ ಶಿಲ್ಪಗಳು.
೩. ಪದ್ಮನಾಭ ಗುಹೆಯಲ್ಲಿರುವ ನಾಗಗುಹೆ.
೪. ಪದ್ಮನಾಭ ಗುಹೆ - ಮಧ್ಯದ ಗುಹೆ - ದ್ವಾರಪಾಲಕರು.
೫. ವಡಿಗೇಪುರ (ವಡ್ಡಹಳ್ಳಿ) ಚನ್ನಕೇಶವ ಗುಹಾಲಯದ ಗೋಪುರ ಹಾಗು ಪ್ರವೇಶದ್ವಾರ.

೩



೪



೫



ಅಗಲ ಮತ್ತು ಎರಡೂವರೆ ಅಡಿ ಎತ್ತರ ಹೊಂದಿದೆ ಅನಂತ ಪದ್ಮನಾಭಸ್ವಾಮಿಯು ಒಂಭತ್ತು ಹೆಡೆ ಸರ್ಪದ ಮೇಲೆ ನೇರಮುಖನಾಗಿ ಶಯನಿಸಿದ್ದಾನೆ. ನೇರಮುಖ ಇರುವುದರಿಂದ ಮೊದಲ ನೋಟಕ್ಕೆ ಆಸೀನ ಶಿಲ್ಪದಂತೆ ಕಂಡುಬರುತ್ತದೆ. ಪಾದಮೂಲದಲ್ಲಿ ಲಕ್ಷ್ಮಿಯೂ ನೇರಮುಖವಾಗಿದ್ದು ತನ್ನ ಕೈಗಳಿಂದ ಸ್ವಾಮಿಯ ಪಾದವನ್ನೊತ್ತುತ್ತಿದ್ದಾಳೆ. ಅನಂತಪದ್ಮನಾಭ ಮತ್ತು ಲಕ್ಷ್ಮಿ ಶಿಲ್ಪಗಳ ನಡುವೆ ಕಮಲಾಸೀನ ಬ್ರಹ್ಮನ ಶಿಲ್ಪವಿದೆ. ಹಿಂದೆ ಸಿಂಹಮುಖವಿರುವ ಪ್ರಭಾವಳಿಯನ್ನು ಅಳವಡಿಸಲಾಗಿದೆ. ಕಿರೀಟ, ಆಭರಣಗಳಿಂದಲೂ ಹಸನ್ಮುಖಭಾವದಿಂದಲೂ ಶಿಲ್ಪಗಳು ಗಮನ ಸೆಳೆಯುತ್ತವೆ.

ಅನಂತಪದ್ಮನಾಭನ ಬಲಗಡೆಗೆ ಕಮಲ ಪೀಠದ ಮೇಲೆ ನಿಂತ ಆಂಜನೇಯ ಶಿಲ್ಪವಿದೆ. ಆಂಜನೇಯನು ನೇರಮುಖಿಯಾಗಿ ಕೈಗಳನ್ನು ಮುಗಿದುಕೊಂಡು ಭಕ್ತಿಭಾವದಿಂದ ವಿನೀತನಾಗಿ ನಿಂತಿದ್ದಾನೆ. ಕಿರೀಟ, ಭುಜಕೀರ್ತಿ, ಕಂಕಣ, ಮಾಲೆಗಳಿಂದ ಶೋಭಿತನಾಗಿದ್ದಾನೆ. ಬಾಲವನ್ನು ಶಿರದ ಹಿಂಭಾಗದಲ್ಲಿ ವರ್ತುಲಾಕಾರದಲ್ಲಿ ಸುಂದರವಾಗಿ ಬಿಡಿಸಲಾಗಿದೆ ಹಾಗೂ ನಾಗರ ಹೆಡೆಯ ಶಿಲ್ಪಾಲಂಕಾರವನ್ನೂ ಮಾಡಲಾಗಿದೆ.

ಎಡಗಡೆಯ ಗುಡಿಯಲ್ಲಿರುವ ಎರಡಡಿ ಎತ್ತರದ ಶ್ರೀ ರಾಮಾನುಜಾಚಾರ್ಯರ ಮೂರ್ತಿಯನ್ನು ಕನ್ಯಾಕುಮಾರಿಯ ರಾಜಾರಾಮ್ ಅವರು ಮಾಡಿಸಿಕೊಟ್ಟಿದ್ದಾರೆ. ಈ ಶಿಲ್ಪವು ಕಮಲಪೀಠದ ಮಧ್ಯೆ ಪಾದಪೀಠದ ಮೇಲೆ ಆಸೀನಮೂರ್ತಿಯಾಗಿದೆ. ಎರಡೂ ಕೈಗಳನ್ನು ಮುಗಿದುಕೊಂಡಿದೆ. ದಂಡವನ್ನು ಬಲಭುಜಕ್ಕೆ ಆನಿಸಲಾಗಿದೆ. ಕೊರಳಲ್ಲಿ ಐದೆಳೆ ತುಳಸೀ ಮಾಲೆಯನ್ನು ಕೈಗಳಲ್ಲಿ ಜೋಡಿಕಂಕಣವನ್ನು ಕಂಡರಿಸಲಾಗಿದೆ. ವಸ್ತ್ರದ ನೆರಿಗೆಗಳನ್ನು ಅತ್ಯಂತ ಒಪ್ಪವಾಗಿ ಸ್ಪಷ್ಟವಾಗಿ ಬಿಡಿಸಲಾಗಿದೆ.

ಈ ದೇವಾಲಯವು ಮುಜರಾಯಿ ಇಲಾಖೆಗೆ ಸೇರಿದೆ. ದೇವಸ್ಥಾನದ ಆಡಳಿತವನ್ನು ಚಿಂತಾಮಣಿಯ ಎನ್. ಆರ್. ಬಡಾವಣೆಯಲ್ಲಿರುವ ಅನಂತಪದ್ಮನಾಭಸ್ವಾಮಿ ಮತ್ತು ಗವಿಚನ್ನರಾಯಸ್ವಾಮಿ ಟ್ರಸ್ಟ್ ನಿರ್ವಹಿಸುತ್ತಿದೆ. ಪಾಂಚರಾತ್ರಾಗಮ ರೀತ್ಯಾ ಶ್ರೀ ಸುದರ್ಶನಾಚಾರ್ಯರೆಂಬ ಅರ್ಚಕರು ಪೂಜಾ ಕೈಂಕರ್ಯಗಳನ್ನು ನಿರ್ವಹಿಸುತ್ತಿದ್ದಾರೆ. ಈ ದೇವಾಲಯಕ್ಕೆ ವಡ್ಡಹಳ್ಳಿಯಲ್ಲಿ ನಾಲ್ಕೂವರೆ ಎಕರೆ ಇನಾಮತಿ ಭೂಮಿಯಿದೆ. ಚಿಂತಾಮಣಿಯ ಭಕ್ತರೊಬ್ಬರು ಹನ್ನೆರಡು ಹುಣಸೇಮರಗಳನ್ನು ದೀಪಾರಾಧನೆ (ಎಣ್ಣೆಗಾಗಿ) ಗಾಗಿ ನೀಡಿದ್ದಾರೆ. ಕೋಲಾರ ಜಿಲ್ಲೆಯ ಬೀಚಗೊಂಡಹಳ್ಳಿ, ಚಿಕ್ಕೊಂಡಹಳ್ಳಿ ಹಾಗೂ ಬೆಂಗಳೂರಿನ ರೆಡ್ಡಿ ಒಕ್ಕಲಿಗ ಭಕ್ತ ಜನರು ಇಲ್ಲಿಗೆ ಬಂದು ಕೈಂಕರ್ಯಗಳನ್ನು ನಡೆಸುತ್ತಾರೆ. ಚನ್ನಕೇಶವ ಮತ್ತು ಅನಂತಪದ್ಮನಾಭ ದೇವರಿಗೆ ಒಟ್ಟಾಗಿ ಶ್ರಾವಣ ಶುದ್ಧ ಪೌರ್ಣಮಿಯಂದು ಜಾತ್ರೆ, ಕಲ್ಯಾಣೋತ್ಸವ ಮತ್ತು ಅಷ್ಟಾಕ್ಷರೀ ಹೋಮ, ಅನ್ನಸಂತರ್ಪಣೆಗಳು ನಡೆಯುತ್ತವೆ. ಅನ್ನಸಂತರ್ಪಣೆ ಸು. ೨೦೦೦ ಜನಗಳಿಗೆ ನಡೆಯುತ್ತವೆ. ಇದರ ಖರ್ಚನ್ನು ಬೆಂಗಳೂರಿನ ವಿಲ್ಸನ್‌ಗಾರ್ಡನ್ ನಿವಾಸಿ ಶ್ರೀ ಟಿ. ಶಾಮಣ್ಣನವರು ನಿರ್ವಹಿಸುತ್ತಿದ್ದಾರೆ.



(ಮಾಹಿತಿ ನೀಡಿದ ಶ್ರೀಯುತ ಸುದರ್ಶನಾಚಾರ್ಯರಿಗೂ, ಸಹಕಾರ ನೀಡಿದ ನನ್ನ ವಿದ್ಯಾರ್ಥಿ ಮಿತ್ರರಾದ ಚಿ॥ ಲೋಕೇಶ, ಚಿ॥ ವಿಜಯ್ ಹಾಗೂ ನನ್ನ ಸನ್ಮಿತ್ರರಾದ ಚಿಂತಾಮಣಿಯ ಶ್ರೀ ವೆಂಕಟಶಿವಾರೆಡ್ಡಿಯವರಿಗೂ ವಂದನೆಗಳು)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಶ್ರೀಯೋಗಿ ನಾರೇಯಣ ಯತೀಂದ್ರರ, **ಶ್ರೀ ಅಮರ ನಾರಾಯಣ ವೇದಾಂತ ಸಾರಾವಳಿ** - ಕೀರ್ತನೆಗಳು ಸಂ. ೪೨. 'ಯಾಲ ಕರುಣ ಲೇದುರಾ ಗವಿಚನ್ನರಾಯಾ' ಸಂ. ೪೩. 'ಚೆಲಿಯರೋ ವಡಿಗೆಪುರಮು ಚನ್ನಕೇಶವಶೌರಿ ವೆಲುಗು ಲೋಪಲ ತಾನೆ ವಲಸಿಯುನ್ನಾಡೆ; ಸಂ. ೬೪. ವಡಿಗೇಪಲ್ಲಿ ಪುವ್ವಪ್ಪಗಾರಿಕೆ ವ್ರಾಸಿನ ಜಾಬು - ಶ್ರೀ ಕರಂಬೈವೆಲೆಯು ಶ್ರೀ ವಡಿಗೇಪುರ ಮಲೋ ಪುಷ್ಪನಾಮಾಂಕಿತುಂಡು ಪುಣ್ಯ ಪುರುಷುಂಡು ಆಯುರಾರೋಗ್ಯ ಸಕಲೈಶ್ವರಮುಲು ಕಲಿಗಿ ವೆಲುಗಚುಂಡನೂ ಚೆನ್ನಕೇಶವುಲ ಕೃಪನೂ॥

ಬಿ. ಆರ್. ಭಾರತೀ*

# ಹೊಸೂರು ಗ್ರಾಮ ಪರಿಸರದ ದೇವಾಲಯಗಳು ಶಾಸನ ಮತ್ತು ಶಿಲ್ಪಾವಶೇಷಗಳು

ಹೊಸೂರು ಗ್ರಾಮವು ಕೋಲಾರ ಜಿಲ್ಲೆ ಗೌರೀಬಿದನೂರು ತಾಲೂಕಿನಿಂದ ಹತ್ತು ಕಿಲೋಮೀಟರ್ ದೂರದಲ್ಲಿದೆ. ಹೊಸೂರು ಗ್ರಾಮದಲ್ಲಿ ಮತ್ತು ಸುತ್ತಮುತ್ತಲಿನ ಹಳ್ಳಿಗಳಲ್ಲಿ ಕಂಡುಬಂದಂತಹ ದೇವಾಲಯಗಳು, ಶಿಲ್ಪಾವಶೇಷಗಳನ್ನು ಕಂಡು ಅಧ್ಯಯನ ನಡೆಸಿ, ಅದರಿಂದ ತಿಳಿದು ಬಂದ ವಿಚಾರಗಳನ್ನಿಲ್ಲಿ ಮಂಡಿಸಲಾಗಿದೆ.

ಹೊಸೂರು ಗ್ರಾಮದಲ್ಲಿ ನಾಲ್ಕು ವೀರಗಲ್ಲುಗಳು, ಒಂದು ನಂದಿ, ದುರ್ಗಾ, ಯಕ್ಷಿ, ನಾರಾಯಣ, ಮತ್ತು ಇನ್ನೆರಡು ಶಿಲ್ಪಗಳಿವೆ. ಪ್ರಾಚೀನ ವೀರಭದ್ರ, ಮತ್ತು ಈಶ್ವರನ ದೇವಾಲಯವಿದೆ. ಈಶ್ವರನ ದೇವಾಲಯದ ಬಳಿ ಬಸದಿ ಯೊಂದಿತ್ತು. ಅದರ ಭಾಗಗಳನ್ನು ಜೈನರು ಎತ್ತಿಕೊಂಡು ಹೋದರೆಂದು ಊರ ಹಿರಿಯರು ಹೇಳುತ್ತಾರೆ. ತೀರ್ಥಂಕರ ವಿಗ್ರಹವನ್ನು ತೆಗೆದುಕೊಂಡು ಹೋಗಿ ಬೇರೆಡೆ ಪ್ರತಿಷ್ಠಾಪಿಸಿ ದ್ದಾರೆಂದು ಡಾ|| ಹಂಪ ನಾಗರಾಜಯ್ಯನವರು ತಿಳಿಸಿದ್ದಾರೆ. ಬಸದಿಯಿತ್ತು ಎಂದು ಹೇಳುವ ಜಾಗದ ಎದುರು ಒಂದು ಕಂಬವಿದೆ. ಇದು ಮಾನಸ್ತಂಭ ಹೌದೋ ಅಲ್ಲವೋ ಎಂದು ಅನುಮಾನವಿದೆ.

ಮೊದಲನೆಯ ವೀರಗಲ್ಲು ಬಸ್‌ನಿಲ್ದಾಣದ ಸಮೀಪವಿದೆ. ಇದರ ಪಕ್ಕದಲ್ಲಿಯೇ ಒಂದು ಪುಟ್ಟ ನಂದಿಯಿದೆ. ವೀರಗಲ್ಲು ಮೂರು ಹಂತದಲ್ಲಿದ್ದು ಕೆಳಗೆ ಹೋರಾಟದ ಚಿತ್ರವು ಅಸ್ಪಷ್ಟವಾಗಿ ಕಾಣುತ್ತದೆ. ಕಲ್ಲು ಕೂಡ ಸ್ವಲ್ಪ ಹಾಳಾಗಿದೆ. ಎರಡನೆಯ ಹಂತದಲ್ಲಿ ವೀರನನ್ನು ಇಬ್ಬರು ಅಪ್ಸರೆಯರು ಕರೆದೊಯ್ಯುತ್ತಿದ್ದಾರೆ. ಅವರಲ್ಲಿ, ಒಬ್ಬಳ ಕೈಯಲ್ಲಿ ಚಾಮರ, ಇನ್ನೊಬ್ಬಳ ಕೈಯಲ್ಲಿ ಚಾಮರದಂತೆಯೇ ಕಾಣುವ ವಸ್ತುವಿದೆ. ಮೇಲಿನ ಹಂತದಲ್ಲಿ ಕೈಲಾಸದ ಚಿತ್ರಣವಿದೆ.

ಎರಡನೆಯ ವೀರಗಲ್ಲು ನ್ಯಾಷನಲ್ ಹೈಸ್ಕೂಲಿನ ಹಳೆಯ ಕಟ್ಟಡದೆದುರು ಅಶ್ವತ್ಥಕಟ್ಟೆಯ ಪಕ್ಕದಲ್ಲಿದೆ. ಇದರಲ್ಲಿ ಅಪ್ರಕಟಿತ ಶಾಸನವೊಂದಿದೆ. ಶಾಸನವು ಹದಿಮೂರು ಸಾಲುಗಳಲ್ಲಿದೆ. ಲಿಪಿಯ ದೃಷ್ಟಿಯಿಂದ ಕ್ರಿ.ಶ. ೧೧-೧೨ ನೆಯ ಶತಮಾನಕ್ಕೆ ಸೇರಿಸಬಹುದಾಗಿದೆ. ಇದು ಮೂರು ಹಂತದಲ್ಲಿದೆ. ಕೆಳಗಿನ ಹಂತದಲ್ಲಿ ಯುದ್ಧದ ದೃಶ್ಯವನ್ನು ಚಿತ್ರಿಸಿದ್ದಾರೆ. ನಾಲ್ಕು ಕುದುರೆಗಳ ಮೇಲೆ ವೀರರು ಯುದ್ಧ ಮಾಡುತ್ತಿದ್ದಾರೆ. ಪ್ರಧಾನವಾಗಿ ಕಾಣುವ ಇಬ್ಬರು ವೀರರಲ್ಲಿ ಎಡಗಡೆಯವನ ಕೈಯಲ್ಲಿ ಉದ್ದನೆಯ ಭರ್ಜಿಯಿದೆ. ಬಲಗಡೆಯ ಕುದುರೆಯ ಮೇಲಿರುವ ವೀರನ ತಲೆ ಸರಿಯಾಗಿ ಕಾಣುತ್ತಿಲ್ಲ. ಅವನ ತಲೆ ಕತ್ತರಿಸಲಾಗಿದೆಯೋ ಅಥವಾ ತಿವಿತದಿಂದ ತಪ್ಪಿಸಿಕೊಳ್ಳಲು ಬಗ್ಗಿದ್ದಾನೋ ಎಂದು ಗುರುತಿಸಲು ಸಾಧ್ಯವಾಗುವುದಿಲ್ಲ. ಕೆಳಗಡೆ ಯುದ್ಧದಲ್ಲಿ ಮಡಿದ ಯೋಧರು ಬಿದ್ದಿದ್ದಾರೆ. ಎರಡನೆಯ ಹಂತದಲ್ಲಿ ಇಬ್ಬರು



* ೩೬೮, ४೨ನೆಯ ಅಡ್ಡರಸ್ತೆ, ೮ನೆಯ ವಿಭಾಗ, ಜಯನಗರ, ಬೆಂಗಳೂರು - ೫೬೦ ೦೮೨



ವ್ಯಕ್ತಿಗಳನ್ನು ಅಪ್ಸರೆಯರು ಮಂಟಪದಲ್ಲಿ ಕರೆದೊಯ್ಯುತ್ತಿದ್ದಾರೆ. ಇಬ್ಬರೂ ವ್ಯಕ್ತಿಗಳು ಕೈಮುಗಿದುಕೊಂಡು ಕುಳಿತ್ತಿದ್ದಾರೆ. ಮೇಲಿನ ಹಂತದಲ್ಲಿ ಕೈಲಾಸವನ್ನು ಚಿತ್ರಿಸಿದ್ದಾರೆ. ಇದರ ಕೆಳಗಿನ ಪಟ್ಟಿಕೆಯಲ್ಲಿ ಒಬ್ಬ ವ್ಯಕ್ತಿಯನ್ನು ಚಿಕ್ಕದಾಗಿ ಕಡೆದಿದ್ದಾರೆ.

ಮೂರನೆಯ ವೀರಗಲ್ಲು ಹೈಸ್ಕೂಲಿನ ಆವರಣದಲ್ಲೇ ಇದೆ. ಇದರಲ್ಲಿ ಹಂತಗಳನ್ನು ಪ್ರತ್ಯೇಕಿಸದೆ ಒಂದೇ ದೃಶ್ಯದಲ್ಲೇ ಮೂರು ಹಂತಗಳನ್ನು ತೋರಿಸಿದ್ದಾರೆ. ಕುದುರೆಯ ಮೇಲೆ ಕುಳಿತ ವ್ಯಕ್ತಿ ನೆಲದ ಮೇಲೆ ಬಿಲ್ಲು-ಬಾಣವನ್ನು ಹಿಡಿದಿರುವ ವ್ಯಕ್ತಿಯನ್ನು ತಿವಿಯುತ್ತಿದ್ದಾನೆ. ಕೆಳಗೆ ಒಂದು ಹಸುವಿನ ಚಿತ್ರವಿದೆ. ನಂತರ ವೀರನ ಸ್ವರ್ಗಾರೋಹಣ, ಅದಾದ ಮೇಲೆ, ವೀರ ಸ್ವರ್ಗವಾಸಿ ಯಾಗಿರುವ ಚಿತ್ರಣವಿದೆ. ಈ ವೀರಗಲ್ಲಿನ ಕಾಲವನ್ನು ಕ್ರಿ.ಶ. ೧೧-೧೨ನೆಯ ಶತಮಾನಕ್ಕೆ ಸೇರಿಸಬಹುದು. ಈ ಕಲ್ಲನ್ನು ಹೊಸೂರಿನಿಂದ ಮೂರು ಮೈಲಿ ದೂರವಿರುವ ಕಾಚಮಾಚೀನ ಹಳ್ಳಿ ಗ್ರಾಮದ ಕೆರೆಯಿಂದ ತಂದು ಇಟ್ಟಿದ್ದಾರೆ.

ನಾಲ್ಕನೆಯ ವೀರಗಲ್ಲು ತೀರ ಇತ್ತೀಚಿನದಾಗಿದ್ದು ವೀರನೊಬ್ಬನು ಆಯುಧ ಸಮೇತನಾಗಿ ನಿಂತಿರುವಂತೆ ಚಿತ್ರಿಸಿದ್ದಾರೆ. ಈ ವೀರಗಲ್ಲನ್ನು ಕ್ರಿ.ಶ. ೧೭-೧೮ನೆಯ ಶತಮಾನಕ್ಕೆ ಸೇರಿಸಬಹುದಾಗಿದೆ. ಹೈಸ್ಕೂಲಿನ ಆವರಣದಲ್ಲಿ ಅನೇಕ ದೇವದೇವಿಯರ ಮೂರ್ತಿಗಳಿವೆ. ಕೋಣನ ತಲೆಯ ಮೇಲೆ ನಿಂತಿರುವ ದುರ್ಗೆಯ ಮೂರ್ತಿಯಿದೆ. ಈ ಮೂರ್ತಿಯ ಕಾಲವನ್ನು ಹತ್ತನೆಯ ಶತಮಾನಕ್ಕೆ ಸೇರಿಸಬಹುದಾಗಿದೆ. ಆದರೆ ಹತ್ತನೆಯ ಶತಮಾನಕ್ಕೆ ಸೇರಿಸಬಹುದಾದ ಬೇರೆ ಇನ್ಯಾವ ಶಿಲ್ಪಾವಶೇಷಗಳೂ ಇಲ್ಲ. ಇದೇ ಆವರಣದಲ್ಲೇ ಇನ್ನೊಂದು



ಸ್ತ್ರೀಮೂರ್ತಿಯಿದೆ. ಕುಳಿತಿರುವ ಭಂಗಿಯಲ್ಲಿರುವ ಈ ಮೂರ್ತಿಗೆ ನಾಲ್ಕು ಕೈಗಳಿವೆ. ತಲೆಯ ಭಾಗ ಮುರಿದುಹೋಗಿದೆ. ಸ್ಕೂಲಿನ ಹಿಂದೆ ಕೆರೆಯ ಕೋಡಿ ಹರಿಯುವ ಹಳ್ಳದಲ್ಲಿ ಈ ವಿಗ್ರಹವು ಸಿಕ್ಕಿದ್ದು, ನಂತರ ಹುಡುಕಾಡಿದಾಗ ತಲೆಯ ಭಾಗ ಸಿಗಲಿಲ್ಲವೆಂದು ಶಾಲೆಯ ಅಧ್ಯಾಪಕರು ತಿಳಿಸಿದರು. ಈ ವಿಗ್ರಹದ ಒಂದು ಎಡಗೈ ಇದೆ. ಇನ್ನೊಂದು ಎಡಗೈ ಮತ್ತು ಬಲಗೈಗಳು ಇಲ್ಲ. ಕುತ್ತಿಗೆಯಲ್ಲಿ ಆಭರಣಗಳಿವೆ. ಕಾಲಿನಲ್ಲಿ ದಪ್ಪ ಕಡಗವಿದೆ. ಒಂದು ಕಾಲು ಮಡಿಸಿ ಕುಳಿತಿರುವ ಈ ವಿಗ್ರಹವನ್ನು ಸರಿಯಾಗಿ ಗುರುತಿಸಲಾಗಿಲ್ಲ. ಈ ವಿಗ್ರಹದ ಕೈಯಲ್ಲಿ ಒಂದು ಬಟ್ಟಲಿದೆ.

ಪೀಠದ ಮೇಲೆ ನಿಂತಿರುವ ವಿಷ್ಣುವಿನ ಮೂರ್ತಿ ಯೊಂದಿದೆ. ಇವನ ನಾಲ್ಕು ಕೈಗಳಲ್ಲಿ ಬಲಗೈ ಮುರಿದಿದೆ. ಬಹುಶಃ ಇದು ಅಭಯ ಹಸ್ತವಿರಬಹುದು. ಎಡಗೈ ಸೊಂಟದ ಬಳಿಯಿದೆ. ಇನ್ನೆರಡು ಕೈಗಳಲ್ಲಿ ಶಂಖ, ಚಕ್ರಗಳಿವೆ. ಪೀಠದ ಮೇಲೆ ಕೈ ಮುಗಿದು ಕುಳಿತ ಗರುಡನ ಶಿಲ್ಪವಿದೆ. ಶಿಲ್ಪದ ದೃಷ್ಟಿಯಿಂದ ವಿಜಯನಗರದ ಕೊನೆಗಾಲ ಎಂದು ಹೇಳಬಹುದು.

ಹೊಸೂರು ಗ್ರಾಮದೊಳಗೆ ಈಶ್ವರ ದೇವಾಲಯ, ವೀರಭದ್ರನ ಗುಡಿ, ಹನುಮಂತನ ಗುಡಿಗಳಿಗಳಿವೆ. ವೀರಭದ್ರನ



ಮೂರ್ತಿ ಪ್ರಾಚೀನವಾದದ್ದಾಗಿದೆ. ಬಹುಶಃ ನೊಳಂಬ ಶಿಲ್ಪ. ದೇವಾಲಯವನ್ನು ೩೦-೪೦ ವರ್ಷದ ಹಿಂದೆ ಮತ್ತೆ ಕಟ್ಟಿದ್ದಾರೆ. ಈಶ್ವರನ ದೇವಾಲಯ ಹಳೆಯದು. ಈ ದೇವಾಲಯ ಅನಾವರಣಕ್ಕೆ ಬಂದಿದ್ದು ಕನಸಿನ ಮೂಲಕ. ಕನಸು ಕಂಡ ವ್ಯಕ್ತಿ ಅದೇ ದೇವಾಲಯದ ಆವರಣದಲ್ಲಿಯೇ ವಾಸಿಸುತ್ತಿದ್ದರು. ಈಗ ಕೆಲವು ತಿಂಗಳುಗಳ ಕೆಳಗೆ ಅವರು ತೀರಿಕೊಂಡರೆಂದು ತಿಳಿದುಬಂತು. ಅವರನ್ನು ಭೇಟಿ ಮಾಡಿದಾಗ ಅವರೇ ಹೇಳಿದ ಪ್ರಕಾರ ಅವರ ಕನಸಿನಲ್ಲಿ ಆಜ್ಞೆಯಾಯಿತು. ಏನೆಂದರೆ ಮನೆಯ ಪಕ್ಕದಲ್ಲಿರುವ ತಿಪ್ಪೆಯನ್ನು ಅಗೆದು 'ಅಲ್ಲಿರುವ ತನ್ನನ್ನು ಮೇಲೆ ಎತ್ತಬೇಕು', ಅದೇ ಪ್ರಕಾರ ತಿಪ್ಪೆಯನ್ನು ಅಗೆಸಿದಾಗ ಶಿವಲಿಂಗ ಸಮೇತ ಒಂದು ಗರ್ಭಗೃಹ ದೊರಕಿತು. ಈ ಘಟನೆಗೆ ಸಾಕ್ಷಿಯಾಗಿ ಊರ ಜನರಿದ್ದಾರೆ. ದೇವಾಲಯದಿಂದ ೧೦೦-೧೨೦ ಅಡಿ ದೂರದಲ್ಲಿ ಒಂದು ಕಂಬವಿದೆ. ಇದು ನೋಡಲು ಗರುಡಗಂಬದಂತೆ ಕಾಣುತ್ತದೆ. ಊರಹಿರಿಯರ ಪ್ರಕಾರ ಈ ಕಂಬದ ಮುಂದೆಯೇ ಒಂದು ಬ್ರಹ್ಮಪ್ಪನ ಗುಡಿಯಿತ್ತು. ಈಗ ಹೊಸೂರಿನ ಸುತ್ತಮುತ್ತಲಿನ ಅನೇಕ ಗ್ರಾಮಗಳಲ್ಲಿ ಜೈನರಿದ್ದಾರೆ. ಹೊಸೂರಿನಲ್ಲಿ ಮಾತ್ರ ಇಲ್ಲ. ಬ್ರಹ್ಮಪ್ಪನ ಗುಡಿಯ ಭಾಗಗಳು ಮತ್ತು ವಿಗ್ರಹವನ್ನು ತೆಗೆದುಕೊಂಡು ಹೋದುದನ್ನು ಮೊದಲೇ ತಿಳಿಸಿದ್ದೇನೆ. ಈಶ್ವರ ದೇವಾಲಯದ ಆವರಣದೊಳಗೆ ಒಂದು ಪುಟ್ಟವಿಗ್ರಹವಿದೆ. ಬಹುಶಃ ಭಿತ್ತಿಯಲ್ಲಿದ್ದಿರಬಹುದಾದ ಶಿಲ್ಪ. ತಲೆಯ ಮೇಲೆ ಪೇಟವನ್ನು ಧರಿಸಿದ್ದಾನೆ. ವರ್ತಕನಂತೆ ಭಾಸವಾಗುವ ಈ ವಿಗ್ರಹ ಮುಕ್ಕಾಲು ಅಡಿ ಎತ್ತರವಿದೆ.

ಹೊಸೂರಿನ ಇತಿಹಾಸವನ್ನು ಸ್ಥೂಲವಾಗಿ ಹೇಳುವುದಾದರೆ, ಪೂರ್ವದಲ್ಲಿ ನೊಳಂಬರು, ಹೊಯ್ಸಳರು, ನಂತರ ವಿಜಯನಗರದ ಅರಸರು ಆಳಿದ ಪ್ರದೇಶ. ಶಾಸನಗಳು ಮತ್ತು ಸುತ್ತ ಮುತ್ತಲಿನ ಪ್ರದೇಶದ ಅಧ್ಯಯನದಿಂದ ಹೀಗೆ ಹೇಳಬಹುದು: ಹೊಯ್ಸಳ ಮೂರನೆಯ ವೀರಬಲ್ಲಾಳನು ತನ್ನ ರಾಜಧಾನಿಯಾದ ಹಳೇಬೀಡಿನ ಮೇಲೆ ಮುಸಲ್ಮಾನರು ದಾಳಿ ಮಾಡಿ ಹಾಳು ಗೆಡವಿದ ಮೇಲೆ ಹೊಸಪಟ್ಟಣವನ್ನು ಕಟ್ಟಿದಂತೆ ತಿಳಿದಬರುತ್ತದೆ. ಇದಕ್ಕೆ ಆಧಾರವಾಗಿ ಹೊಸೂರಿನಿಂದ ೫-೬ ಕಿ.ಮೀ. ದೂರದಲ್ಲಿರುವ ರಮಾಪುರದ ವೀರಗಲ್ಲು ಶಾಸನ ಮುಂತಾದವುಗಳಲ್ಲಿ ವೀರಬಲ್ಲಾಳದೇವರ್ಸರು ಹೊಸವೀಡಿನೊಳು ಸುಖಸಂಕಥಾ ವಿನೋದದಿಂದ ರಾಜ್ಯವಾಳುತ್ತಿದ್ದಂತೆ *(Ec.X., Gd., 49)* ಉಕ್ತವಿದೆ. ಪ್ರಸ್ತುತ ಈ ಹೊಸೂರೇ ಆ ಹೊಸವೀಡು ಆಗಿರಬಹುದೇ? ಎಂಬ ಪ್ರಶ್ನೆ ವಿದ್ವಾಂಸರಲ್ಲಿದೆ. ಆದರೆ ರೈಸ್‌ರವರು ತಮ್ಮ *Mysore and Coorg from Inscriptions* ಎಂಬ ಕೃತಿಯಲ್ಲಿ ಗೌರಿಬಿದನೂರು ಸಮೀಪದ ಹೊಸೂರೇ ಅದೆಂದು ಅಭಿಪ್ರಾಯಪಡುತ್ತಾರೆ.

ಕ್ರಿ.ಶ. ೧೩೩೩ರಲ್ಲಿ ಹಾಕಿಸಿರುವ ಶಾಸನವೊಂದು ಹೀಗೆ ಹೇಳುತ್ತದೆ : *"ಪ್ರತಾಪ ಚಕ್ರವರ್ತಿ ಹೊಯಿಸಳ ಶ್ರೀ ವೀರಬಲ್ಲಾಳ ದೇವರಸರ ಪ್ರಧಾನ ಅಳಿಯ ಮಾಚೆಯ ದಂಣಾಯಕರ ಕುಮಾರ ಗಂಗೀದೇವ ದಂಣಾಯಕರು ಪೆನುಗೊಂಡೆಯ ನೆಲವೀಡಿನಲ್ಲಿ ಸುಖಸಂಕಥಾ ವಿನೋದದಿಂದ ರಾಜ್ಯಂ ಗೆಯುತ್ತಮಿದ್ದು ಇಂದೆಯ ಸಾಂತೀಸ್ವರ ದೇವರ ಕುಮಾರ ಬೊಂಮಿದೇವವೊಡೆಯರಿಗೆ ಹಱುಹೆ ಹೊಸೂರ ನಾಡೊಳಗಣ ಮಱುವೊಕಗೊಂಕನು ಬಲ್ಲಾಳಪುರವಾಗಿ ಆಚಂದ್ರಾರ್ಕಲೂ ಸರ್ವಮಾನ್ಯವಾಗಿ ಧಾರಾ ಪೂರ್ವಕವಾಗಿ" (EC. X., Gd. 16)* ಕೊಟ್ಟಿದ್ದನ್ನು ತಿಳಿಸುತ್ತದೆ. ಈ ಹೊಸೂರು ಹಱುಹೆನಾಡಿನ ಹೊಸೂರಾಗಿದೆ. 'ಮರುವಕ ಗೊಂಕ' ಎಂಬ ಊರೇ ಬಲ್ಲಾಳಪುರವಾಗಿರುವುದರಿಂದ ಪ್ರಾಯಶಃ ಇಂದಿನ ಚಿಕ್ಕಬಳ್ಳಾಪುರ ಅದೇ ಆಗಿರಬಹುದು. ಹಱುಹೆನಾಡು ಬಾಣರ ಕಾಲದಿಂದಲೂ ಇದೆ. ಪರ್ವಿನಾಡು> ಪರಿಗಿನಾಡು, ಪರಿವಿಪರಿಹಿಹಱುಹೆ.

ಹೊಸೂರಿನಿಂದ ೪-೫ಕಿ.ಮೀ. ದೂರದಲ್ಲಿರುವ

ಕಾದಲವೇಣಿ ಗ್ರಾಮದ ತಾಮ್ರಶಾಸನವು, ಕಾದಲವೇಣಿ ಗ್ರಾಮವನ್ನು ಬ್ರಾಹ್ಮಣರಿಗೆ ದಾನಮಾಡಿದ್ದನ್ನು ದಾಖಲಿಸುತ್ತದೆ. ಈ ದಾನವನ್ನು ವಿಜಯನಗರದ ಅರಸರ ಕಾಲದಲ್ಲಿ ಕೊಡಲಾಗಿದೆ. ಕಾಲವನ್ನು ಸಂಕೇತಕ್ರಮದಲ್ಲಿ ಹೇಳಲಾಗಿದೆ. ವೇದನೇತ್ರಾಗ್ನಿ ಭೂಸಂಜ್ಞ ಗಣಿತೇ ಶಕವತ್ಸರೇ *(EC. X., Gd. 57).*

ಹೊಸೂರಿನಿಂದ ೧-೨ಕಿ.ಮೀ. ದೂರದಲ್ಲಿ ಮುದಿಗೆರೆ ಎಂಬ ಗ್ರಾಮವಿದೆ. ಇಲ್ಲೊಂದು ಚೆನ್ನಕೇಶವ ದೇವಾಲಯವಿದೆ. ಹೊಯ್ಸಳಶೈಲಿಯ ಚೆನ್ನಕೇಶವನ ವಿಗ್ರಹವೆಂದು ಯಾವುದೇ ಅನುಮಾನವಿಲ್ಲದೆ ಹೇಳಬಹುದು. ಪ್ರಭಾವಳಿಯಲ್ಲಿ ದಶಾವತಾರದ ಶಿಲ್ಪವಿದೆ. ಈ ದೇವಾಲಯದ ಮುಂದೆ ಒಂದು ಶಾಸನವಿದೆ. ಇದರಲ್ಲಿ *"ವೀರಪ್ರತಾಪ ಸದಾಶಿವರಾಯರ ನಿರೂಪದಿಂದ ಮತ್ತು ತಿರುಮಲ ರಾಜಯ್ಯನವರ ಅಪ್ಪಣೆಯಿಂದ ಆವತಿಯ ನಾಡಪ್ರಭು ಸೊಣಪಗೌಡ ಅಯ್ಯನವರು, ಸದಾಶಿವರಾಯರಿಗೂ, ತಿರುಮಲರಾಜಯ್ಯನವರಿಗೂ ಮತ್ತು ಕುಮಾರರಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿಯಾಗಬೇಕೆಂದು ಹೊಸ ಊರ ನಾಡ ಮುದಿಗೆಱೆ'ಯ ಶ್ರೀ ಚೆನ್ನಕೇಶವ ದೇವರ ಅಮೃತಪಡಿ ದೀಪಾರಾಧನೆಗೆ, ಪಂಚಪರ್ವ ರಥ, ಉತ್ಸವ ಮುಂತಾದ ಸೇವೆಗಳು ಆಚಂದ್ರಾರ್ಕವಾಗಿ ನಡೆಯಬೇಕೆಂದು"* ಮುದಿಗೆಱೆ ಗ್ರಾಮವನ್ನು ದಾನಮಾಡಿರುವುದನ್ನು ತಿಳಿಸುತ್ತದೆ. *[E.C. X., Gd. 52 1565 AD]*

ಹೊಸೂರಿಗೆ ಸಮೀಪದಲ್ಲಿರುವ ಕೊಂಡಾಪುರದ ಕೊಡ್ಲ ನಾಯಕನ ಕಂದಾಯದ ಜಮೀನಿನಲ್ಲಿರುವ ಶಾಸನವೊಂದು ಕೋಟೆ ಕಟ್ಟಿಸಿದ್ದನ್ನು ಉಲ್ಲೇಖಿಸುತ್ತದೆ. ಆರಂಭದ ಕೆಲವು ಪದಗಳು ಹೋಗಿವೆ. *"....... ಹೊಸೂರ ಸೀಮೆಗೆ ಸಲುವ ಎರಪನಹಳಿಗೆ ಪ್ರತಿನಾಮಧೇಯವಾದ ಕೊಂಡಾಪುರವನ ನೂತನವಾಗಿ ಕೋಟೆ ಕಟ್ಟಿಸಿ ಪ್ರಜೆ ತಂದು ಗ್ರಾಮ ತುಂಬು ಮಾಡಿಸಿ ವೆಚ್ಚ ಅರಮನೆಕಿ ಪಾಯತು ತಿಳಿದುಯಿ ಗ್ರಾಮಬಿಳಿಯ ಕಟ್ಟುಕೊಡಗಿ ಮಾಂನ್ಯವಾಗಿ ಮಣು "ಹೊಲವಂನ್ನು ನೇಮುಕೆ ಮಾಡಿ ಕೊಟ್ಟುಯಿರುವುದರಿಂದ ಯೀ ಗ್ರಾಮದ ಕೋಟೆ ಕಟ್ಟ.......ಮಾಡಿ......"* ಎಂದಿದೆ *(E.C. X., Gd. 42)* ಈ ಶಾಸನಕ್ಕೆ ಕಾಲವಿಲ್ಲ.

ಗೌರಿಬಿದನೂರು ತಾಲೂಕಿನ ಹೋಬಳಿಯಾಗಿರುವ ಹೊಸೂರು ಗ್ರಾಮವು ಪ್ರಾಚೀನ ಕಾಲದಲ್ಲಿ "ಹಱುಹೆ ನಾಡುಪರಿಗಿ ನಾಡು" ಎಂಬ ನಾಡಿಗೆ ಸೇರಿದ ಒಂದು ಮುಖ್ಯಸ್ಥಳವಾಗಿ ಪ್ರಸಿದ್ಧಿ ಪಡೆದಿದ್ದ ಸಂಗತಿ ಶಾಸನಗಳಿಂದ ತಿಳಿಯುತ್ತದೆ. ಹೊಯ್ಸಳರ ಆಳ್ವಿಕೆಯ ಕೊನೆಯ ಕಾಲದಲ್ಲಿ ಪ್ರಾಯಶಃ ಹೊಸೂರು ಅವರ ಒಂದು ನೆಲೆವೀಡು ಆಗಿದ್ದ ಸಾಧ್ಯತೆಗಳನ್ನು ತೆಗೆದುಹಾಕುವಂತಿಲ್ಲ. ಕಾಲಾಂತರದಲ್ಲಿ ಅಂದರೆ ವಿಜಯನಗರ ಕಾಲದಲ್ಲಿ ಹೊಸೂರು ನಾಡು, ಹಾಗೂ ಹೊಸೂರು ಸೀಮೆ ಎಂಬ ಪ್ರತ್ಯೇಕ ಆಡಳಿತಾತ್ಮಕ ಘಟಕದ ಸ್ಥಾನವನ್ನು ಪಡೆದುಕೊಂಡಿತ್ತು. ಹೊಸೂರು ಗ್ರಾಮ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕ್ರಿ. ಶ. ೯-೧೦ನೆಯ ಶತಮಾನಗಳಿಂದ ಆರಂಭವಾಗಿ ಆವತಿ ನಾಡಪ್ರಭುಗಳ ಆಳ್ವಿಕೆಯವರೆಗೆ ಅನೇಕ ಶಿಲ್ಪ-ದೇವಾಲಯ ಮುಂತಾದುವುಗಳ ರಚನಾಕಾರ್ಯ ನಡೆದಿದೆ. ಹಾಗಾಗಿ ತತ್ಸಂಬಂಧವಾದ ಸಾಂಸ್ಕೃತಿಕ ಬದುಕು ಈ ಪ್ರದೇಶದಲ್ಲಿ ನೆಲೆಗೊಂಡಿತ್ತು ಎನ್ನಬಹುದು.



ಡಾ॥ ಎಸ್. ಎನ್. ಶಿವರುದ್ರಸ್ವಾಮಿ*

# ಹಂಪಿಯ ವಿರೂಪಾಕ್ಷ ದೇಗುಲದ ರಾಯಗೋಪುರ ಮತ್ತು ರಥವೀಧಿ

ಹದಿನಾಲ್ಕನೇ ಶತಮಾನದಲ್ಲಿ ಸ್ಥಾಪನೆಯಾದ ವಿಜಯನಗರ ಸಾಮ್ರಾಜ್ಯವು ಎರಡೂವರೆ ಶತಮಾನಗಳ ಕಾಲ ಜನರ ಬದುಕಿನಲ್ಲಿ ಚೈತನ್ಯ ಪೂರ್ಣವಾದ ಹೊಸಯುಗವನ್ನಾರಂಭಿಸಿತು. ರಾಜಧಾನಿ ವಿಜಯನಗರವು (ಅಥವಾ ಇಂದಿನ ಹಂಪಿ) ಸಾಮ್ರಾಜ್ಯದ ಚಟುವಟಿಕೆಗಳ ಕೇಂದ್ರವಾದಂತೆ, ಅಲ್ಲಿನ ವಿರೂಪಾಕ್ಷ ದೇಗುಲವು ನಗರದ ಮಹತ್ವಪೂರ್ಣ ಕೇಂದ್ರವಾಯಿತು. ಈ ದೇಗುಲವು ಒಂದು ನಿರ್ದಿಷ್ಟ ಕಾಲದಲ್ಲಿ ನಿರ್ಮಾಣವಾಗಲಿಲ್ಲ. ಸಾಮ್ರಾಜ್ಯದ ಕಾಲಾವಧಿಯ ಉದ್ದಕ್ಕೂ ಇದು ವಿಸ್ತೃತವಾಗಿ ಬೆಳೆಯುತ್ತಾ ಹೋಯಿತು. ಈ ಲೇಖನದಲ್ಲಿ ವಿರೂಪಾಕ್ಷ ದೇವಾಲಯದ ಪ್ರಮುಖ ಭಾಗಗಳಲ್ಲಿ ಒಂದಾದ ಪೂರ್ವದ ದೊಡ್ಡ ದ್ವಾರಗೋಪುರ ಮತ್ತು ಅದರ ಮುಂದಿನ ರಥವೀಧಿಯ ಬಗ್ಗೆ ವಿವೇಚಿಸಲಾಗಿದೆ.

ಹಂಪಿಯ ವಿರೂಪಾಕ್ಷ, ವಿಠ್ಠಲ, ಕೃಷ್ಣ, ತಿರುವೆಂಗಳನಾಥ ಕಮಲಪುರದ ರಘುನಾಥ (ಅಥವಾ ಪಟ್ಟಾಭಿರಾಮ), ಅನಂತಶಯನ ಗುಡಿಯ ಅನಂತಪದ್ಮನಾಭ - ಹೀಗೆ ವಿಜಯನಗರದ ಉನ್ನತ ದೇವಾಲಯಗಳ ಮುಂದೆ ದ್ವಾರಗೋಪುರಗಳಿವೆ. ಇವು ಉನ್ನತ ಆಕರ್ಷಕ ವಾಸ್ತುರಚನೆಗಳು. ಇವುಗಳ ಮುಂದೆ ದೇವಾಲಯದ ರಥೋತ್ಸವಕ್ಕಾಗಿ ವಿಶಾಲವಾದ ರಥವೀಧಿಗಳು ಆರಂಭವಾಗುತ್ತವೆ.[೧] ಈ ಬೀದಿಗಳ ಇಕ್ಕೆಡೆಗಳಲ್ಲೂ ಎರಡು ಸ್ತಂಭಪಂಕ್ತಿಯ ಮಂಟಪವು ಬೀದಿಯ ಆರಂಭದಿಂದ ಕೊನೆಯವರೆಗೂ ಮುಂದುವರೆಯುತ್ತದೆ. ಈ ದೇಗುಲಗಳ ಉತ್ಸವಮೂರ್ತಿಯ ಮೆರವಣಿಗೆಯನ್ನು ಭಕ್ತಾದಿಗಳು ನೋಡಿ ಆನಂದಿಸಲು ರಥವೀಧಿಯ ಮಂಟಪಗಳಲ್ಲಿ ನೆರೆಯುತ್ತಿದ್ದರು, ಹಾಗೂ ರಥೋತ್ಸವದಲ್ಲಿ ಭಕ್ತರಿಗೆ ಬೇಕಾಗುವ ವಸ್ತುಗಳನ್ನು ಮಾರಾಟ ಮಾಡಲು ಅಂಗಡಿಗಳು ಅಲ್ಲಿ ಸ್ಥಾಪನೆಯಾಗುತ್ತಿದ್ದವು. ಗೋಪುರ ಮತ್ತು ಪ್ರಾಕಾರಗಳು ವಿಜಯನಗರ, ದೇಗುಲಗಳ ಪ್ರಮುಖ ಜೈವಿಕ ಅಂಗಗಳು. ರಥೋತ್ಸವಗಳು ಜನಪ್ರಿಯ ಹಬ್ಬವಾದಂತೆ, ತೇರುಬೀದಿಗಳು ದೇಗುಲದ ಸಂಕೀರ್ಣದ ವೈಭವವನ್ನೂ ಮಹತ್ವವನ್ನೂ ಹೆಚ್ಚಿಸಿದವು. ಹಂಪಿಯ ಹೊರಗೂ ರಥೋತ್ಸವವು ಜನಪ್ರಿಯವಾದ ಹಬ್ಬವಾಯಿತು. ಇದರ ಬಗ್ಗೆ ಶಾಸನಗಳು ಸಾಕಷ್ಟು ಮಾಹಿತಿಯನ್ನು ನೀಡುತ್ತವೆ. ಗೋಪುರ ನಿರ್ಮಾಣದಲ್ಲಿ ವಿಜಯನಗರದ ವಾಸ್ತುಕಾರರು ಚೋಳ ಮತ್ತು ಪಾಂಡ್ಯರ ಪರಂಪರೆಯನ್ನು ಅನುಸರಿಸಿದರು.[೨] ಚೋಳಗೋಪುರಗಳು ಕುಳ್ಳಾಗಿ ಆಯಾತಾಕಾರವಾಗಿದ್ದರೆ, ಪಾಂಡ್ಯಗೋಪುರ ಎತ್ತರವಾಗಿ ಸಪೂರವಾಗಿರುತ್ತದೆ. ಗೋಪುರದ ಔನತ್ಯವನ್ನು ಸಾಧಿಸಲು, ಒಳಗಡೆ ಮರದ ಪಂಜರವನ್ನು ರೂಪಿಸಿದ್ದರು. ವಿರೂಪಾಕ್ಷ ದೇವಾಲಯದ ಗೋಪುರ ನಿರ್ಮಾಣದಲ್ಲಿ ಈ ತಂತ್ರವನ್ನು ಪರಿಪೂರ್ಣವಾಗಿ ಅಳವಡಿಸಿಕೊಳ್ಳಲಾಗಿದೆ. ರಾಜಧಾನಿಯಲ್ಲಿ ವಿರೂಪಾಕ್ಷ ದೇವಾಲಯವೇ ಅತ್ಯಂತ ಪ್ರಾಚೀನವಾದುದು. ಉಳಿದ ಉನ್ನತ ದೇಗುಲಗಳು ಹದಿನಾರನೇ ಶತಮಾನದಲ್ಲಿ ರಚನೆಯಾಗಿವೆ. ಇದರ ಗರ್ಭಗೃಹ ವಿಜಯನಗರ ಪೂರ್ವಕಾಲದ ನಿರ್ಮಾಣ. ಹದಿನಾಲ್ಕನೇ ಶತಮಾನದಲ್ಲಿ ಇದರ ಸುತ್ತಲೂ ಗೋಡೆಯನ್ನು ನಿರ್ಮಿಸಿ, ಪ್ರದಕ್ಷಿಣಪಥವನ್ನು ರಚಿಸಲಾಯಿತು. ಅನಂತರ ಅದೇ ಹದಿನಾಲ್ಕನೇ ಶತಮಾನದಲ್ಲಿ ಅಥವಾ ಹದಿನೈದನೇ ಶತಮಾನದ ಆರಂಭದಲ್ಲಿ ಈ ಗರ್ಭಗೃಹಕ್ಕೆ ಅಂತರಾಳ, ಮುಖಮಂಟಪ ಮತ್ತು ರಂಗಮಂಟಪವನ್ನು ನಿರ್ಮಿಸಿ ಜೋಡಿಸಲಾಯಿತು. ಸುಂದರ ಸ್ತಂಭರಾಜಿಯ ಮಹಾರಂಗ ಮಂಟಪವನ್ನು ಇದರ ಮುಂದೆ ಹದಿನಾರನೇ ಶತಮಾನದಲ್ಲಿ ನಿರ್ಮಿಸಲಾಯಿತು. ಹೀಗೆ ವಿರೂಪಾಕ್ಷ ದೇಗುಲವು ಸಾಮ್ರಾಜ್ಯದ ಕಾಲಾವಧಿಯಲ್ಲಿ ನಿರ್ಮಾಣವಾಗಿ ಇಂದಿನ ರೂಪವನ್ನು ಪಡೆದುಕೊಂಡಿತು. ಆದ್ದರಿಂದ ಈ ದೇಗುಲವು ವಿಜಯನಗರ ವಾಸ್ತು ಮತ್ತು ಕಲೆಯ ಉದಯಾರಂಭದ ಕೇಂದ್ರವಾಯಿತು. ಈ ದೇಗುಲವು ಕೇವಲ ವಾಸ್ತು ಕ್ಷೇತ್ರದಲ್ಲಿ ಮಾತ್ರವೇ ಅಲ್ಲ, ಸಾಮ್ರಾಜ್ಯದ ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲೂ ಮಹತ್ತರವಾದ ಪ್ರಭಾವವನ್ನು ಬೀರಿತು. ವಿರೂಪಾಕ್ಷ ದೇವತೆಯು ಸಾಮ್ರಾಜ್ಯದ ರಕ್ಷಾದೇವ ಹಾಗೂ ಅರಸರ ಕುಲದೈವ. ಪ್ರಾಯಶಃ ಭಾರತದ ಉಪಖಂಡದಲ್ಲೇ ನಾಡಿನ ಮೇಲೆ ಅಪಾರ ಪ್ರಭಾವ ಬೀರಿದ, ಜನರ ಬದುಕಿನೊಂದಿಗೆ ಮಿಳಿತವಾದ ಏಕೈಕ ದೇಗುಲವೆಂದರೆ ಇದೊಂದೇ. ವಿರೂಪಾಕ್ಷ ದೇಗುಲದ ಇತಿಹಾಸವು ಸಂಕ್ಷಿಪ್ತವಾಗಿ ಸಾಮ್ರಾಜ್ಯದ ಇತಿಹಾಸವೇ ಆಗುತ್ತದೆ. ಅರಸರು ತಮ್ಮ ದಾನದತ್ತಿಗಳನ್ನು, ಆಡಳಿತದ ನಿರೂಪಗಳನ್ನು ವಿರೂಪಾಕ್ಷನ ಸನ್ನಿಧಿಯಲ್ಲಿ ಹಾಗೂ ಅವನ ಹೆಸರಿನಲ್ಲಿ ನೀಡಿದರು. ಜನತೆಯೂ ಸಹ ವಿರೂಪಾಕ್ಷ ದೇವರ ಹೆಸರಿನಲ್ಲಿ ಅರಸರ ಆಜ್ಞೆ ಆದೇಶಗಳನ್ನು ಸ್ವೀಕರಿಸಿದರು. ವಿಜಯನಗರದ ವಾಸ್ತು, ಶಿಲ್ಪ ಕಲೆಗಳು ವಿರೂಪಾಕ್ಷ ದೇವಾಲಯದಿಂದ ಆರಂಭವಾಗಿ ಸಮಗ್ರ ದಕ್ಷಿಣ ಭಾರತಕ್ಕೆ ಪ್ರಸಾರವಾದವು.

* ಪಿ. ಎ., ಕಾಲೇಜ್, ತಿಪಟೂರು

ವಿಜಯನಗರ ದೇವಾಲಯಗಳಲ್ಲಿ ಗೋಪುರವು ಪ್ರಧಾನವಾಗಿ ಕಾಣುವ ಅಂಶವಾದಂತೆ, ದೇಗುಲಗಳ ವಿಮಾನವು ಅವುಗಳ ಸಂಕೀರ್ಣದಲ್ಲಿ ಗೌಣವಾಯಿತು. ಈ ಅಂಶದ ಮೊದಲ ಅನುಕರಣೆಯು ಹಂಪಿಯ ವಿರೂಪಾಕ್ಷ ದೇವಾಲಯದಲ್ಲೇ ಆಯಿತು. ಉಳಿದ ದೇವಾಲಯಗಳಲ್ಲೂ ಈ ಸಂಗತಿಯನ್ನೇ ಅನುಸರಿಸಲಾಗಿದೆ. ವಿರೂಪಾಕ್ಷ ದೇಗುಲದ ಪೂರ್ವದಿಕ್ಕಿನ ಎರಡು ಪ್ರಾಕಾರಗಳ ಮಧ್ಯದಲ್ಲಿ ಎರಡು ಗೋಪುರಗಳಿವೆ. ಉತ್ತರದ ಪ್ರಾಕಾರದಲ್ಲೂ ಮತ್ತೊಂದು ಗೋಪುರವಿದ್ದು, ಅದನ್ನು ಕನಕಗಿರಿ ಗೋಪುರವೆಂದು ಕರೆಯಲಾಗಿದೆ. ಇದು ಮನ್ಮುಖ ಹೊಂಡ ಮತ್ತು ತುಂಗಭದ್ರಾ ನದಿಗೆ ಪ್ರವೇಶಾವಕಾಶವನ್ನು ನೀಡುತ್ತದೆ. ಇವುಗಳಲ್ಲೆಲ್ಲ ಎತ್ತರವೂ ಸಪೂರವೂ ಆದ ಪೂರ್ವದ ಬಾಹ್ಯಗೋಪುರ ದೊಡ್ಡದು. ಇದೊಂದು ಅಪೂರ್ವವೂ ಅನನ್ಯವೂ ಆದ ವಾಸ್ತು ನಿರ್ಮಾಣವಾಗಿದೆ.

ಈ ಗೋಪುರದ ನಿರ್ಮಾಣದ ಬಗ್ಗೆ ಯಾವುದೇ ಖಚಿತವಾದ ಮಾಹಿತಿ ದೊರೆತಿಲ್ಲ. ದೊರೆತಿರುವುದೂ ಸಹ ವಾದಗ್ರಸ್ತವಾಗಿದೆ. ಇದರ ಬಗ್ಗೆ ಬೆಳಕು ಚೆಲ್ಲುವ ಮಾಹಿತಿಯನ್ನು ಮುಂದೆ ಪರಿಶೀಲಿಸಲಾಗುವುದು. ತುಳುವವಂಶದ ಪ್ರಸಿದ್ಧ ಅರಸನಾದ ಕೃಷ್ಣದೇವರಾಯನು (೧೫೦೯-೧೫೨೯) ಮಹಾರಂಗಮಂಟ ಮತ್ತು ಗೋಪುರವನ್ನು ಕಟ್ಟಿಸಿ, ಮುಂದಿರುವ ಹಿರಿಯ ಗೋಪುರವನ್ನು ಕ್ರಿ.ಶ. ೧೫೧೩ರಲ್ಲಿ ಜೀರ್ಣೋದ್ಧಾರಗೊಳಿಸಿದನೆಂದು ಶಾಸನವೊಂದು ತಿಳಿಸುತ್ತದೆ.[೩] ಈ ಜೀರ್ಣೋದ್ಧಾರವಾದ ಗೋಪುರವೇ ನಮ್ಮ ಆಸಕ್ತಿಯನ್ನು ಕೆರಳಿಸಿರುವ ಪೂರ್ವದ ಗೋಪುರ. ಕೆಲ ವಿದ್ವಾಂಸರು ತಪ್ಪು ಗ್ರಹಿಕೆಯಿಂದ ಈ ಗೋಪುರವನ್ನು ಒಬ್ಬ ಬಿಷ್ಟಪಯ್ಯ ಎಂಬ ವ್ಯಕ್ತಿ ಕಟ್ಟಿಸಿದನೆಂದು, ಆದ್ದರಿಂದ ಇದನ್ನು ಬಿಷ್ಟಪಯ್ಯ ಗೋಪುರ ಎಂದು ಕರೆದಿದ್ದಾರೆ.[೪] ಹದಿನೈದನೇ ಶತಮಾನದ ಸಂಸ್ಕೃತ ಕವಿಯಾದ ಅಹೋಬಲನು 'ವಿರೂಪಾಕ್ಷ ವಸಂತೋತ್ಸವ ಚಂಪು' - ಎಂಬ ಸಂಸ್ಕೃತ ಕಾವ್ಯವನ್ನು ರಚಿಸಿದ್ದಾನೆ.[೫] ಇದನ್ನು ಆರ್. ಎಸ್. ಪಂಚಮುಖಿಯವರು ಪ್ರಕಟಿಸಿದ್ದಾರೆ. ಅಹೋಬಲನು ವಿಜಯನಗರ ನಿವಾಸಿ. ವಿರೂಪಾಕ್ಷ ದೇಗುಲದ ರಥೋತ್ಸವವನ್ನು ಕಣ್ಣಾರೆ ಕಂಡು, ಅದರಲ್ಲಿ ಭಾಗವಹಿಸಿದ ಇವನು ಈ ಗೋಪುರವನ್ನು 'ವಿಷ್ಟಪೇಶಗೋಪುರ' ಅಥವಾ 'ಶ್ರೀ ವಿಷ್ಟಪೇಶಗುರುಗೋಪುರ' ಎಂದು ತನ್ನ ಗ್ರಂಥದಲ್ಲಿ ಕರೆದಿದ್ದಾನೆ. ಇದರಿಂದ ಗೋಪುರವನ್ನು ವಿಷ್ಟಪ ಅಥವಾ ಬಿಷ್ಟಪಯ್ಯ ಕಟ್ಟಿಸಿದನೆಂದು ಆಗುವುದಿಲ್ಲ. ಆದರೆ 'ವಿರೂಪಾಕ್ಷವಸಂತೋತ್ಸವ ಚಂಪು' ಗ್ರಂಥದ ಸಂಪಾದಕರೂ ಸೇರಿದಂತೆ ಅನೇಕರು ತಪ್ಪಾಗಿ ಇದನ್ನು ಬಿಷ್ಟಪಯ್ಯಗೋಪುರವೆಂದು ಕರೆದಿದ್ದಾರೆ. ವಿಷ್ಟಪೇಶ ಅಥವಾ ತ್ರಿವಿಷ್ಟಪೇಶ ಎಂದರೆ ಲೋಕದ ಅಥವಾ ಮೂರು ಲೋಕಗಳ ಅಧಿಪತಿ ಎಂದರ್ಥ. ಇವನು ಮಹಾವಿಷ್ಣುವೇ ಆಗಿದ್ದಾನೆ. ಇಲ್ಲಿ ಅಹೋಬಲನು ವಿರೂಪಾಕ್ಷನನ್ನು ವಿಷ್ಣುವಿನ ಗುರು ಅಥವಾ ಅಧಿಪತಿ ಎಂಬ ಅರ್ಥದಲ್ಲಿ ಸಂಬೋಧಿಸಿದ್ದಾನೆ. ಈ ಅರ್ಥದಲ್ಲಿ ಕೃತಿಕಾರನು ವಿಷ್ಟಪೇಶಗೋಪುರವೆಂದು ಕರೆದಿದ್ದಾನೆ. ಆದ್ದರಿಂದ ಇದನ್ನು ಬಿಷ್ಟಪಯ್ಯ ಗೋಪುರವೆಂದು ಅರ್ಥೈಸಲಾಗದು.

ಹರಿಭದ್ರನ ತೆಲುಗು ಗ್ರಂಥವಾದ ಉತ್ತರನರಸಿಂಹ ಪುರಾಣವು ಎರಡನೇ ದೇವರಾಯನ(೧೪೨೩-೪೬) ಅಧಿಕಾರಿಯಾದ ಪ್ರೊಲುಗಂಟಿತಿಪ್ಪನು ವಿರೂಪಾಕ್ಷ ದೇವಾಲಯದ ಹಿರಿಯ ಗೋಪುರ ಮತ್ತು ವಿಠ್ಠಲ ದೇಗುಲದ ಭೋಗಮಂಟಪವನ್ನು ಕಟ್ಟಿಸಿದನೆಂದು ಹೇಳುತ್ತದೆ.[೬] ವಿಠ್ಠಲ ದೇವಾಲಯವು ಹದಿನಾರನೇ ಶತಮಾನದ ಮೊದಲ ದಶಕದಲ್ಲಿ ನಿರ್ಮಾಣವಾಯಿತು. ಅದರ ಸಂಕೀರ್ಣದ ವಿವಿಧ ಕಟ್ಟಡಗಳನ್ನು ಹದಿನಾರನೇ ಶತಮಾನದ ಮಧ್ಯಭಾಗದ ವೇಳೆಗೆ ಕಟ್ಟಲಾಯಿತು. ಉತ್ತರನರಸಿಂಹ ಪುರಾಣವು ಹದಿನಾರನೇ ಶತಮಾನದ ಅಂತ್ಯದಲ್ಲಿ ರಚನೆಯಾದ ಕೃತಿಯಾದ್ದರಿಂದ ಅದರಲ್ಲಿ ವ್ಯಕ್ತವಾಗಿರುವ ಅಂಶಗಳು ವಿಶ್ವಸನೀಯವಾದುದಲ್ಲ. ಇದಲ್ಲದೆ, ದೇವದಾನ ಅಧಿಕಾರಿಗಳಲ್ಲಿ ಪ್ರೊಲುಗಂಟಿತಿಪ್ಪನ ಹೆಸರೇ ಬರುವುದಿಲ್ಲ.

ಲಕ್ಕಣ್ಣ ದಂಡೇಶ ಇಮ್ಮಡಿ ದೇವಾರಾಯನ ಮಿತ್ರನೂ ಮತ್ತು ಅವನ ಮಂತ್ರಿಗಳಲ್ಲಿ ಪ್ರಮುಖನೂ ಆಗಿದ್ದಾನೆ. ಇವನು ಸಾಮ್ರಾಜ್ಯದ ಮುಳಬಾಗಿಲು, ಟೇಕಲ್, ಬಾರಕೂರು ಮತ್ತು ಮದುರೈ ಪ್ರಾಂತಗಳಲ್ಲಿ ಹಿರಿಯ ಆಡಳಿತಾಧಿಕಾರಿಯಾಗಿ ಸೇವೆಸಲ್ಲಿಸಿದ್ದಾನೆ.[೭] ಇವನು ಸಾಮ್ರಾಜ್ಯದ ಆಡಳಿತದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾನೆ. ಪರ್ಶಿಯದ ರಾಯಭಾರಿ ಅಬ್ದುಲ್ ರಜಾಕನ ಬರವಣಿಗೆಯಲ್ಲೂ ಇವನ ಬಗ್ಗೆ ಉಲ್ಲೇಖ ಬರುವುದುಂಟು.[೮] ಎರಡನೇ ದೇವರಾಯನ ಕಾಲದಲ್ಲಿ ಸಾಮ್ರಾಜ್ಯದಲ್ಲಿ ನಡೆದ ಘಟನಾವಳಿಗಳಿಗೆ ಇವನು ಸಾಕ್ಷಿಯಾಗಿದ್ದಾನೆ. ಕನ್ನಡ ಮತ್ತು ಸಂಸ್ಕೃತದಲ್ಲಿ ವಿದ್ವಾಂಸನಾದ ಇವನು ಶಿವತತ್ವ ಚಿಂತಾಮಣಿ ಎಂಬ ಕಾವ್ಯವನ್ನು ಕನ್ನಡದಲ್ಲಿ ರಚಿಸಿದ್ದಾನೆ.[೯] ಲಕ್ಕಣ್ಣ ದಂಡೇಶನು ವಿರೂಪಾಕ್ಷ ದೇಗುಲದ ಗೋಪುರದ ನಿರ್ಮಾಣದ ಬಗ್ಗೆ ತನ್ನ ಕಾವ್ಯದಲ್ಲಿ ತಿಳಿಸಿದ್ದಾನೆ. ಇಮ್ಮಡಿ ದೇವರಾಯನ ಸಮಕಾಲೀನನೂ ಅವನ ಆಸ್ಥಾನದ ಪ್ರಮುಖ ಪ್ರಭಾವಿ ವ್ಯಕ್ತಿಯೂ ಆದ ಇವನು ನೀಡಿರುವ ಮಾಹಿತಿ ಅತ್ಯಂತ ವಿಶ್ವಾಸಪೂರ್ಣವಾದುದು. ಇವನು ತನ್ನ ಕಾವ್ಯದಲ್ಲಿ ವೀರದೇವರಾಜೇಂದ್ರನು (ಇಮ್ಮಡಿ ದೇವರಾಯನು) ವಿರೂಪಾಕ್ಷ ದೇಗುಲದ ಪ್ರಾಕಾರಗಳು, ಗೋಪುರ, ಸುಂದರವಾದ ಕೊಳ ಮತ್ತು ರಥಪಥವನ್ನು ನಿರ್ಮಿಸಿದನೆಂದು ತಿಳಿಸುತ್ತಾನೆ.[೧೦] ಇದಷ್ಟೇ ಅಲ್ಲದೇ ಫಲಭರಿತ ವೃಕ್ಷಗಳನ್ನು ರಥಪಥದ ಇಕ್ಕೆಡೆಯಲ್ಲೂ ನೆಡಿಸಿದ ಹಾಗೂ ಆರಾಮವನ್ನು ನಿರ್ಮಿಸಿದನೆಂದು ಹೇಳುತ್ತಾನೆ. ಇದರ ಜೊತೆಗೆ, ವಿರೂಪಾಕ್ಷ, ಪಂಪಾಂಬಿಕೆ ಮತ್ತು ಗಣಾಧಿಪ ದೇವತೆಗಳಿಗೆ ರಥಗಳನ್ನು ಮಾಡಿಸಿ ಅರ್ಪಿಸಿದನೆಂದು ತಿಳಿಸುತ್ತಾನೆ.[೧೧]

ವಿರೂಪಾಕ್ಷ ದೇಗುಲದ ವಾಸ್ತುವಿನ ವಿವಿಧ ಭಾಗಗಳ ನಿರ್ಮಾಣದ ಕಾಲಕ್ರಮವನ್ನು ವಿಶ್ಲೇಷಿಸಿದರೆ, ಲಕ್ಕಣ್ಣ ದಂಡೇಶನ ಹೇಳಿಕೆಗಳು ಐತಿಹಾಸಿಕ ಸತ್ಯಸಂಗತಿಯೆಂದು ಅರಿವಾಗುತ್ತದೆ. ಈ ನಿರ್ಮಾಣಗಳನ್ನು ಕಣ್ಣಾರೆ ಕಂಡವನು ಹಾಗೂ ರಥೋತ್ಸವ ದಲ್ಲಿ ಭಾಗಿಯಾದವನು ಎಂಬುದು ಪೂರಕವಾದ ಅಂಶವಾಗುತ್ತದೆ.

ಮೇಲಿನ ವಿಶ್ಲೇಷಣಾತ್ಮಕ ಚಿಂತನೆಯಿಂದ ಇಮ್ಮಡಿ ದೇವರಾಯನು ವಿರೂಪಾಕ್ಷ ದೇವಾಲಯದ ಪೂರ್ವದ ದಿಕ್ಕಿನ ಭವ್ಯ ಗೋಪುರ ಮತ್ತು ರಥಪಥವನ್ನು ತನ್ನ ಕಾಲಾವಧಿ (೧೪೨೩-೧೪೪೬) ಯಲ್ಲಿ ನಿರ್ಮಿಸಿರುವುದು ದೃಢಪಡುತ್ತದೆ. ಇವುಗಳ ನಿರ್ಮಾಣದಿಂದ 'ರಥವೀಧಿ' ಅಥವಾ 'ತೇರುಬೀದಿ'ಗಳ ಪರಂಪರೆ ಆರಂಭವಾಯಿತು. ವಿರೂಪಾಕ್ಷ ದೇಗುಲದ ತೇರು ಬೀದಿಯ ಇಕ್ಕೆಡೆಗಳಲ್ಲೂ ಎರಡು ಪಂಕ್ತಿಯ ಸ್ತಂಭರಾಜಿಯ ಮಂಟಪವನ್ನು ಕಾಣಬಹುದು. ಇದನ್ನೇ ಲಕ್ಕಣ್ಣ ದಂಡೇಶನು 'ಆರಾಮ' ಎಂಬ ಅರ್ಥದಲ್ಲಿ ಕರೆದಿದ್ದಾನೆ. ಇಲ್ಲಿ ನಡೆಯುವ ರಥೋತ್ಸವವನ್ನು ನೋಡಿ ಆನಂದ ಪಡೆಯಲು ಸ್ತಂಭಪಂಕ್ತಿಯ ಮಂಟಪದಲ್ಲಿ ನೆರೆಯುತ್ತಿದ್ದರು. ರಥೋತ್ಸವದ ಹಬ್ಬದ ದಿನಗಳಲ್ಲಿ ಅಂಗಡಿಗಳು ಸ್ಥಾಪನೆಯಾಗುತ್ತಿದ್ದವು. ಹದಿನೈದನೇ ಶತಮಾನದಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ ಪ್ರವಾಸಿಯೊಬ್ಬನ ಬರವಣಿಗೆ ಯಿಂದ ಈ ಅಂಶ ವ್ಯಕ್ತವಾಗುತ್ತದೆ.[೧೨] ವಿರೂಪಾಕ್ಷ ದೇಗುಲದ ತೇರುಬೀದಿಯು ಮತಂಗಪರ್ವತದ ಹಿಂದೆ ಇರುವ ಬಸವಣ್ಣನ ಮಂಟಪದಲ್ಲಿ ಕೊನೆಗೊಳ್ಳುತ್ತದೆ. ಇದು ೩೫ ಮೀಟರ್ ಅಗಲವಾಗಿಯೂ ೭೨೦ ಮೀಟರ್ ಉದ್ದವಾಗಿಯೂ ಇದೆ. ಈ ರಥಪಥವು ಹಂಪಿ ಅಥವಾ ವಿರೂಪಾಕ್ಷ ಬಜಾರ್ ಎಂದು ಜನಪ್ರಿಯವಾಗಿದೆ. ಹದಿನಾರನೇ ಶತಮಾನದಲ್ಲಿ ಹಿರಿಯ ಭವ್ಯ ದೇಗುಲಗಳು ನಿರ್ಮಾಣವಾದಾಗ, ರಥಬೀದಿಗಳು ಆ ದೇಗುಲಗಳ ಪ್ರದೇಶದ ಮಾರುಕಟ್ಟೆ ಅಥವಾ ಪೇಟೆಗಳಾದವು. ಕೃಷ್ಣಾಪುರದಪೇಟೆ ಅಂತಹ ಪೇಟೆಗಳಲ್ಲೊಂದು.[೧೩] ಇದು ಕೃಷ್ಣ ದೇವಾಲಯದ ಮುಂದೆ ವ್ಯಾಪಕವಾಗಿ ಬೆಳೆದಿತ್ತು. ಹೀಗೆ ರಥ ಬೀದಿಗಳು ಭವ್ಯ ದೇಗುಲಗಳ ಸಂಕೀರ್ಣದ ಪ್ರಮುಖ ಭಾಗವೇ ಆದವು. ಬೀದಿಗಳಿಗೆ ಕಲ್ಲು ಚಪ್ಪಡಿಯನ್ನು ಹಾಕಿ ಭದ್ರ ಪಡಿಸಲಾಗಿದೆ.[೧೪] ಇವುಗಳ ಎಡಭಾಗದಲ್ಲಿ ದೊಡ್ಡ ಕಲ್ಯಾಣಿ ಯೊಂದಿದ್ದು ಅದರ ಮಧ್ಯದಲ್ಲಿ ನಾಲ್ಕು ಸ್ತಂಭಗಳ ತೆರೆದ ಮಂಟಪವನ್ನು ಕಟ್ಟಲಾಗಿದೆ. ಇದನ್ನು ವಸಂತಮಂಟಪವೆಂದು ಕರೆಯಲಾಗಿದೆ.[೧೫] ಇದರಲ್ಲಿ ದೇಗುಲದ ತೆಪ್ಪೋತ್ಸವವನ್ನು ಆಚರಿಸಲಾಗುತ್ತಿತ್ತು. ಗೋಪುರಗಳು ದೇಗುಲದ ಸಂಕೀರ್ಣದ ವೈಭವವನ್ನು ನೂರ್ಮಡಿಗೊಳಿಸಿದರೆ, ತೇರುಬೀದಿಗಳು ದೇಗುಲಗಳ ಧಾರ್ಮಿಕ ಮತ್ತು ಆರಾಧನಾ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದವು.

ವಿಜಯನಗರದ ಸಾಮ್ರಾಟರನ್ನು ಸಾಮಾನ್ಯವಾಗಿ 'ರಾಯ'ರೆಂದು ಕರೆಯಲಾಗಿದೆ. ದೇಗುಲಗಳ ಮುಂದಿನ ಗೋಪುರ ಗಳನ್ನು ಸಾಮ್ರಾಟರು ಕಟ್ಟಿಸುತ್ತಿದ್ದರಿಂದ ಅವುಗಳನ್ನು ರಾಯ ಗೋಪುರಗಳೆಂದು ಕರೆಯಲಾಗಿದೆ. ರಾಯಗೋಪುರಗಳ ನಿರ್ಮಾಣದ ಪರಂಪರೆ ಕೃಷ್ಣದೇವರಾಯನಿಂದ ಆರಂಭ ವಾಯಿತೆಂಬುದು ಕೆಲ ವಿದ್ವಾಂಸರ ಅಭಿಪ್ರಾಯ. ಇವನಿಗಿಂತ ೮೦ ವರ್ಷಗಳ ಹಿಂದೆ ಇದ್ದ ಇಮ್ಮಡಿ ದೇವರಾಯನು ವಿರೂಪಾಕ್ಷ ದೇವಾಲಯದ ಗೋಪುರವನ್ನು ಕಟ್ಟಿಸುವುದರ ಮೂಲಕ ರಾಯಗೋಪುರದ ರಚನೆಯ ಪರಂಪರೆಯನ್ನು ಅನಾವರಣ ಮಾಡಿದ. ಇದರಿಂದ ವಿದ್ವಾಂಸರ ಅಭಿಪ್ರಾಯ ತಪ್ಪು ಕಲ್ಪನೆಯಾಗುತ್ತದೆ. ಕೃಷ್ಣದೇವರಾಯ ಅಧಿಕ ಸಂಖ್ಯೆಯ ಗೋಪುರವನ್ನು ಅನೇಕ ದೇಗುಲಗಳಿಗೆ ನಿರ್ಮಿಸಿದ್ದುಂಟು. ಕೃಷ್ಣ ದೇವರಾಯ ಮತ್ತು ಅನಂತರದ ಅರಸರ ಕಾಲಕ್ಕೆ ದೇಗುಲಗಳ ಗೋಪುರಗಳು ನೂತನ ಭವ್ಯ ಆಯಾಮವನ್ನು ಪಡೆದುಕೊಂಡವು.

ವಿರೂಪಾಕ್ಷ ದೇಗುಲದ ಗೋಪುರ ವಿಜಯನಗರ ಸಾಮ್ರಾಜ್ಯದ ಆರಂಭ ನಿರ್ಮಾಣವೇನಲ್ಲ. ಬೇಲೂರಿನ ಚೆನ್ನಕೇಶವ ದೇಗುಲದ ಮುಂದೆ ಕಟ್ಟಿರುವ ಗೋಪುರವು ಆರಂಭದ ಗೋಪುರಗಳಲ್ಲೊಂದು.[೧೬] ಆದರೆ ವಿರೂಪಾಕ್ಷ ದೇಗುಲ ಗೋಪುರ ಮಾಡಿರುವ ಪ್ರಭಾವದಿಂದ ಅದು ಮಹತ್ವವನ್ನು ಪಡೆದುಕೊಂಡಿದೆ. ಅದು ದೇಗುಲಗಳು ಮತ್ತು ಗೋಪುರಗಳ ನಿರ್ಮಾಣದಲ್ಲಿ ಒಂದು ಚಳುವಳಿಯನ್ನೆ ಹುಟ್ಟಿಹಾಕಿತು. ಈ ಚಳುವಳಿಯು ಅರಸರು ಅಧಿಕಾರಿಗಳು ಮತ್ತು ಜನ ಸಾಮಾನ್ಯರಿಗೆ ಪ್ರಚೋದನೆ ಮತ್ತು ಪ್ರಭಾವವನ್ನು ಬೀರಿ, ನಿರ್ಮಾಣ ಕಾರ್ಯದಲ್ಲಿ ತಮ್ಮನ್ನು ತೊಡಗಿಕೊಳ್ಳುವಂತೆ ಮಾಡಿತು. ದೇಗುಲಗಳು ಆಗಾಧ ಪ್ರಮಾಣದಲ್ಲಿ ನಿರ್ಮಾಣವಾದವು. ಇದರಿಂದ ಪ್ರಚೋದಿತನಾದ ಲಕ್ಕಣ್ಣ ದಂಡೇಶನೇ ತನ್ನ ಹುಟ್ಟೂರಾದ ವಿರೂಪಾಕ್ಷಿಯಲ್ಲಿ ಪ್ರಸನ್ನ ವಿರೂಪಾಕ್ಷ ದೇಗುಲವನ್ನು ಕಟ್ಟಿಸಿದ.[೧೭] ಹಂಪಿಯ ವಿರೂಪಾಕ್ಷ ದೇಗುಲವನ್ನು ಮಾದರಿಯಾಗಿಟ್ಟುಕೊಂಡು ಇಲ್ಲೂ ಗೋಪುರ ಮತ್ತು ಮನ್ಮುಖಹೊಂಡವನ್ನು ನಿರ್ಮಿಸಿದ. ಇವನ ಮಂತ್ರಿ ನಾಗರಸನು ತಿರುವಾಯೂರಿನ ತ್ಯಾಗರಾಜಸ್ವಾಮಿ ದೇಗುಲಕ್ಕೆ ಎರಡನೇ ಪ್ರಾಕಾರವನ್ನೂ ಪಶ್ಚಿಮದಲ್ಲಿ ಗೋಪುರವನ್ನೂ ಕಟ್ಟಿಸಿದ.[೧೮] ಅರಸನ ಸೇವಕರಲ್ಲೊಬ್ಬನಾದ ತಿರುಮಲರಾಯನು ಮೊರಪುರಿಯ ಭೈರವ ದೇವಸ್ಥಾನದ ಗೋಪುರವನ್ನು ಕಟ್ಟಿಸಿದ. ಈ ತೆರನಾದ ನಿರ್ಮಾಣಗಳು ಅಸಂಖ್ಯಾತ. ಅವುಗಳಲ್ಲಿ ಇವು ಕೆಲವೇ ಮಾತ್ರ. ಎರಡನೇ ದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ಸಾರ್ವತ್ರಿಕ ಶಾಂತಿ ಮತ್ತು ಭದ್ರತೆ ನೆಲೆಸಿತ್ತು. ಆದ್ದರಿಂದ ಇವನ ಕಾಲದಲ್ಲಿ ನಿರ್ಮಾಣ ಕಾರ್ಯವು ಅತ್ಯಂತ ಕ್ರಿಯಾಶೀಲವಾಗಿ ವ್ಯಾಪಕವಾಗಿ ಹಾಗೂ ಅಧಿಕ ಪ್ರಮಾಣದಲ್ಲಿ ನಡೆದವು. ರಾಯಗೋಪುರಗಳು ಮತ್ತು ತೇರುಬೀದಿಗಳನ್ನು ನಿರ್ಮಿಸುವ ಪರಂಪರೆಯನ್ನು ಆರಂಭಿಸಿದ ಕೀರ್ತಿ ಸಂಗಮವಂಶದ ಹಾಗೂ ಭಾರತದ ಪ್ರಖ್ಯಾತ ಚಕ್ರವರ್ತಿಗಳಲ್ಲಿ ಒಬ್ಬನಾದ ಇಮ್ಮಡಿ ದೇವರಾಯನಿಗೆ ಸಲ್ಲುತ್ತದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. *ARSIE.*, (1889), 26; *SII*, IV, 255; *VPR.*, 1984 - 87, 72.
೨. Shivarudraswamy S N., (1996), *Vijayanaga Temples In Karnataka*, Mysore, p. 124.
೩. *ARSIE.*, (1889), 29; *EI.*, I, pp. 361; *SII.*, IV, 258.
೪. ಶಾಮರಾವ್ ಪುಲುಮತಿ., (೧೯೫೬), ವಿಜಯನಗರದ ಕಲೆ ಮತ್ತು ಸಾಹಿತ್ಯ ಬೆಂಗಳೂರು, ಪು. ೫೬.
೫. ವಿರೂಪಾಕ್ಷ ವಂಸತೋತ್ಸವ ಚಂಪು., (೧೯೫೩), ಪಂಚಮುಖಿ, ಆರ್. ಎಸ್. (ಸಂ.), ಧಾರವಾಡ.
೬. Shastri, K.A. N & Venkataramanay, N., (1946), *Further Sources of Vijayanagara History Vol; I*, Madras, pp. 108-9.
೭. *AR Mar.*, (1913), p. 26; *ASIAR*, 1907-08, p. 249; *EC.*, IX (Bangalore Suppl.) Ht. 130; *MER*, (1903), p. 191.
೮. *ASIAR.*, 1907-08, p. 249.
೯. ಶಿವತತ್ವ ಚಿಂತಾಮಣಿ., (೧೯೬೦), ಬಸಪ್ಪ, ಎಸ್. (ಸಂ), ಮೈಸೂರು, ಪು. ೩೮, ೨೫೧-೨.
೧೦. ಅದೇ, ಪು. ೩೮, ೨೫೩.
೧೧. ಅದೇ, ಪು. ೩೮, ೨೫೪.
೧೨. ಸೀವೆಲ್ ರಾಬರ್ಟ್., *A Forgotten Empire*, pp. 84-90.
೧೩. *SII*, IV, 255.
೧೪. *VPR.* 1979-83, pp. 9-10.
೧೫. Shivarudraswamy S.N., op. Cit., p. 130.
೧೬. EC. V, Bl, 3; EC., IX (Rev) Bl. 144.
೧೭. EC., X, Mb. 96.
೧೮. *ARSIE.*, (1904), 566. & 567.
೧೯. *MAR.*, (1907), 496.

ಡಾ॥ ಪುಂಡಿಕ್ಕಾ ಗಣಪಯ್ಯ ಭಟ್*

# ಮೂಡುಬಿದಿರೆ ಸಾವಿರ ಕಂಬದ ಬಸದಿ -ಜೀರ್ಣೋದ್ಧಾರ ವೃತ್ತಾಂತ

ಸಾವಿರಕಂಬದ ಬಸದಿ ಎಂದೇ ಪ್ರಸಿದ್ಧವಾದ ಮೂಡುಬಿದಿರೆಯ ತ್ರಿಭುವನತಿಲಕ ಚೂಡಾಮಣಿ ಬಸದಿ ಕರಾವಳಿ ಕರ್ನಾಟಕದ ಒಂದು ಮಹತ್ವದ ಸ್ಮಾರಕ. ಕ್ರಿ. ಶ. ೧೫ನೇ ಶತಮಾನದಲ್ಲಿ, ವಿಜಯನಗರದ ಅರಸ ಇಮ್ಮಡಿ ದೇವರಾಯನ ಆಳ್ವಿಕೆಯ ಕಾಲದಲ್ಲಿ, ನಿರ್ಮಾಣಗೊಂಡ ಈ ಬಸದಿಯ ರಚನೆಯು ಕ್ರಿ.ಶ. ೧೪೩೦-೧೪೬೧ರ ಅವಧಿಯಲ್ಲಿ ಮೂರು ಹಂತಗಳಲ್ಲಿ ಪೂರ್ಣಗೊಂಡಿತೆಂಬ ವಿಚಾರ ಶಾಸನಗಳಿಂದ ವ್ಯಕ್ತವಾಗುತ್ತದೆ. ಈ ಬಸದಿಯಲ್ಲಿ ಸುಮಾರು ಹನ್ನೊಂದರಷ್ಟು ಶಿಲಾಶಾಸನಗಳನ್ನು ಗುರುತಿಸಲಾಗಿದ್ದು ಇವು ಈ ಜಿನ ಮಂದಿರದ ನಿರ್ಮಾಣ, ವಿವಿಧ ವ್ಯಕ್ತಿಗಳು ಇಲ್ಲಿ ಕೈಗೊಂಡ ಸೇವಾಕಾರ್ಯಗಳು, ನೀಡಿದ ದಾನಗಳು ಇತ್ಯಾದಿಗಳ ವಿವರಗಳನ್ನೊಳಗೊಂಡಿವೆ.

ಸಾಮಾನ್ಯವಾಗಿ ಸ್ಮಾರಕವೊಂದರ ನಿರ್ಮಾಣದ ಕುರಿತ ದಾಖಲೆಗಳು ಮಾತ್ರ ಲಭ್ಯವಾಗುತ್ತವಲ್ಲದೆ ವಿವಿಧ ಕಾಲಘಟ್ಟಗಳಲ್ಲಿ ನಡೆದ ಅದರ ಜೀರ್ಣೋದ್ಧಾರದ ವಿವರಗಳು ದೊರಕುವುದು ಬಹಳ ಅಪರೂಪ. ಈ ಹಿನ್ನೆಲೆಯಲ್ಲಿ, ಸಾವಿರ ಕಂಬದ ಬಸದಿಯ ನಿರ್ಮಾಣದ ಮಾಹಿತಿಯನ್ನು ನೀಡುವ ಶಾಸನ ಮಾತ್ರವಲ್ಲದೆ ಈ ಬಸದಿಯು ಬೇರೆ ಬೇರೆ ಸಂದರ್ಭಗಳಲ್ಲಿ ಮೂರು ಬಾರಿ ಜೀರ್ಣೋದ್ಧಾರಗೊಂಡಿರುವ ವಿವರಗಳನ್ನೊಳಗೊಂಡ ದಾಖಲೆಗಳೂ ಲಭ್ಯವಿವೆ ಎಂಬ ವಿಚಾರ ಅತ್ಯಂತ ಮಹತ್ವ ಪೂರ್ಣವೆನಿಸುತ್ತದೆ.

ಮೂಡುಬಿದಿರೆಯ ಸಾವಿರಕಂಬದ ಬಸದಿಯ ರಚನೆಯಾದದ್ದು ಕ್ರಿ.ಶ. ೧೪೩೦ರಲ್ಲಿ. ಕ್ರಿ. ಶ. ೧೪೩೦ ಜನವರಿ ೨೯ನೇ ದಿನಾಂಕಕ್ಕನ್ವಯಿಸುವ ಶಾಸನವೊಂದು[1] ಈ ಬಸದಿಯಲ್ಲಿ ಕಂಡು ಬಂದಿದ್ದು ಇದರ ಪ್ರಕಾರ ವಿಜಯನಗರದ ಅರಸ ಇಮ್ಮಡಿ ದೇವರಾಯನ ಆಳ್ವಿಕೆಯಲ್ಲಿ, ಆತನ ನಿರೂಪದಂತೆ ಮಂಗಳೂರು ರಾಜ್ಯದ ರಾಜ್ಯಪಾಲನಾದ ದೇವರಾಜ ಒಡೆಯನು ಅಭಿನವ ಚಾರುಕೀರ್ತಿ ಪಂಡಿತದೇವರಿಗೆ ಚೈತ್ಯಾಲಯ ನಿರ್ಮಾಣಾರ್ಥವಾಗಿ ನೀಡಿದ ಸ್ಥಳದಲ್ಲಿ ಚೌಟರು ಹಾಗೂ ಆರು ಮಂದಿ ಬಲ್ಲಾಳರ ಸಹಾಯದಿಂದ ಬಿದಿರೆಯ ನಗರದ ಎಂಟು ಮಂದಿ ಸೆಟ್ಟಿಕಾರರು, ನಾಲ್ವರು ಎಳಮೆಗಳು ಹಾಗೂ ಸಮಸ್ತ ಹಲರು ಈ ಜಿನಾಲಯವನ್ನು ನಿರ್ಮಿಸಿದರು. ಈ ಬಸದಿಯ ಮುಂಭಾಗ ದಲ್ಲಿರುವ ಶಿಲಾಮಯ ಮಂಟಪವು ವಿಜಯನಗರ ಶೈಲಿಯಲ್ಲಿ ರೂಪಿಸಲಾದ ೪೮ ಶಿಲಾ ಸ್ತಂಭಗಳನ್ನು ಹೊಂದಿದ್ದು ಇದನ್ನು ಮೂಡುಬಿದಿರೆ ನಗರದ ಹಲವು ಮಂದಿ ಸೆಟ್ಟಿಗಳು ಸೇರಿ ಕ್ರಿ. ಶ. ೧೪೫೧ರಲ್ಲಿ ನಿರ್ಮಿಸಿದರು ಎಂಬುದನ್ನು ಶಾಸನವೊಂದರಲ್ಲಿ ವಿವರಿಸಲಾಗಿದೆ.[2] ಈ ಮಂಟಪದ ನಿರ್ಮಾಣಕ್ಕೆ ಕಾರಣರಾದ ೮೭ ಮಂದಿ ಸೆಟ್ಟಿಗಳ ಹೆಸರುಗಳನ್ನು ಆ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ನಗಿರೆ ರಾಜ್ಯವನ್ನಾಳುತ್ತಿದ್ದ ಅರಸರೂ ಈ ಜಿನಮಂದಿರದಲ್ಲಿ ಹಲವಾರು ನಿರ್ಮಾಣ ಕಾರ್ಯಗಳನ್ನು ಕೈಗೊಂಡಿದ್ದಿದೆ. ಕ್ರಿ. ಶ. ೧೪೩೦-೧೪೬೧ರ ಅವಧಿಯಲ್ಲಿ ನಗಿರೆ ರಾಜ್ಯವನ್ನಾಳುತ್ತಿದ್ದ ಹಿರಿಯ ಭೈರವೇಂದ್ರನೂ ಈ ಬಸದಿಯ ಮೂರನೇ ನೆಲೆಗೆ ತಾಮ್ರದ ಹೊದಿಕೆಯನ್ನು ಮಾಡಿಸಿದ ಮತ್ತು ಆತನ ಪಟ್ಟದರಸಿ ನಾಗಲಾದೇವಿಯು ಬಸದಿಯ ಎದುರು ಭಾಗದಲ್ಲಿ ಸುಮಾರು ೫೦ ಅಡಿ ಎತ್ತರದ ಮಾನಸ್ತಂಭವನ್ನು ಸ್ಥಾಪಿಸಿದಳು ಎಂಬ ಮಾಹಿತಿಯನ್ನು ಇಲ್ಲಿರುವ ಶಾಸನವೊಂದು ನೀಡುತ್ತದೆ.[3] ಈ ರೀತಿಯಲ್ಲಿ, ಸುಮಾರು ಮೂರು ದಶಕಗಳ ಅವಧಿಯಲ್ಲಿ (೧೪೩೦-೧೪೬೧) ಬಸದಿಯ ಮುಖ್ಯ ರಚನೆ, ಎದುರಿನ ಶಿಲಾಮಯ ಮಂಟಪ, ಹಾಗೂ ಮಾನಸ್ತಂಭವನ್ನೊಳಗೊಂಡಂತೆ ತ್ರಿಭುವನತಿಲಕಚೂಡಾಮಣಿ ಚೈತ್ಯಾಲಯದ ನಿರ್ಮಾಣವು ಮೂರು ಹಂತಗಳಲ್ಲಿ ಪೂರ್ಣಗೊಂಡಿತು.

ಕ್ರಿ.ಶ. ೧೫ನೇ ಶತಮಾನದಲ್ಲಿ ನಿರ್ಮಿತವಾದ ಈ ಬಸದಿಯು ನಂತರ ಮೂರುಬಾರಿ ಜೀರ್ಣೋದ್ಧಾರಗೊಂಡ ಬಗ್ಗೆ ದಾಖಲೆಗಳಿವೆ. ಮೂಡುಬಿದಿರೆಯ ಜೈನಮಠದಲ್ಲಿರುವ ತಾಮ್ರಶಾಸನವೊಂದು ಕ್ರಿ. ಶ. ೧೬೨೨ರಲ್ಲಿ ನಡೆದ ಈ ಬಸದಿಯ ಜೀರ್ಣೋದ್ಧಾರ ಕಾರ್ಯದ ಸಮಗ್ರ ವಿವರಗಳನ್ನು ನೀಡುತ್ತದೆ.[4] ಈ ಶಾಸನದ ಪ್ರಕಾರ ಈ ಹಿಂದೊಮ್ಮೆ ಬಸದಿಯ ಜೀರ್ಣೋದ್ಧಾರ ಕಾರ್ಯ ನಡೆದಿತ್ತು. ಅದನ್ನು ಕೈಗೊಂಡು ಪೂರೈಸಿದವರು ಸೇನಗಣದ ಗುರುಗಳಾದ ಮುನಿಭದ್ರ ದೇವರು. ಆದರೆ ಆ ಜೀರ್ಣೋದ್ಧಾರದ ಹೆಚ್ಚಿನ ವಿವರಗಳು ಶಾಸನದಲ್ಲಿ ಲಭ್ಯವಾಗುವುದಿಲ್ಲ. ಶಾಸನದಲ್ಲಿ ಈ ಜಿನಮಂದಿರವನ್ನು ಹೊಸಬಸದಿ ಎಂದು ಕರೆಯಲಾಗಿದೆ. ಇಂದಿಗೂ ಆಡು ಮಾತಿನಲ್ಲಿ ಇದನ್ನು ಹೊಸಬಸದಿ ಎಂದು ಗುರುತಿಸುವುದು ರೂಢಿಯಲ್ಲಿದೆ. ಈ ಹೆಸರಿನ ಮಹತ್ವ ಸ್ಪಷ್ಟವಾಗುವುದಿಲ್ಲ.

* ಶ್ರೀಧವಲಾ ಕಾಲೇಜು, ಮೂಡುಬಿದಿರೆ

ಪ್ರಾಯಶಃ ಮೂಡುಬಿದಿರೆಯಲ್ಲಿರುವ ೧೮ ಬಸದಿಗಳ ಪೈಕಿ ಕಾಲಮಾನ ದೃಷ್ಟಿಯಿಂದ ಸಾವಿರಕಂಬದ ಬಸದಿ ಕೊನೆಯಲ್ಲಿ ನಿರ್ಮಾಣಗೊಂಡಿರಬೇಕು. ಆದ್ದರಿಂದ, ಇಲ್ಲಿನ ಇತರ ಬಸದಿಗಳಿಗೆ ಹೋಲಿಸಿದಾಗ ಇದು ಹೊಸದಾಗಿ ನಿರ್ಮಾಣಗೊಂಡಿರುವುದರಿಂದ ಇದನ್ನು ಹೊಸಬಸದಿ ಎಂದು ಗುರುತಿಸುವುದು ರೂಢಿಯಲ್ಲಿ ಬಂದಿರಬೇಕು.

ಈ ತಾಮ್ರಶಾಸನದಲ್ಲಿ ಕಂಡುಬರುವ ವಿವರಗಳಂತೆ ಕ್ರಿ. ಶ. ೧೬೨೨ರಲ್ಲಿ ಕೈಗೊಳ್ಳಲಾದ ಬಸದಿಯ ಜೀರ್ಣೋದ್ಧಾರ ಕಾರ್ಯದ ಹಿಂದಿನ ಚಾಲಕಶಕ್ತಿಯಾಗಿದ್ದವರು ಜೈನಗುರು ತುಳು ಸಮಂತಭದ್ರದೇವರು. ಇವರ ಕುರಿತಂತೆ ಅಲ್ಪ ಸ್ವಲ್ಪ ಮಾಹಿತಿಗಳಷ್ಟೇ ಶಾಸನಗಳಿಂದ ಲಭ್ಯವಾಗುತ್ತದೆ. ಈ ತಾಮ್ರ ಶಾಸನ ಮತ್ತು ಕ್ರಿ.ಶ. ೧೬೩೨ ರ ಇನ್ನೊಂದು ತಾಮ್ರಶಾಸನದಲ್ಲಿ[೫] ನೀಡಲಾದ ಮಾಹಿತಿಯಂತೆ ತುಳು ಸಮಂತಭದ್ರದೇವರು ಸಾಲಿಬಳಿಗೆ[೬] ಸೇರಿದವರು, ಮೂಡು ಬಿದಿರೆಯಲ್ಲೇ ಜನಿಸಿ ಸಕಲ ಶಾಸ್ತ್ರಾಭ್ಯಾಸವನ್ನು ಮಾಡಿ ಕುಮಾರದೀಕ್ಷೆಯನ್ನು ಪಡೆದು ಜೈನಗುರುವಾದವರು. ಮೂಡುಬಿದಿರೆಯ ಪಡುಬಸದಿಯ ವಿಮಲನಾಥ ತೀರ್ಥಂಕರ ವಿಗ್ರಹದ ಹಿಂಭಾಗದಲ್ಲಿರುವ ಕ್ರಿ.ಶ. ೧೬೦೫ಕ್ಕನ್ವಯಿಸುವ ಶಾಸನದ ಪ್ರಕಾರ[೭] ಇವರು ಕಾಜ ದೇರಮ್ಮ ಸೆಟ್ಟಿ ಎಂಬಾತನ ಅಳಿಯಸಂತಾನದಲ್ಲಿ ಜನಿಸಿ ಕುಮಾರ ದೀಕ್ಷೆಯನ್ನು ಪಡೆದು ಸಮಂತಭದ್ರದೇವರು ಎಂಬ ಹೆಸರನ್ನು ಪಡೆದುಕೊಂಡು ಸೇನಗಣದ ಗುರುಗಳಾದವರು. ಈ ಶಾಸನದಂತೆ ಸಮಂತಭದ್ರದೇವರು ಪಡುಬಸದಿಯ ಸಂಪೂರ್ಣ ಜೀರ್ಣೋದ್ಧಾರ ಕಾರ್ಯವನ್ನು ನೆರವೇರಿಸಿದ್ದರು. ಪ್ರಾಯಶಃ ಈ ಜೈನಗುರುಗಳು ಮೂಡುಬಿದಿರೆಯ ಜಿನಮಂದಿರಗಳ ಸಂರಕ್ಷಣೆಯ ಕಾರ್ಯದಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದಂತೆ ತೋರುತ್ತದೆ.

ಮೇಲೆ ಉಲ್ಲೇಖಿಸಲಾದ ಕ್ರಿ. ಶ. ೧೬೨೨ಕ್ಕನ್ವಯಿಸುವ ತಾಮ್ರಶಾಸನದಲ್ಲಿ ಜೈನಗುರುಗಳಾದ ತುಳು ಸಮಂತ ಭದ್ರದೇವರು ಸಾವಿರಕಂಬದ ಬಸದಿಯ ಜೀರ್ಣೋದ್ಧಾರ ಕಾರ್ಯವನ್ನು ಕೈಗೊಂಡು ಪೂರೈಸಿದ ವಿವರಗಳನ್ನು ಈ ಕೆಳಗಿನಂತೆ, ಹಂತ ಹಂತವಾಗಿ ನಿರೂಪಿಸಲಾಗಿದೆ.

ಆ ಕಾಲದಲ್ಲಿ ಕೆಳದಿ ವೆಂಕಟಪ್ಪನಾಯಕನು ತುಳುರಾಜ್ಯದ ಅಧಿಪತಿಯಾಗಿದ್ದು ಮಂಗಳೂರು ರಾಜ್ಯದ ರಾಜ್ಯಪಾಲನಾಗಿ ದೇವಪ್ಪೊಡೆಯನು ಕಾರ್ಯ ನಿರ್ವಹಿಸುತ್ತಿದ್ದ. ತ್ರಿಭುವನತಿಲಕ ಚೂಡಾಮಣಿ ಬಸದಿಯ ಜೀರ್ಣೋದ್ಧಾರ ಕಾರ್ಯದ ಹಿನ್ನೆಲೆಯಲ್ಲಿ ತುಳು ಸಮಂತಭದ್ರದೇವರು ಇಕ್ಕೇರಿಗೆ ಹೋಗಿ ಅಲ್ಲಿ ವೆಂಕಟಪ್ಪನಾಯಕನ ಆಸ್ಥಾನದಲ್ಲಿ ತನ್ನ ವಿದ್ವತ್ತನ್ನು ಪ್ರದರ್ಶಿಸಿ ಆತನ ಮನವನ್ನು ಗೆದ್ದು ಬಸದಿಯ ಜೀರ್ಣೋದ್ಧಾರಕ್ಕಾಗಿ ೫೦೦ ವರಹಗಳನ್ನು ಪಡೆದುಕೊಂಡರು. ಮಿಕ್ಕ ಸಹಾಯಕ್ಕಾಗಿ ವೆಂಕಟಪ್ಪನಾಯಕನಿಂದ ದೇವಪ್ಪೊಡೆಯನಿಗೆ ರಾಯಸವ ತರಿಸಿಕೊಂಡು ಆತನ ಸಹಾಯದಿಂದ ಮರಮಟ್ಟು ಮೊದಲಾದ ಸಾಮಗ್ರಿಗಳನ್ನು ದೊರಕಿಸಿಕೊಂಡರು. ಅನಂತರ ಬಿದಿರೆಯ ನಗರದ ಎಂಟು ಮಂದಿ ಸೆಟ್ಟಿಕಾರರು, ನಾಲ್ವರು ಎಳಮೆಗಳು ಹಾಗೂ ಸಮಸ್ತ ಹಲರ[೮] ಸಮ್ಮತಿಯಿಂದ ೧೦೦೦ ವರಹಗಳನ್ನು ಸ್ಥಳೀಯರಿಂದ ಸಂಗ್ರಹಿಸಿಕೊಂಡರು. ಹದಿನಾರು ಮಂದಿ ಹಲರನ್ನು ಜೊತೆಮಾಡಿಕೊಂಡು ೩೨ನಗರಗಳಿಗೆ[೯] ಹೋಗಿ ಅಲ್ಲಿಂದ ೨೦೦೦ ವರಹಗಳನ್ನು ಸಂಗ್ರಹಿಸಿದರು. ಈ ರೀತಿಯಲ್ಲಿ ಜೀರ್ಣೋದ್ಧಾರ ಕಾರ್ಯಕ್ಕೆ ಅಗತ್ಯವಿರುವ ಧನ ಹಾಗೂ ಸಾಮಗ್ರಿಗಳನ್ನು ಸಂಗ್ರಹಿಸಿದ ನಂತರ ಒಂದು ಶುಭಲಗ್ನದಲ್ಲಿ ಕೆಲಸವನ್ನು ಪ್ರಾರಂಭಿಸಿ ೧೧ ತಿಂಗಳಲ್ಲಿ ಮರಗೆಲಸ, ತಾಮ್ರ ಕೆಲಸ ಸಹಿತ ಜೀರ್ಣೋದ್ಧಾರ ಕಾರ್ಯವನ್ನು ಪೂರ್ಣಗೊಳಿಸಿದರು. ಈ ರೀತಿ ಸಮಗ್ರವಾಗಿ ಜೀರ್ಣೋದ್ಧಾರಗೊಂಡ ಬಸದಿಯಲ್ಲಿ ಶಕವರ್ಷ ೧೫೪೪, ರುಧಿರೋದ್ಗಾರಿ ಸಂವತ್ಸರದ ವೈಶಾಖ ಮಾಸದಲ್ಲಿ (ಕ್ರಿ. ಶ. ೧೬೨೨) ಚಂದ್ರನಾಥ ಸ್ವಾಮಿಯ ಪುನ ಪ್ರತಿಷ್ಠಾಪನೆಯನ್ನು ಆ ತುಳು ಸಮಂತಭದ್ರದೇವರು ವೈಭವದಿಂದ ನೆರವೇರಿಸಿದರು.

ಇಷ್ಟಕ್ಕೇ ತಮ್ಮ ಜವಾಬ್ದಾರಿ ಪೂರ್ಣಗೊಂಡಿತೆಂದು ತಿಳಿಯದೆ ಬಸದಿಯ ಪರಿಸರವನ್ನು ಚೊಕ್ಕಗೊಳಿಸುವ ಕಡೆಗೂ ತುಳು ಸಮಂತಭದ್ರದೇವರು ಗಮನ ಹರಿಸಿದ್ದರೆಂಬುದು ಉಲ್ಲೇಖಾರ್ಹ. ಈ ಕುರಿತ ವಿವರವಾದ ಮಾಹಿತಿಗಳನ್ನು ಶಾಸನವೂ ಒಳಗೊಂಡಿದೆ. ಆ ಕಾಲದಲ್ಲಿ ಬಸದಿಯ ಒಳ ಅಂಗಣದ ಪ್ರಾಕಾರದ ಮೂಡುದಿಕ್ಕಿನ ದೊಡ್ಡ ಬಾಗಿಲಿನ ತನಕ ಜನರು ಮನೆಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು. ಬಸದಿಯ ಪರಿಸರವನ್ನು ಚೊಕ್ಕಗೊಳಿಸುವ ಉದ್ದೇಶದಿಂದ ತುಳು ಸಮಂತ ಭದ್ರದೇವರು ಉಪಾಯದಿಂದ ಎಡ ಬಲಗಳಲ್ಲಿದ್ದ ೬, ೬ ಮನೆಗಳನ್ನು ಕೆಡವಿಸಿ ಒಳ ಪ್ರಾಕಾರದ ಹೆಬ್ಬಾಗಿಲಿನಿಂದ ಪೂರ್ವಕ್ಕೆ ೩೦ ಕೋಲು ಉದ್ದ[೧೦], ಉತ್ತರ ದಕ್ಷಿಣಕ್ಕೆ ೧೨೦ ಕೋಲು ಅಗಲದಲ್ಲಿ ಆ ಮನೆಗಳ ಭೂಮಿಯನ್ನು ಬಸದಿಯ ಹೊರ ಅಂಗಣಕ್ಕೆ ಸೇರಿಸಿಕೊಂಡರು. ಆ ಕೆಡವಿದ ಮನೆಗಳ ಕಲ್ಲಿನಿಂದಲೇ ಎದುರುಭಾಗದಲ್ಲಿ ಹೊರ ಪ್ರಾಕಾರವನ್ನು ನಿರ್ಮಿಸಿ ಈಗಾಗಲೇ ಮೂರು ಬದಿಗಳಲ್ಲಿದ್ದ ಹೊರ ಪ್ರಾಕಾರಕ್ಕೆ ಅದನ್ನು ಸೇರಿಸಿದರು ಮತ್ತು ಎದುರಿನ ಹೊರ ಪ್ರಾಕಾರದಲ್ಲಿ ಕಲ್ಲದ್ವಾರ ಬಂಧದಿಂದ ಬಾಗಿಲನ್ನು ಮಾಡಿಸಿದರು. ಅದರ ಹೊರಗೆ ಮತ್ತೆ ಒಂದೊಂದು ಮನೆಗಳ ಭೂಮಿಯನ್ನು ತೆರವುಗೊಳಿಸಿ ಅಲ್ಲಿ ಮೆಟ್ಟಲನ್ನು ಕಟ್ಟಿಸಿದರು. ಈಗ ತೆರವುಗೊಳಿಸಲಾದ ಜಾಗದಲ್ಲಿ ಇನ್ನು ಮುಂದೆ ಯಾರೂ ಮನೆಗಳನ್ನು ಕಟ್ಟಬಾರದು, ಹಿತ್ತಿಲನ್ನು ಮಾಡಬಾರದೆಂದು ನಿರ್ಣಯವನ್ನು ಕೈಗೊಳ್ಳಲಾಯಿತು. ಈ ರೀತಿಯಲ್ಲಿ, ಜೈನಗುರು ತುಳು ಸಮಂತಭದ್ರದೇವರ ನೇತೃತ್ವದಲ್ಲಿ

ತ್ರಿಭುವನತಿಲಕ ಚೂಡಾಮಣಿ ಬಸದಿಯನ್ನು, ಅದು ನಿರ್ಮಾಣಗೊಂಡ ಸುಮಾರು ೨೦೦ ವರ್ಷಗಳ ನಂತರ, ಎರಡನೇ ಬಾರಿಗೆ ಸಾದ್ಯಂತವಾಗಿ ನವೀಕರಿಸಲಾಯಿತು ಮತ್ತು ಅದರ ಪರಿಸರವನ್ನು ಚೊಕ್ಕಟಗೊಳಿಸಲಾಯಿತು ಎಂಬ ಕುತೂಹಲಕರ ವಿಚಾರ ತಾಮ್ರಶಾಸನದಲ್ಲಿ ನೀಡಲಾದ ವಿವರಗಳಿಂದ ಸ್ಪಷ್ಟವಾಗುತ್ತದೆ.

ಮೂರನೆಯ ಬಾರಿ ತ್ರಿಭುವನತಿಲಕ ಚೂಡಾಮಣಿ ಬಸದಿಯ ಜೀರ್ಣೋದ್ಧಾರ ಕಾರ್ಯ ನಡೆದದ್ದು ಕ್ರಿ. ಶ. ೧೭೪೬ರಲ್ಲಿ. ಅನಾಮಧೇಯ ಕವಿಯೊಬ್ಬನ "ಜೀರ್ಣೋದ್ಧಾರ ಚರಿತೆ" ಎಂಬ ಕೃತಿಯಲ್ಲಿ ಈ ಕುರಿತ ಸಮಗ್ರ ವಿವರಗಳಿವೆ. ಮೂಡುಬಿದಿರೆಯ ಜೈನಮಠದಲ್ಲಿ ತಾಳೆಗರಿಯಲ್ಲಿರುವ ಈ ಕೃತಿಯು ೧೯೬೫ರಲ್ಲಿ ಪುಸ್ತಕರೂಪದಲ್ಲಿ ಪ್ರಕಟಗೊಂಡಿದೆ[೧೧]. ಒಟ್ಟು ೧೩೭ ಸಾಂಗತ್ಯ ಪದ್ಯಗಳಿಂದೊಡಗೂಡಿದ ಈ ಕಿರು ಕೃತಿಯನ್ನು ರಚಿಸಿದ ಕವಿಯ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲ. ಕೃತಿಯಲ್ಲಿ ಆತ ತಾನು ಪ್ರಭಾಚಂದ್ರ ಮುನಿಗಳ ಶಿಷ್ಯ ಎಂದಷ್ಟೆ ಹೇಳಿಕೊಂಡಿದ್ದಾನೆ.

'ಜೀರ್ಣೋದ್ಧಾರ ಚರಿತೆ' ಕೃತಿಯಲ್ಲಿ ನಿರೂಪಿಸಲಾದಂತೆ ಬಸದಿಯ ಜೀರ್ಣೋದ್ಧಾರ ಕಾರ್ಯವನ್ನು ಕೈಗೊಂಡವ ಹಾಸನದ ಚಿಕ್ಕಣ್ಣ ಮತ್ತು ನಾಗಮ್ಮ ಎಂಬ ದಂಪತಿಗಳ ಪುತ್ರ ಪುಟ್ಟಯ್ಯ. ವ್ಯಾಪಾರದಿಂದ ಹೇರಳವಾದ ಸಂಪತ್ತನ್ನು ಗಳಿಸಿಕೊಂಡ ಈತ ಜೀವನದಲ್ಲಿ ವಿರಕ್ತಿಯನ್ನು ಹೊಂದಿ ತೀರ್ಥಯಾತ್ರೆಯನ್ನು ಕೈಗೊಳ್ಳುತ್ತಾನೆ. ಈ ತೀರ್ಥಯಾತ್ರೆಯ ಸಂದರ್ಭದಲ್ಲಿ ಈತ ಶ್ರವಣಬೆಳಗೊಳದ ಚಿಕ್ಕಬೆಟ್ಟದಲ್ಲಿ ಒಂದು ಮಾನಸ್ತಂಭವನ್ನು ಸ್ಥಾಪಿಸಿದ.[೧೨] ನಂತರ ಮೂಡುಬಿದಿರೆಗೆ ಬಂದ ಈತ ತ್ರಿಭುವನ ತಿಲಕ ಚೂಡಾಮಣಿ ಬಸದಿಯು ಅತ್ಯಂತ ಜೀರ್ಣಾವಸ್ಥೆಯಲ್ಲಿರುವುದನ್ನು ಕಂಡು ಅದರ ಜೀರ್ಣೋದ್ಧಾರ ಕಾರ್ಯಕ್ಕೆ ಮನಸ್ಸು ಮಾಡಿದ. ಅನಂತರ ತೀರ್ಥಯಾತ್ರಾರ್ಥಿಯಾಗಿ ಉಜ್ಜಂತಗಿರಿಗೆ ತೆರಳಿದ ಪುಟ್ಟಯ್ಯ ಅಲ್ಲಿ ಕ್ಷುಲ್ಲಕ ದೀಕ್ಷೆಯನ್ನು ಪಡೆದುಕೊಂಡು ನೇಮಿಸಾಗರ ಎಂಬ ಹೆಸರಿನಿಂದ ಜೈನಮುನಿಯಾಗುತ್ತಾನೆ. ಮುಂದೆ ಮೂಡುಬಿದಿರೆಗೆ ಹಿಂದಿರುಗಿದ ಈತ ಬಸದಿಯ ಜೀರ್ಣೋದ್ಧಾರದ ಕಡೆಗೆ ಗಮನ ಹರಿಸುತ್ತಾನೆ. ಬಸದಿಯ ನಡುವಣ ನೆಲೆಗೆ ಶಿಲೆಯನ್ನು ಹಾಕಿಸಿ, ಮೇಲಿನ ನೆಲೆಗೆ ತಾಮ್ರವನ್ನು ಹೊದಿಸಿ, ಕಲ್ಲು, ಮರ ಹಾಗೂ ತಾಮ್ರದ ಕೆಲಸವನ್ನು ಕೈಗೆತ್ತಿಕೊಂಡು ಈ ಜಿನಾಲಯದ ಜೀರ್ಣೋದ್ಧಾರ ಕಾರ್ಯವನ್ನು ಪೂರ್ಣಗೊಳಿಸುತ್ತಾನೆ. ಆದರೆ, ಜೀರ್ಣೋದ್ಧಾರಗೊಂಡ ಬಸದಿಯಲ್ಲಿ ಪುನ ಪ್ರತಿಷ್ಠಾವಿಧಿಗಳು ಆರಂಭವಾಗುವ ಮುನ್ನವೇ ಇದರ ಕಾರಣಕರ್ತರಾದ ನೇಮಿಸಾಗರಮುನಿ ಪರಂಧಾಮವನೈದಿದರು ಎನ್ನಲಾಗಿದೆ. ಈ ಕೃತಿಯಲ್ಲಿ ನೀಡಲಾದ ವಿವರಗಳಂತೆ ಶಕವರ್ಷ ೧೬೬೮ನೇ ಕ್ರೋಧನ ಸಂವತ್ಸರದ ಮಾಘ ಶುದ್ಧ ದಶಮಿಯಂದು (ಕ್ರಿ.ಶ. ೧೭೪೬) ನೂತನವಾಗಿ ಜೀರ್ಣೋದ್ಧಾರಗೊಂಡ ತ್ರಿಭುವನತಿಲಕಚೂಡಾಮಣಿ ಬಸದಿಯಲ್ಲಿ ಚಂದ್ರನಾಥಸ್ವಾಮಿಯ ಪ್ರತಿಷ್ಠಾಪನಾ ವಿಧಿಗಳು ಅತ್ಯಂತ ವೈಭವದಿಂದ ನೆರವೇರಿದವು. ಈ ಸಂಭ್ರಮದ ಪುನ ಪ್ರತಿಷ್ಠಾಪನಾ ಮಹೋತ್ಸವದ ವಿವರಗಳನ್ನು ೪೧ ಪದ್ಯಗಳಲ್ಲಿ ಕವಿಯು ಅತ್ಯಂತ ಸುಂದರವಾಗಿ ವರ್ಣಿಸಿದ್ದಾನೆ.

ಮರದ ಮಾಡು, ತಾಮ್ರದ ಹೊದಿಕೆಯನ್ನು ಹೊಂದಿರುವ ಬೃಹದಾಕಾರದ ಸಾವಿರಕಂಬದ ಬಸದಿಯು ವಿಪರೀತ ಮಳೆ ಬೀಳುವ ಪ್ರದೇಶದಲ್ಲಿರುವುದಿಂದ ಪ್ರಾಕೃತಿಕ ಕಾರಣಗಳಿಂದಾಗಿ ಬಹುಬೇಗನೆ ಜೀರ್ಣಗೊಳ್ಳುತ್ತ ಬಂದಿರುವುದು ಸಹಜವೆ. ಕ್ರಿ. ಶ. ೧೪೩೦ರಲ್ಲಿ ನಿರ್ಮಾಣಗೊಂಡ ಈ ಬಸದಿಯು ಸುಮಾರು ೩೦೦ ವರ್ಷಗಳಲ್ಲಿ ಮೂರು ಬಾರಿ ಜೀರ್ಣೋದ್ಧಾರಗೊಂಡಿರುವುದು ಮತ್ತು ಆ ಕುರಿತ ದಾಖಲೆಗಳು ನಮಗೆ ಲಭ್ಯವಾಗಿರುವುದು ಅತ್ಯಂತ ಮಹತ್ವದ ವಿಚಾರ.[೧೩] ಬಸದಿಯ ಜೀರ್ಣೋದ್ಧಾರದ ಸಂದರ್ಭದಲ್ಲಿ ಅದರ ಮೂಲ ರೂಪಕ್ಕೆ ಯಾವುದೇ ರೀತಿಯ ಧಕ್ಕೆಯಾಗದಂತೆ ಮತ್ತು ಅದರ ಧಾರ್ಮಿಕ ಪರಿಸರವೂ ಕೆಡದಂತೆ ವಿಶೇಷವಾದ ಕಾಳಜಿಯನ್ನು ವಹಿಸಿರುವುದು ಗಮನಾರ್ಹ. ಇಂತಹ ಬೃಹತ್ತಾದ ಸ್ಮಾರಕವು ಯಾವುದೇ ರಾಜಮನೆತನದ ಹಿನ್ನೆಲೆ ಇಲ್ಲದೆ, ಸಮಾಜದ ಜನರ ಸಾಂಘಿಕ ಪ್ರಯತ್ನದ ಫಲವಾಗಿ ರೂಪುಗೊಂಡಿರುವುದು ಹಾಗೂ ಇದೇ ಹಿನ್ನೆಲೆಯಲ್ಲಿ ಕಾಲಕಾಲಕ್ಕೆ ಇದರ ಜೀರ್ಣೋದ್ಧಾರ ಕಾರ್ಯಗಳು ನಡೆದಿರುವುದು ಉಲ್ಲೇಖಾರ್ಹ ವಿಚಾರಗಳು.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. *South Indian Inscriptions* (SII), Vol. VII, No. 196.
೨. *SII.*, Vol. VII, No.197.
೩. *SII.*, Vol. VII, No. 202.
೪. *ARSIE.*, 1940 - 41, App. A, No 4a; ಈ ಶಾಸನವನ್ನು ಸ್ವತಃ ಪರಿಶೀಲಿಸಲಾಗಿದೆ.
೫. *ARSIE.*, 1940-41, APP 'A' No. 4; ಈ ಶಾಸನವನ್ನು ಸ್ವತಃ ಪರಿಶೀಲಿಸಲಾಗಿದೆ.
೬. ಬಳಿ ಎಂದರೆ ಬ್ರಾಹ್ಮಣರಲ್ಲಿ ಗೋತ್ರ ಇದ್ದಂತೆ ತುಳುನಾಡಿನಲ್ಲಿ ಬಂಟರು ಹಾಗೂ ಜೈನರಲ್ಲಿ ತಮ್ಮ ವಂಶ ಅಥವಾ ಕುಲವನ್ನು ಸೂಚಿಸುವ ಪದ.
೭. **ಸಂಪ್ರೋಕ್ಷಣೆ.**, (೧೯೭೧), ದೇವ ಕುಮಾರ ಜೈನ್ (ಸಂ.), ಪಡುಬಸದಿ ಜಿನ ಬಿಂಬ ಪ್ರತಿಷ್ಠೆಯ ಸಂದರ್ಭ ಪ್ರಕಟಗೊಂಡ ಕಿರುಸ್ಮರಣ ಸಂಚಿಕೆ, (ಮೂಡುಬಿದಿರೆ).
೮. ಸೆಟ್ಟಿಕಾರರು, ಹಲರು, ಎಳಮೆಗಳು ಇವು ಅಂದಿನ ಮೂಡುಬಿದಿರೆ ನಗರದಲ್ಲಿದ್ದ ವ್ಯಾಪಾರಿಗಳ ಹಾಗೂ ಇತರ ಸಂಘಗಳು.
ನೋಡಿ: Ramesh K.V., (1970), *A History of South Kanara*, (Dharwad), Pp. 257 - 58.
೯. ಪ್ರಾಚೀನ ತುಳುನಾಡಿನಲ್ಲಿ ೩೨ ನಗರಗಳಿದ್ದುವೆಂದು ಪ್ರತೀತಿ. ಭೂತಾಳಪಾಂಡ್ಯನ ಅಳಿಯಕಟ್ಟು ಎಂಬ ಜಾನಪದ ಐತಿಹ್ಯದಲ್ಲಿ ಈ ನಗರಗಳನ್ನು ಹೆಸರಿಸಲಾಗಿದೆ.
೧೦. ತುಳುನಾಡಿನಲ್ಲಿ ಪ್ರಚಲಿತವಿದ್ದ ಒಂದು ಅಳತೆಯ ಮಾಪನ. ಒಂದು ಕೋಲು ಎಂದರೆ ಸುಮಾರು ಎರಡುವರೆ ಅಡಿಗಳಿಗೆ ಸಮನಾಗುತ್ತದೆ.
೧೧. ದೇವಕುಮಾರ ಶಾಸ್ತ್ರಿ., (೧೯೬೫), **ಜೀರ್ಣೋದ್ಧಾರ ಚರಿತೆ**, (ಮೂಡುಬಿದಿರೆ).
೧೨. ಅನಂತ ಕವಿಯ **ಬೆಳ್ಗೊಳದ ಗೊಮ್ಮಟೇಶ್ವರ ಚರಿತೆ** ಎಂಬ ಅಪ್ರಕಟಿತ ಕೃತಿಯಲ್ಲೂ ಈ ಬಗ್ಗೆ ಉಲ್ಲೇಖವಿದೆ.
ನೋಡಿ: ಬಿ. ವಿ. ಶಿರೂರ, (೧೯೭೬), **ಶ್ರವಣಬೆಳ್ಗೊಳ**, ಧಾರವಾಡ, ಪು. ೩೪೩.
೧೩. ೧೪೯೪ರಲ್ಲಿ ಮತ್ತೊಮ್ಮೆ ಈ ಬಸದಿಯ ಜೀರ್ಣೋದ್ಧಾರ ಕಾರ್ಯ ನಡೆದಿರುತ್ತದೆ.

ಡಾ॥ ಸುಭಾಸ ರಾ. ಚಿಂಚೋಳಿ*
ಎಸ್. ಕೆ. ಮೇಲಕಾರ**

# ಸಿಂದಗಿ ತಾಲೂಕು ಜೈನ ವಾಸ್ತುಶಿಲ್ಪ ಸಮೀಕ್ಷೆ

ರಾಜಕೀಯ ಆಶ್ರಯದೊಂದಿಗೆ ಮುಖ್ಯವಾಗಿ ಬೆಳೆದ ಜೈನಧರ್ಮವು ಕನ್ನಡ ನಾಡಿನ ಅರಸು ಮನೆತನಗಳಾದ ಕದಂಬ-ಗಂಗರ ಕಾಲದಲ್ಲಿ ಹಂತಹಂತವಾಗಿ ಬೆಳೆದು ರಾಷ್ಟ್ರಕೂಟ ಮತ್ತು ಕಲ್ಯಾಣ ಚಾಲುಕ್ಯರ ಕಾಲಾವಧಿಯಲ್ಲಿ ಉನ್ನತಮಟ್ಟ ತಲುಪಿದ್ದಿತು. ಆದರೆ, ಕಲ್ಯಾಣ ಚಾಲುಕ್ಯರ ಅವನತಿಯೊಂದಿಗೆ ಕರ್ನಾಟಕದಲ್ಲಿ ಸಾವಕಾಶವಾಗಿ ಹಿನ್ನಡೆಯನ್ನು ಪಡೆಯುತ್ತ ನಡೆಯಿತು. ವಿಜಯನಗರ ಹಾಗೂ ವಿಜಯನಗರೋತ್ತರ ಅರಸು ಮನೆತನಗಳು ಜೈನಧರ್ಮಕ್ಕೆ ಆಶ್ರಯ ನೀಡಿದರು. ಆದರೂ ಮತ್ತೆ ಉನ್ನತಿ ಕಾಣದೆ ಕರ್ನಾಟಕದ ಕರಾವಳಿ ಭಾಗಕ್ಕೆ ಮಾತ್ರ ಸಿಮೀತವಾಗಿ ಮುನ್ನಡೆಯಿತು.

ಭಾರತೀಯ ಧರ್ಮಗಳು ಧರ್ಮದ ಪ್ರತೀಕವಾಗಿ ವಾಸ್ತು ಶಿಲ್ಪಕಲೆಯನ್ನು ಬೆಳೆಸಿದವು. ಅದನ್ನು ಜೈನಧರ್ಮವು ಅಂಗಿಕರಿಸಿದ್ದರಿಂದ ಸಿಂದಗಿ ತಾಲೂಕಿನಲ್ಲಿ ಸಹ ಜೈನಧರ್ಮದ ಪ್ರತೀಕವಾಗಿ ಅದರ ಸ್ಮಾರಕಗಳು ಸಾಕಷ್ಟು ಇವೆ. ಈ ಪ್ರದೇಶದಲ್ಲಿ ಹಿಂದೊಮ್ಮೆ ರಾಜಾಶ್ರಯದೊಂದಿಗೆ ಮನೆಮಾತಾಗಿದ್ದ ಜೈನಧರ್ಮ ಇಂದು ತನ್ನ ಇರುವಿಕೆಯನ್ನು ಕಳೆದುಕೊಂಡು ವಿನಾಶವಾಗುತ್ತಲಿರುವ ಅದರ ವಾಸ್ತು ಶಿಲ್ಪಕಲೆಯ ಮೇಲೆ ಬೆಳಕು ಚೆಲ್ಲುವುದೇ ಪ್ರಸ್ತುತ ಪ್ರಬಂಧದ ಮುಖ್ಯ ಅಂಶವಾಗಿದೆ. ಮುಖ್ಯವಾಗಿ ಸಿಂದಗಿ ತಾಲೂಕಿನಲ್ಲಿ ಕಂಡುಬರುವ ಜೈನ ವಾಸ್ತುಶಿಲ್ಪಕಲೆಯು ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಮತ್ತು ಯಾದವರಸರ ಕಾಲಾವಧಿಗೆ ಸಂಬಂಧಿಸಿದ್ದಾಗಿದೆ. ಇವು : ಶಾಸನ ಬಸದಿ, ಜಿನಶಿಲ್ಪ, ನಿಶಧಿಗೆ, ಮಾಸ್ತಿಸ್ಮಾರಕಗಳ ಕುರಿತದ್ದಾಗಿದೆ.

**ಕಲ್ಲಕೇರಿ**

ತಾಲೂಕಿನ ಪ್ರಮುಖ ಗ್ರಾಮವಾದ ಕಲಕೇರಿಯಲ್ಲಿ ಎರಡು ಜೈನ ಶಾಸನ ಹಾಗೂ ಒಂದು ಮಾಸ್ತಿ ವೀರಗಲ್ಲುಗಳು ಕಂಡುಬರುತ್ತವೆ. ಮಲ್ಲಯ್ಯನ ಗುಡಿಯ ಮುಂದಿನ ಕಟ್ಟೆಯ ಮೇಲೆ ಇಡಲಾದ ಕ್ರಿ. ಶ. ೧೨೪೪ರ ಯಾದವ ಸಿಂಘಣನ ಶಾಸನವು ಗ್ರಾಮದ ಸೆಟ್ಟಿಗುತ್ತರು, ಮುಮ್ಮರಿದಂಡರು, ಎರಡುನೂರು ಮಹಾಜನರು ಅಲ್ಲಿಯ ಕಮಲಸೇನ ಮುನಿಯ ವಿನಂತಿಯ ಮೇರೆಗೆ ಮಹಾಪ್ರಧಾನ ಮಲ್ಲ, ಚಾಚ ಮತ್ತು ಅವನ ಮಗ ಪಾಯಿಸೆಟ್ಟಿಯರಿಂದ ನಿರ್ಮಿತವಾದ *ಅನಂತತೀರ್ಥಂಕರ ಬಸದಿಗೆ* ನೀಡಿದ ಭೂದಾನ, ನಿವೇಶನ ದಾನ ಮಾಡಿದ ಕುರಿತು ಹೇಳುತ್ತದೆ.*೧ ಇದೆ ಕಲ್ಲಿನ ಶಾಸನದಲ್ಲಿ ಮತ್ತೊಂದು ಕ್ರಿ. ಶ. ೧೨೫೦ರ ಯಾದವ ಕನ್ನರಸನ ಶಾಸನವು ರಂಗರಸನ ಮಗನ ಜನನಕ್ಕಾಗಿ ಕಲುಕೆರೆಯ ಮಹಾಜನರಿಂದ ಅನಂತತೀರ್ಥ ದೇವರಿಗೆ ಭೂದಾನ ಮಾಡಿದ ಬಗ್ಗೆ ಮತ್ತು ಸರ್ವದೇವ ನಾಯಕನಿಂದ ತೇರಿಗೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.*೨

ಮುಂದಿನ ದಿನಗಳಲ್ಲಿ ಅಂದರೆ ವಿಜಾಪುರದ ಆದಿಲ್‌ಶಾಹಿ, ಹೈದ್ರಾಬಾದಿನ ನಿಜಾಮರ ದಾಳಿಗೆ ಸಿಲುಕಿ ದೇಶಗತಿಯ ಸೋಗಿನಲ್ಲಿ ಗ್ರಾಮದಲ್ಲಿರುವ ಶೈವ, ವೈಷ್ಣವ, ಜೈನ ದೇವಾಲಯಗಳ ಅವಶೇಷಗಳನ್ನು ಬಳಸಲಾಗಿದ್ದು ಅದರಲ್ಲಿ ಜೈನ ಮಾಸ್ತಿ ವೀರಗಲ್ಲು ಮೂರು ಅಡಿ ಎತ್ತರವಾಗಿದ್ದು ಅದರ ಕೆಳಪಟ್ಟಿಕೆಯಲ್ಲಿ ವೀರ ಮತ್ತು ವೀರನ ಮಡದಿ ನಿಂತ ಚಿತ್ರಗಳಿದ್ದರೆ, ಮೇಲಿನ ಪಟ್ಟಿಕೆಯಲ್ಲಿ ಜಿನಬಿಂಬವಿದೆ. ಇದರಲ್ಲಿ ವೀರನ ಮಡದಿಯನ್ನು ಅವನ ಜೊತೆಯಲ್ಲಿ ತೋರಿಸಿದ್ದರಿಂದ ಇದೊಂದು ಜೈನ ಮಾಸ್ತಿ ವೀರಗಲ್ಲು, ಎಂದು ಕರೆಯಬಹುದು. ಜೈನ ಶಾಸನ ಮತ್ತು ಮಾಸ್ತಿವೀರಗಲ್ಲುಗಳನ್ನು ಹೊರತುಪಡಿಸಿದರೆ ಇನ್ನಾವುದೇ ಜೈನಾವಶೇಷಗಳು ಇಲ್ಲ.

**ಚಾಂದಕವಟೆ**

ಸಿಂದಗಿ ತಾಲೂಕಿನ ಮತ್ತೊಂದು ಪ್ರಮುಖ ಜೈನಕೇಂದ್ರ ವೆಂದರೆ ಚಾಂದಕವಟೆ ಗ್ರಾಮ. ಈ ಗ್ರಾಮದಲ್ಲಿ ಜೈನ ಕುಟುಂಬ ಗಳಿವೆ. ಆದರೆ ಇಲ್ಲಿಯ ಜೈನಸ್ಮಾರಕಗಳ ರಕ್ಷಣೆಯ ಬಗ್ಗೆ ಅನಾದರಣೆ ಕಂಡಬರುತ್ತದೆ. ಈ ಗ್ರಾಮದಲ್ಲಿ ಶಾಸನೋಕ್ತ ನಿಶಿಧಿಗೆ ಹಾಗೂ ಪಾರ್ಶ್ವನಾಥನ ಶಿಲ್ಪಗಳು ಕಂಡುಬರುತ್ತವೆ. ಕ್ರಿ. ಶ. ೧೧೬೮ರ ನಿಶಿಧಿಗೆ ಶಾಸನವು ಗ್ರಾಮದ ಬಸವಣ್ಣನ ಬಾವಿಯ ಪಾವಟಿಕೆಗಳಲ್ಲಿ ಕಂಡು ಬರುತ್ತಿದ್ದು ಅದು ಸಿಂದಿಗೆಯ ಜಾಕಿಯಬ್ಬೆ ಸೂರಸ್ತಗಣದ ಮಾರಣಂದಿ ಭಟ್ಟಾರಕನ ನಿಶಿಧಿಕಲ್ಲನ್ನು ನಿಲ್ಲಿಸಿದಳೆಂದು ಉಲ್ಲೇಖಿಸುತ್ತದೆ.*೩ ಇದನ್ನು ಬಸದಿಗೆ ಬಳಸಿದ ಗೋಡೆಯ ಥಾವಣಿಯ ಮೇಲೆ ಕಟೆಯಲಾಗಿದೆ. ಬಾವಿಯ ಪಾವಟಿಕೆಗಳಲ್ಲಿ ಇನ್ನು ಮೂರು ಥಾವಣಿಗಳಲ್ಲಿ ಮೂರು ನಿಶಿಧಿಗಳನ್ನು ಕೆತ್ತಲಾಗಿದ್ದು ಶಾಸನಗಳಲ್ಲಿ ಗ್ರಾಮದಲ್ಲಿ ಬಸದಿ

* ಮ್ಯೂಜಿಯಂ ಮೇಲ್ವಿಚಾರಕರು, ಕನ್ನಡ ಸಂಶೋಧನ ಸಂಸ್ಥೆ, ಕವಿವಿ, ಧಾರವಾಡ
** ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ, ಕವಿವಿ, ಧಾರವಾಡ

ಇತ್ತೆಂಬುದಕ್ಕೆ ಬಸವಣ್ಣನ ಗುಡಿ ಪ್ರಾಕಾರದ ಗೋಡೆಯಲ್ಲಿ ಪ್ರತಿಷ್ಠಾಪಿಸಿದ ಪಾರ್ಶ್ವನಾಥನ ಶಿಲ್ಪ ಸಾಕ್ಷಿಯಾಗಿದೆ. ಶಿಲ್ಪವನ್ನು ಬಸದಿಯ ಛಾವಣಿಯ ಮೇಲೆ ಕೆತ್ತಲಾಗಿದೆ.

**ದೇವೂರು**

ದೇವೂರು ಸಹ ಒಂದು ಜೈನ ನೆಲೆಯಾಗಿದ್ದು ಇಲ್ಲಿ ಕೆಲವು ಜೈನ ಶಿಲ್ಪ, ನಿಶಿಧಿಗೆಕಲ್ಲುಗಳು ಕಂಡು ಬರುತ್ತವೆ. ಗ್ರಾಮದ ಪಶ್ಚಿಮಕ್ಕಿರುವ ಮಲ್ಲಿಕಾರ್ಜುನ ಗುಡಿಯ ಗೋಡೆಯಲ್ಲಿ ಎರಡು ಜಿನ ಶಿಲ್ಪದ ಸಿಂಹಲಾಂಛನವಿರುವ ಪೀಠಗಳನ್ನು ಪ್ರತಿಷ್ಠಾಪಿಸಲಾಗಿದೆ. ಇದೇ ಗುಡಿಯ ಹತ್ತಿರದ ಹನುಮಾನ ಗುಡಿಯ ಕಟ್ಟೆಯಲ್ಲಿ ಒಂದು *ರುಂಡ-ಪಾದ*ಗಳಿರುವ ಭಗ್ನಗೊಂಡ ಪಾರ್ಶ್ವನಾಥನ ಶಿಲ್ಪವನ್ನು ಇಡಲಾಗಿದೆ. ದ್ಯಾಮವ್ವನ ಗುಡಿಯ ಮುಂದೆ ನಿಶಿಧಿಗೆ ಕಲ್ಲು ಕಂಡುಬರುತ್ತದೆ. ಇದು ಶಾಸನವನ್ನು ಹೊಂದಿದ್ದು ಅದು *ಮೂಲಸಂಘ ದೇಶಿಯಗಣ ಪುಸ್ತಕಗಚ್ಚ* ಕೊಂಡಕುಂದಾನ್ವಯ ಇಂಗಳೇಶ್ವರ ಬಳ್ಳಿಯ ನೇಮಿದೇವನ ಶಿಷ್ಯನಾದ ಸಿಂಗಿಸೆಟ್ಟಿ, ದೇವಿಸೆಟ್ಟಿ, ಪದುಮವ್ವೆ, ಸಿಂಗೆಯರ ನಿಶಿಧಿಯೆಂದು ಉಲ್ಲೇಖಿಸುತ್ತವೆ.[೪]

**ಯರಗಲ್ಲ (ಬ.ಕೆ.)**

ಉಳಿದ ಗ್ರಾಮಗಳಲ್ಲಿ ಕೇವಲ ಶಿಲ್ಪಗಳು ಕಂಡು ಬಂದರೆ ಯರಗಲ್ಲ ಗ್ರಾಮದಲ್ಲಿ ಮಾತ್ರ ರಾಷ್ಟ್ರಕೂಟ ಕಾಲದ ಒಂದು ಬಸದಿ ಮತ್ತು ಜಿನಶಿಲ್ಪಗಳು ಕಂಡು ಬರುತ್ತವೆ. ಗ್ರಾಮದ ಮಧ್ಯದಲ್ಲಿರುವ ಬಸದಿಯು ರಾಷ್ಟ್ರಕೂಟರ ಕಾಲದ್ದಾಗಿದೆ. ಬಸದಿ ನಿರ್ಮಾಣದ ಕುರುಹು ತಿಳಿದು ಬರದಿದ್ದರೂ ಲಕ್ಷಣಗಳ ಮೇಲಿಂದ ೧೦ನೇ ಶತಮಾನದ ಮಧ್ಯಾವಧಿಗೆ ಸೇರಿದ್ದೆಂದು ಹೇಳಬಹುದು. ಇದನ್ನು ಪೂರ್ವ ಮುಖ ಮಾಡಿ ಕಟ್ಟಲಾಗಿದ್ದು **ಏಕಕೂಟ ತಲವಿನ್ಯಾಸ ಮಾದರಿಗೆ** ಸೇರಿದೆ. ಈ ದೇವಾಲಯದಲ್ಲಿ ಗರ್ಭಗೃಹ, ಅರ್ಧಮಂಟಪ ನವರಂಗ ಮಂಟಪಗಳಿವೆ. ಗರ್ಭಗೃಹದಲ್ಲಿ ಎತ್ತರವಾದ ಸಿಂಹಪೀಠದ ಮೇಲೆ ೩ ಅಡಿ ಎತ್ತರವಿರುವ ಮಹಾವೀರನು ಪದ್ಮಾಸನದ ಧ್ಯಾನ ಮುದ್ರೆಯಲ್ಲಿ ಕುಳಿತ ಶಿಲ್ಪವಿದೆ. ಅವನ ತಲೆಯ ಹಿಂದೆ ಪ್ರಭಾವಳಿಯಿದೆ. ದ್ವಾರದಲ್ಲಿ ಮೂರು ಶಾಖೆಗಳಿದ್ದು ವಜ್ರ - ಸ್ತಂಭ - ಪದ್ಮ ಕೆತ್ತನೆಗಳಿವೆ. ಶಾಖೆಗಳ ಮಧ್ಯದಲ್ಲಿ ತಗ್ಗು (ಕುಳಿ)ಗಳಿವೆ. ಮಂಗಲದಲ್ಲಿ ಜಿನ ಬಿಂಬವಿದೆ. ದ್ವಾರದ ಮಗ್ಗಲಿಗೆ ಪ್ರತ್ಯೇಕವಾಗಿ ಕಟೆದು ನಿಲ್ಲಿಸಿದ ಎರಡು ಅಡಿ ಎತ್ತರದ ಚಾರ ಶಿಲ್ಪಗಳಿವೆ.

ನವರಂಗ ಮಂಟಪದಲ್ಲಿ ನಾಲ್ಕು ಸ್ತಂಭಗಳಿದ್ದು ಪೀಠ-ಪಟ್ಟಿಕೆ - ೮-೧೬ (ಪೈಲು ಕಾಂಡು) ಕೋನದ ಕಾಂಡ ಪಟ್ಟಿಕೆ, ಕೀರ್ತಿ ಮುಖವುಳ್ಳ ಗೋಲಭಾಗ - ಕೆಳಮುಖ ಮುಚ್ಚಳಫಲಕ - ಚೌಕ ಶಿಲಾಫಲಕ ಹಾಗೂ ಸಾದಾ ಬೋದುಗೆಗಳನ್ನು ಹೊಂದಿವೆ. ಇದರ ದ್ವಾರದಲ್ಲಿ ಆರು ದ್ವಾರಶಾಖೆಗಳಿದ್ದು, ವಜ್ರ-ಲತಾಬಳ್ಳಿ ಗಂಧರ್ವಶಿಲ್ಪ, ಜಲ್ಲಿಸ್ತಂಭ, ತಗ್ಗು (ಕುಳಿ)-ಪದ್ಮ ಕೆತ್ತನೆಗಳಿಂದ ಕೂಡಿವೆ. ಮೇಲಿನ ಮಂಗಲದಲ್ಲಿ ಜಿನಬಿಂಬವಿದ್ದರೆ ಅದರ ಮೇಲ್ಗಡೆ ಹಂಸ ಪಕ್ಷಿ ಕೆತ್ತನೆಯ ಮುಂಚಾಚುವಿದೆ. ಬಸದಿಯ ಹೊರಗೋಡೆ ಮತ್ತು ಕಮಾನುಳ್ಳ ಮುಖಮಂಟಪವನ್ನು ೧೯ನೆಯ ಶತಮಾನದ ಕೊನೆಯ ವೇಳೆಯಲ್ಲಿ ಅಥವಾ ೨೦ನೇ ಶತಮಾನದ ಪ್ರಾರಂಭದಲ್ಲಿ ನಿರ್ಮಾಣ ಮಾಡಿದ್ದಾಗಿವೆ. ಹೀಗಾಗಿ ಅವುಗಳ ಮೂಲಸ್ವರೂಪ ತಿಳಿಯುತ್ತಿಲ್ಲ.

ನವರಂಗ ಮಂಟಪದಲ್ಲಿರುವ ಹಲವಾರು ಶಿಲ್ಪಗಳಲ್ಲಿ ಕೆಲವು ರಾಷ್ಟ್ರಕೂಟ ಮತ್ತು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದವುಗಳಾಗಿವೆ. ಗರ್ಭಗೃಹದ ಪೀಠದಲ್ಲಿ ೧೨ ನೇ ಶತಮಾನಕ್ಕೆ ಸೇರಿದ ಶಾಸನವಿದ್ದು ತುಟಿತಗೊಂಡಿದೆ. ಅದು ನವಿಲು ಗಂದಾಳ್ವಯದ ಚಂದವ್ವೆ, ರೇಕವ್ವೆ, ಹಾಗೂ ಸಕಳನೋಂಪಿಯರ ಉಲ್ಲೇಖ ನಿಡುತ್ತಿದ್ದು[೫] ಬಹುಶಃ ಶಾಸನ ಹೆಸರಿಸುವ ಇವರು ಬಸದಿಗೆ ದಾನ ನೀಡಿರಬೇಕು, ಎಂದು ಕಾಣುತ್ತದೆ.

ಮಂಟಪದಲ್ಲಿರುವ ಪದ್ಮನಿಧಿಯಕ್ಷನ ಶಿಲ್ಪ ರಾಷ್ಟ್ರಕೂಟರ ಕಾಲಕ್ಕೆ ಸೇರಿದೆ. ಶಿಲ್ಪವು ಅರ್ಧ ಪರ್ಯ್ಯಾಂಕಾಸನದಲ್ಲಿ ಕುಳಿತಂತೆ ಮೂರು ಅಡಿ ಎತ್ತರವಾಗಿದೆ. ಪಾರ್ಶ್ವನಾಥನ ಶಿಲ್ಪ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದ್ದು ಕಾರ್ಯೋತ್ಸರ್ಗ ಭಂಗಿಯಲ್ಲಿದೆ. ಮೂರು ಅಡಿ ಎತ್ತರವಿರುವ ಶಿಲ್ಪ ಕಪ್ಪು ಶಿಲೆಯಲ್ಲಿ ಕೆತ್ತಲ್ಪಟ್ಟಿದೆ. ಇಲ್ಲಿರುವ ಮತ್ತೊಂದು ಪಾರ್ಶ್ವನಾಥನ ಶಿಲ್ಪವು ಸಹ ಕಲ್ಯಾಣ ಚಾಲುಕ್ಯ ಕಾಲಕ್ಕೆ ಸೇರಿದ್ದು ಇವುಗಳ ಜೊತೆಯಲ್ಲಿ ತಾಮ್ರ-ಕಂಚು ಮತ್ತು ಶಿಲೆಯಲ್ಲಿ ತಯಾರಿಸಿದ ಅನೇಕ ಚಿಕ್ಕ ಚಿಕ್ಕ ಜಿನ ಶಿಲ್ಪಗಳಿವೆ. ಬಸದಿಯೂ ಇಂದಿಗೂ ಜೈನ ಕುಟುಂಬದವರಿಂದ ಪೂಜಿಸಲ್ಪಡುತ್ತದೆ.

**ಥವಳಾರ**

ಥವಳಾರ ಗ್ರಾಮದಲ್ಲಿ ಒಂದು ಮಹಾವೀರನ ಜಿನಶಿಲ್ಪವಿದ್ದು ತುಟಿತಗೊಂಡಿದೆ. ಗ್ರಾಮದಜನರು ಅದನ್ನು ಗಂಗಾಳದಪ್ಪನೆಂದು ಕರೆಯುತ್ತಾರೆ. ಅಲ್ಲದೆ *ಗಂಗಾಳ ನುಂಗಿದ* ಯೆಂದು ಎಲ್ಲರೂ ಒಂದೊಂದು ಕಲ್ಲನ್ನು ಅದಕ್ಕೆ ಒಗೆಯುತ್ತಾರೆ. ಹೀಗಾಗಿ ಕಲ್ಲಿನ ಗುಂಪೆ ನಿರ್ಮಾಣವಾಗಿದೆ. ಸ್ವತಂತ್ರವಾಗಿ ನಿಂತ ಶಿಲ್ಪವನ್ನು ತಟ್ಟಿದರೆ ಟನ್-ಟನ್ ಎಂಬ ಶಬ್ದ ಬರುವದರಿಂದ ಜನರು 'ಗಂಗಾಳ ನುಂಗಿದೆ'ಯೆಂದು ಮೋಜಿನಲ್ಲಿ ಕಲ್ಲನ್ನು ಒಗೆದು ಅದರಿಂದ ಬರುವ ಶಬ್ದದಿಂದ ಮೋಜು ಪಡುತ್ತಾರೆ. ಶಿಲ್ಪವು ಗ್ರಾಮದ ಹಿಂದಿನ ಹಾಲು ಮಣ್ಣಿನಲ್ಲಿದ್ದು ಕಪ್ಪುಕಲ್ಲಿನಲ್ಲಿ ಕೆತ್ತಲ್ಪಟ್ಟಿದೆ. ಸಿಂಹಪೀಠದ ಮೇಲಿರುವ ಶಿಲ್ಪ ೩ ಅಡಿ ಎತ್ತರವಾಗಿದೆ. ಶಿಲ್ಪವು ಪೂರ್ತಿ ಭಗ್ನಗೊಂಡಿದ್ದು ಸ್ವಲ್ಪ ಭಾಗ ಒಡೆದುಹೋಗಿದೆ.



ಡವಳಾರ ಗ್ರಾಮದ ಹಾಳಿನಲ್ಲಿರುವ ಭಗ್ನಗೊಂಡ ಮಹಾವೀರನ ಶಿಲ್ಪ



ಯರಗಲ್ಲ ಗ್ರಾಮದ ಜೈನಬಸದಿಯ ನವರಂಗ ಮಂಟಪದ ಜೈನ ಶಿಲ್ಪಗಳು-ಪದ್ಮನಿಧಿ ಯಕ್ಷ, ಪಾರ್ಶ್ವನಾಥ ಇತರ ಶಿಲ್ಪಗಳು

ಯರಗಲ್ಲ ಗ್ರಾಮದ ಜೈನಬಸದಿಯ ಗರ್ಭಗೃಹದ ಮಹಾವೀರ ಶಿಲ್ಪ ಮತ್ತು ದ್ವಾರದ ಚಾಮರಧಾರಿ ಶಿಲ್ಪಗಳು



ಚಟ್ಟರಕಿ ಗ್ರಾಮದ ಲಕ್ಷ್ಮೀಗುಡಿಯ ಕಟ್ಟೆಯ ಮೇಲಿರುವ ಮಹಾವೀರನ ಧ್ಯಾನಭಂಗಿ ಶಿಲ್ಪ

೬. ಇತರ ಗ್ರಾಮಗಳು

ಮೇಲಿನ ಗ್ರಾಮಗಳಲ್ಲದೆ ಸಿಂದಗಿ ತಾಲೂಕಿನ ಇನ್ನೂ ಅನೇಕ ಗ್ರಾಮಗಳಲ್ಲಿ ಜೈನ ಶಿಲ್ಪಾವಶೇಷಗಳು ಕಂಡುಬರುತ್ತವೆ. ಜಾಲವಾದ ಗ್ರಾಮದ ಶಂಕರಲಿಂಗ ಗುಡಿಯ ಹಿಂದುಗಡೆ ಅಧಿಷ್ಠಾನಕ್ಕೆ ಅನಿಸಿ ನಿಲ್ಲಿಸಲಾದ ಪಾರ್ಶ್ವನಾಥನ ಶಿಲ್ಪ ೩ಅಡಿ ಎತ್ತರವಾಗಿದ್ದು, ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿಸಿದ್ದಾಗಿದೆ. ಆಲಮೇಲ ಗ್ರಾಮದ ವಿರೇಶ (ವಿಶ್ವನಾಥ)ನ ಗುಡಿಯ ಮುಂದೆ ಒಂದು ಮಹಾವೀರನ ಶಿಲ್ಪವಿದೆ. ಮೂರು ಅಡಿ ಎತ್ತರದ ಸಿಂಹ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಂತೆ ಚಿತ್ರಿಸಲಾಗಿದೆ. ಪಕ್ಕದಲ್ಲಿ ಚಾಮರ ಶಿಲ್ಪಗಳಿವೆ. *ಸಿಂದಗಿಯ ಲಕ್ಷವ್ವನ* ಗುಡಿಯ ಮುಂದೆ ಒಂದು ಮಹಾವೀರನ ಶಿಲ್ಪವಿದ್ದು, ಅದಕ್ಕೆ ಎಣ್ಣೆಯನ್ನು ಬಳೆದಿರುವದರಿಂದ ಗುರುತಿಸುವದು ಕಷ್ಟ ಸಾಧ್ಯವಾಗಿದೆ.

ಸಿಂದಗಿಯ ಒಂದು ಶಾಸನದಲ್ಲಿ ಹಳ್ಳದ ಆಚೆಯ ಬಸದಿಯ ಉಲ್ಲೇಖ ಬರುತ್ತಿದೆಯಾದರೂ ಇಲ್ಲಿಯ ಒಂದು ಶಿಲ್ಪವನ್ನು ಹೊರತುಪಡಿಸಿದರೇ ಯಾವುದೇ ಜೈನಶಿಲ್ಪ ಬಸದಿ ಅಲ್ಲಿ ಕಂಡು ಬರುವುದಿಲ್ಲ.

ಬಳಗಾನೂರ ಗ್ರಾಮದ ಬಸವಣ್ಣನ ಕಟ್ಟೆಯಲ್ಲಿ ಒಂದಡಿ ಪಾರ್ಶ್ವನಾಥನ ಶಿಲ್ಪ ಕಂಡುಬಂದರೆ, ಗೋಲಗೇರಿಯಲ್ಲಿ ಚಿಕ್ಕ ಶಿಲ್ಪದ ಪಾದವಷ್ಟೇ ಇರುವ ಕಲ್ಲು ಹನುಮನ ಗುಡಿ ಹತ್ತಿರ ಬಿದ್ದಿದೆ. *ಯಂಕಂಚಿ ಗ್ರಾಮದ* ಹನುಮನ ಗುಡಿಯ ಮುಂಭಾಗದಲ್ಲಿ ಎರಡು ಮಹಾವೀರನ ಶಿಲ್ಪಗಳು ಕಂಡು ಬರುತ್ತವೆ. ಅದೇ ರೀತಿಯಾಗಿ ಚಟ್ಟರಕಿಯ ಲಕ್ಷ್ಮೀಗುಡಿ ಕಟ್ಟೆಯಲ್ಲಿ ಗೋಡೆಗೆ ಅನಿಸಿ ಮಹಾವೀರನ ಶಿಲ್ಪವನ್ನು ಇಡಲಾಗಿದ್ದು ಶಿಲ್ಪವು ಪದ್ಮಾಸನದಲ್ಲಿ ಕುಳಿತಂತೆ ಎರಡು ಅಡಿ ಎತ್ತರದ ಕಪ್ಪು ಕಲ್ಲಿನಲ್ಲಿ ಕಟೆಯಲಾಗಿದೆ. ಚಿಕ್ಕರೂಗಿಯ ಗ್ರಾಮದ ಹಾಳು ದೇಗುಲದ ಮಂಟಪದಲ್ಲಿ ಶಾಸನೋಕ್ತ ನಿಶಿಧಿಗೆ ಕಲ್ಲು ಕಂಡುಬರುತ್ತದೆ. ಅದರಲ್ಲಿ ಯತಿಯೊಬ್ಬನ ಉಲ್ಲೇಖ ಬರುತ್ತದೆ.*೬

ಸಮೀಕ್ಷೆ

ಸಿಂದಗಿ ತಾಲೂಕಿನ ಮೇಲಿನ ಗ್ರಾಮಗಳಲ್ಲಿ ಜೈನ ಶಿಲ್ಪ - ಸ್ಮಾರಕಗಳು ಕಂಡುಬಂದಿವೆ. ಅವುಗಳಲ್ಲಿ ಕೆಲವು ಭಗ್ನ ಗೊಂಡಿದ್ದರೆ, ಕೆಲವು ಪೂರ್ಣ ಪ್ರಮಾಣದಲ್ಲಿ ಕಂಡುಬರುತ್ತವೆ. ಕೆಲವು ಗ್ರಾಮಗಳಲ್ಲಿ ಜೈನರಿದ್ದರೆ ಕೆಲವು ಗ್ರಾಮಗಳಲ್ಲಿ ಜೈನರಿಲ್ಲ, ಕೆಲವು ಅವರಿಂದ ರಕ್ಷಿಸಲ್ಪಟ್ಟರೆ ಕೆಲವು ಎಲ್ಲ ಜಾತಿಯ ಜನರ ಅವಕೃಪೆಗೆ ಒಳಗಾಗಿವೆ. ಯರಗಲ ಗ್ರಾಮವನ್ನು ಹೊರತು ಪಡಿಸಿದರೆ ಇನ್ನುಳಿದ ಗ್ರಾಮಗಳ ಜೈನ ಶಿಲ್ಪ ಸ್ಮಾರಕಗಳು ಅನಾಥವಾಗಿ ಚದುರಿದಂತೆ ಕಂಡುಬರುತ್ತವೆ. ಬೇರೆಯವರ ಅವಕೃಪೆಗೆ ಒಳಗಾಗಿ ಮನೆಯ ದೇವಾಲಯದ ಗೋಡೆ, ಬಾವಿ ಗೋಡೆಯಲ್ಲಿ ಕಂಡುಬರುತ್ತವೆ. ಈ ಎಲ್ಲಾ ಆಧಾರದಿಂದ ತಿಳಿದು ಬರುವುದೇನೆಂದರೆ ಜೈನಧರ್ಮ ಪ್ರಾಚೀನ ಕಾಲದಲ್ಲಿ ಈ ಪ್ರದೇಶದಲ್ಲಿ ತನ್ನ ಪ್ರಭಾವ ಬಿರಿತ್ತೆಂದು ಸ್ಪಷ್ಟವಾಗುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್.**, ಸಂಪುಟ-೨೦, ಕ್ರಿ. ಶ. ೧೨೪೪, ಕಲಕೇರಿ (ಸಿಂದಗಿ - ತಾ).

೨. ಅದೇ, ನಂ - ೨೧೬, ಕ್ರಿ. ಶ. ೧೨೫೦.

೩. ಅದೇ, ನಂ - ೨೮೬, ಕ್ರಿ. ಶ. ೧೦೬೮, ಚಾಂದಕವಟೆ (ಸಿಂದಗಿ ತಾ).

೪. ಅದೇ, ನಂ - ೩೧೮, ಕ್ರಿ.ಶ. ೧೨ನೇ ಶತಮಾನದ ದೇವೂರ.

೫. **ವಿಜಾಪುರ ಜಿಲ್ಲೆಯ ಶಾಸನಸೂಚಿ.**, (೧೯೭೬), ಧಾರವಾಡ, ಪುಟ-೧೪ ಯರಗಲ್ಲಿ.

೬. **ವಿಜಾಪುರ ಜಿಲ್ಲೆಯ ಶಾಸನಸೂಚಿ.**, ಪುಟ-೧೪, ರೂಗಿ.

೭. **ಭಾರತದ ಗ್ಯಾಸೆಟಿಯರ್.**, (೧೯೯೯), "ಬಿಜಾಪೂರ ಜಿಲ್ಲೆ", ಕರ್ನಾಟಕ ರಾಜ್ಯ .

೮. ಕೊಪ್ಪಾ ಎಸ್. ಕೆ., (೧೯೯೦), **ತರ್ದವಾಡಿ ನಾಡು ಒಂದು ಅಧ್ಯಯನ**, ಕ.ವಿ.ವಿ. ಧಾರವಾಡ

೯. ಕಲಬುರ್ಗಿ ಎಂ. ಎಂ., (೧೯೮೦), **ಸಮಾಧಿ ಬಲಿದಾನ – ವೀರಮರಣ ಸ್ಮಾರಕಗಳು**, ಬೆಂಗಳೂರು.

ಡಾ॥ ಶ್ರೀಮತಿ ಸುಷ್ಮಾ ಅರೂರ್*

# ಪೇಶ್ವೆಕಾಲೀನ (ಉತ್ತರ ಕರ್ನಾಟಕ) ದೇವಾಲಯಗಳ ಆಡಳಿತ

ಉತ್ತರ ಕರ್ನಾಟಕವು ಮರಾಠರ ಆಳ್ವಿಕೆಯಲ್ಲಿದ್ದು, ರಾಮದುರ್ಗ ಹಾಗೂ ನರಗುಂದ ಸಂಸ್ಥಾನಗಳು ಅವರ ಆಡಳಿತದ ಭಾಗಗಳಾಗಿದ್ದವು. ಈ ಎರಡೂ ಸಂಸ್ಥಾನಗಳು ಭಾವೆ ಮನೆತನದವರ ಒಡೆತನದಲ್ಲಿದ್ದು, ಇವರು ಪೇಶ್ವೆಗಳ ಆಧಿಪತ್ಯದಲ್ಲಿದ್ದರು. ರಾಮದುರ್ಗ ಅರಸರ ದಫ್ತರ್ ಹಾಗೂ ನರಗುಂದ ಪೂಜಾರಿ ದಫ್ತರ್ ಈ ಎರಡೂ ಆಕರಗಳು ೧೮ನೇ ಶತಮಾನದ ಉತ್ತರಾರ್ಧ ಹಾಗೂ ೧೯ನೇ ಶತಮಾನದ ಪೂರ್ವಾರ್ಧಕ್ಕೆ ಸೇರಿದ್ದು, ಈ ಸಂಸ್ಥಾನಗಳ ಆರ್ಥಿಕ ಮತ್ತು ಸಾಮಾಜಿಕ ಜೀವನದ ಬಗ್ಗೆ ಸಾಕಷ್ಟು ಬೆಳಕು ಚೆಲ್ಲುತ್ತವೆ. ಈ ಕಾಗದಪತ್ರಗಳು ಮೋಡಿಲಿಪಿಯಲ್ಲಿದ್ದು ಇವುಗಳನ್ನು ಡಾ॥ ಚಿಟ್ನಿಸರು ಮರಾಠಿ ಬಾಲಬೋಧದಲ್ಲಿ ಪರಿವರ್ತಿಸಿದ್ದಾರೆ. ನರಗುಂದ ಪುಜಾರಿದಫ್ತರಿನಲ್ಲಿರುವ ಕಾಗದಪತ್ರಗಳು: ನರಗುಂದದ ಪೂಜಾರಿ ಮನೆತನದ ಬಗ್ಗೆ ಹಾಗು ರಾಮತೀರ್ಥದಲ್ಲಿಯ ದೀಕ್ಷಿತ ಮನೆತನಕ್ಕೆ ಮಾಡಿದ ಭೂದಾನದ ಬಗ್ಗೆ ಹೇಳುತ್ತವೆ. ಪೂಜಾರಿ ಮನೆತನದವರು ನರಗುಂದದ ವೆಂಕಟೇಶ್ವರ ದೇವಸ್ಥಾನದ ಪಾರುಪತ್ಯೆಗಾರರಾಗಿದ್ದರು. ಮತ್ತು ದೀಕ್ಷಿತ ಮನೆತನದವರು ರಾಮತೀರ್ಥದಲ್ಲಿರುವ ರಾಮೇಶ್ವರ ದೇವಸ್ಥಾನದ ವ್ಯವಸ್ಥಾಪಕರಾಗಿದ್ದರು. ಈ ಪ್ರಬಂಧದಲ್ಲಿ ಇವೆರಡು ದೇವಸ್ಥಾನಗಳನ್ನು ಪ್ರಾತಿನಿಧಿಕವಾಗಿ ಪರಿಶೀಲಿಸುವ ಪ್ರಯತ್ನ ಮಾಡಲಾಗಿದೆ.

ಬೊಂಬಾಯಿ ಗ್ಯಾಸೆಟಿಯರ್ ಪ್ರಕಾರ, ನರಗುಂದ ಸಂಸ್ಥಾನದ ಜಾಗೀರದಾರರಾದ ರಾಮರಾವಭಾವೆಯವರು ೧೭೨೦ ರಲ್ಲಿ, ೧ ಲಕ್ಷ ಖರ್ಚು ಮಾಡಿ ನರಗುಂದದಲ್ಲಿ ವೆಂಕಟೇಶ್ವರ ದೇವಾಲಯವನ್ನು ಕಟ್ಟಿಸಿದರು. ಈ ದೇವಸ್ಥಾನದ ವಾರ್ಷಿಕ ಜಮೀನಿನ ಉತ್ಪನ್ನ ರೂ. ೨೨೧೦ ಇದ್ದು ನಗದು ಉತ್ಪನ್ನ ರೂ. ೧೩೨೦ ಇದೆ ಎಂದು ಹೇಳುತ್ತದೆ. ಆದರೆ, ರಾಮದುರ್ಗ ಅರಸರ ದಫ್ತರಿನ ೨೫೬ನೇ ಅಂಕೆಯ ಧರ್ಮಪತ್ರದ ಪ್ರಕಾರ ಭಾವೆರಾಮರಾಯರು ೧೭೧೬ರಲ್ಲಿಯೇ ವೆಂಕಟೇಶ್ವರ ದೇವಸ್ಥಾನಕ್ಕೆ ಭೂದಾನ ಮಾಡಿದ ಪುರಾವೆ ಇದೆ. ಹೀಗಾಗಿ ಈ ದೇವಾಲಯವನ್ನು ೪ ವರ್ಷ ಮುಂಚಿತವಾಗಿ ಕಟ್ಟಿಸಿರಬೇಕು. ಪೂಜಾರಿ ಮನೆತನದವರು ಈ ದೇವಸ್ಥಾನದ ಮುಖ್ಯ ಪುರೋಹಿತರೆಂದು ನೇಮಿಸಲ್ಪಟ್ಟಿದ್ದರು. ೧೭೩೮ರ ಭೂದಾನಪತ್ರವು, ಈವರಿಗೆ ೧ ಮಾರು ಅಂದರೆ, ೩೬ ಭಿಗಾ ಜಮೀನನ್ನು ಕೊಡಮಾಡಿತ್ತು ಎಂದು ಹೇಳುತ್ತದೆ. ಸಾಕಷ್ಟು ಪತ್ರಗಳು ಈ ಮನೆತನಕ್ಕೆ ಮಾಡಿದ ಭೂದಾಸದ ಬಗ್ಗೆ ಮಾಹಿತಿ ಕೊಡುತ್ತವೆ. ಪರಸಗಡ ತರ್ಫ್ ನಲ್ಲಿಯ ಬಸರಗಿ, ಅಥಣಿ ಕಸಬಾ ಹಾಗನೂರುನಲ್ಲಿಯ ಅಡಹಳ್ಳಿ, ಪಂಚಬಾಣ ಪರಗಣದಲ್ಲಿ ೧೮ ಮಾರು ಜಮೀನು ಮೌಜೆ ಆಕರಗೋಲದ ಪರಗಣ ನರಗುಂದದಲ್ಲಿ ೪ ಮಾರು ಜಮೀನನ್ನು ದೇವಸ್ಥಾನಕ್ಕೆ ಕೊಡಲಾಯಿತು ಎಂದಿದೆ.

ನರಗುಂದ ಹಾಗೂ ರಾಮದುರ್ಗ ದಫ್ತರಿನಲ್ಲಿರುವ ಭೂದಾನ, ದತ್ತಿಗಳಿಗೆ ಸಂಬಂಧಪಟ್ಟ ಕಾಗದಪತ್ರಗಳು ಬಹುತೇಕವಾಗಿ ಆ ಕಾಲೀನ ಸಾಮಾಜಿಕ ಮತ್ತು ಆರ್ಥಿಕ ಜೀವನದ ಬಗ್ಗೆ ಮಾಹಿತಿ ಕೊಡುತ್ತವೆ. ವಿಶೇಷವಾಗಿ ದೇವಸ್ಥಾನದ ಆಡಳಿತದ ಮೇಲೆ ಬೆಳಕು ಚೆಲ್ಲುತ್ತವೆ. ಪುಜಾರಿ ದಫ್ತರದಲ್ಲಿ ಸುಮಾರು ೪೦೦ಕ್ಕೂ ಹೆಚ್ಚು ಕಾಗದಪತ್ರಗಳು ಇವೆ. ಆಗಿನ ಪೂಜಾರಿಯು ಬರಿ ಧಾರ್ಮಿಕ ವೃತ್ತಿಯನ್ನಷ್ಟೆ ಮಾಡದೇ ಆ ಊರಿನ ಸಾಮಾಜಿಕ ಕ್ಷೇತ್ರದಲ್ಲಿ ಜವಾಬ್ದಾರಿಯುತ ಕಾರ್ಯನಿರ್ವಹಣೆ ಮಾಡುತ್ತಿದ್ದರು ಎನ್ನುವುದಕ್ಕೆ ಪುರಾವೆಗಳಿವೆ. ಇವರು ಸ್ಥಳೀಯ ಆಡಳಿತಗಾರರ ಪ್ರತಿನಿಧಿಯಾಗಿರಬೇಕು. ಇವನ ಮೇಲಿನಧಿಕಾರಿಗಳು, ಮೌಜೆಯ ಪಾಟೀಲ, ಕುಲಕರ್ಣಿ, ಮುಜುಮದಾರ, ಇಲ್ಲವೆ ನರಗುಂದ ಪರಗಣಾದ ಕಾಮವಿಸದಾರನಾಗಿದ್ದನು. ಈ ಪತ್ರಗಳು ಮುಖ್ಯವಾಗಿ ದೇವಸ್ಥಾನದ ಪೂಜಾರಿಗಳಿಗೆ ಮಾಡಿದ ದಾನಪತ್ರಗಳಾದ್ದರಿಂದ ಆ ಮನೆತನದವರ ವಂಶಾವಳಿಯ ಕಲ್ಪನೆ ಬರುತ್ತದೆ. ಜಾಗೀರದಾರರಿಂದ ಬಹಳಷ್ಟು ದಾನದತ್ತಿಗಳು ಸಿಕ್ಕಿರುವ ಕಾರಣ ಇವರ ಆರ್ಥಿಕ ಪರಿಸ್ಥಿತಿ ಚೆನ್ನಾಗಿ ಇದ್ದು, ಆ ಹಳ್ಳಿಯ ಅಥವಾ ಊರಿನ ಜನರ ಮೇಲೆ ಇವರ ಪ್ರಭಾವ ಸಾಕಷ್ಟು ಇದ್ದಿರಬೇಕು. ಸುಮಾರು ಪತ್ರಗಳು ಈ ಮಾತನ್ನು ಸ್ಪಷ್ಟೀಕರಿಸುತ್ತವೆ. ಇವರು ಜನರಿಗೆ ಸಾಲ ಕೊಟ್ಟಿರುವ ಉದಾಹರಣೆಗಳು ಸಾಕಷ್ಟಿವೆ. ಅವರು ಕನ್ನಡದ ಬಸವನಗೌಡನು ಇರಬಹುದು; ಇಲ್ಲವೆ ಮರಾಠರ ತಮ್ಮಣ ಸೋನಾರ ಕೂಡ ಇರಬಹುದು. ಹಾಗೂ ದೇವಸ್ಥಾನಕ್ಕೆ ಸಂಬಂಧಿಸಿದ ಬಾಜಂತ್ರಿಯವರು ಇಲ್ಲವೆ ದೇವಸಾನಿಯೂ ಇರಬಹುದು. ಸಾಲ ತೆಗೆದುಕೊಂಡವರು ಸುಗ್ಗಿ ಆದ ಕೂಡಲೆ ಸಾಲ ತೀರಿಸುವ ಭರವಸೆಯನ್ನು ಪತ್ರಗಳ ಮುಖಾಂತರ

* ಎ/೪೪, ಡೈಮಂಡ್ ಡಿಸ್ಟ್ರಿಕ್ಟ್ , ಏರ್ ಪೋರ್ಟ್ ರೋಡ್, ಬೆಂಗಳೂರು - ೫೬೦ ೦೦೮

ತಿಳಿಸುತ್ತಾರೆ. ಪೂಜಾರಿ ದಫ್ತರಿನ ಒಂದು ಪತ್ರದಲ್ಲಿ ಬಂಗಾರಿ, ದೇವಸಾನಿ, ಚಂಗೋಜಿ, ಫಣೆಯಪ್ಪಲೋಹಾರ, ಕರಿಯಣ್ಣ ಮುಂತಾದವರು ವೆಂಕಟೇಶ್ವರ ದೇವಸ್ಥಾನದ ಮುಖ್ಯ ಪುಜಾರಿಗಳಾದ ತಿಂಮಣಭಟ್ಟರಿಗೆ, ಕಿರುಕುಳ ಕೊಡುವ ಅಧಿಕಾರಿಗಳನ್ನು ತೆಗೆದು ಹಾಕಲು ಮನವಿ ಮಾಡಿಕೊಂಡ ವಿವರಗಳಿವೆ. ಪೂಜಾರಿಗಳಿಗೆ ತೆರಿಗೆ ವಸೂಲಿನ ಜವಾಬ್ದಾರಿ ಕೂಡ ಇದ್ದಿರಬೇಕು. ಹೀಗೆ ಪೂಜಾರಿಯ ಸಾಮಾಜಿಕ ಜವಾಬ್ದಾರಿಗಳು ಹೆಚ್ಚು ಆಗಿರುವ ಲಕ್ಷಣಗಳು ಕಾಣುತ್ತವೆ. ತನ್ನ ಜನರ ಸಮಸ್ಯೆಗಳ ಪರಿಹಾರ ಮಾಡುವ ಹೊಣೆ ಇವನ ಮೇಲೆ ಇರಬೇಕು. ೧೦೫೫ ಅಂಕೆಯ ನರಗುಂದ ದಫ್ತರಿನ ಪತ್ರ ಈ ಹೇಳಿಕೆಗೆ ಸಾಕ್ಷಿ. ದೇವಸ್ಥಾನದ ಕರ್ಮಚಾರಿಗಳು ದೈನಂದಿನ ದೇವಾಲಯದ ಕಾರ್ಯನಿರ್ವಹಣೆಯಲ್ಲಿ ತೊಂದರೆಗಳು ಬಂದಲ್ಲಿ ಪೂಜಾರಿಗಳಲ್ಲಿ ದೂರಿಕೊಳ್ಳುವ ಅಧಿಕಾರ ಇರುತ್ತಿತ್ತು. ದೇವಸ್ಥಾನದ ಕರ್ಮಚಾರಿಗಳ ಹೆಸರುಗಳನ್ನು ಒಂದು ಪತ್ರದಲ್ಲಿ ನಮೂದಿಸಲಾಗಿದೆ. ಉದಾಹರಣೆಗೆ, ತಿಮಂಣಭಟಪೂಜಾರಿ, ವಗಣಗೌಡ, ಕಲ್ಗಣ ಗೌಡಪಾಟೀಲ, ಪರಿಚಾರಕರು, ಪಾಲಕಿ ಹೊರುವವರು, ದೀವಟಿಗೆಯವರು, ನಂದಾದೀಪದವರು ಕಲಾವಂತಿಣಿಯರು ಹಾಗು ಬಾಜಂತ್ರಿಯವರು ಇತ್ಯಾದಿ. ಇನ್ನು ಕೆಲವು ಪತ್ರಗಳು ದೇವಸ್ಥಾನದ ಜಮಾಖರ್ಚಿನ ವಿವರಣೆ ಕೊಡುತ್ತವೆ. ಉದಾ: ಪೂಜೆಯ ಖರ್ಚು, ಅಭಿಷೇಖದಖರ್ಚು, ಭೋಜನದ, ಹಾಗು ಇತರ ಕರ್ಮಚಾರರಿಗೆ ಕೊಡುವ ಶುಲ್ಕ ಇತ್ಯಾದಿ.

ಈ ಕಾಗದ ಪತ್ರಗಳು ಹೆಚ್ಚಾಗಿ ಭೂದಾನಗಳಾದ್ದರಿಂದ, ಆ ಕಾಲೀನ ಭೂಮಿ ಅಳತೆಯ ಬಗ್ಗೆ ಮಾಹಿತಿ ಕೊಡುತ್ತವೆ. ಜಮೀನನ್ನು **ಮಾರು** ಅನ್ನುವ ಪರಿಮಾಣದಿಂದ ಅಳತೆ ಮಾಡುತ್ತಿದ್ದರು. ಒಂದು ಮಾರು ಎಂದರೆ ೩.೬ ಭಿಗಾ (ನಪೂದ ೨೫೮). ಮಾರು - ಈ ಅಳತೆಯನ್ನು ವಿಜಯನಗರದವರು ಕೂಡ ಉಪಯೋಗಿಸುತ್ತಿದ್ದರು. ***ಕುರ್ಗಿ, ಚಾವರ*** ಮತ್ತು ***ಪಟ್ಟಿ*** ಇವು ಕೂಡ ಬೇರೆ ತರಹದ ಅಳತೆಯ ವಿಧಾನಗಳಾಗಿರಬೇಕು. ವಿವಿಧ ತರಹದ ಜಮೀನುಗಳ ವಿವರಣೆ ಇಲ್ಲಿ ಬರುತ್ತವೆ. ***ರಗಡಾ*** ಜಮೀನು, ಇದು ಕಪ್ಪು ಮಣ್ಣಿನದು, ಹಾಗೂ ***ಮಸಬ*** ಕೆಂಪು ಮಣ್ಣಿನದು. ***ಮೆಲಗಲಿ, ನಾಡಿಸೆಟಿ, ಬಾಗ*** ಹಾಗು ***ಆಮರಾಯಿ*** ಇವು ಕೂಡ ಜಮೀನಿನ ಮಾದರಿಗಳು. ಇದೇ ತರಹ, ಬೇರೆ ಬೇರೆ ಕರಗಳ ಬಗ್ಗೆ ಕೂಡ ವಿವರಣೆ ಇದರಲ್ಲಿವೆ. ***ಮೊಹತರ್ಫಾಕರ*** ಇದು ಕಸಬುದಾರರ ಸರಕುಗಳ ಮೇಲೆ ನಿರ್ಬಂಧಿಸಿದ ಕರ. ***ಇಸ್ತವಾ*** ಇದು ವರ್ಧಿಸುವ ಜಮೀನು ಕರ ಇತ್ಯಾದಿ. ಕೆಲ ಪತ್ರಗಳು ಜಮೀನನನ್ನು ಲಾವಣೆಗೆ ಕೊಡುವ ಪದ್ಧತಿಯನ್ನು, ***ಕೌಲ*** ಹಾಗೂ, ಗೇಣಿಪದ್ಧತಿ ಕುರಿತು ಹೇಳುತ್ತವೆ. ಅದೇ ತರಹ ಮರಾಠರ ಆಡಳಿತದ ವಿವಿಧ ಭಾಗಗಳ ಬಗ್ಗೆ ಕೂಡ ಸಾಕಷ್ಟು ಮಾಹಿತಿ ಸಿಗುತ್ತದೆ. ನರಗುಂದ ಸುಬಾ, ಕರ್ನಾಟಕ ಪ್ರಾಂತ, ಕಸಬಾ ಅಥಣಿ, ಹಾಗೂ ಕೊನೆಯ ವಿಭಾಗಗಳಾದ ಪೇಠ, ಅಂದರೆ ಪಟ್ಟಣ, ಹಿಸಾರ ಇದು ಕೋಟೆ ಪ್ರದೇಶ ಇತ್ಯಾದಿ ವಿಭಾಗ ಗಳಿದ್ದುವು. ಮರಾಠರಿಗೆ ವಿಠೋಬ, ಖಾಂಡೋಬ, ಮಹಾಲಕ್ಷ್ಮಿ ಇವರು ಮಹತ್ವದ ದೇವರುಗಳು, ಆದರೂ ಸಹ ಸ್ಥಳೀಯ ಜನರಿಗೋಸ್ಕರ, ನರಗುಂದದಲ್ಲಿ ವೆಂಕಟೇಶ್ವರ ದೇವಾಲಯವನ್ನು ಕಟ್ಟಿಸಿದರು. ರಾಮತೀರ್ಥದ ರಾಮೇಶ್ವರ ದೇವಾಲಯವು ಕಲ್ಯಾಣಿಚಾಳುಕ್ಯರ ಕಾಲದಾಗಿದ್ದು, ಮರಾಠರು ಚೆನ್ನಾಗಿ ದಾನದತ್ತಿಗಳನ್ನು ಕೊಟ್ಟು, ದೀಕ್ಷಿತ ಮನೆತನದ ಪೌರೋಹಿತ್ಯದಲ್ಲಿ ಇಟ್ಟರು. ಈ ಪೂಜಾರಿಗಳು ಧಾರ್ಮಿಕರೂಪದಲ್ಲಲ್ಲದೇ, ಸಾಮಾಜಿಕ ಕ್ಷೇತ್ರದಲ್ಲಿ ಕೂಡ ತಮ್ಮ ಊರಿನ ಅಥವಾ ದೇವಸ್ಥಾನದ ಸಿಬ್ಬಂದಿಗೆ ಸೇರಿದ ಹಾಗೇ ಅವರ ಯೋಗಕ್ಷೇಮದ ಜವಾಬ್ದಾರಿ ಹೊತ್ತು, ಆರ್ಥಿಕವಾಗಿ, ಕಷ್ಟದ ಕಾಲದಲ್ಲಿ ಜನರಿಗೆ ಸಾಲಕೊಟ್ಟು, ರೈತರ ಹಾಗು ಮೇಲಿನ ಅಧಿಕಾರಿಯ ನಡುವಿನ ಕೊಂಡಿಯಾಗಿ, ಪುಢಾರಿಯಾಗಿ ಕಾರ್ಯನಿರ್ವಹಣೆ ಮಾಡುತ್ತಿದ್ದರು.

ಮರಾಠರ ಆಡಳಿತಕ್ಕೆ ಒಳಗಾದ ಉತ್ತರ ಕರ್ನಾಟಕದ ಐತಿಹಾಸಿಕ ಸಂಶೋಧನಕ್ಕೆ ಬೇಕಾಗುವ ಆಕರಗಳ ಅಭಾವವನ್ನು ಈ ಮರಾಠಿ ಆಕರಗಳು ತುಂಬಿಕೊಂಡುತ್ತವೆ. ೧೮-೧೯ನೇ ಶತಮಾನದ ಉ. ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿಯ ಸಂಶೋಧನಕ್ಕೆ ಇವು ಸಾಕಷ್ಟು ಅವಕಾಶಗಳನ್ನು ಕಲ್ಪಿಸಿ ಕೊಡುತ್ತವೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಬೊಂಬಾಯಿ ಪ್ರೆಸಿಡೆನ್ಸಿ ಗ್ಯಾಸೆಟಿಯರ್.**, (೧೮೮೪), ಸಂಪುಟ ೨೨, ಅಧ್ಯಾಯ - ೧೪, ಕರ್ನಾಟಕ ಧಾರವಾಡ ಡಿಸ್ಟ್ರಿಕ್ಟ, ಪು. ೭೭೭ - ೭೮.

೨. **ಕರ್ನಾಟಕ ರಾಜ್ಯ ಗ್ಯಾಸೆಟಿಯರ್.**, (೧೯೮೭), ಸೂರ್ಯನಾಥಕಾಮತ್, (ಸಂ), ಬೆಂಗಳೂರು, ಪು. ೯೨೯

ಪ್ರೊ॥ ಸ್ಮಿತಾ ಸುರೇಬಾನಕರ*

# ಚಾಪಗಾಂವ ಮತ್ತು ಕರಲಗಾ ಗ್ರಾಮಗಳ ಪ್ರಾಚ್ಯಾವಶೇಷಗಳು

ಬೆಳಗಾವಿ, ಇತಿಹಾಸದುದ್ದಕ್ಕೂ ಸಾಂಸ್ಕೃತಿಕ ಮತ್ತು ಐತಿಹಾಸಿಕ ಮಹತ್ವವನ್ನು ಪಡೆದ ಪ್ರದೇಶ. ಶಾತವಾಹನರ ಕಾಲದಿಂದ ಮೊದಲುಗೊಂಡು ವಿಜಯನಗರ, ಬಹುಮನಿ, ಆದಿಲಶಾಹಿ ಅರಸು ಮನೆತನದವರೆಗೆ, ಹಾಗೇಯೇ ಮುಂದುವರೆದು ಮರಾಠಾ ಪೇಶ್ವೆಯವರ ಕಾಲದವರೆಗಿನ ಇತಿಹಾಸ ಈ ಪ್ರದೇಶದಲ್ಲಿ ಹಾಸುಹೊಕ್ಕಾಗಿದೆ. ಇನ್ನು ಬೆಳಗಾವಿಜಿಲ್ಲೆಯ ಖಾನಾಪುರ ತಾಲೂಕಿನ **ಹಲಸಿ**, 'ಶ್ರೀವಿಜಯ ಪಲಾಸಿಕಾ' ಮತ್ತು 'ಫಲಸಿಗೆ ಪನ್ನಿಚ್ಛಾಸಿರ' ಎಂದು ಶಾಸನೋಲ್ಲೇಖಿತವಾಗಿ, ಕರ್ನಾಟಕದಲ್ಲಿ ಪ್ರಸಿದ್ಧಿಗೊಂಡ ಆದಿಕದಂಬರ ಉಪರಾಜಧಾನಿ. ಮುಂದೆ ಗೋವೆ ಕದಂಬರ ಆಳ್ವಿಕಾವಧಿಯಲ್ಲಿ ಹಲಸಿ ೧೨೦೦೦ ಎಂದು ಖ್ಯಾತಿವೆತ್ತ ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಪ್ರಮುಖ ಸ್ಥಾನ ಪಡೆದ ಪ್ರದೇಶ. ಆದ್ದರಿಂದ ಬೆಳಗಾವಿ ಪ್ರದೇಶಕ್ಕೆ ಕನಿಷ್ಠ ಕ್ರಿ. ಶ. ೧-೨ನೆಯ ಶತಮಾನದಿಂದ ನಿರಂತರವಾದ ಉಜ್ವಲ ಸಾಂಸ್ಕೃತಿಕ ಪರಂಪರೆ ಇದೆ.

ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನಲ್ಲಿ ನಂದಗಡ ಸಮೀಪ ಪೂರ್ವಕ್ಕೆ ಸುಮಾರು ೫ ಕಿ.ಮೀ. ಅಂತರದಲ್ಲಿರುವ ಕರಲಗಾ ಮತ್ತು ಅಲ್ಲಿಂದ ಮುಂದೆ ೭-೮ ಕಿ.ಮೀ. ಅಂತರದಲ್ಲಿ ಚಾಪಗಾಂವ ಎಂಬ ಎರಡು ಗ್ರಾಮಗಳಿವೆ. ಈ ಗ್ರಾಮಗಳಲ್ಲಿ ಕ್ಷೇತ್ರಕಾರ್ಯ ಕೈಕೊಂಡಾಗ ಕೆಲವು ದೇವಾಲಯಗಳು, ಮೂರ್ತಿ ಶಿಲ್ಪಗಳು, ಶಿವಲಿಂಗಗಳು, ಹಲವಾರು (ಸುಮಾರು ೨೦) ವೀರಮಾಸ್ತಿ ಕಲ್ಲುಗಳು, ಶಾಸನ, ವಿಶೇಷವಾಗಿ ಕಾರ್ತಿಕೇಯ, ಭೈರವನ ಅಪ್ರತಿಮ ಶಿಲ್ಪಗಳು ದೊರಕಿವೆ. ಕ್ಷೇತ್ರಕಾರ್ಯದ ಮೂಲಕ ಅನ್ವೇಷಣೆ ಕೈಕೊಂಡಾಗ ಈ ಪ್ರದೇಶದಲ್ಲಿ ಗಮನಕ್ಕೆ ಬಂದ ಕೆಲವು ಗಮನಾರ್ಹ ಸಂಗತಿಗಳನ್ನು ಸದ್ಯಕ್ಕೆ ಇಲ್ಲಿ ಪ್ರಸ್ತುತಪಡಿಸಲಾಗಿದೆ.

**ದೇವಾಲಯಗಳು** : ಚಾಪಗಾಂವ ಪ್ರದೇಶದಲ್ಲಿ ಹೊಸದಾಗಿ ಪತ್ತೆ ಹಚ್ಚಲಾದ ದೇವಾಲಯಗಳು ಶೈವ, ವೈಷ್ಣವ ಶಾಕ್ತ ಮತ್ತು ಜೈನ ಸಂಪ್ರದಾಯದ್ದಾಗಿವೆ. ಈ ದೇವಾಲಯಗಳು ಭಗ್ನಾವಸ್ಥೆಯಲ್ಲಿದ್ದು ಅವುಗಳ ಅನೇಕ ಭಾಗಗಳು ತ್ರುಟಿತಗೊಂಡಿವೆ. ಕಂಬಗಳು ಮುರಿದು ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ಜೈನ, ವೈಷ್ಣವ ದೇವಾಲಯಗಳು ಸ್ಥಳೀಕರಿಂದ ಪುನರ್‌ನಿರ್ಮಾಣಗೊಂಡಿವೆ.

**ಚಾಪಗಾಂವ:** ಸ್ಥಳೀಯರ ಪ್ರಕಾರ ಈ ಸ್ಥಳವು (ಮಹಾಭಾರತದ ಕಾಲದಲ್ಲಿ) ಚಂಪಾನಗರಿ ಎಂದು ಪ್ರಸಿದ್ಧಿ ಪಡೆದ ಪ್ರದೇಶ. ಬೆಳಗಾವಿ ಹಲಸಿ ಪರಿಸರದಲ್ಲಿರುವ ಈ ಪ್ರದೇಶ ಇತಿಹಾಸ ಕಾಲದಲ್ಲಿ ಸಾಂಸ್ಕೃತಿಕ ಪರಂಪರೆ ಹೊಂದಿದ ಪ್ರದೇಶವಾಗಿರಬೇಕೆಂಬ ಅಂಶ ಇಲ್ಲಿ ದೊರೆತ ಪ್ರಾಚ್ಯಾವಶೇಷಗಳಿಂದ ವಿದಿತವಾಗುತ್ತದೆ.

ಸ್ಥಳೀಯವಾಗಿ ಈಶ್ವರಗುಡಿ ಎಂದು ಕರೆಯಲ್ಪಡುವ ದೇವಾಲಯ, ಚಾಪಗಾಂವ ಗ್ರಾಮದಲ್ಲಿ ಭತ್ತದ ಗದ್ದೆಗಳ ನಡುವೆ ಭವ್ಯವಾಗಿ ನಿಂತಿರುವ ಭಗ್ನಾವಸ್ಥೆಯಲ್ಲಿರುವ ದೇವಾಲಯ ಈಗ ಉಳಿದಿರುವ ಭಾಗಗಳು ಎರಡು; ಅವುಗಳೆಂದರೆ ಚಚ್ಚೌಕಾರವಾದ ಗರ್ಭಗೃಹ ಮತ್ತು ಅಂತರಾಳ. ಆದರೆ ಸಭಾಮಂಟಪ ಮತ್ತು ಅರ್ಧಮಂಟಪದ ಅವಶೇಷಗಳು ಎದ್ದು ಕಾಣುತ್ತವೆ. ಗರ್ಭಗೃಹದ ದ್ವಾರಪಟ್ಟಿಯಲ್ಲಿ ಮೂರು ಸರಳ ಶಾಖೆಗಳಿವೆ. ಅಂತರಾಳದ ಮುಂಭಾಗದಲ್ಲಿ ನಾಲ್ಕು ಕಂಬಗಳಿವೆ. ಸಭಾ ಮಂಟಪದ ಎರಡು ಬದಿಗೆ ಮೂಲೆಯಲ್ಲಿ ತಲಾ ಎರಡು ದೇವಕೋಷ್ಠಗಳಿವೆ. ದೇವಕೋಷ್ಠಗಳಿಗೆ ಚೌಕಾಕಾರದ ಕಂಬಗಳಿದ್ದು ಮೇಲೆ ಕದಂಬ ನಾಗರ ಶೈಲಿಯ ಶಿಖರಗಳಿವೆ. ದೇವಾಲಯದ ಶಿಖರ ಸಂಪೂರ್ಣವಾಗಿ ಬಿದ್ದುಹೋಗಿದೆ. ಈ ದೇವಾಲಯದ ಮುಂಭಾಗದಲ್ಲಿ ಒಂದು ಬಿಡಿ ಕಂಬವಿದ್ದು ಅದರ ಮೇಲ್ಗಡೆ ವಿವಿಧ ರಾಶಿಗಳನ್ನು ಪ್ರತಿಬಿಂಬಿಸುವ ಶಿಲ್ಪಗಳಿವೆ. ವಾಸ್ತುಶೈಲಿಯ ಆಧಾರದ ಮೇಲೆ ಈ ದೇವಾಯವನ್ನು ಕಲ್ಯಾಣ ಚಾಲುಕ್ಯರ, ಗೋವೆ ಕದಂಬರ ಕಾಲಕ್ಕೆ ಸೇರಿಸಬಹುದು ಮತ್ತು ಈ ದೇವಾಲಯ ಹಲಸಿಯ ಕಲ್ಲೇಶ್ವರ ದೇವಾಲಯವನ್ನು ಹೋಲುತ್ತದೆ. ದೇವಾಲಯದ ಗರ್ಭಗೃಹದಲ್ಲಿ ಎತ್ತರವಾದ ಪಾಣೀಪೀಠವನ್ನು ಹೊಂದಿದ ಶಿವಲಿಂಗವಿದೆ. ಅಂತರಾಳದ ಮೇಲ್ಛಾವಣಿಯ ಮೇಲೆ ಸುಂದರವಾದ ಕೆತ್ತನೆಯ ಅಧೋಮುಖವಾದ ಪದ್ಮವಿದೆ. ಈ ಗೂಡುಗಳಲ್ಲಿ ಗಣೇಶ, ಕಾರ್ತಿಕೇಯ ನಾಗರಶಿಲ್ಪಗಳಿವೆ. ಮೇಲೆ ಉಲ್ಲೇಖಿಸಿರುವ ದೇವಾಲಯದ ಹಿಂಭಾಗದಲ್ಲಿ ಜಂಬೂರಿ ಇಟ್ಟಿಗೆಯಿಂದ ನಿರ್ಮಿತವಾದ ಇನ್ನೊಂದು ಪ್ರಾಚೀನ ದೇವಾಲಯವಿದೆ. ಅದನ್ನು ಜೀರ್ಣೋದ್ಧಾರಗೊಳಿಸಲಾಗಿದೆ. ಈ ದೇವಾಲಯವು ಅದರ ತಳಪಾಯದಲ್ಲಿ ಗರ್ಭಗುಡಿ ಮತ್ತು ಅರ್ಧಮಂಟಪವನ್ನು ಹೊಂದಿದೆ. ಈ ದೇವಾಲಯ ಪೂರ್ವ ಎತ್ತರದ ಜಗತಿ ಮೇಲಿದೆ. ಗರ್ಭಗೃಹದ ಚೌಕಾಕಾರದ ಪೀಠದ ಮೇಲೆ ಗಣೇಶನ ಶಿಲ್ಪವಿದೆ.

* ಪ್ರವಾಚಕರು, ಇತಿಹಾಸ ವಿಭಾಗ, ರಾಣಿ ಪಾರ್ವತಿ ಕಾಲೇಜ, ಬೆಳಗಾವಿ

ಗ್ರಾಮದ ಹೊರ ವಲಯದಲ್ಲಿ ನಿಬಿಡವಾದ ಕಾಡಿನ ಮಧ್ಯ ಭಗ್ನಾವಸ್ಥೆಯಲ್ಲಿರುವ ದೇವಾಲಯವಿದ್ದು ಇದನ್ನು ಸ್ಥಳೀಕರು ಕಲ್ಲೇಶ್ವರ ದೇವಾಲಯ ಎಂದು ಕರೆಯುತ್ತಾರೆ. ಪಶ್ಚಿಮಾಭಿಮುಖವಾದ ಈ ದೇವಾಲಯದ ಗರ್ಭಗುಡಿಯಲ್ಲಿ ಚೌಕಾಕಾರದ ಪೀಠದ ಮೇಲೆ ಶಿವಲಿಂಗವಿದೆ. ಮೂರ್ತಿ ಲಕ್ಷಣದ ಆಧಾರದ ಮೇಲೆ ಸುಮಾರು ೮-೯ನೆಯ ಶತಮಾನಕ್ಕೆ ಸರಿಹೊಂದಬಹುದಾದ ಶಿಲ್ಪವದು.

**ಮೂರ್ತಿಶಿಲ್ಪಗಳು**

ಚಾಪಗಾಂವ ಕರಲಗಾ ಪ್ರದೇಶದಲ್ಲಿ ಹಲವಾರು ಮೂರ್ತಿ ಶಿಲ್ಪಗಳು ದೊರೆತಿದ್ದು ಅವು ದೇವದೇವತೆಯರ ಅಪರೂಪ ಶಿಲ್ಪಗಳು. ಈ ಪ್ರದೇಶದ ಶಿಲ್ಪಗಳು ಶೈವ, ವೈಷ್ಣವ, ಶಾಕ್ತ ಮತ್ತು ಜೈನಧರ್ಮಕ್ಕೆ ಸೇರಿವೆ. ಶೈವ ಶಿಲ್ಪಗಳಲ್ಲಿ ಗಣೇಶ, ಶಿವಲಿಂಗ, ನಂದಿ, ಭೈರವ, ಕಾರ್ತಿಕೇಯ; ವೈಷ್ಣವರಲ್ಲಿ ಕೇಶವ; ಶಾಕ್ತಶಿಲ್ಪಗಳಲ್ಲಿ ಗಜಲಕ್ಷ್ಮಿ, ಸಪ್ತಮಾತೃಕೆಯರು; ಜೈನಶಿಲ್ಪಗಳಲ್ಲಿ ಬಾಹುಬಲಿ ಮತ್ತು ಮಹಾವೀರರ ಸುಂದರ ಶಿಲ್ಪಗಳು ಮುಖ್ಯವಾದವುಗಳು. ಮುಖ್ಯ ಶಿಲ್ಪಗಳನ್ನು ಇಲ್ಲಿ ಪ್ರಸ್ತಾಪ ಮಾಡಲಾಗಿದೆ.

**ಗಣೇಶ** : ಚತುರ್ಭುಜ ಗಣೇಶ ಸಿಂಹಾಲಲಾಟವಿರುವ ಪೀಠದ ಮೇಲೆ ಆಸೀನವಾಗಿದ್ದು ಅಗಲವಾದ ಕಿವಿ, ಕರ್ಣಕುಂಡಲ, ಯಜ್ಞೋಪವೀತ, ಹೊಟ್ಟೆಗೆ ಧರಿಸಿದ ಹಾವು, ಅಲಂಕೃತ ಕಿರೀಟದ ಮಧ್ಯ ನಾಗಬಂಧವಿದೆ. ಮೂರ್ತಿ ಲಕ್ಷಣದ ಆಧಾರದ ಮೇಲೆ ಸುಮಾರು ೧೨ನೇ ಶತಮಾನಕ್ಕೆ ಸೇರಿದ ಶಿಲ್ಪ ಪರಿಪೂರ್ಣ ಅಲಂಕರಣವುಳ್ಳ ಪ್ರಮಾಣಬದ್ಧವಾದ ಶಿಲ್ಪ. ಗಣೇಶನ ಇನ್ನೊಂದು ವಿಗ್ರಹ ಈಶ್ವರ ದೇವಾಲಯದ ಎಡ ದೇವಕೋಷ್ಠದಲ್ಲಿದೆ. ಶಿಲ್ಪ ಪ್ರಮಾಣಬದ್ಧತೆಯಲ್ಲಾಗಲಿ ಅಲಂಕರಣದಲ್ಲಾಗಲಿ, ಮಹತ್ವ ಪೂರ್ಣವಾಗಿಲ್ಲ. ಈ ವಿಗ್ರಹಕ್ಕೆ ದ್ವಿಭುಜವಿದೆ. ಕೈಗಳಲ್ಲಿ ದಂತ ಮತ್ತು ಪರಶುಗಳಿವೆ. ಉದರದಲ್ಲಿ ನಾಗನ ಸುತ್ತುವರಿ ಇದೆ. ( ಕ್ರಿ. ಶ. ೧೦ನೇ ಶತಮಾನ)

**ಭೈರವ** : ಗಣೇಶ ದೇವಾಲಯದಿಂದ ಸುಮಾರು ೧೦೦ ಮೀಟರ ದೂರದಲ್ಲಿ ಭತ್ತದ ಗದ್ದೆಯ ಅಂಚಿನಲ್ಲಿ ಈ ವಿಗ್ರಹವನ್ನು ಕೂಡಿಸಲಾಗಿದೆ. ಚಾಪಗಾಂವದ ಭೈರವನ ಶಿಲ್ಪವು ತ್ರಿಭಂಗಿಯ ಬತ್ತಲೆಯ ಶಿಲ್ಪ. ರುಂಡಗಳಿಂದ ಆವೃತ್ತವಾದ ಜಟಾಮುಕುಟದ ರೀತಿ, ಕೈಯಲ್ಲಿ ಖಡ್ಗ, ತ್ರಿಶೂಲ, ಡಮರು, ಪಾನಪಾತ್ರೆ, ಕೊರಳಲ್ಲಿಯ ರುಂಡಮಾಲೆ ಹೊಂದಿದೆ. ಮನುಷ್ಯನ ತಲೆ ವಿಶಿಷ್ಟ ಮಾದರಿಯಲ್ಲಿದೆ. ಪ್ರಮಾಣ ಬದ್ಧವಾದ ಮೈಮಾಟ ನಾಜೂಕು ಕೆತ್ತನೆಯ ಅಲಂಕರಣ, ನಿಂತ ಭಂಗಿ, ಇವೆಲ್ಲವು ಗಳಿಂದಾಗಿ ಈ ಶಿಲ್ಪವು ಶಿಲ್ಪಕಲೆಯ ದೃಷ್ಟಿಯಿಂದ ಅತ್ಯಂತ ಮಹತ್ವ ಪೂರ್ಣವಾಗಿದೆ. ಈ ಶಿಲ್ಪದ ಎಡಪಕ್ಕದಲ್ಲಿ ಮೂರು ಮತ್ತು ಬಲಪಕ್ಕದಲ್ಲಿ ಎರಡು ಪ್ರೇತಗಳ ಉಬ್ಬುಶಿಲ್ಪಗಳಿದ್ದು ಅವು ನರ್ತನ ಗಾಯನಗಳಲ್ಲಿ ನಿರತವಾಗಿವೆ. ಇದು ಸುಮಾರು ೧೧ನೇ



ಶತಮಾನಕ್ಕೆ ಸಂಬಂಧಿಸಿದ ಕಲ್ಯಾಣ ಚಾಲುಕ್ಯ ಶೈಲಿಯ ಸುಂದರ ಶಿಲ್ಪ.

**ಕಾರ್ತಿಕೇಯ** : ಈಶ್ವರ ದೇವಾಲಯದ ಸಭಾ ಮಂಟಪದ ಬಲದೇವಕೋಷ್ಠದಲ್ಲಿರುವ ಕಾರ್ತಿಕೇಯನ ಸುಂದರ ಶಿಲ್ಪ ನಯನಮನೋಹರವಾಗಿದೆ. ಚತುರ್ಭುಜ ಕಾರ್ತಿಕೇಯ ನವಿಲಿನ ಮೇಲೆ ಅಸೀನನಾಗಿದ್ದು ಮುಖಭಾವ, ನೀಳಮೂಗು, ಶಾಂತಮುಖ, ಕರ್ಣಕುಂಡಲ, ಅಗಲವಾದ ಅರೆತೆರೆದ ಕಣ್ಣುಗಳು, ತ್ರಿಶೂಲ ಬಿಲ್ಲು ಬಾಣಗಳನ್ನು ನೀಳ ಬೆರಳುಗಳಿಂದ ಹಿಡಿದಿದ್ದು ಬಹಳ ಸುಂದರವಾದ ಮತ್ತು ಸೂಕ್ಷ್ಮವಾದ ಉಗುರುಗಳ ಕೆತ್ತನೆ ಹೊಂದಿದೆ. ಕಾಲ್ಗಡಗ, ರತ್ನಹಾರ, ಕರಂಡ ಮಕುಟ, ನೂಪುರ ಮೊದಲಾದ ಆಭರಣಗಳಿಂದ ವಿಶೇಷವಾಗಿ ಶಿಲ್ಪವು ಅಲಂಕೃತವಾಗಿದೆ.

**ಶಿವಲಿಂಗ** : ಕರಲಗಾ ಮತ್ತು ಚಾಪಗಾಂವ ಪ್ರದೇಶದಲ್ಲಿ ತಲಾ ಎರಡು ಶಿವಲಿಂಗಗಳು ಈ ಪ್ರದೇಶದ ದೇವಾಲಯಗಳ ಗರ್ಭಗೃಹದಲ್ಲಿವೆ. ಇವುಗಳಲ್ಲಿ ಕಲ್ಮೇಶ್ವರ, ದೇವಾಲಯವೆಂದು ಸ್ಥಳೀಯವಾಗಿ ಕರೆಯಲ್ಪಡುವ ಶಿವಲಿಂಗವು ಅಷ್ಟೇನೂ ಎತ್ತರವಲ್ಲದ ಚೌಕಾಕಾರದ ಪಾಣೀಪೀಠದ ಮೇಲಿದೆ. ಲಿಂಗದ ಮಧ್ಯಭಾಗ ಸಂಪೂರ್ಣವಾಗಿ ಸವೆದು ಹೋಗಿದೆ. ಸುಮಾರು ೮ನೆಯ ಶತಮಾನಕ್ಕೆ ಸೇರಿಸಬಹುದಾದ ಈ ಶಿವಲಿಂಗವು ಈ ಪ್ರದೇಶದ ಪ್ರಾಚ್ಯಾವಶೇಷಗಳಲ್ಲಿ ಮಹತ್ವದ್ದಾಗಿದೆ. ಈಶ್ವರ





ದೇವಾಲಯದ ಗರ್ಭಗೃಹದಲ್ಲಿರುವ ಎತ್ತರವಾದ ಚೌಕಾಕಾರದ ಪಾಣೀಪೀಠದ ಮೇಲಿರುವ ಇನ್ನೊಂದು ಶಿವಲಿಂಗವನ್ನು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿಸಬಹುದು.

**ಕೇಶವ** : ಕಲ್ಯಾಣ ಚಾಲುಕ್ಯಶೈಲಿಯನ್ನು ಒಳಗೊಂಡ ಸುಮಾರು ೧೨ನೇ ಶತಮಾನಕ್ಕೆ ಸಂಬಂಧಿಸಿದ ಕೇಶವನ ರೂಪದಲ್ಲಿರುವ ಸುಂದರವಾದ ವೈಷ್ಣವ ಶಿಲ್ಪವಿದು. ಬೇರೆಯ ಕಡೆಯಲ್ಲಿರುವಂತೆ ಈ ಕೇಶವ ಶಿಲ್ಪ ಸಮಭಂಗಿಯಲ್ಲಿ ಇದೆ. ಕ್ರಮವಾಗಿ ಮುಂದಿನ ಬಲಗೈಯಲ್ಲಿ ಪದ್ಮ, ಶಂಖ, ಎಡಗೈಯಲ್ಲಿ ಚಕ್ರ ಮತ್ತು ಗದೆಯ ಚಿತ್ರವಿದೆ. ಕರಂಡ ಮುಕುಟ, ಕರ್ಣಕುಂಡಲ, ರತ್ನಹಾರ, ವೈಜಯಂತಿಮಾಲೆ, ಉಂಗುರುಗಳು, ಕೈಗಡಗ, ಕಾಲಿಗೆ ತೊಡಿಸಿದ ತೊಡವುಗಳು, ನೂಪುರ, ಬೆರಳುಂಗರ ಮೊದಲಾದ ಆಭರಣಗಳಿಂದ ವಿಶೇಷ ಅಲಂಕೃತವಾದ ಸೂಕ್ಷ್ಮಕೆತ್ತನೆಯ ಈ ಸುಂದರ ಶಿಲ್ಪಕ್ಕೆ, ತಲೆಯ ಹಿಂಬದಿಯಲ್ಲಿ ದಶಾವತಾರದ ಸುಂದರ ಕೆತ್ತನೆಯ ಶಿಲ್ಪವುಳ್ಳ ಪ್ರಭಾವಳಿ ಇದೆ. ಹಸನ್ಮುಖ, ಆಧ್ಯಾತ್ಮಿಕ ತೇಜಸ್ಸು, ಏಕಾಗ್ರದೃಷ್ಟಿ ಮಂದಹಾಸದ ಮುಖ ಮಂಡಲದಿಂದ ಸೂಚಿಸಲಾಗಿದೆ. ಮೂರ್ತಿಯ ಎಡ ಬಲ ಬದಿಗೆ ಜಯ ವಿಜಯರಿದ್ದು ಬಲಭಾಗದಲ್ಲಿ ಮೊಣಕಾಲೂರಿ, ಕೈಮುಗಿದು ಕುಳಿತ ಗರುಡನ ಶಿಲ್ಪವಿದೆ. ಮಕರತೋರಣವಿದ್ದು ಲತೆಯ ಅಲಂಕರಣ ಮತ್ತು ಸಿಂಹಲಲಾಟವುಳ್ಳ ಸೂಕ್ಷ್ಮಕೆತ್ತನೆಯ ಪ್ರಭಾವಳಿ ಸುಂದರವಾಗಿದೆ. ಚಾಪಗಾಂವನ ಈ ಕೇಶವನ ಶಿಲ್ಪ ದೆಗಾಂವೆಯ ಕಮಲನಾರಾಯಣ ದೇವಾಲಯದಲ್ಲಿರುವ ಕೇಶವನ ಶಿಲ್ಪವನ್ನು ಹೋಲುತ್ತಿದೆ. ನುಣುಪಾದ ಕಪ್ಪು ಕಲ್ಲಿನಲ್ಲಿ ಕೆತ್ತಲಾದ ಈ ಶಿಲ್ಪ ಹೊಯ್ಸಳ ಶಿಲ್ಪಕಲೆಯ ಶೈಲಿಯಿಂದ ಪ್ರಭಾವಿತ ವಾದಂತಿದೆ. ಒಟ್ಟಿನಲ್ಲಿ ಇದು ಅತ್ಯಂತ ಪ್ರಮಾಣಬದ್ಧವಾದ ಶಿಲ್ಪ.

**ಗಜಲಕ್ಷ್ಮಿ** : ತಕ್ಕ ಮಟ್ಟಿಗೆ ಪ್ರಮಾಣದ್ದವಾದ ಮೈಮಾಟ ವನ್ನು ಹೊಂದಿದ ಪದ್ಮಾಸನದಲ್ಲಿ ಕುಳಿತ ಗಜಲಕ್ಷ್ಮಿ ಶಿಲ್ಪ

ಅಪರೂಪವಾಗಿದೆ. ಅಡ್ಡಿಗೆ ಹಾರ, ದೊಡ್ಡ ಹಾರ, ಚಕ್ರಕುಂಡಲ ಮತ್ತು ಕರ್ಣಕುಂಡಲಗಳಿವೆ. ಕ್ಷೀರಾಭಿಷೇಕ, ಮಾಡುತ್ತಿರುವ ಆನೆಗಳು, ಲಕ್ಷ್ಮಿಯ ಅಕ್ಕಪಕ್ಕದಲ್ಲಿ ಭವ್ಯ ಆಕೃತಿಯಲ್ಲಿ ಚಿತ್ರಿಸಲಾಗಿದೆ. ಆನೆಯ ಶಿಲ್ಪಕ್ಕೂ ಲಕ್ಷ್ಮಿಯ ಶಿಲ್ಪಕ್ಕೂ ಪ್ರಮಾಣಬದ್ಧತೆ ಇಲ್ಲದಿರುವುದು ಎದ್ದು ಕಾಣುತ್ತದೆ.

**ಜೈನ ಶಿಲ್ಪಗಳು** : ಚಾಪಗಾಂವ ಪರಿಸರದಲ್ಲಿ ಎರಡು ಪುರಾತನ ಜೈನ ಶಿಲ್ಪಗಳು ದೊರೆತಿದ್ದು ಅವು ಈಗ ಹೊಸದಾಗಿ ನಿರ್ಮಿತವಾದ ಜೈನ ಬಸದಿಯನ್ನು ಅಲಂಕರಿಸಿವೆ. ಪಕ್ಕದ ಗದ್ದೆಯಲ್ಲಿ ಗಿಡಗಂಟೆಗಳಲ್ಲಿ ಮುಚ್ಚಿಹೋಗಿದ್ದ ಮಹಾವೀರನ ಪ್ರಮಾಣಬದ್ಧವಾದ ಕರಿಕಲ್ಲಿನಿಂದ ನಿರ್ಮಿತವಾದ ಶಿಲ್ಪವನ್ನು ಜೀರ್ಣೋದ್ಧಾರಗೊಳಿಸಿ ಬಸದಿಯಲ್ಲಿ ಪ್ರತಿಷ್ಠಾಪಿಸಲಾಗಿದೆ. ಹೊರಾವರಣದಲ್ಲಿ ಭಗ್ನಗೊಂಡಿರುವ ಬಹುಶಃ ಬಾಹುಬಲಿ ಯೆನಿಸುವ ಜೈನ ಶಿಲ್ಪವಿದೆ. ಮೂರ್ತಿ ಲಕ್ಷಣದ ಆಧಾರದ ಮೇಲೆ ಬಹುಶಃ ೧೨-೧೩ ನೆಯ ಶತಮಾನಕ್ಕೆ ಸೇರಿರಬಹುದಾದ ಶಿಲ್ಪವಿದು.

**ಸ್ಮಾರಕ ಶಿಲೆಗಳು** : ನನ್ನ ಕ್ಷೇತ್ರಕಾರ್ಯದ ಅವಧಿಯಲ್ಲಿ ಗಮನಿಸಲಾದ ಅತ್ಯಂತ ಮಹತ್ವದ ಅಂಶವೆಂದರೆ ಹಲವಾರು (ಸುಮಾರು ೨೦ ಕ್ಕೂ ಹೆಚ್ಚು) ವೀರಮಾಸ್ತಿಕಲ್ಲುಗಳು. ಅವುಗಳಲ್ಲಿ ಕೆಲವು ಬರಿಯ ಮಾಸ್ತಿ ಕಲ್ಲುಗಳು ಮತ್ತು ಇನ್ನಿತರವು ವೀರಮಾಸ್ತಿ ಕಲ್ಲುಗಳು. ಇಲ್ಲಿ ದೊರೆತ ಈ ಸ್ಮಾರಕ ಶಿಲೆಗಳು ಸಹಗಮನ ಶಿಲ್ಪವೆನಿಸುವುದಿಲ್ಲ. ಏಕೆಂದರೆ ಇಲ್ಲಿ ದೊರೆತ ಸತಿಗಲ್ಲುಗಳಲ್ಲಿ ಸಹಗಮನವನ್ನು ಸೂಚಿಸುವ ಶಿಲ್ಪವಾಗಲಿ, ಅಥವಾ ಪಾಠ ವಾಗಲಿ ಇಲ್ಲ. ತನ್ನ ಪತಿ ಮಡಿದ ವಾರ್ತೆಯನ್ನು ಕೇಳಿದ ನಂತರ ಸತಿಯು ಮಹಾಸತಿ ಯಾಗಿರಬಹುದು, ಈ ಪ್ರದೇಶದಲ್ಲಿ ದೊರೆತ ಸ್ಮಾರಕ ಶಿಲ್ಪಗಳನ್ನು ಪೂರ್ಣ ಸತಿಶಿಲ್ಪ ಮತ್ತು ಇತರರ ಶಿಲ್ಪ, ಹಂತಗಳಿರುವ ವೀರಮಾಸ್ತಿ ಶಿಲ್ಪ, ಒಕ್ಕೈ ಮಾಸ್ತಿ ಶಿಲ್ಪ ಎಂದು ಹಲವು ರೀತಿಯಲ್ಲಿ ವಿಭಾಗಿಸ ಬಹುದು.

ಚಾಪಗಾಂವ ಗಣೇಶ ದೇವಾಲಯದ ಹೊರಗಿನ ಗೋಡೆಗೆ ಒದಗಿಸಿ ಇಡಲಾದ ಒಕ್ಕೈ ಮಾಸ್ತಿ ಶಿಲ್ಪಗಳಲ್ಲಿ ಕೇವಲ ಒಂದು ತೋಳನ್ನು ಮಾತ್ರ ಬಿಡಿಸಲಾಗಿದೆ. ಇತರ ತಳಭಾಗ ಕಂಬದಂತಿದ್ದು ಅದರ ಪಕ್ಕದಲ್ಲಿ ತೋಳನ್ನು ಬಿಡಿಸಲಾಗಿದೆ. ತೋಳಿನ ಕೆಳಗೆ ವೀರ ಮತ್ತು ಮಾಸ್ತಿಯರಿಬ್ಬರೂ ನಿಂತ ಶಿಲ್ಪವಿದೆ. ಮಾಸ್ತಿಯ ಒಂದು ಕೈಯಲ್ಲಿ ಕನ್ನಡಿ ಮತ್ತು ಇನ್ನೊಂದು ಕೈಯಲ್ಲಿ ನಿಂಬೆಯ ಹಣ್ಣನ್ನು ಚಿತ್ರಿಸಲಾಗಿದೆ. ಪಕ್ಕದಲ್ಲಿ ಯೋಧ ಕೈಮುಗಿದು ನಿಂತಿದ್ದಾನೆ. ಮೇಲೆ ವಿವರಿಸಿದ ಚಿಕ್ಕ ಮಾಸ್ತಿಯ ಶಿಲ್ಪದ ಮಾದರಿಯದೇ ಇನ್ನೂ ಮೂರು ಶಿಲ್ಪಗಳು ಕರಲಗಾ ಮತ್ತು ಚಾಪಗಾಂವ ಇನ್ನಿತರ ಕಡೆಗಳಲ್ಲಿ ದೊರೆತಿವೆ. ಲಂಗದಂತಹದ ಉಡುಗೆ, ಎತ್ತಿ ಕಟ್ಟಿದ ತುರುಬು, ಪಕ್ಕದಲ್ಲಿ ಯೋಧನ ಉಡುಗೆ ಧರಿಸಿದ ಪತಿಯ ಶಿಲ್ಪವಿದೆ. ಇದೇ ದೇವಾಲಯದ ಎಡ ಬದಿಗೆ ಹಂತಗಳಿರುವ ವೀರಮಾಸ್ತಿಯ ಶಿಲ್ಪವಿದೆ. ಈ ಶಿಲ್ಪದ ಕೆಳಹಂತದಲ್ಲಿ ವೀರ ಹಾಗೂ ಮಹಾಸತಿಯರು ನಿಂತಿರುವರು. ಮಹಾಸತಿಯ ಕೇದಗೆಯ ಹೂವಿನ ಅಲಂಕಾರ ಆಕರ್ಷಿತವಾಗಿದ್ದು ಅವಳ ತಲೆಯ ಹಿಂದೆ ಪ್ರಭಾವಳಿಯಂತೆ ಕಾಣುತ್ತದೆ. ಸತಿಯ ಕೈಯಲ್ಲಿ ನಿಂಬೆ ಹಣ್ಣು ಮತ್ತು ಕನ್ನಡಿಯಿದೆ. ಮೇಲಿನ ಹಂತದಲ್ಲಿ ವೀರಮಾಸ್ತಿಯರು ಕೈಮುಗಿದು ಪದ್ಮಾಸನದಲ್ಲಿ ಕುಳಿತಿದ್ದಾರೆ. ಅವರಿಬ್ಬರ ಕೇಶಾಲಂಕಾರ ಒಂದೇ ಸಮನಾಗಿರುವುದು ಗಮನಾರ್ಹ. ಇದೇ ದೇವಾಲಯದ ಎಡಗೋಡೆಯ ಪಕ್ಕಕ್ಕೆ ಸುಮಾರು ಆರು ಅಡಿ ಎತ್ತರವಿರುವ ಮತ್ತು ೬ ಅಡಿ ಅಗಲವಿರುವ ಹಂತಗಳಲ್ಲಿ ವೀರಗಲ್ಲುಗಳಿದ್ದು ಅದರ ಮೇಲಿನ ಚಕ್ಕಳಿಗಳಿದ್ದು ಅವು ಭಗ್ನಗೊಂಡಿವೆ. ಮತ್ತು ಸ್ಪಷ್ಟವಾಗಿಲ್ಲ. ಕಾಳಗದ ವಿವಿಧ ಹಂತವನ್ನು ಚಿತ್ರಿಸಲಾಗಿದೆ. ಮೇಲಿನ ಹಂತದಲ್ಲಿ ನಿಂತ ಭಂಗಿಯಲ್ಲಿರುವ ಗಣಪತಿ, ಮರದ ಕೆಳಗೆ ಕುಳಿತ ವೀರನನ್ನು ಆಶೀರ್ವದಿಸುವ ದೃಶ್ಯವಿದೆ.

ಮೂರು ಹಂತಗಳಿರುವ ವೀರಮಾಸ್ತಿಗಲ್ಲು ಭತ್ತದ ಗದ್ದೆಯ ಅಂಚಿಗೆ ಒರಗಿ ನಿಂತಿದೆ. ಕೆಳಗಿನ ಹಂತದಲ್ಲಿ ಎರಡು ಸಾಲುಗಳಲ್ಲಿ ಎದುರುಬದುರಾಗಿ ನಿಂತು ಯೋಧನು ವೈರಿಯೊಡನೆ ಹೋರಾಡುವ ದೃಶ್ಯವಿದೆ. ಬಿಲ್ಲು ಬಾಣ ಭರ್ಜಿ ಖಡ್ಗಗಳನ್ನು ಉಪಯೋಗಿಸಿ ಕುದುರೆ ಸವಾರರೊಡನೆ ಹೋರಾಟ ನಡೆದಿದೆ. ವೀರನ ಹಿಂಬದಿಗೆ ಸಾಲಾಗಿ ಆಕಳುಗಳನ್ನು ಚಿತ್ರಿಸಿರುವದರಿಂದ ತುರುಗೋಳವೆನ್ನುವಂತಿದೆ. ಎರಡನೇ ಹಂತದಲ್ಲಿ ವೀರ ಮತ್ತು ಸತಿಯನ್ನು ಪಕ್ಕದಲ್ಲಿ ಕುಳ್ಳಿರಿಸಿ ಕಿನ್ನರಿಯರು ದೇವಲೋಕಕ್ಕೆ ಕರೆದೊಯ್ಯುವ ದೃಶ್ಯವಿದೆ. ಮೇಲಿನ ಹಂತದಲ್ಲಿ ಶಿವಲಿಂಗದ ಅಕ್ಕಪಕ್ಕದಲ್ಲಿ ಸತಿಪತಿಯರಿಬ್ಬರು ಕುಳಿತ ದೃಶ್ಯವಿದೆ. ೧-೨ನೇ



ಹಂತದಲ್ಲಿ ನಡುವೆ ನಾಲ್ಕು ಸಾಲಿನ ಶಾಸನವಿದ್ದು ಸ್ಪಷ್ಟವಾಗಿಲ್ಲ. ಅದೇ ಗದ್ದೆಯ ಅಂಚಿಗೆ ಇನ್ನೆರಡು ವೀರಗಲ್ಲುಗಳಿವೆ. ನೋಡಲು ಒಂದೇ ತರಹ ಕಂಡುಬಂದರೂ ಯೋಧ ಧರಿಸಿದ ಉಡುಗೆಯಲ್ಲಿ, ಬಳಸಿದ ಆಯುಧಗಳಲ್ಲಿ, ಕಿನ್ನರಿಯರ ವೇಷಭೂಷಣಗಳಲ್ಲಿ ವೈವಿಧ್ಯವಿದೆ. ಇವೆರಡು ವೀರಗಲ್ಲುಗಳು ಮೂರು ಹಂತಗಳಲ್ಲಿ ಶಿಲ್ಪವನ್ನು ಹೊಂದಿವೆ. ಈಶ್ವರ ದೇವಾಲಯದ ಮುಂಭಾಗದಲ್ಲಿ ಹಾಳುಬಿದ್ದ ಸಭಾಮಂಟಪದ

ಭಾಗಗಳಲ್ಲಿ ಸುಮಾರು ಐದು ವೀರಮಾಸ್ತಿಗಲ್ಲುಗಳಿವೆ. ಎರಡುಹಂತಗಳಲ್ಲಿರುವ ವೀರಮಾಸ್ತಿ ಕಲ್ಲಿನಲ್ಲಿ ಬಿಲ್ಲು ಬಾಣ ಹಿಡಿದ ಯೋಧ ಆತನ ಪಕ್ಕದಲ್ಲಿ ನಿಂಬೆಹಣ್ಣು, ಕನ್ನಡಿ ಹಿಡಿದು ನಿಂತಿರುವ ಸತಿಯ ಶಿಲ್ಪವಿದೆ. ಈ ಸ್ಮಾರಕಗಳಲ್ಲಿ ಪತಿ ಮತ್ತು ವೀರನಿಗೆ ಸರಿಸಮನಾದ ಪ್ರಾಧಾನ್ಯತೆಯಿದೆ.

ಕರಲಗಾ ಗ್ರಾಮದಲ್ಲಿ ಸತಿಕಟ್ಟೆಯೆಂದು ಸ್ಥಳೀಯವಾಗಿ ಕರೆಯಲ್ಪಡುವ ಪ್ರದೇಶದಲ್ಲಿ ಸುಮಾರು ಒಂಭತ್ತು ವೀರಮಾಸ್ತಿ ಕಲ್ಲುಗಳಿವೆ. ಇಲ್ಲಿರುವ ೩ ಹಂತಗಳ ವೀರಮಾಸ್ತಿಗಲ್ಲಿನಲ್ಲಿ ಕೆಳಗಿನ ಹಂತದಲ್ಲಿ ವೀರ ಕುದುರೆ ಸವಾರನೊಡನೆ ಕಾದಾಡುವ ದೃಶ್ಯ, ಮೇಲಿನ ಹಂತದಲ್ಲಿ ಒಂದು ಬದಿಗೆ ಚಿಕ್ಕ ಶಿಲ್ಪ ಇನ್ನೊಂದು ಬದಿಗೆ ವೀರನ ಅಕ್ಕಪಕ್ಕದಲ್ಲಿ ಆತನ ಇಬ್ಬರು ಸತಿಯರು, ಮೇಲಿನ ಹಂತದಲ್ಲಿ ಇಬ್ಬರು ಸತಿಯರು, ಶಿವಲಿಂಗದ ಪಕ್ಕ ಕೈ ಜೋಡಿಸಿ ಪದ್ಮಾಸನದಲ್ಲಿ ಕುಳಿತಿರುವ ಶಿಲ್ಪವಿದೆ. ಇದು ಶಿಲ್ಪಕಲೆಯ ದೃಷ್ಟಿಯಿಂದ ಮತ್ತು ಇಬ್ಬರು ಸತಿಯರನ್ನು ತೋರಿಸಿರುವ ದೃಷ್ಟಿಯಿಂದ ಅತ್ಯಂತ ಮಹತ್ವವಾದಂತಹ ಶಿಲ್ಪ.

ಇದರ ಪಕ್ಕದಲ್ಲೇ ಇನ್ನೊಂದು ವೀರಮಾಸ್ತಿ ಶಿಲ್ಪವಿದ್ದು ಮೂರು ಹಂತಗಳಿವೆ. ಕೆಳಗಿನ ಹಂತದಲ್ಲಿ ಕುದುರೆ ಸವಾರನಾಗಿ ವೀರ ಹೋರಾಡುವ ದೃಶ್ಯವಿದೆ. ಎರಡನೆಯ ಹಂತದಲ್ಲಿ ಮಧ್ಯದಲ್ಲಿ ವೀರ ನಿಂತಿದ್ದು ಆತನ ಇಕ್ಕೆಲಗಳಲ್ಲಿ ಪತಿಯ ತೋಳು ಬಳಸಿ ನಿಂತ ಇಬ್ಬರು ಸತಿಯರ ಶಿಲ್ಪವಿದೆ. ಮೇಲಿನ ಹಂತದಲ್ಲಿ ಮೂವರು ಶಿವಲಿಂಗದೆದುರು ಮೊಳಕಾಲೂರಿ ಕುಳಿತ ದೃಶ್ಯವಿದೆ.

ಈ ಪ್ರದೇಶದಲ್ಲಿ ಕಂಡು ಬಂದ ಅನೇಕ ನಾಗಶಿಲ್ಪಗಳನ್ನು ಗಮನಿಸಿದರೆ ನಾಗಪೂಜೆ ಇಲ್ಲಿ ಪ್ರಾಧಾನ್ಯವಾಗಿದ್ದುದು ವಿದಿತವಾಗುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ ಇಲ್ಲಿ ದೊರೆತ ಬಹುತೇಕ ಮೂರ್ತಿಶಿಲ್ಪಗಳು, ದೇವಾಲಯಗಳು, ವೀರಮಾಸ್ತಿಗಲ್ಲುಗಳು ಸೊರನೋಟಕ್ಕೆ ಕಲ್ಯಾಣ ಚಾಲುಕ್ಯರ ಶೈಲಿಯನ್ನು ಹೋಲುತ್ತಿದ್ದರೂ ಸೂಕ್ಷ್ಮವಾಗಿ ಗಮನಿಸಿದಾಗ ಸ್ಥಳೀಯ ಪ್ರಭಾವ ಎದ್ದು ಕಾಣುತ್ತದೆ. ದುಂಡುಮುಖ, ದಪ್ಪಮೂಗು, ಮಧ್ಯಮ ಶರೀರ, ಗಿಡ್ಡವಾದ ಕಾಲುಗಳು ಹಿಡಿದಿಟ್ಟ ಲಾಸ್ಯ, ದೈವಿ ಕಳೆ, ಈ ಶಿಲ್ಪಗಳಲ್ಲಿ ಎದ್ದು ಕಾಣುತ್ತದೆ. ಯಾವುದೇ ದೇವ ದೇವತೆಗಳ ಶಿಲ್ಪಗಳು ಪ್ರಯೋಗ ಶೈಲಿಯಲ್ಲಿರುವುದು ಇನ್ನೊಂದು ವೈಶಿಷ್ಟ್ಯತೆ.

ಕಾರ್ತಿಕೇಯ, ಭೈರವ, ಕೇಶವ ಮತ್ತು ಗಜಲಕ್ಷ್ಮಿ ಶಿಲ್ಪಗಳು ಶಿಲ್ಪ ಶೈಲಿಯ ದೃಷ್ಟಿಯಿಂದ ಗಮನಾರ್ಹವಾಗಿವೆ. ಇವೆಲ್ಲವೂ ಸುಮಾರು ೧೧-೧೨ನೆಯ ಶತಮಾನಕ್ಕೆ ಸರಿಹೊಂದು ವಂತಹವು. ಚಪ್ಪಟೆ ಮೂಗು, ದಪ್ಪತುಟಿ, ತುಸುಗಿಡ್ಡಾದ ಶರೀರವನ್ನು ಗಮನಿಸಿದಾಗ ಇವು ಪ್ರಾದೇಶಿಕ ಸಂಪ್ರದಾಯವನ್ನು ಅನುಸರಿಸಿದಂತಿದೆ. ಮೈಮಾಟದಲ್ಲಿ ಇರಬೇಕಾದ ಪ್ರಮಾಣ ಬದ್ಧತೆ ಕಾಣದಿದ್ದರೂ ರೂಢಿಬದ್ಧ ಮಾದರಿಯನ್ನು ಅನುಸರಿಸಿ ದಂತಿದೆ.

ಈ ಶಿಲ್ಪಗಳಲ್ಲಿ ಕಂಡುಬರುವ ಇನ್ನೊಂದು ಅಂಶವೇನೆಂದರೆ ಸಮಕಾಲೀನ ಸಾಮಾಜಿಕ ಜೀವನಕ್ಕೆ ಸರಿಹೊಂದುವಂತಹ ಅನೇಕ ಕೇಶವಿನ್ಯಾಸಗಳನ್ನು, ಉಡುಗೆ ತೊಡುಗೆಗಳನ್ನು ಮತ್ತು ಆಭರಣ ಗಳನ್ನು ಶಿಲ್ಪದಲ್ಲಿ ಆಕರ್ಷಕವಾಗಿ ಕೆತ್ತಿದ್ದು ಶಿಲ್ಪಿಗಳು ಬಹುಶಃ ಪ್ರಾದೇಶಿಕ ಪರಿಸರದ ಮಾದರಿಯಿಂದ ಸಮಕಾಲೀನ ಸಮಾಜ ಜೀವನವನ್ನು ಶಿಲ್ಪದಲ್ಲಿ ಎರಕ ಹೊಯ್ದಿದ್ದಾರೆ. ಇದಲ್ಲದೇ ಶ್ರೇಷ್ಠ ಸಂಪ್ರದಾಯದ ಆಭರಣಗಳನ್ನು ಅಂದರೆ ವೈಜಯಂತಿ ಹಾರ, ತೋಳ್ಬಂದಿ ಮುಂತಾದವುಗಳನ್ನು ಅಷ್ಟೇ ಆಕರ್ಷಕವಾಗಿ ಕೆತ್ತಿದ್ದಾರೆ. ಒಟ್ಟಾರೆ ಸ್ಥಳೀಯ ಮತ್ತು ಶಿಷ್ಟ ಶೈಲಿಯ ಸಮನ್ವಯತೆಯನ್ನು ಇಲ್ಲಿಯ ಬಹುತೇಕ ಶಿಲ್ಪಗಳಲ್ಲಿ ಕಾಣಬಹುದು. ಮೂರನೆಯದಾಗಿ ಇಲ್ಲಿ ಎಲ್ಲ ಧರ್ಮಗಳಿಗೆ ಸಂಬಂಧಿಸಿದ ಶಿಲ್ಪಗಳು ಜೈನ, ವೈಷ್ಣವ, ಶೈವ ಶಾಕ್ತ ಸಂಪ್ರದಾಯಕ್ಕೆ ಸೇರಿದ ಶಿಲ್ಪಗಳು ದೊರೆತಿರುವದರಿಂದ ಸಕಲ ಧರ್ಮಗಳು ಈ ಪ್ರದೇಶದಲ್ಲಿ ಪ್ರಚಲಿತವಿರುವದನ್ನು ಬಿಂಬಿಸುವುವು. ಅಷ್ಟೇ ಅಲ್ಲದೇ ಈ ಪ್ರದೇಶದ ಪರಂಪರೆಯಲ್ಲಿ ಧಾರ್ಮಿಕ ಸಮನ್ವಯತೆ ಮತ್ತು ಸಹಿಷ್ಣುತೆ ಹಾಸುಹೊಕ್ಕಾಗಿರುವ ಅಂಶ ಸಿದ್ಧವಾಗುತ್ತದೆ.

ಇನ್ನು ಕೊನೆಯದಾಗಿ ಒಂದೇ ಪ್ರದೇಶದಲ್ಲಿ ಸುಮಾರು ೨೦ ಕ್ಕೂ ಹೆಚ್ಚು ವೀರಮಾಸ್ತಿ ಕಲ್ಲುಗಳು ದೊರೆತಿರುವುದರಿಂದ ಇವೆಲ್ಲ ಈ ಪ್ರದೇಶದ ಜನರ ಕ್ಷಾತ್ರವೃತ್ತಿ, ವೀರತ್ವ, ವೀರರಿಗಿರುವ ಸ್ಥಾನಮಾನ, ಹೋರಾಟದಲ್ಲಿ ನಿರತವಾಗಬೇಕಾದ ಅನಿವಾರ್ಯತೆ ಮತ್ತು ಜನಸಾಮಾನ್ಯರು ಎದುರಿಸಿದ ಅನಿಶ್ಚಿತತೆಯನ್ನು ಪ್ರತಿಬಿಂಬಿಸುತ್ತದೆ.

ಇದಲ್ಲದೆ ಇಲ್ಲಿ ದೊರೆತ ಅನೇಕ ಮಾಸ್ತಿಗಲ್ಲುಗಳು ಸತಿಪದ್ಧತಿ ಈ ಭಾಗದಲ್ಲಿ ಹೆಚ್ಚಾಗಿ ಪ್ರಚಲಿತವಿರುದ್ದುದನ್ನು ಬಿಂಬಿಸುವುದಲ್ಲದೇ ವಿಧವೆಯರಿಗಿರುವ ಸ್ಥಾನ ಮತ್ತು ಮಹಾಸತಿ ಪಡೆಯುವ ದೈವತ್ವದ ಸಂಕೇತವನ್ನು ವಿಶದಪಡಿಸುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Settar S., (1996), *Persuing death*, Dharwad.
೨. Settar S., (1987), *Memorial Stones*, Dharwad.
೩. ಚಿನ್ನಕ ಎಲಿಗಾರ., (೧೯೯೦), **ಶಾಸನಗಳಲ್ಲಿ ಸ್ತ್ರೀ ಸಮಾಜ**, ಧಾರವಾಡ.
೪. ಬಸವರಾಜ ಕಲ್ಗುಡಿ., (೧೯೮೫), **ಮಹಾಸತಿ ಆಚರಣೆ: ಒಂದು ಅಧ್ಯಯನ**, ಬೆಂಗಳೂರು.
೫. ಶೇಠ ಬಿ. ಎಸ್., (೧೯೯೧), **ಕರ್ನಾಟಕದಲ್ಲಿ ಸತಿ ಪದ್ಧತಿ**, ಬೆಳಗಾವಿ.
೬. ಪರಶಿವಮೂರ್ತಿ ಡಿ. ವಿ., (೧೯೯೯), **ಕನ್ನಡ ಶಾಸನ ಶಿಲ್ಪ**, ಹಂಪಿ.
೭. Percy Brown., (1971), *Indian Architecture, Bombary.*

ಡಾ॥ ಎಸ್. ಜಿ. ಸಾಮಕ್*

# ಬಾಳಗಾರು ಅಗ್ರಹಾರದ ಪ್ರಾಚ್ಯಾವಶೇಷಗಳು

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಬಹುತೇಕ ಅಗ್ರಹಾರಗಳು ತುಂಗಾ ನದಿಯ ಎಡದಂಡೆಯ ಮೇಲೆ ಸ್ಥಾಪಿತವಾಗಿರುವುದು ಒಂದು ಪ್ರಮುಖ ಅಂಶ. ಸುಮಾರು ೧೫ ಕ್ಕೂ ಹೆಚ್ಚು ಸಂಖ್ಯೆಯಲ್ಲಿರುವ ಈ ಅಗ್ರಹಾರಗಳನ್ನು ಅವುಗಳಲ್ಲಿ ದೊರಕುವ ಶಾಸನ, ದೇವಾಲಯ ಹಾಗೂ ಇನ್ನಿತರ ಪ್ರಾಚ್ಯಾವಶೇಷಗಳ ಆಧಾರದ ಮೇಲೆ ಶೈವ ಹಾಗೂ ವೈಷ್ಣವ ಅಗ್ರಹಾರಗಳೆಂದು ಗುರುತಿಸಬಹುದು. ಉದಾಹರಣೆಗೆ ಸದಾಶಿವ ಪುರ, ಶಿವರಾಜಪುರ ಅಗ್ರಹಾರಗಳು ಶೈವ ಪರಂಪರೆಯನ್ನು ಪ್ರತಿನಿಧಿಸಿದರೆ ಮಹಿಷಿ ಮತ್ತು ಬಾಳಗಾರು ಅಗ್ರಹಾರಗಳು ವೈಷ್ಣವ ಪರಂಪರೆಯ ಪ್ರತೀಕಗಳಾಗಿವೆ.

ತೀರ್ಥಹಳ್ಳಿಯಿಂದ ಶಿವಮೊಗ್ಗ ಕಡೆ ರಾಷ್ಟ್ರೀಯ ಹೆದ್ದಾರಿ ೧೩ರಲ್ಲಿ ಸುಮಾರು ೮ ಕಿ. ಮೀ. ಕ್ರಮಿಸಿದರೆ ತುಂಗೆಯ ಎಡದಂಡೆಯಲ್ಲಿ ಸಿಗುವ ಒಂದು ಪುಟ್ಟ ಹಳ್ಳಿ, ಬಾಳಗಾರು. ಒಡಲುಮನೆ ಗ್ರಾಮಕ್ಕೆ ಅದು ಸೇರಿದೆ. ಈ ಅಗ್ರಹಾರದಲ್ಲಿ ಹಲವು ಪ್ರಾಚ್ಯಾವಶೇಷಗಳಿದ್ದು ಅವುಗಳ ಪರಿಚಯವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

*ಐತಿಹ್ಯದಲ್ಲಿ ಬಾಳಗಾರು :* ಅಯೋಧ್ಯಪುರವೆಂದು ಪ್ರಸಿದ್ಧವಾಗಿದ್ದ ಈ ಅಗ್ರಹಾರವನ್ನು ಅಲ್ಲಿನ ಹಿರಿಯರು ರಾಮಾಯಣದ ಕಾಲಕ್ಕೆ ಕೊಂಡೊಯ್ಯುತ್ತಾರೆ. ಈ ಗ್ರಾಮದ ಅಧಿ ದೇವತೆ ಕೆಸರುಗುತ್ತಿ ರಾಮೇಶ್ವರ (ಕೇಸರಗುಪ್ತ ರಾಮೇಶ್ವರ). ಇದು ಹಿಂದೆ ಜ್ವಾಲಾನರಸಿಂಹ ದೇವಾಲಯವಾಗಿತ್ತೆಂದೂ, ಶ್ರೀರಾಮಚಂದ್ರ, ಆ ವಿಗ್ರಹವನ್ನು ಪಕ್ಕದ ತುಂಗೆಯಲ್ಲಿ ಜಲಾಧಿವಾಸ ಮಾಡಿಸಿ ಅದಿದ್ದ ಸ್ಥಳದಲ್ಲಿ ಮರಳಿನ ಲಿಂಗವನ್ನು (ರಾಮೇಶ್ವರ ಹೆಸರಿನಲ್ಲಿ) ಸ್ಥಾಪಿಸಿದನೆಂದು ಪ್ರತೀತಿ ಇದೆ. ಇದಕ್ಕೆ ಬಾಣಾಕಾರ ಕ್ಷೇತ್ರವೆಂಬ ಹೆಸರೂ ಇದ್ದು ಅದರಿಂದ ಬಾಳಗಾರೆಂಬ ಹೆಸರು ಬಂದಿರಬಹುದು.

*ಶಾಸನದಲ್ಲಿ ಬಾಳಗಾರು :* ಕ್ರಿ .ಶ. ೧೪೦೫ ಶಾಸನದ ಪ್ರಕಾರ ವಿಜಯನಗರ ದೊರೆ ಬುಕ್ಕರಾಯನ ಕಾಲದಲ್ಲಿ ಈ ಅಗ್ರಹಾರ ಸ್ಥಾಪಿತವಾಗಿರಬೇಕೆಂದು ತಿಳಿಯುತ್ತದೆ. ಇದೇ ಶಾಸನ ಶ್ರೀ ಸುಲಭತೀರ್ಥರ ನಂತರ ಕೂಡಲಿಯ ಮೂಲ ಅಕ್ಷೋಭ್ಯಮಠ ತನ್ನ ಶಾಖೆಯನ್ನು ಲೋಕವಂದಿತರ ಕಾಲದಲ್ಲಿ ಬಾಳಗಾರಿನಲ್ಲಿ ಸ್ಥಾಪಿಸಿತೆಂದು ತಿಳಿಯುತ್ತದೆ (ಎ. ಕ. ೮; ತೀ. ೧೨). ಮತ್ತೊಂದು ಶಾಸನ ಬೊಮ್ಮಣನ ಮಗ ವೀರಣ್ಣನೆಂಬುವನು ಅಯೋಧ್ಯಾ ಪುರದೊಳಿರುವ ರಾಮದೇವರ ಅಮೃತಪಡಿಗೆ ದಾನ ನೀಡಿದ ಬಗ್ಗೆ ತಿಳಿಸುತ್ತದೆ (ಎ.ಕ. ೮; ತೀ. ೨೪). ಅದೇ ರೀತಿ ಮಹಿಷಿಯ ಶಾಸನವೊಂದು ಶ್ರೀ ಹನುಮಂತದೇವರ ಅಮೃತಪಡಿಗೆ ನೀಡಿದ ದಾನದ ವಿವರ ನೀಡುತ್ತದೆ (ಕೆ.ಅ.ಶಾ.ಸಂ; ಸಂ. ೨೩೫) ಅಪ್ರಕಟಿತ ಹಸ್ತಪ್ರತಿಯೊಂದರಲ್ಲಿ ಮೈಸೂರಿನ ದೊರೆ ಕೃಷ್ಣರಾಜವಡೆಯರು ಇಲ್ಲಿನ ಮಠ ಹಾಗೂ ರಾಮದೇವರಿಗೆ ದಾನ ನೀಡಿದ್ದಾರೆ (ಕೆಳದಿ ಗುಂಡಾ ಜೋಯಿಸರಿಂದ ಪಡೆದ ಮಾಹಿತಿ). ಅಂದರೆ ವಿಜಯನಗರ ಕಾಲದಿಂದ ವಡೆಯರ ಕಾಲದ ವರೆಗೆ ಈ ಅಗ್ರಹಾರ ಸಾಕಷ್ಟು ಪ್ರಸಿದ್ಧಿಯಲ್ಲಿದ್ದು ಅನೇಕ ದಾನ ಧರ್ಮಗಳನ್ನು ಪಡೆದಿದೆ.

*ಬಾಳಗಾರಿನ ಪ್ರಾಚ್ಯಾವಶೇಷಗಳು :* ಇಂದು ಈ ಅಗ್ರಹಾರದಲ್ಲಿ ಎರಡು ವೈಷ್ಣವ ಮಠಗಳು (ಅಕ್ಷೋಭ್ಯ ಮಠ ಮತ್ತು ರಾಯರ ಮಠ), ರಾಮೇಶ್ವರ, ಚೆನ್ನಕೇಶವ, ಆಂಜನೇಯ, ಅನಂತಪದ್ಮನಾಭ ಮುಂತಾದ ದೇವಾಲಯಗಳು ಗತವೈಭವದ ಕುರುಹುಗಳಾಗಿ ನಿಂತಿವೆ. ಬಾಳಗಾರು ಇಂದಿಗೂ ತನ್ನ ಹೆಸರನ್ನು ಉಳಿಸಿಕೊಂಡಿದ್ದರೆ ಅದು ಅಕ್ಷೋಭ್ಯತೀರ್ಥ ಮಠದ ನಾಮಬಲ ದಿಂದ ಮಾತ್ರ. ತೀರ್ಥಹಳ್ಳಿಯ ಶಾಸನದ ಪ್ರಕಾರ ಮೂಲತಃ ಕೂಡಲಿಯ (ತುಂಗಭದ್ರ ಸಂಗಮ ಸ್ಥಳ) ಅಕ್ಷೋಭ್ಯಮಠ ಎರಡು ಭಾಗವಾಗಿ, ಅದರ ಶಾಖೆಯೊಂದನ್ನು ಲೋಕವಂದಿತರ ನೇತೃತ್ವದಲ್ಲಿ ಬಾಳಗಾರಿನಲ್ಲಿ ಸ್ಥಾಪಿಸಲಾಗಿದೆ.

ತುಂಗಾನದಿಯ ಎಡದಂಡೆಯ ಮೇಲೆ ಸುಂದರ ವನಸಿರಿಯ ಮಧ್ಯೆ ಪಶ್ಚಿಮಾಭಿಮುಖವಾಗಿರುವ ಈ ಮಠವನ್ನು ಸಂಪೂರ್ಣವಾಗಿ ಆಧುನೀಕರಿಸಲಾಗುತ್ತಿದೆ (ಅದರ ಮೂಲ ವಿನ್ಯಾಸ ಕಾಣಬರುತ್ತಿಲ್ಲ). ತಲ ವಿನ್ಯಾಸದಲ್ಲಿ ಚೌಕಾಕಾರವಾಗಿದ್ದು ಸುತ್ತಲೂ ಅನೇಕ ಕೋಣೆಗಳನ್ನು ಹೊಂದಿರುವ ಮಠದ ಮಧ್ಯದಲ್ಲಿರುವ ತೆರೆದ ಭಾಗದಲ್ಲಿ ರಾಮದೇವರ ದೇವಾಲಯ ವಿತ್ತು. ಅದನ್ನೂ ಪುನಃ ನಿರ್ಮಿಸಲಾಗುತ್ತಿದೆ.

ಅಕ್ಷೋಭ್ಯಮಠದ ಪಕ್ಕದಲ್ಲಿರುವ ಅನಂತಪದ್ಮನಾಭ ದೇವಾಲಯ ತಲ ವಿನ್ಯಾಸದಲ್ಲಿ ಗರ್ಭಗೃಹ ಹಾಗೂ ತೆರೆದ ಮುಖ ಮಂಟಪವನ್ನು ಹೊಂದಿದೆ. ಊರ್ಧ್ವ ವಿನ್ಯಾಸದಲ್ಲಿ ೩ ಅಡಿ ಎತ್ತರದ ಅಧಿಷ್ಠಾನದ ಮೇಲೆ ಕಣಶಿಲಾ ಹಲಗೆಗಳನ್ನು ಜೋಡಿಸಿ ಭಿತ್ತಿಯನ್ನು ನಿರ್ಮಿಸಲಾಗಿದೆ. ಬಲ ಹಾಗೂ ಎಡಭಾಗದ ಗೋಡೆಯ ಹೊರಭಾಗದಲ್ಲಿ ದಿಕ್ಪಾಲಕರ ಉಬ್ಬು ಶಿಲ್ಪ ಹಾಗೂ ಹಿಂಬದಿಯ ಗೋಡೆಯ ಮೇಲೆ ಅನಂತಶಯನ ವಿಷ್ಣು, ರಾಜ ರಾಣಿಯರು ಹಾಗೂ ತಂಬೂರಿ ಹಿಡಿದ ದಾಸರ ಉಬ್ಬು ಶಿಲ್ಪಗಳಿವೆ. ಅವುಗಳ ಮೇಲೆ ಆನೆ, ಕುದುರೆ, ನಂದಿ ಹಾಗೂ ಶಿವಲಿಂಗವನ್ನೂ ಗರ್ಭಗುಡಿಯ ದ್ವಾರದ ಇಕ್ಕೆಲಗಳಲ್ಲಿ

* 'ಸುಮಿತ್ರ', ಪ್ರಿಯದರ್ಶಿನಿ ಬಡಾವಣೆ, ವಿನೋಬನಗರ, ಶಿವಮೊಗ್ಗ - ೫೭೭ ೨೦೪

ವೈಷ್ಣವ ದ್ವಾರಪಾಲಕರನ್ನೂ ಕೆತ್ತಲಾಗಿದೆ. ಲಲಾಟ ಬಿಂಬದಲ್ಲಿ ಸೂರ್ಯನ ಉಬ್ಬು ಚಿತ್ರವಿದೆ. ಗರ್ಭಗೃಹದಲ್ಲಿದ್ದ ಮೂಲವಿಗ್ರಹ ಕಾಣೆಯಾಗಿದ್ದು ಉತ್ಸವಮೂರ್ತಿಯನ್ನು ಮಠದಲ್ಲಿಡಲಾಗಿದೆ. ೨ ಅಡಿ ಎತ್ತರದ ಕಂಚಿನ ಪದ್ಮನಾಭನ ಉತ್ಸವಮೂರ್ತಿ ತನ್ನ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದೆ ಹಾಗೂ ಕಮಲವನ್ನು ಹಿಡಿದಿದ್ದಾನೆ. ಕಮಲ ಪೀಠದ ಮೇಲೆ ಸಮಭಂಗದಲ್ಲಿ ನಿಂತಿರುವ ಈ ಮೂರ್ತಿ ವಿಜಯನಗರ ಕಾಲದ್ದಾಗಿದೆ. ದೇವಾಲಯದ ವಿನ್ಯಾಸ ಹಾಗೂ ಉಬ್ಬು ಚಿತ್ರಗಳನ್ನು ಗಮನಿಸಿದಾಗ ಇದು ಕೆಳದಿ ಕಾಲದ್ದೆಂದು ಖಂಡಿತ ಹೇಳಬಹುದು. ಈ ದೇವಾಲಯದ ಎಡಬದಿಗೆ ಸುಮಾರು ೧೦ ಮೀಟರ್ ದೂರದಲ್ಲಿ ಶಿಥಿಲವಾದ ಆಂಜನೇಯ ದೇವಾಲಯವಿದೆ. ಅಕ್ಷೋಭ್ಯತೀರ್ಥಮಠದ ಹಿಂಭಾಗದಲ್ಲಿ ರಾಮತೀರ್ಥ, ರಾಮಚಂದ್ರತೀರ್ಥ, ರಘುವರ ತೀರ್ಥ ಮುಂತಾದ ಯತಿಗಳ ವೃಂದಾವನಗಳಿವೆ. ಇಲ್ಲಿಂದ ತುಂಗಾನದಿಯವರೆಗೆ ಮೆಟ್ಟಿಲುಗಳನ್ನು ನಿರ್ಮಿಸಲಾಗಿದೆ. ಇಲ್ಲಿ ನಿಂತು ನದಿಯತ್ತ ನೋಡಿದರೆ ಮಧ್ಯಭಾಗದಲ್ಲಿ ಶಿವಲಿಂಗ ವೊಂದನ್ನು ಕಾಣಬಹುದು. ಮಠದ ಎದುರಿನಿಂದ ದೂರದ ರಾಮೇಶ್ವರ ದೇವಾಲಯದವರೆಗೆ ಹಿಂದೆ ವಿಶಾಲವಾದ ಬೀದಿ ಇದ್ದು ಅದರ ಇಕ್ಕೆಲಗಳಲ್ಲಿ ಅಗ್ರಹಾರದ ಮಹಾಜನರ ಮನೆಗಳಿದ್ದ ಕುರುಹುಗಳು ಕಾಣುತ್ತವೆ. ಆದರೆ ಈಗ ಅವೆಲ್ಲ ನಾಶವಾಗಿ ಅಲ್ಲಿ ಗದ್ದೆ ಹಾಗೂ ತೋಟಗಳಿವೆ.

ಅಕ್ಷೋಭ್ಯ ಮಠಕ್ಕೆ ತಿರುಗುವಾಗಲೇ ಬಾಳಗಾರು-ಮಹಿಷಿ ರಸ್ತೆಯಲ್ಲಿ ರಾಘವೇಂದ್ರಸ್ವಾಮಿ ಮಠವಿದ್ದು ಅದು ಬಹಳ ಇತ್ತೀಚಿನದ್ದಾಗಿದೆ. ಈ ಮಠದ ಎದುರಿನಲ್ಲಿರುವ ಆಂಜನೇಯ ದೇವಾಲಯ ಸಂಪೂರ್ಣವಾಗಿ ಜಂಬಿಟ್ಟಿಗೆಯಿಂದ ನಿರ್ಮಿತ ವಾಗಿದ್ದು ಹೆಂಚಿನ ಮಾಡನ್ನು ಹೊಂದಿದೆ. ಎತ್ತರವಾದ ಕಟ್ಟೆ ಹಾಗೂ ಅದರ ಮಧ್ಯದಲ್ಲಿ ಗರ್ಭಗುಡಿಯನ್ನು ನಿರ್ಮಿಸಲಾಗಿದೆ. ಅದರೊಳಗೆ ಅರ್ಧ ಅಡಿ ಎತ್ತರದ ಯೋಗಮುದ್ರಾ ಆಂಜನೇಯನ ಸುಂದರ ಮೂರ್ತಿ ಇದೆ. ಅದರಲ್ಲಿ ಹನುಮ, ಭೀಮ ಹಾಗೂ ಮಧ್ವರ ಅಂಶ ಸ್ಪಷ್ಟವಾಗಿ ಮೂಡಿರುವುದನ್ನು ಕಾಣಬಹುದು. ಆಂಜನೇಯ ದೇವಾಲಯದ ಹಿಂಭಾಗದಲ್ಲಿ ಸುಮಾರು ೩೦೦ ಮೀಟರ್ ದೂರದಲ್ಲಿದೆ ಚನ್ನಕೇಶವ ದೇವಾಲಯ. ಈ ದೇವಾಲಯ ಗರ್ಭಗೃಹ ಹಾಗೂ ತೆರೆದ ಮುಖಮಂಟಪವನ್ನು ಹೊಂದಿದೆ. ೨ ಅಡಿ ಅಧಿಷ್ಠಾನದ ಮೇಲೆ ಇದರ ಭಿತ್ತಿಯನ್ನು ಕಣಶಿಲೆಯ ಹಲಗೆಗಳನ್ನು ಲಂಬಾಕಾರವಾಗಿ ಜೋಡಿಸಿ ನಿರ್ಮಿಸಲಾಗಿದ್ದು ಅದು ಅಲಂಕಾರ ರಹಿತವಾಗಿದೆ. ಗರ್ಭ ಗುಡಿಯ ದ್ವಾರದ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರು, ಆಂಜನೇಯ ಹಾಗೂ ಗರುಡರ ಶಿಲ್ಪಗಳನ್ನು ಕಾಣಬಹುದು. ಲಲಾಟ ಬಿಂಬದಲ್ಲಿ ಲಕ್ಷ್ಮಿಯ ವಿಗ್ರಹವಿದೆ.

ಬಾಳಗಾರು ಬಸ್‌ನಿಲ್ದಾಣದಿಂದ ತೀರ್ಥಹಳ್ಳಿ ಕಡೆ ಸುಮಾರು ೩೦೦ ಮೀಟರ್ ಸಾಗಿ ಎಡಕ್ಕೆ ತಿರುಗಿ ಸಣ್ಣ ಗುಡ್ಡದ ಮೇಲೇರಿದರೆ ಕಾಣುವುದೆ ಈ ಗ್ರಾಮದ ಪ್ರಮುಖ ದೇವಾಲಯ ಕೆಸರುಗುತ್ತಿ ರಾಮೇಶ್ವರ ದೇವಾಲಯ. ಸುಮಾರು ೫೦ ಅಡಿ ಉದ್ದ ಹಾಗೂ ೫೦ ಅಡಿ ಅಗಲದ ಪ್ರಾಕಾರದೊಳಗೆ ಈ ದೇವಾಲಯವನ್ನು ನಿರ್ಮಿಸಲಾಗಿದೆ. ತಲವಿನ್ಯಾಸದಲ್ಲಿ ಗರ್ಭ ಗೃಹ, ಅಂತರಾಳ ಹಾಗೂ ತೆರೆದ ಮುಖಮಂಟಪವನ್ನು ಹೊಂದಿದೆ. ಊರ್ಧ್ವ ವಿನ್ಯಾಸದಲ್ಲಿ ೩ ಅಡಿ ಎತ್ತರದ ಅಧಿಷ್ಠಾನದ ಮೇಲೆ ಭಿತ್ತಿಯನ್ನು ನಿರ್ಮಿಸಲಾಗಿದೆ. ಬಲಭಾಗದ ಭಿತ್ತಿಯ ಮೇಲೆ ರಾಜನ ದರ್ಬಾರು, ಮೀನು ಹಾಗೂ ಯಾಳಿಯ ಉಬ್ಬು ಶಿಲ್ಪಗಳಿವೆ. ಹಿಂಭಾಗದ ಗೋಡೆಯ ಮೇಲೆ ದಂಪತಿಗಳು ಹಾಗೂ ಋಷಿಯ ಉಬ್ಬು ಶಿಲ್ಪಗಳಿದ್ದು ಎಡಗೋಡೆಯ ಮೇಲೆ ಆನೆ, ಮಿಥುನ ಶಿಲ್ಪ ಮುಂತಾದ ಉಬ್ಬು ಶಿಲ್ಪಗಳನ್ನು ಕಾಣಬಹುದು. ಅಂತರಾಳದ ದ್ವಾರದ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರು ಗಣಪತಿ ಹಾಗೂ ಮಹಿಷಮರ್ದಿನಿಯ ಶಿಲ್ಪಗಳನ್ನು ಕಾಣಬಹುದು. ಮುಖಮಂಟಪದಲ್ಲಿ ಕುಳಿತ ನಂದಿಯ ಶಿಲ್ಪವಿದೆ. ಇಲ್ಲಿನ ಉತ್ಸವ ಮೂರ್ತಿ ರಾಮೇಶ್ವರ ಕಂಚಿನ ೩ ಅಡಿ ಎತ್ತರದ ಶಿಲ್ಪವಾಗಿದ್ದು, ವಿಷ್ಣು ಹಾಗೂ ಶಿವನ ಅಂಶವನ್ನು ಹೊಂದಿದೆ. ೪ ಕೈಗಳನ್ನು ಹೊಂದಿರುವ ಈ ವಿಗ್ರಹದ ಕೆಳಗಿನ ಎರಡು ಕೈಗಳು ಅಭಯ ಮತ್ತು ವರದ ಮುದ್ರೆಯಲ್ಲಿವೆ. ಬಲಬದಿಯ ಮೇಲಿನ ಕೈಯಲ್ಲಿ ಗದೆ ಹಾಗೂ ಎಡಬದಿಯ ಮೇಲಿನ ಕೈಯಲ್ಲಿ ಜಿಂಕೆಯನ್ನು ಕಾಣಬಹುದು. ಶಿರದಲ್ಲಿ ಜಟಾಮುಕುಟ ಹಾಗೂ ಗಂಗೆಯನ್ನು ಹೊಂದಿರುವ ಈ ವಿಗ್ರಹ ವಿಜಯನಗರ ಶೈಲಿಯಲ್ಲಿದೆ.

ಒಮ್ಮೆ ಸುಮಾರು ೩೦೦ ಕ್ಕೂ ಹೆಚ್ಚು ವೈಷ್ಣವ ಮನೆಗಳನ್ನು ಹೊಂದಿದ್ದ ಈ ಅಗ್ರಹಾರ ೧೯೨೪ರಲ್ಲಿ ತುಂಗಾ ನದಿಯಲ್ಲಿ ಉಕ್ಕಿದ ಮಹಾ ಪ್ರವಾಹದಿಂದ ತನ್ನ ವೈಭವವನ್ನು ಕಳೆದುಕೊಂಡು ಇಂದು ತನ್ನ ಅಳಿದುಳಿದ ಪಳಿಯುಳಿಕೆಗಳ ಮೂಲಕ ಅಸ್ತಿತ್ವವನ್ನು ಉಳಿಸಿಕೊಂಡಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯ ಕರ್ನಾಟಿಕ - ಸಂಪುಟ ೮.**
೨. **ಕೆಳದಿ ಅರಸರ ಶಾಸನ ಸಂಪುಟ.**
೩. **ಕೆಳದಿ ನೃಪವಿಜಯ.**
೪. **ಶಿವತತ್ವರತ್ನಾಕರ.**

ಡಾ॥ ವಿಠ್ಠಲ ಪೋತದಾರ*

# ಟಿ. ಅಗ್ರಹಾರದ ಪ್ರಾಚ್ಯಾವಶೇಷಗಳು

ಸುಮಾರು ೫೦೦ ಜನಸಂಖ್ಯೆಯುಳ್ಳ ಟಿ. ಅಗ್ರಹಾರ ಗ್ರಾಮವು ದೇವನಹಳ್ಳಿ ತಾಲ್ಲೂಕಿನ ಚನ್ನರಾಯಪಟ್ಟಣ ಹೋಬಳಿಯಲ್ಲಿದೆ. ಈ ಗ್ರಾಮದಿಂದ ಕೆಲವು ಕಿ. ಮೀ. ದೂರದಲ್ಲಿರುವ ತೆಲ್ಲೋಹಳ್ಳಿಯಿಂದ ಇದಕ್ಕೆ ತೆಲ್ಲೋಹಳ್ಳಿ ಅಗ್ರಹಾರ (ಟಿ. ಅಗ್ರಹಾರ) ಎಂದು ಹೆಸರು ಬಂತು, ಎಂಬುದು ಗ್ರಾಮಸ್ಥರ ಅಂಬೋಣ.

೫೦ ವರ್ಷಗಳ ಹಿಂದೆ ಈ ಗ್ರಾಮವನ್ನು ಕತ್ತಾಳೆ ಅಗ್ರಹಾರ ಎಂದು ಕರೆಯಲಾಗುತ್ತಿತ್ತು. ಏಕೆಂದರೆ ಗ್ರಾಮದ ರಕ್ಷಣೆಗಾಗಿ ಸುತ್ತಲೂ ಕತ್ತಾಳೆ ಮರದ ಬೇಲಿಯನ್ನು ಬೆಳಸಿದ ಕಾರಣ ಈ ರೀತಿ ಹೆಸರಿಸಲಾಗಿತ್ತು ಎಂಬುದು ಹಿರಿಯರ ಅಭಿಪ್ರಾಯವಾಗಿದೆ.

ಪ್ರಸ್ತುತ ಗ್ರಾಮವು ಪ್ರಾಚೀನ ಕಾಲದಲ್ಲಿದ್ದ ಅಗ್ರಹಾರ ಗ್ರಾಮಕ್ಕಿಂತ ಒಂದು ಕಿ. ಮೀ. ದೂರದಲ್ಲಿ ಬೆಳೆದು ನಿಂತಿದೆ. ಈ ಗ್ರಾಮದ ಸ್ಥಾಪಕರು ತಿಮ್ಮಯ್ಯ ಭಟ್ಟರು. ಆದ್ದರಿಂದ ಇದನ್ನು ಟಿ. ಅಗ್ರಹಾರ ಎಂದು ಕರೆಯಲಾಗಿದೆ ಎಂದು ಕೂಡ ಹೇಳಲಾಗುತ್ತಿದೆ.

ಈ ಗ್ರಾಮವು ಒಂದು ಅಗ್ರಹಾರ ಅಥವಾ ಬ್ರಾಹ್ಮಣರ ನೆಲೆಯಾಗಿದ್ದ ಬಗ್ಗೆ ತಿಳಿಸಲು ಇಲ್ಲಿ ದೊರೆತಿರುವ ಶಿಲ್ಪಗಳು ಉತ್ತಮ ಆಧಾರಗಳಾಗಿವೆ. ಊರಿನ ಮೇರೆಯಲ್ಲಿರುವ ಗೋಕಲ್ಲು, ಗ್ರಾಮದ ಜನತೆಗೆ ಪೂಜನೀಯವಾಗಿದ್ದು ನವರಾತ್ರಿ ಮತ್ತು ಸಂಕ್ರಾಂತಿ ಸಮಯದಲ್ಲಿ ಇದಕ್ಕೆ ವಿಶೇಷ ಪೂಜೆಯನ್ನು ಸಲ್ಲಿಸಲಾಗುತ್ತದೆ.

ಹೆಚ್ಚಿನ ಕುತೂಹಲಕರವಾದ ಶಿಲ್ಪ ಗ್ರಾಮದ ಹೊರಗಡೆಯಲ್ಲಿರುವ ಶಿಥಿಲವಾದ ದೇವಾಲಯದಲ್ಲಿರುವ ಶ್ರೀ ವೇಣುಗೋಪಾಲನದಾಗಿದೆ. ಈ ದೇವಾಲಯವು ಊರಿನಿಂದ ಸುಮಾರು ಒಂದು ಕಿ. ಮೀ. ದೂರದಲ್ಲಿರುವ ಹೊಲದಲ್ಲಿದೆ. ದೇವಾಲಯದ ಎದುರುಗಡೆ ಗರುಡಗಂಬವಿದ್ದು ಅದರ ಮೇಲೆ ಆಂಜನೇಯನ ಶಿಲ್ಪವಿದೆ. ದೇವಾಲಯದ ರಚನೆ ಸರಳವಾಗಿದ್ದು ಮುಖಮಂಟಪದಲ್ಲಿರುವ ಕಂಬಗಳೂ ಸಹ ಸರಳ ಕೆತ್ತನೆಯನ್ನು ಹೊಂದಿವೆ. ಚಿಕ್ಕದಾದ ಅಂತರಾಳದ ಬಾಗಿಲಿನ ಚೌಕಟ್ಟಿನಲ್ಲಿ ದೀಪಾರಾಧನೆಗೆ ಬಳಸಲು ಕೋಷ್ಠಗಳನ್ನು ಮಾಡಲಾಗಿದೆ.

ಗರ್ಭಗೃಹ ಕಿರಿಯದಾಗಿದ್ದು, ಅಲ್ಲಿರುವ ಚೌಕಾಕಾರದ ವೃಂದಾವನದ ಮಧ್ಯಭಾಗದಲ್ಲಿ ವೇಣುಗೋಪಾಲ, ರುಕ್ಮಿಣಿ ಮತ್ತು ಸತ್ಯಭಾಮಾ ಅವರ ಉಬ್ಬು ಶಿಲ್ಪಗಳಿವೆ. ವೇಣುಗೋಪಾಲನು ನಾಲ್ಕು ಕೈಗಳನ್ನು ಹೊಂದಿದ್ದು, ಮುಂಭಾಗದ ಕೈಗಳಲ್ಲಿ ಕೊಳಲು, ಹಿಂಭಾಗದ ಬಲಗೈಯಲ್ಲಿ ಚಕ್ರ ಮತ್ತು ಎಡಗೈಯಲ್ಲಿ ಶಂಖ ಹೊಂದಿದ್ದಾನೆ. ವೇಣುಗೋಪಾಲನ ಬಲಬದಿಗೆ ರುಕ್ಮಿಣಿ ಎಡಗೈಯಲ್ಲಿ ಕಮಲ ಹಿಡಿದು ನಿಂತಿದ್ದು, ಎಡಬದಿಗೆ ಸತ್ಯಭಾಮಾ ನೀಲೋತ್ಪಲ ಹೂವು ಹಿಡಿದು ನಿಂತಿರುವುದನ್ನು ಕಾಣಬಹುದು. ವೈಖಾನಸ ಆಗಮದ ಪ್ರಕಾರ ಈ ಮೂರ್ತಿಶಿಲ್ಪದ ವಿವರಗಳು ಸರಿಯಾಗಿವೆ.[೧] ವಿಷ್ಣು ಧರ್ಮೋತ್ತರ ಪುರಾಣವೂ ಸಹ ಇದೇ ಪ್ರತಿಮಾ ಲಕ್ಷಣಗಳನ್ನು ಸೂಚಿಸುತ್ತದೆ.[೨] ಆದರೆ ಈ ಮೂರ್ತಿ ಶಿಲ್ಪಗಳನ್ನು ಒಂದು ವೃಂದಾವನದ ಮೇಲೆ ಕೆತ್ತಿರುವುದು ಅನೇಕ ಪ್ರಶ್ನೆಗಳಿಗೆ ಎಡೆಮಾಡಿಕೊಟ್ಟಿದೆ.

ಮೊದಲನೆಯದಾಗಿ ವೃಂದಾವನದ ಮೇಲೆ ದೇವತೆಗಳ ಶಿಲ್ಪಗಳನ್ನು ಕೆತ್ತುವದು ಸಾಮಾನ್ಯ ರೂಢಿಯದಲ್ಲ. ವಿಶೇಷವಾಗಿ ಮಾಧ್ವಯತಿಗಳ ವೃಂದಾವನವಾಗಿದ್ದಾಗ ಸ್ತ್ರೀದೇವತೆಗಳ ವಿಗ್ರಹಗಳು ಕಂಡು ಬರುವುದಿಲ್ಲ. ಬದಲಾಗಿ ಈ ವೃಂದಾವನವು ತುಳಸೀವೃಂದಾವನವಾಗಿರುವುದಾದರೆ ಅದನ್ನು ಗರ್ಭಗೃಹದಲ್ಲಿ ನಿರ್ಮಿಸುವ ಅವಶ್ಯಕತೆ ಇರುತ್ತಿರಲಿಲ್ಲ. ಶ್ರೀವೈಷ್ಣವರಲ್ಲಿ ಈ ರೀತಿಯಾಗಿ ಯತಿಗಳಿಗೆ ವೃಂದಾವನ ನಿರ್ಮಿಸುವ ಸಂಪ್ರದಾಯವಿಲ್ಲ ಎಂಬುದನ್ನು ಗಮನಿಸಬೇಕು. ಇತ್ತೀಚೆಗೆ ಇಂತಹ ಶಿಲ್ಪಗಳಿರುವ ಮತ್ತೊಂದು ವೃಂದಾವನವನ್ನು ನಾನು ರಾಜಾನುಕುಂಟೆ ಹತ್ತಿರದಲ್ಲಿರುವ ಅರಕೆರೆ ಗ್ರಾಮದಲ್ಲಿಯೂ ಗಮನಿಸಿದ್ದೇನೆ. ಆದರೆ ಈ ವೃಂದಾವನವನ್ನು ಒಂದು ಕಲ್ಲಿನ ಮಂಟಪದಲ್ಲಿ ರಚಿಸಲಾಗಿದ್ದು, ಗರುಡಗಂಬವೂ ಸಹ ಮಂಟಪದ ಮಧ್ಯಭಾಗ ದಲ್ಲಿ ಇರುತ್ತದೆ. ಈ ಕಂಬದ ಮೇಲೆಯೂ ಸಹ ಆಂಜನೇಯನ ಉಬ್ಬು ಶಿಲ್ಪವಿದೆ. ಇಲ್ಲಿ ವಿವರಿಸಿದ ಈ ವೃಂದಾವನಗಳ ಕಾಲಮಾನ, ಶಿಲ್ಪಗಳ ಆಧಾರದ ಮೇಲೆ ವಿಜಯನಗರದ ನಂತರದ ಕಾಲಮಾನವಾಗಿ ಸು. ೧೬ನೆಯ ಶತಮಾನ ಆಗಿರಬಹುದು.

ಈ ಗ್ರಾಮದ ಇತಿಹಾಸದ ಬಗ್ಗೆ ಶಾಸನಗಳಲ್ಲಿ ಉಲ್ಲೇಖ ದೊರೆಯುವುದಿಲ್ಲ. ಆದರೆ ಇದರ ಸಮೀಪದಲ್ಲಿರುವ ಊರುಗಳಲ್ಲಿರುವ ದೇವಾಲಯಗಳು, ಮತ್ತು ಶಾಸನಗಳು ದೇವನಹಳ್ಳಿ ಪ್ರದೇಶದಲ್ಲಿ, ವಿಷ್ಣುವಿನ ಆರಾಧನೆ, ವೈಷ್ಣವ ಧರ್ಮದ ಪ್ರಬುದ್ಧ ಸ್ಥಿತಿಯಿದ್ದ ಬಗ್ಗೆ ಹೆಚ್ಚಿನ ವಿವರಗಳನ್ನು ನೀಡುತ್ತವೆ.

* ಇತಿಹಾಸ ಉಪನ್ಯಾಸಕ, ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು, ಯಲಹಂಕ, ಬೆಂಗಳೂರು - ೫೬೦ ೦೬೪

(ದೇವನಹಳ್ಳಿ, ನಲ್ಲೂರು, ಜಾಲಿಗೆ ಮುಂತಾದವು). ದೇವನಹಳ್ಳಿ ತಾಲೂಕಿನಲ್ಲಿರುವ ಸೋಮನಹಳ್ಳಿ ಗ್ರಾಮದ ಶಾಸನ "ಶ್ರೀ ರುಕ್ಮಿಣಿ ಸತ್ಯಭಾಮ ಸಹಿತ ಶ್ರೀ ಮದನಗೋಪಾಲಸ್ವಾಮಿ" ಎಂಬ ಉಲ್ಲೇಖವನ್ನು ನೀಡುತ್ತದೆ.[೩]

ಇದರ ಜೊತೆಗೆ ಭಗ್ನ ಗೊಂಡಿರುವ ಒಂದು ಸ್ತಂಭದ ತುಂಡಿನ ಒಂದು ಭಾಗದಲ್ಲಿ ಕೆತ್ತಿದ ಆಂಜನೇಯ ಶಿಲ್ಪ ಮತ್ತು ಅದರ ಇನ್ನೊಂದು ಬದಿಗೆ ಕಂಡುಬರುವ ಶಂಖ, ಚಕ್ರ ಮತ್ತು ಮೂರುನಾಮಗಳ ಚಿಹ್ನೆ ಶ್ರೀ ವೈಷ್ಣವ ಧರ್ಮದ ಸಂಕೇತಗಳಾಗಿವೆ. ಆದರೆ ಈ ಅವಶೇಷ, ಗ್ರಾಮದ ಒಂದು ಚಿಕ್ಕ ಕೆರೆಯಲ್ಲಿ ಬಿಡಿಯಾಗಿ ದೊರೆತಿರುವುದರಿಂದ ಇದನ್ನು ಈ ಪ್ರದೇಶದ ಇತಿಹಾಸದೊಡನೆ ಪರಿಶೀಲಿಸಬಹುದೇ? ಎಂಬುದನ್ನು ಗಮನಿಸಬೇಕು.

ಕೊನೆಯದಾಗಿ ಟಿ. ಅಗ್ರಹಾರಕ್ಕೆ ಹತ್ತಿರದಲ್ಲಿರುವ ಇನ್ನೊಂದು ಗ್ರಾಮದ ಹೆಸರು ಗೋಕೆರೆ. ಇಲ್ಲಿ ಒಂದು ಕೆರೆಯಿದ್ದು, ಇದು ಬಹಳ ಪ್ರಾಚೀನವಾದುದು ಎಂಬುದು ಊರಿನವರ ಅಭಿಪ್ರಾಯ. ಒಟ್ಟಿನಲ್ಲಿ ಈ ಅವಶೇಷಗಳು ಇಂದು ನಶಿಸಿರುವ, ವಲಸೆ ಹೋಗಿರುವ ಟಿ. ಅಗ್ರಹಾರದ ಇತಿಹಾಸ ಕುರಿತಂತೆ ಆಸಕ್ತಿ ಮೂಡಿಸುವಲ್ಲಿ ಸಹಾಯಕಾರಿಯಾಗಿವೆ.



(ಕೃತಜ್ಞತೆ : ಕ್ಷೇತ್ರಕಾರ್ಯದಲ್ಲಿ ಸಹಕಾರ ನೀಡಿದ ನನ್ನ ಸಹೋದ್ಯೋಗಿ ಶ್ರೀ ಜೆ. ಬಿ. ಜನಾರ್ದನ ಮತ್ತು ವಿದ್ಯಾರ್ಥಿ ರಮೇಶನಿಗೆ ಕೃತಜ್ಞತೆಗಳು)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. T. A. Gopinath Rao., *Elements of Hindu Iconography*, Vol. II, ಪುಟ. ೨೦೩.

೨. ಅದೇ.

೩. *EC IX* (ಹಳೆಯ), Dv. 37.

ಜಗದೀಶ ಎಂ. ಹೆಚ್. ಅಗಸಿಬಾಗಲವರ *

# ಮಲ್ಲಿತಂಮ್ಮ ಕಂಡರಿಸಿದ ಶ್ರೀಧರ ವಿಗ್ರಹ

ಹೊಯ್ಸಳ ಕಾಲದ ಪ್ರಸಿದ್ಧ ದೇಗುಲ ಶಿಲ್ಪಿ ಮಲ್ಲಿತಂಮ್ಮ. ಅಮೃತಾಪುರದ ಅಮೃತೇಶ್ವರ ದೇವಾಲಯವನ್ನು ಕ್ರಿ.ಶ. ೧೨೦೬ರಲ್ಲಿ, ಹಾರನಹಳ್ಳಿ, ಗೋವಿಂದನಹಳ್ಳಿ ಮತ್ತು ನುಗ್ಗೇಹಳ್ಳಿಯಲ್ಲಿ ಕ್ರಮವಾಗಿ ಲಕ್ಷ್ಮೀನರಸಿಂಹ, ಪಂಚಲಿಂಗೇಶ್ವರ ಮತ್ತು ಲಕ್ಷ್ಮೀನರಸಿಂಹ ದೇವಾಲಯಗಳನ್ನು ಕ್ರಿ.ಶ. ೧೨೩೪-೧೨೩೭ರ ಅವಧಿಯಲ್ಲಿ, ಜಾವಗಲ್ಲಿನ ಲಕ್ಷ್ಮೀ ನರಸಿಂಹ ದೇವಾಲಯವನ್ನು ಕ್ರಿ. ಶ. ೧೨೪೬ ಮತ್ತು ಸೋಮನಾಥಪುರದ ಕೇಶವದೇವಾಲಯವನ್ನು ಕ್ರಿ.ಶ. ೧೨೬೮ರಲ್ಲಿ ನಿರ್ಮಿಸಲಾಗಿದೆ. ಈ ಎಲ್ಲಾ ದೇವಾಲಯಗಳಲ್ಲಿ ಮಲ್ಲಿತಂಮ್ಮನ ಹೆಸರುಳ್ಳ ಶಿಲ್ಪಗಳಿವೆ. ಅಮೃತಾಪುರ ಮತ್ತು ಸೋಮನಾಥಪುರ ದೇವಾಲಯಗಳ ನಿರ್ಮಾಣ ಕಾಲದ ಅಂತರ ಸುಮಾರು ೬೦ ವರ್ಷ ಇದೆ. ಅಮೃತಾಪುರ ದೇವಾಲಯ ನಿರ್ಮಾಣ ಕಾಲದಲ್ಲಿ ಮಲ್ಲಿತಂಮ್ಮನ ವಯಸ್ಸು ೨೦ ವರ್ಷವಾಗಿದ್ದರೆ ಆತನು ೮೦ನೇ ವಯಸ್ಸಿನವರೆಗೆ ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದನೆಂದು ಕಾಣುತ್ತದೆ.

ವಿಗ್ರಹಗಳ ಕೆತ್ತನೆಗೆ ತಾಳಮಾನ ಮುಖ್ಯ. ಮುಖದ ಉದ್ದವನ್ನು ಒಂದು ತಾಳ ಪ್ರಮಾಣವೆಂದು ಶಾಸ್ತ್ರಗಳಲ್ಲಿ ಹೇಳಿದೆ. ಈ ತಾಳ ಪ್ರಮಾಣವನ್ನು ಅನುಸರಿಸಿ ದೇಹದ ವಿವಿಧ ಭಾಗಗಳ ಪ್ರಮಾಣಗಳು ಹೇಳಲ್ಪಟ್ಟಿವೆ. ಕೆಲ್ಲೆಸನ್ ಕಾಯ್ಲರ್ ವಿಗ್ರಹಗಳ ಪಕ್ಕದಲ್ಲಿ ಅಳತೆ ಪಟ್ಟಿಯಿಟ್ಟು ವಿವಿಧ ತಾಳಮಾನಗಳನ್ನು ತೋರಿಸಿದ್ದಾರೆ. ಶಿಲ್ಪಿ ಹೊನ್ನೋಜ ಅರಳಗುಪ್ಪೆಯಲ್ಲಿ ಕಂಡರಿಸಿರುವ ವಿಷ್ಣು ವಿಗ್ರಹ ೨೧/೩ ತಾಲ ಮತ್ತು ಮಲ್ಲಿತಂಮ್ಮ ಸೋಮನಾಥಪುರದಲ್ಲಿ ಕಂಡರಿಸಿರುವ ವಿಷ್ಣು ವಿಗ್ರಹ ೯ ತಾಲ ಪ್ರಮಾಣ ಎಂದು ತೋರಿಸಿದ್ದಾರೆ.[೧]

ಜಾವಗಲ್ಲಿನ ಲಕ್ಷ್ಮೀನರಸಿಂಹ ದೇವಾಲಯದ ಹೊರಭಾಗದ ನೈರುತ್ಯಮೂಲೆಯಲ್ಲಿ ಇಬ್ಬರು ಪರಿಚಾರಿಕೆಯರ ಮಧ್ಯದಲ್ಲಿ ಶ್ರೀಧರ ವಿಗ್ರಹವಿದೆ. ಈ ವಿಗ್ರಹದ ಬಲ ಪಕ್ಕದಲ್ಲಿ ಸಣ್ಣ ಶಾಸನವಿದೆ. ಈ ಶಾಸನವನ್ನು ಡಾ॥ ಶ್ರೀಕಂಠಶಾಸ್ತ್ರೀಯವರು ತಮ್ಮ ಹೊಯ್ಸಳ ವಾಸ್ತುಶಿಲ್ಪ ಗ್ರಂಥದಲ್ಲಿ ಗುರ್ತಿಸಿದ್ದಾರೆ.[೨] ಅವು ಹೀಗಿವೆ.

ಹ ೯, ಸಿ ೩, ಟಹ ೬, ರೊ ೨, ಪಾ ೧,

ಈ ಪದಗಳು ಮತ್ತು ಅವುಗಳು ಏನನ್ನು ಸೂಚಿಸುತ್ತವೆ ಎಂಬ ಬಗ್ಗೆ ವಿರಗಳಿರುವುದಿಲ್ಲ. ಈ ಪದಗಳಿಗೆ ಶಿಲ್ಪಶಾಸ್ತ್ರದ ದೃಷ್ಟಿಯಿಂದ ಅರ್ಥವನ್ನು ನೀಡಬಹುದಾಗಿದೆ. ಕಲ್ಯಾಣ ಚಕ್ರವರ್ತಿ ಸರ್ವಜ್ಞ ಸೋಮೇಶ್ವರ ರಚಿಸಿದ ಮಾನಸೋಲ್ಲಾಸ ಗ್ರಂಥವು ಅನೇಕ ವಿಷಯಗಳಿಗೆ ಸಂಬಂಧಿಸಿದೆ.[೩] ಇಲ್ಲಿನ ತೃತೀಯ ವಿಂಶತಿಯಲ್ಲಿ ಮೂರ್ತಿ ಸ್ವರೂಪ, ತಾಲ ಲಕ್ಷಣ, ಪ್ರತಿಮಾಮಾನ ಮತ್ತು ಸೂತ್ರ ಕ್ರಮ ಲಕ್ಷಣಗಳನ್ನು ವಿವರಿಸಲಾಗಿದೆ.

ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಲಾಗಿದೆ. ಮುಖವು ಒಂದು ತಾಲಪ್ರಮಾಣವಾದರೆ, ಗ್ರೀವಾ (ಕಂಠ) ಭಾಗವು ನಾಲ್ಕು ಅಂಗುಲ ಪ್ರಮಾಣದಷ್ಟು ಇರಬೇಕು. ಕಂಠದ ಕೆಳಭಾಗದಿಂದ ಎದೆಯ ಭಾಗದವರೆಗೆ ಒಂದ ತಾಳ ಪ್ರಮಾಣ ವಿರಬೇಕು. ಅಲ್ಲಿಂದ ಹೊಕ್ಕಳವರೆಗೆ ಒಂದು ತಾಳಪ್ರಮಾಣ ವಿರಬೇಕು. ನಾಭಿ (ಹೊಕ್ಕಳು)ಯಿಂದ ಕೆಳಕ್ಕೆ ಲಿಂಗದ (ಶಿಶ್ನ) ಬುಡವರೆಗೆ ಒಂದು ತಾಳ ಪ್ರಮಾಣವಿರಬೇಕು. ತೊಡೆಯು ಎರಡು ತಾಳ ಪ್ರಮಾಣವಿರಬೇಕು. ಜಾನು (ಮೊಣಕಾಲು) ನಾಲ್ಕು ಅಂಗುಲ ಪ್ರಮಾಣವಿರಬೇಕು. ಜಂಘೆಯು (ಕೆಳತೊಡೆ) ಎರಡು ತಾಳ ಪ್ರಮಾಣವಿರಬೇಕು. ಪಾದವು ನಾಲ್ಕು ಅಂಗುಲ ಪ್ರಮಾಣವಿರಬೇಕು. ಕೇಶಾದಿಪಾದಾಂತ (ಕೂದಲನ್ನಾಧರಿಸಿ ಪಾದದ ಕೊನೆವರೆಗೆ) ಈ ಪ್ರಮಾಣವು ನವತಾಲ ಎಂದು ಹೇಳಲಾಗಿದೆ.

ಈ ವಿವರಣೆಗೆ ಹೋಲಿಸಿದರೆ ಶ್ರೀಧರ ವಿಗ್ರಹದ ಬಲ ಪಕ್ಕದಲ್ಲಿನ ಪದಗಳಿಗೆ ಅರ್ಥಗಳನ್ನು ನೀಡಬಹುದಾಗಿದೆ. ಅಕ್ಷರಗಳು ಕೆಲವು ಪದಗಳ ಸಂಕ್ಷಿಪ್ತರೂಪ ಮತ್ತು ಸಂಖ್ಯೆಗಳು ಪ್ರಮಾಣಗಳನ್ನು ಸೂಚಿಸುತ್ತವೆ.

ಹ - ೯, ಇದರಲ್ಲಿ : ಹ : ಹಸ್ತ ಎಂದೂ ವಿಗ್ರಹವು ೯ ಹಸ್ತ ಪ್ರಮಾಣದ್ದು ಎಂದು ಸೂಚಿಸುತ್ತದೆ. ಹಸ್ತ ಪ್ರಮಾಣವು ತಾಲ ಪ್ರಮಾಣವಾಗಿದೆ. ವಿಗ್ರಹದ ಮುಖವು (ಕೂದಲತುದಿಯಿಂದ ಗದ್ದದವರೆಗಿನ ಎತ್ತರವು) ೧ ಪ್ರಮಾಣವಾದರೆ, ವಿಗ್ರಹದ ಎತ್ತರವು ೯ ಪ್ರಮಾಣವಾಗಿದೆ.

ಸಿ - ೩, ಸಿರ ಎಂದೂ ಶಿರಸ್ಸಿನ ಅಳತೆಯು ೩ ತಾಲಪ್ರಮಾಣ ಎಂದು ಸೂಚಿಸುತ್ತದೆ. ಮಾನಸೋಲ್ಲಾಸದಲ್ಲಿ ಶಿರಸ್ಸಿನ ಎಡಪಾರ್ಶ್ವ ಮತ್ತು ಬಲಪಾರ್ಶ್ವಗಳೆರಡನ್ನು ಸುತ್ತಿಬಿಟ್ಟಾಗ ಅದು ೩ ತಾಲ ಪ್ರಮಾಣವಾಗುತ್ತದೆ. ಇದನ್ನು ಸಿರ ಪ್ರಸ್ಥಿವಾಸನ ಸೂತ್ರ ಎಂದು ಕರೆಯುತ್ತಾರೆ.[೪] ಇದು ತಲೆಯ ಹಿಂಭಾಗದಲ್ಲಿ

* ನಂ. ೬೬, ಮೊದಲನೇ ಕ್ರಾಸ್, ಹೊಸಮನೆ ಬಡಾವಣೆ, ಶಿವಮೊಗ್ಗ ೫೭೭ ೨೦೧

ಹಾದು ಹೋಗುತ್ತದೆ. ಇದು ನಾಲ್ಕು ಕೈಗಳುಳ್ಳ ವಿಗ್ರಹದ ಕೊನೆಯ ಮಿತಿಯನ್ನು ಕೂಡಾ ಸೂಚಿಸುತ್ತದೆ. ಆದ್ದರಿಂದ ಇದು ಶಿರದ ಅಳತೆ ಅಥವಾ ವಿಗ್ರಹದ ಪಕ್ಷಸೂತ್ರ ಆಗಿರಬೇಕು.

ಟಹ - ೬: ತೊಡೆಯ ಕೆಳಭಾಗದಲ್ಲಿ ಗುಲ್ಫ ಪ್ರದೇಶ ವಿರುತ್ತದೆ (ಪಾದದ ಹರಡು). ಅದರ ನಾಹವು ೧೬ ಅಂಗುಲ ಗಳಷ್ಟಿರಬೇಕು. ನಾಹ ಎಂದರೆ ವ್ಯಾಸ ಎಂದು ಅರ್ಥ. ಒಂದು ಪಾದದ ನಾಹವು ೬ ಅಂಗುಲ ಪ್ರಮಾಣ ಎಂದು ಗೋಪಿನಾಥರಾವ್ ಅವರು ತೋರಿಸಿದ್ದಾರೆ.

ರೊ - ೨: ಊರೊ ಎಂದರೆ ತೊಡೆಯ ಅಳತೆಯಾಗಿದ್ದು, ಇದು ೨ ತಾಲ ಪ್ರಮಾಣವಿರಬೇಕು. ಮಾನಸೋಲ್ಲಾಸದ ಕನ್ನಡ ಆವೃತ್ತಿಯಲ್ಲಿ ಉರು ೨ ಎಂದು ತಾಲ ಪ್ರಮಾಣವನ್ನು ಸೂಚಿಸುತ್ತಾ, ಅಡಿಟಿಪ್ಪಣಿಯಲ್ಲಿ ಮೂಲದಲ್ಲಿ ಊರೊ ಎಂಬ ಪದವಿದ್ದು ಅದು ಬಹುವಚನವನ್ನು ಸೂಚಿಸುತ್ತದೆ ಎಂದು ತಿಳಿಸಲಾಗಿದೆ. ಇಲ್ಲಿ ಮೂಲದಲ್ಲಿನ ರೂಪವೇ ಇದ್ದು ಊರೊ ಅಂದರೆ ತೊಡೆಯ ಉದ್ದವು ೨ ತಾಲಪ್ರಮಾಣ ಎಂದು ತಿಳಿಯಬಹುದು.

ಪಾ - ೧ : ಪಾದದ ಹಿಂಭಾಗವು ಪಾರ್ಷ್ಣಿ. ಇದರ ಎತ್ತರವು ನಾಲ್ಕು ಅಂಗುಲವು. ಹಿಮ್ಮಡಿಗೆ ರಚಿಸಲಾಗಿರುವ ತಿರ್ಯಕ್‌ಸೂತ್ರವು ಮೂರು ಅಂಗುಲಗಳಿರಬೇಕು, ಹಿಮ್ಮಡಿಯ ವಿಸ್ತಾರವು ಐದು ಅಂಗುಲಪ್ರಮಾಣವು ಇರಬೇಕು ಎಂದು ಹೇಳಲಾಗಿದೆ. ಇದು ಹಿಮ್ಮಡಿಯಿಂದ ಒಂದು ಪ್ರಮಾಣಕ್ಕೆ ಎತ್ತರದಲ್ಲೂ ಮತ್ತು ಒಂದು ಭಾಗ ಪ್ರಮಾಣಕ್ಕೆ ಮುಂಭಾಗಕ್ಕೂ ಇರಬೇಕು. ಪ್ರಾಯಶ ಪಾ - ೧, ಪಾರ್ಷ್ಣಿಯ ಅಳತೆಯಾಗಿದೆ.

ಈ ಎಲ್ಲಾ ಪ್ರಮಾಣಗಳನ್ನು ವಿಗ್ರಹದ ಪಕ್ಕದಲ್ಲಿ ಮುಖದ ಅಳತೆಯನ್ನು ಒಂದು ತಾಲ ಎಂದು ಪರಿಗಣಿಸಿ, ಫೋಟೋ ಪಕ್ಕದಲ್ಲಿ ತೋರಿಸಲಾಗಿದೆ. ಅಲ್ಲದೆ ಶಾಸನದ ಪಡಿಯಚ್ಚನ್ನು ಒದಗಿಸಲಾಗಿದೆ. ಇದರಿಂದ ಶಾಸ್ತ್ರವನ್ನು ಆದರಿಸಿ ವಿಗ್ರಹಗಳನ್ನು ಕಂಡರಿಸುತ್ತಿದ್ದರು ಎಂದೂ ಮತ್ತು ಇಲ್ಲಿ ಮಲ್ಲಿತಂಮ್ಮ ಅದನ್ನು ಪಾಲಿಸಿರುವುದನ್ನು ಕಾಣುತ್ತೇವೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕೆಲ್ಲಸನ್ ಕಾಯ್ಲರ್., **ದಿ ಹೊಯ್ಸಳ ಆರ್ಟಿಸ್ಟ್ಸ್ ದೇರ್ ಐಡೆಂಟಟ ಅಂಡ್ ಸ್ಟೈಲ್ಸ್**, ಡೈರೆಕ್ಟೊರೇಟ್ ಆಫ್ ಅರ್ಕಿಯಾಲಜಿ ಅಂಡ್ ಮ್ಯೂಸಿಯಂಸ್, ಮೈಸೂರು, ಚಿತ್ರ ೨೭-೨೮.

೨. ಡಾ|| ಶ್ರೀಕಂಠಶಾಸ್ತ್ರಿ., (೧೯೬೧), ***ಹೊಯ್ಸಳ ವಾಸ್ತು ಶಿಲ್ಪ***, ಮೈಸೂರು ವಿಶ್ವವಿದ್ಯಾನಿಲಯ, ಪುಟ. ೧೬೪-೧೬೫.

೩. ಎಂ. ಎಂ. ಕಲಬುರ್ಗಿ., (೧೯೯೮), ***ಮಾನಸೋಲ್ಲಾಸ***, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ಸಂಪುಟ ೧ ಮತ್ತು ೨, ಪುಟ ೨೦೨-೨೦೪.

೪. ಟಿ. ಎ. ಗೋಪಿನಾಥ ರಾವ್., ***ಎಲಿಮೆಂಟ್ಸ್ ಆಫ್ ಐಕೋನೋಗ್ರಫಿ***, ಪುಟ. ೩೧.

ಡಾ॥ ಜ್ಯೋತ್ಸ್ನಾ ಕಾಮತ್*

# ಸಂಪನ್ನ ಸಾರಿಗೆಯ ಸಾಧನ ಪಲ್ಲಕ್ಕಿ

ದೇಶದಲ್ಲಿ ಹೆಮ್ಮರವಾಗಿ ಬೆಳೆಯುತ್ತಿರುವ ನಿರುದ್ಯೋಗವನ್ನು ಹೋಗಲಾಡಿಸಲು ಬ್ರಹ್ಮಾಸ್ತ್ರ ಎಂಬ ಭ್ರಮೆಯಿಂದ ಭಾರತ ಸರಕಾರವು, ಎರಡು ಮೂರು, ನಾಲ್ಕು ಗಾಲಿಗಳ ವಾಹನಗಳ ಉತ್ಪಾದನೆಗೆ ಹೆಚ್ಚಿನ ಪ್ರೋತ್ಸಾಹ ನೀಡಿತು. ಆದರೆ ಇದರಿಂದ ಮಾರುತಿಯನ್ನು ರೂಪಿಸಲು ಹೊರಟು ಮಂಗನನ್ನು ಪಡೆದಂತೆ ಆಯಿತು! ಪ್ರಚಲಿತ ಸಮಸ್ಯೆ ಬಗೆಹರಿಯಲೇ ಇಲ್ಲ. ಬದಲಿಗೆ ಹೊಸ ಹೊಸವು ರಾಕ್ಷಸಾಕಾರದಲ್ಲಿ ತಲೆ ಎತ್ತಿ ನಿಂತವು. ಹಿಂದೆಂದೂ ಇಲ್ಲದ ಬೃಹತ್ ಪ್ರಮಾಣದ ಪೆಟ್ರೋಲ್ ಆಯಾತ, ಇದರಿಂದ ವಿದೇಶೀ ವಿನಿಮಯ ಮೊತ್ತದ ತೀವ್ರ ಕೊರತೆ, ಗಗನಕ್ಕೇರಿದ ಅಂತರಾಷ್ಟ್ರೀಯ ಮಾರುಕಟ್ಟೆಯ ಇಂಧನ ಬೆಲೆ, ತೀರ ದುರವಸ್ಥೆ ತಳೆದಿರುವ ಹೆದ್ದಾರಿಗಳು, ಅಣಕಿಸುತ್ತ ನಿಂತಿವೆ. ಇವೆಲ್ಲಕ್ಕಿಂತ ಹೆಚ್ಚಾಗಿ ಪ್ರಜೆಗಳ ಆರೋಗ್ಯಕ್ಕೆ ದೊಡ್ಡ ಕುತ್ತಾಗಿ ಪರಿಣಮಿಸಿರುವ ಪರಿಸರ ಮಾಲಿನ್ಯದಿಂದಾಗಿ ಇದು ನಮ್ಮ ಪ್ರಗತಿ ಎಂಬ ಅಧೋಗತಿಯೇ? ಎಂದು ವಿಸ್ಮಯ ಪಡುವಂತಾಗಿದೆ. ನಮ್ಮ ಹಿರಿಯರು ಸಾರಿಗೆಯಂತಹ ಜಟಿಲವಾದ ಸಮಸ್ಯೆಯನ್ನು ಎಷ್ಟೊಂದು ಸಂಪನ್ನತೆಯಿಂದ ಬಗೆಹರಿಸಿಕೊಂಡಿದ್ದರು. ಎನ್ನುವದನ್ನು ಪರಾಂಬರಿಸಿ ತೋರಿಸುವ ಇತಿಹಾಸದ ಕೈಗನ್ನಡಿ ತೋರಿಸುವ ಚಿತ್ರವಿಡುವ ಪ್ರಯತ್ನ ಇಲ್ಲಿದೆ.

ನಾಡಿನ ಬಹುಸಂಖ್ಯಾತರು ಕಾಲ್ನಡಿಗೆ, ಎತ್ತಿನ ಬಂಡಿ, ನದಿಯಿದ್ದಲ್ಲಿ ನಾವೆಗಳನ್ನು ಸಾರಿಗೆಯ ಸಾಧನವಾಗಿ ಬಳಸುತ್ತಿದ್ದರು. ಉಳ್ಳವರು, ಅಧಿಕಾರಿಗಳು, ಪ್ರತಿಷ್ಠಿತರು (ಈಗಿನ ಕಾರುಳ್ಳವರಂತೆ) ಪಲ್ಲಕ್ಕಿಗಳನ್ನು ಬಳಸುವದು ವಾಡಿಕೆಯಾಗಿತ್ತು. ಕೋಲೊಂದಕ್ಕೆ ತೂಗಹಾಕಿದ ಹಗುರವಾದ ಬುಟ್ಟಿಯಂತಹ ಸುಲಭ ವಾಹನವೇ ಡೋಲಿ, ಮೇಣೆ, ದಂಡಿಗೆ, ಅಂದಣ, ಪಲ್ಲಕ್ಕಿಯಂತಹ ವಿವಿಧರೂಪ ತಾಳಿತು. ಸಾಲಂಕೃತ 'ಬುಟ್ಟಿ'ಯಾಕಾರದ ಪಲ್ಲಕ್ಕಿಯಲ್ಲಿ ಪ್ರಯಾಣಿಕನು ಆಸನಾರಾಢನಾದಾಗ ಹೆಗಲ ಮೇಲೆ ಕೋಲು (ದಂಡ) ಹೊತ್ತೊಯ್ಯುವ ಕೆಲಸ, ದುಡಿಮೆಯ ಆಳುಗಳದಾಗಿತ್ತು. ಕಾರುಗಳಂತೆಯೇ ಪಲ್ಲಕ್ಕಿಗಳ ವೈವಿಧ್ಯ ಹೇಳತೀರದು! ಹೊರುವವರ ಅನುಕೂಲಕ್ಕೆ ಕಮಾನುಳ್ಳ, ಹಗುರಾದ, ಹೆಚ್ಚಿನ ಅಗಲಳತೆಯುಳ್ಳ ಬಿದಿರನ್ನು ಬಳಸುತ್ತಿದ್ದರು. ಅಂತೆಯೇ ಮಣಿಯುವ ಗಳು, ಪುಣ್ಯಾತ್ಮನನ್ನು ಹೊತ್ತರೆ ಬೆಳೆದದ್ದು ಅಂತ್ಯಯಾತ್ರೆಗೆ! ಎಂಬ ನಾಣ್ಣುಡಿ ಬಳಕೆಯಲ್ಲಿದೆ. ಬಿದಿರಿನ ಬದಲಾಗಿ ಹಗುರಾದ ಕಟ್ಟಿಗೆಯ ಪಲ್ಲಕ್ಕಿಯನ್ನು ದೇವತಾ ವಿಗ್ರಹಗಳ ಯಾತ್ರೆಗೆ ಬಳಸುವುದು ರೂಢಿಯಲ್ಲಿತ್ತು. ಬೇಕಾದಂತೆ ಮಣಿಸಬಹುದಾದ ನಾಗಬೆತ್ತವನ್ನು ಪಲ್ಲಕ್ಕಿಯ ಗೂಡಿಗೆ ಬಳಸುತ್ತಿದ್ದರು. ಹೀಗಾಗಿ ಅದಕ್ಕೆ ವಿಪರೀತ ಬೇಡಿಕೆ ಇತ್ತು. ಬೆಲೆಯೂ ತುಂಬ ಹೆಚ್ಚಾಗಿತ್ತು.[೧] ಅಲಂಕಾರ ಪ್ರಿಯರು ಅದಕ್ಕೆ ತಾಮ್ರ, ಬೆಳ್ಳಿ, ಬಂಗಾರದ ತಗಡುಗಳನ್ನು ಹೊದಿಸುತ್ತಿದ್ದರು. ಅದನ್ನು ದಂಡಿಗೆಯೊಂದಿಗೆ ಜೋಡಿಸಲು ಹುರಿಹಾಕಿದ ಕತ್ತ ಚರ್ಮದ ಪಟ್ಟಿ, ಕಬ್ಬಿಣದ ಸಲಾಕೆಗಳು ಬಳಕೆಯಲ್ಲಿದ್ದವು.

ಕಾರಿನೊಳಗಿನ ಸುಖಾಸನದ ವ್ಯವಸ್ಥೆ, ಕೇವಲ ಆಧುನಿಕ ವಿಚಾರವಲ್ಲ. ಪಲ್ಲಕ್ಕಿಯಿಂದ ಎರವಲು ಪಡೆದಿರಲು ಸಾಕು! ಕೂಡ್ರಲು, ಒರಗಲು ಕಾಲುಚಾಚಲು ಮೆತ್ತಗಿನ ದಿಂಬುಗಳು, ಅಲಂಕರಿಸಿಕೊಳ್ಳಲು ಎದುರಿಗೆ ಜೋಡಿಸಿದ ಕನ್ನಡಿ, ಮೇಲು ಛಾವಣಿಯಿಂದ ತೂಗುತ್ತಿರುವ ಅಲಂಕೃತ ಗೊಡಗಳು, ಓದುಗರಿಗೆ ಪುಸ್ತಕ ಇಡಲು ಕಪಾಟು, ಪಾನಪಾತ್ರೆ, ನೀರಿನ ಹೂಜಿ, ಗ್ಲಾಸುಗಳಿಗೆ ಏರ್ಪಾಡು ರಾತ್ರೆಯ ಪ್ರಯಾಣಿಕರಿಗೆ ಮಲಗುವ ವ್ಯವಸ್ಥೆಯನ್ನು ಪಲ್ಲಕ್ಕಿ ಹೊಂದಿರುತ್ತಿತ್ತು. ಹೆಚ್ಚಿನ ಸಾಮಾನುಗಳನ್ನು ಪಲ್ಲಕ್ಕಿಯ ಹೊರಮೈಯಿಂದ ನೇತು ಹಾಕಬಹುದಿತ್ತು. ಮಳೆಗಾಲದಲ್ಲಿ ತೆಂಗಿನ ಗರಿಗಳ ಆಚ್ಛಾದನೆಯನ್ನು ಪಲ್ಲಕ್ಕಿಗೆ ಹೊಂದಿಸುತ್ತಿದ್ದರು.[೨] ಭಾರಕ್ಕೆ ಅನುಗುಣವಾಗಿ ಇಬ್ಬರಿಂದ ಆರುಜನ ಹೆಗಲ ಮೇಲೆ ಹೊರುತ್ತಿದ್ದರು. 'ಬೋಯಿ' ಜನಾಂಗದವರು ಈ ವೃತ್ತಿಯಲ್ಲಿರುತ್ತಿದ್ದರು. ದೂರದ ಇಲ್ಲವೇ ಕಷ್ಟಕರ ಪ್ರಯಾಣದಲ್ಲಿ ಬೋಯಿಗಳ ಎರಡೆರಡು ತಂಡಗಳು ಸಿದ್ಧವಿರುತ್ತಿದ್ದವು. ಹೆಗಲು ಸೋತು ಬಂದಾಗ, ಇನ್ನೊಂದು ತಂಡ ಹೊರುತ್ತಿತ್ತು. ದಡ್ಡು ಬೀಳದಂತೆ ಹೆಗಲಿಗೆ ಬಟ್ಟೆಯ 'ಮೆತ್ತೆ' ಹಾಕಿ, ಮೇಲಿಂದ ಮೇಲೆ ಹೆಗಲು ಬದಲಿಸುತ್ತಿದ್ದರು. ತಂಡದಲ್ಲಿ ಸೈನಿಕರು, ಕೂಲಿಗಳು, ಅನುಕೂಲ ವಿದ್ದಲ್ಲಿ ಹಾಡುವವರು ಇರುತ್ತಿದ್ದರು.

ಧನಿಕರ ಸ್ವಂತ ಪಲ್ಲಕ್ಕಿಗಳು ಇದ್ದು ಮನೆಯ ಹೊಸ್ತಿಲಲ್ಲಿ ಅವುಗಳಿಗೆ ಗೌರವದ ಸ್ಥಾನ ಇರುತ್ತಿತ್ತು. ಅವನ್ನು ಬಾಡಿಗೆಗೆ ಇತರರಿಗೆ ಕೊಡುವ ಪದ್ಧತಿಯೂ ಇತ್ತು. ಪ್ರಯಾಣಕ್ಕೆ ಮುಂಚಿತವಾಗಿ ಬೋಯಿಗಳ ಮುಖ್ಯಸ್ಥನೊಡನೆ ಪ್ರಯಾಣದ ವೆಚ್ಚವನ್ನು ನಿರ್ಧರಿಸಿ, ಮುಂಗಡಹಣವನ್ನು ಕೊಡಲಾಗುತ್ತಿತ್ತು. ಅವರೆಲ್ಲ ಪ್ರವಾಸದ ನಿರ್ದಿಷ್ಟ ದಿನ, ವೇಳೆಯಂದು ಹಾಜರಾಗಿ

* ೧೧ಲ, ಶಶಿಕಿರಣ್, ೧೮ನೇ ಅಡ್ಡರಸ್ತೆ, ಮಲ್ಲೇಶ್ವರ, ಬೆಂಗಳೂರು - ೫೬೦ ೦೫೫


ಚಿತ್ರಗಳ ವಿವರಗಳು
1. ಬುಕ್ಕರದಲ್ಲಿಯ ಉಬ್ಬು ಚಿತ್ರ.
2. ಕುಲಾವಿ ಧರಿಸಿದ ಬೋಯಿಗಳು.
3. ಹೆಂಗಳೆಯರನ್ನು ಹೊತ್ತವರು!
4. ಕಲ್ಪಸೂತ್ರ ಗ್ರಂಥದಲ್ಲಿಯ ಚಿತ್ರ.
5. ವೀರಗಲ್ಲಿನಲ್ಲಿಯ ಪಲ್ಲಕ್ಕಿ.
6. ಬೋಯಿಗಳಾಗಿ ಹೆಂಗಳೆಯರು.
7. ಚಿತ್ರದಲ್ಲಿಯ ಪಲ್ಲಕ್ಕಿ.

ಅತ್ಯಂತ ದಕ್ಷತೆಯಿಂದ ಕಾರ್ಯನಿರ್ವಹಣೆ ಮಾಡುತ್ತಿದ್ದರು. ಅರ್ಧದಾರಿಯಲ್ಲಿ ಕೈಕೊಡುವದು, ಕಳ್ಳಕಾಕರು ಆಕ್ರಮಿಸಿದಾಗ ಅದೃಶ್ಯರಾಗುವುದು, ಹೆಚ್ಚಿನ ಬಾಡಿಗೆ ಕೇಳುವದು, ಮುಂತಾದವಕ್ಕೆ ಎಡೆ ಮಾಡಿಕೊಳ್ಳುತ್ತಿರಲಿಲ್ಲ. ಬೇರೆ ಬೇರೆ ಆಡಳಿತಕ್ಕೆ ಒಳಪಟ್ಟ ಪ್ರದೇಶದಲ್ಲಿ ಪಯಣಿಸುವಾಗ, ಅಲ್ಲಲ್ಲಿ ಸಿದ್ಧವಾಗಿಯೇ ಇರುತ್ತಿದ್ದ ಬೋಯಿಗಳ ತಂಡಕ್ಕೆ ಪಲ್ಲಕ್ಕಿಪಯಣಿಗನನ್ನು ಒಪ್ಪಿಸಿ ಈ ತಂಡ ಸ್ವಸ್ಥಾನಕ್ಕೆ ಮರಳುತ್ತಿತ್ತು. ಅವರಿಗೆ ಆದಾಯ ಚೆನ್ನಾಗಿಯೇ ಇರುತ್ತಿತ್ತು ಎಂದು ಕ್ಯಾಪ್ಟನ್ ಬೇಸಿಲ್ ಹಾಲ್ ಬರೆದಿಟ್ಟಿದ್ದಾನೆ.[೩] ಹೊಲಗದ್ದೆಗಳನ್ನು ಖರೀದಿಸಿ ನೆಮ್ಮದಿಯಿಂದ ಇರುತ್ತಿದ್ದರಂತೆ. ಬೋಯಿಗಳ ವೇಷಭೂಷಣಗಳಲ್ಲಿ ಯುಗಮಾನಕ್ಕನುಸಾರವಾಗಿ ವೈವಿಧ್ಯವನ್ನು ಗುರುತಿಸಬಹುದು. ವಿಜಯನಗರ ಕಾಲದಲ್ಲಿ ಕೊಂಚ ಎತ್ತರದ ಟೋಪಿ ಕುಲಾವಿ ಧರಿಸಿ ವೀರಗಚ್ಚೆಯ ಧೋತರ ಉಟ್ಟರೆ, ಬ್ರಿಟಿಶ ಆಡಳಿತಕಾಲದಲ್ಲಿ ಚೊಣ್ಣ ಧರಿಸಿದ್ದಾರೆ. ಮೈಸೂರರಸರ ಕಾಲಕ್ಕೆ ರುಮಾಲು ಹಾಗೂ ಬ್ರೀಚ್ ಮಾದರಿಯ ಚಲ್ಲಣ ಧರಿಸುವುದು ವಾಡಿಕೆಯಾಗಿತ್ತು. ಬರಿಮೈಯಿಂದ ಬಗಲ ಬಂಡಿಯ ಬೋಯಿಗಳೂ ಇರುತ್ತಿದ್ದರು.

ಸ್ಥಾನ-ಮಾನಕ್ಕನುಸರಿಸಿ ಬೋಯಿಗಳಲ್ಲದೇ ಪಯಣದ ತಂಡದಲ್ಲಿ ಅನೇಕರು ಇರುತ್ತಿದ್ದರು. ಕಳ್ಳಕಾಕರ ಕಾಟ ಹೆಚ್ಚು ಇದ್ದಲ್ಲಿ ಸಶಸ್ತ್ರ ಕಾವಲುಗಾರರು ಹೊರಟರೆ ರಾಜಪರಿವಾರದಲ್ಲಿ ಛತ್ರ, ಚಾಮರಧಾರಿಗಳ ಸೇರ್ಪಡೆಯಾಗುತ್ತಿತ್ತು. ಹಾಡುವವರು, ಕುಣಿಯುವವರು, ಕಥೆ - ಪುರಾಣಗಳನ್ನು ಓದಿ ಹೇಳುವವರು ಇರುತ್ತಿದ್ದರು. ಯುದ್ಧಕ್ಕೆ ಹೊರಟ ಪಲ್ಲಕ್ಕಿಯೊಡನೆ ಕಹಳೆ ಊದುವ ವಾದ್ಯದವರಿರುತ್ತಿದ್ದರು. ರಣರಂಗಕ್ಕೆ ಬೇಕಾದ ಸಾಮಗ್ರಿಗಳನ್ನು ಹೊತ್ತ ಸೇವಕರಿರುತ್ತಿದ್ದರು. ಅನ್ನ ಸಾಮಗ್ರಿ, ನೀರು ಇವುಗಳಲ್ಲಿ ಮುಖ್ಯವಾಗಿರುತ್ತಿದ್ದವು. ಸಹಗಮನಕ್ಕೆ ಕೆಲಸ್ತ್ರೀಯರನ್ನು ಪಲ್ಲಕ್ಕಿ ಮೆರವಣಿಗೆಯಲ್ಲಿ ಒಯ್ಯುತ್ತಿದ್ದ ಪರಿಪಾಠವಿತ್ತು. ವಾದ್ಯಮೇಳ ಜೊತೆಗಿರುತ್ತಿತ್ತು.

ಪಲ್ಲಕ್ಕಿಯ ಪಯಣ ವಿದೇಶೀಯರಿಗೆ ವಿಶೇಷ ಆಕರ್ಷಕವಾಗಿತ್ತು. ತಮ್ಮ ಅನುಭವಗಳನ್ನು ಬರೆದಿಟ್ಟ ಕೆಲವರಲ್ಲಿ ಸೀಝರ್ ಫ್ರೆಡರಿಕ್ (ಕ್ರಿ. ಶ. ೧೫೬೭-೬೮), ಪೀಟರ್ ಮಂಡಿ (ಕ್ರಿ.ಶ. ೧೬೩೨), ಎಡ್ವರ್ಡ್ ಟೆರಿ (ಕ್ರಿ.ಶ. ೧೬೫೦-೬೦), ಕ್ಯಾಪ್ಟನ್ ಬೇಸಿಲ್ ಹಾಲ್ (ಕ್ರಿ. ಶ. ೧೮೨೨) ಪ್ರಮುಖರು. ಇವರೆಲ್ಲರಿಗಿಂತ ತುಂಬ ಹಿಂದೆ ಕರ್ನಾಟಕದಲ್ಲಿ ಸಂಚರಿಸಿದ ಇಬ್ನ್ ಬತೂತನು (ಕ್ರಿ.ಶ. ೧೩೪೪-೪೬) ವಿದೇಶಗಳಿಂದ ತರಿಸಿದ ಕುದುರೆಗಳೆಲ್ಲ ಆಳರಸರ ಸೇವೇಗೇ ಮೀಸಲಿದ್ದುದರಿಂದ, ಇತರ ಪ್ರತಿಷ್ಠಿತರೆಲ್ಲ ಪಲ್ಲಕ್ಕಿ ಯಾನಕ್ಕೇ ಶರಣು ಹೋಗುತ್ತಾರೆಂದು ಗಮನಿಸಿದ್ದ.[೪] ಪೀತ್ರೊ ಡೆಲ್ಲಾ ವಾಲೆ (ಕ್ರಿ. ಶ. ೧೬೨೩) ಗೋವಾದಿಂದ ಹೊನ್ನಾವರ, ಇಕ್ಕೇರಿ, ಬಸರೂರು ಮಂಗಳೂರು, ಉಳ್ಳಾಳಗಳಿಗೆಲ್ಲ ಪಲ್ಲಕ್ಕಿಯಲ್ಲೆ ಪಯಣಿಸಿದ್ದ. ಸೀಝರ್ ಫ್ರೆಡ್‌ರಿಕ್‌ನು ಕರ್ನಾಟಕದ ಕುಶಲಕರ್ಮಿಗಳಿಂದ ಒಂದು ಗಟ್ಟಿ ಮುಟ್ಟಾದ ಪಲ್ಲಕ್ಕಿಯನ್ನು ಮಾಡಿಸಿ ಅದರಲ್ಲಿ ಸಂಚರಿಸಿದ್ದ. ಆತ ಗೋವಾಕ್ಕೆ ಹೊರಟಾಗ ಅಂಕೋಲಾ ಬಳಿ ಕಾಡಿನಲ್ಲಿ ಡಕಾಯಿತರು ಆಕ್ರಮಣ ಮಾಡುತ್ತಾರೆ. ಬೋಯಿಗಳು ಪಲ್ಲಕ್ಕಿ ಇಳಿಸಿ ಪಲಾಯನ ಮಾಡುತ್ತಾರೆ. ಕಳ್ಳಕಾಕರ ಸುಲಿಗೆಗೆ ಒಳಗಾದ ಸೀಝರ್ ಫ್ರೆಡ್‌ರಿಕ್ ಇನ್ನೇನು ಕಾಲ್ನಡಿಗೆಯಲ್ಲಿ ಹೊರಡುವ ತಯಾರಿಯಲ್ಲಿದ್ದಾಗ, ಬೋಯಿಗಳ ತಂಡ ಪ್ರತ್ಯಕ್ಷವಾಗಿ ಸೇರಬೇಕಾದ ನೆಲೆಗೆ ತಲುಪಿಸುತ್ತಾರೆ. ಮುಂಗಡ ಹಣ ಪಡೆದ ಅವರ ಪ್ರಾಮಾಣಿಕತನವನ್ನು ಆತ ಪ್ರಶಂಸಿಸಿದ್ದಾನೆ.[೫] ಬೇಸಿಲ್ ಹಾಲ್‌ನು ಮದ್ರಾಸಿನಿಂದ ನಂದಿದುರ್ಗ, ಶ್ರೀರಂಗಪಟ್ಟಣ, ಮೈಸೂರು, ಕೊಡಗು, ಮಂಗಳೂರುಗಳನ್ನು ಪಲ್ಲಕ್ಕಿಯಲ್ಲೇ ಸುತ್ತಾಡಿದ. ಬ್ರಿಟಿಶರ ಕಾಲಕ್ಕೆ ಜಿಲ್ಲಾ ಕಲೆಕ್ಟರ್‌ಗಳಿಗೆ ಮುಂಚಿತ ವಾಗಿ ವಿನಂತಿಸಿಕೊಂಡರೆ ಅವರುಗಳು ತಮ್ಮ ಕಾರ್ಯಕ್ಷೇತ್ರದ ಗಡಿಯವರೆಗೂ ಪಲ್ಲಕ್ಕಿಯ ಸುಖ ಪಯಣದ ಸರ್ವ ವ್ಯವಸ್ಥೆ ಮಾಡುತ್ತಿದ್ದರು. ಕಗ್ಗತ್ತಲಿನಲ್ಲಿ ರಾತ್ರಿ ಪ್ರಯಾಣಕ್ಕೆ ಪಂಜು, ಹಿಲಾಲು ಹಿಡಿಯುವವರು, ಕೋವಿಧಾರಿಗಳು, ದೊಣ್ಣೆ ಹೊತ್ತವರು, ಊಟ ತಿಂಡಿ ವ್ಯವಸ್ಥೆಗಾಗಿ ಅಡಿಗೆಯವರು, ಇತ್ಯಾದಿ ಜನ ಹೊರಡುತ್ತಿದ್ದರು. ಅಂತೂ ಅಧಿಕಾರಿಗಳ ಪಯಣ ಮದುವೆ ದಿಬ್ಬಣವನ್ನು ಹೋಲುತ್ತಿತ್ತು!

ಇಂದು ಪಲ್ಲಕ್ಕಿಗಳ ದರ್ಶನಕ್ಕೆ ವಸ್ತು ಸಂಗ್ರಹಾಲಯಗಳಿಗೇ ಧಾವಿಸಬೇಕಾದ ಸ್ಥಿತಿ ಒದಗಿರುವದು, ದುರದೃಷ್ಟ. ಅನೇಕ ಧಾರ್ಮಿಕ ಮಠಗಳಲ್ಲಿ ಮಠಾಧೀಶರ ಸೇವೆಗೆ ಮೀಸಲಿದ್ದ ಪಲ್ಲಕ್ಕಿಗಳನ್ನು ಕಾದಿರಿಸಿದ್ದಾರೆ. ಅನೇಕ ವೀರಗಲ್ಲು, ಮಾಸ್ತಿಕಲ್ಲುಗಳಲ್ಲಿ ಇವನ್ನು ಗುರುತಿಸಬಹುದಾಗಿದೆ. ಚನ್ನಪಟ್ಟಣ ತಾಲೂಕಿನ ದೊಡ್ಡ ಮಳೂರಿನ ಭವ್ಯವಾದ ವೀರಗಲ್ಲಿನ ಮೊದಲಹಂತವನ್ನು ಪಲ್ಲಕ್ಕಿಯ ಮೆರವಣಿಗೆಯನ್ನು ಚಿತ್ರಿಸುವದಕ್ಕಾಗಿಯೇ ಮೀಸಲಿಡಲಾಗಿದೆ. ಮೆರವಣಿಗೆಯಲ್ಲಿ ಇಬ್ಬಿಬ್ಬರು ಹೊತ್ತ ಎರಡು ಪಲ್ಲಕ್ಕಿಗಳಿದ್ದು ಅವುಗಳ ಮೇಲೆ ಕೊಡೆಗಳನ್ನು ಹಿಡಿಯಲಾಗಿದೆ. ಅವುಗಳಲ್ಲಿ ಆಸೀನರಾದವರು, ಮಡಿದ ವೀರ ಹಾಗೂ ಸಹಗಮನ ಮಾಡಹೊರಟ ಅವನ ಪತ್ನಿ ಇರಬಹುದಾಗಿದೆ. ಅಪರೂಪದ ಈ ಸ್ಮಾರಕದ ಮೇಲೆ ಯಾವ ಶಾಸನವಿಲ್ಲದಿರುವುದು ದುರದೃಷ್ಟಕರ! ಬೆಂಗಳೂರಿನ ಗೋಖಲೆ ಸಾರ್ವಜನಿಕ ಸಂಸ್ಥೆಯ ಆವರಣದಲ್ಲಿ ನಿಲ್ಲಿಸಿರುವ ವೀರಗಲ್ಲಿನಲ್ಲೂ ಪಲ್ಲಕ್ಕಿಯನ್ನು ಗುರುತಿಸಬಹುದಾಗಿದೆ. ಭಟಕಳ ದಲ್ಲಿಯ ಕೇತಪ್ಪಯ್ಯ (ಖೇತಪ್ಪೈ) ನಾರಾಯಣ ದೇವಸ್ಥಾನ (ಕ್ರಿ. ಶ. ೧೫೫೬) ದ ಜಗತಿಯ ಹೊರಗೋಡೆಯಲ್ಲೂ ಪ್ರತಿಷ್ಠಿತ ಭಕ್ತನೋರ್ವನು ಮೇಣೆಯಲ್ಲಿ ಆಗಮಿಸುತ್ತಿರುವ ಶಿಲ್ಪವನ್ನು ಕೊರೆಯಲಾಗಿದೆ. ಹಂಪಿಯ ವಿರೂಪಾಕ್ಷ ದೇವಾಲಯದ ಮುಚ್ಚಿಗೆಯಲ್ಲಿ ಗುರುಗಳನ್ನು ಪಲ್ಲಕ್ಕಿ ಮೆರವಣಿಗೆಯಲ್ಲಿ

ಕರೆದೊಯ್ಯುವುದನ್ನು ಭಿತ್ತಿಚಿತ್ರ ದೃಶ್ಯವಾಗಿ ರಚಿಸಲಾಗಿದೆ. ಮೈಸೂರು ಸಾಂಪ್ರದಾಯಿಕ ಶೈಲಿಯ ಹಲವಾರು ಚಿತ್ರಗಳಲ್ಲಿ ಪಲ್ಲಕ್ಕಿ ಪಯಣವನ್ನು ಗುರುತಿಸ ಬಹುದು. ಚೌಕೋನಾಕಾರದ ಪಲ್ಲಕ್ಕಿ ತೀರ ಭಾರವಾಗಿದ್ದರಿಂದ ಅದನ್ನು ಹೋರಲು ಆರು ಬೋವಿಗಳನ್ನು ನೇಮಿಸಲಾಗಿದೆ. ಅದರಲ್ಲಿ ಆಸೀನನಾಗಿರುವ ವ್ಯಕ್ತಿಗೆ ಪಂಡಿತನೊಬ್ಬನು ಓದಿ ಹೇಳುತ್ತ ಹೊರಟಿದ್ದಾನೆ. ಇನ್ನೊಂದರಲ್ಲಿ ಬಹುಶಃ ಧರ್ಮಾಧಿ ಕಾರಿಯೋರ್ವರು ಮೇಣೆಯ ಮೆರವಣಿಗೆಯಲ್ಲಿದ್ದಾಗ ಭಕ್ತಾದಿಗಳು ಕೈ ಜೋಡಿಸಿ ಅವರ ದರ್ಶನ ಲಾಭಕ್ಕೆ ಕಾತುರರಿದ್ದಾರೆ. ಕಲ್ಲಚ್ಚಿನ ಗ್ರಂಥಗಳಲ್ಲಿ ಪಲ್ಲಕ್ಕಿಗಳನ್ನು ಗುರುತಿಸಬಹುದು. ಕೃಷ್ಣ ಪಾರಿಜಾತ ಸಂಗ್ರಹ ಗ್ರಂಥವೊಂದರಲ್ಲಿ ಹೆಂಗಳೆಯರು ಹೊತ್ತ ಪಲ್ಲಕ್ಕಿ ನೋಡಬಹುದು. ವಿಜಯನಗರ ಅರಮನೆಯ ಆವರಣದಲ್ಲಿ ಪಲ್ಲಕ್ಕಿ ಹೊರುವ ಹೆಂಗಳೆಯರಿದ್ದುದನ್ನು ಡುಮಿಂಗೋ ಪ್ಯಾಸ್ (೧೫೨೨) ಉಲ್ಲೇಖಿಸಿದ್ದಾನೆ. ಹುಡುಕುತ್ತ ಹೊರಟರೆ, ಶತಮಾನಗಳಲ್ಲಿ ಉಳಿದು, ಬೆಳೆದು ಬಂದ ಪಲ್ಲಕ್ಕಿಯ ನಾನಾ ರೂಪಗಳ ಕುರಿತೇ ಡಾಕ್ಟರೇಟ್ ಬರೆಯುವಷ್ಟು ಮಾಹಿತಿ-ಚಿತ್ರಗಳನ್ನು ಸಂಗ್ರಹಿಸಬಹುದಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಪ್ರವಾಸಿಕಂಡ ಇಂಡಿಯ., ಸಂಪುಟ., (೧೯೭೨), ಎಚ್.ಎಲ್.ನಾಗೇಗೌಡ (ಸಂ.), ಮೈಸೂರು, ಪು, ೨೦೮.

೨. ಅದೇ.

೩. ಅದೇ ಸಂಪುಟ ೮., (೧೯೯೮), ಮೈಸೂರು, ಪುಟ. ೪೮೭-೯೧.

೪. ಅದೇ ಸಂಪುಟ ೨., (೧೯೭೨), ಮೈಸೂರು, ಪುಟ. ೨೦೮.

೫. ಅದೇ ಸಂಪುಟ ೩., (೧೯೭೬), ಮೈಸೂರು, ಪುಟ. ೩೦೫.

ಡಾ|| ಪಿ.ವಿ. ಕೃಷ್ಣಮೂರ್ತಿ*

# ಕಳವರನಾಡು
# ಒಂದು ಪ್ರಾಚೀನ ಬುಡಕಟ್ಟು ಹಿನ್ನೆಲೆಯ ಪ್ರದೇಶ

ನಮ್ಮ ಎಷ್ಟೋ ಸ್ಥಳಗಳ, ಪ್ರದೇಶಗಳ ಹೆಸರುಗಳು ಜನಾಂಗವಾಚಿಯಾಗಿಯೂ ಪ್ರಚಲಿತವಿರುವ ಅಂಶ, ಸ್ಥಳ ನಾಮಾಧ್ಯಯನಗಳಿಂದ ಸುವ್ಯಕ್ತವಾಗಿದೆ. ಪ್ರಾಚೀನ ದ್ರಾವಿಡ ಬುಡಕಟ್ಟು ಜನರಲ್ಲಿ 'ಕಳವರ್' ಎಂಬುವರು ಕೂಡ ಗಮನಾರ್ಹರು. ಈ ಬುಡಕಟ್ಟು ಜನಾಂಗದ ಕುರುಹನ್ನು ನೀಡುವ ನಾಡೊಂದು ಪ್ರಸಿದ್ಧ ನಂದಿಬೆಟ್ಟಗಳ ಪರಿಸರದಲ್ಲಿ ಅಸ್ತಿತ್ವದಲ್ಲಿದ್ದ ವಿವರ ಶಾಸನಗಳಿಂದ ತಿಳಿದುಬರುತ್ತದೆ. ಚೋಳರ ಕಾಲದ ಅನೇಕ ಶಾಸನಗಳಲ್ಲಿ ಕಳವರನಾಡಿನ ಪ್ರಸ್ತಾಪ ಬಂದಿದೆ. ನಿಗರಿಲಿ ಚೋಳಮಂಡಲಕ್ಕೆ ಸೇರಿದ ನಾಡು ಎಂದು ಅದು ಉಕ್ತವಾಗಿದೆ. ಆದರೆ ಅದಕ್ಕೂ ಮೊದಲೇ ಆ ಪ್ರದೇಶಕ್ಕೆ 'ಕಳವರನಾಡು' ಎಂಬ ಹೆಸರೇ ಜನಬಳಕೆಯಲ್ಲಿದ್ದಿತೆಂದು ತೋರುತ್ತದೆ. ನಂದಿಬೆಟ್ಟಗಳ ಉತ್ತರಕ್ಕೆ ಚೆನ್ನರಾಯಬೆಟ್ಟ (೧೪೫೦ ಮೀ.) ಅದರ ಉತ್ತರಕ್ಕೆ ಕಳವಾರ ಬೆಟ್ಟ (೧೪೪೫ ಮೀ.) ಮತ್ತು ಆ ಬೆಟ್ಟದ ಪೂರ್ವ ತಪ್ಪಲಿನಲ್ಲಿ ಕಳವಾರ/ಕಂದವಾರ ಎಂಬ ಹೆಸರಿನ ಗ್ರಾಮವೂ ಇದೆ. ಕಳವಾರ ಬೆಟ್ಟಗಳನ್ನು 'ಸ್ಕಂಧಗಿರಿ' ಎಂದೂ, ಕಳವಾರ ಗ್ರಾಮವನ್ನು ಕಂದವಾರವೆಂದೂ ಸಂಸ್ಕೃತಾನುಕರಣಗೊಳಿಸಿರುವುದೂ ಕಂಡು ಬರುತ್ತದೆ. ಈ ಕಳವಾರಬೆಟ್ಟ ಮತ್ತು ಗ್ರಾಮಗಳ ಪರಿಸರವೇ 'ಕಳವರನಾಡಿನ' ಮೂಲಸ್ಥಾನವಾಗಿದ್ದು ನಂದಿದುರ್ಗದ ಆಸುಪಾಸಿನ ಬೆಟ್ಟ ಗುಡ್ಡಗಳನ್ನೊಳಗೊಂಡ ಪ್ರದೇಶವೇ **ಕಳವರನಾಡು** ಎಂದು ಹೆಸರು ಪಡೆದಿತೆನ್ನಬಹುದು.

ಭೌಗೋಳಿಕವಾಗಿ ದಕ್ಷಿಣ ಭಾರತದ ಸರಿಸುಮಾರು ಮಧ್ಯ ಸ್ಥಾನದಲ್ಲಿರುವ ನಂದಿಬೆಟ್ಟ ಸಮುದ್ರಮಟ್ಟದಿಂದ ಸುಮಾರು ೧೪೭೮ ಮೀ. ಎತ್ತರದಲ್ಲಿದೆ. ಉ. ಪಿನಾಕಿನಿ, ದ. ಪಿನಾಕಿನಿ, ಪಾಲಾರ್ ಮತ್ತು ಅರ್ಕಾವತೀ ಮುಂತಾದ ನದಿಗಳ ಉಗಮಸ್ಥಾನವೂ ಆಗಿದೆ. ದಕ್ಷಿಣ ಭಾರತದ ಪ್ರಾಚೀನತಮ ಅರಸು ಮನೆತನಗಳಾದ ಬಾಣರಸರು ಮತ್ತು ಗಂಗರಸರು ತಮ್ಮನ್ನು ನಂದಗಿರಿನಾಥರೆಂದೇ ಕರೆದುಕೊಂಡಿದ್ದಾರೆ. ಹಾಗಾಗಿ ನಂದ/ನಂದಿಗಿರಿಯು ಕ್ರಿಸ್ತಶಕದ ಆರಂಭದ ೩-೪ನೇ ಶತಮಾನಕ್ಕಾಗಲೇ ರಾಜಕೀಯವಾಗಿ ಒಂದು ಪ್ರಮುಖ ಸ್ಥಾನವನ್ನು ಪಡೆದಿದ್ದಿತು - ಎಂಬುದು ಗಮನಾರ್ಹ. ಅಲ್ಲದೆ ಇದು ಉತ್ತರ ಭಾರತದ ಮೌರ್ಯ ಪೂರ್ವದ ನಂದರ ಆಳ್ವಿಕೆಗೂ ಒಳಪಟ್ಟಿದ್ದಿತೆಂಬ ಅಭಿಪ್ರಾಯವೂ ಇದೆ.

ನಂದಿಬೆಟ್ಟದ ಮೇಲಿರುವ ಗುಹೆಗಳಿಗೆ ಕ್ರಿ.ಶ. ಸು. ೮ನೇ ಶತಮಾನಕ್ಕಾಗಲೇ ಶೈವ ಪರಂಪರೆಯ ಸ್ಪರ್ಶ ಉಂಟಾಗಿತ್ತು ಎಂಬ ಸಂಗತಿ ಅಲ್ಲಿನ ನೆಲ್ಲಿಕಾಯಿ ಬಸವನಮಂಟಪದ ಸಮೀಪದಲ್ಲಿರುವ ಗುಹೆಯೊಳಗಿನ ಶಾಸನ[೧] ಮತ್ತು ಕ್ರಿ.ಶ. ೮೦೬ರ ರಾಷ್ಟ್ರಕೂಟ ಮುಮ್ಮಡಿ ಗೋವಿಂದನ ತಾಮ್ರಶಾಸನಗಳಿಂದ[೨] ಖಚಿತವಾಗುತ್ತದೆ. ನಂದಿಬೆಟ್ಟದ ಈಶಾನ್ಯದ ತಪ್ಪಲಿನಲ್ಲಿರುವ ನಂದಿಗ್ರಾಮದಲ್ಲಿನ ಶಿವದೇವಾಲಯವು (ಭೋಗ ನಂದೀಶ್ವರ) ರಾಷ್ಟ್ರಕೂಟ ಮುಮ್ಮಡಿ ಗೋವಿಂದನ ಮಗಳೂ ಬಾಣರಸನ ರಾಣಿಯೂ ಆದ 'ಮಾಣಿಕಬ್ಬೆ' ಎನಿಸಿದ 'ರತ್ನಾವಳಿ'ಯ ಆಶಯದಂತೆ ರಚನೆಗೊಂಡ ಸಂಗತಿ ಮತ್ತೊಂದು ತಾಮ್ರಶಾಸನದಿಂದ[೩] ತಿಳಿದುಬರುತ್ತದೆ. ಹೀಗೆ ಕ್ರಿಸ್ತಶಕ ಒಂಬತ್ತನೆಯ ಶತಮಾನಕ್ಕಾಗಲೇ ನಂದಿಯು ಒಂದು ಪ್ರಸಿದ್ಧ ಶೈವಧರ್ಮೀಯರ ಸ್ಥಾನವಾಗಿ ಹೆಸರು ಪಡೆದಿದ್ದಿತು, ಅಂದರೆ ಅದು ತನ್ನ ಪೂರ್ವದ ರಾಜಕೀಯ ಸ್ಥಾನಮಾನದಿಂದ ಮುಕ್ತವಾಗಿ ಕೇವಲ ಧಾರ್ಮಿಕ ಸ್ಥಾನವಾಗಿ ಪರಿಗಣಿತವಾಗಿತ್ತು. ಶಿವನಿಗೆ 'ಸ್ತೇನನಾಂಪತಿ' ಎಂಬ ಹೆಸರುಂಟು. (ಕಳವರರೇ ಸ್ತೇನರೆಂಬ ಅಭಿಪ್ರಾಯವಿದೆ.) ಹಾಗಾಗಿ ಈ ಶೈವಸ್ಥಾನವು ಕಳವರ್ ಜನಾಂಗದ ಆರಾಧ್ಯ ದೈವಸ್ಥಾನವಾಗಿ ಪರಿಣಮಿಸಿತ್ತೆಂದು ತೋರುತ್ತದೆ. ಅಂತಾಗಿ ಮುಂದೆ ವಿಜಯನಗರದ ಅರಸರ ಕಾಲದವರೆಗೂ ಅದು ಒಂದು ಆಡಳಿತಾತ್ಮಕ ಸ್ಥಾನವನ್ನು ಮರಳಿ ಪಡೆದಿರಲಿಲ್ಲ. ವಿಜಯನಗರ ಅರಸರ ಆಳ್ವಿಕೆಗೊಳಪಟ್ಟ ಆವತಿನಾಡ ಪ್ರಭುಗಳ ಆಳ್ವಿಕೆಯ ಕ್ರಿ.ಶ. ೧೪೨೮ರ ಶಾಸನವೊಂದು[೪] "ನಂದಿಮಂಡಲ ಪಂಚಕ್ರೋಶ ಪರಿಮಿತಿ" ಯುಳ್ಳದ್ದೆಂದು ಉಲ್ಲೇಖಿಸುತ್ತದೆ. ಇದು ಆವತಿನಾಡ ಪ್ರಭುಗಳ ಅಧೀನಕ್ಕೊಳಪಟ್ಟ ಪ್ರದೇಶವ್ಯಾಪ್ತಿಯ ಸೂಚನೆಯೆಂದು ತೋರುತ್ತದೆ. ಈ ಪ್ರದೇಶವೇ ಪ್ರಾಯಶಃ ಚೋಳರ ಕಾಲದಲ್ಲಿ ಶಾಸನಗಳಲ್ಲಿ ಉಕ್ತವಾಗಿರುವ 'ಕಳವರನಾಡು' ಆಗಿದ್ದಿತೆಂದು ಭಾವಿಸಬಹುದಾಗಿದೆ.

ನಾಡುಗಳ ಹೆಸರುಗಳು ಆ ಪ್ರದೇಶದ ಭೂ-ವೈಶಿಷ್ಟ್ಯ ಅಥವಾ ಆ ಪ್ರದೇಶದ ಒಂದು ಪ್ರಸಿದ್ಧ ಸ್ಥಳದ ಹೆಸರನ್ನು ಒಳಗೊಂಡಿರುವುದು ಸಾಮಾನ್ಯ ಸಂಗತಿ. ಉದಾ: ಕುಕ್ಕಲನಾಡು, ಕಿಟ್ಗಿಲಿನಾಡು, ಕಿಟಿಲೆನಾಡು, ಸೀಗಲನಾಡು, ಹೊಮ್ಮಳಿಗೆನಾಡು

* ಜಬಿಜೆ-೫೧೦, ೧೨ನೇ ಅಡ್ಡರಸ್ತೆ, ಮಾರತ್ತಹಳ್ಳಿ, ಬೆಂಗಳೂರು - ೫೬೦೦ ೩೭

ಮುಂತಾದವು ಭೂ-ವೈಶಿಷ್ಟ್ಯಕ್ಕೇ ಸಂಬಂಧಿಸಿದ ನಾಡುಗಳಾಗಿವೆ.[೫] ಎಲಹಕ್ಕನಾಡು, ಕೈವಾರನಾಡು, ಕೋಳಾಲನಾಡು ಮುಂತಾದವು ನೇರವಾಗಿ ಪ್ರಸಿದ್ಧ ಸ್ಥಳಗಳಿಗೆ ಸಂಬಂಧಿಸಿದ ನಾಡುಗಳಾಗಿವೆ. ಈ ಸ್ಥಳಗಳಾದರೂ ಪ್ರಾಕೃತಿಕ ಪರಿಸರದ ಹಿನ್ನೆಲೆಯುಳ್ಳ ವಾಗಿರುವುದು ಗಮನಾರ್ಹ ಸಂಗತಿಯೆ. ಇವುಗಳಿಂದ ಭಿನ್ನವಾದ ಆದರೆ ಬುಡಕಟ್ಟೊಂದರ ಹಿನ್ನೆಲೆಯುಳ್ಳ ನಾಡೇ '**ಕಳವರನಾಡು**'.

ಉತ್ತರ ಭಾರತದ ಉ. ಪ್ರದೇಶ, ಬಿಹಾರ ಮತ್ತು ಪ. ಬಂಗಾಳಗಳಲ್ಲಿ *KALWAR*, (ಕಲರ್, ಕಲ್ಲರ್, ಸೆಹೋರ್, ಕಲಲ್, ಕೊನ್ವಾರ್) ಎಂಬ ಬುಡಕಟ್ಟಿನ ಜನರು ಇಂದಿಗೂ ವಾಸಿಸುತ್ತಿರುವುದು ಕಂಡುಬರುತ್ತದೆ. ಇವರ ಮುಖ್ಯ ಉದ್ಯೋಗ ಸ್ಥಳೀಯ ಮದ್ಯ ತಯಾರಿಕೆ. ಅದರ ಸರಬರಾಜು ಕಾರ್ಯದಲ್ಲಿ ಇವರು ನಿರತರರಾಗಿರುತ್ತಾರೆ. ಇವರ ವಿವಾಹಿತ ಮಹಿಳೆಯರು ಅರಿಷಿಣ, ಕಾಲುಂಗರ, ಕುಂಕುಮ, ಕಪ್ಪು ಬಳೆಗಳನ್ನು ಧರಿಸುತ್ತಾರೆ.[೬] ವ್ಯವಹಾರಕ್ಕೆ ಆಯಾ ಸ್ಥಳೀಯ ಭಾಷೆ ಯನ್ನೇ ಬಳಸುತ್ತಾರೆ. ಮಧ್ಯಭಾರತದ ವಿಂಧ್ಯಪರ್ವತಗಳ ಆಸುಪಾಸಿನಲ್ಲಿದ್ದ ಇವರ ಪೂರ್ವಜರೇ ಕಾಲಾಂತರದಲ್ಲಿ ದಕ್ಷಿಣಕ್ಕೆ ಬಂದು ನೆಲಸಿದರೆಂದು ತೋರುತ್ತದೆ. ಕಳವರ್ ಮತ್ತು ಮರವರ್ ಎಂಬ ಎರಡು ಪ್ರಧಾನ ಬುಡಕಟ್ಟು ಜನರನ್ನು ಮೂಲ ದ್ರಾವಿಡರೆಂದು ಭಾವಿಸಲಾಗಿದೆ. ಇವರನ್ನು ತಮಿಳುನಾಡಿನಲ್ಲಿ ದ್ರಾವಿಡ ಕುಲಕ್ಕೆ ಸೇರಿದ ಒಂದು ಪ್ರಧಾನ ಜನಾಂಗವೆಂದು ಗುರುತಿಸಲಾಗಿದೆ. ಇವರಲ್ಲಿ ಪ್ರಧಾನವಾಗಿ ಒಂಬತ್ತು ಗುಂಪುಗಳಿವೆ. ಕಳ್ಳರ್‌ಕುಲ, ತೊಂಡಮಾನ್, ಇಸನಾಟ್ಟುಕಳ್ಳರ್, ನಾಟ್ವಾರ್‌ಕಳ್ಳರ್, ಪೆರಿಅಸುರಿಉೂರ್ ಕಳ್ಳರ್ ಮುಂತಾದ ಒಳ ಪಂಗಡಗಳು ಕಳವರರಲ್ಲಿ ಕಂಡುಬರುತ್ತದೆ.[೭] ಇವರಲ್ಲಿ ಪೆರಿಅಸುರಿಉೂರ್ ಕಳ್ಳರ್‌ರ ಸಾಂಪ್ರದಾಯಿಕ ವೃತ್ತಿ, ಮೇಲೆ ಉಲ್ಲೇಖಿಸಿದ ಉತ್ತರ ಭಾರತದ *KALWAR* ರಂತೆ ಮದ್ಯತಯಾರಿಕೆಯೇ ಪ್ರಧಾನವಾಗಿತ್ತೆಂದು ತಿಳಿದುಬರುತ್ತದೆ. ಉಳಿದ ಕಳವರ ಕುಲದ ಜನರ ಪ್ರಧಾನ ವೃತ್ತಿ ಪಶುಪಾಲನೆ, ವೀರತನ (ಸ್ವಾಭಾವಿಕ ಸೈನಿಕ ಪ್ರವೃತ್ರಿ) ಮತ್ತು ಕೃಷಿ. Oppert (1818-9) ರ ಪ್ರಕಾರ ಕಳ್ಳನ್ ಎಂಬುದು ಕುರುಬರ ಒಂದು ಶಾಖೆ. ಅವರು ತಮ್ಮ ಸ್ವಾಭಾವಿಕ ಸೈನಿಕ ವೃತ್ತಿಯನ್ನು ಕಳೆದುಕೊಂಡಾಗ ಅಲೆಮಾರಿಗಳಾಗಿ ಕಳ್ಳತನ, ದರೋಡೆಗಳಲ್ಲಿ ನಿರತರಾದರೆಂದು ಹೇಳುತ್ತಾರೆ. *W. Francis* ಅವರು ೧೯೦೧ರ ಜನಗಣತಿ ವರದಿಯಲ್ಲಿ 'ಇವರು ಮೂಲತಃ ಚೋಳ ಪ್ರಾಂತ್ಯದಿಂದ (ತಂಜಾವೂರು), ಪಾಂಡ್ಯ ರಾಜ್ಯಕ್ಕೆ ಕ್ರಿ.ಶ. ೧೧ನೇ ಶತಮಾನದಲ್ಲಿ ವಲಸೆ ಬಂದವರು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇವರಲ್ಲಿ ನಾಟ್ವಾರ್ ಕಳ್ಳರ್ ಜನಾಂಗದವರು ಮೂಲತಃ ಪಲ್ಲವರಾಜ್ಯದವರಾಗಿದ್ದು ಅಲ್ಲಿಂದ ಚೋಳ, ಪಾಂಡ್ಯನಾಡುಗಳಿಗೆ ವಲಸೆ ಹೋದವರೆಂದು ಹೇಳಲಾಗಿದೆ. ಇವರು ಪ್ರಧಾನತಃ ಸೈನಿಕ ಪ್ರವೃತ್ತಿಯ ಜನರಾಗಿದ್ದಾರೆ. ಇವರಿಗೆ ನಿಶ್ಚಿತ ಚಾರಿತ್ರಿಕ ಪರಂಪರೆಯಿದೆ. ಇವರ ಪ್ರಧಾನ ಆಹಾರ ರಾಗಿ. ಇವರು ಮಾಂಸಾಹಾರಿಗಳು, ಮದ್ಯ ಸೇವಕರು ಕೂಡ. ಇವರ ಸ್ತ್ರೀಯರೂ ಸಮಸಮವಾಗಿ ಕೃಷಿ ಕಾರ್ಯದಲ್ಲಿ ಪಾಲ್ಗೊಳ್ಳುತ್ತಾರೆ. ಸ್ವಜಾತಿಯ ಪುರೋಹಿತರನ್ನು ಹೊಂದಿರುತ್ತಾರೆ. ಅರಿಷಿಣ, ಬಳೆ, ತಾಳಿ, ಕಾಲುಂಗರ, ಕಿವಿ ಓಲೆ, ಮೂಗು ಬಟ್ಟುಗಳು ವಿವಾಹಿತೆಯಾದ ಹೆಂಗಳೆಯರ ಗುರುತುಗಳಾಗಿವೆ. ಇವರು ಪಾರಂಪರಿಕ ಯೋಧರು, ಪಾಳೆಯಗಾರರು, ಆಗಿದ್ದ, ಕೃಷಿಕರು. ಇವರ ಗ್ರಾಮದೇವತೆಗಳು - ಕುರುಪ್ಪು-ವೀರನ್, ಕಾಳಿ ಅಮ್ಮನ್, ಮಾರಿಯಮ್ಮನ್. ಇವರು ಮೂಲತಃ ಶೈವರು. ಇವರಲ್ಲಿ ಸೋಲಗರ್, ಮಂಗಲರ್, ತೆಂಗಂಡಿಯರ್, ಪಲಂದರ್, ಕುಲಂದರ್ ಎಂಬ ಪಂಗಡಗಳೂ ಇವೆ. ತೊಂಡಮಾನ್ ಕುಲಕ್ಕೆ ಸೇರಿದ ಕಳ್ಳರ್ ತಮಿಳುನಾಡಿನ ತಿರುನೆಲ್ವೇಲಿ, ಚಿದಂಬರಂ, ಮದುರೆ, ರಾಮನಾಥಪುರಂ, ಪುದುಕೋಟೆ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಅವರು ಮುಖ್ಯವಾಗಿ ಸುಣ್ಣ ಸುಡುವ ಕಾಯಕ ಮಾಡುತ್ತಾರೆ. ಅಲ್ಲದೆ ತೊಂಡಮಾನನನ್ನು ತಮ್ಮ ನಾಯಕನೆಂದು ಭಾವಿಸಿರುತ್ತಾರೆ.[೮]

ಈ ಮೇಲಿನ ವಿವರಗಳನ್ನು ಗಮನಿಸಿದರೆ ಕಳವರರು - ಗೋವಳರು, ತುರುಕಾರರು ದನವೇ ಇವರ ಧನ. 'ಪರಾಕ್ರಮ'ವು ಒಂದು ಆದರ್ಶ ಗುಣವಾಗಿದ್ದ ಅತಿ ಪುರಾತನ ಕಾಲದಲ್ಲಿ ಪರರನ್ನು ಆಕ್ರಮಿಸಿ ಅವರ ಗೋಧನವನ್ನು ಗೆದ್ದುಕೊಂಡು ಬರುವುದರಲ್ಲಿ ಆ ಕಾಲದ ಜನಗಳಲ್ಲಿ ಹೆಮ್ಮೆ ಎನಿಸುತ್ತಿತ್ತು...... ಕಳವರರಿಗೂ ಧನ ಸಂಪಾದನೆಯ ಹಂಬಲವು ಕಡಿಮೆ ಇರಲಿಲ್ಲ. ದನಗಳನ್ನು ದೋಚಿಕೊಂಡೊಯ್ಯುವಲ್ಲಿ ಕಳವರ ಮತ್ತು ಮರವರ ನೈಪುಣ್ಯವು ಆಶ್ಚರ್ಯಕರವಾಗಿದೆ - ಎಂದು ಥರ್ಸ್‌ಟನ್‌ರ ವರ್ಣನೆಗಳಿಂದ ತಿಳಿದುಬರುತ್ತದೆ. *Cattle theft is now the most popular calling among them (Kallars) They are clever at handling animals.*[9]

ಅತಿ ಪುರಾತನ ತಮಿಳು ಸಾಹಿತ್ಯದಲ್ಲಿ ಬರುವ (ವಡಕರ) ವರ್ಣನೆಗಳಲ್ಲಿಯೂ ದನಗಳನ್ನು ದೋಚಿಕೊಂಡು ಹೋಗುವ ಅವರ ಸ್ವಭಾವವೇ ಎದ್ದು ಕಾಣುತ್ತದೆ. ಮೂಲ ದ್ರಾವಿಡರಲ್ಲ ಕಳವರ ಕುಲದವರು ಅಂದರೆ 'ಹಾಲುಮತ'ದವರೇ ಆದರೂ ಅನೇಕ ಕಾರಣಗಳಿಂದ ಅವರಲ್ಲಿ ಹಲವು ಬಗೆಗಳುಂಟಾಗ ಲಾರಂಭಿಸಿದ್ದುದು ಗೋಚರವಾಗುತ್ತದೆ. 'ಕಳ್ಳನು ಉಳ್ಳವ ನಾಗುತ್ತಲೇ ಮರವನಾಗುತ್ತಾನೆ' ಎಂಬರ್ಥದ ಒಂದು ಗಾದೆಯ ಮಾತು ತಮಿಳಿನಲ್ಲಿದೆ.[೧೦] ಈ ಕಳವರ ಮತ್ತು ಮರವರ ಮೂಲದ ಬಗ್ಗೆ ಒಂದು ಸ್ವಾರಸ್ಯಕರ ಕಥೆ ಪ್ರಚಲಿತವಿದೆ. ಒಂದಾನೊಂದು ಕಾಲದಲ್ಲಿ ಯಾವುದೋ ಕಾರ್ಯನಿಮಿತ್ತ ಗೌತಮ ಋಷಿಯು ಹೊರಗೆ ಹೋಗಿದ್ದ. ಆ ಸಂದರ್ಭದ

ಅವಕಾಶವನ್ನು ದೇವೇಂದ್ರನು ಉಪಯೋಗಿಸಿಕೊಂಡು ಋಷಿ ಪತ್ನಿ ಅಹಲ್ಯೆಯ ಸಂಪರ್ಕವನ್ನು ಬೆಳೆಸಿದನು. ತತ್ಪರಿಣಾಮವಾಗಿ ಅಹಲ್ಯೆಗೆ ಮೂವರು ಮಕ್ಕಳಾದರು. ಋಷಿ ಹಿಂತಿರುಗಿದಾಗ ಆ ಮೂವರಲ್ಲಿ ಒಬ್ಬನು ಬಾಗಿಲ ಹಿಂದೆ ಕಳ್ಳನಂತೆ ಅವಿತುಕೊಂಡನು, ಒಬ್ಬನು ಮರವನ್ನು ಏರಿದನು. ಮತ್ತೊಬ್ಬನು ಆತ್ಮ ವಿಶ್ವಾಸದಿಂದ ಎದುರು ನಿಂತನು. ಬಾಗಿಲ ಹಿಂದೆ ಕಳ್ಳನಂತೆ ಅವಿತುಕೊಂಡವನು 'ಕಳ್ಳನ್' ಎಂದೂ, ಮರವನ್ನು ಏರಿದವನನ್ನು 'ಮರವನ್' ಎಂದೂ, ಪ್ರತ್ಯಕ್ಷವಾಗಿ ಕಾಣಿಸಿಕೊಂಡವನು 'ಅಹಮುಡೆಯನ್' ಎಂದು ಹೆಸರಾದರು. ಅಹಂ-ಉಡೆಯನ್ ಎಂಬುದೆ ಅಹಂಬುಡಿಯನ್ ಎಂದು ಬದಲಾಗಿದೆ. ಈ ಮೂವರ ವಂಶೀಯರೇ ಕಳ್ಳರ್, ಮರವರ್ ಮತ್ತು ಅಹಂಬುಡಿಯರ್ ಎಂಬ ಜನಾಂಗದವರಾದರೆಂಬ ಪ್ರತೀತಿ ಜನಜನಿತವಾಗಿದೆ.[೧೧] ಪುರಾತನ ತಮಿಳು ಸಾಹಿತ್ಯದಲ್ಲಿ ಇವರನ್ನು 'ಕುರುನಿಲಮ್ಮನ್ನೆಯ' ರೆಂದು ಕರೆಯಲಾಗಿದೆ. ಹಾಗಾಗಿ ಸಾಧಾರವಾಗಿ ಕಳವರು ಮರವರು ಒಂದೇ.[೧೨]

"ಇಂದು ಕಳವರನ್ನು ತಮಿಳರಲ್ಲಿ ಎಣಿಸಬಹುದಾಗಿದ್ದರೂ ಪುರಾತನ ತಮಿಳು ಸಾಹಿತ್ಯ ದೊಳಗಣವರ್ಣನೆಗಳನ್ನು ನೋಡಿದರೆ ಈ ಜನಗಳ ಬಗ್ಗೆ ಚೋಳ ಪಾಂಡ್ಯರಲ್ಲಿ ಆತ್ಮೀಯ ಭಾವವು ಇದ್ದಂತೆ ತೋರುವುದಿಲ್ಲ. ಕಳ್ಳ ವಡುಕರ ಭಾಷೆ ಬೇರೆ, ರೀತಿ ಬೇರೆ ಎಂದು ತಮಿಳು ಕವಿಗಳು ವರ್ಣಿಸಿದ್ದುಂಟು. ಆದುದರಿಂದ ಕಳವರೊಳಗಿನ ಈ ವಡಕರು ತಮಿಳರಿಂದ ಭಿನ್ನರಾಗುತ್ತಲಿದ್ದ ಕನ್ನ ಮತ್ತು ಕಮ್ಮರೇ ಆಗಿರಬೇಕೆಂಬುದರಲ್ಲಿ ಸಂದೇಹವಿಲ್ಲ" ಎಂಬ ಶಂ.ಬಾ. ಜೋಷಿಯವರ ಅಭಿಪ್ರಾಯ[೧೩] ವಿಚಾರಯೋಗ್ಯವಾಗಿದೆ.

ದಕ್ಷಿಣ ಭಾರತದ ಇತಿಹಾಸದಲ್ಲಿ ಸು. ಕ್ರಿ.ಶ. ೪-೭ನೇ ಶತಮಾನಗಳಲ್ಲಿ 'ಕಳಭ್ರ'ರೆಂಬ ರಾಜರು ಕಾಣಿಸಿಕೊಳ್ಳುತ್ತಾರೆ. ಇವರು ಮೂಲತಃ ಕಳವರೇ ಆಗಿರಬೇಕೆಂಬ ಅಭಿಪ್ರಾಯ ವಿದ್ವಾಂಸರಲ್ಲಿ ಇದೆ. ಪ್ರೊ|| ಪಿ.ಟಿ. ಶ್ರೀನಿವಾಸ ಅಯಂಗಾರ್ಯರು ಈ ಬಗ್ಗೆ ಡಾ|| ಕೃಷ್ಣಸ್ವಾಮಿ ಅಯ್ಯರ್ ಅವರ ಮಾತುಗಳನ್ನು ಉಲ್ಲೇಖಿಸುತ್ತಾರೆ. *Dr. S. Krishnaswamy Iyangar has given his support to the theory that the Kalabnras were Kallar of old Tamil poetry. Kallar has as alternative form of Kalvar and Kallavar".* ಇದೇ ಅಭಿಪ್ರಾಯವನ್ನು ಹಿರಿಯ ಶಾಸನ ತಜ್ಞರಾಗಿದ್ದ. ರಾ. ಸಾ. ವೆಂಕಟಯ್ಯನವರು ವ್ಯಕ್ತಪಡಿಸಿದ್ದಾರೆ. ಕಳವರೇ ಕಳಭ್ರರೆಂಬ ಹೆಸರಿನಿಂದ ಮುಂದೆ ಪ್ರಖ್ಯಾತಿಗೆ ಬಂದರೆಂದು ಸಾಮಾನ್ಯವಾಗಿ ಎಲ್ಲ ಸಂಶೋಧಕರು ಒಪ್ಪಿಕೊಂಡಿದ್ದಾರೆ.[೧೪]

ನಂದಿಬೆಟ್ಟಗಳ ಪರಿಸರದ ಕಳ್ವರನಾಡಿನ ಪೂರ್ವಕ್ಕೆ ಕೈವಾರನಾಡು ಅದರ ಪೂರ್ವಕ್ಕೆ ಪುಲಿನಾಡನ್ನೊಳಗೊಂಡ **ವಡಗಾವಳಿ** ಎಂಬ ಪ್ರಾದೇಶಿಕ ವಿಭಾಗ ಅಸ್ತಿತ್ವದಲ್ಲಿದ್ದ ಸಂಗತಿ ಅನೇಕ ಶಾಸನಗಳಿಂದ ವ್ಯಕ್ತವಾಗುತ್ತದೆ. ವಡಗ/ಬಡಗ ಅಂದರೆ ಉತ್ತರ ದಿಕ್ಕು. ಅಂದರೆ ತಮಿಳು ಪ್ರದೇಶಕ್ಕೆ ಉತ್ತರದಲ್ಲಿದ್ದ ಪ್ರದೇಶವೆಂದು ಅರ್ಥ. ತಮಿಳರು ಕಳಭ್ರರನ್ನು ವಡಕರೆಂದು ಭಾವಿಸುವುದರಿಂದ ಈ ಪ್ರದೇಶದಲ್ಲಿದ್ದ ಕಳವರರೇ ವಡಗರಸ್ಸಿದ್ದರೆಂದರೆ ತಪ್ಪಾಗಲಾರದು. **ವಡಗಾವಟಿ ಪನ್ನಿರ್ಚ್ಛಾಸಿರವೆಂದು**, ಒಂಬತ್ತು-ಹತ್ತನೆಯ ಶತಮಾನದ ಶಾಸನಗಳಲ್ಲಿ ಉಕ್ತವಾಗಿರುವ ಈ ಪ್ರದೇಶ ಇಂದಿನ ಕೋಲಾರ ಜಿಲ್ಲೆಯ ಮುಳಬಾಗಿಲು, ಶ್ರೀನಿವಾಸಪುರ ಮತ್ತು ಚಿಂತಾಮಣಿ ತಾಲೂಕಿನ ಹಲವು ಪ್ರದೇಶಗಳನ್ನೊಳಗೊಂಡಂತೆ, ಚಿತ್ತೂರು ಜಿಲ್ಲೆಯ ಪುಂಗನೂರು ತಾಲೂಕು ಉತ್ತರ ಆರ್ಕಾಡು ಜಿಲ್ಲೆಯ ಗುಡಿಯಾತ್ತಂ ಮುಂತಾದ ತಾಲೂಕುಗಳನ್ನೊಳಗೊಂಡಿದ್ದಿತು. ಮೂಲತಃ ಪಶುಪಾಲಕರಾದ ಕಳವರರು ಈ ಪ್ರದೇಶದಲ್ಲಿ ನೆಲೆನಿಂತು ತಮಿಳರಿಗೆ ವಡಗರೆನಿಸಿ ತಮ್ಮ ವೀರ ಜೀವನವನ್ನು ಮುಂದುವರಿಸಿದ್ದರೆಂದು ತೋರುತ್ತದೆ. ಈ ಪ್ರದೇಶದ ಪ್ರಾಚೀನ ದಾನ ಶಾಸನಗಳನ್ನು ಅವಲೋಕಿಸಿದರೆ ದೇವಾಲಯದ ನಂದದೀವಿಗೆ ಮುಂತಾದ ಸೇವೆಗಳಿಗೆ ಕುರಿಗಳನ್ನೇ ದತ್ತಿಯಾಗಿ ನೀಡಿರುವುದು.[೧೫] ಕಂಡುಬರುತ್ತದೆ. ಹಾಗಾಗಿ ಇದು ಪಶು ಸಮೃದ್ಧಿಯನ್ನು, ಪಶುಪಾಲಕರನ್ನೂ ಪಡೆದಿದ್ದ ಪ್ರದೇಶವಾಗಿದ್ದಿತೆನ್ನಬಹುದು. ಅಲ್ಲದೆ ಈ ಪ್ರದೇಶದಲ್ಲೇ ಅತ್ಯಧಿಕ ಸಂಖ್ಯೆಯ ತುರುಗಾಳೆಗಕ್ಕೆ ಸಂಬಂಧಿಸಿದ ವೀರಗಲ್ಲು ಸ್ಮಾರಕಗಳು ವಿಶೇಷವಾಗಿರುವುದು ಮತ್ತೊಂದು ಗಮನಾರ್ಹ ಸಂಗತಿಯಾಗಿದೆ.[೧೬] ಕಳವರ್‌ರು ಗೋಗಳ್ಳರೂ ಆಗಿದ್ದರೆಂಬ ಅಂಶವನ್ನು ಈ ಮೊದಲೇ ಪ್ರಸ್ತಾಪಿಸಲಾಗಿದೆ. ಈ ಗೋಗ್ರಹಣ ಕ್ರಿಯೆಯು ಮುಂದೆ ತಮ್ಮ ಅಧಿಕಾರ ಸ್ಥಾಪನೆಯ ಕುರುಹಾಗಿ ರೂಪಾಂತರಗೊಂಡ ಅಂಶ ನಮ್ಮ ಪಾರಂಪರಿಕ ಜಾನಪದ ಮತ್ತು ಶಿಷ್ಟ ಸಾಹಿತ್ಯಗಳಲ್ಲಿ ದಾಖಲುಗೊಂಡಿರುವುದು ಸರ್ವವೇದ್ಯ. ಮಹಾಭಾರತದ ಗೋಗ್ರಹಣ ಪ್ರಸಂಗ ಇದಕ್ಕೆ ಒಂದು ಸ್ಪಷ್ಟ ಉದಾಹರಣೆಯಾಗಿದೆ. ಕನ್ನಡ ಜಾನಪದ ಮಹಾ ಕಾವ್ಯಗಳಾದ... ಗಳಲ್ಲಿ ಉಕ್ತವಾಗಿರುವ ಸಂಗತಿಗಳು ಇದಕ್ಕೆ ಇನ್ನಷ್ಟು ಪೂರಕ ವಿವರಗಳಾಗಿವೆ.

ಈ ಮೇಲಿನ ವಿವರಣೆಯನ್ನು ಪರ್ಯಾಲೋಚಿಸುವುದರಿಂದ ಕೆಲವು ಸಂಗತಿಗಳನ್ನು ಗ್ರಹಿಸಬಹುದಾಗಿದೆ.

೧. ಕಳ್ವರರು ಮೂಲತಃ ಉತ್ತರ ಭಾರತ ಅಂದರೆ ಮಧ್ಯ ಭಾರತದ ವಿಂದ್ಯಪರ್ವತಗಳ ಆಸುಪಾಸಿನ ಪ್ರದೇಶಗಳಿಂದ ದಕ್ಷಿಣಕ್ಕೆ ಬಂದ ದ್ರಾವಿಡ ಬುಡಕಟ್ಟಿಗೆ ಸೇರಿದ ಜನರು. ಕಾಲಾಂತರದಲ್ಲಿ ಇವರು ದಕ್ಷಿಣಕ್ಕೆ ಬಂದು ನಂದಿಬೆಟ್ಟದ ಪರಿಸರದಲ್ಲಿ ಸಾಂದ್ರವಾಗಿ ನೆಲೆಗೊಂಡು 'ಕಳ್ವರನಾಡು' ಎಂಬ ಒಂದು ವಿಶಿಷ್ಟ ಭೌಗೋಳಿಕ ಪ್ರದೇಶದ ಸೃಷ್ಟಿಗೆ ಕಾರಣರಾಗಿದ್ದರು.

೨. ಇಂದು ತಮಿಳುನಾಡಿನಾದ್ಯಂತವಿರುವ ಕಳ್ಳರ್, ಮರವರ್ ಮತ್ತು ಅಂಬುಡಿಯನ್ ಎಂಬುವ ಬುಡಕಟ್ಟಿನವರು ಮೂಲತಃ ಒಂದೇ ಮೂಲದಿಂದ ಬಂದವರಾಗಿದ್ದು ಉತ್ತರದಿಂದ, ಕಾಲಾಂತರದಲ್ಲಿ ಇಂದಿನ ಕರ್ನಾಟಕ, ಆಂಧ್ರಗಳ ಮೂಲಕ ಅಲೆಮಾರಿ ಪಶುಪಾಲಕರಾಗಿ ಮುಂದೆ ಸಾಗಿ ತಮಿಳು ಪ್ರದೇಶದಲ್ಲಿ ನೆಲಸಿ ಅಲ್ಲಿನ ಮೂಲಿಗರೆನಿಸಿರಬೇಕು.

೩. ಪ್ರಾಚೀನ ತಮಿಳು ಸಾಹಿತ್ಯದಲ್ಲಿ ಕಂಡುಬರುವ ಬಡಗ/ ವಡಗರ್ ಎಂಬುವರು ಪ್ರಾಯಶಃ ಎರಡನೇ ಹಂತದಲ್ಲಿ ತಮಿಳು ಪ್ರದೇಶಕ್ಕೆ ಪ್ರವೇಶಿಸತೊಡಗಿದ ಕಳ್ವರರೇ ಆಗಿದ್ದು ಅವರು ನಂದಿಬೆಟ್ಟಗಳ ಪರಿಸರದಿಂದ ಪೂರ್ವಕ್ಕೆ ಸಾಗಿ ತಮಿಳುನಾಡಿನ ಉತ್ತರದಲ್ಲಿ ಅಂದರೆ ವಡಗಾವಟಿ ಪ್ರದೇಶದಲ್ಲಿ ನೆಲೆನಿಂತರು. ಆಕ್ರಮಣಶೀಲ ಪ್ರವೃತ್ತಿಯ ಈ ವಡಗಾವಟೆಯ ನವ ಕಳ್ವರರೇ ಸಮಕಾಲೀನ ತಮಿಳರ ಪಾಲಿಗೆ ಸಿಂಹಸ್ವಪ್ನರಾದ ಕಳಭ್ರರೆನಿಸಿದ್ದರು. ಪಡಗಾವಟಿ ಪ್ರದೇಶ ಮುಂದೆ ಬಾಣರಸರ ಆಳ್ವಿಕೆಗೆ ಒಳಪಟ್ಟು, ಅವರ ವಿಶಾಲ 'ಪೆರ್ಬಾಣವಾಡಿ' ಪ್ರದೇಶದಲ್ಲಿ ಅಂತರ್ಗತ ವಾಯಿತೆಂದು ತೋರುತ್ತದೆ.

೪. ಪ್ರಧಾನತಃ ಪಶುಪಾಲಕರಾದ ಕಳ್ವರರೇ ಕನ್ನಡಿಗರ ಮೂಲಿಗರೆಂದು ವಿದ್ವಾಂಸರು ಪ್ರತಿಪಾದಿಸಿರುವುದು ಮತ್ತು ಕಳ್ವರರೇ - ಕಳಭ್ರರೆಂದು ಅನೇಕ ವಿದ್ವಾಂಸರು ಅಭಿಪ್ರಾಯ ಪಟ್ಟಿರುವುದು ಮನನಯೋಗ್ಯ ಸಂಗತಿ.

೫. ಕಳ್ವರ ಬುಡಕಟ್ಟಿನ ಚಲನ ಪಥದಲ್ಲಿ ನಂದಿಬೆಟ್ಟಗಳ ಪರಿಸರವು ಆವರ ನೆಲೆಗೆ ಕಾರಣವಾಗಿ, ಅಲ್ಲೇ, ಅವರು ನೆಲೆನಿಂತು ಆ ಪ್ರದೇಶಕ್ಕೆ ಆ ಹೆಸರು, ಪಳೆಯುಳಿಕೆಯಂತೆ ಉಳಿದು ಶಾಸನಗಳಲ್ಲಿ ದಾಖಲುಗೊಂಡದ್ದು ದ್ರಾವಿಡ ಅಧ್ಯಯನಕ್ಕೆ ಒಂದು ಸಣ್ಣ ಕೊಂಡಿಯನ್ನು ಒದಗಿಸುತ್ತದೆ ಎಂದು ಹೇಳಬಹುದಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯ ಕರ್ನಾಟಿಕ., ಸಂ. X, ಚಿಕ್ಕಬಳ್ಳಾಪುರ ೩೫, ಸು. ಕ್ರಿ.ಶ. ೮೦೦.**
೨. ಅದೇ, ಸಂ. XVII, ಚಿಕ್ಕಬಳ್ಳಾಪುರ ೧೦೬.
೩. ಅದೇ, ಚಿಕ್ಕಬಳ್ಳಾಪುರ ೬೬.
೪. ಅದೇ, ಸಂ. X, ಚಿಕ್ಕಬಳ್ಳಾಪುರ ೪೦.
೫. ಎಂ. ಎಂ. ಕಲಬುರ್ಗಿ., (ಪ್ರ.ಸಂ.) ೧೯೯೯, **ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು**, ಭಾಗ - ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೬. K. S. Singh., (1998), *India's Communities*, Vol. V, Authropological Survey of India, Delhi, p. 1477.
೭. ಅದೇ.
೮. ಅದೇ, ಪು. ೧೪೭೬.
೯. Edgar Thurston., (1965), *Caste and Tribes of South India*, Vol. II, Madras, p. 67.
೧೦. ಶಂ.ಬಾ ಜೋಶಿ., (೧೯೯೯), ಕನ್ನಡದ ನೆಲ, **ಶಂಬಾ ಕೃತಿ ಸಂಪುಟ-೨**, (ಸಂ.) ಮಲ್ಲೇಪುರಂ ಜಿ. ವೆಂಕಟೇಶ, ಬೆಂಗಳೂರು, ಪು. ೭೮.
೧೧. K. S. Singh., (1998), p.೧೪೭೮ ಇಂತಹ ಕಥೆಗಳನ್ನು ಸೃಷ್ಟಿಸಿದವರ ಉದ್ದೇಶ; ಸಾಮಾಜಿಕವಾಗಿ ಈ ಬುಡಕಟ್ಟಿನವರು ಎರಡನೇ ದರ್ಜೆಯವರು ಎಂಬುದನ್ನು ಪರೋಕ್ಷವಾಗಿ ಬಿಂಬಿಸುವುದಾಗಿತ್ತು ಎಂಬುದು ಸ್ಪಷ್ಟ.
೧೨. ಉದ್ಧೃತ., ಶಂ.ಬಾ ಜೋಶಿ., (೧೯೯೯), ಪು. ೮೨.
೧೩. ಶಂ.ಬಾ. ಜೋಶಿ., (೧೯೯೯), ಪು. ೭೫.
೧೪. ಅದೇ.
೧೫. S. Swaminathan (Ed)., (2000), *Rastrakuta Inscriptions in the Tamil Country*, No. 29, 47, 58, 84, 85, 88 etc, Kannada University, Hampi.
೧೬. ಡಾ. ಪಿ.ವಿ. ಕೃಷ್ಣಮೂರ್ತಿ., (೧೯೯೯), **ಬಾಣರ ಶಾಸನಗಳು ಒಂದು ಅಧ್ಯಯನ**, ಅಪ್ರಕಟಿತ ಡಾಕ್ಟೊರೆಟ್ ನಿಬಂಧ, ಪು. ೧೪೯.

ಕೇಶವ ಉಮರ್ಜಿ*

# ಉಡುಪಿ ಇದು ರಜತಪೀಠ

ಉಡುಪಿ ಇದು. ಶ್ರೀ ಕೃಷ್ಣನಿಂದ ಪ್ರಸಿದ್ಧವಾದಂತೆ ರಜತ ಪೀಠವೆಂದೂ ಕರೆಸಿಕೊಳ್ಳುತ್ತದೆ. ರಥಬೀದಿಯಲ್ಲಿರುವ ಚಂದ್ರೇಶ್ವರ (ಈಗಿನ ಚಂದ್ರಮೌಳೇಶ್ವರ ಆಗಿರಬಹುದು) ದೇವಸ್ಥಾನವು ಪುರಾತನವಾದುದಾಗಿದ್ದು ಈ ದೇವಸ್ಥಾನದಿಂದ ಉಡುಪಿ ಎಂಬ ಹೆಸರು ಬಂದಿರುತ್ತದೆ.

'ಉಡು' ಎಂದರೆ ನಕ್ಷತ್ರಗಳು 'ಪ' ಎಂದರೆ ಒಡೆಯ. ನಕ್ಷತ್ರಗಳ ಒಡೆಯ 'ಚಂದ್ರ'ನಾದ ಕಾರಣ ಚಂದ್ರೇಶ್ವರ ದೇವಸ್ಥಾನವುಳ್ಳ ಊರು 'ಉಡುಪಿ' ಎಂದಾಯಿತು. ಇದನ್ನು ದಿವಂಗತ ಕೊರಡ್ಕಲ್ ಶ್ರೀನಿವಾಸರಾವರವರೂ ದೃಢೀಕರಿಸಿದ್ದಾರೆ.

ಬಹು ಹಿಂದೆ ಇದನ್ನು ಕದಂಬರು ಆಳುತ್ತಿದ್ದರು. ಕದಂಬ ರಾಜಕುಲದ ಅರಸ ರಾಮಭೋಜ ಎಂಬವನು ಮಹಾಯಾಗ ವನ್ನು ಮಾಡಲು ಸ್ಥಳಶುದ್ಧಿ ಕಾರ್ಯ ಕೈಕೊಂಡನು. ಆಗೆಲ್ಲ ಇದು ಕಾಡಿನ ಮಧ್ಯದ ಒಂದು ಹಳ್ಳಿಯಾಗಿತ್ತು. ಯಾಗಕ್ಕಾಗಿ ಬೇಕಾಗುವ ವಿಶಾಲ ಸ್ಥಳವನ್ನು ಸ್ವಚ್ಛಗೊಳಿಸುವ ಸಮಯದಲ್ಲಿ ಒಂದು ನಾಗರಹಾವು ಕೊಲ್ಲಲ್ಪಟ್ಟಿತು. ಈ ಕುರಿತು ಅರಸನು ಚಿಂತಿತನಾಗಿ ಶಾಸ್ತ್ರಕಾರರಲ್ಲಿ ವಿಚಾರಿಸಿದಾಗ:

*'ರಾಜನೇ ನಿನಗೆ ಸರ್ಪಹತ್ಯಾ ದೋಷವು ಬಂದಿದೆ. ಈ ಸರ್ಪಹತ್ಯಾ ದೋಷ ಪರಿಹಾರವಾಗಬೇಕಾದರೆ ನೀನು ನಿನ್ನ ತೂಕದ ಬೆಳ್ಳಿಯಲ್ಲಿ ಆ ಆದಿಶೇಷನನ್ನು ಮಾಡಿಸಿ ಇಲ್ಲಿ ಪ್ರತಿಷ್ಠಾಪಿಸು. ಅಂದರೆ ನಿನ್ನ ಪಾಪ ಪರಿಹಾರವಾಗುವುದು'* ಎಂದು ಸಲಹೆ ಕೊಟ್ಟರಂತೆ.

ಅದರಂತೆ ಆ ರಾಮಭೋಜ ಅರಸನು ಯಾಗ ಮಾಡಿ, ಯಾಗದ ಕೊನೆಗೆ ತನ್ನ ಸಮತೂಕದ ಬೆಳ್ಳಿಯಿಂದ ಸರ್ಪಾಭರಣ ಭೂಷಿತ ಈಶ್ವರನನ್ನು ಲಿಂಗರೂಪದಲ್ಲಿ ಪ್ರತಿಷ್ಠಾಪಿಸಿ ದೇವಸ್ಥಾನವನ್ನು ಕಟ್ಟಿಸಿದನು. ಅದುವೇ ಈಗಿನ 'ಅನಂತೇಶ್ವರ' ದೇವಸ್ಥಾನ. ರಜತ ಭೂಷಿತ ಅನಂತೇಶ್ವರನ ಈ ಸ್ಥಾನ ರಜತಪೀಠವೆಂಬ ಹೆಸರು ಪಡೆಯಿತು.

ಹೀಗೆ ಈ ಬೆಳ್ಳಿಯ ಪೀಠದ ಮೇಲೆ ಶಿವನಿದ್ದ ಸ್ಥಳ (ರಥಬೀದಿ) ಶಿವಬೆಳ್ಳಿ, ಶಿವಳ್ಳಿ ಎಂದೂ, ಇಲ್ಲಿರುವ ಬ್ರಾಹ್ಮಣರಿಗೆ ಶಿವಳ್ಳಿ ಬ್ರಾಹ್ಮಣರೆಂದೂ ಹೆಸರು ಬಿದ್ದಿತು. ಆದರೆ ಕಾಲಾಂತರದಲ್ಲಿ ಅವರೆಲ್ಲ ಸ್ಥಳಾಂತರಗೊಂಡರೆಂದು ತಿಳಿದು ಬರುತ್ತದೆ.

ಹೀಗೆ ಮೊದ ಮೊದಲು ರಥಬೀದಿ ಮಾತ್ರ ರಜತಪೀಠ ವಾದುದು ಮುಂದೆ ಬರಬರುತ್ತ ಉಡುಪಿಯು ಗ್ರಾಂಥಿಕ ಭಾಷೆಯಲ್ಲಿ ರಜತಪೀಠಪುರ ಅಥವಾ ರೂಪ್ಯಪೀಠಪುರ ಎಂಬ ಹೆಸರಿನಿಂದ ಸಂಸ್ಕೃತ ಸಾಹಿತ್ಯದಲ್ಲಿ ವಿಜ್ರಂಭಿಸಿತು.

ಸಂಸ್ಕೃತದ ಪ್ರಸಿದ್ಧ ನಾಟಕಕಾರನಾದ ಕಾಳಿದಾಸನು ಹಿಮಾಲಯವನ್ನು 'ರಜತಗಿರಿ' ಎಂದು ವರ್ಣಿಸಿದ್ದಾನೆ. ಆದರೆ ಉಡುಪಿಗೆ ರಜತಪೀಠವೆಂದು ಸಾಹಿತ್ಯದಲ್ಲಿ ಮೊದಲು ಪ್ರಸ್ತಾಪವಾದದ್ದು ೧೧ನೇ ಶತಮಾನದಲ್ಲಿ.

ಕ್ರಿ.ಶ. ೧೨೩೮ರಲ್ಲಿ ಇಲ್ಲಿಯೇ ಹತ್ತಿರದ ಪಾಜಕ ಕ್ಷೇತ್ರದಲ್ಲಿ ದ್ವೈತ ಮತದ ಪುನರುದ್ಧಾರಕರಾಗಿ, ಅಷ್ಟ ಮಠಗಳ ಸ್ಥಾಪಕರಾಗಿ, ಶ್ರೀಮಧ್ವಾಚಾರ್ಯರು ವಿಜಯದಶಮಿಯ ಸುದಿನದಂದು ಜನ್ಮತಾಳಿದರು.

ಜ್ಞಾನಾರ್ಜನಾ ತೃಷ್ಣೆ, ಅಸಾಧಾರಣ ಪ್ರತಿಭೆ, ಪ್ರತ್ಯುತ್ಪನ್ನ ಬುದ್ಧಿಶಕ್ತಿ, ವಿಚಾರ ಸ್ವಾತಂತ್ರ್ಯ, ಅಂಧಶ್ರದ್ಧಾವಿರಾಹಿತ್ಯ, ಏಕ ಪಾಠಿತ್ವ, ಪ್ರಬಲ ಜ್ಞಾಪಕಶಕ್ತಿ, ಆಕರ್ಷಣೀಯ ಹಾಗೂ ವಿಶ್ವಾಸದಾಯಕ ವಕ್ತೃತ್ವ, ದರ್ಶನದಿಂದಲೇ ಗೌರವಾಂಕುರ ಗೊಳಿಸುವ ಅಂಗಸೌಷ್ಠವ ಮತ್ತು ದಿವ್ಯ ಸುಂದರ ಕಾಂತಿ ಇವೆಲ್ಲವೂ ಅವರಲ್ಲಿದ್ದುದರಿಂದ ಬಹು ಬೇಗನೇ ಅವರು ಪ್ರವರ್ಧಮಾನಕ್ಕೆ ಬಂದರು. ಇವರ ಚರಿತ್ರೆಯಾದ ಸುಮಧ್ವವಿಜಯದಲ್ಲಿ ಶ್ರೀ ನಾರಾಯಣ ಪಂಡಿತಾಚಾರ್ಯರು ಉಡುಪಿಯ ಪ್ರಸ್ತಾಪ ಮಾಡುವಾಗ ರೂಪ್ಯಪೀಠಪುರವೆಂದು ಕರೆದಿದ್ದಾರೆ. ಆದರೆ ಇವರಿಗಿಂತ ಪೂರ್ವದಲ್ಲಿ ಶ್ರೀನಾರಾಯಣ ಪಂಡಿತಾಚಾರ್ಯರ ತಂದೆಯಾದ ಶ್ರೀ ತ್ರಿವಿಕ್ರಮ ಪಂಡಿತಾ ಚಾರ್ಯರು ರಚಿಸಿದ ವಾಯುಸ್ತುತಿಯಲ್ಲಿ ಇರುವ:

"ಭೂತ್ವಾಕ್ಷೇತ್ರೇ ವಿಶುದ್ಧೇ ದ್ವಿಜಗಣ ನಿಲಯೇ ರೂಪ್ಯ
ಪೀಠಾಭಿಧಾನೇ।
ತತ್ರಾಪಿ ಬ್ರಹ್ಮಜಾತಿಸ್ತ್ರಿ ಭುವನ ವಿಶದೇ ಮಧ್ಯಗೇಹಾಖ್ಯ ಗೇಹೇ।
ಪಾರಿವ್ರಾಜ್ಯಾಧಿರಾಜಃ ಪುನರಪಿ ಬದರೀಂ ಪ್ರಾಪ್ಯ ಕೃಷ್ಣಂ ಚ ನತ್ವಾ
ಕೃತ್ವಾ ಭಾಷ್ಯಾಣಿ ಸಮ್ಯಕ್ ವ್ಯತನುತ ಚ ಭವಾನ್ ಭಾರತಾರ್ಥ
ಪ್ರಕಾಶಂ॥"

ಎಂಬ ಶ್ಲೋಕದಲ್ಲಿ ಇಡೀ ಭೂಮಂಡಲದಲ್ಲಿಯೇ ಶ್ರೇಷ್ಠವಾದ ಉಡುಪಿ ಕ್ಷೇತ್ರ (ರೂಪ್ಯ ಪೀಠಾಭಿಧಾನೇ) ಎಂದು ಹೊಗಳಿ ಹಾಡಿದ್ದಾರೆ.

ಅದರಂತೆ ಇವರ ಪುತ್ರ ನಾರಾಯಣ ಪಂಡಿತಾಚಾರ್ಯರು ಶ್ರೀ ಸುಮಧ್ವ ವಿಜಯದಲ್ಲಿ -

* 'ಅಗಸ್ತ್ಯ ಕುಟೀರ', ಹುನ್ನೂರು - ೫೮೭ ೧೧೯, ತಾ॥ ಜಮಖಂಡಿ, ಜಿ॥ ಬಾಗಲಕೋಟೆ

'ನನ್ನ ನನ್ಯ ಶರಣಾತ್ಮನಾಂ ಸತಾಂ
ಸಿದ್ಧಿ ವಿಘ್ನ ಮುಖದೋಷ ಭೇಷಜಮ್।
ಐಚ್ಛ ದಚ್ಛಲದಯೋದಯಾದಯಂ
ರೂಪ್ಯಪೀಠ ಪುರಗಃ ಕದಾಚನ॥

(೯ನೇ ಸರ್ಗ, ೪೦ನೇ ಶ್ಲೋಕ)

ಒಂದಾನೊಂದು ದಿನ ಶ್ರೀಮಧ್ವಾಚಾರ್ಯರು ಉಡುಪಿಲ್ಲಿದ್ದಾಗ ಅವರಿಗೆ ತಮ್ಮನ್ನೇ ಆಶ್ರಯಿಸಿರುವ ಸಜ್ಜನರ ಉದ್ಧಾರಕ್ಕಾಗಿ ಶ್ರೀಕೃಷ್ಣನನ್ನು ಉಡುಪಿಯಲ್ಲಿ ಪ್ರತಿಷ್ಠಾಪಿಸಲು ಇಚ್ಛಿಸಿದರು, ಎಂಬರ್ಥದ ಈ ಶ್ಲೋಕದಲ್ಲಿ ಉಡುಪಿಯ ಕುರಿತು 'ರೂಪ್ಯಪೀಠ ಪುರಗಃ' ಎಂದು ದಾಖಲಿಸಿದ್ದಾರೆ. ಇದನ್ನು ರಚಿಸಿದ ಶ್ರೀ ನಾರಾಯಣ ಪಂಡಿತಾಚಾರ್ಯರು ಸ್ವತಃ ಶ್ರೀ ಮಧ್ವಾಚಾರ್ಯರ ಕಾಲದವರಾಗಿದ್ದರಿಂದ ಇದಕ್ಕೆ ಹೆಚ್ಚಿನ ಮಹತ್ವ ಬಂದಿದೆ. ನಂತರದಲ್ಲಿ ಅಂದರೆ ಸರಿ ಸುಮಾರು ಎರಡು ನೂರು ವರ್ಷಗಳ ನಂತರ ಆಗಿ ಹೋದ ಭಾವೀ ಸಮೀರರೆಂದೇ ಖ್ಯಾತರಾದ ಶ್ರೀ ವಾದಿರಾಜ ಸ್ವಾಮಿಗಳು ರಚಿಸಿದ ಕೃಷ್ಣಾಷ್ಟಕದಲ್ಲಿ ಪ್ರತಿ ನುಡಿಯ ಅಂತ್ಯದಲ್ಲಿ

"ರೌಪ್ಯಪೀಠ ಕೃತಾಲಯಂ ಹರಿಮಾಲಯಂ"

- ಎಂದೇ ಕೊನೆಗೊಳ್ಳುತ್ತದೆ.

"ಉಡುಪಿಯಲ್ಲಿ ವಾಸವಾಗಿರುವ ಶ್ರೀಹರಿ" ಎಂದು ಉಡುಪಿಗೆ "ರೌಪ್ಯಪೀಠ" ಎಂದು ಪ್ರಸ್ತಾಪಿಸಿದ್ದಾರೆ.

ತದನಂತರದಲ್ಲಿ ಅಂದರೆ ೧೪ನೇ ಶತಮಾನದಲ್ಲಿ ಶ್ರೀ ಪಲಿಮಾರು ಮಠದ ೧೯ನೇ ಯತಿಗಳಾದ ಶ್ರೀ ರಘುವರ್ಯ ತೀರ್ಥರು ರಚಿಸಿದ 'ಅಣು ಮಧ್ವ ವಿಜಯ'ದ ಟೀಕೆಯಲ್ಲಿ

'ದ್ವಾರಕಾಯಾಂ ರುಗ್ಮಿಣೀವ ನಾಖ್ಯ ಪ್ರದೇಶೇ ಗೋಪೀ ಚಂದನ ಮಧ್ಯೇ ಲಗ್ನಾಂ ಗೋಪೀಚಂದನ ಬುದ್ಧ್ಯಾ ಸಾಂ ಯಾತ್ರಿಕ್ಯ ರಾನೀತಾಂ ರೂಪ್ಯಪೀಠ ಸಮೀಪೇ ಪ್ಲವೇ ಭಿನ್ನೇ ಜಲಧೌ ಮಗ್ನಾಂ ಶ್ರೀ ಕೃಷ್ಣ ಪ್ರತಿಮಾ ಮಾನಿಯ.................ಮಠೇ ಪ್ರತಿಷ್ಠಾಪಯಾ ಮಾಸ"

ಎಂಬಲ್ಲಿ 'ಉಡುಪಿಯ ಸಮಿಪ' ಎಂದು ಹೇಳುವ ಬದಲು *'ರೂಪ್ಯ ಪೀಠ ಸಮೀಪೇ'* ಎಂದು ದಾಖಲಿಸಿದ್ದಾರೆ.

ಇನ್ನು ಕನ್ನಡದಲ್ಲಿ ಕೊರಡ್ಕಲ್ ಶ್ರೀನಿವಾಸ ರಾವ್, ನಾ.ಶ್ರೀ. ರಾಜಪುರೋಹಿತ, ಇತ್ತೀಚಿನ ಬನ್ನಂಜೆ ಗೋವಿಂದಾಚಾರ್ಯರು ತಮ್ಮ ಕೃತಿಗಳಲ್ಲಿ ಉಡುಪಿಗೆ 'ರಜತಪೀಠ' ವೆಂದು ಪ್ರಸ್ತಾಪಿಸಿದ್ದಾರೆ. ಹೀಗೆ ನಾವು ನೋಡುತ್ತ ಹೋದಂತೆ ಹಲವಾರು ಯತಿಗಳು, ಪಂಡಿತರು, ಸಾಹಿತಿಗಳು, ತಮ್ಮ ತಮ್ಮ ಕೃತಿಗಳಲ್ಲಿ 'ಉಡುಪಿ'ಯನ್ನು *'ರಜತಪೀಠ'* ಅಥವಾ *'ರೂಪ್ಯಪೀಠ*, ಅಥವಾ *'ರೌಪ್ಯಪೀಠ'* ವೆಂದು ಪ್ರಸ್ತಾಪಿಸಿ ಸ್ಥಾನ ಮಹತ್ವವನ್ನು ವೃದ್ಧಿಸಿದ್ದಾರೆ.

### ಅನುಬಂಧ

#### ಶ್ರೀ ಮಧ್ವಾಚಾರ್ಯರ ಜನನ ಕಾಲ

ಕರ್ನಾಟಕವು ಎಲ್ಲ ಜಾತಿ, ಮತ, ಪಂಥಗಳಿಗ ನಂಬಿಕೆಗಳಿಗೆ ಇಂಬಿತ್ತ ನಾಡು. ಅದರಲ್ಲೂ ಉಡುಪಿಯು ಶ್ರೀ ಕೃಷ್ಣನಿದ ಹೇಗೆ ಪ್ರಸಿದ್ಧಿ ಪಡೆಯಿತೋ ಹಾಗೆಯೇ ಶ್ರೀ ಕೃಷ್ಣನನ್ನು ಪ್ರತಿಷ್ಠಾಪಿಸಿದ, ದ್ವೈತ ಮತದ ಜಗದ್ಗುರು ಪೀಠವನ್ನು ಸಂಸ್ಥಾಪನ ಮಾಡಿದ, ತತ್ವವಾದವನ್ನು ಪುನರುತ್ಥಾನಗೊಳಿಸಿದ ಸನ್ಯಾಸ ಶ್ರೇಷ್ಠ, ಮಹಾನ್ ಯತಿವರ್ಯ, ಏಕಮೇವಾದ್ವಿತೀಯ ಶ್ರೀ ಮಧ್ವಾಚಾರ್ಯರಿಂದಲೂ ಪ್ರಸಿದ್ಧವಾಗಿದೆ.

ಅಷ್ಟಮಠಗಳ ಸ್ಥಾಪಕರಾದ ಶ್ರೀ ಮಧ್ವಾಚಾರ್ಯರು ಉಡುಪಿಯ ಹತ್ತಿರದ 'ಪಾಜಕ' ಎಂಬ ಗ್ರಾಮದಲ್ಲಿ ವಿಜಯದಶಮಿಯ ಶುಭದಿನದಂದು ಜನಿಸಿದ್ದು ಸರ್ವ ವಿದಿತ. ಆದರ ಅವರ ಜನನ ಕಾಲವನ್ನು, ಕ್ರಿ.ಶ.ವನ್ನು ಹೇಳುವಾಗ ಕಲವರು ೧೧೯೯ ಎಂದೂ, ಕಲವರು ೧೨೦೦ ಎಂದೂ, ಇನ್ನೂ ಕಲವು ಇಸ್ವಿಗಳನ್ನು ಹೇಳುತ್ತ ಹೋಗಿದ್ದಾರೆ.

ಈ ಕುರಿತು ನಮಗೆ ಅಣುಮಧ್ವಚರಿತದಲ್ಲಿ ಸ್ಪಷ್ಟವಾದ ಮಾಹಿತಿ ದೊರೆಯುತ್ತದ.

'ತ್ರಿಶತಾಬ್ದೋತ್ತರ ಚತುಃ ಸಹಸ್ರಾಬ್ದೇಭ್ಯ ಉತ್ತರೆ ಏಕೋನ ಚತ್ವಾರಿಂಶಾಬ್ದೇ ವಿಲಂಬಿ ಪರಿವತ್ಸರೇ।
ಆಶ್ವೀನ ಶುಕ್ಲ ದಶಮೀ ದಿವಸೇ ಭುವಿ ಪಾವನೇ। ಪಾಜಕಾಖ್ಯೇ ಶುಚಿಕ್ಷೇತ್ರೇ ದುರ್ಗಯಾ ಚಾಭಿ ವೀಕ್ಷತೇ।
ಜಾತೋ ಮಧ್ಯಾಹ್ನ ವೇಲಾಯಾಂ ಬುಧವಾರೇ ಮರುತ್ತನು:॥

(ಅಣು ಮಧ್ವಚರಿತ ೨-೪)

ಇದರ ಪ್ರಕಾರ ಕಲಿವರ್ಷ ೪೩೩೯ ರಲ್ಲಿ ಆಚಾರ್ಯರ ಜನನವಾಯಿತು ಅಂದರ ಕ್ರಿ. ಶ. ೧೨೩೮ ಎಂದಾಗುತ್ತದೆ. ಸ್ವತಃ ಆಚಾರ್ಯರು ತನ್ನ ಜನನ ಕಾಲವನ್ನು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹೀಗೆ ಹೇಳಿದ್ದಾರೆ -

ಚತುಃ ಸಹಸ್ರೇ ತ್ರಿಶತೋತ್ತರೇ ಗತೇ ಸಂವತ್ಸರಾಣಾಂತು ಕಲೆ ಪ್ರಥಿವ್ಯಾಮ್।
ಜಾತಃ ಪುನರ್ವಿಪ್ರತನುಃ ಸಭೀಮಃ ದ್ವೈತ್ಯೈರ್ನಿಗೂಢಂ ಹರಿತತ್ವ ಮಾಹ॥

(ಮ.ಭಾ. ತಾ.. ನಿ. ೩೨ - ೧೨೦)

ಈ ಮಾತಿನ ಪ್ರಕಾರ ಕಲಿಗತಾಬ್ದ ೪೩೦೦ ಅಂದರೆ ಕ್ರಿ.ಶ. ೧೧೯೯ ಆಚಾರ್ಯರ ಜನನ ಕಾಲ ಎಂದು ಕಲವರ ಅಭಿಪ್ರಾಯ. ವಸ್ತುತಃ ಇಲ್ಲಿ ಆಚಾರ್ಯರು ೪೩೦೦ ಕಲಿವರ್ಷಗಳು ಕಳೆದ ಮೇಲೆ ತನ್ನ ಜನನವಾಯಿತು ಎಂದಷ್ಟೇ ಹೇಳಿದ್ದಾರ. ಇದು ಪೂರ್ಣ ಸಂಖ್ಯೆಯನ್ನು ಮಾತ್ರ ಹೇಳುವ ವಾಕ್ಯ. ಬಿಡಿಸಂಖ್ಯೆಯಾದ ೩೯ನ್ನು ಆಚಾರ್ಯರು ಹೇಳಿಲ್ಲ. ೪೩೦೦ ವರ್ಷಗಳು ಸಂದಮೇಲೆ ಯಾವ ವರ್ಷದಲ್ಲಿ ಜನನ ಎನ್ನುವ ಪ್ರಶ್ನೆಗ ಈ ಮಾತು ನೇರವಾಗಿ

ಉತ್ತರ ನೀಡುವುದಿಲ್ಲ. ಅದಕ್ಕೆ ಅಣುಮಧ್ವಚರಿತ ೭೯ ನೇ ವರ್ಷದಲ್ಲಿ ಎಂದು ಖಚಿತವಾದ ಉತ್ತರ ನೀಡುತ್ತದೆ. ಆಚಾರ್ಯರ ಇನ್ನೊಂದು ಹೇಳಿಕೆ ಈ ಮಾತಿಗೆ ಪುಷ್ಟಿ ನೀಡುತ್ತದೆ-

ಭೂ ಶ್ರೀ ಭಿನ್ನಾತಿ ಚಿಂತ್ಯೋನಾತ್ ಕಲ್ಯಹಾತ್ ಕಾಲವರ್ಧಿತಾತ್
ಗರುಡ ಧ್ಯೇಯ ವಾಕ್ಯಾಪ್ತಂ ತ್ಯಕ್ತ್ವಾ ಸೌರಂ ವೃಥಾ ಫಲಮ್॥

(ತಿಥಿ ನಿರ್ಣಯ : ೨)

ತಿಥಿ ಸ್ಫುಟ ಮಾಡುವಾಗ ಕಲಿಗತಾಬ್ದವನ್ನು ಕಂಡು ಹುಡುಕುವ ವಿಧಾನವನ್ನು ಈ ಪದ್ಯ ವಿವರಿಸುತ್ತದೆ. ಆಚಾರ್ಯರು ತಾನು ಈ ಗ್ರಂಥ ರಚನೆ ಮಾಡಿದ ಕಲಿಗತ ದಿನವನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಇಲ್ಲಿ ಬಂದ ಗಣಿತ ಹೀಗಿದೆ:

$$\frac{\text{ಭೂಶ್ರೀ ಭಿನ್ನಾರೆ ಚಿಂತ್ಯ} \times \text{ಕಾಲ}}{\text{ಗರುಡಧ್ಯೇಯ}} \quad \text{ಈ ಅಕ್ಷರಾಂತಗಳನ್ನು ಸಂಖ್ಯೆಯಾಗಿ ಪರಿವರ್ತಿಸಿದಾಗ} = \frac{\text{೧೬,೧೦,೪೨೪} \times \text{೩೧}}{\text{೧೧೩.೨೩}} = \text{೪೪೦೯}$$

ಇದರ ಪ್ರಕಾರ ಆಚಾರ್ಯರು ಈ ಗ್ರಂಥವನ್ನು ರಚಿಸಿದಾಗ ಕಲಿಯುಗದಲ್ಲಿ ೪೪೦೯ ವರ್ಷಗಳು ಸಂದಿದ್ದವು. ಆಚಾರ್ಯರು ೪೩೦೦ ರಲ್ಲಿ ಜನಿಸಿದ್ದಾದರೆ ಈ ಗ್ರಂಥ ರಚಿಸುವಾಗ ಅವರಿಗೆ ೧೦೯ ವರ್ಷಗಳು ಸಂದಿವೆ ಎಂದಾಯಿತು. ಆದರೆ ಆಚಾರ್ಯರು ಭೂಮಿಯಲ್ಲಿದ್ದುದು ಬರೀ ೭೯ ವರ್ಷ ಮಾತ್ರ.

'ಏಕೋ ನಾಶೀತಿ ವರ್ಷಾಣಿ ಭೂತ್ವಾ ಮಾನುಷ ದೃಷ್ಟಿಗಃ।
ಪಿಂಗಲಾಬ್ದೇ ಮಾಘ ಶುದ್ಧ ನವಮ್ಯಾಂ ಬದರೀಂ ಯಯೌ॥

(ಅಣು. ಮ.ಚ. ೧೦)

ಆದರಿಂದ ಆಚಾರ್ಯರು ಕಲಿವರ್ಷ ೪೩೩೯ರಲ್ಲಿ ಜನಿಸಿದರು ಎನ್ನುವುದೇ ಹೆಚ್ಚು ಸಮಂಜಸವಾದ ಮಾತು. ಶ್ರೀ ನರಹರಿತೀರ್ಥರ ಶ್ರೀಕೂರ್ಮ ಶಾಸನವೂ (ಎಪಿಗ್ರಾಫಿಯಾ ಇಂಡಿಕಾ ಸಂ. vi - ೨೫) ಇದಕ್ಕೆ ಸ್ಪಷ್ಟ ಪುರಾವೆಯಾಗಿದೆ.

ಇದರಂತೆ ತಿಥಿ ನಿರ್ಣಯ ರಚಿಸುವಾಗ ಶ್ರೀ ಮಧ್ವಾಚಾರ್ಯರಿಗೆ ೭೦ ವರ್ಷ ತುಂಬಿತ್ತು. (೪೩೩೯+೭೦=೪೪೦೯) ಕ್ರಿ. ಶ. ೧೩೦೮ ಮಠದ ಕೈಫಿಯತ್ತುಗಳಲ್ಲಿ ಮತ್ತು ಇತರ ಕೆಲವು ಗ್ರಂಥಗಳಲ್ಲಿ ಸಹ ಆಚಾರ್ಯರ ಜನನಕಾಲದ ಉಲ್ಲೇಖವಿದೆ. ಆದರೆ ಅವು ಒಂದಕ್ಕೊಂದು ಹೊಂದಿಕೆಯಾಗದ ವಿವರಣೆಗಳನ್ನು ಕೊಡುವುದರಿಂದ ಅಧಿಕೃತವಾಗಿ ಪರಿಗಣಿಸಿಲ್ಲ.

ಕಲಿಗತಾಬ್ದ ೪೩೩೯ ರಲ್ಲಿ ಆಚಾರ್ಯರ ಜನನ ಎನ್ನುವುದನ್ನು ದಿವಂಗತ ಮಂಜೇಶ್ವರ ಗೋವಿಂದ ಪೈ ಮತ್ತು ಸಿ. ಎಂ. ಪದ್ಮನಾಭಾಚಾರ್ಯ ಮುಂತಾದ ವಿದ್ವಾಂಸರೂ ಒಪ್ಪಿಕೊಂಡಿರುವುದನ್ನು ಇಲ್ಲಿ ಗಮನಿಸಬಹುದು.

೪೩೩೯ ಹಿಂದೂ ಕಲಿವರ್ಷವು ಒಂದು ಅಪೂರ್ವ ಸಂಖ್ಯೆ. ಈ ಸಂಖ್ಯೆಗಳ ಮೊತ್ತವೇ ದಶಕ (೪+೩+೩+೯=೧೯.೧೦). ಇದರ ಒಂದೊಂದು ಅಂಕೆಯ ಘನವನ್ನು ಕೂಡಿಸಿದರೂ ಮೊತ್ತ ದಶಕವೇ. ಘನದ ಒಂದೊಂದು ಘನದ ಮೊತ್ತ ಮಾಡುತ್ತ ಹೋದರೂ ಒಟ್ಟು ಮೂರೇ ಮೊತ್ತಗಳು ಸಿಗುವುವು. ೮೪೭-೯೧೯ ಮತ್ತು ೧೪೫೯. ಇನ್ನು ಎಷ್ಟು ಬಾರಿ ಘನದ ಮೊತ್ತವನ್ನು ಮುಂದುವರೆಸಿದರೂ ಅದು ಈ ಮೂರರಲ್ಲೇ ಅಂತರ್ಗತವಾಗುತ್ತದೆ. ಈ ಮೂರರ ಮೊತ್ತ ಕೂಡ ದಶಕವೇ. [೧೯ರ ಘನ ೬೮೫೯ ಆಗುವುದಿಲ್ಲವೆ? ೧೪೫೯ರ ಬಗ್ಗೆ ಇನ್ನಷ್ಟು ವಿವರ ಬೇಕಿತ್ತು - (ಸಂ.)]

ಈ ದಶಕವೂ ಪ್ರಾಣತತ್ವದ ಅವತಾರತ್ರಯವನ್ನೂ ಸುಚಿಸುವ ಮಧ್ವಾ ಆಚಾರ್ಯರ ದಶಪ್ರಮತಿ ಪೂರ್ಣಪ್ರಜ್ಞ ಎಂಬ ಹೆಸರನ್ನು ಸೂಚಿಸುವ ಅಪೂರ್ವ ಸಂಖ್ಯೆ.

ಪ್ರಾಣತತ್ವವೂ ಹತ್ತುಗುಣಗಳ ಮೊತ್ತ ಎಂದು ಶಾಸ್ತ್ರಕಾರರು ಹೇಳುತ್ತಾರೆ. ಅವು ಯಾವು ಎಂಬುದನ್ನು ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಮಧ್ವಾಚಾರ್ಯರೇ ಹೇಳಿದ್ದಾರೆ.

'ಭಕ್ತಿರ್ಜ್ಞಾನಂ ಸವೈರಾಗ್ಯಂ ಪ್ರಜ್ಞಾ ಮೇಧಾ ಧೃತಿಃ ಸ್ಥಿತಿಃ
ಯೋಗಃ ಪ್ರಾಣೋ ಬಲಂ ಚೈವ ವೃಕೋದರ ಇತಿ ಸ್ಮೃತಿಃ
ಏಕದ್ ದಶಾತ್ಮಕೋವಾಯುಃ - (ಮ.ಭಾ.ತಾ.ನಿ. ೨/೧೩೪/೫)

ಶ್ರೀ ಮಧ್ವಾಚಾರ್ಯರ ಜನನದಂತೆ ಮಾಸ, ತಿಥಿಗಳಲ್ಲಿ ಬಗೆಗೂ ವಿವಾದವಿತ್ತು. ಆದರೆ ನಂತರದಲ್ಲಿ ಪಂಡಿತರ ಏಕಾಭಿಪ್ರಾಯವಾಗಿ 'ವಿಜಯದಶಮಿ' ಅಂದರೆ ಆಶ್ವೀನ ಶುದ್ಧ ದಶಮಿಯಂದೇ ಆಚಾರ್ಯರ ಜನನವಾಯಿತು ಎಂಬ ಮಾತು ಅಂತಿಮಗೊಂಡು ಪಂಚಾಂಗಗಳಲ್ಲೂ ಅದುವೇ ಶಾಶ್ವತವಾಗಿ ಅಂದೇ ಮಧ್ವಜಯಂತಿ ಆಚರಣೆ ಕುರಿತು ಉಲ್ಲೇಖಿಸುವರು. ಕ್ರಿ. ಶ. ೧೨೩೮ರ ಈ ದಿನಕ್ಕೆ ಸರಿಯಾಗಿ ಹೊಂದಿಕೆಯಾಗುವದರಿಂದ ಅದು ಅಧಿಕೃತವೆನ್ನಬಹುದು.

ಡಾ. ಭೋಜರಾಜ ಪಾಟೀಲ*

# ಹಾವೇರಿ ಗ್ರಾಮನಾಮ

ಹಾವೇರಿ ಗ್ರಾಮನಾಮ ಅಧ್ಯಯನಕ್ಕಾಗಿ ಹಾವೇರಿಯ ೩೪ ಶಾಸನಗಳು ಹಾಗೂ ಹಾವೇರಿ ಹೆಸರು ಉಲ್ಲೇಖಿಸಿರುವ ಪರವೂರ ೭ ಶಾಸನಗಳು, ಒಟ್ಟು ೪೧ ಶಾಸನಗಳನ್ನು ಗಮನಿಸಿದ್ದೇನೆ. ಇವುಗಳಲ್ಲಿ ೨೨ ಶಾಸನಗಳು ಮಾತ್ರ ಹಾವೇರಿ ಹೆಸರಿನ ವಿವಿಧ ರೂಪುಗಳನ್ನು ಪ್ರಕಟಿಸಿವೆ. ಈ ಶಾಸನಗಳಲ್ಲಿ ಅತಿ ಪ್ರಾಚೀನವಾದದ್ದು ಹಾವೇರಿಯ ಕ್ರಿ. ಶ. ಸು. ೯೬೦ರ ಒಂದು ವೀರಗಲ್ಲು. ಶಾಸನ[೧] ಇದರಲ್ಲಿ ಮೊದಲಸಲ ಈ ಊರು 'ಹಾವರಿಯೂರು ಎಂದು ಉಲ್ಲೇಖಗೊಂಡಿದೆ.

ಅಧ್ಯಯನಕ್ಕೊಳಗಾದ ೪೧ ಶಾಸನಗಳಲ್ಲಿ ಎದ್ದು ಕಂಡ ಒಂದಂಶವೆಂದರೆ ೧೧ನೆಯ ಶತಮಾನಕ್ಕೆ ಸಂಬಂಧಿಸಿದಂತೆ ಒಂದಾದರೂ ಶಾಸನ ದೊರೆಯದಿರುವುದು. ಇದೇ ಸಂಶೋಧನೆಗೆ ಆಮಂತ್ರಣವನ್ನು ಇತ್ತಿದೆ.

೧೨ನೆಯ ಶತಮಾನಕ್ಕೆ ಸಂಬಂಧಿಸಿದಂತೆ ಕೇವಲ ೭ ಶಾಸನಗಳು ಲಭ್ಯವಿವೆ. ಇವುಗಳಲ್ಲಿ ಮೂರರಲ್ಲಿ 'ಹಾವರಿ' ಎಂದಿದೆ. ಕ್ರಿ. ಶ. ೧೧೩೪ ಹಾಗೂ ೧೧೩೦ರ ಶಾಸನಗಳು 'ಪಾವರಿ' ಎಂಬ ರೂಪವನ್ನು ಮುಂದಿಡುತ್ತವೆ. ಕ್ರಿ.ಶ. ೧೧೫೭ರ ಹಾವೇರಿ ಶಾಸನವು ಹಾವರಿ, ಹಾವೇರಿ ಎರಡೂ ರೂಪಗಳನ್ನು ಪ್ರಕಟಿಸಿದೆ. ಇದೇ ಶತಮಾನದ ದೇವಗಿರಿ ಶಾಸನವು ನಿಚ್ಚಳವಾಗಿ 'ಹಾವೇರಿ' ಎಂದೇ ಪ್ರಕಟಿಸಿದೆ.

೧೩ನೆಯ ಶತಮಾನಕ್ಕೆ ಸಂಬಂಧಿಸಿದಂತೆ ೧೪ ಶಾಸನಗಳಿವೆ. ಇವುಗಳಲ್ಲಿ ಎರಡರಲ್ಲಿ ಮಾತ್ರ 'ಹವರಿ' ಎಂದಿದ್ದು ಉಳಿದುವುಗಳಲ್ಲಿ ಹಾವರಿ, ಹಾಹರಿ ಎಂಬ ರೂಪುಗಳಿವೆ. ಆದರೆ ಕ್ರಿ. ಶ. ೧೨೩೦ರ ಶಾಸನವು ಹಿಂದಿನ ಕ್ರಿ. ಶ. ೧೧೫೭ರ ಶಾಸನದಂತೆಯೆ ಸ್ಪಷ್ಟವಾಗಿ 'ಹಾವೇರಿ' ಎಂದೇ ಹೇಳುತ್ತದೆ. ಈ ಶಾಸನವಲ್ಲದೆ ಇದೇ ಶತಮಾನದ ಇನ್ನೂ ಐದು ಶಾಸನಗಳು 'ಹಾವೇರಿ' ಎಂದೇ ಉಲ್ಲೇಖಿಸಿವೆ. ಹಾವರಿ, ಹಾವೇರಿ ಎರಡನ್ನೂ ಉಲ್ಲೇಖಿಸಿರುವ ಕಬ್ಬೂರು ಶಾಸನವಿದೆ. ಕ್ರಿ. ಶ. ೧೧೫೭ರಿಂದ ಇಲ್ಲಿಯವರೆಗೆ 'ಹಾವೇರಿ' ಎಂಬುದೇ ಸ್ಥಿರವಾಗಿ ನಿಂತಿದೆ.

೧೩ನೆಯ ಶತಮಾನದ ಒಂದು ಶಾಸನವು 'ಹಾವರಿ' ಯೊಂದಿಗೆ 'ನಳಪುರಿ' ಎಂದೂ ಉಲ್ಲೇಖಿಸುತ್ತದೆ. ಆದರೆ ಈ ಉಲ್ಲೇಖ ಹಾವೇರಿಗೇ ಅನ್ವಯಿಸುತ್ತದೆಯೊ? ಹೇಗೆ ಎಂಬುದು ಸಂದಿಗ್ಧವಾಗಿದೆ.

೧೩ನೆಯ ಶತಮಾನದ ಅನಂತರ ನಮಗೆ ಲಭಿಸಿರುವ ಶಾಸನಗಳು ಒಮ್ಮೆಲೆ ೧೮ನೆಯ ಶತಮಾನದುವು. ಈ ಮಧ್ಯದ ೪ ಶತಮಾನಗಳ ಒಂದಾದರೂ ಶಾಸನ ಲಭ್ಯವಿಲ್ಲದಿರುವುದು ಪುನಃ ಸೋಜಿಗದ ಹಾಗೂ ಸಂಶೋಧನೆಯ ವಿಷಯವಾಗಿದೆ.

ಹೀಗೆ ೧೦ನೆಯ ಶತಮಾನದಿಂದ ೧೩ನೆಯ ಶತಮಾನದ ವರೆಗಿನ 'ಹಾವೇರಿ' ಉಲ್ಲೇಖಿತ ಉಪಲಬ್ಧ ಶಾಸನಗಳು ಈ ಊರ ಹೆಸರಿನ ಹಾವರಿಯೂರು, ಪಾವರಿ, ಹಾವರಿ, ಹಾಹರಿ, ಹವರಿ, ಹಾವೇರಿ ಎಂಬ ಆರು ರೂಪಗಳನ್ನು ನಮ್ಮೆದುರು ಇಟ್ಟಿವೆ. ಇವುಗಳನ್ನು ಭಾಷಾಶಾಸ್ತ್ರದ ನಿಯಮಗಳಿಗನುಸಾರವಾಗಿ ಹೀಗೆ ಕ್ರಮಪಡಿಸಬಹುದಾಗಿದೆ:

ಪಾವೇರಿ>ಪಾವೇರಿಊರು>ಪಾವರಿಯೂರು>ಪಾವರಿ<br>
(ಹಾವೇರಿ)

ಪಾವೇರಿ>ಹಾವೇರಿ ಊರು>ಹಾವರಿಯೂರು> ಹವರಿ - ಹಾವರಿ / ಹಾವೇರಿ / ಹಾಹರಿ<br>
(ಹಾವೇರಿ)

ಈ ಕ್ರಮದಲ್ಲಿ 'ಹಾವೇರಿ' ಹಾಗೂ ಇದಕ್ಕೆ ಸಂವಾದಿಯಾದ 'ಪಾವೇರಿ' ರೂಪುಗಳನ್ನು ಮೂಲದಲ್ಲಿಟ್ಟುಕೊಂಡು ಮುಂದಿನ ಬದಲಾವಣೆಗಳನ್ನು ಗಮನಿಸಲಾಗಿದೆ.

'ಪಾವೇರಿ' ಶಬ್ದಕ್ಕೆ ಶಾಸ್ತ್ರೀಯ ಅರ್ಥವಿವರಣೆ ಕೊಡುವುದಕ್ಕೂ ಪೂರ್ವದಲ್ಲಿ ಈ ಶಬ್ದ ಸೃಷ್ಟಿಯಾದ ಬಗೆ ಹಾಗೂ ರೂಢಿಗೆ ಬಂದ ರೀತಿ ಗಮನಿಸಬೇಕು. ಇದಕ್ಕಾಗಿ ಹಾವೇರಿಯ ಕಲ್ಲುಮಂಟಪದ ಎರಡು ಶಾಸನಗಳನ್ನು ಪರಿಶೀಲಿಸಬೇಕಾಗುತ್ತದೆ. ಇವುಗಳಲ್ಲಿ ಒಂದು ಶಾಸನ ಕ್ರಿ.ಶ. ೧೧೩೪ಕ್ಕೆ[೨] ಇನ್ನೊಂದು ಕ್ರಿ.ಶ. ೧೧೫೭ ಕ್ಕೆ[೩] ಸೇರುತ್ತವೆ. ಕ್ರಿ.ಶ. ೧೧೩೪ರ ಶಾಸನ ಎರಡು ತುಂಡಾಗಿದೆಯಲ್ಲದೆ ಅಲ್ಲಲ್ಲಿ ತ್ರುಟಿತವಾಗಿದೆ. ಅಲ್ಲದೆ ಇದರ ಶೈಲಿ ಪ್ರೌಢವೂ ಆಗಿದೆ. ಕ್ರಿ. ಶ. ೧೧೫೭ರ ಶಾಸನ ಹೆಚ್ಚು ತ್ರುಟಿತವಾಗಿಲ್ಲ, ತುಂಡಾಗಿಲ್ಲ ಹಾಗೂ ಶೈಲಿಯೂ ಕಠಿಣವಾಗಿಲ್ಲ. ಆದರಿಂದ ಈ ಶಾಸನವನ್ನು ಮೊದಲು ಗಮನಿಸಲಾಗುವುದು. ಇಲ್ಲಿಯ ಒಂದು ಕಂದಪದ್ಯ ಹೀಗಿದೆ-

ಹರಿವ ಹರಿನೀರ್ಗೆಯಡ್ಡಂ<br>
ಬರಲುರಗಂ ಕಂಡು ನಳನದಂ ಕಟ್ಟಿಸೆ ನಿ<br>
ರ್ಭರದಿಂ ಹಾವೇರಿಯೆನಲು<br>
ಪರಮಾರ್ಥಂ ನಾಮಮಾದುದಾ ಕೃತಯುಗದೊಳು॥

ಈ ಕಂದಪದ್ಯ ಎರಡು ಸಂಗತಿಗಳನ್ನು ಬಹಿರಂಗಗೊಳಿಸುತ್ತದೆ. ಮೊದಲನೆಯದಾಗಿ - 'ಹರಿಯುವ ನೀರಿಗೆ ಹಾವು

* ಹಂಸ ಬಾವಿ, ತಾ : ಹಿರೇಕೆರೂರು, ಜಿ : ಹಾವೇರಿ - ೫೮೧ ೧೦೯

ಅಡ್ಡಬರಲು ನಳನು ಅದನ್ನು ನೋಡಿ ಅತಿಶಯವಾಗಿ ಕೆರೆ ಕಟ್ಟಿಸಿದನು', ಎಂಬ ಸಂಗತಿ. ಎರಡನೆಯದಾಗಿ ಹಾಗೆ ಅತಿಶಯವಾಗಿ ಕಟ್ಟಿಸಿದ್ದಕ್ಕೆ 'ಹಾವೇರಿ' ಎಂದು ಕರೆದನೆಂಬುದು. ಇದೇ ವಿಷಯವನ್ನು ಕ್ರಿ.ಶ. ೧೧೩೪ರ ಶಾಸನವೂ ಹೇಳಿದೆ. ಆದರೆ 'ಹಾವೇರಿ' ಬದಲು ಅದರ ಪೂರ್ವದ ರೂಪವಾದ 'ಪಾವರಿ' ಎಂಬುದನ್ನು ಬಳಸಿದೆ. ಶಾಸನದ ಆ ಭಾಗ ಹೀಗಿದೆ - 'ಪಾವರಿಯೆಂಬಭಿದಾನದಿ ದೇಶಾಗಾರ ಕೆಱೆ.'

ಮೇಲಿನ ಕಂದಪದ್ಯವನ್ನೆ ಇನ್ನಷ್ಟು ಸರಳಗೊಳಿಸಿ ಹೇಳುವುದಾದರೆ - ಚಕ್ರವರ್ತಿ ನಳನು, ಎಲ್ಲಿ ಹರಿಯುವ ನೀರಿಗೆ ಹಾವು ಅಡ್ಡಬರುವುದನ್ನು ಕಂಡನೊ ಅಲ್ಲಿ ಒಡ್ಡು ಹಾಕಿಸಿ ಈಗಿನ 'ಹೆಗ್ಗೇರಿ' ಕೆರೆ ನಿರ್ಮಾಣ ಮಾಡಿದನು. 'ಹಾವರಿಯ ಹೆರ್ಗೆಱೆಯಂ ನಳಚಕ್ರಿ ಮಾಡಿದಂ' ಎಂದು ಕ್ರಿ.ಶ. ೧೧೫೭ರ ಶಾಸನವು ಮೇಲಿನ ಕಂದಪದ್ಯದ ಮೊದಲಲ್ಲಿ ಹೇಳಿದೆ. ಹಾಗೂ ಇದೇ ಶಾಸನ ಇನ್ನೂ ಒಂದು ಕಡೆಗೆ 'ನಳಚಕ್ರವರ್ತಿ ಮಾಡಿದ ಹಿರಿಯ ಕೆಱೆಗೆ' ಎಂದೂ ಹೇಳಿದೆ. ಇಲ್ಲಿ ವಿಶೇಷವಾಗಿ ಗಮನಿಸಬೇಕಾದದ್ದು - ನಳಚಕ್ರವರ್ತಿ ಅತಿಶಯವಾಗಿ ನಿರ್ಮಿಸಿದ್ದು, ನಮ್ಮಲ್ಲಿಯ ಅನೇಕರು ತಿಳಿದ ಪ್ರಕಾರ, ಹಾಗೂ ಹೇಳುವ ಪ್ರಕಾರ, ಬರೆದ ಪ್ರಕಾರ ಹಾವೇರಿ ಊರನ್ನಲ್ಲ - ಹೆಗ್ಗೇರಿ ಕೆರೆಯನ್ನು. ಹಾವೇರಿ ಊರು ಕೆರೆ ನಿರ್ಮಾಣವಾಗುವುದಕ್ಕೂ ಪೂರ್ವದಲ್ಲಿಯೇ ಇತ್ತು. ಆದರೆ ಅದಕ್ಕೆ 'ಹಾವರಿ' ಎಂಬ ಹೆಸರು ಇರಲಿಲ್ಲ. ಯಾವ ಹೆಸರಿತ್ತೆಂಬುದನ್ನು ಹೇಳಲು ಕ್ರಿ.ಶ. ಸು. ೯೬೦ಕ್ಕಿಂತ ಪ್ರಾಚೀನ ಶಾಸನಗಳು ಹಾವೇರಿಯಲ್ಲಿಲ್ಲ. ಇದ್ದಿದ್ದರೆ ಎಲ್ಲಿಯಾದರೂ ಸುಳಿವು ಸಿಗಬಹುದಿತ್ತೇನೊ?

ಹೆಗ್ಗೇರಿ ಕೆರೆ ಕ್ರಿ.ಶ. ೧೧೫೭ರ ಹೊತ್ತಿಗಾಗಲೆ 'ಹೆರ್ಗೆಱೆ' ಹಿರಿಯ ಕೆಱೆ ಎಂಬುದಾಗಿ ರೂಢಿಯಲ್ಲಿ ಬಂದಿದೆ. ಧಾರವಾಡ ಜಿಲ್ಲಾ ಗ್ಯಾಸೆಟಿಯರದಲ್ಲಿ ಪುಟ ೧೦೩೪ರಲ್ಲಿ ಹೆಗ್ಗೇರಿ ಕೆರೆಗೆ 'ನಲ್ಲಹಳ ಕೆಱೆ' ಎಂಬ ಇನ್ನೊಂದು ಹೆಸರಿತ್ತೆಂದು ಹೇಳಲಾಗಿದೆ. ಇದು ಸರಿಯಲ್ಲ. ಏಕೆಂದರೆ ಇದರ ಭಾವ ತಪ್ಪು ಅರ್ಥಕ್ಕೆ ಅವಕಾಶ ಮಾಡಿಕೊಡುತ್ತದೆ. ಅವರು ಇದನ್ನು ಎಲ್ಲಿಂದ ಉಲ್ಲೇಖಿಸಿರುವರೋ ಅದೇ ಶಾಸನ (ಕ್ರಿ.ಶ. ೧೧೩೪)ದಲ್ಲಿ ಕೇವಲ ೪ ಪಾದಗಳ ಅನಂತರ 'ಶ್ರೀಮನ್ನಲ್ಲ ಹಳಗೆಱೆ' ಎಂಬ ಉಲ್ಲೇಖವಿದೆ. ಇದರರ್ಥವು 'ಶ್ರೀಮನ್ ನಳನ ಹಳಗೆಱೆ' ಎಂದಾಗುತ್ತದೆ. ಅಂದರೆ ಕ್ರಿ.ಶ. ೧೧೩೪ರ ಕಾಲಕ್ಕಾಗಲೆ 'ಹೆರ್ಗೆಱೆ' ಹಳೆಯ ಕೆರೆಯೆ ಆಗಿತ್ತು. ಏಕೆಂದರೆ 'ಹಾವರಿ' ಉಲ್ಲೇಖ ಕ್ರಿ.ಶ. ಸು. ೯೬೦ರ ಶಾಸನದಲ್ಲಿಯೇ ಆಗಿರುವುದರಿಂದ ಅದಕ್ಕೂ ಪೂರ್ವದಲ್ಲಿ - ಕೆಲವು ಶತಮಾನಗಳ ಹಿಂದೆ ಕೆರೆ ನಿಮಾಣವಾಗಿರಬಹುದಾಗಿದೆ. ಕ್ರಿ.ಶ. ೧೧೩೪ರ ಕಾಲಕ್ಕಾಗಲೆ ಕೆರೆ ಕಟ್ಟಿ ಕೆಲವು ಶತಮಾನಗಳೆ ಕಳೆದಂತಿದೆ. ಸ್ವತಃ ಈ ಶಾಸನಕಾರನಿಗೂ ಈ ಕೆರೆ ನಿರ್ಮಾಣವಾದ ಕಾಲದ ಬಗೆಗೆ ತಿಳಿವಳಿಕೆ ಇಲ್ಲ. ಆದರೆ ತನಗೂ ಪ್ರಾಚೀನ ಕಾಲದಲ್ಲಿ ಕೆರೆ ನಿರ್ಮಾಣವಾದ ಬಗ್ಗೆ ಆತನಿಗೆ ಸಂಶಯವಿಲ್ಲ ಆದ್ದರಿಂದಲೇ ಚಕ್ರವರ್ತಿ ನಳನನ್ನು ಆಧರಿಸಿ ಕೆರೆ ಕೃತಯುಗದಲ್ಲಿ ನಿರ್ಮಾಣವಾಯಿತೆಂದು ನಿರ್ಣಯಿಸಿಬಿಟ್ಟಿದ್ದಾನೆ. ೧೨ನೆಯ ಶತಮಾನದ ಶಾಸನಗಳೇನೋ 'ಹಳಗೆಱೆ' ಎಂದಿವೆ.

ನಳ ಚಕ್ರವರ್ತಿ ಈ ಕೆರೆ ಕಟ್ಟಿಸಿದನೆಂಬುದೂ ಕೇವಲ ಒಂದು ಐತಿಹ್ಯ ಮಾತ್ರ. ಪುರಾಣ ಪ್ರಸಿದ್ಧ ವ್ಯಕ್ತಿಗಳೊಂದಿಗೆ ಹೆಸರನ್ನು ಜೋಡಿಸುವುದು ಪ್ರಾಚೀನ ಕಾಲದಲ್ಲಿ ಹೆಚ್ಚುಗಾರಿಕೆಯ ಒಂದು ರೂಢಿಯಾಗಿತ್ತು. ನಾವಿಲ್ಲಿ ಕಾಣುತ್ತಿರುವುದೂ ಅದನ್ನೇ. ಈ ಕತೆ ಹುಟ್ಟಿರುವುದೂ ಕೆರೆ ಕಟ್ಟಿ ಸುಮಾರು ೪-೫ ಶತಮಾನಗಳು ಕಳೆದ ಮೇಲೆ- ಎಂಬುದನ್ನು ಗಮನಿಸಿದರೆ ಮೇಲಿನ ಮಾತಿನ ಸತ್ಯತೆ ಅರಿವಾಗದಿರದು.

ಹೀಗೆ ನಳನು ಅತಿಶಯವಾಗಿ ಕಟ್ಟಿಸಿದ ಹರಿಯ ಕೆಱೆಗೆ ಅಥವಾ ಹೆಗ್ಗೆಱೆಗೆ ಪರಮಾರ್ಥವಾಗಿ ನಾಮಕರಣ ಮಾಡಿದ್ದು 'ಹಾವೇರಿ' ಎಂದು. ಆದ್ದರಿಂದ 'ಹಾವೇರಿ' ಎಂಬುದು ಮೂಲಭೂತವಾಗಿ ಅನ್ವಯಿಸಿದ್ದು ಹೆಗ್ಗೇರಿ ಕೆರೆಗೇ ಹೊರತು ಈಗಿರುವ ಊರಿಗಲ್ಲ. ಇದು ವಿಶೇಷವಾಗಿ ಗಮನಿಸಬೇಕಾದ ಸಂಗತಿಯಾಗಿದೆ. ಕ್ರಿ.ಶ. ೧೨೬೦ರ ಪೂರ್ವದ ಹಾವೇರಿಯದೇ ಆದೊಂದು ಶಾಸನವು 'ಪರಮಗ್ರಾಮ ತಟಾಕಮಂ ಬೆಸಸಿದಂ ನಳಚಕ್ರವರ್ತಿ' ಎಂದು ಹೇಳುವ ಮೂಲಕ ಮೇಲಿನ ಎರಡು ಶಾಸನಗಳ ಅಭಿಪ್ರಾಯವನ್ನೆ ಪುನರುಚ್ಚರಿಸುತ್ತದೆ. ಆದರೆ ಅದು ಮುಂದುವರಿದು ದ್ವಿತೀಯ ನಳಚಕ್ರವರ್ತಿ 'ಹಾವರಿಯೆಂಬ ಮಹಾಗ್ರಹಾರಮಂ ಮಾಡಿ'ದನೆಂದು ಹೇಳುತ್ತದೆ. ಅಂದರೆ ನಳ ಹೆಸರಿನ ಈರ್ವರು ಚಕ್ರವರ್ತಿಗಳಿದ್ದು, ಇವರಲ್ಲಿ ಮೊದಲನೆಯ ಕೆರೆಯನ್ನು, ಎರಡನೆಯವ ಹಾವೇರಿ ಅಗ್ರಹಾರವನ್ನು ನಿರ್ಮಾಣ ಮಾಡಿದರೆಂದು ಈ ಶಾಸನದ ಅಭಿಪ್ರಾಯ. ಈ ಸುದೀರ್ಘ ಶಾಸನ ಒಂದು ಕಡೆ ಮಾತ್ರ ಊರನ್ನು 'ನಳಪುರಿ' ಎಂದು ಹೆಸರಿಸಿದೆ. ಈ ಹೆಸರು ಇಲ್ಲಿ ಬಿಟ್ಟರೆ ಬೇರೆಲ್ಲಿಯೂ ಕಂಡು ಬರುವುದಿಲ್ಲ. ಇದು ಒಂದು ಐತಿಹ್ಯವೇ ಎಂದರೆ ತಪ್ಪಾಗಲಿಕ್ಕಿಲ್ಲ.

ಹಾವೇರಿ ಊರನ್ನು ಪ್ರಪ್ರಥಮವಾಗಿ ಉಲ್ಲೇಖಿಸುವ ಶಾಸನ ಕ್ರಿ. ಶ. ಸು. ೯೬೦ರ ವೀರಗಲ್ಲು ಶಾಸನ. ಇಲ್ಲಿ 'ಹಾವರಿಯೂರು' ಎಂದಿರುವುದು ಬಹು ಧ್ವನಿಪೂರ್ಣವಾಗಿದೆ. ಈ ಉಲ್ಲೇಖ ಕೆರೆಗೂ ಊರಿಗೂ ಸಂಬಂಧ ಬೆಸೆಯುತ್ತದೆ. ಹಿಂದೆ ತಿಳಿದಂತೆ 'ಹಾವೆರಿ' ಎಂದರೆ ಕೇವಲ ಹೆಗ್ಗೆರೆ ಮಾತ್ರ. ಈಗ ಹಾವರಿಯೂರು ಎಂದರೆ 'ಆ ಕೆರೆಯ ಊರು' ಎಂದರ್ಥ. ಕೆರೆಯ ಹೆಸರೆ ಊರಿಗೆ ಬಂದಿರುವುದನ್ನು ಇದು ಸೂಚಿಸುತ್ತದೆ.

ನಮ್ಮಲ್ಲಿ ಕೆರೆಯ ಹೆಸರೇ ಊರಿಗೆ ಬರುವುದು ಸಾಮಾನ್ಯವಾಗಿದೆ. ಹಿರಿಕೆರೆಯ ಊರು>ಹಿರಿಯ ಕೆರೆವೂರು> ಹಿರೇಕೆರೂರು; ಚಿಕ್ಕ ಕೆರೆಯ ಊರು>ಚಿಕ್ಕ ಕೆರೆಯೂರು

ಚಿಕ್ಕೇರೂರು. ಹೀಗೆ ಅನೇಕಾನೇಕ ನಿದರ್ಶನಗಳನ್ನು ಒದಗಿಸ ಬಹುದಾಗಿದೆ. ಅದೇ ರೀತಿಯಲ್ಲಿ ಹಾವೇರಿ ಊರು> ಹಾವರಿಯೂರು ಎಂದಾಗಿದೆ. ಕ್ರಿ.ಶ. ಸು. ೯೬೦ರ ಶಾಸನ ಈ ಪ್ರಕ್ರಿಯಗೆ ಶ್ರೇಷ್ಠ ನಿದರ್ಶನವಾಗಿದೆ. ಆದರೆ ಮುಂದಿನ ಕಾಲದಲ್ಲಿ ವಾರ್ಗಿಕವಾಗಿರುವ 'ಊರು' ಕಳಚಿ ಹಾವರಿ ಹಾಗೂ ಅದರ ವಿಭಿನ್ನ ರೂಪುಗಳು ಬಳಕೆಯಲ್ಲಿ ಬಂದಿವೆ. ವಿವಿಧ ಶಾಸನಗಳಲ್ಲಿ ಇವನ್ನು ಈಗಾಗಲೆ ಗುರುತಿಸಿದ್ದಾಗಿದೆ. ಆದರೂ ೧೧೫೦ರ ಮತ್ತು ಮುಂದಿನ ೮ ಶಾಸನಗಳು ಮೂಲರೂಪವಾದ ಹಾವೇರಿಯನ್ನೆ ಎತ್ತಿ ಹಾಡಿದಿವೆ.

ಇಂತು ಕೆರೆಯಿಂದ ಊರಿಗೆ ಹೆಸರು ಬಂದಿರುವುದನ್ನು ತಿಳಿದುಕೊಂಡ ಹಿನ್ನೆಲೆಯಲ್ಲಿಯೇ 'ಹಾವೇರಿ' ಹೆಸರು ಮತ್ತೆಲ್ಲಿಯಾದರೂ ಕಂಡು ಬರುವುದೆ? ಎಂದು ಕುತೂಹಲಕ್ಕಾಗಿಯಾದರೂ ವಿಚಾರ ಮಾಡಿದಾಗ ನೆನಪಿಗೆ ಬರುವುದು ಈಗ ಧಾರವಾಡ ಶಹರದ ಒಂದು ಭಾಗವಾಗಿರುವ 'ಹಾವೇರಿ ಪೇಟೆ' : ಈ ಪೇಟೆಗೆ ಹಾವೇರಿ ಎಂದು ನಾಮಕರಣ ವಾಗಲು ಕಾರಣವೆಂದರೆ ಇದಾದರೂ ಬಹು ದೊಡ್ಡದಾಗಿದ್ದ (ಅತಿಶಯವಾದ) ಕೊಪ್ಪದ ಕೆರೆ (ಈಗ ಮುಚ್ಚಿಹೋಗಿ ಮನೆಗಳು ನಿರ್ಮಾಣವಾಗಿವೆ) ಜಲಾಶಯಕ್ಕೆ ಸಮೀಪದಲ್ಲಿಯೇ ಇದ್ದದ್ದು. 'ಹಾವೇರಿ' ಶಬ್ದಕ್ಕೆ ಮುಂದೆ ಕೊಡಲಾಗುವ ಅರ್ಥವಿವರಣೆಯನ್ನು ಇಲ್ಲಿ ಗಮನಿಸಿದರೆ ಈ ಮಾತಿನ ಯಥಾರ್ಥತೆ ಅರಿವಾಗದಿರದು.

ಈಗ ಹಾವೇರಿ ಇದರ ಮೂಲರೂಪವಾದ 'ಪಾವೇರಿ' ಶಬ್ದದ ಶಾಸ್ತ್ರೀಯ ಅರ್ಥವನ್ನು ಸಂಶೋಧಿಸಬೇಕು. 'ಪಾವೇರಿ' ಒಂದು ಸಮಸ್ತಪದ. ಇದನ್ನು ಎರಡು ವಿಧವಾಗಿ ವಿಗ್ರಹಿಸುವ ಸಾಧ್ಯತೆಗಳಿವೆ-

ಶಾಸನಗಳು ಹೇಳುವ ಕತೆ 'ಹರಿವ ನೀರಿಗೆ ಹಾವು ಅಡ್ಡ ಬರಲು' ಎಂಬುದರ ಹಿನ್ನೆಲೆಯಲ್ಲಿ ವಿಗ್ರಹಿಸುವುದಾದರೆ ಪಾವು+ಏರಿ ಎಂದು ವಿಂಗಡಿಸಬೇಕಾಗುತ್ತದೆ. ಏರಿ ಎಂದರೆ ಜಲಾಶಯ, ಕೆರೆ; 'ಪಾವು' ಎಂದರೆ ಹಾವು, ಆದ್ದರಿಂದ ಪಾವೇರಿ ಎಂದರೆ 'ಹಾವಿನ ಕೆರೆ ಎಂದಾಗುತ್ತದೆ. 'ಹಾವೇರಿ' ಎಂದು ಹೆಗ್ಗೇರಿಗೆ ನಾಮಕರಣ ಮಾಡಿದಾಗ ಆ ಹೆಸರಿನಲ್ಲಿ 'ಪರಮಾರ್ಥ' ಎಂದರೆ ಅತಿಶಯ ಅರ್ಥವಿದೆ ಎಂದು ನಳಚಕ್ರವರ್ತಿ ಹೇಳಿದ್ದಾನೆ. 'ಹಾವಿನ ಕೆರೆ' ಎನ್ನುವಲ್ಲಿ ಅಂತಹ ಅತಿಶಯಾರ್ಥವೇನೂ ಕಂಡುಬರದು. ಆದ್ದರಿಂದ ಶಾಸನಗಳ ಕತೆಯ ಹಿನ್ನೆಲೆಯಲ್ಲಿಯ ವಿಗ್ರಹ ಅಷ್ಟೇನೂ ಸೂಕ್ತವೆನಿಸುವುದಿಲ್ಲ.

'ಪಾವೇರಿ' ಪದ ವಿಗ್ರಹಿಸುವ ಎರಡನೆಯ ರೀತಿ ಎಂದರೆ 'ಪಾ+ಏರಿ' ಎಂದು. ಇವೆರಡು ಪದಗಳು ಸೇರುವಾಗ ಕನ್ನಡ ಸಂಧಿ ನಿಯಮಾನುಸಾರ ಮಧ್ಯದಲ್ಲಿ 'ವ್' ಆಗಮವಾಗುತ್ತದೆ. ಆಗ ಪಾ+ವ್+ಏರಿ > ಪಾವೇರಿ ಎಂಬ ಸಮಸ್ತರೂಪ ಸೃಷ್ಟಿಯಾಗುತ್ತದೆ. ಈ ಪದಗಳಲ್ಲಿ 'ಪಾ' ಸಂಸ್ಕೃತ, 'ಏರಿ' ಕನ್ನಡ. ಆದ್ದರಿಂದ ಇದೊಂದು ಅರಿಸಮಾಸ. ಕನ್ನಡ ನಾಡಿನ ಊರುಗಳ ಹೆಸರುಗಳಲ್ಲಿ ಇಂಥ ಅನೇಕ ಅರಿಸಮಾಸಗಳನ್ನು ಕಾಣುತ್ತೇವೆ. ನಿದರ್ಶನಕ್ಕೆ ಹೇಳುವುದಾದರೆ ಶಿರ+ಆಲ+ಕೊಪ್ಪ > ಶಿರಾಲಕೊಪ್ಪ >ಶಿರಾಳ ಕೊಪ್ಪ, ಶಿಖಾ+ಆರಿ+ಪುರ > ಶಿಕಾ+ಆರಿ+ಪುರ > ಶಿಕಾರಿ ಪುರ ; ಇಲ್ಲಿ ಶಿರ ಹಾಗೂ ಶಿಖಾ ಸಂಸ್ಕೃತ ಪದಗಳು.

'ಏರಿ ಎಂದರೆ ಜಲಾಶಯ 'ಪಾ' ಎಂದರೆ 'ಪಿಬ' ಅರ್ಥದಲ್ಲಿ ಕುಡಿಯುವ, ಈಗ ಪಾವೇರಿ ಎಂದರೆ 'ಕುಡಿಯುವ ನೀರಿನ ಜಲಾಶಯ' ಎಂಬರ್ಥ. ಕೆರೆ ನೀರನ್ನು ಸಾಮಾನ್ಯವಾಗಿ ಕುಡಿಯುತ್ತಾರೆ. ಆದ್ದರಿಂದ ಈ ಅರ್ಥದಲ್ಲಿಯೂ ಅಂಥ ವಿಶೇಷತೆ ಇರಲಾರದು. ನಳ ಚಕ್ರವರ್ತಿ ಕಟ್ಟಿಸಿದ್ದು 'ನಿರ್ಭರವಾದ ಕೆರೆ' ಅಂದರೆ ಅತಿಶಯವಾದ (ತುಂಬಿದ) ಕೆರೆ. ಈ ಹಿನ್ನಲೆಯಲ್ಲಿ ವಿಚಾರ ಮಾಡಿದಾಗ 'ಪಾ' ಶಬ್ದಕ್ಕೆ 'ಸುರಕ್ಷಿತ'-*Preserve.* ಎಂಬರ್ಥವಿರುವುದೂ ಕಂಡುಬರುತ್ತದೆ. ಈ ಅರ್ಥದಲ್ಲಿ 'ಪಾವೇರಿ' ಎಂದರೆ ಸುರಕ್ಷಿತ ಜಲಾಶಯ' *'Preserved Reservoiur* ಎಂಬರ್ಥವು. ನಳಚಕ್ರವರ್ತಿ ಹಾವೇರಿಗೆ 'ಪರಮಾರ್ಥಂ ನಾಮಮಾದುದು' ಎಂದು ಉದ್ಗಾರ ತೆಗೆದದ್ದು ಈ ಅರ್ಥದಲ್ಲಿ ಸಾರ್ಥ್ಯಕ್ಯ ಹೊಂದುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಈ ಶಾಸನದಲ್ಲಿ ಕಾಲ ನಿರ್ಧರಿಸಿರುವ ಮಿತಿ ಇಲ್ಲ. ಆದರೆ ಶಾಸನದ ಆಂತರಿಕ ಆಧಾರಗಳ ಮೇಲೆ ಸಂಭಾವ್ಯ ಕಾಲ ನಿರ್ಧರಿಸಲಾಗಿದೆ.
೨. *SII.* XVIII, 136, ಕ್ರಿ.ಶ. ೧೧೩೪.
೩. ಅದೇ, ೧೫೫ ಕ್ರಿ.ಶ. ೧೧೫೭.

ಕೆ. ನಾರಾಯಣ ನಾಯಕ್*

# ಪ್ರಾಚೀನ ಕ್ಷೇತ್ರ - ಪೆರಣಂಕಿಲ

ಉಡುಪಿ ನಗರದಿಂದ ಆಗ್ನೇಯಕ್ಕೆ[೧] ಸು. ೨೦ ಕಿ.ಮೀ. ದೂರದಲ್ಲಿ ಪೆರಣಂಕಿಲ ಎಂಬ ಗ್ರಾಮವು ಶ್ರೀಮಹಾಲಿಂಗೇಶ್ವರ ಮತ್ತು ಶ್ರೀಉದ್ಭವಮಹಾಗಣಪತಿ ದೇವಾಲಯಗಳಿರುವ ಸುಪ್ರಸಿದ್ಧ ಕ್ಷೇತ್ರವಾಗಿದೆ. ಜನಜನಿತವಾಗಿರುವ ಐತಿಹ್ಯದಂತೆ ಪೇರ್ಣ ಎಂಬ ಹರಿಜನ ಪಂಗಡಕ್ಕೆ ಸೇರಿದ ರೈತನು ಹೊಲದಲ್ಲಿ ಉಳುಮೆ ಮಾಡುತ್ತಿರುವಾಗ ನೇಗಿಲಿಗೆ ಅದೇನೋ ಸಿಕ್ಕಿ ಕೊಂಡಿತು.[೨] ಕುತೂಹಲದಿಂದ ಪರೀಕ್ಷಿಸಿದಾಗ ಆತನಿಗೆ ಕಂಡದ್ದು ಶಿರೋಭಾಗವಷ್ಟೇ ಕಾಣುವ ಒಂದು ಗಣೇಶ ವಿಗ್ರಹ! ಆ ರಾತ್ರಿ ಅವನ ಕನಸಿನಲ್ಲಿ ಕಾಣದ ಶಕ್ತಿಯೊಂದು ಹೀಗೆ ಆದೇಶಿಸಿತು.[೩] "ನೀನು ಎರಡು ಕೊಪ್ಪರಿಗೆಗಳನ್ನು ತೆಗೆದುಕೊಂಡು ಒಂದನ್ನು ವಿಗ್ರಹ ಸಿಕ್ಕಿದ ಜಾಗದಲ್ಲಿಯೂ, ಇನ್ನೊಂದನ್ನು ಎದುರಿಗಿರುವ ಶಿವಾಲಯದ ಪಕ್ಕದಲ್ಲಿಯೂ ಬೋರಲಾಗಿ ಇಡು". ಅಂತೆಯೇ ನಡೆದುಕೊಂಡಾಗ, ಶಿವಾಲಯದ ಪಕ್ಕದಲ್ಲಿ ಇಟ್ಟಿದ್ದ ಕೊಪ್ಪರಿಗೆಯ ಅಡಿಯಲ್ಲಿ ಈ ಗಣಪತಿ ವಿಗ್ರಹ ಕಾಣಿಸಿಕೊಂಡಿತು. ಇದೇ ಉದ್ಭವ ಗಣಪತಿ ಎಂದು ಪ್ರತೀತಿ ಹೊಂದಿತು. ಪೇರ್ಣ ನಿಂದಾಗಿ ಗ್ರಾಮಕ್ಕೆ ಪೆರಣಂಕಿಲ (ಪೇರ್ಣಂಕಿಲ) ಎಂದೂ ಹೆಸರಾಯಿತೆಂಬ ದಂತಕತೆ ಪ್ರಚಲಿತವಾಗಿದೆ.

"ಸುತ್ತಲೂ ನಯನ ಮನೋಹರವಾಗಿ ಕಂಗೊಳಿಸುವ ಸಸ್ಯ ಶ್ಯಾಮಲೆ - ಎದುರಿನಲ್ಲಿ ಪೂರ್ವ-ಪಶ್ಚಿಮವಾಗಿ ಹರಿಯುವ ತೊರೆಯ ಜುಳು ಜುಳುನಾದ; ನಡುವೆ ಅಧಿಪತಿಗಳಂತೆ ರಾರಾಜಿಸುವ ಶ್ರೀ ಮಹಾಲೀಂಗೇಶ್ವರ ಮತ್ತು ಶ್ರೀ ಮಹಾಗಣಪತಿ ದೇವಾಲಯಗಳು"- ಇದು ಪೆರಣಂಕಿಲ ಕ್ಷೇತ್ರದ ಒಂದು ವರ್ಣನೆ. ಪಕೃತಿಯ ಹಚ್ಚಹಸುರಿನ ಮಡಿಲಲ್ಲಿರುವ ಮತ್ತು ಒಂದೇ ಪ್ರಕಾರದಲ್ಲಿರುವ ಈ ದೇವಾಲಯಗಳಲ್ಲಿ ಶ್ರೀ ಮಹಾಲಿಂಗೇಶ್ವರ ದೇವಸ್ಥಾನವು ಪೂರ್ವಾಭಿಮುಖವಾಗಿದೆ. ಶ್ರೀ ಮಹಾಗಣಪತಿ ದೇವಾಲಯವು ಪಶ್ಚಿಮಾಭಿಮುಖವಾಗಿದೆ. ಪ್ರಾಕಾರದ ಈಶಾನ್ಯದಲ್ಲಿ ನಿರ್ಮಲ ಜಲಭರಿತ ಪುಷ್ಕರಿಣಿ ಇದೆ.

ಇವೆರಡೂ ಮಂದಿರಗಳು ಅತೀ ಪ್ರಾಚೀನ ಎಂಬ ಪ್ರತೀತಿಯಿದೆ. ಇವು ಅಳುಪರ ಕಾಲದ ಶಿಲಾಮಯ ವಾಸ್ತು ರಚನೆಯಾಗಿವೆ ಎಂದು ತಿಳಿದುಬರುತ್ತದೆ. ಮಹಾಲಿಂಗೇಶ್ವರ ದೇವಾಲಯವು ಖರಾಸುರ ಪ್ರತಿಷ್ಠೆ[೪] ಎಂದು ಐತಿಹ್ಯವಿದೆ. ಸುತ್ತಲಿನ ಗ್ರಾಮಗಳಲ್ಲಿ[೫] ಇರುವ ಶಿವಾಲಯಗಳೂ ಖರಾಸುರ ನಿಂದ ಪ್ರತಿಷ್ಠಾಪಿಸಲ್ಪಟ್ಟವು ಎನ್ನಲಾಗಿದೆ.

ಈ ಶಿವಾಲಯವು ಗರ್ಭಗುಡಿ, ತೀರ್ಥಮಂಟಪ, ಬಲಿಪೀಠ, ಧ್ವಜಸ್ತಂಭ ಹಾಗೂ ಪ್ರದಕ್ಷಿಣಪಥವನ್ನು ಒಳಗೊಂಡಿದೆ. ಶಿಲಾಮಯವಾದ ಗರ್ಭಗುಡಿ ಚತುರಸ್ರವಾಗಿದ್ದು ಶಿಲಾಪಟ್ಟಿಕೆಗಳ ಎರಡು ಸಾಲುಗಳನ್ನು ಕಂಬಗಳಿಗೆ ಜೋಡಿಸ ಲಾಗಿದೆ. ಶಿಲಾಮಯ ಶಿಖರ ಮತ್ತು ಕಳಸ ಶೋಭೆಯನ್ನು ನೀಡುತ್ತವೆ. ತೀರ್ಥಮಂಟಪದಲ್ಲಿರುವ ಆಕರ್ಷಕವಾದ ನಂದಿಯು ಇತ್ತೀಚೆಗೆ ರಚಿಸಲಾಗಿದ್ದು, ಇದು ಮೊದಲಿದ್ದ ನಂದಿ ವಿಗ್ರಹದ ಪ್ರತಿಕೃತಿಯಾಗಿದೆ. ಬಲಿಪೀಠದ ಸುತ್ತಲೂ ಪ್ರವೇಶದ್ವಾರದ ಎದುರು ಶಿಲಾವರಣ ನಿರ್ಮಿಸಲಾಗಿದ್ದು, ಇದು ಬೇರೆ ಎಲ್ಲೂ ಇದ್ದಂತೆ ಕಾಣುವುದಿಲ್ಲ.[೬]

ಮಹಾಲಿಂಗೇಶ್ವರ ದೇವಾಲಯದ ಹೊರಗಿನ ಪ್ರಾಕಾರದಲ್ಲಿ ಗರ್ಭಗುಡಿಯ ನೇರಕ್ಕೆ ದಕ್ಷಿಣದಲ್ಲಿ ಉದ್ಭವ ಮಹಾಗಣಪತಿ ದೇಗುಲವಿದೆ. ಮೂಲತಃ ಇದು ಚಿಕ್ಕ ಗುಡಿಯಾಗಿದ್ದು ನವರಂಗ, ಸುಖನಾಸಿ ಮತ್ತು ಗರ್ಭಗೃಹಗಳನ್ನು ಹೊಂದಿರುತ್ತದೆ. ಗುಡಿಯ ಮಾಡು ತಗ್ಗಾಗಿದೆ. ಎದುರಿನ ಮಂಟಪವನ್ನು ನಂತರ ನಿರ್ಮಿಸಲಾಗಿದೆ. ಮಹಾಲಿಂಗೇಶ್ವರ ಮಂದಿರದಲ್ಲಿದ್ದಂತೆ ಶಿಲಾಘಟಕಗಳ ಸಾಲು ಜೋಡಣೆ ಹಾಗೂ ದೀಪಾರಾಧನೆಗೆ ಬೇಕಾದ ಸಾಲುದೀಪಗಳನ್ನು ಅನುವುಗೊಳಿಸಲಾಗಿದೆ. ಬಲಿಪೀಠ ದೊಂದಿಗೆ ಮಹಾಗಣಪತಿ ಮೂರ್ತಿ ಅಪರೂಪ ಎನ್ನಬಹುದು. ಶಿರೋಭಾಗ ಮಾತ್ರ ಕಾಣುವ ಈ ಶಿಲಾವಿಗ್ರಹವು ಉದ್ಭವ ಮಹಾಗಣಪತಿ ಎಂದು ಸುಪ್ರಸಿದ್ಧವಾಗಿದೆ. ಗಣಪತಿಯೊಂದಿಗೆ ಅದರ ವಾಹನ ಇಲಿ ಇಲ್ಲಿ ಇರುವುದಿಲ್ಲ. ಇದೂ ಒಂದು ವಿಶೇಷ ಮಾತ್ರವಲ್ಲ ಇದು ಪ್ರಾಚೀನವಾದುದು ಎಂಬುದಕ್ಕೆ ಸ್ಪಷ್ಟ ಕುರುಹನ್ನು ನೀಡುತ್ತದೆ.

ಈ ಎರಡೂ ದೇವಾಲಯಗಳನ್ನು ಸಂದರ್ಶಿಸಿ, ಶಿವಲಿಂಗ ಮತ್ತು ಗಣೇಶ ವಿಗ್ರಹವನ್ನು ಪರಿಶೀಲಿಸಿದ ಡಾ|| ಪಿ. ಎನ್. ನರಸಿಂಹಮೂರ್ತಿಯವರು ಇವೆರಡೂ ಸುಮಾರು ೮ನೇ ಶತಮಾನಕ್ಕೂ ಹಿಂದಿನವು ಎಂದು ಅಭಿಪ್ರಾಯಪಟ್ಟಿರುತ್ತಾರೆ. ಇವುಗಳ ಭಾವಚಿತ್ರ (ಛಾಯಾಚಿತ್ರ) ವೀಕ್ಷಿಸಿದ ಡಾ|| ಅ. ಸುಂದರರವರು ಗಣಪತಿ ವಿಗ್ರಹವು ಸುಮಾರು ೬ ನೇ ಶತಮಾನದಷ್ಟು ಪ್ರಾಚೀನ ಎಂಬುದಾಗಿ ತಿಳಿಸಿರುತ್ತಾರೆ.[೮]

ಆಗಮೋಕ್ತ ಪ್ರತಿಷ್ಠಾಪನೆಯಾಗಿರುವ ಈ ಮಂದಿರಗಳಲ್ಲಿ ನಿತ್ಯವೂ ತ್ರಿಕಾಲ ಬಲಿಸಹಿತ ಪೂಜೆ ನಡೆಯುತ್ತದೆ. ಪ್ರತೀ ಸಂಕ್ರಮಣದಂದು, ಹಾಗೂ ಗಣೇಶ ಚತುರ್ಥಿ, ದೀಪಾವಳಿ,

* ಸರಕಾರಿ ವಸತಿ ಗೃಹ ಸಂ. ೧೧೩, ಉರ್ವಾ ಸ್ಟೋರ್ಸ್, ಅಶೋಕ ನಗರ, ಮಂಗಳೂರು - ೫೭೫ ೦೦೬



ಶಿವರಾತ್ರಿ ಮೊದಲಾದ ಪರ್ವಗಳಲ್ಲಿ ವಿಶೇಷ ಪೂಜೆ, ಪುರಸ್ಕಾರ ಇತ್ಯಾದಿ ನಡೆಯುತ್ತವೆ. ಮೀನಮಾಸದಲ್ಲಿ ಹುಣ್ಣಿಮೆಯಂದು ಪ್ರತಿಷ್ಠೋತ್ಸವ ನಡೆದು, ಎರಡನೆಯ ದಿನ ರಥೋತ್ಸವ ಜರಗುತ್ತದೆ. 'ಗಣಪತಿ ಸೃಷ್ಟಿಯ ಸಂಕೇತ. ಅದಕ್ಕಾಗಿ ಅವನಿಗೆ ಪ್ರಥಮ ಪೂಜೆ ಸಲ್ಲುವುದು."[೯] ಗಣಪತಿ ಸುಲಭ ಪ್ರಸನ್ನ, ಕ್ಷಿಪ್ರ ಪ್ರಸಾದನಾಗಿರುವವನು. ಪೆರಣಂಕಿಲ ಕ್ಷೇತ್ರದಲ್ಲಿ ಮಹಾಗಣಪತಿಗೆ ಸಲ್ಲಿಸುವ ಅಪ್ಪ-ಸೇವೆ[೧೦] ಬಹಳ ವಿಶೇಷವಾಗಿರುವ ಜನಪ್ರಿಯ ಸೇವೆಯಾಗಿದೆ. ಕೊಪ್ಪರಿಗೆ (ಕಟಾಹ) ಅಪ್ಪ ಸೇವೆಯು[೧೧] ಈ ಮಹಾಗಣಪತಿಗೆ ಬಹಳ ಇಷ್ಟವಾದ ಹರಕೆ. ಭಕ್ತರು ತಮ್ಮ ಇಷ್ಟಾರ್ಥ ಸಿದ್ಧಿಗಾಗಿ ವಿಘ್ನವಿನಾಶಕನಾದ ಮಹಾಗಣಪತಿಗೆ ಈ ಹರಕೆಯನ್ನು ಹೇಳಿಕೊಳ್ಳುತ್ತಾರೆ. ಮಹಾಲಿಂಗೇಶ್ವರನು ಲಿಂಗ ಸ್ವರೂಪಿಯಾಗಿರುವನು. "ಸಮಸ್ತ ಸೃಷ್ಟಿಯ ನಿರ್ಮಾಣಕ್ಕೆ ಕಾರಣನಾದ ಹಾಗೂ ಬ್ರಹ್ಮಾಂಡದಲ್ಲಿರುವ ಎಲ್ಲಾ ವಸ್ತುಗಳಲ್ಲಿ ಅಂತರ್ಗತನಾಗಿರುವ[೧೨] ಈಶ್ವರನು ಮಂಗಳ ಸ್ವರೂಪಿಯೂ ಆಗಿರುತ್ತಾನೆ". ಮೃತ್ಯು ಭಯಹರ ಎಂದು ಪ್ರತೀತಿ ಪಡೆದಿರುವ ಮಹಾಲಿಂಗೇಶ್ವರನಿಗೆ ರುದ್ರಾಭಿಷೇಕ, ಬಿಲ್ವಾರ್ಚನೆ ಅತ್ಯಂತ ಪ್ರಿಯವಾದ ಸೇವೆಗಳು.

ಮಹಾಲಿಂಗೇಶ್ವರ ದೇವಾಲಯದ ತೀರ್ಥಮಂಟಪದ ಮುಂದೆ ಬಲಗಡೆ ಪ್ರಾಕಾರದ ಗೋಡೆಯ ಬಳಿಯಲ್ಲಿರುವ



ಶಿಲಾಫಲಕದಲ್ಲಿ ಶಾಸನವಿದ್ದು ಇದು *A.R.S.I.E. 1931-32* ಶಾಸನ ಸಂ. ೩೪೩ರ ಪ್ರಕಾರ ವರದಿಮಾಡಲ್ಪಟ್ಟಿದೆ. ಇದು ಅಳುಪರಾಣಿ ಪಟ್ಟದ ಪಿರಿಯರಸಿ ಬಲ್ಲಮಹಾದೇವಿಯ (೧೨೭೫-೧೨೯೨) ಶಾಸನವಾಗಿರುತ್ತದೆ. ಈ ಶಾಸನ ತ್ರುಟಿತವಾಗಿರುತ್ತದೆ. ಶಾಸನದಲ್ಲಿ ಲಭ್ಯವಿರುವ ಮಾಹಿತಿಯಂತೆ, ಅಳುಪರಾಣಿ ಬಲ್ಲಮಹಾದೇವಿಯ ಒಡ್ಡೋಲಗದಲ್ಲಿ ಮೂಡ ನಿಡಂಬೂರರ[೧೩] ಸಮ್ಮುಖದಲ್ಲಿ ರಾಣಿಯು ಮಾಡಿರುವ ದಾನಶಾಸನವಾಗಿರುತ್ತದೆ. ಇದರಲ್ಲಿ ಎರಡೂ ದೇವಾಲಯಗಳ ಉಲ್ಲೇಖವಿದೆ. ಈ ಸ್ಥಳದ ಹೆಸರು 'ಪೆರುಣಕಳು(ಳ)'[೧೪] ಎಂದಿರುತ್ತದೆ. (ಶಾಸನವು ತ್ರುಟಿತವಾಗಿರುವುದರಿಂದ, ರಾಣಿಯ ಬಿರುದುಗಳು, ದಾನದ ವಿವರ, ಉಪಸ್ಥಿತರಿದ್ದ ಹಿರಿಯ ಅಧಿಕಾರಿಗಳ ಹೆಸರುಗಳು - ಇತ್ಯಾದಿ ಸ್ಪಷ್ಟ ವಿವರ ಇನ್ನು ಲಭ್ಯವಾಗಬೇಕಷ್ಟೆ.) ಇದೇ ರಾಣಿಯ ಕೆಂಜೂರು ಶಾಸನದಲ್ಲಿ[೧೫] ಒಡ್ಡೋಲಗದಲ್ಲಿ ಉಪಸ್ಥಿತರಿದ್ದ ಸೋಮಣ್ಣ ಸೇನಬೋವ, ಬಮ್ಮ ಸೇನಬೋವ, ಕುಮಾರ ಬಚ್ಚಣ್ಣರಸ, ಮಹಾಪ್ರಧಾನ ಪೆರುಣ ಸೇನಬೋವ ಮತ್ತು ದೇಸಿಪುರುಷರ ಉಲ್ಲೇಖವಿದೆ. ಈ ಪೆರುಣ ಸೇನಬೋವನಿಂದಾಗಿ ಗ್ರಾಮಕ್ಕೆ ಪೆರುಣಕಳ ಎಂದು ಹೆಸರು ಬಂದಿರಬಹುದೆ? ಬಲ್ಲಮಹಾದೇವಿಯ ಮಹಾಪ್ರಧಾನನಾಗಿದ್ದ ಪೆರುಣ ಸೇನಬೋವನಿಗೆ ಉಂಬಳಿಯಾಗಿ ರಾಣಿಯು ನೀಡಿರುವ ಗ್ರಾಮವೇ ಪೆರುಣಕಳ (ಈಗಿನ ಪೆರಣಂಕಿಲ) ಆಗಿರಬಹುದೆ? ಇನ್ನೂ ಹೆಚ್ಚಿನ ಅಧ್ಯಯನದಿಂದ ನಿರ್ಧರಿಸಬೇಕಾದ ಊಹೆ ಇದು. ಇಲ್ಲಿನ ಶ್ರೀ ಮಹಾಲಿಂಗೇಶ್ವರ ಮತ್ತು ಶ್ರೀ ಮಹಾಗಣಪತಿ ದೇವಸ್ಥಾನಗಳು ಪ್ರಾಚೀನವಾಗಿದ್ದು ಈ ಪರಮ ಪಾವನಕ್ಷೇತ್ರ ರಾಣಿಯ ಗಮನಕ್ಕೆ ಬಂದಿರಬೇಕು. ಧರ್ಮಶ್ರದ್ಧೆ, ದಾನಧರ್ಮಗಳಿಗೆ ಹೆಸರಾದ ಅಳುಪ, ಪಟ್ಟದ ಪೆರಿಯರಸಿ ಬಲ್ಲಮಹಾದೇವಿಯು[೧೬] ಕ್ಷೇತ್ರವನ್ನು ಸಂದರ್ಶಿಸಿ ದೇವರ ದರ್ಶನ ಪಡೆದು, ತನ್ನ ರಾಜಧಾನಿ ಬಾರಹಕನ್ಯಾಪುರದಲ್ಲಿ (ಬಾರಕೂರು) ಒಡ್ಡೋಲಗದಲ್ಲಿ ಪೆರುಣಕಳದ ದೇವಾಲಯಗಳಿಗೆ ದಾನ ಶಾಸನದ ಘೋಷಣೆ ಮಾಡಿರಲೂ ಸಾಕು. ವಿವಿಧ ಶಾಸನಗಳ ಅಧ್ಯಯನದಿಂದ ರಾಣಿಯ ಬಗ್ಗೆ ಕಲೆಹಾಕಿರುವ ಮಾಹಿತಿಯೇ ಈ ಸಾಧ್ಯತೆಗಳನ್ನು ಪುರಸ್ಕರಿಸುತ್ತದೆ. ರಾಣಿಯಿಂದ ದಾನಶಾಸನ ಪಡೆಯುವಲ್ಲಿ ಅವಳ ಮಹಾಪ್ರಧಾನನಾಗಿದ್ದ ಪೆರುಣಸೇನಬೋವನೂ ಕಾರಣನಾಗಿರಬಹುದು. ಪೆರುಣಸೇನಬೋವನು ಪೆರುಣಕಳದವನಾಗಿರಬಹುದೆ? ಎಂಬುದು ಅಧ್ಯಯನ ನಡೆಸಬೇಕಾದ ಇನ್ನೊಂದು ವಿಚಾರವಾಗಿದೆ.

ಈ ದೇವಸ್ಥಾನಗಳ ಆಡಳಿತ ವ್ಯವಸ್ಥೆಯನ್ನು ಉಡುಪಿ ಅಷ್ಟಮಠಗಳಲ್ಲೊಂದಾಗಿರುವ ಶ್ರೀ ಪೇಜಾವರ ಮಠವು ನೋಡಿಕೊಳ್ಳುತ್ತಿದೆ. ದೇವಾಲಯ ಪ್ರಾಕಾರದ ಬಳಿಯಲ್ಲಿಯೇ ಮೂಡುಬದಿಯಲ್ಲಿ ಪೇಜಾವರ ಮಠವೊಂದಿದೆ. ಮಠದ ಉತ್ತರ

ಬದಿಯಲ್ಲಿ ಪುಷ್ಕರಿಣಿಯ ತಟದಲ್ಲಿ ನಾಗಬನ ಇದೆ. ಇದರ ಸನಿಹದಲ್ಲಿಯೇ ಪೇಜಾವರಮಠದ ಮೂರು ಮಂದಿ ಯತಿಗಳ ವೃಂದಾವನಗಳಿವೆ. ಇಲ್ಲಿ ಬ್ರಹ್ಮೈಕ್ಯರಾಗಿದ್ದ ಯತಿಗಳ ಬಗ್ಗೆ ಮಾಹಿತಿ ಲಭ್ಯವಿಲ್ಲ.

ದೇವಾಲಯ ಪ್ರಾಕಾರದಲ್ಲಿ ವಸಂತಕಟ್ಟೆಯೊಂದಿದೆ. ಕ್ಷೇತ್ರಪಾಲ, ರಕ್ತೇಶ್ವರಿ, ಭೂತರಾಜ-ಇವೇ ಮೊದಲಾದ ಪರಿವಾರ ದೈವಗಳ ಬಲಿಪೀಠಗಳು ಪ್ರಾಕಾರದ ಮೂಲೆಗಳಲ್ಲಿ ಇವೆ.

ಗ್ರಾಮದಲ್ಲಿ ಮೂಡುಬದಿಯಲ್ಲಿ ವರ್ವಾಡಿಗುತ್ತು ಮನೆಯಿದೆ.[೧೭] ಪಡುಬೆಟ್ಟು, ಚಿತ್ರಬೈಲು, ಗುಡ್ಡದಬೆಟ್ಟು, ಬೆಲ್ಪತ್ರೆ[೧೮] ಇವು ಇಲ್ಲಿನ ಕೆಲವು ಊರುಗಳಾಗಿವೆ.

ದೇವಾಲಯಗಳ ಜೀರ್ಣೋದ್ಧಾರ, ಬ್ರಹ್ಮಕಲಶೋತ್ಸವ ಇತ್ತೀಚೆಗೆ ೧೯೮೮ - ೮೯ರಲ್ಲಿ ನಡೆಯಿತು. ಕ್ಷೇತ್ರದ ಅಭಿವೃದ್ಧಿ ಕಾರ್ಯಗಳಲ್ಲಿ ಊರ ಪರವೂರ ಭಕ್ತ ಜನರ ಕೊಡುಗೈ ದಾನ, ನೆರವು - ಸಹಕಾರ ಉಲ್ಲೇಖಿತ ದೇವಾಲಯದವರೆಗೂ ರಸ್ತೆಯ ನಿರ್ಮಾಣವಾಗಿರುವುದರಿಂದ ದೂರದ ಯಾತ್ರಿಕರಿಗೆ ಇಲ್ಲಿಗೆ ಬರಲು ವಾಹನ ಸೌಲಭ್ಯ ಲಭಿಸಿದೆ. ದೂರದಿಂದ ಬರುವ ಯಾತ್ರಿಕರಿಗೆ ಮಧ್ಯಾಹ್ನ ಭೋಜನ ವ್ಯವಸ್ಥೆ ಇರುತ್ತದೆ.

ಕರಾವಳಿ ಜಿಲ್ಲೆಗಳಲ್ಲಿ ಪ್ರಾಚೀನ ದೇವಾಲಯಗಳು ಅನೇಕ ಇರಬಹುದಾದರೂ, ಅವೆಲ್ಲವನ್ನೂ ಇನ್ನೂ ಗುರುತಿಸಲಾಗಿಲ್ಲ. ಪೆರಣಂಕಿಲ ಕ್ಷೇತ್ರದ ಈ ದೇವಾಲಯಗಳು ತುಂಬಾ ಪ್ರಾಚೀನ ವಾದುವು ಎಂಬುದನ್ನು ಗುರುತಿಸುವ ಪ್ರಯತ್ನ ಈ ಪ್ರಬಂಧದಲ್ಲಿ ಮಾಡಲಾಗಿದೆ. ನಾಡಿನ ಪ್ರಾಚೀನ ಶ್ರದ್ಧಾ ಕೇಂದ್ರಗಳ ಬಗ್ಗೆ ಅರಿವು ಮೂಡಿಸಿ, ಇತಿಹಾಸ - ಪರಂಪರೆಯನ್ನು ಉಳಿಸುವ ಪ್ರಜ್ಞೆ ಇದೀಗ ಕಂಡುಬರುತ್ತಿದೆ.



(ಶಾಸನದ ಪಡಿಯಚ್ಚು ತೆಗೆದು ಶಾಸನದಲ್ಲಿನ ಮಾಹಿತಿ ಹಾಗೂ ಮಾರ್ಗದರ್ಶನವನ್ನು ನೀಡಿದ ಡಾ॥ ಪಿ. ಎನ್. ನರಸಿಂಹಮೂರ್ತಿಯವರಿಗೆ ಪೆರಣಂಕಿಲ ಕ್ಷೇತ್ರದ ಶಿವಲಿಂಗ ಮತ್ತು ಮಹಾಗಣಪತಿಯ ಪ್ರಾಚೀನತೆ ಬಗ್ಗೆ ಮಾಹಿತಿ ನೀಡಿದ ಡಾ॥ ಅ. ಸುಂದರರವರಿಗೆ, ಶಾಸನದ ಮಾಹಿತಿ ನೀಡಿದ ಡಾ॥ ಪುಂಡಿಕ್ಯಾ ಗಣಪಯ್ಯ ಭಟ್ಟರಿಗೆ ಮಾಹಿತಿ, ನೆರವು ಮತ್ತು ಸಹಕಾರ ನೀಡಿದ ಬಗ್ಗೆ ಪೆರಣಂಕಿಲ ಕ್ಷೇತ್ರದ ವ್ಯವಸ್ಥಾಪಕರಾದ ಶ್ರೀ ಸುರೇಶ್ ತಂತ್ರಿಯವರಿಗೆ ಹಾಗೂ ಕ್ಷೇತ್ರದ ಅರ್ಚಕರು ಮತ್ತು ಸಿಬ್ಬಂದಿವರ್ಗದವರಿಗೆ, ಉತ್ತಮ ಚಿತ್ರಗಳನ್ನು ತೆಗೆದು ಸಹಕರಿಸಿರುವ ಛಾಯಾಗ್ರಾಹಕರು ಶ್ರೀ ದಾಮೋದರ್, ಕಾಪೂರು ಇವರಿಗೆ ನನ್ನ ಕೃತಜ್ಞತೆಗಳು)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಉಡುಪಿ - ಕಾರ್ಕಳ ರಸ್ತೆಯಲ್ಲಿ ಮಣಿಪಾಲ, ಹಿರಿಯಡ್ಕ ಮಾರ್ಗವಾಗಿ ಕೊಡಿಬೆಟ್ಟು - ಪೆರಣಂಕಿಲಕ್ಕೆ ಬಸ್ ವ್ಯವಸ್ಥೆಯಿದೆ. ಸ್ವಂತವಾಹನವಿದ್ದವರು ಹಿರಿಯಡ್ಕಕ್ಕೆ ೨ ಕಿ.ಮೀ. ಮೊದಲೇ ಓಂತಿಬೆಟ್ಟು ಎಂಬಲ್ಲಿಂದ ಬಲಗಡೆಯ ಮಾರ್ಗದಲ್ಲಿ (ದಕ್ಷಿಣದಿಕ್ಕಿಗೆ) ೪ ಕಿ.ಮೀ. ದೂರವನ್ನು ಕ್ರಮಿಸಬೇಕು.

೨. ಶ್ರೀಮತಿ ಗೀತಾ ನಾಯಕ ಆತ್ರಾಡಿ - 'ಪ್ರಕೃತಿಯ ಮಡಿಲಲ್ಲಿ ಪಾವನ ಕ್ಷೇತ್ರ - ಪೆರಣಂಕಿಲ' - **ವನಿತಾ**, ಸೆಪ್ಟೆಂಬರ್, ೧೯೮೦ **ಮುಂಗಾರು**, (ದಿನಾಂಕ ೩೦.೮.೯೨) ಮತ್ತು **ಕರ್ಮವೀರ** (೫.೨.೧೯೯೫.)

೩. ಅದೇ, ಪೆರಣಂಕಿಲ ಮಹಾಗಣಪತಿ ದೇವರು - **ಸುಗುಣ ಮಾಲಾ**, ಜುಲೈ ೨೦೦೧ (ಮಾಸಿಕ ಪತ್ರಿಕೆ).
ಪ್ರಾಚೀನ ದೇವಾಲಯಗಳಲ್ಲಿ ಇಂತಹ ಐತಿಹ್ಯಗಳು ಕಂಡುಬರುತ್ತವೆ. ಉದಾ : ಪೆರಣಂಕಿಲದ ಪೂರ್ವದಿಕ್ಕಿಗೆ ಇರುವ ಕಣಂಜಾರು ಗ್ರಾಮದ ಬ್ರಹ್ಮಲಿಂಗೇಶ್ವರ ಲಿಂಗಕ್ಕೆ ಚಾರು ಎಂಬ ದಲಿತ ವ್ಯಕ್ತಿಯ ಕತ್ತಿ ತಗುಲಿದ ಐತಿಹ್ಯವಿದೆ. ಶಿಶಿಲೇಶ್ವರವೂ ಇನ್ನೊಂದು ಪ್ರಾಚೀನ ದೇವಸ್ಥಾನ - ಶಿಶಿಲದಲ್ಲಿದೆ (ಬೆಳ್ತಂಗಡಿ ತಾಲೂಕು). 'ಪೆಸಿಲ' ಎಂಬ ಹರಿಜನ ಹೆಂಗಸಿನ ಕತ್ತಿಯಿಂದ ಶಿವಲಿಂಗದ ಮೇಲೆ ಗೀರು ಉಂಟಾದ ಐತಿಹ್ಯವಿದೆ. ನೋಡಿ - ಕೆ. ಅನಂತರಾಮು - **ದಕ್ಷಿಣದ ಸಿರಿನಾಡು**, ಅನಂತ ಪ್ರಕಾಶನ, ಮೈಸೂರು (೧೯೯೭) ಪುಟ ಸಂ. ೬೪೧. ಕಾರ್ಕಳದ ಬಳಿಯ ಕಾಂತೇಶ್ವರದ ಬಗ್ಗೆಯೂ ಇಂತಹದೇ ಐತಿಹ್ಯ ಇದೆ. ನೋಡಿ: ಅದೇ - ಪುಟ ಸಂ. ೧೨೪-೧೨೭. ಕಾಂತಾರ ಎಂಬ ಪರಿಜನ ವ್ಯಕ್ತಿಯ ಕೈಯಲ್ಲಿದ್ದ ಕುಡುಗೋಲು ಶಿವಲಿಂಗಕ್ಕೆ ತಗಲಿ - ಕಾಂತೇಶ್ವರ ಎಂಬ ಹೆಸರು ಬಂತು. ಊರಿಗೆ ಕಾಂತಾರ ಎಂಬ ಹೆಸರುಂಟಾಯಿತು.

೪. ಅದೇ.

೫. ಶಿವಭಕ್ತನಾದ ಖರಾಸುರನೆಂಬವನು ನಾಡಿನ ಹಲವೆಡೆಗಳಲ್ಲಿ ಶಿವಲಿಂಗಗಳನ್ನು ಪ್ರತಿಷ್ಠೆ ಮಾಡಿ ಪೂಜಿಸಿದ್ದ ಐತಿಹ್ಯಗಳಿವೆ. ಕಾಪೂರಿನ ಮಹಾಲಿಂಗೇಶ್ವರ ಮತ್ತು ಶಂಕರನಾರಾಯಣ ಕ್ಷೇತ್ರದ ಸ್ಥಳ ಪುರಾಣದಲ್ಲಿ ಇಂತಹ ಉಲ್ಲೇಖಗಳಿವೆ. ನೋಡಿ - ಶ್ರೀ ಪು. ಶ್ರೀನಿವಾಸ್ ಭಟ್, ಕಟೀಲು - '**ಕಾಪೂರು ದೇವಸ್ಥಾನ** - (ಪರಿಚಯ)' - ಶಿವಕೃಪ - ಬ್ರಹ್ಮ ಕಲಶಾಭಿಷೇಕೋತ್ಸವದ ಸ್ಮರಣ ಸಂಚಿಕೆ (೧೯೮೨)

೬. ಪೆರಣಂಕಿಲ ಗ್ರಾಮದ ಸುತ್ತಲೂ ಇರುವ ಕುದಿಗ್ರಾಮ, ಕಣಂಜಾರು, ಬೆಳ್ಳೆ, ಮರ್ಣೆ ಮತ್ತು ಆತ್ರಾಡಿ ಗ್ರಾಮಗಳಲ್ಲಿ ಶಿವಾಲಯಗಳಿವೆ.

೭. ವಿಚಾರಿಸಿದಾಗ ಬಲಿಪೀಠದ ಸುತ್ತಲಿನ ಶಿಲಾವರಣವು ಇತ್ತೀಚೆಗೆ ನಿರ್ಮಿತವಾದುದು ಎಂಬ ಮಾಹಿತಿ ದೊರೆಯಿತು.

೮. ಕರ್ನಾಟಕ ಇತಿಹಾಸ ಅಕಾದೆಮಿಯ ೧೫ನೇ ವಾರ್ಷಿಕ ಸಮ್ಮೇಳನ ಅಕ್ಟೋಬರ್ ೧೩-೧೫ (ಉಡುಪಿ) ಈ ಸಂದರ್ಭದಲ್ಲಿ ಡಾ॥ ಅ. ಸುಂದರ ಅವರನ್ನು ಕಂಡು ಮೂರ್ತಿಗಳ ಪ್ರಾಚೀನತೆ ಬಗ್ಗೆ ಮಾಹಿತಿ ಪಡೆಯಲಾಯಿತು.

೯. ಶ್ರೀ ರಾಮನಾರಾಯಣ ಜೋಶಿ., **ತರಂಗ**, ಆಗಸ್ಟ್, ೩೧ - ೨೦೦೦.

೧೦. ಅಪ್ಪ-ಅಕ್ಕಿ ಮತ್ತು ತುಪ್ಪದಿಂದ ತಯಾರಿಸಲ್ಪಡುವ ಕಜ್ಜಾಯ.

೧೧. ಕೊಪ್ಪರಿಗೆ-ಕಟಾಹ-ತಾಮ್ರದ ಅಗಲವಾದ ದೊಡ್ಡ ಪಾತ್ರ- ಎರಡೂ ಬದಿಗಳಲ್ಲಿ ಹಿಡಿಗಳಿರುತ್ತವ. ಪೆರಣಂಕಿಲದಲ್ಲಿ ಕೊಪ್ಪರಿಗೆ ಅಪ್ಪಸೇವೆ ಇರುವಂತೆ ಮಧೂರು ವಿನಾಯಕ ದೇವಾಲಯದಲ್ಲಿ ಮೂಡಪ್ಪ ಸೇವೆ ಜರಗುತ್ತದೆ.

೧೨. ಡಾ|| ಡಿ. ವಿ. ದೇವರಾಜ್., 'ಹೊಯ್ಸಳರ ಕಾಲದ ಎರಡು ಪಂಚಲಿಂಗ ದೇವಾಲಯಗಳು' - **ಇತಿಹಾಸ ದರ್ಶನ**, ಸಂಪುಟ - ೯/೧೯೮೪

೧೩. ಮೂಡ ನಿಡಂಬೂರು - ಉಡುಪಿ ತಾಲೂಕಿನಲ್ಲಿರುವ ಒಂದು ಗ್ರಾಮ. ಆಳುಪರಾಜರ ಕಾಲದಲ್ಲಿನ ಆ ಗ್ರಾಮದಲ್ಲಿನ ಪ್ರಮುಖ ಅಧಿಕಾರಿಯನ್ನು ಉದ್ದೇಶಿಸಿ ಶಾಸನದಲ್ಲಿ ಉಲ್ಲೇಖಿಸಿರಬಹುದು.

೧೪. ಕಳ -ಹತ್ತು ಸಮಸ್ತರು ಸೇರುವ ಸ್ಥಳ. ಗ್ರಾಮ ಚಾವಡಿ ನೋಡಿ; **ತುಳು ನಿಘಂಟು**. ಸಂ. ೨ ಪುಟ ೭೩ ಪರ್ಕಳ, ಪರೇಕಳ, ಕಾರ್ಕಳ ಎಂಬ ಹೆಸರುಗಳು ಸುಪರಿಚಿತವಾಗಿವೆ. 'ಸ್ಥಳ' ಎಂಬ ಅರ್ಥವೂ ಕಂಡುಬರುತ್ತದೆ.

೧೫. ಕೆಂಜೂರು ಶಾಸನ *A.R.S.I.E. 1931-32, No 336,* ನೋಡಿ; K.V. Ramesh - *A History of South Kanara;* Pages 125, 126 ಮತ್ತು **ತುಳುನಾಡು ಇತಿಹಾಸ**, (೧೯೬೯) ಪು. ೫೮, ೫೯

೧೬. ಕರ್ನಾಟಕ ಕರಾವಳಿಯ ತುಳುನಾಡಿನಲ್ಲಿ ಸುಮಾರು ಒಂದು ಸಾವಿರ ವರ್ಷಗಳ ಕಾಲ (ಕ್ರಿ.ಶ. ೬೫೦-೧೪೦೦) ಆಳ್ವಿಕೆ ನಡೆಸಿದ ಆಳುಪ ರಾಜಮನೆತನದ ಉಜ್ವಲ ಇತಿಹಾಸದಲ್ಲಿ ಬಲ್ಲಮಹಾದೇವಿಯು ಸುಪ್ರಸಿದ್ಧ ರಾಣಿಯಾಗಿರುವಳು. ವೀರ ಪಾಂಡ್ಯದೇವನ ಮರಣದ ಬಳಿಕ ಈ ರಾಣಿಯು ಪಟ್ಟಕ್ಕೆ ಬಂದು ೧೨೭೫ರಿಂದ ೧೨೯೨ರವರೆಗೆ ದಕ್ಷತೆಯಿಂದ ರಾಜ್ಯವಾಳಿದಳು. ಬಾರಹಕನ್ಯಾಪುರದಲ್ಲಿ (ಬಾರಕೂರು) ಆಳಿದ ಪಟ್ಟದ ಪಿರಿಯರಸಿ ಬಲ್ಲಮಹಾದೇವಿಯ ವ್ಯಕ್ತಿತ್ವದ ಬಗ್ಗೆ ಈ ಕೆಳಗೆ ಉಲ್ಲೇಖಿಸಲಾಗಿದೆ. ನೋಡಿ: Prof. Gururaja Bhatt - *Studies inTuluva History and Culture* (1975) Pages - 18, 37-38.

"This queen happened to be the most illustrious personality in the entire Alupa Dynasty... conducted the affairs of the State with dexterity, deligence and practical vision. She is described as a second Laxmi.... the wish gratifying Jewel to the needy... a Kalpatharu to her dependants, profuse in liberty... Her council of ministers was comoosed of five Pradhanas. Epigraphs reveal that she was sensitive to the multifarious problems of her subjects....... benevolent and spiritual' minded. Her entire regime appears to have been one of contentment and political stability".

೧೭. ಗಣಪತಿರಾವ್ ಐಗಳ - **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ**, ಪು. ೪೧೯ ವಿಜಯನಗರ ಕಾಲದಲ್ಲಿ ಪೆರಣಂಕಿಲ, ಕುದಿಗ್ರಾಮ, ಮರಣೆ, ಹೆರಗ, ಹಿರೇಬೆಟ್ಟು ಮತ್ತು ಬಡಗುಬೆಟ್ಟು ಗ್ರಾಮಗಳು ಬೆಟ್ಟುಪಾಡಿಸೀಮೆಗೆ ಒಳಪಟ್ಟಿದ್ದುವು. ಬೆಟ್ಟುಪಾಡಿಸೀಮೆ ಬಲ್ಲಾಳರ ಆಡಳಿತದಲ್ಲಿತ್ತು. ಆಡಳಿತದ ಅನುಕೂಲಕ್ಕಾಗಿ ಗ್ರಾಮದಲ್ಲಿ ಗುತ್ತು ಎಂಬ ವ್ಯವಸ್ಥೆಯಿತ್ತು. ನೋಡಿ - ಕೆ. ನಾರಾಯಣ ನಾಯಕ್ - 'ಕುಳೂರು ಮಾಗಣೆಯ ಇತಿಹಾಸ - ಒಂದು ಅವಲೋಕನ', **ಇತಿಹಾಸ ದರ್ಶನ**, ಸಂಪುಟ ೧೬ / ೨೦೦೧

೧೮. ಬೆಲ್ಪತ್ರೆ - ಬಿಲ್ವಪತ್ರೆಯ ಮರಗಳಿದ್ದ ಊರು ಆಗಿರ ಬಹುದೆ? ಈಶ್ವರ ದೇವರಿಗೆ ಬಿಲ್ವ ಪತ್ರೆ ಬಹು ಪ್ರಿಯವಾದುದು.

ಡಾ|| ಎ. ಸೋಮಶೇಖರ್*

# ಯಗಚಿ ನದಿ ಅಂದು - ಇಂದು

ಕರ್ನಾಟಕ ರಾಜ್ಯದಲ್ಲಿ ಕಾವೇರಿ, ಕೃಷ್ಣ, ತುಂಗಭದ್ರ, ಮಲಪ್ರಭಾ, ಘಟಪ್ರಭ, ಕಬಿನಿ, ಕಾಳಿ, ಶರಾವತಿ, ನೇತ್ರಾವತಿ ಮತ್ತು ಯಗಚೀ ನದಿ ಮುಂತಾದ ಜೀವನದಿಗಳನ್ನು ಕಾಣುತ್ತೇವೆ. ಇದಲ್ಲದೇ, ಈ ನದಿಗಳೇ ಕೆಲವೊಮ್ಮೆ ಹಲವು ಸಾಮ್ರಾಜ್ಯಗಳ ಹುಟ್ಟು ಹಾಗೂ ಸಂಸ್ಕೃತಿಯ ಬೆಳವಣಿಗೆಗೆ ಕಾರಣವಾಗಿದೆ. ಇಂತಹ ನದಿಗಳಲ್ಲಿ ಯಗಚಿ ನದಿಯು ಹಲವು ರೀತಿಯಲ್ಲಿ ಪ್ರಾಮುಖ್ಯವನ್ನು ಪಡೆದಿದೆ. ಈ ನದಿಯ ಕಾರಣದಿಂದಾಗಿ ಆ ಪ್ರದೇಶಗಳ ಕೃಷಿ ಪದ್ಧತಿ, ಕೈಗಾರಿಕಾ ವ್ಯವಸ್ಥೆ ಸಾರಿಗೆ ಸಂಪರ್ಕ ಮುಂತಾದವುಗಳು ಅಭಿವೃದ್ಧಿ ಹೊಂದಿರುವುದನ್ನು ಇತಿಹಾಸದಲ್ಲಿ ಕಾಣುತ್ತೇವೆ. ಈ ನದಿಗೆ ಹಲವು ಕಡೆಗಳಲ್ಲಿ ಅಣೆಕಟ್ಟುಗಳನ್ನು ಕಟ್ಟಿ ನೀರಾವರಿ ವ್ಯವಸ್ಥೆ ಹಾಗೂ ಕುಡಿಯುವ ನೀರಿನ ಸೌಲಭ್ಯಕ್ಕಾಗಿ ಉಪಯೋಗಿಸಿರುವುದನ್ನೂ ಕೂಡಾ ಕಾಣುತ್ತೇವೆ. ಹೀಗಾಗಿ ಈ ನದಿಯು ಹೇಗೆ ಪ್ರಾಮುಖ್ಯತೆಯನ್ನು ಪಡೆದಿದೆ ಎಂಬುದನ್ನು ಸದ್ಯ ಸಂಶೋಧಿಸಿ ತಿಳಿಸಿದೆ.

ಯಗಚಿ ನದಿಯು 'ಬದರಿ' ಎಂಬ ಹೆಸರಿನಿಂದಲೂ ಪ್ರಸಿದ್ಧಿಯಾಗಿದೆ. ಈ ನದಿಯು ಚಿಕ್ಕಮಗಳೂರು ಜಿಲ್ಲೆಯ ಬಾಬಾಬುಡನ್ ಗಿರಿಯಲ್ಲಿ ಹುಟ್ಟಿ ದಕ್ಷಿಣಾಭಿಮುಖವಾಗಿ ಹರಿದು, ಬೇಲೂರು ತಾಲ್ಲೂಕಿನ ನಿರಿಘಟ್ಟ ಎಂಬ ಗ್ರಾಮದ ಬಳಿ ಹಾಸನ ಜಿಲ್ಲೆಯನ್ನು ಪ್ರವೇಶಿಸಿ ಗೊರೂರು ಗ್ರಾಮದ ಹತ್ತಿರ ಹೇಮಾವತಿ ನದಿಯನ್ನು ಕೂಡಿಕೊಳ್ಳುತ್ತದೆ. ಈ ನದಿಯ ಉದ್ದ ಸುಮಾರು ೭೫. ಕಿ.ಮೀ. ಈ ನದಿಗೆ ಅಡ್ಡಲಾಗಿ ಬೇಲೂರು ತಾಲ್ಲೂಕಿನ ಬೊಮ್ಮಡಿಹಳ್ಳಿ, ಹಾಸನ ತಾಲ್ಲೂಕಿನ ಹಲವಾಗಲು (ಹಾಲ ಬಾಗಿಲು) ಮತ್ತು ಚಂದ್ರವಳ್ಳಿಗಳಲ್ಲಿ ನೀರಾವರಿಗಾಗಿ ಚಿಕ್ಕ ಅಣೆಕಟ್ಟುಗಳನ್ನು ನಿರ್ಮಿಸಲಾಗಿದೆ. ವಾಟೆಹೊಳೆ (ಸು. ೩೦ ಕಿ.ಮಿ.) ಮತ್ತು ಬೀರಂಬೆಹಳ್ಳ, ಇವು ಯಗಚಿಯ ಉಪನದಿಗಳು. ಈ ನದಿಯಿಂದ ಬೇಲೂರು, ಹಾಸನ ಪಟ್ಟಣಗಳಿಗೆ ಕುಡಿಯುವ ನೀರಿನ ಸರಬರಾಜಾಗುತ್ತಿದೆ.

ಯಗಚಿ ನದಿಯು ಎಷ್ಟು ಪ್ರಾಮುಖ್ಯತೆಯನ್ನು ಹೊಂದಿದೆಯೆಂದರೆ ಇದರ ಅಸ್ತಿತ್ವದ ಕಾರಣದಿಂದಲೇ ಹೊಯ್ಸಳರು ತಮ್ಮ ಸಾಮ್ರಾಜ್ಯದ ರಾಜಧಾನಿಯನ್ನು ಶಶಕಪುರದಿಂದ ಬೇಲೂರಿಗೆ ವರ್ಗಾಯಿಸಿದರು. ಅಲ್ಲದೇ ಬೇಲೂರು ಒಂದು ಅದ್ಭುತ ರಾಜಧಾನಿಯಾಗಲು ಕಾರಣ ವಾಯಿತು.[೧] ಬೇಲೂರು ಒಂದು ದೊಡ್ಡ ಪಟ್ಟಣವಾಗಲೂ ಸಹ ಈ ನದಿಯು ಕಾರಣವಾಯಿತೆಂದು ದಾಖಲೆಗಳು ತಿಳಿಸುತ್ತವೆ.[೨] ಯಗಚೀ ನದಿಯಿಂದಾಗಿಯೇ ಬೇಲೂರು ಒಂದು ಧಾರ್ಮಿಕ ಮತ್ತು ವ್ಯಾಪಾರೀನಗರವಾಯಿತೆಂದೂ ಸಹ ತಿಳಿಯುತ್ತದೆ.[೩] ಇದನ್ನು ಅನಂತರಂಗಾಚಾರ್ ಸಹ ಅನುಮೋದಿಸುತ್ತಾರೆ.[೪]

ಬೇಲೂರಿನಲ್ಲಿ ಹೊಯ್ಸಳರು ಹಲವು ದೇವಾಲಯಗಳನ್ನು ನಿರ್ಮಿಸಲು ಪ್ರಾರಂಭಿಸಿದಾಗ ಅನೇಕ ವರ್ಗಕ್ಕೆ ಸೇರಿದ ಜನರು ಸೇವೆ ಸಲ್ಲಿಸಿದರೆಂದು ಅನೇಕ ದಾಖಲೆಗಳು ತಿಳಿಸುತ್ತವೆ.[೫] ಸುಮಾರು ೧೮ ಜಾತಿಯ ಜನರು, ಅವರಲ್ಲಿ ಅಸ್ಪೃಶ್ಯರೂ ಸಹ ಸೇರಿದ್ದರೆಂದೂ ತಿಳಿಯುತ್ತದೆ.[೬] ಬೇಲೂರಿನಲ್ಲಿ ನಡೆಯುವ ರಥೋತ್ಸವ ಮುಂತಾದ ಉತ್ಸವಗಳ ಸಂದರ್ಭದಲ್ಲಿ ಚೆನ್ನಕೇಶವ ದೇವಾಲಯವನ್ನು ಪ್ರವೇಶಿಸಿ ಪೂಜಿಸುವ ಮುನ್ನ ಸುಮಾರು ೮೮ ಬ್ರಾಹ್ಮಣರು, ಯಗಚೀನದಿಯಲ್ಲಿ ಪುಣ್ಯಸ್ನಾನ ಮಾಡಿ ಮುಂದೆ ಸಾಗುತ್ತಿದ್ದರೆಂದು ದಾಖಲೆ ತಿಳಿಸುತ್ತದೆ.[೭] ಇದು ಮುಂದೆ ದೊಡ್ಡ ಪಟ್ಟಣವೂ ಆಯಿತೆಂದು ಈ ದಾಖಲೆ ತಿಳಿಸುತ್ತವೆ.[೮] ಬೇಲೂರು ಪವಿತ್ರ ಧಾರ್ಮಿಕ ಸ್ಥಳವಾಗಲು ಹಾಗೂ ಇದೊಂದು ಇಂದ್ರಲೋಕದಂತೆ ಪ್ರಸಿದ್ಧಿಯಾಗಲು ಈ ಯಗಚೀ ನದಿಯೇ ಕಾರಣವೆಂದು ವಿದ್ವಾಂಸರು ತಿಳಿಸುತ್ತಾರೆ.[೯] ಅಲ್ಲದೆ ಎಸ್. ಕೆ. ಐಯ್ಯಂಗಾರ್‌ರವರು ಈ ಎಲ್ಲಾ ರೀತಿಯ ಪ್ರಸಿದ್ಧಿಯಿಂದ ಬೇಲೂರು ಅಭಿನವ ಅಕ್ಷೋಣಿವೈಕುಂಠ ಎಂಬುದಾಗಿ ಕರೆಸಿಕೊಂಡಿದ್ದನ್ನು ತಿಳಿಸುತ್ತಾರೆ.[೧೦] ಬೇಲೂರು ಹೆಚ್ಚಿನ ಜನಸಂಖ್ಯೆ, ಹಲವು ವೃತ್ತಿಗಳಿಗೆ ಸೇರಿದ ಜನರು, ಹಲವು ಕೈಗಾರಿಕೆಗಳನ್ನು ಹೊಂದಿದ ನಗರವಾಗಿ ಪರಿವರ್ತಿತವಾಗಲೂ ಈ ಯಗಚೀ ನದಿಯೇ ಕಾರಣವಾಗಿದೆಯೆಂದು ಅನೇಕ ಗ್ರಂಥಕರ್ತರು ತಿಳಿಸುತ್ತಾರೆ.[೧೧] ಕರ್ನಾಟಕದಲ್ಲಿ ಒಂದು ಸಾಮ್ರಾಜ್ಯ, ವೈಷ್ಣವಧರ್ಮ, ಭಾರತೀಯ ಸಂಸ್ಕೃತಿಯ ಲಕ್ಷಣ ಗಳು ಬೇಲೂರಿನಲ್ಲಿ ಬೆಳೆಯಲು ಈ ಯಗಚೀ ನದಿಯೇ ಕಾರಣವಾಯಿತೆಂದು ಹೇಳಬಹುದು. ಇಲ್ಲಿ ದೊರೆಯುವ ಹಲವು ಅದಿರಿನ ನಿಕ್ಷೇಪಗಳು, ವ್ಯಾಪಾರಿ ಮಾರುಕಟ್ಟೆಗಳು, ಹೊಯ್ಸಳ ಸಾಮ್ರಾಜ್ಯ, ಬೇಲೂರಿನ ವೈಷ್ಣವ ದೇವಾಲಯಗಳು, ವ್ಯಾಪಾರಿ ಕೇಂದ್ರಗಳು, ಹಲವು ಬೆಳೆಗಳ ಉತ್ಪಾದನೆ, ಅವುಗಳ ಮೇಲೆ ತೆರಿಗೆಗಳು ಮುಂತಾದವುಗಳು ಈ ವ್ಯಾಖ್ಯಾನಕ್ಕೆ ಉದಾಹರಣೆ ಯನ್ನು ನೀಡುತ್ತವೆ.[೧೨] ಯಗಚೀ ನದಿಯ ಕಾರಣದಿಂದಾಗಿ ಬೇಲೂರು ಮುಂತಾದ ಪ್ರದೇಶಗಳಲ್ಲಿ ಹಲವು ಬೆಳೆಗಳನ್ನು

* ಛೇರ್‌ಮನ್, ಇತಿಹಾಸ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮಾನಸ ಗಂಗೋತ್ರಿ, ಮೈಸೂರು - ೫೭೦ ೦೦೬

ಬೆಳೆಯಲು ಈ ನದಿಯ ಪಾತ್ರವು ಕಾರಣವಾಯಿತಲ್ಲದೇ, ಹಲವು ವ್ಯಾಪಾರಿ ವೃತ್ತಿಸಂಘಗಳು ಇಲ್ಲಿ ಬಂದು ನೆಲೆಸಲು, ಹಲವು ವಸ್ತುಗಳ ವ್ಯಾಪಾರ ಮಾಡಲು ಪ್ರಮುಖ ನಗರವಾಯಿತು.[೧೩] ಯಗಚೀ ನದಿಯ ಮುಖಜ ಭೂಮಿಯು ಇಲ್ಲಿಯ ಕಲೆ, ವಾಸ್ತು ಶಿಲ್ಪಗಳು, ಸಂಗೀತ ಮುಂತಾದವುಗಳ ಅಭಿವೃದ್ಧಿಗೆ ಕಾರಣ ವಾಯಿತು.[೧೪]

ಯಗಚೀನದಿಗೆ ಹಲವು ಅಣೆಕಟ್ಟುಗಳನ್ನು ಕಟ್ಟಿದ್ದ ಬಗ್ಗೆ ದಾಖಲೆಗಳಿವೆ. ಈ ಅಣೆಕಟ್ಟುಗಳು, ನೀರನ್ನು ಶೇಖರಣೆಮಾಡಿ ಹಲವು ಕಾಲುವೆಗಳ ಮೂಲಕ ನೀರನ್ನು ಕೃಷಿ ಭೂಮಿಗೆ ನೀರುಣಿಸುವ ಹಾಗೂ ಪಟ್ಟಣಗಳಿಗೆ ಕುಡಿಯುವ ನೀರನ್ನು ಒದಗಿಸುವ ಪವಿತ್ರ ನದಿಯಾಗಿ ಕಾರ್ಯನಿರ್ವಹಿಸಿದ್ದನ್ನು ಕಾಣುತ್ತೇವೆ. ಯಗಚೀ ನದಿಗೆ ಹಾಲವಾಗಿಲು, ಚಂದ್ರವಳ್ಳಿ, ಕಿತ್ತೂರು, ಹಳೇ ಮತ್ತು ಹೊಸ ಕಾಡ್ಲೂರುಗಳಲ್ಲಿ ಚಿಕ್ಕ ಅಣೆಕಟ್ಟುಗಳನ್ನು ಕಟ್ಟಿ, ಒಟ್ಟು ಸುಮಾರು ೪೪೬೯ ಎಕರೆ ಭೂಮಿಯಲ್ಲಿ ನೀರನ್ನು ಶೇಖರಿಸುವ ವ್ಯವಸ್ಥೆಮಾಡ ಲಾಗಿದ್ದಿತು.[೧೫] ಹೀಗೆ ನಿರ್ಮಿಸಿದ ಅಣೆಗಟ್ಟುಗಳಿಗೆ ಹಲವು ಕಾಲುವೆಗಳನ್ನು ನಿರ್ಮಾಣ ಮಾಡಿ ಕೃಷಿಭೂಮಿಗಳಿಗೆ ನೀರಾವರಿಯ ಸೌಲಭ್ಯವನ್ನು ಒದಗಿಸಿದ್ದನ್ನೂ ಸಹ ದಾಖಲೆಗಳಲ್ಲಿ ಕಾಣುತ್ತೇವೆ. ಉದಾ : ಚಕ್ರತೀರ್ಥ, ಅರೇಹಳ್ಳಿ, ಕಿತ್ತೂರು, ಕೂಡ್ಲೂರು, ಮದಗಟ್ಟ, ಶಂಕರತೀರ್ಥ, ಮುಂತಾದ ಕಡೆಗಳಲ್ಲಿ ಕಾಲುವೆಗಳನ್ನು ನಿರ್ಮಿಸಿ ಸುಮಾರು ೨೦೦೦ ಕ್ಕಿಂತ ಹೆಚ್ಚು ಭೂಮಿಗೆ ನೀರಾವರಿಯ ಸೌಲಭ್ಯವನ್ನು ನೀಡಿ ಸುಮಾರು ೧೦,೦೦೦ ಕ್ಕೂ ಹೆಚ್ಚಿನ ನೀರಾವರಿ ತೆರಿಗೆಯನ್ನು ವಸೂಲು ಮಾಡುತ್ತಿದ್ದುದಕ್ಕೆ ದಾಖಲೆಗಳಿರುತ್ತವೆ.[೧೬] ಬೇಲೂರಿನ ಕೃಷಿ ಭೂಮಿಯು ಹೆಚ್ಚಿನ ನೀರಾವರಿಯನ್ನು ಈ ನದಿಯಿಂದಲೇ ಪಡೆದಿತ್ತೆಂದು ತಿಳಿಯುತ್ತದೆ. ಇಲ್ಲಿ ಭೂಮಿ ಕೆಂಪು ಮಣ್ಣನ್ನು ಹೊಂದಿದ್ದು ಇದರ ಆಳದಲ್ಲಿ ಹಳದಿ ಬಣ್ಣದ ಭೂಮಿಯನ್ನು ಹೊಂದ್ದಿದ್ದು, ಇಲ್ಲಿ ಹಲವಾರು ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದುದರ ವಿವರಣೆ ದೊರೆಯುತ್ತದೆ. ಕಾಫಿ, ಭತ್ತ, ಮೆಣಸು, ಏಲಕ್ಕಿ, ಅಡಕೆ, ಕಬ್ಬು, ಆಲೂಗಡ್ಡೆ, ನೆಲಗಡಲೆ, ಮುಂತಾದವುಗಳನ್ನು ಈ ನದಿಯ ಮುಖಜಭೂಮಿಗಳಲ್ಲೇ ಬೆಳೆಯುತ್ತಿದ್ದನ್ನು ಕಾಣುತ್ತೇವೆ.[೧೭] ಈ ವಸ್ತುಗಳಿಂದ ಹೆಚ್ಚು ಆದಾಯವು ಸರ್ಕಾರಕ್ಕೆ ಬರುತ್ತಿತ್ತು. ಕಾರಣ ಸರ್ಕಾರ ಉಳುಮೆಯ ಮೇಲಿನ ತೆರಿಗೆ ಭೂಮಿಯ ಮೇಲಿನ ತೆರಿಗೆ, ನೇಗಿಲಿನ ಮೇಲಿನ ತೆರಿಗೆ, ಶ್ರಮಿಕರ ಮೇಲಿನ ತೆರಿಗೆ, ಕರಣಿಕರ ತೆರಿಗೆ, ಮಾರಾಟದ ತೆರಿಗೆ ಮುಂತಾದವುಗಳನ್ನು ವಸೂಲಿ ಮಾಡುತ್ತಿದ್ದುದು ಕಂಡು ಬರುತ್ತದೆ.[೧೮]

ಯಗಚಿ ನದಿಯು ತನ್ನ ಮುಖಜಭೂಮಿಯಲ್ಲಿ ವ್ಯಾಪಾರಿ ಸಂಘಗಳು, ಹೂವು ಮಾರುವವರು, ತೋಟ ಮಾಡುವವರು, ಮಡಕೆ ಮಾಡುವವರು, ಬೆತ್ತದಕೆಲಸ ಮಾಡುವವರು, ಕಬ್ಬಿಣ, ಚಿನ್ನದ ಕೆಲಸವನ್ನು ಮಾಡುವವರು, ಸಂಗೀತ ನೃತ್ಯ ಮಾಡುವ ವರ್ಗ, ಪುರೋಹಿತ ವರ್ಗ ಮುಂತಾದ ವೃತ್ತಿಪರ ವರ್ಗಗಳು ವಾಸಿಸಲು ಅವಕಾಶ ಮಾಡಿಕೊಟ್ಟಿದೆ. ಅನೇಕ ಪಟ್ಟಣಗಳಲ್ಲಿ ಅದರಲ್ಲೂ ಬೇಲೂರು ಹಳೇಬೀಡು ಮುಂತಾದ ಕಡೆಗಳಲ್ಲಿ ಈ ವರ್ಗದವರು ಹೆಚ್ಚಾಗಿ ವಾಸವಾಗಿದ್ದುದಕ್ಕೆ, ಈ ನದಿಯೇ ಕಾರಣವೆಂದು ಹೇಳಬಹುದು.[೧೯]

ಯಗಚೀ ನದಿಗೆ ಕಟ್ಟಿರುವ ಅಣೆಕಟ್ಟುಗಳಲ್ಲಿ ಅಂದಿನ ಕಾಲದ ತಂತ್ರಜ್ಞಾನದ ಪರಿಣತೆಯನ್ನು ಹಲವು ಕಡೆ ಕಾಣ ಬಹುದಾಗಿದೆ. ಕರ್ನಲ್ ಮೆಕೆಂಜಿ ದಾಖಲೆಗಳಲ್ಲಿ.[೨೦] ಈ ನದಿಯಿಂದ ಕುಡಿಯುವ ನೀರನ್ನು ಬೇಲೂರು ಮತ್ತು ಹಳೇಬೀಡಿಗೆ ಸರಬರಾಜು ಮಾಡುತ್ತಿದ್ದುದು ಅವುಗಳ ಕಾಲುವೆ ಗಳು ಮುಂತಾದವುಗಳನ್ನು ಹಾಸನ - ಬೇಲೂರುಗಳ ಮಧ್ಯೆ ಕಾಣಬಹುದು.[೨೧]

ಯಗಚೀನದಿಯು ರಾಜ್ಯದ ಸುಮಾರು ೧೦.೪೯ ಲಕ್ಷ ಎಕರೆಗಳ ಭೂಮಿಯಲ್ಲಿ ಸುಮಾರು ೧೦,೦೦೦ ಕ್ಕೂ ಹೆಚ್ಚು ಎಕರೆ ಭೂಮಿಗೆ ನೀರಾವರಿ ಸೌಲಭ್ಯವನ್ನು ಕಲ್ಪಿಸಿತ್ತು.[೨೨] ಈ ಮುಖಜಭೂಮಿಯಲ್ಲಿ ಹಲವು ಹಳ್ಳಿ, ಪಟ್ಟಣಗಳ ನಿರ್ಮಾಣಕ್ಕೆ ಅವಕಾಶ ಮಾಡಿಕೊಟ್ಟಿದ್ದಲ್ಲದೆ ಕೃಷಿ ಭೂಮಿಯ ವಿಸ್ತರಣೆಗೆ ಪ್ರೋತ್ಸಾಹ ನೀಡಿ ಜನರಿಗೆ ಹಲವು ತೆರಿಗೆಗಳಲ್ಲಿ ವಿನಾಯಿತಿಯನ್ನು ದೊರಕಿಸಿಕೊಟ್ಟಿದ್ದರು.[೨೩] ಇಲ್ಲಿ ಅನೇಕ ಸಂತೆಗಳು ಹಾಗೂ ಸಣ್ಣ ಪುಟ್ಟ ಮಾರುಕಟ್ಟೆಗಳನ್ನು ಸ್ಥಾಪಿಸಲು ಅವಕಾಶ ಸಿಕ್ಕಿ ಈ ಮುಖಜ ಭೂಮಿಯಲ್ಲಿ ಹಲವು ಸಂತೆಗಳನ್ನು ಕಾಣುತ್ತೇವೆ. ಉದಾ: ಬೇಲೂರು, ಹಳೇಬೀಡು, ಹಾಸನ, ಜಾವಗಲ್, ಮುಂತಾದವು ಗಳನ್ನು ಕಾಣುತ್ತೇವೆ.[೨೪]

ಇಷ್ಟೆಲ್ಲಾ ಸೌಲಭ್ಯವನ್ನು ಒದಗಿಸಿದ್ದ ಈ ಯಗಚೀ ನದಿಯು ಹಲವು ತೋಟಗಳ ನಿರ್ಮಾಣಕ್ಕೆ ಕಾರಣವಾಯಿತಲ್ಲದೆ, ಉತ್ತಮ ತಳಿಯಹಣ್ಣುಗಳನ್ನು, ಬೆಳೆಸಲು ಅವಕಾಶ ಮಾಡಿ ಕೊಟ್ಟಿತು. ಉದಾ : ಬಾಳೆಹಣ್ಣು, ಮಾವು, ಹಲಸು, ಕಿತ್ತಳೆ, ದಾಳಿಂಬೆ, ನಿಂಬೆ, ದ್ರಾಕ್ಷಿ, ನೇರಳೇಹಣ್ಣುಗಳ ಬೆಳೆಗೆಳಿಗೆ ಪ್ರಸಿದ್ಧಿಯಾದ ಪ್ರದೇಶಗಳನ್ನು ಈ ಪ್ರದೇಶದಲ್ಲಿ ಕಾಣುತ್ತೇವೆ.[೨೫] ಇದಲ್ಲದೆ ಬದನೆ, ಹೀರೆ, ಸೋರೆ, ಕುಂಬಳ, ಹಾಗಲ, ಸೌತೆ, ಇತ್ಯಾದಿ ತರಕಾರಿಗಳಿಗೂ ಅನುಕೂಲಿಸಿದೆ.[೨೬] ಉತ್ತಮ ತರಕಾರಿಗಳನ್ನು ಬೆಳೆಯಲು ಅನುಕೂಲ ಇವಲ್ಲದೆ ಸಾಸಿವೆ, ನವಣೆ, ಜೋಳ, ಭತ್ತ, ರಾಗಿಯನ್ನೂ ಸಹ ಬೆಳೆಯುತ್ತಿದ್ದರು.[೨೭]

ಸುಮಾರು ೧೧ನೇ ಶತಮಾನದಿಂದ ಇತ್ತೀಚಿನವರೆಗೂ ಸಹ ಕೃಷಿ, ಕೈಗಾರಿಕೆ, ಸಾರಿಗೆ ಸಂಪರ್ಕ ದೇಶದ ಆದಾಯ ಮುಂತಾದ ಕ್ಷೇತ್ರಗಳಿಗೆ ಯಗಚೀನದಿ ತನ್ನ ಸೇವೆಯನ್ನು ಸಲ್ಲಿಸುತ್ತಾ ಬಂದಿದೆ. ಇತ್ತೀಚೆಗೆ ಕರ್ನಾಟಕ ಸರ್ಕಾರವು ಕೃಷಿಗೆ ಹೆಚ್ಚಿನ

ಪ್ರೋತ್ಸಾಹ ನೀಡಬೇಕೆಂದು ತೀರ್ಮಾನಿಸಿ ದೇಶದಲ್ಲಿರುವ ಸಾವಿರಾರು ಕೆರೆಕಟ್ಟೆಗಳ ಹೂಳೆತ್ತುವಿಕೆ, ನದಿಯ ಮುಖಜ ಭೂಮಿಗಳಲ್ಲಿ ಕೃಷಿ ವಿಸ್ತರಣೆಗೆ ಅವಕಾಶವನ್ನು ನೀಡಿದ್ದು, ವರ್ಲ್ಡ್ ಬ್ಯಾಂಕ್‌ನಿಂದ ಸಾಲವನ್ನು ಪಡೆದು ಬೇಲೂರಿನಲ್ಲಿ ಯಗಚೀನದಿಗೆ ಒಂದು ದೊಡ್ಡ ಅಣೆಕಟ್ಟನ್ನು ಕಟ್ಟಿ ಆದಾಯ ಪಡೆಯುವ ಕಾರ್ಯವಲ್ಲದೆ ಅದರ ಮೂಲಕ ಸಾವಿರಾರು ಎಕರೆ ಭೂಮಿಗೆ ನೀರಾವರಿ ಸೌಲಭ್ಯ ಹಾಗೂ ಕುಡಿಯುವ ನೀರಿನ ಸೌಲಭ್ಯವನ್ನು ಒದಗಿಸಲು ಪ್ರಯತ್ನ ಪಡುತ್ತಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕೊಹೆಲ್ಲೋ., ಹೊಯ್ಸಳ ವಂಶ, ಪುಟ. ೩; ಎ.ಕ. ಸಂ. ೫, ಕಡೂರು, ಪು. ೧೪೨.

೨. ಎಂ. ಎ. ಆರ್. ಅ ೧೯೨೪, ಪು. ೩೧, ಎ.ಕ. ಸಂ : ೬ ಜಿ. ಮ. ೧೬೦.

೩. ಎಸ್. ಕೆ. ಐಯ್ಯಂಗಾರ್., ಏನ್ಸಿಯಂಟ್ ಇಂಡಿಯಾ, ಪು. ೨,೩೦

೪. ಅನಂತರಂಗಾಚಾರ್., ಭಾರತೀಯ ಕಲಾಕ್ಷೇತ್ರದರ್ಶಿನಿ, ಪು. ೨೬೧ - ೨೬೨.

೫. 'ವೇಲಾಪುರಿ ಮಹಾತ್ಮ್ಯ', ಎಂ.ಎ.ಆರ್., ೧೯೩೮, ಪು. ೧೦೧-೧೦೩.

೬. ಡೆರೆಟ್ ಜೆ.ಡಿ.ಎಂ.

೭. 'ವೇಲಾಪುರಿ ಮಹಾತ್ಮ್ಯ', ಎಂ. ಎ. ಆರ್., ೧೯೩೯, ಪು. ೧೦೫.

೮. ಅದೇ ಪು. ೧೦೫-೧೦೬.

೯. ಡಾ. ಎಸ್. ಶ್ರೀಕಂಠಶಾಸ್ತ್ರಿ., ಹೊಯ್ಸಳ ವಾಸ್ತುಶಿಲ್ಪ -ಪು. ೨, ೨೦.

೧೦. ಎಸ್. ಕೆ. ಐಯ್ಯಂಗಾರ್., ಏನ್ಸಿಯಂಟ್ ಇಂಡಿಯಾ - ಪು. ೨೩೦ -೨೩೪.

೧೧. ವಸಂಶ ಶೆಟ್ಟಿ., ಸ್ಟಡೀಸ್ ಇನ್‌ಕರ್ನಾಟಕ ಹಿಸ್ಟರಿ - ಪು. ೫೪.

೧೨. ಎಂ. ರಾಧ., ಲೈಫ್ ಡ್ಯೂರಿಂಗ್‌ದ ಟೈಮ್ಸ್ ಆಫ್ ಹೊಯ್ಸಳ ನರಸಿಂಹ, ೩, ಪು. ೮೯, ಎ.ಕ. ಸಂ. ೫, ಬೇಲೂರು ೧೫೫.

೧೩. ಎಂ. ಎ. ಆರ್. ೧೯೦೬.

೧೪. ವಸಂತ ಶೆಟ್ಟಿ., ಅದೇ, ಹಿಸ್ಟರಿ.

೧೫. ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್, ಸಂಪುಟ - ೧, ಪು. ೧೫೧ - ೧೫೩.

೧೬. ಮೈಸೂರು ಗ್ಯಾಸೆಟಿಯರ್, ಸಂಪುಟ - ೩, ಅಧ್ಯಾಯ-೩, ನೀರಾವರಿ, ಪು. ೧೭೩-೧೭೪.

೧೭ ಕನ್ನಡ ವಿಷಯ ವಿಶ್ವಕೋಶ, ಪು. ೧೦೫೯-೧೦೬೬.

೧೮. ಮೈಸೂರು ಗ್ಯಾಸೆಟಿಯರ್, ಸಂಪುಟ - ೫ ಪು. ೧೭೩.

೧೯. ಕೂಹೆಲೊ., ಅದೇ, ಪು. ೧೮, ಎ.ಕ. ಸಂ. ೫., ಎಂ. ಎ. ಆರ್. ೧೯೨೪, ಎ.ಕ. ಸಂ. ೪ ಮುಂತಾದವು.

೨೦. ಎಂ. ಎ. ಆರ್. ೧೯೧೧., ಪು. ೫೧.

೨೧. ಎ. ಕ. ೧೫, ಬೇಲೂರು ೩೦೧- ಎಂ. ಎ. ಆರ್. ೧೯೧೧., ಪು. ೫೨.

೨೨. ದಿವಾಕರ್ ಆರ್. ಆರ್., ಕರ್ನಾಟಕ ಥ್ರೂ ದಿ ಎಜಸ್ -ಎ.ಕ. ಸಂ. : ೫.

೨೩. ಎಂ.ಎ.ಆರ್. ೧೯೧೨, ಪ್ಯಾರಾ ೯೧, ಪು. ೪೫.

೨೪. ಎ. ಕ. ಸಂ. : ೫, ಪು. ೨೬೧, ಎಂ. ಎ. ಆರ್. ೧೯೧೨, ಪು. ೪೫-೪೭.

೨೫. ಮಲ್ಲಿಕಾರ್ಜುನ., ಸೂಕ್ತಿ ಸುಧಾರ್ಣವ, ಪುಟ ೭೦-೭೧, ದೇವೀಪುರಾಣ, ಪುಟ. ೪೦, ಸೋಮಚರಿತ ಪು. ೮೩.

೨೬. ಬಸವರಾಜ ರಗಳೆ., ಪು. ೮೮, ೫೯-೫೮, ಧರ್ಮಾಮೃತ., ಪು. ೩೨೦, ಬಸವವಚನ., ಪು. ೩೫, ೭೩.

೨೭. ಸಿದ್ದರಾಮಚರಿತೆ., ಪು. ೧೩೪, ಎ. ಕ. ಸಂ. ೬.

ಡಾ|| ಕೆ. ವಸಂತಲಕ್ಷ್ಮಿ*

# ಹಾಸನ ಜಿಲ್ಲೆಯ ಕೇಶವಪುರಗಳು

ಯಂ ಶೈವಾಃ ಸಮುಪಸಾತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ। ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವಃ ಕರ್ತೇತಿ ನೈಯ್ಯಾಇಕಾಃ ಅರ್ಹನ್ನಿತ್ಯತಿ ಜೈನ ಶಾಸನರತಾಃ ಕರ್ಮೇತಿ ಮೀಮಾಂಸಕಾಃಸೋಯಂ ವೋ ವಿಂಧಾತು ವಾಂಛಿತಫಲಂ ಶ್ರೀ ಕೇಶವೇಶಸ್ಸದಾ"॥

ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ವಿಷ್ಣುವಿನ ಆರಾಧನೆ ನಡೆಯುತಿದ್ದು, ವೈಷ್ಣವ ಮತವು ಪ್ರಚಲಿತದಲ್ಲಿತ್ತು. ವಿಷ್ಣುವನ್ನು ನಾರಾಯಣ, ವರಾಹ, ನಾರಸಿಂಹ, ವಾಸುದೇವ ಮೊದಲಾದ ರೂಪಗಳಿಂದ ಪೂಜಿಸುತ್ತಿದ್ದರು. ಕನ್ನಡ ಭಾಷೆಯ ಪ್ರಥಮ ಶಾಸನವಾದ 'ಹಲ್ಮಿಡಿ ಶಾಸನವು' ವಿಷ್ಣುವಿನ ಪ್ರಾರ್ಥನೆಯೊಂದಿಗೆ ಆರಂಭವಾಗಿರುವುದು, ಬಾದಾಮಿ ಚಲುಕ್ಯರ ದೊರೆ ಮಂಗಳೇಶನನ್ನು ಶಾಸನವೊಂದು 'ಪರಮಭಾಗವತ'ನೆಂದು ಉಲ್ಲೇಖಿಸಿರುವುದನ್ನು ಇಲ್ಲಿ ಸ್ಮರಿಸಬಹುದು ಕರ್ನಾಟಕದಲ್ಲಿ ವಿಶೇಷವಾಗಿ ಕ್ರಿ.ಶ. ೮ನೇ ಶತಮಾನದ ನಂತರ, ಚೋಳರ ಸಂಪರ್ಕದ ಫಲವಾಗಿ ವೈಷ್ಣವ ಮತವು ಮತ್ತಷ್ಟು ವಿಕಾಸ ಗೊಂಡಿದೆ. ಕ್ರಿ.ಶ. ೧೨ನೇ ಶತಮಾನದಲ್ಲಿ ಶ್ರೀವೈಷ್ಣವ ಮತದ ಆಚಾರ್ಯರಾದ ಶ್ರೀ ರಾಮಾನುಜರು ಕನ್ನಡನಾಡಿಗೆ ಬಂದು ಧರ್ಮ ಪ್ರಸಾರ ಮಾಡಿದ್ದರ ಫಲವಾಗಿ ವೈಷ್ಣವ ಮತವು ಜನಪ್ರಿಯ ಮತವಾಗಿ ಪರಿಣಮಿಸಿದ ಘಟನೆಯು ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲೊಂದು ಮೈಲಿಗಲ್ಲಾಗಿದೆ. ಆ ಮಹತ್ತರ ಇತಿಹಾಸದ ಪರಿಣಾಮದ ಒಂದಂಶವಾಗಿ ಹೊಯ್ಸಳರನಾಡಿನಲ್ಲಿ ಹಲವೆಡೆ ಕೇಶವಪುರಗಳು ನಿರ್ಮಾಣವಾದವು. ಹಾಸನ ಜಿಲ್ಲೆಯು ಹೊಯ್ಸಳರನಾಡಿನ ಕೇಂದ್ರಭಾಗವಾಗಿದ್ದು. ಆ ಜಿಲ್ಲೆಯಲ್ಲಿ ನಿರ್ಮಿಸಲಾಗಿದ್ದ ಕೇಶವಪುರಗಳ ಬಗ್ಗೆ ಇಲ್ಲಿ ಗಮನಿಸಲಾಗಿದೆ.

ಹಾಸನ ಜಿಲ್ಲೆಯಲ್ಲಿ ಹೊಯ್ಸಳ ಅರಸರ ಕಾಲದಲ್ಲಿ ಅನೇಕ ಕೇಶವ ದೇವಾಲಯಗಳು ನಿರ್ಮಾಣವಾಗಿವೆ. 'ಕೇಶವ'ನ ಮೂರ್ತಿಯ ಸೌಂದರ್ಯವನ್ನು, ಸೊಬಗನ್ನು ಗಮನಿಸಿ ಹಲವೆಡೆ ಇದನ್ನು 'ಚೆನ್ನಕೇಶವ'ನೆಂದೂ, ಕೆಲವೆಡೆ 'ಸೌಮ್ಯ ಕೇಶವ'ನೆಂದೂ ಕರೆದಿದ್ದಾರೆ. ಹೊಯ್ಸಳರ ಕಾಲದ ವೈಷ್ಣವ ದೇವಾಲಯಗಳಲ್ಲಿ ಬೇಲೂರಿನ ಚೆನ್ನಕೇಶವ ಮತ್ತು ಸೋಮನಾಥಪುರದ ಕೇಶವ ದೇವಾಲಯಗಳು, ಕೊಂಡಜ್ಜಿಯ ಕೇಶವನಮೂರ್ತಿಯು ಜಗತ್ಪ್ರಸಿದ್ಧವಾಗಿವೆ.

ಕರ್ನಾಟಕದಲ್ಲಿ ಕ್ರಿ.ಶ. ೧೧ನೇ ಶತಮಾನದಿಂದ ವಿಷ್ಣುವಿನ 'ಕೇಶವ' ಎಂಬ ರೂಪದ ಆರಾಧನೆಯು ಪ್ರಚಲಿತಗೊಂಡಿದೆ. ಹಾಸನ ಜಿಲ್ಲೆಯ ಕೇಶವದೇವಾಲಯಗಳಲ್ಲೆಲ್ಲ ಸಕಲೇಶಪುರ ತಾಲೂಕಿನ ಹಳೇಬೇಲೂರಿನ ಕೇಶವದೇವಾಲಯವು (ಕ್ರಿ.ಶ. ೧೧೯೫) ಪ್ರಾಚೀನವಾದ ದೇವಾಲಯವಾಗಿದೆ. ವೈದಿಕ ಪರಂಪರೆಯಲ್ಲಿ ನಾರಾಯಣನ ಚತುರ್ವಿಂಶತಿ ಮೂರ್ತಿಗಳಲ್ಲಿ ಒಂದಾದ ಕೇಶವನ ರೂಪವು ಹೆಚ್ಚು ಮಹತ್ವದ್ದಾಗಿದೆ. ಕೇಶವನ ಮಹಿಮೆಯನ್ನು ಪುರಾಣವು - ವಿಷ್ಣುವು ಕೇಶಿ ಎಂಬ ರಾಕ್ಷಸನನ್ನು ವಧಿಸಿ ಲೋಕ ಕಲ್ಯಾಣವನ್ನುಂಟುಮಾಡಿ ದೇವತೆಗಳ ಕಷ್ಟವನ್ನು ಪರಿಹರಿಸಿದ್ದರಿಂದ 'ಕೇಶವ'ನೆನ್ನಿಸಿದನು ಎಂದು ತಿಳಿಸುತ್ತದೆ. ಇದರಂತೆ, *'ಕೇಶವಃ ಕ್ಲೇಶನಾಶಾಯ'* ಎಂಬ ಉಕ್ತಿಯೂ ಇದೆ. ಕೇಶವನ ರೂಪವು ಪರವಾಸುದೇವನಿಂದ ಸ್ವತಃರೂಪುಗೊಂಡ ಮೊದಲ ರೂಪವಾಗಿದ್ದು, ಈ ರೂಪದಲ್ಲಿ ಭಗವಂತನು ಜ್ಞಾನ, ಐಶ್ವರ್ಯ, ಬಲ, ವೀರ್ಯ, ಶಕ್ತಿ, ತೇಜಸ್ಸು ಎಂಬ ಷಡ್ಗುಣೈಶ್ವರ್ಯ ಸಹಿತನಾಗಿರುತ್ತಾನೆ. ಆದ್ದರಿಂದಲೇ ವಿಷ್ಣುವಿನ ಈ ರೂಪವು ಅತ್ಯಂತ ಮಹತ್ವದ್ದೆಂದು ಪರಿಗಣಿಸಲಾಗಿದೆ. ಕೇಶವನ ಶಿಲ್ಪವು ಸಮಭಂಗಿಯಲ್ಲಿ ಸ್ಥಾನಿಕವಾದ ಶಿಲ್ಪವಾಗಿದ್ದು ದೇವನು ಚತುರ್ಭುಜಗಳಲ್ಲಿ ಕ್ರಮವಾಗಿ ಪದ್ಮ ಶಂಖ ಚಕ್ರ ಮತ್ತು ಗದೆ ಗಳನ್ನು ಧರಿಸುತ್ತಾನೆ. ಸರ್ವಾಭರಣಗಳಿಂದ ಅಲಂಕೃತನಾದ ದೇವನ ಎರಡೂ ಪಕ್ಕದಲ್ಲಿ ಶ್ರೀದೇವಿ ಭೂದೇವಿಯರು ಇರುತ್ತಾರೆ. ಇಂಥ ಸುಂದರವಾದ ಅನೇಕ ಕೇಶವನ ಶಿಲ್ಪಗಳನ್ನು ಹೊಯ್ಸಳರ ದೇವಾಲಯಗಳಲ್ಲಿ ಕಾಣಬಹುದಾಗಿದೆ.

ಕ್ರಿ.ಶ. ೧೧೩೮ರಲ್ಲಿ ಕನ್ನಡನಾಡಿಗೆ ಬಂದಿದ್ದ ಶ್ರೀ ರಾಮಾನುಜಾಚಾರ್ಯರು ಸಮಾಜದ ಎಲ್ಲ ವರ್ಗದ ಜನರನ್ನು ಶ್ರೀವೈಷ್ಣವ ಪಂಥಕ್ಕೆ ಸೇರಲು ಅನುವು ಮಾಡಿಕೊಟ್ಟರು. ಶ್ರೀವೈಷ್ಣವ ಮತವು ಯಾರು ಬೇಕಾದರೂ ದೀಕ್ಷೆ ಪಡೆದು 'ವಿಷ್ಣುವಿನ ದಾಸ' ನಾಗಬಹುದೆಂದಿತು. ದಾಸನಾದವನು ಪ್ರತಿದಿನವು ತಪ್ತಮುದ್ರಾಂಕನ, ಪುಂಡ್ರಗಳನ್ನು ಧರಿಸಬೇಕೆಂದು, ಮಂತ್ರ (ಧ್ಯಾನ), ನಮನ ಮತ್ತು ಇಜ್ಯೆ (ಪೂಜೆ)ಗಳನ್ನು ಆಚರಿಸಬೇಕೆಂದು ವಿಧಿಸಿತ್ತು. ತನ್ನ ಪಾಲಿನ ಕರ್ತವ್ಯವನ್ನು ಭಕ್ತಿಯಿಂದ ಮಾಡಿ ವಿಷ್ಣುವಿನ ಚರಣಗಳಲ್ಲಿ ಶರಣಾಗುವುದನ್ನೇ 'ಪ್ರಪತ್ತಿ' ಎಂದು ಕರೆದಿದ್ದು, 'ಪ್ರಪತ್ತಿ'ಯ ಮಾರ್ಗದಲ್ಲಿ ನಡೆದರೆ ಮೋಕ್ಷ ಸಾಧ್ಯವೆಂದು ತಿಳಿಸುತಿತ್ತು. ಇದರಿಂದ ವಿವಿಧ ವರ್ಗದ ಜನರು 'ದಾಸ'ರಾಗಿ ದೇವರ ಸೇವೆಯಲ್ಲಿ ಪಾಲ್ಗೊಳ್ಳಲು ಅವಕಾಶವಾಯಿತು. ರಾಮಾನುಜಾಚಾರ್ಯರು ದೇವರ ಪೂಜಾ

* ೨೫೬, ೧೧ನೇ ಮುಖ್ಯರಸ್ತೆ, ಶ್ರೀನಿವಾಸನಗರ, ಬೆಂಗಳೂರು - ೫೬೦ ೦೫೦

ವಿಧಾನದಲ್ಲೂ ನಾನಾ ಕ್ರಮಗಳನ್ನು ರೂಪಿಸಿದರು. ದೇವಾಲಯದಲ್ಲಿ ಧ್ರುವಬೇರ (ಮೂಲದೇವರು)ದ ಜೊತೆಗೆ ಸ್ನಪನಬೇರ, ಕೌತುಕಬೇರ, ಉತ್ಸವಬೇರಗಳ ಪೂಜೆ ಆರಂಭವಾಯಿತು. ಷೋಡಶೋಪಚಾರದ ಪೂಜಾಕ್ರಮದೊಂದಿಗೆ ನಮ್ಮಾಳ್ವಾರ್‌ರ ತಿರುವಾಯ್ಮೊಟಿ ಮತ್ತು ಇತರ ತಮಿಳಿನ ದಿವ್ಯ ಪ್ರಬಂಧಗಳ ಪಠನವನ್ನು ಪೂಜೆಯ ಒಂದು ಭಾಗವಾಗಿಸಿ ಆಚರಣೆಗೆ ತಂದರು. ವಿಶೇಷವಾಗಿ ವಿಷ್ಣುವನ್ನು 'ಅಲಂಕಾರ ಪ್ರಿಯೋ ವಿಷ್ಣುಃ' ಎಂದು ತಿಳಿಯಲಾಗಿದ್ದು, ದೇವರಿಗೆ ನಾನಾ ರೀತಿಯ ಅಲಂಕಾರದ ಪೂಜೆಗಳು ಆರಂಭವಾದವು. ದೇವರ ಪೂಜಾಸಾಮಗ್ರಿಗಳನ್ನು ಸಿದ್ಧಪಡಿಸುವುದು ಪೂಜೆಯಷ್ಟೇ ಪವಿತ್ರವಾದ ಕೈಂಕರ್ಯವಾಯಿತು. ಇದರಿಂದ 'ಹೂದೋಟ'ಗಳನ್ನು ಬೆಳೆಸುವುದು, ಅದಕ್ಕಾಗಿ ಭೂಮಿದಾನ ನೀಡುವುದು, ಮಾಲೆಕಾರನ ನೇಮಕಾತಿ, ಇದರಂತೆ ನೈವೇದ್ಯವನ್ನು ಸಿದ್ಧಪಡಿಸಲು ಅಗತ್ಯವಿದ್ದ ಬಾಣಸಿಗ, ಕೊಟ್ಟಾರ, ದವಸಿಗ, ರೈತಾಪಿಜನ ಎಲ್ಲರೂ 'ಕೈಂಕರ್ಯ'ದಲ್ಲಿ ತೊಡಗಿದರು. ದೇವಾಲಯದ ನಿತ್ಯದ ಕೆಲಸಗಳಲ್ಲಿ ನಿಯುಕ್ತರಾದ ಈ ಪರಿವಾರದ 'ದಾಸ' ಜನರೆಲ್ಲರೂ, ದೇವಾಲಯಕ್ಕೆ ಬಿಟ್ಟ ದೇವದಾನದ ಭೂಮಿಯಲ್ಲೇ ನೆಲೆಸಿರುತ್ತಿದ್ದು. ದೇವಾಲಯವನ್ನು ಸುತ್ತುವರೆದ ಈ ಭಾಗವು ಚಿಕ್ಕ ಸಮಾಜವೇ ಆಗಿರುತ್ತಿತ್ತು. ಇಂಥ ಭೂಭಾಗವೇ 'ಕೇಶವಪುರ'ಗಳಾಗಿದ್ದು ಇವುಗಳ ಬಗೆಗೆ ಶಾಸನಗಳಿಂದ ತಿಳಿಯುವ ಕೆಲವು ವಿವರಗಳನ್ನಿಲ್ಲಿ ಪರಿಶೀಲಿಸಲಾಗಿದೆ. ಸಕಲೇಶಪುರ ತಾಲೂಕಿನ ಹಳೇಬೇಲೂರಿನ ಶಾಸನವು (ಸಪುರ ೪೫) ಕ್ರಿ.ಶ. ೧೦೯೫ರಲ್ಲಿ ಕದಂಬ ರಾಣಿ ಮೇಚಲ ದೇವಿಯವರು ಮಹಾಗ್ರಹಾರವಾದ ಹಾರುವ ಬೆಲಹೂರಿನಲ್ಲಿ 'ವಾಸು ದೇವರನ್ನು' ಪ್ರತಿಷ್ಠೆ ಮಾಡಿಸಿ ದೇವಾಲಯವನ್ನೆತ್ತಿಸಿ ದಾನ ಬಿಡುತ್ತಾಳೆ. ಇಲ್ಲಿಯ ಶಾಸನದಲ್ಲಿ. ದೇವರ ಬ್ರಹ್ಮಹಳ್ಳಿಯಾಗಿ ಕುಂಬಾರಹಳ್ಳಿಯನು ಅರಸಿಯಪುರ ಮಾಡಿ ಸುಬ್ರಾಹ್ಮಣರಿಗೆ ಸರ್ವನಮಸ್ಯದತ್ತಿಯಾಗಿ ಬಿಟ್ಟರೆಂದು ತಿಳಿಸುತ್ತದೆ. ಇದು ಮಹಾಗ್ರಹಾರವಾಗಿತ್ತಲ್ಲದೇ 'ಕೇಶವಪುರ' ವೆನ್ನಿಸಲಿಲ್ಲವೆಂಬುದು ಗಮನಾರ್ಹ ಅಂಶವಾಗಿದೆ. ಕ್ರಿ. ಶ. ೧೧೧೭ರಲ್ಲಿ ಬೇಲೂರಿನಲ್ಲಿ ಹೊಯ್ಸಳ ವಿಷ್ಣುವರ್ಧನ ದೇವನು ಶ್ರೀ ವಿಜಯನಾರಾಯಣ, ಶ್ರೀ ಚೆನ್ನಕೇಶವ ಮತ್ತು ಲಕ್ಷ್ಮೀನಾರಾಯಣ ದೇವಾಲಯಗಳಿಗೆ ವೇಳಾಪುರದಬೀಡು ವಿಮಸಂಧಿ ಹನ್ನೆರಡು, ಕೊಡಗಿನಾಡ ಬಾರಸಿ ಹನ್ನೆರಡು, ನೆಕ್ಕನಾಡು, ಕೆಸಕೋಡು ಮೊದಲಾದ ಹಲವು ಭಾಗಗಳನ್ನು ಧಾರಾಪೂರ್ವಕವಾಗಿ ಬಿಡುತ್ತಾನೆ. ಆದರೆ ಈ ವಿಶಾಲವಾದ ಭಾಗವನ್ನಾಗಲೀ, ಯಾವುದೇ ಗ್ರಾಮವನ್ನಾಗಲೀ 'ಕೇಶವಪುರ' ವೆಂದು ಉಲ್ಲೇಖಿಸಿರುವುದಿಲ್ಲ. ಇದರಿಂದ ಹೊಯ್ಸಳನಾಡಿನಲ್ಲಿ ಶ್ರೀರಾಮಾನುಜಾಚಾರ್ಯರ ಪ್ರಭಾವದಿಂದ ನಂತರದ ಕಾಲದಲ್ಲಿ 'ಕೇಶವಪುರ'ಗಳು ರೂಪುಗೊಂಡವೆಂದು ತಿಳಿಯಬಹುದಾಗಿದೆ. ಕ್ರಿ. ಶ. ೧೧೭೪ರ ಬೇಲೂರಿನ ಶಾಸನವು (ಬೇ. ೧೭) ಶ್ರೀ ವೀರಬಲ್ಲಾಳ ದೇವರು ಶ್ರೀ ವಿಜಯನಾರಾಯಣದೇವರಿಗೆ 'ಜಪಹೋಮನಿತ್ಯಸೇವೆ ಪರಾಯಣಂ'ಗಳನ್ನು ಮಾಡುತ್ತಿದ್ದ ಶ್ರೀಕೇಶವಪುರದ ೧೨೦ ಜನ ಭಟ್ಟರಿಗೆ ಸರ್ವಸಮಸ್ಯವಾಗಿ ದೇವಳಿಗೆನಾಡಿನ ಹಿರಿಯ ಮಗುಳಿಹಳ್ಳಿಗಳನ್ನು ಚಿಕ್ಕನಹಳ್ಳಿಯನ್ನು ಕೊಟ್ಟನೆಂದು ತಿಳಿಸಿದೆ. ಇದರಂತೆ ಶುಭಪುರದ ೨೧ ಜನ ಭಟ್ಟರಿಗೆ ಬೆಣ್ಣೆಯೂರನ್ನು ಈ ಸ್ಥಳದ ಸ್ಥಾನೀಕರಾದ ೩೦ ಜನ ಶ್ರೀವೈಷ್ಣವರಿಗೆ ತಗರೆನಾಡಿನ ನಿಟ್ಟೂರನ್ನು ಸರ್ವನಮಸ್ಯವಾಗಿ ಬಿಟ್ಟದ್ದನ್ನು ತಿಳಿಸಿದೆ. ಈ ಶಾಸನದಿಂದ ಕೇಶವಪುರದಲ್ಲಿ ವಾಸಮಾಡುತ್ತಿದ್ದ ಭಟ್ಟರು ಜಪಹೋಮ ನಿತ್ಯಸೇವೆ ಮತ್ತು ಪಾರಾಯಣಗಳನ್ನು ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ವಿಶೇಷವಾಗಿ ಕೇಶವಪುರದಲ್ಲಿ ಶ್ರೀವೈಷ್ಣವರು ನೆಲೆಸುತ್ತಿರಲಿಲ್ಲ ವೆಂಬುದು ಗಮನಾರ್ಹವಾಗಿದೆ. ಅದರಂತೆ ಬ್ರಾಹ್ಮಣರಿಗೆ ಮಾತ್ರವೇ ಸೀಮಿತವಾಗಿದ್ದರೆ ಇದು ಅಗ್ರಹಾರವೆನ್ನಿಸುತ್ತಿದ್ದು, ಇಲ್ಲಿ ಬ್ರಾಹ್ಮಣ ಭಟ್ಟರಿಗೆ ಬೇರೆಯದಾನ ನೀಡಿರುವುದು ಕೇಶವಪುರವನ್ನು ಅಗ್ರಹಾರದಿಂದ ಬೇರ್ಪಡಿಸಿರುವುದು ಗಮನಾರ್ಹವಾಗುತ್ತದೆ.

ಚನ್ನರಾಯಪಟ್ಟಣ ತಾಲೂಕಿನ ಅಗ್ರಹಾರ ಬೆಳಗುಲಿ ಗ್ರಾಮದ ಶಾಸನವೊಂದು (ಕ್ರಿ.ಶ. ೧೨೨೯, ಚ. ಪ. ೯೪. ಎಕ.೧೦) ವೀರಬಲ್ಲಾಳದೇವನ ಮಹಾ ಪ್ರಧಾನಿಯೂ, ಬಾಹತ್ತರ ನಿಯೋಗಾಧಿಪತಿಯು ಆದ ಕೇಶಿರಾಜನು ನಿರ್ಗುಂದನಾಡಿನ ಪಂಜಾಡಿಯ ಬೆಳ್ಗಲಿಯನ್ನು 'ಕೇಶವಪುರ' ವೆಂಬ ಹೆಸರಿನ ಅಗ್ರಹಾರವನ್ನು ಮಾಡಿದನೆಂದು ಶಾಸನ ತಿಳಿಸುತ್ತಿದೆ. ಕೇಶವ ಸಮುದ್ರ ಲಕ್ಷ್ಮೀಸಮುದ್ರಗಳೆಂಬ ಕೆರೆಗಳನ್ನು ಕಟ್ಟಿಸಿ ಕೇಶವಾಯತನವನ್ನು ನಿರ್ಮಿಸುತ್ತಾನೆ. ಈ ಕೇಶವದೇವರ ಶ್ರೀಕಾರ್ಯಕ್ಕೆಂದು ಬಲ್ಲಾಳದೇವನು ತಗಡೂರನ್ನು ಬಿಡುತ್ತಾನೆ. ತಗಡೂರಿನ ವೃತ್ತಿಗಳ ವಿತರಣೆಯ ಬಗೆಗೆ ಶಾಸನವು ತಿಳಿಸುತ್ತಿದ್ದು "ಕಂಚವ್ವೆಯ ಮಗ ಕೇಶವಂಗೆ ಗದ್ದೆ ಸ ೨ ಬೆದ್ದಲು ಕಂಬ ೪೦೦, ಪಾರಿಸ ಪಂಡಿತರಿಗೆ ಸಲಗೆ ೧, ಬೆದ್ದಲು ಕಂಬ ೨೦೦, ಸೇನಬೋವ ಸೋವಣ್ಣಂಗೆ ಗದ್ದೆ ಕೊ ೧೦. ಬೆದ್ದಲು ಕಂಬ ೧೦೦, ಜಾಗಣಂಗೆ ಗದ್ದೆ ಕೊ. ೫, ಬೆದ್ದಲು ಕಂಬ ೧೦೦, ಬೆಳ್ಗಲೆಯ ಅಕ್ಕಸಾಲಿಗಳಿಗೆ ಗದ್ದೆ ಕೊ. ೫, ಬೆದ್ದಲು ಕಂಬ ೧೦೦, ಬಡಗಿಗಳಿಗೆ ಗದ್ದೆ ಕೊ. ೫, ಬೆದ್ದಲು ಕಂಬ ೧೦೦, ಕಮ್ಮಱರಿಗೆ ಗದ್ದೆ ಕೊ ೫, ಬೆದ್ದಲು ಕಂಬ ೧೦೦, ಅಗಸರಿಗೆ ಗದ್ದೆ ಕೊ. ೫, ಬೆದ್ದಲು ಕಂಬ ೧೦೦, ಕುಂಬಾಱರಿಗೆ ಗದ್ದೆ ಕೊ. ೫, ಬೆದ್ದಲೆ ಕಂಬ ೧೦೦, ಬಾರಿಕರಿಗೆ ಗದ್ದೆ ಕೊ ೫, ಬೆದ್ದಲು ಕಂಬ ೧೦೦ನ್ನು ನೀಡಿ, ಇವರೆಲ್ಲರನ್ನೂ 'ಕೇಶವದೇವರಿಗೆ ಬೆಸಕೆಯ್ವ ಪರಿವಾರದವರೆಂದು' ಶಾಸನವು ತಿಳಿಸಿದೆ. ಇದರಿಂದ ಕೇಶವಪುರದಲ್ಲಿ ವಿವಿಧ ಜಾತಿಗಳಿಗೆ ಸೇರಿದ, ಆದರೆ ಕೇಶವನ ಭಕ್ತರಾಗಿ, ದೇವಾಲಯ ಪೂಜೆಯ ಕೈಂಕರ್ಯದಲ್ಲಿ ತೊಡಗಿದ ಜನರಿದ್ದರೆಂದು ನಿಖರವಾಗಿ ತಿಳಿಯುತ್ತದೆ. ಇದರಂತೆ ಇದೇ ದೇವಾಲಯದ ಮತ್ತೊಂದು ಶಾಸನವು - ಈ ಕೇಶವಪುರದ ಬಗೆಗೆ ಬೆಳಕು ಚೆಲ್ಲುತ್ತಿದ್ದು. (ಕ್ರಿ.ಶ. ೧೨೫೨ ಚರಾಪ. ೯೨ ಎಕ ೧೦) ಕೇಶವಪುರ ಬೆಳಗುಲಿಯು ಕೇಶವೇಶ್ವರ ದೇವಾಲಯದ

ದೇವದಾನದ ಬಗೆಗೆ ತಿಳಿಸುತ್ತಿದೆ. ಈ ಶಾಸನದಲ್ಲಿ ಕೇಶಿಯಣ್ಣ, ಪಾರಿಸಪಂಡಿತ ಮಗ ಸಾತಯ್ಯ, ಸೇನಬೋವ ಸೋವಣ್ಣ, ಗಣಪಯ್ಯ, ಮಾಳಯ್ಯ, ಯೆಡವ ಮಾಯಿದೇವ, ಹಡಪದ ವಿಠಲ ಜೋಯ್ಸ, ವಿಠಲ ಚಂದಪ್ಪ, ಇವರೆಲ್ಲರಿಗೆ ಸೇರಿದ ಬಟ್ಟುಗದ್ದೆ ಸಲಗೆ ೧೨, ಬೆದ್ದಲು ಕಂಬ ೧೨೦೦ ಇದ್ದು. ಇವರೆಲ್ಲರನ್ನು 'ಕೇಶವೇಶ್ವರ ದೇವರ ಕಾವಲುಗಾಹಿನ ವೀರರು' ಎಂದು ಕರೆಯಲಾಗಿದೆ. ಇದರಿಂದ ಕ್ರಿ.ಶ. ೧೩ನೇ ಶತಮಾನದಲ್ಲಿ ಹೊಯ್ಸಳರಾಜ್ಯದಲ್ಲಿ ಶೈವ, ವೈಷ್ಣವ ಮತ್ತು ಜೈನ ಮೂರು ಮತಗಳು ಪ್ರಬಲವಾಗಿತ್ತಲ್ಲದೇ, ಈ ಮೂರು ಮತಗಳ ನಡುವೆ ಪರಸ್ಪರ ತಾಕಲಾಟ, ತಿಕ್ಕಾಟಗಳು ನಡೆಯುತ್ತಿತ್ತು; ಇದರಿಂದ ದೇವಾಲಯಗಳ ವ್ಯವಸ್ಥೆಯನ್ನು ಸುಗುಮವಾಗಿ ನಡೆಯಲು, ದೇವಾಲಯದ ಸಂರಕ್ಷಣೆಗಾಗಿ 'ಕಾವಲುಗಾಹಿನ ವೀರರನ್ನು' ನೇಮಿಸುತ್ತಿದ್ದರೆಂಬುದು ವಿದಿತವಾಗುತ್ತದೆ. ಈ ವೀರರು ಆ ಮತದ ನಿಷ್ಠಾವಂತ ಅನುಚರರಾಗಿರುತ್ತಿದ್ದರು. ಕೇಶವ ದೇವಾಲಯದ ಕಾವಲುಗಾಹಿನ ವೀರರಾಗಿದ್ದ ಈ ಸಮೂಹದಲ್ಲಿ ವಿವಿಧ ಮತೀಯರಿದ್ದು, ಇವರೆಲ್ಲ ಶ್ರೀವೈಷ್ಣವ ಮತಕ್ಕೆ ಸೇರಿದವರೆಂಬುದು ವಿದಿತವಾಗುತ್ತದೆ. ಈ ದಿಸೆಯಿಂದ ಗಮನಿಸಿದಾಗಲೂ 'ಕೇಶವಪುರ'ಗಳು ಕೇವಲ ಅಗ್ರಹಾರ ವಾಗಿರದೇ, ಎಲ್ಲ ಮತದ ವೈಷ್ಣವ ಭಕ್ತರು ನೆಲೆಸುತ್ತಿದ್ದ 'ದೇವದಾನದ ಭಾಗ'ವಾಗಿರುತ್ತಿತ್ತೆಂದು ತಿಳಿಯಬಹುದಾಗಿದೆ. ರಾಮಾನುಜರ ಶ್ರೀವೈಷ್ಣವ ಮತದ ಪ್ರಕಾರ - ಕೆಳಜಾತಿ ಯವರೆನ್ನಿಸಿದ್ದ ಅಸಗ, ಹಡಪದ, ಯೆಡವ, ಕುಂಬಾರ, ಬಾರಿಕ, ಜೈನ ಮತದವರಾದ ಪಾರಿಸಯ್ಯ ಪಂಡಿತ, 'ಅಕ್ಕಸಾಲಿ', ಬಡಗಿ - ಎಲ್ಲರೂ ಕೇಶವಪುರದ ಪ್ರಜೆಗಳಾಗಿದ್ದುದು ಗಮನಾರ್ಹ ವಾಗಿದೆ.

ಅರಸಿಕೆರೆ ತಾಲೂಕಿನ ಗೀಜಗನಹಳ್ಳಿ ಶಾಸನವು (ಅಕೆರೆ ೨೨೬. ಎಕ. ೧೦) ಕ್ರಿ.ಶ. ೧೨೨೭ರಲ್ಲಿ ಗೀಜಹಳ್ಳಿ ಮುಂದೆ ಕಟ್ಟಿಸಿದ್ದ ಕೆರೆಯ ಕೊಡಗಿ ವಿವರವನ್ನು ತಿಳಿಸುತ್ತಿದೆ. ಈ ಶಾಸನದಲ್ಲಿ ಸಮಸ್ತ ಗುಣ ಸಂಪನ್ನರಪ್ಪ ಕೇಶವಪುರವಾದ ಎಳವರೆಲ್ಲರನ್ನು 'ಅಶೇಷ ಮಹಾಜನಂಗಳೆಂದೇ' ಕರೆದಿದೆ. ಇಲ್ಲಿ ಕೇಶವಪುರದ ಜನರಿಗೆ ನೀಡುತ್ತಿದ್ದ 'ಮಹಾಜನ'ದ ಗೌರವವನ್ನು ಕಾಣಬಹು ದಾಗಿದೆ. ಈ ಊರ ಮುಂದಿನ ಕೆರೆಯನ್ನು ಎಕ್ಕಲಸೆಟ್ಟಿ ಎಂಬುವನು ಕಟ್ಟಿಸಿ 'ಎಕ್ಕಲಸಮುದ್ರ'ವೆಂದು ಹೆಸರಿಸಿದ್ದು ಕೆರೆಕೊಡುಗೆಯನ್ನು ಎಕ್ಕಲಸೆಟ್ಟಿ ಕಲ್ಲಸೆಟ್ಟಿಗೆ ಬಿಡಲಾಗಿದೆ. ಇದರಂತೆ ಹಾಸನ ತಾಲೂಕಿನ ಅವ್ವೇರಹಳ್ಳಿ ಶಾಸನವು (ಹಾ ೧೮೭. ಎ.ಕ. ೮) ಹೊಯ್ಸಳರ ದೊರೆ ಮೂರನೇ ಬಲ್ಲಾಳನು ಆಳುತ್ತಿದ್ದಾಗ, ಅವನ ಅಧಿಕಾರಿಯಾದ ಮಾಚಣ ದಂಡನಾಯಕನ, ತಾಯಿ ಮಾಯಕ್ಕನು ಮೂರು ನಾಲ್ಕು ಸಾವಿರ ಹೊನ್ನನ್ನಿಕ್ಕಿ ಕೆರೆ ಕಟ್ಟಿಸುತ್ತಾಳೆ. ಈ ಸಂದರ್ಭದಲ್ಲಿ 'ಚೆನ್ನಕೇಶವಪುರವಾದ ಗೊರೂರಿನ' ಮಹಾಜನರು ಒಟ್ಟಾಗಿ ಸೇರಿ ೧೪೦ ವೃತ್ತಿಗಳನ್ನು ಕೆರೆಕೊಡುಗೆಯಾಗಿ ಬಿಟ್ಟರೆಂದು ತಿಳಿದು ಬರುತ್ತದೆ. ಈ ಶಾಸನದಲ್ಲಿಯೂ ಕೇಶವಪುರದ ಜನರನ್ನು 'ಮಹಾಜನ'ಗಳೆಂದು ಕರೆದಿರುವುದು ಅವರಿಗೆ ಸಂದಿದ್ದ ಗೌರವವನ್ನು ಸೂಚಿಸುತ್ತಿದೆ. ಇದೇ ಕಾಲದ ಹಳೇಬೀಡಿನ ಕೇದಾರೇಶ್ವರ ದೇವಾಲಯದ ಮತ್ತೊಂದು ಶಾಸನದಲ್ಲಿ (ಬೇ ೩೦೯ ಎ.ಕ. ೧೦) ಮಾತ್ರ ಕೇದಾರೇಶ್ವರ ದೇವಾಲಯಕ್ಕೆ ಬಿಟ್ಟ ಭೂದಾನದ ವಿವರದ ಮಧ್ಯೆ - "ಪಂದಲದ ಕೇಶವದೇವರ ಬ್ರಹ್ಮಪುರಿಗೇರಿ ಎಂಬ ಉಲ್ಲೇಖವಿದೆ. ಇದರಿಂದ ಕೇಶವ ದೇವಾಲಯದಲ್ಲಿದ್ದ ಬ್ರಾಹ್ಮಣ ಅರ್ಚಕರು ವಾಸಿಸುತ್ತಿದ್ದುದು 'ಬ್ರಹ್ಮಪುರಿ' ಎನ್ನಿಸುತ್ತಿತ್ತು. ಬೇಲೂರಿನ ಮತ್ತೊಂದು ಶಾಸನವು (ಬೇ ೧೧೭. ಎ.ಕ. ೯. ಕ್ರಿ.ಶ. ೧೩ನೇ ಶ.) ಕೇಶವಪುರದೊಳಗೆ ನೆಲೆಸಿದ್ದ ಜೀವಿತವರ್ಗದವರಲ್ಲಿ ಪುರುಷ / ಸ್ತ್ರೀ ಯಾರೇ ಆಗಿದ್ದರೂ, ಒಂದು ಹಣವನ್ನಾಗಲೀ ಅಥವಾ ಪ್ರಸಾದದ ಒಂದು ತುತ್ತನ್ನಾಗಲೀ ತಿಂದಿದ್ದರೇ, ಬೆಣ್ಣೆಯೂರು, ಮುಗುಳಿ ಗ್ರಾಮದಲ್ಲಿ ಒಂದುನೂರು ಕಂಬ ಭೂಮಿಯನ್ನು ಹೊಂದಿದ್ದರೂ ಅವರು ಕೇಶವದೇವರ ನಿತ್ಯಸೇವೆಯ ಕೈಂಕರ್ಯವನ್ನು ಮಾಡಲೇಬೇಕೆಂದು ನಿರ್ಬಂಧ ಪಡಿಸಿದೆ. ಒಂದು ವೇಳೆ ಈ ಜೀವಿತವರ್ಗದವರು ಪರ ಊರಿಗೆ ಹೋಗಿದ್ದರೆ, ಅಥವಾ ವ್ಯಾಧಿಗೊಳಗಾಗಿದ್ದರೆ ಮಾತ್ರ ಸೇವೆಯಿಂದ ವಿನಾಯಿತಿ ನೀಡಲಾಗಿದೆ. ಹಾಗಿಲ್ಲದೇ ಕೈಂಕರ್ಯವನ್ನು ತಪ್ಪಿಸಿದರೆ ತಮ್ಮ ಸ್ವಹಸ್ತದಿಂದಲೇ ತಮ್ಮ ಕುಲದ ಇಪ್ಪತ್ತೊಂದು ಪಿತೃಗಳನ್ನು ವಧಿಸಿದ ಪಾಪಕ್ಕೆ ಹೋಹರೆಂದು ಘೋರವಾಗಿ ಶಪಿಸಿದೆ. ಈ ಶಾಸನವು ಕೇಶವಪುರದ ಜನರ ಜೀವನ ಕ್ರಮವನ್ನು ತಿಳಿಸುತ್ತಿರುವುದಲ್ಲದೇ ಕೇಶವ ದೇವಾಲಯಗಳ ನಿತ್ಯ ಪೂಜೆಯ ವ್ಯವಸ್ಥೆಯ ರೂಪದಲ್ಲಿ 'ಕೇಶವಪುರ'ಗಳ ನಿರ್ಮಾಣವಾಯಿತೆಂಬ ಅಂಶವನ್ನು ದೃಢ ಪಡಿಸುತ್ತಿದೆ.

ಚಿಕ್ಕಮಂಗಳೂರು ಜಿಲ್ಲೆಯ ಕ್ರಿ. ಶ. ೧೨೪೫ರ ಶಾಸನವೊಂದು (ಚಿ. ಮಂ. ೧೧೦. ಎ.ಕ. ೧೧) ಮೊರಲೆ ಗ್ರಾಮವನ್ನು - "ಶ್ರೀರಾಯ ಕೇಶವಪುರವಾದ ಮೊರಲೆ' ಎಂದು ಕರೆದಿದೆ. ಇದರಂತೆ. ಚಿಕ್ಕಮಂಗಳೂರು ಜಿಲ್ಲೆಯ ಹಿರೇ ಮಗಳೂರು ಗ್ರಾಮವನ್ನು ಶಾಸನದಲ್ಲಿ 'ಶ್ರೀಮದನಾದಿ ಅಗ್ರಹಾರ ವಾದ ಶ್ರೀಕೇಶವಪುರ'ವಾದ ಹಿರಿಯಮುಗಳಿ. ಎಂದು ಉಲ್ಲೇಖಿಸಿದೆ (ಚಿ. ಮಂ. ೭೪ ಎ.ಕ. ಕ್ರಿ.ಶ. ೧೩೮೬). ಈ ಉಲ್ಲೇಖಗಳು ಹೊಯ್ಸಳರ ಕಾಲದಲ್ಲಿ, ಹಲವು ವಿಷ್ಣು ದೇವಾಲಯಗಳಿದ್ದ ಗ್ರಾಮಗಳು - 'ಕೇಶವಪುರ'ಗಳಾಗಿತ್ತೆಂದು ತಿಳಿಸುತ್ತಿವೆ. ಅಂದಿನ ಸಮಾಜದಲ್ಲಿ ಕೇಶವಪುರ'ಗಳು ವೈಷ್ಣವ ಕೇಂದ್ರಗಳಾಗಿದ್ದು ಕೇಶವಪುರದ ಜನರಿಗೂ ಸಮಾಜದಲ್ಲಿ ಗೌರವಯುತವಾದ ಸ್ಥಾನಮಾನಗಳು ಸಿಕ್ಕಿತ್ತೆಂಬುದು ಗಮನಾರ್ಹ ವಾಗಿದೆ. ಹೀಗೆ 'ಕೇಶವಪುರ'ಗಳ ಅಧ್ಯಯನದಿಂದ ಸು. ೧೩ನೇ ಶತಮಾನದಲ್ಲಿಯೇ ಕನ್ನಡ ನಾಡಿನಲ್ಲಿ ಸರ್ವಸಮಾನತೆಯ ಭಾವನೆಯುಳ್ಳ ಸಮಾಜದ ಘಟಕಗಳಿದ್ದವೆಂಬುದು - ತಿಳಿದು ಬರುತ್ತದೆ.



ಆರ್. ವೆಂಕಟೇಶಮೂರ್ತಿ*

# ನಾಗಮಂಗಲ ತಾಲ್ಲೂಕಿನ ಶಾಸನೋಕ್ತ ಗ್ರಾಮಗಳ ನಾಮ ವಿಶ್ಲೇಷಣೆ

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕು, ಗಂಗರು, ಹೊಯ್ಸಳರು, ವಿಜಯನಗರ ಅರಸರು ಮತ್ತು ಮೈಸೂರು ಅರಸರ ಆಳ್ವಿಕೆಗಳನ್ನು ಕಂಡಿದೆ. ಈ ತಾಲ್ಲೂಕಿನ ಶಾಸನಗಳಲ್ಲಿ ಭೂಮಿ, ಕೆರೆ, ಗ್ರಾಮಗಳು ಹಾಗೂ ಗ್ರಾಮಗಳನ್ನು ದಾನವಾಗಿ ನೀಡಿರುವ ಬಗ್ಗೆ ಉಕ್ತ ಮಾಡಿರುವ ಶಾಸನಗಳನ್ನು ಮತ್ತು ಉಲ್ಲೇಖಿತ ಸ್ಥಳನಾಮಗಳ ಬದಲಾವಣೆಗಳನ್ನು ಈ ಪ್ರಬಂಧದಲ್ಲಿ ಗಮನಿಸಲಾಗಿದೆ.

ಹೊಯ್ಸಳ ವಿಷ್ಣುವರ್ಧನನ ಪಟ್ಟದರಸಿ ಬಮ್ಮಲದೇವಿಯು ಕಲ್ಕುಣೆನಾಡಿಗೆ ಸೇರಿದ ನಾಗಮಂಗಲದಲ್ಲಿರುವ ಶಂಕರ ನಾರಾಯಣ ದೇವಾಲಯವನ್ನು ದುರಸ್ತಿ ಮತ್ತು ಜೀರ್ಣೋದ್ಧಾರಗೊಳಿಸಿ, ಆ ದೇವರ ಸ್ನಾನ ಮತ್ತು ನೈವೇದ್ಯಕ್ಕಾಗಿ **ಅರಿಕನಕಟ್ಟೆ** ಎಂಬ ಗ್ರಾಮವನ್ನು ಸೂರ್ಯಾಭರಣಪಂಡಿತ ಎಂಬುವವನಿಗೆ ದಾನ ನೀಡಿದ್ದಾಳೆ.[೧] ಏಚಿರಾಜ ದಂಡನಾಯಕನು ವಿಷ್ಣುವರ್ಧನನಿಂದ ಗೌಡಿಕೆ ಉಂಬಳಿಯಾಗಿ ಪಡೆದ **ನಾನಲಕೆಱು** ಎಂಬ ಗ್ರಾಮವನ್ನು ಮಲ್ಲಿಕಾರ್ಜುನ ದೇವರ ಅಂಗಭೋಗ, ರಂಗಭೋಗ, ನೈವೇದ್ಯ ನಂದಾದೀವಿಗೆ, ಖಂಡಸ್ಫುಟಿತ ಜೀರ್ಣೋದ್ಧಾರಗಳಿಗಾಗಿ ಕೇತಜೀಯ ಜಕ್ಕಜೀಯ ಎಂಬುವವರಿಗೆ ದೇವದಾನವಾಗಿ ನೀಡಿರುತ್ತಾನೆ.[೨] ಹೊಯ್ಸಳ ವಿಷ್ಣುವರ್ಧನನು ಕಲ್ಕುಣೆನಾಡಿನ **ಹೆಬ್ಬಿದಿರುವಾಡಿಯಲ್ಲಿ** ಉತ್ತುಂಗ ಚೈತ್ಯಾಲಯವೊಂದನ್ನು (ಬಸದಿ) ನಿರ್ಮಿಸಿ ಅಲ್ಲಿ ಪಾರ್ಶ್ವನಾಥನ ಪ್ರತಿಮೆಯನ್ನು ಪ್ರತಿಷ್ಠಾಪಿಸಿದ್ದು, ಅಂಗಭೋಗ, ಆಹಾರದಾನ ಮತ್ತು ಬಸದಿಯ ಜೀರ್ಣೋದ್ಧಾರ ಹಾಗೂ ನಿರ್ವಹಣೆಯ ವೆಚ್ಚಕ್ಕಾಗಿ ಕಲ್ಕುಣೆನಾಡನ್ನು ಆಳುತ್ತಿದ್ದ ಭಾನುಕೀರ್ತಿಸಿದ್ಧಾಂತದೇವನ ಶಿಷ್ಯನಾದ ಸಾಮಂತ ಸೋಮ ಎಂಬುವವನು **ಆರುಹುನಹಳ್ಳಿ** ಎಂಬ ಗ್ರಾಮವನ್ನು ದೇವದಾನವಾಗಿ ಮೂಲಸಂಘದ ಬ್ರಹ್ಮದೇವನಿಗೆ ನೀಡಿದ್ದಾನೆ.[೩] ಶ್ರೀಕರಣಂ ಮಾದಿರಾಜನ ಹೆಸರಿನಲ್ಲಿ ನಿರ್ಮಿಸಲಾಗಿದ್ದ ಶ್ರೀಕರಣ ಜಿನಾಲಯಕ್ಕೆ ಹೊಯ್ಸಳ ಒಂದನೇ ನರಸಿಂಹನು **ಭೋಗವತಿ** ಎಂಬ ಗ್ರಾಮವನ್ನು ದೇವದಾನವಾಗಿ ನೀಡಿದ್ದರೆ, ೨೯ ವರ್ಷಗಳ ನಂತರ ಮಹಾಪ್ರಧಾನ ಹೆಗ್ಗಡೆ ಬಲ್ಲಯ್ಯನು ಇದೇ ಜಿನಾಲಯದ ಪಾರ್ಶ್ವನಾಥ ದೇವರ ಅಷ್ಟವಿಧಾರ್ಚನೆಗೆಂದು **ಭೋಗವತಿಯಲುಳ್ಳ** ಸಮಸ್ತ ಸುಂಕಗಳನ್ನು ಮತ್ತು ಇದಕ್ಕೆ ಸೇರಿದ **ಕಾಳಬೋವನಹಳ್ಳಿ**ಯನ್ನು ದಾನ ನೀಡಿರುತ್ತಾನೆ. ಈ ದಾನವನ್ನು ಶ್ರೀ ಪದ್ಮನಾಭ ಸ್ವಾಮಿ ಎಂಬುವವನು ಸ್ವೀಕರಿಸಿದ್ದಾನೆ.[೪] ದೋರಸಮುದ್ರದ ತ್ರಿಕೂಟ ರತ್ನತ್ರಯ ಎಂದು ಕರೆಯಲ್ಪಡುವ ಶಾಂತಿನಾಥದೇವರ ಅಂಗಭೋಗ, ರಂಗಭೋಗ, ಆಹಾರದಾನ ಮುಂತಾದವುಗಳಿಗಾಗಿ ಮೂರನೇ ನರಸಿಂಹನು **ಚಿಕಕಂನೆಯನಹಳ್ಳಿಯನ್ನು** ಮೂಲಸಂಘದ ಕುಮುದಚಂದ್ರ ಭಟ್ಟಾರಕದೇವನ ಶಿಷ್ಯನಾದ ಮಾಘನಂದಿ ಸಿದ್ಧಾಂತ ಚಕ್ರವರ್ತಿ ಎಂಬುವವನಿಗೆ ದಾನವಾಗಿ ನೀಡಿರುತ್ತಾನೆ.[೫] ಕಂಬದಹಳ್ಳಿ ಬಸದಿಯ ಶಾನ್ತಿನಾಥ ದೇವರ ಪೂಜೆ ಮತ್ತು ಆಹಾರ ದಾನಕ್ಕೆಂದು ಹಿಂದೆ ವಿಷ್ಣುವರ್ಧನನಿಂದ ನೀಡಲಾಗಿದ್ದ **ಮೊದಲಿಯಹಳ್ಳಿಯು**, ಗಣ್ಡವಿಮುಕ್ತ ಸಿದ್ಧಾಂತ ದೇವನ ಶಿಷ್ಯರಾದ ಮಱಿಯಾನೆ ದಂಡನಾಯಕ ಮತ್ತು ಭರತೀಮಯ್ಯ ದಂಡನಾಯಕರುಗಳಿಗೆ ಹೊಯ್ಸಳ ನರಸಿಂಹನಿಂದ ಪುನರ್ ದಾನವಾಗಿದೆ. ಅರಸೀಕೆರೆಯ ಮಹಾದೇವಣ ಮತ್ತು ಪ್ರಜೆಗಾವುಂಡಗಳು ಚನ್ನಲಿಂಗ ಕಲಿದೇವರ ಅಂಗಭೋಗ, ರಂಗಭೋಗ, ಜೀರ್ಣೋದ್ಧಾರ, ನಿತ್ಯಪಡಿ, ನೈವೇದ್ಯಗಳಿಗಾಗಿ **ಹಗವಮಗೆರೆ** ಎಂಬ ಗ್ರಾಮವನ್ನು ಯಮಯಾಂಡನ ಮಗನಾದ ಬಲ್ಲಾಳಜೀಯನಿಗೆ ದೇವದಾನವಾಗಿ ನೀಡಿರುತ್ತಾರೆ.

ಮಹಾಪ್ರಧಾನ ಪೆರುಮಾಳೆ ದಂಡನಾಯಕನು, ಹೊಯ್ಸಳ ವಿಷ್ಣುವರ್ಧನನಿಂದ ಬೆಳ್ಳೂರಿಗೆ ಸೇರಿದ **ಬೆಟ್ಟದಕೋಟೆ, ಬಿಲ್ಲಬೆಳಗುಂದ, ತಿಪ್ಪೂರು** ಗ್ರಾಮಗಳು ಮತ್ತು ಅವುಗಳಿಗೆ ಸೇರಿದ ರಾಮಗವುಡನಹಳ್ಳಿ ತಱಬಿನಕೋಟೆ, ಕಿತ್ತವಗಟ್ಟ, ಸಿವನಹಳ್ಳಿ, ಯಿರುಮನಹಳ್ಳಿ, ಬೀಚನಹಳ್ಳಿ, ಎರೆಹಳ್ಳಿ, ಹಟ್ಟಣ, ಕಾಳೆಗರಾಮನಹಳ್ಳಿ, ಸೆಟ್ಟಿಯಹಳ್ಳಿ, ಗುಂಮನಹಳ್ಳಿ ಹರದಗೌಡನಹಳ್ಳಿ, ಬೇಗೂರು, ಕೂತನಹಳ್ಳಿ, ರಾಗಿಯಹಳ್ಳಿ, ಕಾಚನಹಳ್ಳಿ, ಗರುಡನಹಳ್ಳಿ, ಹಿರಿಯಬೇಡರಹಳ್ಳಿ, ಚಿಕ್ಕಬೇಡರಹಳ್ಳಿ, ಹಂಚಿಯಹಳ್ಳಿ, ಎಂಬ ಉಪಗ್ರಾಮಗಳನ್ನು ಉದ್ಭವ ನರಸಿಂಹಪುರ ಅಲಿಯಾಸ್ ಬೆಳ್ಳೂರು ಗ್ರಾಮದ ಮಧ್ಯದಲ್ಲಿರುವ ಪ್ರಸನ್ನ ಮಾಧವ, ರಾಮಕೃಷ್ಣ ಮತ್ತು ಅಲ್ಲಾಳನಾಥ ದೇವರುಗಳ ಅಮೃತಪಡಿ, ನಿಬಂಧಕಾರರ ಜೀವಿತಗಳಿಗಾಗಿ ಕೊಡುಗೆಯಾಗಿ ಪಡೆದುದನ್ನು, ಈ ಎಲ್ಲಾ ದೇವರುಗಳ ಅಂಗಭೋಗ, ರಂಗಭೋಗ, ಚೈತ್ರಪವಿತ್ರ, ದೀಪೋತ್ಸವ, ತಿರುನಾಳು, ನಿಬಂಧಕಾರರ ಜೀವಿತಕ್ಕೆಂದು ಒಟ್ಟು ೮೬ ಮಹಾಜನಗಳಿಗೆ ದೇವದಾನವಾಗಿ ನೀಡಿರುತ್ತಾನೆ. ತೆಪ್ಪದ ಮುದ್ದೆನಾಯ್ಕನ ಮಗ

* ನಂ. ೨೭/೧ ನವಸುಮ, ೨೩ನೇ ಮುಖ್ಯ ರಸ್ತೆ, ಮುನೇಶ್ವರ ಬ್ಲಾಕ್, ಬೆಂಗಳೂರು - ೫೬೦ ೦೮೫

ನಾಗೆಯನಾಯ್ಕ ಎಂಬುವವನು ದೇವಲಾಪುರ ಸ್ಥಳದ ಮಲೆಯನಾಯಕನಹಳ್ಳಿಯ ತಿರುಮಲ ದೇವರ ಅಮೃತಪಡಿಗಾಗಿ **ಮುದಸಮುದ್ರ** ಎಂಬ ಗ್ರಾಮವನ್ನು ದಾನವಾಗಿ ನೀಡಿರುತ್ತಾನೆ.[೧೦] ಶ್ರೀರಂಗರಾಯನು ರಾಜ್ಯವಾಳುತ್ತಿದ್ದ ಕಾಲದಲ್ಲಿ ಸುರಗಿಯ ದೇವಪ್ಪನಾಯಕ ಎಂಬುವವನು **ಕುದುಗುಬಾಳ** ಗ್ರಾಮದ ರಾಮಲಿಂಗದೇವರ ಸೇವೆಗಾಗಿ **ದೇವಲಾಪುರ** ಗ್ರಾಮವನ್ನು ಅದರ ಎಲ್ಲಾ ಆದಾಯಗಳೊಂದಿಗೆ ದಾನವಾಗಿ ನೀಡಿರುತ್ತಾನೆ. ಸಾಳುವ ನರಸಿಂಗರಾಜನ ಗೃಹಮಂತ್ರಿ ಆಗಿದ್ದ ವಿರೂಪಾಕ್ಷದೇವ ಎಂಬುವವನು ಮಕರ ಸಂಕ್ರಾಂತಿ ಸಂದರ್ಭದಲ್ಲಿ **ಚುಂಚನಹಳ್ಳಿ** ಗ್ರಾಮವನ್ನು **ವಿರೂಪಾಕ್ಷಪುರ** ಎಂದು ಪುನರ್ ನಾಮಕರಣ ಮಾಡಿ ಚುಂಚನ ಭಯಿರವ ದೇವರಿಗೆ ಸರ್ವಮಾನ್ಯವಾಗಿ ದಾನ ನೀಡಿರುತ್ತಾನೆ.[೧೧] ದೊಡ್ಡಜಟಕದ ತಾಮ್ರಶಾಸನವು ಕೃಷ್ಣದೇವರಾಯನ ಕಾಲದಲ್ಲಿ ಅತಿರಾತ್ರ ಮಹಾಯಾಗವನ್ನು ಆಚರಿಸುವ ಮತ್ತು ಶಾಸ್ತ್ರ, ಕಾವ್ಯ, ಪುರಾಣ ಇತ್ಯಾದಿಗಳಲ್ಲಿ ಪಾಂಡಿತ್ಯವನ್ನು ಹೊಂದಿದ್ದ ಶ್ರೀನಿವಾಸಾದ್ವರಿ ಎಂಬುವವನಿಗೆ ವೆಲ್ಲೂರಸೀಮೆಯ **ಹಿರಿಜಟ್ಟಿಗ** ಗ್ರಾಮವನ್ನು ಕೊಡುಗೆಯಾಗಿ ನೀಡಿರುವುದನ್ನು ಉಲ್ಲೇಖಿಸಿದೆ.[೧೨] ದೇವಲಾಪುರದ ತಾಮ್ರ ಶಾಸನವು ಕೃಷ್ಣದೇವರಾಯನ ಕಾಲದಲ್ಲಿ ನಡೆಸಲಾದ ಹೇಮಾಶ್ವ ಯಾಗದ ಸಂದರ್ಭದಲ್ಲಿ ಜಮದಗ್ನ್ಯ ಗೋತ್ರದ ನಂಜಪ್ಪದೇವನ ಮಗನಾದ ದೇವಭಟ್ಟ ಎಂಬುವವನಿಗೆ **ಮಾದನಪುರ** ಮತ್ತು **ಮಲ್ಲಿಗೆರೆ** ಗ್ರಾಮಗಳನ್ನು ದಾನವಾಗಿ ನೀಡಿದ್ದನ್ನು ಹಾಗೂ ಈ ಗ್ರಾಮಗಳಿಗೆ **ಕೃಷ್ಣರಾಯಪುರ** ಎಂದು ಪುನರ್ ನಾಮಕರಣ ಮಾಡಿದ್ದನ್ನು ದಾಖಲಿಸಿದೆ. ವಿಜಯನಗರದ ಕೃಷ್ಣರಾಯನು ನಾಗಮಂಗಲಕ್ಕೆ ಸೇರಿದ ದೇವಲಾಪುರ ಸ್ಥಳ **ತಿಬ್ಬನಹಳ್ಳಿ** ಗ್ರಾಮವನ್ನು **ಕೃಷ್ಣರಾಯಸಮುದ್ರ** ಎಂದು ಪುನರ್ ನಾಮಕರಣ ಮಾಡಿ ಚೆನ್ನಪಟ್ಟಣದ ವೀರಪದೇವ ಎಂಬ ದೇವರಿಗೆ ಆಹಾರ ನೈವೇದ್ಯಕ್ಕಾಗಿ ದಾನ ನೀಡಿರುತ್ತಾನೆ.[೧೪] ಕೃಷ್ಣದೇವರಾಯನ ಆಡಳಿತ ಕಾಲದಲ್ಲಿ ಮೇಲುಕೋಟೆಯ ಚೋಳಪ್ಪಯ್ಯ ಎಂಬುವವನು **ಕಾಳಿಂಗರಾಮನಹಳ್ಳಿಯ** ದಕ್ಷಿಣ ಭಾಗವನ್ನು ಚೆಲ್ಲಪಿಳ್ಳೆ ದೇವರ ಸೇವೆಗಾಗಿಯೂ, ಉಳಿದ ಭಾಗವನ್ನು ಹಿರಿಯ ತಿರುಮಲ ದೇವರಿಗೂ ದಾನವಾಗಿ ನೀಡಿರುತ್ತಾನೆ.[೧೫]

ತಳವಾರಿಕೆ ದಾಸಪನಾಯಕನ ಮಗ ಚಿಕ್ಕರಸಯ ನಾಯಕನಿಗೆ **ಕಾರಬಯಲು** ಗ್ರಾಮವನ್ನು ದಂಡಿಗೆ ಉಂಬಳಿಯಾಗಿ ನೀಡಿರುವುದನ್ನು **ಕಾರಬಯಲು** ಗ್ರಾಮದ ಶಾಸನ ದಾಖಲಿಸಿದೆ. ಬಹುಪಾಲು ಸವೆದುಹೋಗಿರುವ ನಾಗಮಂಗಲ ಶಾಸನವು ಚನ್ನಪಟ್ಟಣದ ಪ್ರಧಾನಿಯಾದ ಅಂಕುಶರಾವು, **ವೀರಾಂಬುಧಿ** ಎಂಬ ಊರನ್ನು ದಾನವಾಗಿ ನೀಡಿರುವ ವಿಷಯವನ್ನು ತಿಳಿಸುತ್ತದೆ ಕ್ರಿ. ಶ. ೧೭-೧೮ನೇ ಶತಮಾನದ **ದೊಡ್ಡಾಬಾಲದ** ಶಾಸನವು **ದೊಡಾಬಲ** ಎಂಬ ಗ್ರಾಮವನ್ನು ದಾನವಾಗಿ ನೀಡಿರುವ ವಿಷಯವನ್ನು ತಿಳಿಸಿದೆಯಾದರೂ, ಲಿಪಿಯೆಲ್ಲವೂ ನಾಶವಾಗಿರು ವುದರಿಂದ ಯಾವ ಉದ್ದೇಶಕ್ಕಾಗಿ ದಾನ ನೀಡಿದರು ಎಂಬ ವಿಷಯ ಸ್ಪಷ್ಟವಾಗುವುದಿಲ್ಲ.[೧೬]

ಈ ತಾಲ್ಲೂಕಿನ ಗ್ರಾಮದಾನ ಶಾಸನಗಳ ಮೇಲಿನ ವಿವರಗಳಿಂದ; ಬಹುತೇಕ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿದ ಸಂದರ್ಭಗಳಲ್ಲಿ ಹಾಗೂ ಹಾಲಿ ಆರಾಧನೆ ನಡೆಯುತ್ತಿದ್ದ ದೇವಾಲಯಗಳಲ್ಲಿನ ದೇವರುಗಳ ವಿವಿಧ ಪೂಜೆಗಳಿಗಾಗಿ ಗ್ರಾಮಗಳನ್ನು ದಾನ ನೀಡಿರುವುದನ್ನು ಕಾಣಬಹುದು. ಇದಲ್ಲದೆ ಪ್ರತ್ಯೇಕವಾದ ಎರಡು ಸಂದರ್ಭಗಳೆಂದರೆ, ವಿಜಯನಗರ ಅರಸರ ಕಾಲದಲ್ಲಿ, ಅದರಲ್ಲೂ ಕೃಷ್ಣದೇವರಾಯನ ಆಡಳಿತಾವಧಿಯಲ್ಲಿ ಸಾಹಿತ್ಯಕ್ಕೆ ಅತ್ಯಂತ ಮಾನ್ಯತೆ ದೊರೆಯುತ್ತಿತ್ತು ಎಂಬುದಕ್ಕೆ ದೊಡ್ಡ ಜಟಕ ಗ್ರಾಮದ ತಾಮ್ರಶಾಸನದಲ್ಲಿ ಶ್ರೀನಿವಾಸಾದ್ವರಿ ಎಂಬ ಪಂಡಿತನಿಗೆ ಹಿರಿಜಟ್ಟಿಗ ಗ್ರಾಮವನ್ನು ಕೊಡುಗೆಯಾಗಿ ನೀಡಿರುವ ದಾಖಲೆಯು ಉದಾಹರಣೆಯಾಗಿ ದೊರೆಯುತ್ತದೆ ಮತ್ತು ಕಾರಬಯಲ ಶಾಸನದಲ್ಲಿ ಚಿಕ್ಕರಸನಾಯಕನಿಗೆ ಕಾರಬಯಲು ಗ್ರಾಮವನ್ನು ದಂಡಿಗೆ ಉಂಬಳಿಯಾಗಿ ನೀಡಿರುವುದು ತಿಳಿಯುತ್ತದೆ.

ದಾನವಾಗಿ ನೀಡಲಾಗಿರುವ ಗ್ರಾಮಗಳು ಜಲ, ಭೌಗೋಳಿಕ, ವ್ಯಕ್ತಿ, ಭೂಮಿ, ಪಕ್ಷಿ, ಜನಾಂಗ, ಪ್ರವೃತ್ತಿ, ದೇವಳ ಹಾಗೂ ಹಬ್ಬಗಳ ಸೂಚಕವಾಗಿ ನಾಮಧೇಯಗಳನ್ನು ಹೊಂದಿರುತ್ತವೆ. ಈ ದಾನಗ್ರಾಮಗಳಲ್ಲಿ ಹಲವು ಗ್ರಾಮಗಳು ತಮ್ಮ ಮೂಲ ನಾಮಧೇಯಗಳನ್ನು ಉಳಿಸಿಕೊಂಡಿದ್ದರೆ ಕೆಲವು ಬದಲಾವಣೆಗೊಂಡಿವೆ. ಇನ್ನೂ ಕೆಲವು ಗ್ರಾಮಗಳು ಶೋಧನೆ ಸಮಯದಲ್ಲಿ ದೊರೆಯದೇ ಇರುವುದರಿಂದ ಅವುಗಳು ಬೇಚರಾಕ್ ಆಗಿರಬಹುದೆಂದು ಸಂಶಯಪಡಬಹುದಾಗಿದೆ.

ಈ ಸ್ಥಳ ನಾಮಗಳನ್ನು ಗಮನಿಸಿದಾಗ ಆಯಾ ಕಾಲದಲ್ಲಿ ದಾನ ನೀಡಿದ ಸಂದರ್ಭದಲ್ಲಿ ನಾಲ್ಕು ಗ್ರಾಮಗಳಾದ ನಾಗಮಂಗಲ, ಚುಂಚನಹಳ್ಳಿ, ತಿಬ್ಬನಹಳ್ಳಿ ಮತ್ತು ಮಲ್ಲಿಗೆರೆಗಳಿಗೆ ಕ್ರಮವಾಗಿ ವೀರಬಲ್ಲಾಳಚತುರ್ವೇದಿ ಭಟ್ಟರತ್ನಾಕರಪುರ, ವಿರೂಪಾಕ್ಷ ಕೃಷ್ಣರಾಯಸಮುದ್ರ ಮತ್ತು ಕೃಷ್ಣರಾಯಪುರ ಎಂದು ಪುನರ್ ನಾಮಕರಣ ಮಾಡಿದ್ದರೂ ಸಹ ನಂತರದ ಕಾಲದಲ್ಲಿ ಮೊದಲ ಮೂರು ಗ್ರಾಮಗಳು ಮೂಲ ಹೆಸರನ್ನೇ ಉಳಿಸಿ ಕೊಂಡಿದ್ದರೆ, ನಾಲ್ಕನೇ ಗ್ರಾಮವಾದ ಮಲ್ಲಿಗೆರೆಯು ಮೂಲ ಹೆಸರನ್ನಾಗಲಿ ಅಥವಾ ದಾನದ ಸಮಯದಲ್ಲಿ ಬಂದ ಹೆಸರನ್ನಾಗಲೀ ಉಳಿಸಿಕೊಳ್ಳದೆ ನೆಲ್ಲಿಗೆರೆ ಆಗಿದೆ.

ದೊಡ್ಡಜಟಕದ ಕ್ರಿ.ಶ. ೧೫೧೨ರ ಶಾಸನದಲ್ಲಿ ವೆಲ್ಲೂರ

## ಸ್ಥಳನಾಮಗಳು ಹಾಗೂ ಬದಲಾವಣೆಗಳು

| ಮೂಲ ಹೆಸರನ್ನು ಉಳಿಸಿಕೊಂಡಿರುವುದು | ಮರುನಾಮಕರಣಗೊಂಡ ಹೆಸರು | ಹೆಸರು ಬದಲಾವಣೆಗೊಂಡಿರುವುದು | | ಬೇಚರಾಕ್ ಗ್ರಾಮಗಳೆಂದು ಸಂಶಯ ಪಟ್ಟಿರುವುದು |
|---|---|---|---|---|
| | | ಮೂಲ ಹೆಸರು | ಬದಲಾದ ಹೆಸರು | |
| ಬೆಟ್ಟದಕೋಟೆ | | ವೀರಾಂಬುಧಿ | ವೀರಸಂದ್ರ | ಅರಿಕನಕಟ್ಟೆ |
| ಬೀಚನಹಳ್ಳಿ | | ದೊಡಾಬಲ | ದೊಡ್ಡಬಾಲ | ಮೊದಲಿಯಹಳ್ಳಿ |
| ಎರಹಳ್ಳಿ | | ಚಿಕ್ಕಕನ್ನೆಯನಹಳ್ಳಿ | ಚಿಕ್ಕನಹಳ್ಳಿ | ತಿಪ್ಪೂರು |
| ಬೇಗೂರು | | ನಾನಲಕೆಜು' | ಲಾಲನಕೆರೆ | ತರಬಿನಕೋಟೆ |
| ಗರುಡನಹಳ್ಳಿ | | ಬಿಲ್ಲಬೆಳಗುಂದ | ಬೆಳುಗುಂದ | ಕಿತ್ತವಗಟ್ಟ |
| ಚುಂಚನಹಳ್ಳಿ | ವಿರೂಪಾಕ್ಷಪುರ | ಚಬನಹಳ್ಳಿ | ಚಬ್ಬನಹಳ್ಳಿ | ಅಣೆಲಹಳ್ಳಿ |
| ಕಾರಬಯಲು | | ಸಿವನೆಯಹಳ್ಳಿ | ಸಿವನಹಳ್ಳಿ | ಗುಂಮನಹಳ್ಳಿ |
| ನಾಗಮಂಗಲ | | ಹಟ್ಟಣ | ಹಟ್ಟ | ಕೂತನಹಳ್ಳಿ |
| ದೇವಲಾಪುರ | | ಕಾಳಿಗರಾಮನಹಳ್ಳಿ | ಕಾಳಿಂಗರಾಮನಹಳ್ಳಿ > ಕಾಳಿಂಗರಾಮನಹಳ್ಳಿ > ಕಾಳಿಂಗನಹಳ್ಳಿ | ಕಾಚನಹಳ್ಳಿ |
| ಕುಪ್ಪೆ | | ಸೆಟ್ಟಿಹಳ್ಳಿ | ಶೆಟ್ಟಿಹಳ್ಳಿ | ಪೊನ್ನಳ್ಳಿ |
| ತಿಬ್ಬನಹಳ್ಳಿ | ಕೃಷ್ಣರಾಯನಸಮುದ್ರ | ಹರದಗೌಡನಹಳ್ಳಿ | ಹರದನಹಳ್ಳಿ | ಮಾದನಪುರ |
| ಚಿಕ್ಕಬೇಡರಹಳ್ಳಿ | | ಹಿರಿಯಬೇಡರಹಳ್ಳಿ | ದೊಡ್ಡಬ್ಯಾಡರಹಳ್ಳಿ | ರಾಗಿಯಹಳ್ಳಿ |
| ಕುಡುಗುಬಾಳು | | ಹಂಚಿಯಹಳ್ಳಿ | ಹಂಚಿಪುರ | ಅರುಹನಹಳ್ಳಿ |
| | | ಹಿರಿಜಟ್ಟಿಗ | ದೊಡ್ಡಜಟಕ | ಕಾಳಬೋವನಹಳ್ಳಿ |
| | ಮಲ್ಲಿಗೆರೆ > ಕೃಷ್ಣರಾಯಪುರ | ಮಲ್ಲಿಗೆರೆ | ನೆಲ್ಲಿಗೆರೆ | |
| | | ಮುದಸಮುದ್ರ | ಮುತ್ಸಂದ್ರ | |
| | | ಹಗವಮಗೆರೆ | ಹಗಮಗೆರೆ | |
| | ಭೋಗವತಿ | ಭೋಗವಸದಿ > ಭೋಗಿವದಿ > ಭಗವದಿ > ಬೋಗಾದಿ | | |

ಸೀಮೆಯ ಹಿರಿಜಟ್ಟಿಗ ಎಂದು ದಾಖಲಿಸಿದ್ದು, ಈ ಹಿರಿಜಟ್ಟಿಗ ಗ್ರಾಮವು ಹಾಲಿ ದೊಡ್ಡಜಟಕ ಎಂದು ಬದಲಾವಣೆಗೊಂಡಿದ್ದು. ಇದು ಬೆಳ್ಳೂರು ಸಮೀಪವೇ ಇರುತ್ತದೆ. ಕ್ರಿ. ಶ. ೧೨೮೪ರ ಶಾಸನದಲ್ಲಿಯೇ ಬೆಳ್ಳೂರುಸೀಮೆ ಎಂಬ ದಾಖಲೆ ಇರುವುದರಿಂದ, ಪ್ರಾಯಃ ಕ್ರಿ. ಶ. ೧೫೧೨ರ ಈ ಶಾಸನದ ಪಾಠವನ್ನು ತಪ್ಪಾಗಿ ಅರ್ಥೈಸಿರುವ ಅಥವಾ ಕಂಡರಣೆಕಾರನಿಂದ ತಪ್ಪಾಗಿರುವ ಸಾಧ್ಯತೆಯಿದೆ. ಆದುದರಿಂದ ವೆಲ್ಲೂರಸೀಮೆ ಎಂಬುದನ್ನು ಬೆಳ್ಳೂರಸೀಮೆ ಎಂದು ಖಚಿತವಾಗಿ ಹೇಳಬಹುದು.



[ಈ ಲೇಖನವನ್ನು ಸಿದ್ಧಪಡಿಸಲು ನಾಗಮಂಗಲ ತಾಲ್ಲೂಕಿನ ಗ್ರಾಮಗಳ ನಕಾಶೆಯನ್ನು ಒದಗಿಸಿಕೊಟ್ಟ ಶ್ರೀ ಸಿ. ಎಸ್. ನಾಗೇಶ್, ಅಧೀಕ್ಷಕರು (ಆಡಳಿತ) ಸರ್ವೇ ಇಲಾಖೆ, ಪಾಂಡವಪುರ ಇವರಿಗೆ ನನ್ನ ಕೃತಜ್ಞತೆಗಳು.]

## ಆಧಾರಸೂಚಿ ಮತ್ತು ಟಿಪ್ಪಣಿಗಳು

*(ಎಲ್ಲಾ ಶಾಸನ ಸಂಖ್ಯೆಗಳು ಎಪಿಗ್ರಾಫಿಯಾ ಕರ್ನಾಟಕ ಸಂಪುಟ - ೭ರ ನಾಗಮಂಗಲ ತಾಲ್ಲೂಕಿಗೆ ಸೇರಿದವಾಗಿವೆ)*


೧. ಶಾ.ಸಂ. ೭, ಕ್ರಿ. ಶ. ೧೧೩೪, ನಾಗಮಂಗಲ.

೨. ಶಾ.ಸಂ. ೬೧, ಕ್ರಿ.ಶ. ಲಾಲನಕೆರೆ.

೩. ಶಾ.ಸಂ. ೧೬೯, ಕ್ರಿ. ಶ. ೧೧೪೨, ಕಸಲಗೆರೆ.

೪. ಶಾ.ಸಂ. ೧೮೩, ಕ್ರಿ. ಶ. ೧೧೪೪, ಬೋಗಾದಿ.

೫. ಶಾ.ಸಂ. ೧೮೪, ಕ್ರಿ.ಶ. ೧೧೭೩, ಬೋಗಾದಿ.

೬. ಶಾ.ಸಂ. ೬೦, ಕಾಲ-ಇಲ್ಲ, ಕೆಳಗೆರೆ.

೭. ಶಾ.ಸಂ. ೩೦, ಕ್ರಿ.ಶ. ೧೧೪೫, ಕಂಬದಹಳ್ಳಿ.

೮. ಶಾ.ಸಂ. ೧೬೮, ಕ್ರಿ.ಶ. ೧೧೯೦, ಕಸಲಗೆರೆ.

೯. ಶಾ.ಸಂ. ೭೩, ಕ್ರಿ.ಶ. ೧೨೮೪, ಬೆಳ್ಳೂರು.

೧೦. ಶಾ.ಸಂ. ೧೬೬, ಕ್ರಿ.ಶ. ೧೪೪೪, ಮುತ್ಸಂದ್ರ.

೧೧. ಶಾ.ಸಂ. ೧೬೫, ಕ್ರಿ.ಶ. ೧೪೬೦, ಕುಡುಗುಬಾಳು.

೧೨. ಶಾ.ಸಂ. ೧೦೮, ಕ್ರಿ.ಶ. ೧೪೮೪, ಚುಂಚನಹಳ್ಳಿ.

೧೩. ಶಾ.ಸಂ. ೧೩೪, ಕ್ರಿ.ಶ. ೧೫೧೨, ದೊಡ್ಡಜಟಕ.

೧೪. ಶಾ.ಸಂ. ೧೬೦, ಕ್ರಿ.ಶ. ೧೫೧೩, ದೇವಲಾಪುರ.

೧೫. ಶಾ.ಸಂ. ೧೬೪, ಕ್ರಿ.ಶ. ೧೫೨೪, ತಿಬ್ಬನಹಳ್ಳಿ.

೧೬. ಶಾ.ಸಂ. ೧೨೩, ಕ್ರಿ.ಶ. ೧೫೨೬, ಕಾಳಿಂಗನಹಳ್ಳಿ.

೧೭. ಶಾ.ಸಂ. ೧೨೪, ಕ್ರಿ.ಶ. ೧೫೨೬, ಕಾಳಿಂಗನಹಳ್ಳಿ.

೧೮. ಶಾ.ಸಂ. ೯೬, ಕ್ರಿ.ಶ. ೧೬೮೦, ಬೆಳ್ಳೂರು.

೧೯. ಶಾ.ಸಂ. ೧೨೬, ಕ್ರಿ.ಶ. ೧೬ನೇ ಶತಮಾನ.

೨೦. ಶಾ.ಸಂ. ೧೧, ಕ್ರಿ.ಶ. ೧೭ನೇ ಶತಮಾನ.

೨೧. ಶಾ.ಸಂ. ೨೫, ಕ್ರಿ.ಶ. ೧೭-೧೮ನೇ ಶತಮಾನ, ದೊಡ್ಡಾಬಾಲ.

ಕಲ್ಲನಗೌಡ ತಿ. ಪಾಟೀಲ*

# ಕುಂತಲನಗರ ಕುಕ್ಕನೂರು ಗುದ್ನೇಶ್ವರ ಶೈವಮಠ

ಈಗಿನ ಕೊಪ್ಪಳ ಜಿಲ್ಲೆಯ ಯಲಬರ್ಗಾ ತಾಲೂಕಿನ ದೊಡ್ಡಗ್ರಾಮ ಕುಕನೂರ. ಇದು ಹಿಂದೆ ಕುಂತಲನಗರವೆಂದು ಪ್ರಖ್ಯಾತಿ ಪಡೆದ ನಗರ. ಆದರೆ ಕಾಲಾನಂತರ ಅಡಗಿ ಹೋಗಿ ಅವಶೇಷಗಳು ಮಾತ್ರ ಉಳಿದಿವೆ. ಇವುಗಳಲ್ಲಿ ಹಳೇಕೋಟೆಗಳು, ಗುಡಿಗಳು, ಮಠಗಳು, ಗಿಡಮರಗಳು ಮಾತ್ರ ಕಾಣಸಿಗುತ್ತವೆ.

ಗುದ್ನೆಪ್ಪನಮಠವೆಂಬುದು ಒಂದು ಚಿಕ್ಕ ಹಳ್ಳಿ. ಇದು ಈಗಿನ ಕುಕನೂರ ಗ್ರಾಮದಲ್ಲಿ ಒಂದು ಓಣಿ. ಸದ್ಯ ಗುದ್ನೇಶ್ವರ ಮಠ ಒಳ್ಳೆ ಪ್ರಖ್ಯಾತಿ ಪಡೆಯುತ್ತಾ ಬಂದಿದೆ. ೧೧ನೇ ಶತಮಾನದಲ್ಲಿ ಕಲ್ಯಾಣಿ ಚಾಲುಕ್ಯರ ಆಡಳಿತ ಇರುವ ಸಮಯಕ್ಕೆ ಕುಕನೂರು ಒಂದು ಕುತೂಹಲ ಕೆರಳಿಸುವಂತಹ ನಾಡಾಗಿತ್ತು. ಈ ಕುಕನೂರಿನಲ್ಲಿ ಒಬ್ಬ ಮಾಂಡಲಿಕ ಅರಸನು ರಾಜ್ಯವಾಳುತ್ತಿದ್ದ.

ಐತಿಹ್ಯದ ರೀತ್ಯಾ ಇದೇ ವೇಳೆಗೆ ರುದ್ರಮುನಿಸ್ವಾಮಿ ಎಂಬ ಒಬ್ಬ ಸನ್ಯಾಸಿ, ಇಲ್ಲಿಗೆ ಆಗಮಿಸಿದರು. ಆಗ ಕುಕ್ಕನೂರಿನ ದೊರೆಗೆ ಆಪತ್ತು ಬಂದಿತ್ತು. ಆಗ ಬಂದ ಆಪತ್ತನ್ನು ಪರಿಹಾರ ಮಾಡಿದ ರುದ್ರಮುನಿಸ್ವಾಮಿಗಳಿಂದ ಒಂದು ಬೇಡಿಕೆ ಅರಸನಿಗೆ ಬಂತು. ಅದು ಭೂಮಿ ಕಾಣಿಕೆ. ಒಂದು ಗಳಿಗೆ ವೇಳೆಯಲ್ಲಿ ಬಿತ್ತುವಷ್ಟು ಭೂಮಿಯನ್ನು ಕೊಡಲು ಅರಸ ಒಪ್ಪಿಕೊಂಡ.

ಆದರೆ ಅರಸನಿಗೆ ಸ್ವಾಮಿಯ ಗಹನ ಸ್ವರೂಪ ತಿಳಿಯಲಾರದೆ ಹೋಯ್ತು. ಮೂಢನಾದ. ಸ್ವಾಮಿಗಳು ಒಂದು ಕ್ಷಣದಲ್ಲಿ ೧೮೦ ಎಕರೆ ಭೂಮಿಯ ಬಿತ್ತಿ ಪವಾಡ ಸಾಧಿಸಿ ತೋರಿಸಿದರು. ಅರಸನಿಗೆ ಅದು ತಾಳಲಾಗದೆ, ಬಿತ್ತುವುದನ್ನು ನಿಲ್ಲಿಸುವಂತೆ ಮಾಡಿದ. ಅದಕ್ಕೆ ಪ್ರತಿಯಾಗಿ ಅರಸನು ಕೊಟ್ಟ ವಚನ ಪಾಲಿಸದಿದ್ದುದನ್ನು ಕಂಡು, ರುದ್ರಮುನಿಸ್ವಾಮಿ ಅರಸನ ಮೇಲೆ ಕೋಪಿಷ್ಟರಾಗಿ, ಇನ್ನು ನಿನ್ನ ಮುಖವನ್ನು ನೋಡಬಾರದೆಂದು ದೊಡ್ಡದಾದ ಮಣ್ಣಿನ ವಡ್ಡು ಹಾಕಿಸಿ ಅದರಲ್ಲಿ ಗುದ್ದು ತೋಡಿಸಿ ಆ ಕ್ಷಣವೆ ಹಾವಿನ ಆಕಾರವಾಗಿ ಗುದ್ದಿನಲ್ಲಿ ಮಾಯವಾದರು. ಆ ಜಾಗವೆ ಗುದ್ನೇಶ್ವರ ಮಠವಾಗಿದೆ. ಇಂದಿಗೂ ಗುದ್ನಪ್ಪನ ಮಠವೆಂದು ಪ್ರಖ್ಯಾತಿ ಪಡೆದಿದೆ. ಗುದ್ನೇಶ್ವರ ಸ್ವಾಮಿಜಿ ಬಿತ್ತಿದ ಹುಣಿಸೆ ಬೀಜಗಳು ಬೆಳೆದ ೫೦೦೫ ಮರಗಳ ಪೈಕಿ ೭೮೦ ಮರಗಳು ಇಂದಿಗೂ ಹಣ್ಣು ನೀಡುತ್ತ ಬಂದಿವೆ. ಮರ ಮುಪ್ಪಾದರೂ ಹುಳಿಮುಪ್ಪೆ, ಎಂಬ ಗಾದೆಯಂತೆ ಇಂದಿಗೂ ಒಳ್ಳೆ ಫಸಲು ಬರುತ್ತದೆ. ಗುದ್ನೇಶ್ವರರು ಲಿಂಗೈಕ್ಯರಾದ ಜಾಗವೆ ಇಂದು ಮಠವಾಗಿ ಸುತ್ತಲೂ ಜಂಗಮ ಸಮಾಜದ ಜನರು ಕೋಟೆಯಾಕಾರವಾಗಿ ಮನೆಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದಾರೆ.

ಈ ಸಮಾಜದ ಜನರೆ ಈ ಮಠದ ಪೂಜಾಸೇವಾ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ.

ಈಗ ಈ ಗುದ್ನೆಪ್ಪನ ಮಠದ ಭೂಮಿ ಹಾಗು ಬರತಕ್ಕ ಆದಾಯವನ್ನು ಸರಕಾರ ಜವಾಬ್ದಾರಿಯಲ್ಲಿ ನಡೆಸುತ್ತದೆ. ಪ್ರತಿವರುಷ **ಅಗಿ** ಹುಣ್ಣಿಮೆಯೆಂದು ೫ ದಿನದ ಜಾತ್ರೆ ವಿಜೃಂಭಣೆಯಿಂದ ನಡೆಯುತ್ತದೆ. ಇದು ಪುರಾತನವಾದದ್ದೆಂದು ತಿಳಿದುಕೊಳ್ಳಬೇಕಾದರೆ, ಹಿಂದಿನ ಕಾಲದ ಕಲ್ಲಿನ ಕಂಬ ತೊಲೆಗಳು ನಂತರ ಕಟ್ಟಿಗೆ ಕಂಬತೊಲೆಗಳು ಇಂದಿಗೂ ಅವಶೇಷಗಳಾಗಿ ಇಲ್ಲಿ ಮಠದ ಆವರಣದಲ್ಲಿ ನೋಡಲು ಸಿಗುವುದೇ ಸಾಕ್ಷಿ. ಶ್ರೀ ಕಟ್ಟಿಮನಿಯವರ ಕುಂತಲನಗರವೆಂಬ ಪ್ರಬಂಧದಲ್ಲಿ ಈ ಗುದ್ನೆಪ್ಪನ ಮಠದ್ದು ವಿಷಯ ಬರೆದ ಕಾರಣ ಈ ಕಿರು ಪರಿಚಯ ಸದ್ಯ ನೀಡಲಾಗಿದೆ.



* ಪಾಟೀಲ, ಬೆಳಧಡಿ ಅಂಚೆ, ಗದಗ ಜಿಲ್ಲಾ

ಡಾ॥ ವಿರೂಪಾಕ್ಷಿ ಪೂಜಾರಹಳ್ಳಿ*

# ಅಣಜಿ ಗ್ರಾಮದ ಪುರಾತತ್ತ್ವ ಮತ್ತು ಚರಿತ್ರೆ

'ಅಣಜಿ' ಎಂಬ ಗ್ರಾಮ ದಾವಣಗೆರೆ ನಗರಕ್ಕೆ ಸಮೀಪದಲ್ಲಿದೆ. ಪುರಾತತ್ತ್ವ ಅವಶೇಷಗಳಿಂದ ಕೂಡಿದ ಬೋಳುಬೆಟ್ಟದ ಸಾಲು ಅಣಜಿಯವರೆಗೆ, ಮಾಯಕೊಂಡದ ಮೂಲಕ ಹಬ್ಬಿದೆ. ಈ ಗ್ರಾಮದ ಆಸುಪಾಸಿನಲ್ಲಿ, ಫಲವತ್ತಾದ (ಮೆಕ್ಕಲು ಮಣ್ಣು) ಭೂಮಿಯಿದ್ದು, ಸಮೃದ್ಧ ಬೆಳೆಯನ್ನು ಪಡೆಯಲಾಗುತ್ತದೆ. ಈ ಗ್ರಾಮದ ಇತಿಹಾಸ ಕುರಿತು, ಶ್ರೀಮತಿ ಟಿ. ಗಿರಿಜ ಅವರು ಮಾಡಿದ ಸಾಧನೆ ಶ್ಲಾಘನೀಯ.

ಅತೀ ಸಣ್ಣ ಮಟ್ಟಿ, ದಿನ್ನೆ, ಕೋಟೆ ಇತರ ಭಗ್ನಾವಶೇಷ ಗಳಿಂದ ಕೂಡಿದ ಅಣಜಿ ಪರಿಸರದ ಈಗಿನ ಕೆರೆಯ ಪ್ರದೇಶವು ಪೂರ್ವದಲ್ಲಿ ಒಂದು ನದಿ ಹರಿಯುವ ಕೊಳ್ಳದಂತಿದ್ದಿರಬೇಕು. ಈ ಕೆರೆಯ ಸುತ್ತ-ಮುತ್ತ ಶಿಲಾಯುಗದ ಕುರುಹುಗಳು (ಅಸ್ಪಷ್ಟ) ಕಂಡು ಬರುತ್ತವೆ. ಅವುಗಳ ಪೈಕಿ ಬೃಹತ್ ಶಿಲಾ ಸಂಸ್ಕೃತಿಗೆ ಸಂಬಂಧಿಸಿದ ಬೂದಿದಿಬ್ಬ ಮತ್ತು ಶಿಲಾಗೋರಿಗಳು ಇಲ್ಲಿದ್ದು, ಚಿತ್ರದುರ್ಗ, ಹಂಪೆ ಪರಿಸರದ ಬೃಹತ್ ಶಿಲಾಗೋರಿಗಳನ್ನು ಅವು ಹೋಲುತ್ತವೆ. ಅಣಜಿ ಕೆರೆಯ ಹಳ್ಳ ತುಂಗಭದ್ರಾನದಿಗೆ ಬಂದು ಸೇರುತ್ತದೆ. ಪುರಾತತ್ವ ಮಹತ್ವ ಪಡೆದ ಅಣಜಿ ಸಾಂಸ್ಕೃತಿಕ, ಚಾರಿತ್ರಿಕ ಮಹತ್ವ ಪಡೆದುದು ಆನಂತರದ ಬೆಳವಣಿಗೆಯಾಗಿದೆ. ಅಣಜಿ ಎಂದರೆ ವಿಶಾಲವಾದ ಭೂ ಪ್ರದೇಶ. ಜಲದ ಮೂಲನೆಲೆಯಾದ ಇದು ವಿವಿಧ ರಾಜ ವಂಶಗಳಿಗೆ ಯುದ್ಧ ಭೂಮಿ(ರಣರಂಗ-*Arena*)ಯಾಗಿದ್ದಿತು. ಬೌದ್ಧ ನೆಲೆಯೂ ಆಗಿತ್ತಂತೆ: ಕೆರೆಗೆಹಾರದ ಕಥೆಗೆ ಇಲ್ಲಿಯು ಪ್ರಾಶಸ್ತ್ಯವಿದ್ದು, ಕೆರೆಗೆ ಹಾರವಾದ ಸುಮಂಗಲೆ ಹೊನ್ನಮ್ಮನಿಂದ 'ಅಣಜಿ' (ಹೊನ್ನಮ್ಮನ ಊರು) ನಾಮಕರಣವಾಗಿರಬೇಕೆಂಬ ಜನವಾಡಿಕೆ ಇದೆ.

*ಆರಂಭದ ಚರಿತ್ರೆ :* ಪ್ರಾಚೀನ 'ಅಣಜಿ' ಮೆಟ್ಟಿಯ ಮೇಲಿದ್ದು, ತರುವಾಯ ಸ್ಥಳಾಂತರಗೊಂಡು ಆಧುನಿಕ ಗ್ರಾಮದಂತಿದೆ. ಮೌರ್ಯರ ಕಾಲಕ್ಕೆ ಇದು ಬೌದ್ಧ ನೆಲೆಯಾಗಿರ ಬೇಕೆಂಬ ಸೂಚನೆ ಸುಳಿಯುತ್ತದೆ. ಇಲ್ಲಿಗೆ ಸಮೀಪದ ಅಸಗೋಡು, ಬಿಳಿಚೋಡು ಮೊದಲಾದ ಗ್ರಾಮಗಳ ಚರಿತ್ರೆ ಇಲ್ಲಿ ಪ್ರಸ್ತುತವೆನಿಸುತ್ತದೆ. ಶಾತವಾಹನರ ಕಾಲಕ್ಕಾಗಲೇ ವ್ಯಾಪಾರ, ರಾಜಕೀಯ ರಂಗದಲ್ಲಿ ಮಹತ್ತರ ಪಾತ್ರವಹಿಸಿತ್ತು ಈ ಅಣಜಿ ಗ್ರಾಮ. ಇದರ ಆರಂಭಿಕ ಚರಿತ್ರೆ ಕಂಡುಬರುವುದು ಕೇಕಯ ಶಿವಸ್ಕಂದವರ್ಮನ ಮೂಲಕ. ಇಲ್ಲಿನ ಶಾಸನವು ಇದನ್ನು ದೃಢಪಡಿಸುತ್ತದೆ. ಅಣಜಿಗ್ರಾಮದಲ್ಲಿನ ಈ ಶಾಸನದ ಲಿಪಿ ಮಳವಳ್ಳಿ ಸ್ತಂಭಶಾಸನದ ಲಿಪಿಯನ್ನು ಹೋಲುತ್ತದೆ. ಭಾಷೆ ಸಂಸ್ಕೃತ. ಕ್ರಿ.ಶ. ೪೫೦ರಲ್ಲಿ ನೊಣ್ಣಕ್ಕ(೦)ಸ ಪಲ್ಲವನಿಗೂ, ಕದಂಬ ರಾಜ್ಯದ ಸಾಮಂತನಾಗಿ ಆಳುತ್ತಿದ್ದ ಕೃಷ್ಣವರ್ಮನಿಗೂ ಘೋರಯುದ್ಧ ನಡೆದು, ಈತನಿಗೆ ಯುದ್ಧದಲ್ಲಿ ಸೋಲುಂಟಾಗಿ, ಯುದ್ಧದಲ್ಲಿ ಕೃಷ್ಣವರ್ಮನಿಗೆ ಸಹಾಯ ಮಾಡಿದ ಶಿವಸ್ಕಂದ ವರ್ಮನು ಭಗ್ನಹೃದಯನಾಗಿ ಮರಣ ಹೊಂದಿದ. ಈತ ಕೇಕಯ ಕುಲದವನು. ಕೃಷ್ಣವರ್ಮನು ಕೇಕಯ ರಾಜಕುಮಾರಿಯನ್ನು ಮದುವೆಯಾಗಿದ್ದರಿಂದ ಶಿವಸ್ಕಂದವರ್ಮನು ಇವನಿಗೆ ಯುದ್ಧದಲ್ಲಿ ಸಹಕರಿಸಿದ್ದ. ಕೃಷ್ಣವರ್ಮ ಶಾಂತಿವರ್ಮನ ಸೋದರನೂ, ಮಹಾವೀರನಾದ ಇವನು ತ್ರಿಪರ್ವತದಿಂದ ಆಳುತ್ತಿದ್ದ ಆದಿ ಕದಂಬ ಶಾಖೆಗೆ ಸೇರಿದವನಾಗಿದ್ದ. ಕ್ರಿ. ಶ. ೧೧೨೫ರ ಶಾಸನ ಗಳಲ್ಲಿ ನನ್ನ(ನೊ)ಕ್ಕರಸನನ್ನು ವಾರಣಾಂಕುಶ ತೆಲುಂಗರಾಯ, ಭುಜಬಲಭೀಮ ಇತರ ಬಿರುದುಗಳಿಂದ ಕರೆಲಾಗಿದೆ.

ಮೇಲಿನಂತೆ ಕೃಷ್ಣ ವರ್ಮರಾಜ ಮತ್ತು ನಣಕ್ಕಸ ಪಲ್ಲವರ ನಡುವೆ ನಡೆದ 'ತುಮುಲ' ಯುದ್ಧದಲ್ಲಿ ಕೃಷ್ಣವರ್ಮರಾಜನ ಸೈನ್ಯ ಸೋತು ಅವಸಾನಗೊಂಡಿತು. ಅತೀ ಧೈರ್ಯ, ಶೌರ್ಯ ಪ್ರದರ್ಶಿಸಿ ಹೋರಾಡಿದ ಶಿವಸ್ಕಂದವರ್ಮ ಸೋತು ಅವಮಾನ ತಾಳಲಾರದೆ ಸನ್ಯಾಸವನ್ನು ಸ್ವೀಕರಿಸಿ, ದರ್ಭಶಯನನಾಗಿ, ಚಿರಕಾಲದ ಕೀರ್ತಿಯನ್ನು ಅಪೇಕ್ಷಿಸಿ ದಿವಂಗತನಾದನೆಂದು ಶಾಸನದಲ್ಲಿದೆ. ಈತನು ಸೋಮವಂಶೋದ್ಭವನಾಗಿ ಆತ್ರೇಯ ಗೋತ್ರಕ್ಕೆ ಸೇರಿದ್ದು, ಇಕ್ಷ್ವಾಕುಗಳೇ ಮುಂತಾದ ರಾಜಮನೆತನ ಗಳೊಡನೆ ರಕ್ತ ಸಂಬಂಧ ಹೊಂದಿದ್ದ ಕೇಕಯ ಮನೆತನದಲ್ಲಿ ಹುಟ್ಟಿದವನು. ಈತ ಕದಂಬರ ಮೊದಲನೆಯ ಕೃಷ್ಣ ವರ್ಮನಿಗೆ ಕೇಕಯ ರಾಜಪುತ್ರಿಯರಲ್ಲಿ ಜನಿಸಿದ ಮಗನೆಂದು ಊಹಿಸ ಲಾಗಿದೆ.[೧]

ಕದಂಬರ ತರುವಾಯ ಗಂಗರು, ಬಾದಾಮಿ ಚಾಲುಕ್ಯರ ಆಳ್ವಿಕೆಗೆ ಒಳ ಪಟ್ಟಿದ್ದ ಅಣಜಿ ಚಾರಿತ್ರಿಕ ಮಹತ್ವವನ್ನು ಇಲ್ಲಿಂದಲೇ ಗುರುತಿಸಿಕೊಂಡಿತು. ಹದಡಿ ಶಾಸನದ ಪ್ರಕಾರ ಕಲ್ಯಾಣ ಚಾಲುಕ್ಯರ ಆಳ್ವಿಕೆಗೆ ದಾವಣಗೆರೆ ಪ್ರದೇಶ ಸೇರಿತ್ತು. ಕಳಚೂರಿ ಬಿಜ್ಜಳನಿಗೂ ಅಣಜಿ ಸೇರಿ ಹೋಗಿತ್ತು. ಕ್ರಿ.ಶ. ೧೧೭೭ರಲ್ಲಿ ಚೋಳರಿಗೂ ಮತ್ತು ಹೊಯ್ಸಳ ಇಮ್ಮಡಿ ಬಲ್ಲಾಳ ರಾಯನಿಗೂ

* ಅಧ್ಯಾಪಕ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಉಚ್ಚಂಗಿಯಲ್ಲಿ ಯುದ್ಧ ನಡೆದು ಬಲ್ಲಾಳ ಜಯಗಳಿಸಿದ. ಕ್ರಿ.ಶ. ೧೧೮೨ರ ಶಾಸನವು ಅಣಜಿಯ ಆಗ್ನೇಯಕ್ಕಿರುವ ಕೆರೆ ಹೊನ್ನಮ್ಮನ ದೇವಾಲಯದಲ್ಲಿದೆ. ಇದರಲ್ಲಿ ಹೆಮ್ಮಡಿ ದೇವರಸರ ಕುಮಾರ ವಿಠ್ಠಲದೇವರಸನು ಸೋಮನಾಥ ದೇವರಿಗೆ ಅಣಜಿಯೆಂಬ ಅಗ್ರಹಾರವನ್ನು ದಾನವಾಗಿ ನೀಡಿದ ಉಲ್ಲೇಖವಿದೆ. ಮಧ್ಯಕಾಲದಲ್ಲಿ ಅಣಜಿ ಅಗ್ರಹಾರ ವಾಗಿತ್ತೆಂಬುದು ನಿಜ.

***ಪಾಳೆಯಗಾರರು*** : ಕದಂಬರ ನಂತರ ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ನೊಳಂಬ, ಕುಮ್ಮಟದುರ್ಗದ ಅರಸರ ಆಳ್ವಿಕೆಗೆ ಈ ಗ್ರಾಮ ಒಳಪಟ್ಟಿತ್ತು. ವಿಜಯನಗರ ಸಾಮ್ರಾಜ್ಯದಲ್ಲಿ ಅಣಜಿಯು ಆಯಕಟ್ಟಿನ ಸ್ಥಳವಾಗಿದ್ದು, ಯುದ್ಧರಂಗಕ್ಕೆ ಹೇಳಿಮಾಡಿಸಿದಂತಿತ್ತು. ಅಣಜಿಗೆ ಮಹತ್ತರವಾದ ತಿರುವು ಬಂದಿದ್ದು ಪಾಳೆಯಗಾರರಿಂದ. ಇವರ ಆಳ್ವಿಕೆಯಲ್ಲಿ ಯುದ್ಧದ ತಾಣವಾಗಿದ್ದ ಅಣಜಿ, ಪಕ್ಕದ ಬಿಳಿಚೋಡು ಮತ್ತು ಉಚ್ಚಂಗಿ ದುರ್ಗಗಳೊಡನೆ ಅವಿನಾಭಾವ ಸಂಬಂಧ ಹೊಂದಿತ್ತು. ಒಂದು ಮೂಲದ ಪ್ರಕಾರ ಚಿತ್ರದುರ್ಗದ ಮತ್ತಿತಿಮ್ಮಣ್ಣನಾಯಕರಿಂದ ಬಿಳಿಚೋಡಿನ ವಿರೂಪಾಕ್ಷ ಜೋಯಿಸರ ಮಗ ಪರಶುರಾಮಪ್ಪ ನವರು ಹರಿಯದ ಹಚ್ಚಡ ಮುರಿಯದ ಒಡವೆಯನ್ನು ಬೇಡಿದಾಗ ನಾಯಕನು ಪರಶುರಾಮಪ್ಪನವರ ಮಕ್ಕಳಾದ ಯಲ್ಲಪ್ಪ ಭೂನಪ್ಪನವರಿಗೆ ಲಿಂಗದಹಳ್ಳಿ ಶ್ಯಾನುಭೋಗಿಕೆಯನ್ನು ನೀಡಿದಾಗ ಇವರ ವಂಶಸ್ಥರಲ್ಲಿ ಒಬ್ಬರು ಅಣಜಿಗೆ ಹೋಗಿ ನೆಲಸಿದರಂತೆ. ಶ್ಯಾನುಭೋಗಿಕೆಯ ಜೊತೆಗೆ ಸ್ಥಳಪೌರೋಹಿತ್ಯ, ಸುಂಕ ವಸೂಲಿ ಅಧಿಕಾರವನ್ನು ಪಡೆದು ಅಣಜಿಯಲ್ಲಿ ನೆಲಸಿದ್ದು ಸ್ಪಷ್ಟ. ಸು. ಕ್ರಿ.ಶ. ೧೫೭೭ರ ಶಾಸನವೊಂದರಲ್ಲಿ ಕೊಮ್ಮನಾಯಕನ ಮಗ ಚಿಕ್ಕನಾಗಪ್ಪನಾಯ್ಕನು ತನ್ನ ತಂದೆ ತಾಯಿಗಳಿಗೆ ಪುಣ್ಯವಾಗಲೆಂದು ಅಣಜಿಯ ಮಾಚಪ್ಪದೇವರ ಮಠಕ್ಕೆ ದತ್ತಿ ಬಿಟ್ಟರೆಂದು ತಿಳಿದುಬರುತ್ತದೆ.

ಬಸವಾಪಟ್ಟಣದ ಒಡೆತನದಲ್ಲಿದ್ದ ಅಣಜಿಯನ್ನು ಚಿತ್ರದುರ್ಗದ ಕಸ್ತೂರಿರಂಗಪ್ಪನಾಯಕ (೧೬೭೨-೫೨) ಆ ಪಾಳೆಯಗಾರರನ್ನು ಯುದ್ಧದಲ್ಲಿ ಸೋಲಿಸಿ ಪುನಃ ವಶಪಡಿಸಿ ಕೊಂಡ. ಕ್ರಿ.ಶ. ೧೬೭೦ರಲ್ಲಿ ಹರಪನಹಳ್ಳಿಯ ಪಾಳೆಯಗಾರನಾದ ವೀರಮುಮ್ಮಡಿ ನಾಯಕರು ಅಣಜಿ ಕೋಟೆಗೆ ಮುತ್ತಿಗೆ ಹಾಕಿ, ಕೋಟೆ ಹಿಡಿದಾಗ; ಚಿತ್ರದುರ್ಗ ಸಂಸ್ಥಾನದ ಪಾಳೆಯಗಾರನಾಗಿದ್ದ ಚಿಕ್ಕಣ್ಣನಾಯಕನು ಅಪಾರ ಸೈನ್ಯದೊಡನೆ ಅಣಜಿಗೆ ಧಾವಿಸಿ ಹರಪನಹಳ್ಳಿಯವರನ್ನು ಸೋಲಿಸುವುದರೊಂದಿಗೆ ಅಣಜಿಯನ್ನು ತನ್ನ ಸಂಸ್ಥಾನಕ್ಕೆ ಸೇರಿಸಿಕೊಂಡ. ಈ ಘಟನೆಯನ್ನು ಎಂ. ಎಸ್. ಪುಟ್ಟಣ್ಣನವರು ಹೀಗೆ ತಿಳಿಸುತ್ತಾರೆ: ಮಾಘಮಾಸದಲ್ಲಿ ಹರಪನಹಳ್ಳಿಯ ಪಾಳಯಗಾರರು ಅಣಜಿಕೋಟೆಯನ್ನು ಹಿಡಿದು ಅಲ್ಲಿ ಅಧಿಕಾರಿಯಾಗಿದ್ದ ಭೂನಪ್ಪನನ್ನು ತಲೆ ಒಡೆದು ಕೊಂದರು. ಈ ಸಮಾಚಾರವನ್ನು ಕೇಳಿ ಪಾಳಯಗಾರ ಚಿಕ್ಕಂಣನಾಯಕನು ಸಾಣೆಕೆರೆಯಿಂದ ಅಣಜಿಗೆ ಹೋದನು. ಅಷ್ಟರೊಳಗೆ ಅಣಜಿಯಲ್ಲಿದ್ದ ಕೆಂಚನಗೌಡ ಮತ್ತು ಮಂದಿ ಸಹಾ ಸ್ವಾಮಿ ಕಾರ್‍ಯಾರ್ಥವಾಗಿ ಧೈರ್ಯ ಮಾಡಿ ನಿಂತು ಹರಪನಹಳ್ಳಿಯವರನ್ನು ಸೋಲಿಸಿ ಓಡಿಸಿದರು. ಆಗ ಇವರ ಸಾಹಸಕ್ಕೆ ಮೆಚ್ಚಿ ಚಿಕ್ಕಂಣ ನಾಯಕನು ಅಣಜಿಯಲ್ಲಿದ್ದ ಮಂದಿಗೆ ಹೊಲವನ್ನು ಮಾನ್ಯವಾಗಿ ಕೊಟ್ಟ. ಎಲ್ಲರಿಗೂ ಉಡುಗೊರೆಯನ್ನಿತ್ತು ಮಾಘ ಬ॥ ೧೪ ಶಿವರಾತ್ರೆಯ ದಿವಸ ಚಿತ್ರದುರ್ಗಕ್ಕೆ ಬಂದನು. ಈ ಸಂವತ್ಸರದಲ್ಲಿ ಹೊರನಾಯಕನ ಮುಖಾಂತರ ಚಿಕ್ಕಂಣನಾಯಕನ ಸುತ್ತಿನ ಕೋಟೆ, ಕಲ್ಲು ಬಾಗಿಲ ಬಳಿಯಣ ಅರಮನೆ, ಇದರ ಸುತ್ತಿನ ಕೋಟೆ ಇದೆಲ್ಲವನ್ನು ಕಟ್ಟಿಸಿದರು.[೨]

ಕ್ರಿ.ಶ. ೧೬೭೦ರ ಸುಮಾರಿನಲ್ಲಿ ಹಿರೇಮದಕರಿನಾಯಕ ಮಾಯಕೊಂಡದ ಮುತ್ತಿಗೆ ಹಾಕುವ ಪೂರ್ವದಲ್ಲಿ ಅಣಜಿ ಬಳಿಯಲ್ಲಿ ಮರಾಠ ಸಿದ್ಧೋಜಿರಾಯ, ನಗರದವರು, ಸವಣೂರವರು, ಹರಪನಹಳ್ಳಿಯವರು, ರಾಯದುರ್ಗದವರು ಪುನಃ ಸೇರಿಕೊಂಡು ಮಾಯಕೊಂಡಕ್ಕೆ ಮುತ್ತಿಗೆ ಹಾಕಿದ್ದರು. ಇದರಲ್ಲಿ ದುರ್ಗದ ಅರಸ ಸೋಲುತ್ತಾನೆ.[೩] ಹರಪನಹಳ್ಳಿಯವರು ಅಣಜಿಗೆ ಮುತ್ತಿಗೆ ಹಾಕಿದಾಗ 'ದಂಡಿನೊಡನೆ ದಳವಾಯಿ ಭರಮಪ್ಪನು ಹಗೆಗಳನ್ನು ಸದೆ ಬಡಿಯುವಲ್ಲಿ ದುರ್ಗದವರು ವಿಫಲರಾದವರು.' ಕೊನೆಗೆ ಹರಪನಹಳ್ಳಿಯವರು ಪಾಲಿಗೆ ಅಣಜಿಹೋಯಿತು. ಈ ಸಂದರ್ಭದಲ್ಲಿ ಜಾಗೃತಿವಹಿಸಿದ ನಾಯಕ ಹಾವನೂರು, ಗುಡೆಕೋಟೆ, ಅನಂತಪುರ, ಜರಿಮಲೆ, ತರೀಕೆರೆ ಇತರ ಸಂಸ್ಥಾನಗಳ ಸಹಾಯ ಪಡೆದು ಎರಡನೆಯ ಬಾರಿ ಅಣಜಿಗೆ ಮುತ್ತಿಗೆ ಹಾಕಲು (ದಳವಾಯಿ ಭರಮಪ್ಪ ನಾಯಕ) ಸೆಣಸಾಡಿದ. ಕೋಟೆ ಹೊರಗೆ ಸೂಲದ ಮರದ ಮೇಲಿನಿಂದ ಫಿರಂಗಿ ಹೂಡಿ ಲಡಾಯಿ ಮಾಡಿದರು. ಹೊರಗಿನಿಂದ ಹೊಡೆದ ಫಿರಂಗಿ ಗುಂಡು ಕೋಟೆಯೊಳಗೆ ಶತ್ರುಗಳು ಹಾರಿಸುತ್ತಾ ಇದ್ದ ಫಿರಂಗಿ ಬಾಯೊಳಕ್ಕೆ ಹೋಗಿ ಹೊಕ್ಕಿತು. ಈ ಯುದ್ಧದಲ್ಲಿ ಚಿತ್ರದುರ್ಗದವರು ಜಯಶಾಲಿ ಗಳಾದರು. ಹರಪನಹಳ್ಳಿ ಪಾಳೆಯಗಾರರು ದುರ್ಬಲರಾದರು. ಅಣಜಿ ಕೋಟೆ ದುರ್ಗಕ್ಕೆ ಸೇರಿತು. ಬಿಚ್ಚುಗತ್ತಿ ಭರಮಣ್ಣನಾಯಕ (೧೬೮೯-೧೭೨೧) ಚಿತ್ರದುರ್ಗದ ಪ್ರಸಿದ್ಧ ಅರಸ, ತನ್ನ ಅವಧಿಯಲ್ಲಿ ಸುಮಾರು ೨೦ಕೆರೆ, ೩೦ ದೇವಾಲಯ, ಇತರ ಕೋಟೆ-ಕೊತ್ತಲುಗಳನ್ನು ನಿರ್ಮಿಸಿದ್ದ. ಚಿತ್ರದುರ್ಗದ ಪಾಳೆಯ ಪಟ್ಟಿಗೆ ಹೊಸ ತಿರುವನ್ನು ತಂದುಕೊಟ್ಟ ಕೀರ್ತಿ ಇವನದು. ಹರಪನಹಳ್ಳಿ, ರಾಯದುರ್ಗ, ಬಿಜಾಪುರ ಇತರ ವಿರೋಧಿ ಗಳೊಡನೆ ಸದಾ ಯುದ್ಧ ಮಾಡುವ ಪರಿಸ್ಥಿತಿ ಒದಗಿ ಬಂದಿತ್ತು. ಇಂಥ ವಿಷಮ ಸ್ಥಿತಿಯಲ್ಲಿಯೂ ಈ ಅರಸರು ಇಲ್ಲಿನ ಕೋಟೆಯನ್ನು ದುರಸ್ತಿಕಾರ್ಯ ನಡೆಸುವಾಗ ಹರಪನಹಳ್ಳಿ

ಪಾಳೆಯಗಾರರು ಅಡ್ಡಿ ಪಡಿಸಿದ್ದರು. ಅವರೊಂದಿಗೆ ಚಿತ್ರದುರ್ಗದವರು ಯುದ್ಧ ಮಾಡಿ ಸತ್ತ ಸೈನಿಕರ ರಕ್ತದ ಕೆಸರಿನಲ್ಲಿ ಅಣಜಿಯ ಕೋಟೆಯನ್ನು ಕಟ್ಟಲಾರಂಭಿಸಿದರು!

ಹರಪನಹಳ್ಳಿ ಅರಸರು ಬಿಜಾಪುರದ ಸುಲ್ತಾನರ ನೆರವಿನೊಂದಿಗೆ (೧೬೯೦) ಅಣಜಿಕೋಟೆಯನ್ನು ಮುತ್ತಿಗೆ ಹಾಕಿ ವಶಪಡಿಸಿಕೊಂಡಿದ್ದರಿಂದ ಭರಮಣ್ಣನಾಯಕ ರೋಷ-ಕಿಚ್ಚಿನಿಂದ ಶತ್ರುಗಳನ್ನು ದಮನ ಮಾಡಿ ಅಣಜಿ ಕೋಟೆಯನ್ನು ತನ್ನ ಕೈವಶಕ್ಕೆ ತೆಗೆದುಕೊಂಡ. ವಿವಿಧ ಕಾಲಘಟ್ಟಗಳಲ್ಲಿ 'ಅಣಜಿಯ ಆತ್ಮಕಥೆ' ದುರಂತಮಯವಾಗಿದೆ. ಹೈದರಾಲಿ ಚಿತ್ರದುರ್ಗ ಸಂಸ್ಥಾನವನ್ನು ೧೭೭೯ರಲ್ಲಿ ವಶಪಡಿಸಿಕೊಂಡಾಗ ಅಣಜಿಯನ್ನು ಬಾರಾಮಹಲ್ ತಾಲ್ಲೂಕು ಗಡಿಗ್ರಾಮವಾಗಿ ಮಾಡಿಕೊಂಡಿದ್ದ. ಬ್ರಿಟಿಷರ ಆಳ್ವಿಕೆ, ಮೈಸೂರು ಸಂಸ್ಥಾನದಲ್ಲಿ ಸೇರಿ ಹೋದ 'ಅಣಜಿ' ಇಂದು ಗತಕಾಲದ ಚರಿತ್ರೆಯನ್ನು ತನ್ನ ಭಗ್ನಾ ವಶೇಷಗಳೊಂದಿಗೆ ಸಮೀಕರಿಸಿಕೊಂಡಿದೆ.

**ಅಣಜಿ ಗ್ರಾಮದಲ್ಲಿ ಕಂಡುಬರುವ ಪ್ರಾಚ್ಯಾವಶೇಷಗಳು**

ದಾವಣಗೆರೆಯಿಂದ ೧೨ ಕಿ. ಮೀ. ಅಂತರದಲ್ಲಿರುವ 'ಅಣಜಿ' ಚಾರಿತ್ರಿಕ ಮಹತ್ವ ಪಡೆದಗ್ರಾಮ. ಅನೆಗೋಡು, ಮಾಯಕೊಂಡ, ಬಿಳಿಚೋಡು ಮತ್ತು ಉಚ್ಚಂಗಿದುರ್ಗ ಇತರ ಸ್ಥಳಗಳು ಅಣಜಿಗೆ ಸಮೀಪದಲ್ಲಿವೆ. ದಾವಣಗೆರೆ ಮತ್ತು ಜಗಳೂರು ರಸ್ತೆಯಲ್ಲಿ ಅಣಜಿಗ್ರಾಮವಿದ್ದು, ಬೃಹತ್‌ಶಿಲಾ ಸಂಸ್ಕೃತಿಯ ನಿವೇಶನಗಳು ಅಲ್ಲಲ್ಲಿ ಕಂಡುಬರುತ್ತವೆ. ಕರಡಿಗುಡ್ಡ, ಮಾಯಕೊಂಡ ಕಡೆಯಿಂದ ಹಬ್ಬಿರುವ ಕಣಶಿಲೆಯ ಬೆಟ್ಟದ ಸಾಲು ಮುಖ್ಯವೆನಿಸಿದ್ದು, ಇದರ ಆಸುಪಾಸಿನಲ್ಲಿ ಚಾರಿತ್ರಿಕ ಎಡೆಗಳಿವೆ. ಈ ಗ್ರಾಮ ಅತೀ ಹೆಚ್ಚು ಪ್ರಸಿದ್ಧಿ ಪಡೆದಿದ್ದು ಇಲ್ಲಿನ ಕೆರೆಯಿಂದ, ಕೆರೆಹೊನ್ನಮ್ಮಳೆಂಬ ಜನಪದ ಕಥೆಯಿಂದ. ಊರಗೌಡ ಕೆರೆಕಟ್ಟಿದಾಗ ನೀರು ಬೀಳಲಿಲ್ಲವೆಂಬ (ಸಂಗ್ರಹ) ಕಾರಣಕ್ಕೆ ತನ್ನ ಸೊಸೆ ಹೊನ್ನಮ್ಮನನ್ನು ಕೆರೆಗೆ ಹಾರ ಕೊಟ್ಟಾಗ ಕೆರೆ ತುಂಬುವುದು ಜನಪದ ಕಥೆ, ಹಾಡುಗಳಲ್ಲಿ ತಿಳಿದು ಬರುತ್ತದೆ. ಇದಕ್ಕೆ ಪೂರಕವಾಗಿ ಕೆರೆ ಹೊನ್ನಮ್ಮನ ದೇವಾಲಯಗಳು ಸಾಕ್ಷಿಯೆನಿಸಿವೆ.

***ಕೋಟೆ ನಿರ್ಮಾಣ :*** 'ಅಣಜಿ' ಗ್ರಾಮದ ಪ್ರಾಚೀನ ಕೋಟೆಯ ನಿರ್ಮಾಣದ ಬಗ್ಗೆ ಖಚಿತತೆ ಇಲ್ಲ. ಕದಂಬರ ಕಾಲಕ್ಕಾಗಲೇ ಚಾರಿತ್ರಿಕ ಮಹತ್ವ ಪಡೆದಿದ್ದು, ಅನಂತರದಲ್ಲಿ ಸ್ಥಳೀಯ ಅರಸರು ಈ ಕೋಟೆಯನ್ನು ನಿರ್ಮಿಸಿರುವ ಸಂಭವವಿದೆ. ಚಿತ್ರದುರ್ಗದ ಬಿಚ್ಚುಗತ್ತಿ ಭರಮಣ್ಣನಾಯಕ ಇಲ್ಲಿನ ಅಲ್ಪಭಾಗವನ್ನು ಕಟ್ಟಿಸಿ ಮತ್ತು ಜೀರ್ಣೋದ್ಧಾರ ಮಾಡುವ ಸಾಹಸ ಮಾಡಿದ್ದ. ಹಳೇ ಊರಿನ ಪ್ರದೇಶದಲ್ಲಿ (ದಿಬ್ಬ) ಇದನ್ನು ಕಾಣಬಹುದು. ಈ ಪ್ರದೇಶದಲ್ಲಿ ಭಗ್ನಗೊಂಡ ಶಿಲ್ಪಗಳು ರಸ್ತೆಯ ಬದಿಯಲ್ಲಿ ಬಿದ್ದಿದ್ದು, ಸ್ಥಳೀಯ ಕಲ್ಲನ್ನೆ ವಾಸ್ತುಶಿಲ್ಪಕ್ಕೆ ಬಳಸಿಕೊಂಡಿರುವುದು ಗಮನಾರ್ಹ.

***ಸೋಮೇಶ್ವರ ದೇವಾಲಯ :*** ಕೆರೆಯ ಬಳಿ(ಹಿಂದೆ) ಪಾತಾಳ ಗುಡಿಯಾಗಿ ಕಂಡುಬರುವುದೇ ಸೋಮೇಶ್ವರ ದೇವಾಲಯ. ಎರಡು ಕಡೆ ಪ್ರವೇಶ ದ್ವಾರವಿದ್ದು, ಏಕೈಕ ಗುಡಿಯು ನೆಲಮಟ್ಟದ ಚಾವಣಿ ಹೊಂದಿದೆ. ನಾಲ್ಕು ಕಂಬಗಳ (ನವರಂಗ) ಮಧ್ಯೆ ನಂದಿ ವಿಗ್ರಹವಿದೆ. ಗರ್ಭಗುಡಿಯಲ್ಲಿ ೩ ಅಡಿ ಎತ್ತರದ ಶಿವಲಿಂಗಗಳಿವೆ. ಬಸವನ (ನಂದಿ) ಪೂರ್ವಕ್ಕೆ ವಿಘ್ನೇಶ್ವರ, ನವದುರ್ಗಿಯ ವಿಗ್ರಹಗಳಿವೆ. ಶಾಸನವೊಂದು ಇಲ್ಲಿದ್ದು, ಕ್ರಿ.ಶ. ೧೧೮೨ರಲ್ಲಿ ಹೆಮ್ಮಡಿ ದೇವರಸರ ಕುಮಾರ ವಿಠ್ಠಳ ದೇವರಸರು ಸೋಮನಾಥ ದೇವರಿಗೆ ಅಣಜಿಯನ್ನು ಅಗ್ರಹಾರವಾಗಿ ದಾನ ನೀಡಿದ್ದನ್ನು ಹೇಳಿದೆ. ಸ್ಥಳೀಯರು ಈ ದೇವಾಲಯವನ್ನು ಹೊನ್ನಮ್ಮನ ಗುಡಿಯೆಂದು ಕರೆಯುವರು.

***ಈಶ್ವರ ದೇವಾಲಯ :*** ಅಣಜಿ ಕೆರೆಯ ಪಕ್ಕದಲ್ಲಿಯೇ ಈ ದೇವಾಲಯವಿದೆ. ಈಶ್ವರ ದೇವಾಲಯದ ನಿರ್ಮಾಣ ಬಗ್ಗೆ ದಂತಕಥೆ ಪ್ರಚಲಿತವಿದೆ. ಬೇತೂರಿನ ಪಾಂಡ್ಯರಾಜರ ವರ್ಣಾಶ್ರಮ ಧರ್ಮದ ವಿರುದ್ಧ ಬಂಡೆದ್ದ ವಿಶ್ವ ಬಂಧು ಮರುಳಸಿದ್ಧನು ಅವರ ವಿಕೋಪಕ್ಕೆ ತುತ್ತಾಗಿ ಅಣಜಿಕೆರೆಯಲ್ಲಿ ಮುಳುಗಿಸಲ್ಪಟ್ಟಿದ್ದರೂ ಮೇಲೆದ್ದು ಪ್ರತಿಭಟಿಸಿದನಂತೆ.[೪] ಈ ಸ್ಮರಣಾರ್ಥ ದೇವಾಲಯ ನಿರ್ಮಾಣವಾಗಿದ್ದು, ಸ್ಥಳೀಯ ಕಚ್ಚಾವಸ್ತುಗಳನ್ನು ಬಳಸಿಕೊಂಡು ಕಟ್ಟಿದ್ದಾರೆ. ಈ ವಾಸ್ತುಶಿಲ್ಪದಲ್ಲಿ ವಿಶೇಷತೆಯೇನು ಕಾಣುವುದಿಲ್ಲ. ಹಬ್ಬಜಾತ್ರೆಗಳಲ್ಲಿ ಕೆಲವು ಆಚರಣೆಗಳು ಪೂಜಾರ್ಹವಾಗಿವೆ.

***ಅಣಜಿಕೆರೆ :*** ದಾವಣಗೆರೆ ಜಿಲ್ಲೆಯ ಕೆರೆಗಳ ಪೈಕಿ ದೊಡ್ಡದು ಅಷ್ಟೇ ವಿಶಾಲವಾದುದು. ಜನಪದರು ಇದನ್ನು ಕೆರೆಹೊನ್ನಮ್ಮ ಕಟ್ಟಿಸಿರುವಳೆನ್ನುತ್ತಾರೆ. ಚಿತ್ರದುರ್ಗದ ಅರಸ ಬಿಚ್ಚುಗತ್ತಿ ಭರಮಣ್ಣನಾಯಕ ಇದನ್ನು ನಿರ್ಮಿಸಿದ್ದು ವಾಸ್ತವ. ಪೂರ್ವ-ಪಶ್ಚಿಮವಾಗಿ ಹೆಬ್ಬಂಡೆಗಳ ಬಳಸಿ ಕಟ್ಟಿದ ಏರಿಯು ಎತ್ತರವೂ-ಉದ್ದವೂ ಆಗಿದ್ದು ದಾವಣಗೆರೆ-ಜಗಳೂರು ರಸ್ತೆಮಾರ್ಗದ ಬಸ್ಸುಗಳು ಇದರ ಮೇಲೆ ಚಲಿಸುತ್ತವೆ. ಪಕ್ಕದ ನರಸಿಂಹ ದೇವಾಲಯದ ಹತ್ತಿರ ರಾಜಗೆರೆ ಎನ್ನುವ ಚಿಕ್ಕಕೆರೆ ಇದೆ. ರಾಜರು ಕಟ್ಟಿಸಿದ್ದರಿಂದ ಆ ರೀತಿ ಕರೆಯಲಾಗಿದೆ. ಜನಕಲ್ಯಾಣಕ್ಕಾಗಿ ಇಲ್ಲಿ 'ಚೆನ್ನಕ್ಕೇರ ಬಾವಿ'ಯನ್ನು ನಿರ್ಮಿಸಿದ್ದಾರೆ. ಕೆರೆಯ ಹಿಂಭಾಗದಲ್ಲಿ ಸಣ್ಣ-ಪುಟ್ಟ ಗುಡಿ-ಶಿಲ್ಪಗಳು, ಮರಗಳು ಪವಿತ್ರ ಭಾವನೆಗೆ ಪ್ರೇರಣೆ ಸಂಕೇತಗಳಾಗಿವೆ. ವಿಶಾಲವಾದ ಕೆರೆ ಅಂಗಳದಲ್ಲಿ ಜಾಲಿಮರಗಳ ದಟ್ಟ ಅರಣ್ಯವನ್ನು ಬೆಳಸಲಾಗಿದೆ. ಕೆರೆಯ ಬಗ್ಗೆ ಜನರಲ್ಲಿ ಅಪಾರ ಕಥೆಗಳು ಪ್ರಚಲಿತದಲ್ಲಿವೆ.

***ನರಸಿಂಹಸ್ವಾಮಿ ದೇವಾಲಯ :*** ಅಣಜಿಕೆರೆ ಮತ್ತು ಹೊಸ ಊರಿನ ನಡುವೆ ಮಟ್ಟಿ ಮೇಲೆ ಈ ದೇವಾಲಯವಿದೆ. ಹಿಂದೆ ಇಲ್ಲಿ ಹಳೇ ಊರಿದ್ದಿತು. ಕಲ್ಯಾಣ ಚಾಲುಕ್ಯ ಅಥವಾ ಹೊಯ್ಸಳರ ಶೈಲಿಯನ್ನು ಹೋಲುವ ಇದು, ನವರಂಗ, ಗರ್ಭಗೃಹ, ಮಹಾದ್ವಾರಗಳನ್ನು ಹೊಂದಿದೆ. ಮಂಟಪದಲ್ಲಿನ ಇಪ್ಪತ್ತು ಕಂಬ,

ಚಾವಣಿ, ಇತರ ಪಾಳು ಬಿದ್ದ ಮಂಟಪಗಳು ಕಂಡು ಬರುತ್ತವೆ. ಭಗ್ನಾವಶೇಷಗಳು ಇದರ ಸುತ್ತ ಮುತ್ತಲಿದ್ದು, ಪ್ರಾಚೀನ ಭದ್ರತೆಯನ್ನು ಇಂದು ಉಳಿಸಿಕೊಂಡಿಲ್ಲ. ಶಿಖರ, ಅಂಕಣಗಳಿದ್ದು ಯೋಗನರಸಿಂಹನೆಂದು ಕರೆಯಲಾಗಿದೆ. ಈ ಮಂಟಪವನ್ನು ಪಾಳೆಯಗಾರರು ಪುನಃ ನಿರ್ಮಿಸಿದ್ದು, ಹಳೆಯ ದೇವಾಲಯದ ಕಂಬಗಳನ್ನು ಯಾದವರು ನಿರ್ಮಿಸಿದಂತಿದೆ.

**ಮಠ :** ಅಣಜಿಯಲ್ಲಿ ಮಠವಿದ್ದು ಇದನ್ನು ಕಟ್ಟಿಸಿದ್ದು ಮತ್ತು ವ್ಯವಸ್ಥಿತ ವೈಖರಿ ಬಗ್ಗೆ ಜಿಜ್ಞಾಸೆಗಳಿವೆ. ಕೊಮ್ಮನಾಯಕನ ಮಗ ಚಿಕ್ಕನಾಗಪ್ಪನಾಯಕನು ತನ್ನ ತಂದೆ-ತಾಯಿಗಳಿಗೆ ಪುಣ್ಯ ವಾಗಲೆಂದು ಕ್ರಿ.ಸ. ೧೫೭೮ರಲ್ಲಿ ಅಣಜಿಯ ಮಾಚಪ್ಪದೇವರ ಮಠಕ್ಕೆ ದತ್ತಿ ಬಿಟ್ಟನೆಂದು ತಿಳಿದು ಬರುತ್ತದೆ.[೧] ಶಾಸನದಲ್ಲಿ ಮಾಚಪ್ಪ ದೇವರ ಮಠದ ಉಲ್ಲೇಖವಿದ್ದರೂ, ಇಂದು ಅಂಥ ಮಠವನ್ನು ಕಾಣಲಾಗುವುದಿಲ್ಲ. ಕೆರೆಯ ಹತ್ತಿರ ಮಾತ್ರ ದಿಗಂಬರ ಸ್ವಾಮಿಗಳ ಮಠವುಂಟು. ಈಗಾಗಲೇ ತಿಳಿದು ಬಂದಿರುವಂತೆ ೨೦೦ ವರ್ಷಗಳ ಹಿಂದೆ ಸ್ವಾಮಿಯೊಬ್ಬರು ಹಳೆಯ ಊರಿನಲ್ಲಿ ವಾಸವಾಗಿದ್ದು, ಶಿವಭಕ್ತರಾಗಿ, ನಿರ್ವಾಣವಾಗಿದ್ದು ಆತನು ಸಮಾಧಿ ಹೊಂದಿದ್ದರಿಂದ ಗದ್ದುಗೆಯ ಮೇಲೆ ಮಠ ಕಟ್ಟಲಾಗಿದೆ.[೫]

**ಅನುಬಂಧ - ೧**

**ಈ ಗ್ರಾಮದ (ಮೌಖಿಕ ಚರಿತ್ರೆಯಲ್ಲಿ) ಅಣಜಿ ಹೊನ್ನಮ್ಮನ ಕಥೆ**

ಮಧ್ಯ ಕರ್ನಾಟಕದಲ್ಲಿ ಅಣಜಿ ಹೊನ್ನಮ್ಮನ ಹೆಸರು ಸುಪ್ರಸಿದ್ಧವಾದದು. ಕೆರೆಗೆ ಹಾರವಾದವರ ಕಥೆಗಳಲ್ಲಿ ಇದು ಒಂದು. 'ಅಣಜಿ ಹೊನ್ನಮ್ಮ' ಜನಪ್ರಿಯ ಹೆಸರಾಗಿರುವುದು ಚಿತ್ರದುರ್ಗ - ದಾವಣಗೆರೆ ಜಿಲ್ಲೆಗಳಲ್ಲಿ ಕಂಡುಬರುತ್ತದೆ. ಅಣಜಿ ವಿಶಿಷ್ಟವಾದ ಕೃಷಿ, ಒಕ್ಕಲುತನದ, ಮಿಶ್ರ ಸಂಸ್ಕೃತಿಯ ಗ್ರಾಮ. ಹಿಂದೊಮ್ಮೆ ಇಲ್ಲಿನ ಹೊನ್ನಮ್ಮ ಎಂಬ ಹೆಣ್ಣು, ತ್ಯಾಗ, ಬಲಿದಾನಗಳಿಗೆ ಸಂಬಂಧಿಸಿದಂತೆ ಕಂಡುಬರುವ ಕಥಾನಾಯಕಿ ಮತ್ತು ಊರಗೌಡನ ಸೊಸೆ. ಇವಳ ಪತಿ ಮಲ್ಲನಗೌಡ. ಗೌಡನಿಗೆ ತನ್ನ ಮನೆದೇವತೆ ಕೆರೆಯನ್ನು ಕಟ್ಟಿಸಲು ಕನಸಿನಲ್ಲಿ ಹೇಳಿದ್ದರಿಂದ ದೇವರ ಕನಸಿನ ಆಶಯವನ್ನು ಪೂರೈಸಲು ಕೆರೆ ಕಟ್ಟಿಸಿದ. ಎಷ್ಟು ದಿನವಾದರೂ ನೀರು ಬರಲಿಲ್ಲ. ಕೆರೆಗೆ ಬಲಿಯಾದರೆ ನೀರು ಬರುತ್ತದೆಂದು ಶಾಸ್ತ್ರದಿಂದ ತಿಳಿಯಿತು. ಊರಗೌಡ ತನ್ನ ಸೊಸೆಯನ್ನೇ ಕೆರೆಗೆ ಹಾರವನ್ನಾಗಿ ಕೊಟ್ಟ. ಜನಪದ ಹಾಡು, ಕಥನಗೀತೆಗಳಲ್ಲಿ ಗಂಡನ ಪ್ರಸ್ತಾಪ ಕೆಲಕಡೆ ಬರುವುದಿಲ್ಲ. ಹಾರಕೊಡುವ ಸಂಗತಿಯನ್ನು ಹೊನ್ನಮ್ಮನಿಗೆ ತಿಳಿಸಿದವನು ಆ ಊರಿನ ಕುರುಬ. ಈಕೆಗೆ ದೇವೇಂದ್ರನೆಂಬ ಸುಂದರ ಮಗನೊಬ್ಬನಿದ್ದ. ಗಂಡ ಯಾವುದೋ ವ್ಯವಹಾರಕ್ಕೆಂದು ಮಲೆನಾಡಿಗೆ ಹೊರಟು ಹೋಗಿದ್ದ. ಸೊಸೆಯ ಅಂತರ್ಯ ಅರಿತ ಗೌಡ ಒಂದ್ಪೊತ್ತು ಇರಲು ತಿಳಿಸಿದ. ಹಿರಿಯರ ಆದೇಶದಂತೆ ಒಂದ್ಪೊತ್ತಿದ್ದ ಹೊನ್ನಮ್ಮ ಕೆರೆಯ ಹತ್ತಿರ ಪೂಜೆಗಾಗಿ ಮಾವನೊಂದಿಗೆ ನಡೆದಳು. ಮುತ್ತೈದೆಯರು ಇವರ ಹಿಂದೆ ಬರುತ್ತಿದ್ದರು. ಪೂಜಾಕಾರ್ಯಗಳು ಮುಗಿದ ಮೇಲೆ ಬಂದವರೆಲ್ಲರೂ ಹೊರಟು ಬಂದರು. ಗೌಡ ಮತ್ತು ಸೊಸೆ ಉಳಿದದ್ದು ಇಬ್ಬರು ಮಾತ್ರ. ಕೆರೆ ಅಂಗಳದಿಂದ ಇನ್ನೇನು ದಡಸೇರಿ ಊರಿಗೆ ಬರುವಷ್ಟರಲ್ಲಿ ಗೌಡ ಬೇಕಂತಲೇ ಬಿಟ್ಟು ಬಂದಿದ್ದ ಬೆಳ್ಳಿ ಬಟ್ಟಲನ್ನು ತರಲು ಹೇಳಿದ. ಮರಳಿ ಹೋದಾಗ ಕೆರೆಗೆ ನೀರು ಬರುತ್ತಿತ್ತು. ಇನ್ನೇನು ಒಂದೊಂದೇ ಮೆಟ್ಟಿಲನ್ನು ಹತ್ತುತ್ತಿದ್ದಂತೆ ನೀರು ಬಂದು ಕೆರೆ ತುಂಬಿ ಹೊನ್ನಮ್ಮನನ್ನು ಆಹುತಿ ತೆಗೆದುಕೊಂಡಿತು. ಹೊನ್ನಮ್ಮ ಕೆರೆಹಿಂದಿರುವ ಶಿವಾಲಯದಲ್ಲಿ ಐಕ್ಯಳಾದಳೆಂದು, ವಾಸವಾಗಿದ್ದಳೆಂದು ನಂಬಲಾಗಿದೆ. ಒಬ್ಬ ದಾರಿಹೋಕ ಎಲ್ಲರಂತೆ 'ಹೊನ್ನಮ್ಮ ಚೆನ್ನಾಗಿದ್ದೀಯಾ' ಎಂದು ಕೇಳಿದಾಗ (ಮಡಿವಾಳ) ಹೊನ್ನಮ್ಮನ ಸೊಲ್ಲು ಅಡಗಿದಂತೆ ನಿನ್ನ ಸೊಲ್ಲು ಅಡಗಲೆಂದು ಶಾಪಕೊಟ್ಟು ಪ್ರಾಣಬಿಟ್ಟಳಂತೆ. ಆ ಶಾಪದಂತೆ ಅವನು ಹೊನ್ನಮ್ಮನ ಗುಡಿ ಮುಂದಿರುವ ನಿಲುವುಗಲ್ಲು ಆಗಿ ನಿಂತನಂತೆ.

ಒಟ್ಟಾರೆ ಹೇಳುವುದಾದರೆ ಜಲಸಂಪತ್ತು ಅಧಿಕವಿದ್ದೆಡೆ ಕೃಷಿ ಚಟುವಟಿಕೆಗಳು ನಡೆದು ಜನಜೀವನವು ಸುಧಾರಿಸಿರುತ್ತದೆ. ಹೀಗೆ ಅಣಜಿಗ್ರಾಮವು ಮೂಲದಲ್ಲಿ ಬೃಹತ್ ಶಿಲಾ ಸಂಸ್ಕೃತಿಯ ನೆಲೆಯಾಗಿತ್ತು. ಈ ಬಗೆಯ ನೆಲೆಗಳಲ್ಲಿ ಒಂದೊಂದು ಬಗೆಯ ಪುರಾಣ, ಕಥೆಗಳಿರುವಂತೆ ಇಲ್ಲಿಯೂ ಕೆರೆಗೆ ಹಾರದ ಕಥೆ ಬರುತ್ತದೆ. ಚರಿತ್ರೆಯಲ್ಲಿ ಆಳರಸನೊಬ್ಬ ಪ್ರಜೆಗಳ ಹಿತಕ್ಕಾಗಿ ಕೆರೆಯನ್ನು ಕಟ್ಟಿಸುವುದುಂಟು. ನೀರು ಬರಲಿಲ್ಲ ಎಂಬ ಕಾರಣಕ್ಕೆ ಹೆಣ್ಣನ್ನೂ ಬಲಿಕೊಡುವುದು, ಆ ಕಾಲದ ಮೌಢ್ಯತೆಯನ್ನು ಸಂಕೇತಿಸುತ್ತದೆ. ಈ ಎಲ್ಲಾ ಹಿನ್ನೆಲೆಗಳಿರುವ ಅಣಜಿ ನಿಜಕ್ಕೂ ಯುದ್ಧ ಭೂಮಿಯಾಗಿದ್ದು ಎಲ್ಲ ರಾಜ್ಯಗಳಿಗೂ ಕೇಂದ್ರಸ್ಥಳ ಮತ್ತು ಆಯಕಟ್ಟಿನ ನೆಲೆಯಾಗಿದ್ದಿತು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಬಾ.ರಾ. ಗೋಪಾಲ., **ಬನವಾಸಿ ಕದಂಬರು**, ಪು: ೫೭.
೨. ಎಂ. ಎಸ್. ಪುಟ್ಟಣ್ಣ., **ಚಿತ್ರದುರ್ಗದ ಪಾಳಯಗಾರರು**, ಪು: ೩೯ - ೪೦.
೩. ಅದೇ, ಪು: ೬೯.
೪. ಟಿ. ಗಿರಿಜ., **ಚಿತ್ರದುರ್ಗ ಜಿಲ್ಲಾ ದರ್ಶಿನಿ**, ಪು: ೫೨೫.
೫. ಅದೇ, ೫೨೫.
೬. ಇಲ್ಲಿಗೆ ಸಮೀಪದ ದ್ಯಾಮವ್ವನಹಳ್ಳಿಯಲ್ಲಿ ನೆಲೆಸಿದ್ದ ರೇವಣಸಿದ್ಧ ಶಾಸ್ತ್ರಿಗಳು ಈ ಬಗ್ಗೆ ಸಾಕಷ್ಟು ತಿಳಿದಿದ್ದರು. ಇಂದು ಅವರು ದಿವಂಗತರಾಗಿದ್ದಾರೆ.
೭. ಕ.ರಾ.ಕೃ., **ಅಣಜಿ ಹೊನ್ನಮ್ಮ**.
೮. ಗಿರಿಜ ಟಿ., (೨೦೦೧), **ದಾವಣಗೆರೆ ಇದು ನಮ್ಮ ಜಿಲ್ಲೆ**.
೯. ಕುಂಬಾ ಸದಾಶಿವಪ್ಪ., **ಹರಪನಹಳ್ಳಿ ಪಾಳಯಗಾರರು**.
೧೦. ಜಾರ್ಜ್ ಮೊರೇಸ್., **ದಿ ಕದಂಬ ಕುಲ**.
೧೧. **ಚಿತ್ರದುರ್ಗ ಡಿಸ್ಟ್ರಿಕ್ಟ್ ಗ್ಯಾಸೆಟಿಯರ್**., ಬಿ. ಎನ್. ಸತ್ಯನ್ (ಸಂ.)

ಡಾ॥ ಹೆಚ್. ಚಂದ್ರಶೇಖರ*

# ಕಲಬುರ್ಗಿ ಕೋಟೆಯ ನಿವೇಶನ - ಒಂದು ಅಧ್ಯಯನ

ಕರ್ನಾಟಕದ ಕೋಟೆಗಳಲ್ಲಿ ಕಲಬುರ್ಗಿಯ ಕೋಟೆಯು ಒಂದು ಮುಖ್ಯ ಕೋಟೆಯಾಗಿದೆ. ಇದು ಒಂದು ಶಿಲಾದುರ್ಗ.[೧] ಬೆಸಾಲ್ಟ್‌ನ ದೊಡ್ಡ ದೊಡ್ಡ ಅಳತೆಯ ಸೈಜುಗಲ್ಲುಗಳಿಂದ ಕಟ್ಟಲಾಗಿರುವ ಎರಡು ಸುತ್ತಿನ ಕೋಟೆಯ ಸುತ್ತಲೂ ಆಳವಾದ ಮತ್ತು ಸುಮಾರು ೨೦ ಮೀಟರನಷ್ಟು ಅಗಲವಾದ ಕಂದಕವಿದೆ. ಈ ಕಂದಕದಲ್ಲಿ ನೀರುತುಂಬಿದಾಗ ಹೊರಕ್ಕೆ ಹರಿದು ಇಂದು ಅಪ್ಪನ ಕೆರೆ ಎಂದು ಕರೆಯಲ್ಪಡುವ ಕೆರೆಗೆ ಹರಿದು ಬರುತ್ತದೆ. ಈ ಕೋಟೆ ಒಂದು ಸುಭದ್ರ ಕೋಟೆ. ಕೋಟೆಯ ಕಾವಲಿಗಾಗಿ ಬುರುಜುಗಳು, ಮಜಭೂತಾದ ಬಾಗಿಲುಗಳು ಇತ್ಯಾದಿಗಳನ್ನು ಯೋಜಿಸಿ ನಿರ್ಮಿಸಲಾಗಿದೆ. ಕೋಟೆಯ ವಿವಿಧ ಭಾಗಗಳ ವಿವರಣೆ ಪ್ರಸ್ತುತ ಅಧ್ಯಯನದಲ್ಲಿ ಒಳಗೊಳ್ಳುವುದಿಲ್ಲವಾದ್ದರಿಂದ ಅವುಗಳ ವಿವರಣೆಯನ್ನು ಇಲ್ಲಿ ನೀಡಲಾಗುವುದಿಲ್ಲ. ಈ ಕೋಟೆಯನ್ನು ವಾರಂಗಲ್ಲಿನ ಅರಸ ಗುಲಚಂದ ಮೊದಲು ಕಟ್ಟಿಸಿದನು; ನಂತರ ಬಹಮನಿ ಮನೆತನದ ಸ್ಥಾಪಕ ಅಲ್ಲಾವುದ್ದೀನ್ ಬಹಮನ್‌ಶಾಹ ಬಲಗೊಳಿಸಿದನು ಎಂಬ ಅಭಿಪ್ರಾಯಕ್ಕೆ ಯಾವುದೇ ಆಧಾರಗಳಿಲ್ಲದ್ದರಿಂದ, ಇದನ್ನು ಹಸನಗಂಗು ಬಹಮನಿ (ಅಲ್ಲಾವುದ್ದೀನ ಬಹಮನ್ ಶಾಹ) ಎಂಬ ಅಮೀರನು ಈ ಕೋಟೆಯನ್ನು ಕಟ್ಟಿಸಿದನು ಎಂದು ಈಗ ಬಹುತೇಕ ಎಲ್ಲಾ ಇತಿಹಾಸಕಾರರ ಮತವಾಗಿದೆ.[೨] ಈ ಸುಲ್ತಾನನು ಕ್ರಿ.ಶ. ೧೩೪೭-೫೮ರವರೆಗೆ ರಾಜ್ಯವಾಳಿದನು. ಇಷ್ಟು ನಮ್ಮ ಪ್ರಸ್ತುತ ಚರ್ಚೆಗೆ ಅವಶ್ಯಕವಾದ ಐತಿಹಾಸಿಕ ಹಿನ್ನೆಲೆ.

*ಕಲಬುರ್ಗಿಯ ಸಂಕ್ಷಿಪ್ತ ಭೂವಿಜ್ಞಾನ :* ಕಲಬುರ್ಗಿ ನಗರವು ಭಾರತದ ಭೂವೈಜ್ಞಾನಿಕ ಸಾಹಿತ್ಯ ದಲ್ಲಿ ಬಹು ಚರ್ಚಿತವಾಗಿರುವ ದಕ್ಷಿಣ ಟ್ರ್ಯಾಪ್ *(Deccan Trap)* ಎಂಬ ಜ್ವಾಲಾಮುಖಿಜ ಶಿಲೆಯಿಂದ ಆವೃತವಾಗಿದೆ. ಈ ಶಿಲೆಯು ಕಪ್ಪು ವರ್ಣದ್ದು ಮತ್ತು ಹಲವು ಕಡೆ ಕುಳಿಗಳಿಂದ *(Vesicles)* ಕೂಡಿದ್ದು ಆಗಿರುತ್ತದೆ. ಈ ಶಿಲೆಯು ತುಂಬಾ ಗಟ್ಟಿಯಾದ ಶಿಲೆಯಾಗಿರುವದರಿಂದ ಸುಲಭವಾಗಿ ಒಡೆಯಲು ಸಾಧ್ಯವಿಲ್ಲ. ಆದ್ದರಿಂದ ಈ ಶಿಲೆಯನ್ನು ಸೈಜಗಲ್ಲಗಳನ್ನಾಗಿ ಮಾಡಿ ಕೋಟೆ ಗೋಡೆಗೆ ಉಪಯೋಗಿಸಲಾಗಿದೆ.

ಕಲಬುರ್ಗಿ ನಗರವು ಉತ್ತರದಿಂದ ದಕ್ಷಿಣದ ಕಡೆಗೆ (ಅಂದರೆ ಗಂಜ, ಶಾಬಾಜಾರ ಇತ್ಯಾದಿ ಪ್ರದೇಶಗಳಿಂದ ಸ್ಟೇಶನ್ ಕಡೆಗೆ) ಇಳಿಜಾರಾಗಿರುವ ಮೇಲ್ಮೈ ಲಕ್ಷಣವನ್ನು ಹೊಂದಿರುವ ಭೂಪ್ರದೇಶ. ಈ ಭೂಮ್ಯಾಕೃತಿಯ ಲಕ್ಷಣಗಳನ್ನು *(Geomorphological features)* ಈ ಕೋಟೆಯ ನಿರ್ಮಾಪಕರು ಮತ್ತು ಅವರ ಹಿಂದಿನವರು ಅರಿತಿದ್ದರು ಎಂಬುದಕ್ಕೆ ಈಗಿರುವ ಕಂದಕ ಮತ್ತು ಅಪ್ಪನಕೆರೆಗಳೇ ಸಾಕ್ಷಿ. ಅಂದರೆ ಈ ಕೆರೆ ಮತ್ತು ಕಂದಕಗಳಿಗೆ ಇರುವ ಜಲಾನಯನ ಪ್ರದೇಶ ಉತ್ತರದ (ವಾಯುವ್ಯ ಮತ್ತು ಈಶಾನ್ಯ ಸೇರಿ) ಭೂಭಾಗವಾಗಿದೆ. ಈಗಲೂ ಚೋರ ಗುಂಬಜ, ಶೇಖ ರೋಜಾ, ಶಹಾಬಾಜಾರಗಳ ಮೂಲಕ ಮತ್ತು ಮೊಮೀನಪುರ, ಗಾಜಿಪುರ ಪ್ರದೇಶಗಳ ಮೂಲಕ ಹರಿದು ಬರುವ ಮಳೆ ನೀರೇ (ಹಳ್ಳಗಳು ಮತ್ತು ಗಟಾರುಗಳ ರೂಪದಲ್ಲಿ) ಈ ಕಂದಕ ಮತ್ತು ಕೆರೆಗೆ ಜಲಾಧಾರ. ಈ ಮೇಲ್ಮೈ ಲಕ್ಷಣಗಳನ್ನು ೫೬ ಸಿ/೧೫ ಟೋಪೋಶೀಟಿನಲ್ಲಿ *(Toposheet)* ಮತ್ತು ಉಪಗ್ರಹಚಿತ್ರಗಳಲ್ಲಿ *(Satellite imagery)* ಸ್ಪಷ್ಟವಾಗಿ ಗುರ್ತಿಸಬಹುದಾಗಿದೆ. ಚೋರಗುಂಬಜಿನ ಮೇಲ್ಮೈ ಎತ್ತರ *(Elevation)* ೫೦೪ ಮೀಟರ, ಕಟಗರಪುರದ ಎತ್ತರ ೪೬೯ ಮೀ. ಮೊಮೀನಪುರದ ಈಶಾನ್ಯದಲ್ಲಿರುವ ಪ್ರದೇಶದ ಎತ್ತರ ೪೮೦.೬. ಮೀ., ಅಪ್ಪನಕೆರೆ ಕಟ್ಟೆಯ ಎತ್ತರ ೪೫೯ ಮೀ. ಈ ಎತ್ತರಗಳು ನೀರು ಹರಿದು ಬರುವ ದಿಕ್ಕನ್ನು ಸೂಚಿಸುತ್ತವೆ. ಸಾಮಾನ್ಯವಾಗಿ ಕೋಟೆಯನ್ನು ಕಟ್ಟಲು ಎತ್ತರವಾದ ಮತ್ತು ಕಡಿದಾದ ಬೆಟ್ಟಗಳನ್ನು ಆರಿಸಲಾಗುತ್ತದೆ. ಆದರೆ ಕಲಬುರ್ಗಿ ಯಂಥ ಬಯಲು ಪ್ರದೇಶದಲ್ಲಿ ಕೋಟೆಯನ್ನು ಕಟ್ಟಬೇಕಾದರೆ ಕೋಟೆಯ ಸುತ್ತಲೂ ರಕ್ಷಣೆಗಾಗಿ ನೀರು ತುಂಬಿದ ಕಂದಕದ ಅವಶ್ಯಕತೆ ಇರುತ್ತದೆ. ಈ ಅವಶ್ಯಕತೆಯನ್ನು ಗಮನಿಸಿದ ಬಹಮನ್‌ಶಾ ಈ ನಿವೇಶನವನು ಆರಿಸಿದ್ದನು. ಇದರ ಹೊರತಾಗಿ ಬೇರೆಯ ಸೂಕ್ತ ನಿವೇಶನ ಕೋಟೆಗಾಗಿ ಕಲ್ಬುರ್ಗಿ ನಗರದಲ್ಲಿ ಇಲ್ಲ. ಭೂಮ್ಯಾಕೃತಿಯ ದೃಷ್ಟಿಯಿಂದ *(Geomorphology)* ನೋಡಿದಾಗ ಈ ಕೋಟೆಯು ಒಂದು ಕೆರೆಯ ದ್ವೀಪಕಲ್ಪದ ಮೇಲಿರುವ ನಿವೇಶನದ ಮೇಲೆ ನಿರ್ಮಿಸಲಾಗಿದೆ. ಅಂದರೆ ಕಂದಕವು ಇಲ್ಲವೆಂದು ಭಾವಿಸಿದರೆ ಈ ಕೋಟೆಯ ನಿವೇಶನವು ಮೂರು ಕಡೆಯಿಂದ ಜಲಾವೃತವಾದ ಭೂಭಾಗವಾಗಿದೆ. ಈ ಭೂವೈಜ್ಞಾನಿಕ ಅಂಶಗಳನ್ನು ನೆನೆಪಿನಲ್ಲಿಟ್ಟುಕೊಂಡರೆ ಮುಂದಿನ ಚರ್ಚೆಗೆ ಅನುಕೂಲವಾಗುತ್ತದೆ.

*ಕೋಟೆಗೋಡೆಯೊಳಗಿನ ದೇವಾಲಯದ ಮಂಟಪಗಳು:* ಈ ಕೋಟೆಯ ದಕ್ಷಿಣದ ಗೋಡೆಯಲ್ಲಿ, ಅಂದರೆ ಪೂರ್ವದ ಹೆಬ್ಬಾಗಿಲಿನಲ್ಲಿ ಒಳಕ್ಕೆ ಪ್ರವೇಶಿಸಿ ಎಡಕ್ಕೆ ಕೊಂಚದೂರ ಹೋದರೆ ಒಂದು ಬಾವಿ ಸಿಗುತ್ತದೆ, ನಂತರ ಕೊಂಚ ಮುಂದೆ ನಡೆದರೆ

* ಎಮ್‌ಐಜಿ- ೭೭, ೬ನೇ ಕ್ರಾಸ್, ೬ನೇ ಮೇನ್, ಕೆಹೆಚ್‌ಬಿ. ಕಾಲೋನಿ, ೨ನೇ ಹಂತ, ಬಸವೇಶ್ವರನಗರ, ಬೆಂಗಳೂರು-೭೯

ಅರ್ಧ ಬಿದ್ದು ಹೋಗಿರುವ ಕೋಟೆ ಗೋಡೆ ಮತ್ತು ಎರಡು ಮಂಟಪಗಳು ಸಿಗುತ್ತವೆ. ಈ ಎರಡು ಮಂಟಪಗಳ ಮಧ್ಯೆ ೫೨೭ ಸೆಂ.ಮೀ. ನಷ್ಟು ಬಯಲಿದೆ. ಈ ಎರಡು ಮಂಟಪಗಳಲ್ಲಿ ಒಟ್ಟು ೧೨ ಕಂಬಗಳು ೧೨ ಅರ್ಧ ಕಂಬಗಳಿವೆ. ಒಂದೊಂದು ಕಂಬದ ಗದ್ದಿಗೆಯು *(Base)* ೩೭.೫ x೩೦.೫ ಸೆಂ.ಮೀ. (೧೫"x೧೫") ಅಳತೆಯ ಚಚ್ಚೌಕಾಕರದ್ದಾಗಿದೆ. ಪ್ರತಿ ಕಂಬದ ಎತ್ತರ ೧೬೬ ಸೆಂ.ಮೀ. ಅದರ ಮೇಲೆ ೩೧ ಸೆಂ.ಮೀ. ಎತ್ತರದ ಬೋದಿಗೆಯನ್ನು ಜೋಡಿಸಲಾಗಿದೆ. ಒಂದು ಕಂಬವು ಇನ್ನೊಂದು ಕಂಬದಿಂದ ಪೂರ್ವ-ಪಶ್ಚಿಮ ದಿಕ್ಕಿನಲ್ಲಿ ೧೩೩ ಸೆಂ.ಮೀ. ಅಂತರದಲ್ಲಿದ್ದರೆ, ಉತ್ತರ-ದಕ್ಷಿಣ ದಿಕ್ಕಿನಲ್ಲಿ ೧೮೩ ಸೆಂ.ಮೀ. ಅಂತರದಲ್ಲಿದೆ. ಸೂಕ್ಷ್ಮವಾಗಿ ಗಮನಿಸಿದರೆ ಅರ್ಧಕಂಬಗಳೆಂದು ಕಾಣುವ ಈ ಕಂಬಗಳು ಕೋಟೆಗೋಡೆಯೊಳಗೆ ಸಿಲುಕಿರುವ ಪೂರ್ಣ ಕಂಬಗಳೇ ಆಗಿವೆ. ಈ ಮಂಟಪಗಳ ತಳವಿನ್ಯಾಸವನ್ನು ಸಿದ್ಧಪಡಿಸಿ ಪ್ರಸ್ತುತ ಪಡಿಸಲಾಗಿದೆ.

ಈ ಎಲ್ಲಾ ಕಂಬಗಳು ಮತ್ತು ದಕ್ಷಿಣದ ಗೋಡೆಗೆ ಆನಿಸಿರುವ ಕುಸುರಿ ಕೆಲಸವಿರುವ ಚಪ್ಪಡಿಗಳು *(Slabs)* ಮತ್ತು ತೊಲೆಗಳು *(Beams)* ಸ್ಥಳೀಯವಾಗಿ ಸಿಗುವ ಬೆಸಾಲ್ಟ್ ಶಿಲೆಯಿಂದ ಕಟೆಯಲಾಗಿದೆ. ಇಲ್ಲಿ ಕುಳಿಗಳಿರದ ಸಮನಾದ ಸೂಕ್ಷ್ಮಕಣಗಳುಳ್ಳ ಬೆಸಾಲ್ಟ್ ಶಿಲೆಯನ್ನು, ಇವುಗಳನ್ನು ಕಟೆದ ಶಿಲ್ಪಿಗಳು ಆರಿಸಿರುವದು ಗಮನಾರ್ಹ ಅಂಶ. ಈ ಮಂಟಪಗಳ ಕಂಬಗಳು ಕಲ್ಯಾಣ ಚಾಳುಕ್ಯರ ಕಾಲದ ಸುಂದರ ಸೃಷ್ಟಿಗಳೆಂಬುದು ಮೇಲ್ನೋಟಕ್ಕೆ ತಿಳಿದು ಬರುತ್ತದೆ. ಅತ್ಯಂತ ಕಠಿಣ ಶಿಲೆಯಲ್ಲಿ ಸೂಕ್ಷ್ಮ ಕೆತ್ತನೆಯ ಕೆಲಸ ಅಚ್ಚರಿಯನ್ನುಂಟುಮಾಡುತ್ತದೆ. ಕಂಬಗಳ ಮೇಲೆ ಹೂಬಳ್ಳಿಗಳನ್ನು ಮಾತ್ರ ಕೆತ್ತಲಾಗಿದೆ. ಆದರೆ







ಕೆಲ ಬೋದಿಗೆಗಳ ಮೇಲೆ ಕುಬ್ಜ ಮಾನವ ಶಿಲ್ಪವನ್ನು ಕೂಡಿಸಲಾಗಿದೆ.

ತೊಲೆಗಳನ್ನು ಹೆಚ್ಚು ಸಿಂಗರಿಸಲಾಗಿದೆ. ಒಂದೊಂದು ತೊಲೆಯ ಮೂರು ಮಗ್ಗುಲುಗಳಲ್ಲಿಯೂ *(Sides)* ಉಬ್ಬು ಶಿಲ್ಪಗಳನ್ನು ಮತ್ತು ಕಮಲಗಳನ್ನು ಕಲಾಪೂರ್ಣವಾಗಿ ಕೆತ್ತಲಾಗಿದೆ. ಆನೆಯ ಸಾಲುಗಳು, ಹಂಸಗಳ ಸಾಲುಗಳು ಇವುಗಳ ಮಧ್ಯೆ ಒಂದು ದೈವದ ಶಿಲ್ಪ ಗಮನವನ್ನು ಸೆಳೆಯುತ್ತದೆ. ಹಾಗೆಯೇ ಸಮುದ್ರ ಮಂಥನದ ಶಿಲ್ಪ, ರಥದ ಮೇಲೆ ಸವಾರನಾಗಿ ಯುದ್ಧಕ್ಕೆ ಹೊರಟಂತೆ ಕಾಣುತ್ತಿರುವ ವೀರರ ಶಿಲ್ಪಗಳು, ಸೈನಿಕರ ಶಿಲ್ಪಗಳು ಇವುಗಳನ್ನು ಶಿಲ್ಪಿಗಳು ಸುಂದರವಾಗಿ ಕೆತ್ತಿದ್ದಾರೆ. ಒಂದು ತೊಲೆಯ ಮೇಲೆ ಒಬ್ಬ ಮಹಿಳೆ ಶಿವಲಿಂಗವನ್ನು ಪೂಜಿಸುತ್ತಿರುವ ಶಿಲ್ಪ ಅತ್ಯಂತ ಪ್ರಮುಖ ಶಿಲ್ಪ. ಇವುಗಳಲ್ಲದೆ ಪ್ರತಿ ಅಂಕಣದ ಛತ್ತಿನಲ್ಲಿ ಒಂದು ಚೌಕಾಕಾರದ ಆಕೃತಿಯನ್ನು ಕೆತ್ತಿ ಅದರ ಮಧ್ಯದಲ್ಲಿ ಸುಂದರ ಕಮಲವನ್ನು ಕೆತ್ತಿರುವದು ಈ ಶಿಲ್ಪಿಗಳ ಕುಶಲತೆಗೆ ಸಾಕ್ಷಿ. ಒಟ್ಟಾಗಿ ಹೇಳುವುದಾದರೆ ಈ ದೇಗುಲವನ್ನು ಸುಂದರವಾಗಿ ಯೋಜಿಸಿ ನಿರ್ಮಿಸಲಾಗಿದೆ. ಇಲ್ಲಿನ ಕಂಬಗಳಾಗಲೀ ತೊಲೆಗಳಾಗಲಿ ಬೇರೆ ಕಡೆಯಿಂದ ತಂದು ಇಲ್ಲಿ ನಿಲ್ಲಿಸಿದವುಗಳಲ್ಲ ಎಂಬುದಕ್ಕೆ ಇವುಗಳ ಕ್ರಮಬದ್ಧ ತಳವಿನ್ಯಾಸ ಮತ್ತು ರಚನೆಗಳೇ ಸಾಕ್ಷಿ. ಈ ಮಂಟಪದ ಕಂಬಗಳಲ್ಲದೆ ಈ ಮಂಟಪದ ಬಳಿಯಲ್ಲಿ ಅಲ್ಲದೆ ಕೋಟೆಯ ಪೂರ್ವದ ಹೆಬ್ಬಾಗಿಲಿನ ಬಳಿ ಇನ್ನೂ ಹಲವು ಚಾಳುಕ್ಯ ಶೈಲಿಯ ಕಂಬಗಳು ಬಿದ್ದಿವೆ.

***ಇದೊಂದು ತ್ರಿಕೂಟಾಚಲದ ಭಾಗ :*** ಈ ಮಂಟಪಗಳ ಸೂಕ್ಷ್ಮ ಕೆತ್ತನೆ, ಉಬ್ಬುಶಿಲ್ಪಗಳು, ಕಂಬಗಳ ರಚನೆ, ಛತ್ತಿನಲ್ಲಿರುವ ಕಮಲಗಳ ಶಿಲ್ಪ, ಗೋಡೆಗೆ ಆನಿಸಲ್ಪಟ್ಟಿರುವ ಚಪ್ಪಡಿಗಳು ಮತ್ತು ಮಂಟಪಗಳ ತಳವಿನ್ಯಾಸ ಇವುಗಳನ್ನೆಲ್ಲಾ ಒಟ್ಟಾಗಿ ವಿವೇಚಿಸಿದರೆ ಈ ಮಂಟಪಗಳು ಕೋಟೆಯನ್ನು ಕಟ್ಟುವದಕ್ಕಿಂತ ಪೂರ್ವದಲ್ಲಿ ಇಲ್ಲಿ ಒಂದು ತ್ರಿಕೂಟಾಚಲವಿದ್ದಿತ್ತು ಎಂಬುದನ್ನು ಸ್ಪಷ್ಟಗೊಳಿಸುತ್ತದೆ.[೩] ಈ ಪುರಾತತ್ವ ಅವಶೇಷಗಳಲ್ಲದೆ ಈ ನಿವೇಶನವೂ ಇದನ್ನು ಸ್ಥಿರೀಕರಿಸುತ್ತದೆ.

ಸಾಮಾನ್ಯವಾಗಿ ಚಾಳುಕ್ಯ ದೇವಾಲಯಗಳ ಮುಂಭಾಗದಲ್ಲಿ ಒಂದು ಬಾವಿ, ಕೆರೆ ಅಥವಾ ನದಿ (ಸಣ್ಣ ಹಳ್ಳವೂ ಇರಬಹುದು) ಇರುತ್ತದೆ. ಅಥವಾ ಕೆರೆಯ ದ್ವೀಪಕಲ್ಪದ ಮೇಲೆ ದೇವಾಲಯವನ್ನು ನಿರ್ಮಿಸಲಾಗುತ್ತದೆ. ಇದಕ್ಕೆ ಹರಪನಹಳ್ಳಿ ತಾಲ್ಲೂಕಿನ



ನೀಲಗುಂದದ ಭೀಮೇಶ್ವರಲಿಂಗ ದೇವಾಲಯವನ್ನು ಉದಾಹರಣೆಯಾಗಿ ಕೊಡಬಹುದು. ಇದರಂತೆಯೇ ಕಲ್ಬುರ್ಗಿಯ ಉತ್ತರ ಭಾಗದಿಂದ ಹರಿದು ಬರುವ ಹಳ್ಳಗಳಿಗೆ ಒಂದು ಕಟ್ಟೆಯನ್ನು ಕಟ್ಟಿ ದ್ವೀಪಕಲ್ಪದ ಮೇಲೆ ಈ ತ್ರಿಕೂಟಾಚಲವನ್ನು ನಿರ್ಮಿಸಲಾಗಿತ್ತು ಎಂಬುದನ್ನು ಪುರಾತತ್ವ ಅವಶೇಷಗಳನ್ನು





ಮತ್ತು ಭೂಮ್ಯಾಕೃತಿ ಲಕ್ಷಣಗಳನ್ನು ಸಂಯೋಜಿಸಿ ವಿಚಾರ ಮಾಡಿದಾಗ ಸ್ಪಷ್ಟವಾಗುತ್ತದೆ.

"ಕಲಬುರ್ಗಿ" ಸ್ಥಳನಾಮದ ನಿಷ್ಪತ್ತಿಯನ್ನು ಅಭ್ಯಾಸ ಮಾಡಿದ ಡಾ।। ಸವದತ್ತಿಮಠರು ಕಲ್+ಅಂಬಲ+ಗೆ ಎಂಬ ಮೂಲದಿಂದ ಕಲಬುರ್ಗಿಯಾಯಿತು ಎಂದು ಅಭಿಪ್ರಾಯ ಪಡುತ್ತಾರೆ.[೪] 'ಅಂಬಲ' ಎಂದರೆ ದೇವಾಲಯ ಎಂಬರ್ಥ ಸೂಚಿಸುವ ದ್ರಾವಿಡ ಪದ. ಕಲ್ಲಿನಿಂದ ನಿರ್ಮಿತವಾದ ದೈವಾಲಯವನ್ನು ಸೂಚಿಸುವ 'ಕಲ್ ಅಂಬಲಗೆ' ಎಂಬ ಪದ ಮುಂದೆ ರೂಪಾಂತರಗೊಂಡು 'ಕಲಬುರ್ಗಿ'ಯಾಯಿತು ಎಂದು ಭಾಷಾಶಾಸ್ತ್ರದ ಆಧಾರದ ಮೇಲೆ ಹೇಳುತ್ತಾ, ಈ ಕೋಟೆಯೊಳಗಿನ ಮಂಟಪಗಳನ್ನು ಉದಾಹರಿಸುತ್ತಾರೆ. ಕಲಬುರ್ಗಿ ಮತ್ತು ಸುತ್ತಮುತ್ತಲ ಪರಿಸರದಲ್ಲಿ ಬಹಮನಿ ಪೂರ್ವ ಚಾಳುಕ್ಯರ ಕಾಲದ ಶಾಸನಗಳು ಈ ವರೆಗೆ ಲಭ್ಯವಾಗಿಲ್ಲ. ಆದರೆ ಮೂರು





ಕಿ.ಮೀ. ದೂರದಲ್ಲಿರುವ ನಾಗನಹಳ್ಳಿಯ ನಾಗಲಿಂಗೇಶ್ವರ ದೇವಾಲಯದ ಮುಂದಿರುವ ೧೪ನೇ ಶತಮಾನದ ತ್ರುಟಿತ ಶಾಸನದಲ್ಲಿ ಕಲಂಬರಿಗೆಯ ಸ್ವಯಂಭು ಸೋಮೇಶ್ವರ ದೇವಾಲಯದ ಉಲ್ಲೇಖವಿರುವುದು ಗಮನಾರ್ಹ ಅಂಶ.[೫] ಹೀಗೆ ಮೇಲೆ ವಿವರಿಸಲಾದ ಭೂವೈಜ್ಞಾನಿಕ ಲಕ್ಷಣಗಳು, ಪುರಾತತ್ವ ಅವಶೇಷಗಳು, ಕಲಬುರ್ಗಿ ನಾಮದ ನಿಷ್ಪತ್ತಿ ಮತ್ತು ಶಾಸನಗಳೆಲ್ಲವನ್ನು ಒಟ್ಟಾಗಿ ಸಂಯೋಜಿಸಿದಾಗ ಈಗ ನೋಡಲು ಸಿಗುವ ಮಂಟಪಗಳು ಒಂದು ಶಿವಾಲಯದ (ಬಹುಶಃ ಸ್ವಯಂಭು ಸೋಮೇಶ್ವರ ದೇವಾಲಯದ) ಭಾಗಗಳು. ಇಲ್ಲಿಯೇ ಈ ದೇವಾಲಯವು ಕೋಟೆಯ ನಿರ್ಮಾಣಕ್ಕಿಂತ ಪೂರ್ವದಲ್ಲಿತ್ತು ಎಂಬುದು ವ್ಯಕ್ತವಾಗುತ್ತದೆ.

***ಕೋಟೆಯ ಗರ್ಭದಲ್ಲಿ ಗುಡಿ :*** *ಮಹ್ಮದ್ ಬಿನ್ ತೊಘಲಕ್ ದೆಹಲಿಯ ಸುಲ್ತಾನನಾಗಿದ್ದಾಗ, ಕ್ರಿ.ಶ. ೧೩೪೫ರಲ್ಲಿ ಹಸನ್ ಗಂಗು ಎಂಬ ಅಮೀರನು ದಂಗೆ ಎದ್ದು ೧೩೪೭ರಲ್ಲಿ ಅಲ್ಲಾವುದ್ದೀನ್ ಬಹಮನ್ ಶಾ ಬಹಮನಿ ಎಂಬ ಹೆಸರಿನಿಂದ ದೌಲತಾಬಾದಿನಲ್ಲಿ ಪಟ್ಟಕ್ಕೇರಿದನು. ಮುಂದೆ ಅವನು, ಬಹುಶಃ ದೌಲತಾಬಾದಿನಿಂದ ದೂರದಲ್ಲಿರುವ ಕಲಬುರ್ಗಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಳ್ಳಲು ಬಯಸಿ ಕಲಬುರ್ಗಿಗೆ ತನ್ನ ರಾಜಧಾನಿಯನ್ನು ವರ್ಗಾಯಿಸಿದನು. ಬಹಮನ್ ಶಾಹನಿಗೆ ಸಹಜವಾಗಿ ರಕ್ಷಣೆಗಾಗಿ ಕೋಟೆಯನ್ನು ಕಟ್ಟಬೇಕಾಯಿತು. ಅಷ್ಟೊತ್ತಿಗಾಗಲೇ ಕೆರೆ ಮತ್ತು ನೀರಿನ ಆಶ್ರಯ ಹೊಂದಿದ್ದ ಈ ಪ್ರದೇಶ ಸ್ಥಳದುರ್ಗಕ್ಕೆ ಸೂಕ್ತ ನಿವೇಶನವಾಗಿ ಕಂಡಿತು. ಈ ಬಾದಶಾಹನಿಗೆ ಉತ್ತರದಿಂದ ಬರುವ ನೀರನ್ನು ಸುಲಭವಾಗಿ ಕಂದಕಕ್ಕೆ ತಿರುಗಿಸಲು ಸಾಧ್ಯವಾಯಿತು. ಈಗಾಗಲೇ ವಿವರಿಸಲಾಗಿರುವಂತೆ ಕೋಟೆ ನಿರ್ಮಾಣಕ್ಕೆ ಇನ್ನೊಂದು ಸೂಕ್ತ ನಿವೇಶನವಿಲ್ಲದ್ದರಿಂದ ಈ ನಿವೇಶನದಲ್ಲಿ ಸುಮಾರು ೨೦ ಎಕರೆಯಷ್ಟು ವಿಸ್ತಾರವಾದ ಮತ್ತು ಮೂರು ಕಿ.ಮೀ. ಸುತ್ತಳತೆಯ ಈ ಕೋಟೆಯನ್ನು ಅಲ್ಲಾವುದ್ದೀನ್ ಬಹಮನ್ ಶಾ ಕಟ್ಟಿಸಿದನು. ಇದಕ್ಕೂ ಪೂರ್ವದಲ್ಲಿದ್ದ ತ್ರಿಕೂಟಾಚಲದ ಕೆಲ ಭಾಗಗಳನ್ನು ಹಾಗೆಯೇ ಕೋಟೆಯ ಗೋಡೆಯೊಳಗೆ ಸೇರಿಸಿಕೊಂಡು ಕಟ್ಟಲಾಯಿತು. ದೇವಾಲಯದ ಉಳಿದ ಭಾಗ ಉಧ್ವಸ್ತಗೊಂಡಿತು. ಕಾಲಾನುಕ್ರಮದಲ್ಲಿ ಬಹಮನ್ ಶಾಹನ ಅರಮನೆ ರಚನೆಗಳು ಹೇಳಹೆಸರಿಲ್ಲದಂತೆ ನಾಶವಾಗಿ ಹೋದವು.*

*ಸಮಾರೋಪ :* **ಮೇಲೆ ವಿವರಿಸಲಾದ ಭೂವೈಜ್ಞಾನಿಕ ಲಕ್ಷಣಗಳ ಪ್ರಕಾರ ಕಲಬುರ್ಗಿಯ ನಗರ ಪರಿಸರದಲ್ಲಿ ಕೋಟೆಯನ್ನು ನಿರ್ಮಿಸಲು ಸೂಕ್ತ ನಿವೇಶನ ಇನ್ನೊಂದಿಲ್ಲ. ಬಹುಶಃ ಕ್ರಿ.ಶ. ೧೦-೧೨ರ ಅವಧಿಯಲ್ಲಿ ಕಲಬುರ್ಗಿಯ ನಗರ ಮಧ್ಯದಲ್ಲಿ ಸ್ವಯಂಭು ಸೋಮೇಶ್ವರ ಎಂಬ ತ್ರಿಕೂಟಾಚಲವನ್ನು ಕಟ್ಟಲಾಯಿತು. ಸಂಪ್ರದಾಯದಂತೆ ಜಲಾಶ್ರಯ ರೂಪದಲ್ಲಿ ಒಂದು ಕೆರೆಯನ್ನು ನಿರ್ಮಿಸಲಾಯಿತು. ಕ್ರಿ.ಶ. ೧೩೪೭ರಲ್ಲಿ ದೌಲತಾಬಾದಿನಿಂದ ಕಲಬುರ್ಗಿಗೆ ತನ್ನ ರಾಜಧಾನಿಯನ್ನು ರಾಜಕೀಯ ಕಾರಣಗಳಿಗಾಗಿ ವರ್ಗಾಯಿಸಿದ ಅಲ್ಲಾವುದ್ದಿನ್ ಬಹಮನ್‌ಶಾನಿಗೆ ರಕ್ಷಣೆಗಾಗಿ ಕೋಟೆಯನ್ನು ಕಟ್ಟಬೇಕಾಗಿತ್ತು. ಕೋಟೆಗಾಗಿ ಸೂಕ್ತ ನಿವೇಶನವನ್ನು ಹುಡುಕಿದಾಗ ಈ ಚಾಳುಕ್ಯ ದೇವಾಲಯವಿರುವ ದ್ವೀಪಕಲ್ಪ ಅವನಿಗೆ ಕಂಡಿತು. ಆದ್ದರಿಂದ ದೇವಾಲಯದ ಕೊಂಚ ಭಾಗವನ್ನು ಕೋಟೆಗೋಡೆಯ ಗರ್ಭದಲ್ಲಿ ಉಳಿಸಿಕೊಂಡು ಕೋಟೆಯನ್ನು ಕಟ್ಟಲಾಯಿತು, ಎಂಬ ಅಂಶವು ಭೂವೈಜ್ಞಾನಿಕ ಮತ್ತು ಪುರಾತತ್ವ ಅವಶೇಷಗಳು ಸಿದ್ಧಪಡಿಸುತ್ತವೆ.**



(ಮಂಟಪಗಳ ತಳ ವಿನ್ಯಾಸದ ಶುದ್ಧ ಪ್ರತಿಯನ್ನು ಸಿದ್ಧಪಡಿಸಿದ ಶ್ರೀ. ಪ್ರಭುಲಿಂಗಪ್ಪನವರಿಗೂ, ಕ್ಷೇತ್ರಕಾರ್ಯಕ್ಕೆ ಬೇಕಾದ ಟೋಪಶೀಟ ಮತ್ತು ಉಪಗ್ರಹದ ಚಿತ್ರವನ್ನು ಒದಗಿಸಿದ ಡಾ|| ಟಿ. ಎನ್. ವೇಣುಗೋಪಾಲರಿಗೆ ಲೇಖಕ ಕೃತಜ್ಞನಾಗಿದ್ದಾನೆ.)

## ಆಧಾರ ಸೂಚಿ ಮತ್ತು ಟಿಪ್ಪಣಿಗಳು

೧. ಡಾ. ಚಂದ್ರಶೇಖರ ಹೆಚ್., (೨೦೦೦), 'ಕರ್ನಾಟಕದ ಕೋಟೆಗಳ ಅಂತರಂಗ'ದಲ್ಲಿ, **ಪ್ರಜಾವಾಣಿ ದೀಪಾವಳಿ ವಿಶೇಷ ಸಂಚಿಕೆ**, ಪುಟ. ೧೭೧.
೨. ಡಾ. ಪಾಟೀಲ ಸಿ.ಎಸ್., (೧೯೯೯), **ಕರ್ನಾಟಕದ ಕೋಟೆಗಳು** ಸಂಪುಟ. ೧, ಪುಟ. ೧೧೪, ಕನ್ನಡ ವಿಶ್ವವಿದ್ಯಾಲಯ ಹಂಪಿ.
೩. **ಗುಲ್ಬರ್ಗಾ ಜಿಲ್ಲೆ ಗ್ಯಾಸೆಟಿಯರ್.**, (೧೯೯೭), ಪಾಟೀಲ ಎಂ.ಬಿ. (ಪ್ರ.ಸಂ.), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.
೪. ಡಾ. ಸವದತ್ತಿ ಮಠ ಸಂಗಮೇಶ., (೧೯೯೯), **ಭಾಷಾಲೇಖ**, ರೂಪರಶ್ಮಿ ಪ್ರಕಾಶನ, ಗುಲಬರ್ಗಾ, ಪು. ೩೪೧.
೫. **ಗುಲ್ಬರ್ಗಾ ಜಿಲ್ಲೆ ಗ್ಯಾಸೆಟಿಯರ್**, (ಪೂರ್ವೋಕ್ತ), ಪುಟ. ೩೨೦.

ವ್ಹಿ. ಎಮ್. ಬಾಗಾಯತ *

# ನಿರ್ಲಕ್ಷಿತ ಕೊಟ್ನಾಳ ಕಿಲ್ಲೆಯ ಇತಿಹಾಸ

ವಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನ ನಕ್ಷೆಯಲ್ಲಿ ದಕ್ಷಿಣಾ ದಿಕ್ಕಿಗೆ (ಆಗ್ನೇಯ) ಬರುವ ಸೀಮೆಯ ಕೊನೆಯ ಭಾಗದ ಅತೀ ಚಿಕ್ಕ ಗ್ರಾಮ ಕೊಟ್ನಾಳ. ಹದಿಮೂರನೇ ರಾಷ್ಟ್ರೀಯ ಹೆದ್ದಾರಿಯ ಬಲಬದಿಗೆ ವಿಜಾಪುರದಿಂದ ೨೫ ಕಿ.ಮೀ. ಅಂತರದಲ್ಲಿ ಕೊಟ್ನಾಳ ಕ್ರಾಸ್ ಬರುತ್ತದೆ. ಅಲ್ಲಿಂದ ಎರಡು ಕಿ.ಮೀ. ಹಾದಿಯಿಂದ ಹೋದರೆ ದೂರದಿಂದ ಕಾಣುವ ಅರ್ಧಭಾಗ ಬಿದ್ದಿರುವ ಕೋಟೆಯ ಗೋಡೆಯಿಂದ ಆವೃತವಾದ ಒಂದು ದೊಡ್ಡದಾದ ವಾಡೆ ಕಣ್ಣಿಗೆ ಬೀಳುತ್ತದೆ. ಕಲ್ಲು ಮಣ್ಣಿನಿಂದ ಕಟ್ಟಲ್ಪಟ್ಟ ಗೋಡೆಯು ಅಲ್ಲಿನ ವಂಶಸ್ಥರಾದ ಅಪ್ಪಾಸಾಹೇಬ ದೇಸಾಯಿಯವರ ಹೇಳಿಕೆಯ ಪ್ರಕಾರ ಸುಮಾರು ನಾಲ್ಕು ಶತಮಾನಗಳಷ್ಟು, ಪುರಾತನವಾದದ್ದೆಂದು ತಿಳಿದು ಬರುತ್ತದೆ. ಸುಮಾರು ಅರ್ಧ ಕಿ.ಮೀ. ವ್ಯಾಸದ ಈ ಕೋಟೆಯ ವಾಡೆಯು ಇಂದು ಸಂಪೂರ್ಣವಾಗಿ ನಾಶವಾಗಿದೆ. ಈಗ ಆ ಮನೆತನ ದವರಿಗೆ ವಾಸಿಸಲು ಎರಡು ಚಿಕ್ಕದಾದ ಕೋಣೆಗಳು ಮಾತ್ರ ಉಳಿದಿವೆ. ಈ ವಾಡೆಗೆ ಐದು ಅಗಸಿಯ ಬಾಗಿಲುಗಳು ಇದ್ದವು. ಅವುಗಳಲ್ಲಿ ಮೂರು ಅಗಸಿಬಾಗಿಲುಗಳು ಹಾಳಾಗಿ ಹೋಗಿವೆ. ನೋಡುಗರಿಗೆ ಅದರ ಕುರುಹುಗಳು ಮಾತ್ರ ಸಿಗುತ್ತವೆ. ಈಗ ಮಾತ್ರ ಎರಡು ಅಗಸೆಗಳು ಉಳಿದಿವೆ. ವಾಡೆಯಲ್ಲಿ ಸಭೆಯನ್ನು ನಡೆಸಿಕೊಂಡು ಹೋಗಲು ದರಬಾರ ಹಾಲ್, ಅಶ್ವದಳ ಸಾರಥಿ ಹಾಗೂ ಸೈನಿಕರಿಗಾಗಿ ನಿರ್ಮಿಸಿದ ಮನೆಗಳು, ಅಶ್ವಶಾಲೆಗಳು, ಒಂಟೆ, ಆನೆಗಳ ಮನೆಗಳು, ಅಲ್ಲದೇ ವಾಡೇದ ಕೋಟೆ, ಸಿಬ್ಬಂದಿ ಕೋಟೆ, ಊರು ಕೋಟೆಗಳೆಂಬ ಮೂರು ಪ್ರಕಾರಗಳಿಂದ ಕೂಡಿರುವುದು ವೈಶಿಷ್ಟ್ಯ.

ಕೊಟ್ನಾಳ ಗ್ರಾಮವು ಆದಿಲಶಾಹಿ ಅರಸರ ಕಾಲದಿಂದಲೂ ಜಂಬಗಿ ದೇಸಾಯಿ ಹಾಗೂ ಚಾಂದಕವಟೆ ದೇಸಾಯಿಗಳ ಆಡಳಿತಕ್ಕೆ ಒಳಪಟ್ಟಿತ್ತು. ಆ ಊರಿನಲ್ಲಿ ಕೋಟೇಶ್ವರ ದೇವಸ್ಥಾನ ಮತ್ತು ಕೋಟೆಯಿದ್ದುದರಿಂದ ಕೊಟ್ನಾಳ ಎಂಬ ನಾಮವು ಆ ಗ್ರಾಮಕ್ಕೆ ಬಂದಿರಬಹುದು. ವಿಜಾಪುರದ ಆದಿಲಶಾಹಿ ಅರಸರು ದೇಸಾಯಿಯವರ ಧೈರ್ಯ ಸಾಹಸ ಮೆಚ್ಚಿ ೨೦ ಹಳ್ಳಿಗಳನ್ನು ಇನಾಮು ಹಾಕಿದರು. ಅವರು ಐದುನೂರು ಸೈನಿಕರ ತುಕಡಿಯ ಮುಖ್ಯಸ್ಥರಾಗಿ ಆಡಳಿತ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಆದಿಲಶಾಹಿ ಅರಸರಿಂದ ಅವರಿಗೆ ದೊರೆತ ಇನಾಮು ಪತ್ರ, ಫರ್ಮಾನುಗಳು ಈಗ ಈ ಮನೆತನದವರಲ್ಲಿ ಸಾಕ್ಷಿಯಾಗಿ ಇಲ್ಲ. ಹಿಂದೆ ಪ್ರೊ॥ ಜಿ. ಎಸ್. ಹಾಲಪ್ಪನವರು ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸ ರಚಿಸಲು ವಿಜಾಪುರಕ್ಕೆ ಬಂದಾಗ ಅವರಿಗೆ ಅವುಗಳನ್ನು ಕೊಟ್ಟಿದ್ದಾಗಿ ಮತ್ತು ಅವರು ಮುಂದೆ ಕಾರಿನ ಅಪಘಾತದಲ್ಲಿ ಮಡಿದದ್ದರಿಂದ ಅವರ ಪೂರ್ವದಾಖಲೆಗಳು ಮರಳಿಬರಲಿಲ್ಲವೆಂದು ತಿಳಿದುಬರುತ್ತದೆ.

ಈ ಮನೆತನದ ಇನ್ನೊಂದು ರೋಮಾಂಚಕಾರಿ ಇತಿಹಾಸ ಪ್ರಾರಂಭವಾದದ್ದು ೧೮೫೭-೧೮೫೮ರ ಸ್ವಾತಂತ್ರ್ಯ ಹೋರಾಟದಲ್ಲಿ. ಸುರಪುರದ ದೊರೆ, ಹಾಗೂ ಕಾನಾಪುರದಲ್ಲಿದ್ದ ನಾನಾಸಾಹೇಬ ಪೇಶ್ವೆಯವರ ಪತ್ರದ ಪ್ರಭಾವದಿಂದ ಪ್ರಭಾವಿತರಾಗಿ ಭಾರತ ದೇಶದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿ ಹುತಾತ್ಮರಾದ ಜಂಬಗಿಯ ಬಸವಲಿಂಗಪ್ಪ ದೇಸಾಯಿಯವರ ಧೈರ್ಯ, ಸಾಹಸ, ದೇಶ ಪ್ರೇಮದ ಸಂಕೇತವಾಗಿ ಬ್ರಿಟೀಷರಿಂದ ಹಾಳಾಗಿ ಉಳಿದ ಭಗ್ನ ಅವಶೇಷಗಳು ಕಲ್ಲು ಮಣ್ಣಿನಿಂದ ಕಟ್ಟಿ ಉಳಿದ ವಾಡೆ, ಕೋಟೆಗೋಡೆಗಳು ಅವರ ಸಾಹಸದ ಗಾಥೆಯನ್ನು ಇಂದು ಹೇಳುತ್ತಿವೆ.

ಸುರಪುರದ ವೆಂಕಟಪ್ಪನಾಯಕರು ೨೦ ವರುಷದ ತರುಣ. ಅಧಿಕಾರಕ್ಕೆ ಬಂದು ಒಂದೆರಡು ವರ್ಷಗಳಾಗುವದರಲ್ಲಿ ಭಾರತದಲ್ಲಿ ಬ್ರಿಟೀಷರ ವಿರುದ್ಧ ಒಳಸಂಚಿನ ಗಾಳಿ ಬೀಸುತ್ತಿತ್ತು. ಹನ್ನೆರಡು ಸಾವಿರ ಬೇಡರ ಧುರೀಣನಾದ ವೆಂಕಟಪ್ಪನಾಯಕ ಕನ್ನಡ ನಾಡಿನಲ್ಲಿ ಅವನೊಂದು ಪ್ರಚಂಡ ಶಕ್ತಿಯಾಗಿದ್ದ. ನಾನಾ ಸಾಹೇಬ ಪೇಶ್ವೆಯವರ ಜೊತೆ ಸಂಪರ್ಕವಿಟ್ಟುಕೊಂಡಿದ್ದ. ಅವನು ಬ್ರಿಟೀಷರ ಜೊತೆ ಯುದ್ಧ ಸಿದ್ಧತೆ ನಡೆಸಿದ್ದ. ದೊಡ್ಡ ಸೈನ್ಯ ಕಟ್ಟಲು ಯೋಜನೆ ಹಾಕಿದ್ದ. ತನ್ನ ರಾಜ್ಯದ ಗಡಿಯಾದ ವಿಜಾಪುರ ಜಿಲ್ಲೆ ಈಗಿನ ಸಿಂದಗಿ ತಾಲ್ಲೂಕಿನ (ಹಿಪ್ಪರಗಿ ತಾಲೂಕ) ಜಂಬಗಿ ದೇಶಮುಖ ಬಸಲಿಂಗಪ್ಪನೊಡನೆ ಸಹ ಸಂಧಾನ ನಡೆಸಿದ್ದ. ಜಮಖಂಡಿಯ ಸೇನಾಪತಿ ಭೋಟುಸಿಂಗ್ ಹಾಗೂ ಇನ್ನೊಬ್ಬ ಸರದಾರ ಲಕ್ಷ್ಮಣ ಪ್ರಸಾದರೂ ಜೊತೆ ಗೂಡಿದ್ದರು. ಇವರ ಗುಟ್ಟು ಒಂದಿಲ್ಲೊಂದು ಕಾರಣದಿಂದ ಹೊರಬಿದ್ದು ಎಲ್ಲರೂ ಪ್ರಾಣ ತೆತ್ತರು. ಈ ಒಳ ಸಂಚಿನಲ್ಲಿ ಜತ್ತಿ ರಾಜನ ಪಾತ್ರ ವಿದ್ದಿತೆಂದೂ ತಿಳಿಯುತ್ತದೆ. ಜಂಬಗಿ ಬಸಲಿಂಗಪ್ಪ ದೇಶಮುಖರು ಅಪಾರವಾದ ಮದ್ದು - ಗುಂಡು ಶೇಖರಿಸಿ, ಹೋರಾಟಗಾರರಿಗೆ ಒದಗಿಸುತ್ತಿದ್ದರೆಂಬ ಒಳಸಂಚು ೧೮೫೮ರ ಜನೇವರಿಯಲ್ಲಿ

* ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಸೊಲ್ಲಾಪುರದ ಕಲೆಕ್ಟರನಿಗೆ ಗೊತ್ತಾದ ಕಾರಣ ಬಸಲಿಂಗಪ್ಪ ದೇಶಮುಖ ಮತ್ತು ಆತನ ಮಗನನ್ನು ಬಂಧಿಸಿ ಸೊಲ್ಲಾಪುರದಲ್ಲಿ ಗಲ್ಲಿಗೇರಿಸಿದರು. ಅವರ ಆಸ್ತಿ ಜಪ್ತಿ ಮಾಡಲ್ಪಟ್ಟಿತು. ಕೊಟ್ನಾಳ ಕೋಟೆ ಕೆಡವಲ್ಪಟ್ಟಿತು. ಹೀಗೆ ಜಂಬಗಿಯ ದೇಶಮುಖರು ಕಂಪನಿ ಸರಕಾರದ ವಿರುದ್ಧ ಒಳಸಂಚು ಮಾಡಿ ತಮ್ಮ ಸರ್ವಸ್ವವನ್ನು ಕಳೆದುಕೊಂಡ ಮತ್ತು ಕೊಟ್ನಾಳ ಎಂಬ ಗ್ರಾಮದಲ್ಲಿದ್ದ ಕಿಲ್ಲೆಯನ್ನು ಬ್ರಿಟೀಷರು ನೆಲಸಮ ಮಾಡಿದ ಇತಿಹಾಸವನ್ನು ಈ ಕೋಟೆ ತಿಳಿಸುತ್ತದೆ.

ಇಂದು ಆ ಕೋಟೆಯ ದ್ವಾರಬಾಗಿಲು, ಎಡಗಡೆಯ ಅರ್ಧ ಬಿದ್ದ ಎತ್ತರವಾದ ಹೂಡೆ, ಒಳಗೆ ಹೋದರೆ ಮೂರು ಅಡಿ ಅಗಲವಾದ ಇಪ್ಪತ್ತು ಅಡಿ ಎತ್ತರದ ಗೋಡೆಗಳ ಕಟ್ಟಡ, ಬಾವಿ, ಮದ್ದಿನ ಸಂಗ್ರಹದ ಕೋಣೆ, ಆನೆಗಳಿಗೆ ನೀರು ಕುಡಿಸುವ ಹೌಜಿನಾಕಾರದ ಕಲ್ಲಿನ ಕಟ್ಟಡ, ಅತೀ ದೊಡ್ಡ ಗಾತ್ರದ ಬೀಸುಕಲ್ಲುಗಳು ಮೂರು, ನಾಲ್ಕು ದಿಕ್ಕುಗಳಲ್ಲಿ ಎತ್ತರವಾದ ಕಲ್ಲಿನ ಹೂಡೆಗಳು, ಕಿಲ್ಲೆಯ ಒಳಗೆ ಪ್ರವೇಶಿಸಿದರೆ ಬಿದ್ದು ಹಾಳಾದ ಕೋಟೇಶ್ವರ ದೇವಸ್ಥಾನ, (ಈಗ ಅಲ್ಲಿ ಕೇವಲ ಲಿಂಗದ ಮೂರ್ತಿ ಮಾತ್ರ ಇದೆ). ಸೀಸದ ಗುಂಡುಗಳು ಮತ್ತು ಮುರಿದ ಖಡ್ಗಗಳು ಅವರ ಮನೆಯಲ್ಲಿ ಇಂದು ಸಾಂಕೇತಿಕವಾಗಿವೆ. ವಿಘ್ನೇಶ್ವರ, ಆಂಜನೇಯ, ಲಕ್ಷ್ಮಿ, ಬಸವೇಶ್ವರ ದೇವಾಲಯಗಳು, ಜಗದ್ಗುರುಗಳು ಬಂದಾಗ ಇರಲು ಕಟ್ಟಿದ್ದ ಮಠ ನಾಶವಾಗಿವೆ. ಈಗ ಎರಡು ಗುಡಿಗಳು ಮಾತ್ರ ಉಳಿದಿವೆ.

ಈಗ ಆ ಊರಿನ ಜನರು ಬಿದ್ದ ಕಿಲ್ಲೆಯ ಕಲ್ಲು ಮಣ್ಣುಗಳನ್ನು ತೆಗೆದುಕೊಂಡು ಹೋಗಿ ತಮ್ಮ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದಾರೆ. ದೇಶಕ್ಕಾಗಿ ಗಲ್ಲಿಗೇರಿದ ಮನೆತನದವರಿಗೆ ಯಾವ ತರಹ ಭದ್ರತೆಗಳಿಲ್ಲ. ಅವರಿಗೆ ಇರಲು ಮನೆಯೂ ಇಲ್ಲ. ಸರಕಾರವು ಯಾವುದೇ ರೀತಿಯಲ್ಲಿ ಸಹಾಯ ಮಾಡಿಲ್ಲವೆಂದು ಮನನೊಂದು ನುಡಿಯುತ್ತಾರೆ ಈಗಿನ ಅಪ್ಪಾಸಾಹೇಬ ದೇಸಾಯಿಯವರು. ಇದನ್ನು ಸ್ವಾತಂತ್ರ್ಯ ಸಂಗ್ರಾಮದ ಸ್ಮಾರಕವನ್ನಾಗಿ ರಾಜ್ಯ ಸರಕಾರ ರಕ್ಷಿಸಬೇಕಾದ ಅಗತ್ಯವಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಸ್ವಾತಂತ್ರ್ಯದ ಕಿಡಿಗಳು**, ಕನ್ನಡ ದ್ವಿತೀಯ ಭಾಷೆ, ಉಪಪಠ್ಯಪುಸ್ತಕ, ಸರ್ಕಾರಿ ಪಠ್ಯ ಪುಸ್ತಕ, ಮೈಸೂರು (ಹತ್ತನೆಯ ತರಗತಿಗಾಗಿ).

೨. **ದಿ ಫ್ರೀಡಮ್ ಸ್ಟ್ರಗಲ್ ಇನ್ ಹೈದ್ರಾಬಾದ್**, ಪುಟ ೧೦೧, ಪಬ್ಲಿಷಡ್ ಬಾಯ್ ದಿ ಹೈದ್ರಾಬಾದ್ ಸ್ಟೇಟ್ ಕಮಿಟಿ, ಅಪಾಯಿಂಟೆಡ್ ಫಾರ್ ದಿ ಕಂಪ್ಲೀಶನ್ ಆಫ್ ಹಿಸ್ಟರಿ ಫ್ರೀಡಮ್ ಮೂವ್‌ಮೆಂಟ್ ಇನ್ ಹೈದ್ರಾಬಾದ್.

೩. ೧೫-೮-೧೯೫೭ ನೇ ಪುರವಣಿಯ ೫ನೇ ಪುಟ ೨ ಮತ್ತು ೩ ನೇ ಕಾಲಂನಲ್ಲಿ **ಸಂಯುಕ್ತ ಕರ್ನಾಟಕ** ದಿನಪತ್ರಿಕೆಯಲ್ಲಿ ಪ್ರಕಟಿತವಾಗಿದೆ.

೪. **ಸ್ವಾತಂತ್ರ್ಯ ಯುದ್ಧ ೧೮೫೭**, ಮುಖ್ಯ ಸಂಪಾದಕರು, ರಂಗನಾಥ ದಿವಾಕರ, ಪ್ರಕಾಶಕರು, ಸ್ಟ್ಯಾಂಡರ್ಡ್ ಬುಕ್ ಡಿಪೋ, ಅವೆನ್ಯೂ ರೋಡ್, ಬೆಂಗಳೂರು - ೨, ಪುಟ ೨೦೩, ಸಾಲು ೬ ರಿಂದ ೧೦ರವರೆಗೆ.

೫. **"ನವಭಾರತ ಟಾಯಿಮ್ಸ್"** ಹಿಂದಿ ದಿನ ಪತ್ರಿಕೆ, ಜುಲೈ ೨೦, ೧೯೮೧, ಪುಟ ನಂ. ೪, ಕಾಲಮ್ ನಂ. ೫೦.

ಕುಂ.ಬಾ. ಸದಾಶಿವಪ್ಪ*

# ಬೇಚರಾಕ್ ಗ್ರಾಮ ಸೋಮಲಾಪುರ ಕೋಟೆ ಪರಿಸರ

ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲ್ಲೂಕಿನ ಪಶ್ಚಿಮ ದಿಕ್ಕಿಗೆ ಹರಿವ ತುಂಗಭದ್ರಾ ನದಿ ಸಮೀಪದಲ್ಲಿ ಎರಡು ಪುಣ್ಯಕ್ಷೇತ್ರಗಳು ಇರುವುವು. ಪ್ರಾಚೀನ ಕಾಲದಲ್ಲಿ ಹರಿಹರ, ಹರಪನಹಳ್ಳಿ, ಹೂವಿನಹಡಗಲಿ ಪ್ರದೇಶಗಳು ಕೋಗಳಿ ೫೦೦ಕ್ಕೆ ಸೇರಿದ ಪ್ರದೇಶ. ನಂತರದಲ್ಲಿ ದೀರ್ಘಕಾಲ ಕಲ್ಯಾಣ ಚಾಲುಕ್ಯ ಮತ್ತು ಅವರ ಸಾಮಂತ ಅರಸರ ಆಳ್ವಿಕೆಗೆ ಒಳಪಟ್ಟಿದ್ದಿತು. ಆ ಕಾಲದಲ್ಲಿ ಹಿರೇಕುರುವತ್ತಿ, ಮೈಲಾರ ಮತ್ತು ಹೊಳಲು ಕೋಟೆಗಳು ಪ್ರಮುಖವಾಗಿದ್ದವು. ಮೈಲಾರಕೋಟೆಗೆ ಆರು ಚಿಕ್ಕ ಕೋಟೆಗಳು ಸೇರಿದ್ದವು.

*೧. ಮಾಲಚಿಪುರಕೋಟೆ (ಮೈಲಾರ ಕೋಟೆ), ೨. ಸೋಮಲಾಪುರಕೋಟೆ, ೩. ಮಾಳಾಪುರಕೋಟೆ, ೪. ಹನುಮಾಪುರ ಕೋಟೆ, ೫. ವಿಟಲಾಪುರ ಕೋಟೆ, ೬. ಗುಂಗುರಾ ಚಂದ ಕೋಟೆ, ೭. ರಾಮಾಪುರ ಕೋಟೆ*

ಮೇಲಿನ ಎಲ್ಲಾ ಕೋಟೆಗಳಲ್ಲಿ ಪ್ರಮುಖ ಕೋಟೆ ಮಾಲಚಿಪುರ ಕೋಟೆ (ಈಗಿನ ಮೈಲಾರ). ಮೈಲಾರ ದೇವರಿಗೆ ಏಳುಕೋಟಿಮೈಲಾರಲಿಂಗ ಎಂದು ಭಕ್ತರು ಕರೆಯುವರು. ಈಗ ಮೈಲಾರ ಕೋಟೆ ಒಂದನ್ನು ಬಿಟ್ಟು ಉಳಿದ ಆರು ಕೋಟೆಗಳು ಹಾಳಾಗಿ ಮನೆಗಳು ಬಿದ್ದು ಜನರು ಮೈಲಾರ, ಹಿರೇಕುರುವತ್ತಿ, ಹೊಳಲು, ಗುತ್ತಲ ಗ್ರಾಮಗಳಿಗೆ ವಲಸೆ ಹೋಗಿ ಅಲ್ಲಲ್ಲಿ ನೆಲೆಸಿದರು. ಸೋಮಲಾಪುರ ಬೇಚರಾಕ್ ಗ್ರಾಮವಾದರೂ ಆಂಜನೇಯ ಮತ್ತು ಸೋಮೇಶ್ವರಲಿಂಗ ದೇವಾಲಯಗಳು ಉಳಿದಿವೆ, ಊರು ಸುಟ್ಟರೂ ಹನುಮಪ್ಪ ಹೊರಗೆ ಎಂಬುವ ಗಾದೆ ಮಾತಿನಂತೆ. ಇದು ಮೈಲಾರ- ಹಿರೇಕುರುವತ್ತಿ ಗ್ರಾಮಗಳ ಮಧ್ಯ ಮೈಲಾರ ಗ್ರಾಮಕ್ಕೆ ಹೆಚ್ಚು ಹತ್ತಿರ ರಸ್ತೆ ಪಕ್ಕದಲ್ಲಿದೆ. ಇದರ ಮುಖ್ಯದ್ವಾರದ ಬಳಿ ಒಂದು ಶಿಲಾಶಾಸನವಿದೆ. ಆದರಲ್ಲಿ ದೇವಾಲಯ ನಿರ್ಮಾಣ, ದೇವರನ್ನು ಸ್ಥಾಪಿಸಿದ ಕಾಲಗಳ ಬಗ್ಗೆ ಮಾಹಿತಿಗಳು ದೊರಕುವುದಿಲ್ಲ.

**ಶಾಸನ ಹೀಗಿದೆ**

ಕಾಲ: *ಶಕವರ್ಷ ೯೬೮ನೇ ವ್ಯಯ ಫಾಲ್ಗುಣ ಶುದ್ಧ ೩* ಆದಿತ್ಯವಾರ ಉತ್ತರ ಭಾದ್ರಪದ ಸಾಧ್ಯಯೋಗ ಎಂದಿರುತ್ತದೆ. ಇದು ಕ್ರಿಸ್ತಶಕ ೧-೨-೧೦೪೬ ಆದಿತ್ಯವಾರಕ್ಕೆ ಸರಿ ಹೊಂದುತ್ತದೆ.

ಮಹಾಮಂಡಳೇಶ್ವರ (ಗಂಡರಾ)ದಿತ್ಯರಸನು ಸಿಂಧವಾಡಿ ೧೦೦೦ ನರಗುಂದ ಅಗ್ರಹಾರ ಮತ್ತು ಬೆಣ್ಣೆಯೂರನ್ನು ಆಳುತ್ತಿರುವಾಗ, ಪೆರ್ಗಡೆ ಕಾಳಿಮಯ್ಯನು - ಕಾಳಿದಾಸನು ಮೆಳಿ ಮಡುವಿನ ತೇಜೋರಾಶಿ ಪಂಡಿತನ ಶಿಷ್ಯ ಚಿಲ್ಲುಕಾಚಾರ್ಯನ ಪಾದ ತೊಳೆದು ಭೂಮಿಯನ್ನು, ಎರಡು ಮನೆಗಳನ್ನು, ಅಂಗಡಿ ಮಳಿಗೆಯನ್ನು, ಸ್ವಯಂಭುದೇವ ಮತ್ತು ಮೂಲಸ್ಥಾನದೇವರ ಸೇವಾಕಾರ್ಯಗಳಿಗೆ ದಾನ ಮಾಡಿದನು. ಸ್ಥಳದ ಇನ್ನೂರು ಮಹಾಜನಗಳು ಹಬ್ಬವನ್ನು ಆಚರಿಸಲು ನೇಮಕವಾದರು. ಆ ದೇವಾಲಯದಲ್ಲಿ ಲಗ್ನವಾದವನನ್ನು ಹೊರ ಹಾಕಬೇಕು. ಎಂದಿದೆ. ಅರಸ ಉಪ್ಪು, ಸಕ್ಕರೆ, ಇತರೆ ಮೂರು ರಸಗಳ ಮೇಲಿನ ಸುಂಕವನ್ನು ತೆಗೆದು ಹಾಕುವನು; ಬಯ್ದವನಿಗೆ ಒಂದು ಪಣ ದಂಡ, ಹೊಡೆದವನಿಗೆ ಆರು ಪಣ ದಂಡ, ಇರಿದವನಿಗೆ ಹನ್ನೆರಡು ಪಣ, ಕತ್ತಿ ಹಿಡಿದು ಬೆದರಿಸಿದವನಿಗೆ ಎಂಟು ಪಣವನ್ನು ದಂಡವಾಗಿ ವಿಧಿಸಿದನು; ಈ ಶಾಸನ ರಚಿಸಿದವನು ನಾಗವಾರ - ನಾಗಮ್ಮ ಎಂಬುವವನು; ಕೆತ್ತಿದ ರೂವಾರಿ ಚಾವುಂಡೋಜ. ಕಾಳಿದಾಸನ ಸಹೋದರನಾದ ದೇಕ ಮತ್ತು ಮೇಚಿಕರ ಉಲ್ಲೇಖವಿದೆ. ಅದೇ ಶಾಸನದ ತ್ರುಟಿತಭಾಗದಲ್ಲಿ : ಮೇಲೆ ಬಮ್ಮರ್ದೇವಯ್ಯನ ಮಗ ಕಾಳಿದಾಸನು ಮೂಲಸ್ಥಾನ ( ದೇವರ) ನಂದಾದೀವಿಗೆಗಾಗಿ ಒಂದು ಮತ್ತರು ಭೂಮಿಯನ್ನು ದಾನ ಮಾಡಿದ ವಿವರಗಳು ಮಾತ್ರ ಇದ್ದು ಉಳಿದ ವಿವರಗಳು ಹಾಳಾಗಿರುತ್ತವೆ.

ಮಣಸಭರ್ಮದೇವ ಕಾಳಿದಾಸಪೆರ್ಗಡೆಯ ತಂದೆ ಆಗಿದ್ದ ರಿಂದ ಜನರು ಮೈಲಾರ ಗ್ರಾಮಕ್ಕೆ ಮಣ್‌ಮೈಲಾರವೆಂದು ಕರೆದರು. ಮೈಲಾರದೇವರ ರಂಗಮಂಟಪದ ಒಂದು ಕಂಬದ ಉತ್ತರ ಮುಖದಲ್ಲಿಯ ಶಾಸನದಲ್ಲಿ ಮೈಲಾರ ದೇವರಿಗೆ ಮಾಲಚಿಪತಿ ಎಂದಿದ್ದು ಗ್ರಾಮದ ಹೆಸರು ಕಾಲಾಂತರದಲ್ಲಿ ಮೈಲಾರ ಎಂದಾಗಿರಲು ಸಾಧ್ಯವಿದೆ. ಮಣಿಚೂಲ ಪರ್ವತಕ್ಕೆ ಸೇರಿದ ಒಂದು ವಿಶಾಲ ಬಯಲು ಪ್ರದೇಶದಲ್ಲಿ ಕಾರ್ಣೀಕೋತ್ಸವ ನಡೆಯುತ್ತದೆ. ಕುರುಬ ಕುಲಕ್ಕೆ ಸೇರಿದ ಗೊರವಪ್ಪನು ೧೨ ದಿನಗಳ ಕಾಲ ಬಾಳೆಹಣ್ಣು ಹಾಲು ಸೇವಿಸುವನು. ಗೊತ್ತುಪಡಿಸಿದ ದಿನ ಸಂಜೆ ಸುಮಾರು ೪-೫ ಗಂಟೆಯ ಹೊತ್ತಿಗೆ ಕಟ್ಟಿಗೆಯಿಂದ ಮಾಡಿದ ಒಂದು ಬಿಲ್ಲು ಅರ್ಧ ಭಾಗಕ್ಕೆ ಏರಿ ಒಂದು ಚಿಕ್ಕ ವಾಕ್ಯವನ್ನು ಹೇಳಿ ಕೆಳಗೆ ಬೀಳುವನು. ಕೆಳಗೆ ನಿಂತಿರುವ ಗೊರವರು

* ಗೋಸಾಯಿ ಗುಡ್ಡ, ಹರಪನಹಳ್ಳಿ ಲೋಕೋಪಯೋಗಿ ಇಲಾಖೆ ಕಛೇರಿ ಹಿಂಭಾಗ, ಹೊಸಪೇಟೆರಸ್ತೆ, ಹರಪನಹಳ್ಳಿ - ೫೮೩ ೧೩೧

ಅವನನ್ನು ನೆಲಕ್ಕೆ ಬೀಳದಂತೆ ಎತ್ತಿ ಹಿಡಿದು ಮನೆಗೆ ಸಾಗಿಸುವರು. ಗೊರವನು ನುಡಿದ ವಾಕ್ಯದ ಮೇಲೆ ರೈತರು ಆ, ವರ್ಷದ ಮಳೆ ಬೆಳೆಗಳನ್ನು ನಿರ್ಧರಿಸುವರು.

ಗೊರವಪ್ಪ ನುಡಿದ ಚಿಕ್ಕ ವಾಕ್ಯ ೬೦ ಸಂವತ್ಸರಗಳಿಗೆ ೬೦ರಂತೆ ನಿಗದಿಯಾದದ್ದು, ಇದು ಒಂದು ಗ್ರಂಥದಲ್ಲಿ ಬರೆದಿದ್ದು, ಇದಕ್ಕೆ ರಟ್ಟಮತವೆಂದು ಕರೆಯುವರು. ಕ್ರಿಸ್ತಶಕ ೧೩೦೦ರಲ್ಲಿ ಪಾಂಡ್ಯರಾಜನ ಆಶ್ರಯದಲ್ಲಿದ್ದ ಜೈನ ಕವಿ ಚಂದ್ರಭಟ್ಟ ಈ ಗ್ರಂಥ ಬರೆದಿರುವನು. ಇದು ಪದ್ಯರೂಪದಲ್ಲಿ ಇದ್ದು, ಮಳೆ ಮೋಡ, ಭೂಕಂಪಗಳನ್ನು ಕುರಿತ ಖಗೋಳಶಾಸ್ತ್ರಕ್ಕೆ ಸಂಬಂಧಿಸಿದೆ.

ಸೋಮೇಶ್ವರಲಿಂಗ ಶಾಸನದಲ್ಲಿ ಉಲ್ಲೇಖಿಸಿದಂತೆ ಎರಡುನೂರು ಮಹಾಜನಗಳು ಹಬ್ಬವನ್ನು ಆಚರಿಸಲು ಅರಸನಿಂದ ನೇಮಕವಾದರು. ಕಾಲ ೧-೨-೧೦೪೬. ಅಂದಿನಿಂದ ಇಂದಿನವರೆಗೂ ಎರಡು ದೇವರು (ಮೈಲಾರಲಿಂಗ ಮತ್ತು ಸೋಮೇಶ್ವರಲಿಂಗ)ಗಳಿಂದ ಉಂಟಾದ ಹಬ್ಬ - ಬೆಳೆದು ದೊಡ್ಡ ಜಾತ್ರೆ ಆಗುತ್ತಾ ಸುಮಾರು ೯೫೫ ವರ್ಷಗಳ ಕಾಲದ ಇತಿಹಾಸ ಬೆಳೆದಿದೆ. ಇದು ಬಳ್ಳಾರಿ ಜಿಲ್ಲೆಯಲ್ಲಿ ಅತ್ಯಂತ ದೊಡ್ಡದು. ಮೈಲಾರ ದೇವರ ಭಕ್ತರ ಹಣೆಗೆ ಭಂಡಾರ ಧರಿಸಿದರೆ, ಸೋಮೇಶ್ವರಲಿಂಗ ದೇವರ ಭಕ್ತರು ಹಣೆಗೆ ಗಂಧ ಧರಿಸುವರು. ಹಿರೇಕುರುವತ್ತಿ ಮಲ್ಲಿಕಾರ್ಜುನ ದೇವಾಲಯಕ್ಕಿಂತ ಪೂರ್ವದಲ್ಲಿ ಸೋಮೇಶ್ವರಲಿಂಗ ದೇವರ ದೇವಾಲಯ ಸ್ಥಾಪನೆಯಾಗಿದೆ. ಸೋಮೇಶ್ವರಲಿಂಗ ಇರುವ ದೇವಾಲಯ ಗಾತ್ರದಲ್ಲಿ ಸಾಧಾರಣ. ವಾಸ್ತುಶಿಲ್ಪ ಅಷ್ಟೇನೂ ಹೇಳಿಕೊಳ್ಳುವಂಥಾದ್ದು ಆಗಿಲ್ಲ. ಚಾಲುಕ್ಯ ಶೈಲಿಯಲ್ಲಿದೆ. ಈಗ ಅದನ್ನು ಸಂಪೂರ್ಣ ಕೆಡವಿ ಭಕ್ತರು ಹೊಸ ರೀತಿಯ ಕಟ್ಟಡ ನಿರ್ಮಿಸಿರುವರು. ದೇವಾಲಯ ಪ್ರವೇಶ ಮುಖಮಂಟಪ ಕೆಡವಿಲ್ಲ. ಅದು ಮೊದಲಿನಂತೆಯೇ ಇದೆ. ಅದರ ಪಕ್ಕದಲ್ಲಿ ಬಲಗಡೆ ಆಂಜನೇಯನ ಗುಡಿ ಇದೆ. ಹೊಸದಾಗಿ





ನಿರ್ಮಿಸಿದ ಗುಡಿಗೆ ಸುಮಾರು ಎಂಟು ಲಕ್ಷ ರೂಪಾಯಿಗಳು ಖರ್ಚು ತಗಲಿದ ಬಗ್ಗೆ ಮಾಹಿತಿ ಕೊಡುವರು. ಈಗಲೂ ಶಿಖರದ ಕೆಲಸ ನಡೆದಿದೆ.

ಕಲ್ಯಾಣ ಚಾಲುಕ್ಯ ಅರಸರಿಗೆ ಮೈಲಾರ, ಹಿರೇಕುರುವತ್ತಿ, ಹೊಳಲು, ಹಿರೇಹಡಗಲಿ, ಹೂವಿನಹಡಗಲಿ, ಬಾಗಳಿ, ನೀಲಗುಂದ ಗ್ರಾಮಗಳು ಹೆಚ್ಚು ಪ್ರಿಯವಾಗಿದ್ದವು. ಹಿರೇಕುರುವತ್ತಿ ಬಳಿ ತುಂಗಭದ್ರಾ ನದಿ ಪಶ್ಚಿಮ ದಿಕ್ಕಿಗೆ ಹರಿದಿದೆ. ಚಾಲುಕ್ಯ ಚಕ್ರವರ್ತಿ ಸೋಮೇಶ್ವರನು ನದಿಯಲ್ಲಿ ಹಾರಿ ಪ್ರಾಣ ತ್ಯಜಿಸಿದ. ಆ ಸ್ಥಳದಲ್ಲಿ ಶಂಕರಲಿಂಗವನ್ನು ಸ್ಥಾಪಿಸಿರುವರು. ನದಿ ತುಂಬಾ ಹರಿಯುವಾಗ ಅದು ಗೋಚರಿಸುವುದಿಲ್ಲ. ಕಡಿಮೆ ಪ್ರಮಾಣದಲ್ಲಿ ನದಿ ಹರಿಯುವಾಗ ಕಾಣುವುದು. ಕೋಟೆಯಲ್ಲಿ ಮಲ್ಲಿಕಾರ್ಜುನ ದೇವಾಲಯ ಇದೆ. ಇದು ಸುಂದರವಾಗಿದೆ. ದ್ವಾರದ ಮುಂಭಾಗದ ಮೇಲೆ ಎರಡು ಮದನಿಕೆಯರ ಶಿಲ್ಪಗಳು ಸೊಗಸಾಗಿವೆ. ಕೋಟೆಯ ಕೆಳಗೆ ದೊಡ್ಡ ಸಿಂಹಾಸನಕಟ್ಟೆಯನ್ನು ನಿರ್ಮಿಸಿದೆ. ಚಾಲುಕ್ಯ ಅರಸರು ಈ ಕಟ್ಟೆಯ ಮೇಲೆ ಕುಳಿತು ಚಿಕ್ಕ ಅರಸರಲ್ಲಿ ಉಂಟಾದ ಜಗಳಗಳನ್ನು ಬಗೆಹರಿಸುತ್ತಿದ್ದರು. ಅಂತಹ ಜಗಳದ ಒಂದು ಉದಾಹರಣೆ ಶಾಸನದಲ್ಲಿ ಉಲ್ಲೇಖಿಸಿದೆ. ಶಾಸನ (ಕಾಲ ಕ್ರಿಸ್ತಶಕ ೩೦-೩-೧೧೦೫) ದೇವಾಲಯದಲ್ಲಿದೆ. ಇದಕ್ಕೆ (ಹಿರೇಕುರುವತ್ತಿಗೆ) ಶಾಸನದಲ್ಲಿ ದಕ್ಷಿಣಕಾಶಿ ಎಂದು ಹೊಗಳಿದೆ.

ಸಂಪ್ರದಾಯದಂತೆ ಮಲ್ಲಿಕಾರ್ಜುನ ದೇವರ ದೇವಾಲಯದ ಮುಂಭಾಗದಲ್ಲಿ ಶಿಲ್ಪಿ ಒಂದು ಭವ್ಯವಾದ ಬಸವಣ್ಣ ಮೂರ್ತಿಯನ್ನು ಕೆತ್ತಿ ನಿಲ್ಲಿಸಿರುವನು. ಪ್ರತಿ ವರ್ಷ ಮಾರ್ಚಿ ತಿಂಗಳಲ್ಲಿ ತೇರು ಎಳೆದು ಜಾತ್ರೆ ನಡೆಯುತ್ತದೆ. ಇದಕ್ಕೆ ಮಲ್ಲಿಕಾರ್ಜುನ ತೇರು ಎಂದು ದಾಖಲೆ ಇದೆ. ಇತ್ತೀಚೆಗೆ ಜಾತ್ರೆಗೆ ಬಂದ ಸಾಮಾನ್ಯ ಜನರು, ಸ್ತ್ರೀಯರು ಮಕ್ಕಳು, ಬಸವಣ್ಣನನ್ನು ನೋಡಿ ಆಕರ್ಷಣೆಗೊಂಡು ಕುರುವತ್ತಿ ಬಸವಣ್ಣನ ಜಾತ್ರೆಗೆ ಹೋಗಿ ಬಂದದ್ದಾಗಿ ಹೇಳಿಕೊಳ್ಳುವರು. ಇದೇ ತರಹ ಹಿರೇಹಡಗಲಿ ಕಲ್ಲೇಶ್ವರ ದೇವಾಲಯದ ಮುಂದೆ ದೊಡ್ಡ ಗಾತ್ರದ ಬಸವಣ್ಣನನ್ನು ಸ್ಥಾಪಿಸಿ, ಕಲ್ಲೇಶ್ವರ ದೇವಾಲಯ ಎಂಬುದರ ಬದಲು ಕಟ್ಟೆಬಸಪ್ಪನದೆಂದು ಹೇಳುವರು. ಮೈಲಾರ, ಹಿರೇಕುರುವತ್ತಿ, ಹೊಳಲು, ಹಿರೇಹಡಗಲಿ, ಹೂವಿನಹಡಗಲಿ, ದೇವಾಲಯಗಳ ಪರಿಸರದಲ್ಲಿ ಬಹಳ ಶಾಸನಗಳಿದ್ದು, ಅವುಗಳಲ್ಲಿ ಹೆಚ್ಚಾಗಿ ಕಲ್ಯಾಣ ಚಾಲುಕ್ಯ ಅರಸರು ದೇವರ ಸೇವಾ ಕಾರ್ಯಕ್ಕೆ ದತ್ತಿ-ದಾನ ಬಿಟ್ಟ ವಿವರಗಳು ದೊರಕುವುವು. ಹಿರೇಹಡಗಲಿ ಭೀಮೇಶ್ವರ-ದೇಮೇಶ್ವರ ಗುಡಿ ಶಾಸನದಲ್ಲಿ ಚಾಲುಕ್ಯ ಅರಸರ ವಂಶಾವಳಿ ಕಂಡು ಬರುತ್ತದೆ.

ಹಿರೇಕುರುವತ್ತಿ ಮಲ್ಲಿಕಾರ್ಜುನ ದೇವರ ಗುಡಿಯ ದಕ್ಷಿಣ ಬಾಗಿಲ ಗೋಡೆ ಶಾಸನದಲ್ಲಿ ಕ್ರಿಸ್ತಶಕ ೧೨೦೫ರ ಹೊಯ್ಸಳ ಅರಸ ಎರಡನೇ ಬಲ್ಲಾಳನ ಮುಖ್ಯ ರಾಣಿ ಪದುಮಲದೇವಿಯ ಮಹಾಪ್ರಧಾನ ಭಂಡಾರಿ ಸೋಮಯರಸರು ಕೆಲ ದತ್ತಿಗಳನ್ನು ಅಹವಮಲ್ಲೇಶ್ವರ ದೇವರ ಸೇವೆಗೆ ಬಿಟ್ಟರು ಎಂದಿದೆ. ಚಾಲುಕ್ಯ ಜಯಸಿಂಹನ ಪುತ್ರ ಅಹವಮಲ್ಲದೇವ ಅರಸನ ಹೆಸರನ್ನು ದೇವರಿಗೆ ಕರೆದಿರುವರು.

**ಕಾರ್ಣಿಕೋತ್ಸವದ ಹೆಸರುಗಳು - ೧೯ನೆಯ ಶತಮಾನ ದಿಂದ**

*೧೯೦೦ ಮುತ್ತಿನ ಮಳೆ ಸುರಿದೀತಲೇ ಬಹು ಪರಾಕ್*
*೧೯೦೧ ಹುಟ್ಟಿದ ಕಂದ ಕಷ್ಟಪಟ್ಟು ಸುಖಪಡಿತಲೇ ಪರಾಕ್*
*೧೯೦೨ ಅಂಬಲಿ ಹಳಸಿತಲೇ ಪರಾಕ್*
*೧೯೦೩ ಭೂಲೋಕಕ್ಕೆ ಮಬ್ಬುಗವಿತಲೇ ಪರಾಕ್*
*೧೯೦೪ ಸಂಪಲೇಬಹುಪರಾಕ್*
*೧೯೦೫ ಮಳೆ ಬೆಳೆ ಸಂಪಲೇ ಪರಾಕ್*
*೧೯೦೬ ಆಕಾಶಕ್ಕೆ ಶಿಡ್ಲು ಬಡಿತಲೆ ಪರಾಕ್*
*೧೯೦೭ ಸವನಿದಿಯಲೇ ಪರಾಕ್*
*೧೯೦೮ ಮರಕ್ಕೆ ಮಬ್ಬುಗವಿತಲೇ ಪರಾಕ್*
*೧೯೦೯ ಸಂತೃಪ್ತಿ ಆದೀತಲೆ ಪರಾಕ್*
*೧೯೧೦ ಕಲಕು ಮಲಕು ಆದೀತಲೇ ಪರಾಕ್*
*೧೯೧೧ ಮಳೆ ಬೆಳೆ ಸಂಪಲೇ ಪರಾಕ್*
*೧೯೧೨ ಶಿಶುವಿಗೆ ಕಸಿವಿಸಿ ಆದೀತಲೇ ಬಹು ಪರಾಕ್*
*೧೯೧೩ ಸಣ್ಣದೊಂದು ದಿನ ಬಂತಲೆ ಬಹು ಪರಾಕ್*
*೧೯೧೪ ಆಕಾಶಕ್ಕೆ ಶಿಡ್ಲು ಬಡಿತಲೆ ಪರಾಕ್*
*೧೯೧೫ ಕಲಕು ಮಲಕು ಆದೀತಲೇ ಪರಾಕ್*
*೧೯೧೬ ಮರಕ್ಕೆ ಮಬ್ಬುಗವಿತಲೇ ಬಹು ಪರಾಕ್*
*೧೯೧೭ ಸಂತೃಪ್ತಿಯಲೇ ಪರಾಕ್*
*೧೯೧೮ ಸಣ್ಣದೊಂದು ದಿನ ಬಂತಲೆ ಬಹು ಪರಾಕ್*
*೧೯೧೯ ಸವನಿಧಿಯಲೇ ಬಹು ಪರಾಕ್*
*೧೯೨೦ ಬೆಳೆ ಚೆಂದ ಮಳೆ ಮಂದಲೆ ಬಹು ಪರಾಕ್*
*೧೯೨೧ ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್*
*೧೯೨೨ ಸವನಿಧಿ ಆತಲೇ ಪರಾಕ್*
*೧೯೨೩ ಕಷ್ಟ ಬಂದು ಸುಖ ಬಂತಲೇ ಪರಾಕ್*
*೧೯೨೪ ಮರ್ತ್ಯಲೋಕಕ್ಕೆ ಕತ್ತಲಾತಲೆ ಪರಾಕ್*
*೧೯೨೫ ಮಳೆ ಬೆಳೆ ಸಂಪಲೇ ಪರಾಕ್*
*೧೯೨೬ ಸಣ್ಣದೊಂದು ದಿನ ಬಂತಲೆ ಪರಾಕ್*
*೧೯೨೭ ಸಂಪಲೆ ಬಹು ಪರಾಕ್*
*೧೯೨೮ ಸವನಿಧಿ ಆದೀತಲೆ ಪರಾಕ್*
*೧೯೨೯ ಸಣ್ಣದೊಂದು ದಿನ ಬಂತಲೆ ಪರಾಕ್*
*೧೯೩೦ ಸಂತೃಷ್ಠಿ ಆತಲೇ ಪರಾಕ್*
*೧೯೩೧ ಸಂತೃಷ್ಠಿ ಪರಾಕ್*
*೧೯೩೨ ಕಲಕು ಮಲಕು ಪರಾಕ್*
*೧೯೩೩ ಸಣ್ಣದೊಂದು ದಿನ ಬಂತಲೇ ಪರಾಕ್*
*೧೯೩೪ ಅಂಬಲಿ ಹಳಸೀತಲೇ ಪರಾಕ್*
*೧೯೩೫ ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್*
*೧೯೩೬ ಕಪ್ಪತ್ ಗುಡ್ಡಕ್ಕೆ ಕಟ್ಟಿ ರುಬಿ ಮುಕ್ಕರಿದವಲೇ ಪರಾಕ್*
*೧೯೩೭ ಕಲಕು ಮಲಕು ಆದೀತಲೆ ಪರಾಕ್*
*೧೯೩೮ ಸಣ್ಣದೊಂದು ದಿನಬಂತಲೆ ಪರಾಕ್*
*೧೯೩೯ ಆಕಾಶಕ್ಕೆ ಗುಂಡು ಬಿತ್ತಲೆ ಪರಾಕ್*
*೧೯೪೦ ಮರ್ತ್ಯಲೋಕಕ್ಕೆ ಮಬ್ಬುಗವಿತಲೇ ಪರಾಕ್*
*೧೯೪೧ ಅಂಬಲಿ ಹಳಸೀತಲೆ ಪರಾಕ್*

೧೯೪೨ ಕಲಕು ಮಲಕು ಆದೀತಲೆ ಪರಾಕ್
೧೯೪೩ ಸವನಿಧಿ ಸಂಪಲೇ ಪರಾಕ್
೧೯೪೪ ಬೆಳೆ ಮಂದ ಮಳೆ ಚಂದಲೇ ಪರಾಕ್
೧೯೪೫ ಆಕಾಶಕ್ಕೆ ಮಬ್ಬು ಗವಿತಲೇ ಪರಾಕ್
೧೯೪೬ ಮುತ್ತಿನ ಮಾಲಿ ಚೂರಾಯಿತಲೆ ಪರಾಕ್
೧೯೪೭ ಮರ್ತ್ಯಕ್ಕೆ ಮಬ್ಬು ಗವಿತಲೇ ಪರಾಕ್
೧೯೪೮ ಆಕಾಶಕ್ಕೆ ಶಿಡ್ಲು ಬಡಿತಲೇ ಪರಾಕ್
೧೯೪೯ ಮುತ್ತು ಒಡೆದು ಮಾಲಿ ಆತಲೇ ಪರಾಕ್
೧೯೫೦ ಸಣ್ಣದೊಂದು ದಿನ ದೊಡ್ಡದೊಂದು ದಿನ ಬಂತಲೇ ಪರಾಕ್
೧೯೫೧ ಮರ್ತ್ಯಲೋಕಕ್ಕೆ ಕಪ್ಪು ಕವೀತಲೆ ಪರಾಕ್
೧೯೫೨ ಹುಟ್ಟಿದ ಕಂದ ಕಷ್ಟಪಟ್ಟು ಸುಖಪಟ್ಟೀತಲೆ ಪರಾಕ್
೧೯೫೩ ಸಂತೃಪ್ತಿಯಲೇ ಪರಾಕ್
೧೯೫೪ ಮಳೆ ಬೆಳೆ ಸಂಪಲೇ ಪರಾಕ್
೧೯೫೫ ಮುತ್ತು ಒಡೆದು ಚೂರಾಯಿತಲೆ ಪರಾಕ್
೧೯೫೬ ಮುತ್ತಿನ ರಾಶಿ ದುಂಡಗಾತಲೇ ಪರಾಕ್
೧೯೫೭ ಆಕಾಶಕ್ಕೆ ಗುಂಡು ಬಿತ್ತಲೆ ಪರಾಕ್
೧೯೫೮ ಭೂಲೋಕಕ್ಕೆ ಮಬ್ಬು ಬಿಟ್ಟಿತಲೇ ಪರಾಕ್
೧೯೫೯ ಕಲಕು ಮಲಕು ಆದೀತಲೇ ಪರಾಕ್
೧೯೬೦ ಹುಟ್ಟಿದ ಕೂಸು ಕಷ್ಟಪಟ್ಟೀತಲೆ ಪರಾಕ್
೧೯೬೧ ಸಂಕಷ್ಟ ನಿವಾರಣೆಯಲೇ ಪರಾಕ್
೧೯೬೨ ಮುತ್ತು ಮೂರು ಭಾಗ ಆತಲೇ ಪರಾಕ್
೧೯೬೩ ಮುತ್ತಿನ ಮಳೆ ಆದಿತಲೆ ಪರಾಕ್
೧೯೬೪ ಸರಪಳಿ ಹರಿದು ಚೂರಾತಲೆ ಪರಾಕ್
೧೯೬೫ ಸಣ್ಣದಿನ ಬಂದಿತಲೇ ಪರಾಕ್
೧೯೬೬ ಮುತ್ತಿನ ರಾಶಿ ಮಾಲಿ ಆಯಿತಲೇ ಪರಾಕ್
೧೯೬೭ ಕಷ್ಟದೊಂದು ದಿನ ಬಂದಿತಲೇ ಪರಾಕ್
೧೯೬೮ ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್
೧೯೬೯ ಮುತ್ತಿನ ರಾಶಿ ಒಡೆದು ಮಾಲಿ ಆತಲೆ ಪರಾಕ್
೧೯೭೦ ಸಂಕಷ್ಟ ನಿವಾರಣೆ ಆಯಿತಲೇ ಪರಾಕ್
೧೯೭೧ ಕಲಕು ಮಲಕಲೇ ಬಹು ಪರಾಕ್
೧೯೭೨ ಹುಟ್ಟಿದ ಕೂಸು ಕಷ್ಟಪಟ್ಟು ಸುಖಪಟ್ಟೀತಲೆ ಪರಾಕ್
೧೯೭೩ ಶಿಶುವಿಗೆ ಕಸಿವಾಲ ಆದೀತಲೇ ಪರಾಕ್
೧೯೭೪ ಆಕಾಶಕ್ಕೆ ಗುಂಡು ಬಿತ್ತಲೇ ಪರಾಕ್
೧೯೭೫ ಮರ್ತ್ಯಲೋಕಕ್ಕೆ ಮಬ್ಬುಗವಿತಲೇ ಪರಾಕ್
೧೯೭೬ ಮುತ್ತಿನ ಮಳೆ ಬಿತ್ತಲೇ ಪರಾಕ್
೧೯೭೭ ಆಕಾಶಕ್ಕೆ ಶಿಡ್ಲು ಹೊಡಿತಲೇ ಪರಾಕ್
೧೯೭೮ ಮುತ್ತಿನ ರಾಶಿ ಆತಲೇ ಪರಾಕ್
೧೯೭೯ ಆಕಾಶಕ್ಕೆ ಮಬ್ಬು ಗವಿತಲೇ ಪರಾಕ್
೧೯೮೦ ಮುತ್ತಿನ ರಾಶಿ ದುಂಡಾಗತಲೇ ಪರಾಕ್
೧೯೮೧ ಆಕಾಶಕ್ಕೆ ಶಿಡ್ಲು ಹೊಡಿತಲೆ ಪರಾಕ್
೧೯೮೨ ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್
೧೯೮೩ ಮುತ್ತು ಹೊಡೆದು ಚೂರು ಆತಲೇ ಪರಾಕ್
೧೯೮೪ ಹುಟ್ಟಿ ಕೂಸು ಸುಖ ಪಟ್ಟೀತಲೇ ಪರಾಕ್
೧೯೮೫ ಇಬ್ಬನಿ ಕರಗೀತಲೇ ಪರಾಕ್
೧೯೮೬ ಸವನಿಧಿ ಸಂಪಲೇ ಪರಾಕ್
೧೯೮೭ ಮುತ್ತಿನ ರಾಶಿ ಮೂರು ದುಂಡಗಾತಲೇ ಪರಾಕ್
೧೯೮೮ ಕಲಕು ಮಲಕಲೇ ಪರಾಕ್
೧೯೮೯ ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್
೧೯೯೦ ಮುತ್ತಿನ ರಾಶಿ ದುಂಡಗಾತಲೇ ಪರಾಕ್
೧೯೯೧ ಮುತ್ತು ಒಡೆದು ಮೂರು ಭಾಗ ಆತಲೇ ಪರಾಕ್
೧೯೯೨ ಆಕಾಶಕ್ಕೆ ಗುಂಡು ಬಿತ್ತಲೆ ಪರಾಕ್
೧೯೯೩ ಹುಟ್ಟಿದ ಕೂಸಿನ ಮೇಲೆ ಬಂಗಾರದ ಗಿಣಿ ಕೂದ್ರತಲೇ ಪರಾಕ್
೧೯೯೪ ಆಕಾಶದ ಗುಂಡು ತೂಗಿತಲೇ ಪರಾಕ್
೧೯೯೫ ಆಕಾಶಕ್ಕೆ ಗುಂಡು ತೂರಿತಲೇ ಪರಾಕ್
೧೯೯೬ ಸವನಿಧಿ ಸಂಪಲೇ ಪರಾಕ್
೧೯೯೭ ಮುತ್ತಿನ ರಾಶಿ ದುಂಡಗಾತಲೇ ಪರಾಕ್
೧೯೯೮ ಮುತ್ತಿನ ರಾಶಿ ಮೂರು ಭಾಗ ಆದೀತಲೇ ಪರಾಕ್
೧೯೯೯ ಮುತ್ತಿನ ರಾಶಿ ಕಲಕು ಮಲಕು ಆದೀತಲೇ ಪರಾಕ್
೨೦೦೦ ಮುತ್ತಿನ ರಾಶಿಗೆ ಗುಂಡು ಬಿತ್ತಲೇ ಪರಾಕ್
೧೦-೨-೨೦೦೧ ಶನಿವಾರ - ಮುತ್ತಿನರಾಸಿಗೆ ಮಂಜು ಮುಸುಕುತಲೇ ಪರಾಕ್

ವಿಮರ್ಶೆ

೧. ಪರಿಸರ ಅಧ್ಯಯನದಿಂದ ದೊರೆಯುವ ಹೊಸ ಮಾಹಿತಿಗಳು : ೧-೨-೧೦೪೬ ರಿಂದ ಆಚರಿಸುತ್ತಾ ಬಂದ ಹಬ್ಬ ಬೆಳೆದು ಜಾತ್ರೆಯಾಗಿ ಅನೇಕ ವರ್ಷಗಳ ನಂತರ ಕ್ರಿ. ಶ. ೧೯೦೦ ರಿಂದ ಕಾರ್ಣೀಕೋತ್ಸವಕ್ಕೆ ಎಡೆಕೊಟ್ಟಿತು. ಇದಕ್ಕೆ ದಾಖಲೆ ಇದೆ.
೨. ಮೈಲಾರ ಕಾರ್ಣೀಕೋತ್ಸವ ಕಾಲದಲ್ಲಿ ಗೊರವಪ್ಪ ಹೇಳಿದ ಸಾಂಕೇತಿಕ ವಾಕ್ಯಗಳು ಜೈನ ರಟ್ಟಕವಿ ಚಂದ್ರಭಟ್ಟ ವಿರಚಿತ ರಟ್ಟಮತ ಪದ್ಯರೂಪದ ಗ್ರಂಥದಲ್ಲಿವೆ.
೩. ಏಳು ಕೋಟಿ ಮೈಲಾರ ಲಿಂಗ ಎಂದು ಭಕ್ತರು ದೇವರನ್ನು ಕರೆದ ಹಿನ್ನಲೆ ಕಾಣಬರುತ್ತದೆ.
೪. ಮೈಲಾರಕ್ಕೆ ಮಣ್ ಮೈಲಾರವೆಂದು ಕರೆದ ಕಾರಣ ನೀಡಿದೆ.
೫. ಕಲ್ಯಾಣ ಚಾಲುಕ್ಯರ ಮೊದಲ ಸೋಮೇಶ್ವರ ಚಕ್ರವರ್ತಿ ಹಿರೇಕುರುವತ್ತಿ ಮುಂದೆ ಹರಿದ ತುಂಗಭದ್ರಾ ನದಿ ಹಾರಿ ಪ್ರಾಣ ತ್ಯಜಿಸಿದ್ದು ತಿಳಿಯುತ್ತದೆ.
೬. ಹಿರೇಕುರುವತ್ತಿ ಮಲ್ಲಿಕಾರ್ಜುನ ದೇವರಿಗೆ ಆಹವಮಲ್ಲನೆಂಬ ಹೆಸರು ಶಾಸನದಲ್ಲಿದೆ.
೭. ಹರಪನಹಳ್ಳಿ - ಮೈಲಾರ ದೇವಾಲಯದ ಹಿಂದೆ ಒಂದು ಚಿಕ್ಕ ಗುಡಿ ಇದೆ. ಇದಕ್ಕೆ ಸೋಮಲಿಂಗಪ್ಪನ ದೇವಾಲಯ ಎಂದು ಹೇಳುವರು. ಸೋಮಲಿಂಗಪ್ಪ ಎಂದರೆ ಸೋಮೇಶ್ವರ ಲಿಂಗ ಎಂಬುದಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಶಾಸನಗಳು
೨. ದೇವಾಲಯ ಮತ್ತು ಮೂರ್ತಿ ಶಿಲ್ಪಗಳು
೩. ವಯೋವೃದ್ಧರ ಹೇಳಿಕೆಗಳು
೪. ಮೈಲಾರ ದೇವರ ಮತ್ತು ಸೋಮಲಿಂಗೇಶ್ವರ ದೇಗುಲಗಳ ಧರ್ಮ ದರ್ಶಿಗಳ ದಾಖಲೆಗಳು.

ಪ್ರೊ।। ಜಿ. ಎಸ್. ದೀಕ್ಷಿತ್*

# ಬಿಜ್ಜಳ ಕೊಲೆಯಾದ ಬಗ್ಗೆ ಒಂದು ಊಹೆ

ಮಲ್ಲೆ ಬೊಮ್ಮ ಮತ್ತು ಜಗದೇವ ಎಂಬ ವೀರರು ಬಿಜ್ಜಳನನ್ನು ಕೊಂದು ಹಾಕಿದವರೆಂದು ಪಾಲ್ಕುರಿಕೆ ಸೋಮನಾಥನ ಪಂಡಿತಾರಾಧ್ಯಚರಿತ್ರೆಯ ಮಹಿಮಾ ಪ್ರಕರಣದಲ್ಲಿ ಹೇಳಿದೆ. ಇವರಿಗೆ ಚಾಳುಕ್ಯ ನಾಲ್ಕನೆಯ ಸೋಮೇಶ್ವರನ ದಂಡನಾಥನಾದ ಬಮ್ಮರಸ ಅಥವಾ ಬಮ್ಮದೇವನು ಏಕೆ ಸಹಾಯ ಮಾಡಿದನೆಂಬುದೇ ಈ ಪ್ರಬಂಧದ ವಿಷಯ. ಕಲಚುರ್ಯರ ಸೇನಾಪತಿ ಕಾವಣ[೧]. ಅವರನ್ನು ಈ ಸೇನಾಪತಿಯು ಕೊನೆಯವರೆಗೂ ನಿಷ್ಠೆಯಿಂದ ಸೇವಿಸಿದನು. ಇವನಿಗೆ, ಬಮ್ಮರಸ, ಕೇಶವ ಮತ್ತು ನಾರಸಿಂಹರೆಂಬ ಮೂವರು ಮಕ್ಕಳು. ಕಡ್ಲೆವಾಡದ ಒಂದು ಶಾಸನವು[೨] ಬಮ್ಮರಸನು ಕಲಚುರಿ ಸೋವಿದೇವನ ದಂಡನಾಥನಾಗಿದ್ದುದನ್ನು ಹೇಳುತ್ತದೆ. ಹೀಗೆ ಕೆಲವು ವರ್ಷಗಳು ತಂದೆ ಕಾವಣ, ಮಗ ಬಮ್ಮರಸರು, ಕಲಚುರ್ಯರ ಪ್ರಮುಖ ಸೇನಾಪತಿಗಳಾಗಿದ್ದರು. ಬಮ್ಮರಸನಿಗೆ ತಂದೆಯ ಬಗ್ಗೆ ಅಪಾರ ಗೌರವವಿದ್ದುದನ್ನು ಮೇಲೆ ಹೇಳಿದ ಕಡ್ಲೆವಾಡದ ಶಾಸನವು ಸ್ಪಷ್ಟಪಡಿಸುತ್ತದೆ. ಅವನನ್ನು ಕಲಚುರಿಗಳು ಅನುಮಾನದಿಂದ ನೋಡುತ್ತಾರೆಂದೂ ಅಥವಾ ಸೋವಿದೇವನ ನಂತರ ಕಲಚುರಿಗಳಲ್ಲಿ ಬಲಿಷ್ಠರಾದ ರಾಜರು ಇಲ್ಲದಿದ್ದುದರಿಂದ ಚಾಳುಕ್ಯರು ಅವರನ್ನು ಸುಲಭವಾಗಿ ಸೋಲಿಸುವರೆಂಬ ಅಂದಾಜೋ ಅಥವಾ ಎರಡು ಕಾರಣಗಳಿಂದಲೂ ಬಮ್ಮರಸನು, ಕಲಚುರಿಗಳನ್ನು ಬಿಟ್ಟು ನಾಲ್ಕನೆಯ ಸೋಮೇಶ್ವರನನ್ನು ಸೇರಿ ಅವನ ಮುಖ್ಯ ಸೇನಾಧಿಪತಿಯಾದನು. ಈ ಬದಲಾವಣೆ ಬಹುಶಃ ಕ್ರಿ. ಶ. ೧೧೮೩ರ ವೇಳೆಗೆ ಆಗಿ ಹೋಗಿತ್ತು. ಅವನ ಜತೆಗೆ ಅವನ ತಮ್ಮ ನಾರಸಿಂಹನೂ ಚಾಳುಕ್ಯರ ಪಕ್ಷವನ್ನು ಸೇರಿದನು. ತಂದೆ ಕಾವಣನ ಜತೆಗೆ ಅವನ ಎರಡನೆಯ ಮಗ ಕೇಶವನು ಕಲಚುರ್ಯರ ಸೇವೆಯಲ್ಲಿಯೇ ಉಳಿದನು. ೧೧೮೩ರ ಸುಮಾರಿನಲ್ಲಿ ನಡೆದ ಒಂದು ಕದನದಲ್ಲಿ ಕಲಚುರ್ಯರ ಮುಖ್ಯ ಸೇನಾಪತಿ ಕಾವಣ ಮತ್ತು ಚಾಳುಕ್ಯರ ಮುಖ್ಯ ಸೇನಾಪತಿ ಬಮ್ಮರಸರಾಗಿದ್ದರು. ಈ ಕದನದಲ್ಲಿ ಬಮ್ಮರಸನು ಕಲಚುರ್ಯರ ೬೦ ಆನೆಗಳನ್ನು ಚಾಳುಕ್ಯರ ಕಡೆ ಬರುವ ಹಾಗೆ ಮಾಡಿ ಅವರನ್ನು ಸಂಪೂರ್ಣವಾಗಿ ಸೋಲಿಸಿದನು. ಗದುಗಿನ ಒಂದು ಶಾಸನದಿಂದ ಫ್ಲೀಟರು ಹೀಗೆ ಊಹಿಸಿದ್ದಾರೆ:[೩] ಬಮ್ಮರಸನು ಮೊದಲು ಕಲಚುರಿ ಸೈನ್ಯದಲ್ಲಿ ಅಧಿಕಾರಿಯಾಗಿದ್ದುದರಿಂದ ಅಲ್ಲಿ ಅವನ ಸಹಾಯಕರು ಇದ್ದಿರಬಹುದು. ಆದರೆ ಕಲಚುರಿಗಳು, ಕಾವಣನು ಹೀಗೆ ದ್ರೋಹ ಮಾಡಿರಬೇಕೆಂದು ಶಂಕಿಸಿ, ಅವನು ತಮ್ಮ ಪಕ್ಷದಲ್ಲಿ ಮುಂದುವರಿದರೆ, ತಮಗೆ ಸೋಲು ನಿಶ್ಚಯವೆಂದು, ಅವನನ್ನು ಕೊಂದುಹಾಕಿದರು. ಬಮ್ಮರಸನ ಪರಶುರಾಮನಂತೆ ಪಿತೃಭಕ್ತಿ ಪರಾಯಣನು. ತನ್ನ ತಂದೆಯನ್ನು ಮೋಸದಿಂದ ಕೊಂದ ಕಲಚುರಿಗಳನ್ನು ನಿರ್ಮೂಲ ಮಾಡಿ, ಚಾಳುಕ್ಯರನ್ನು ಧರಾಧೀಶರನ್ನಾಗಿ ಮಾಡುವೆನೆಂದು ವೀರಬಮ್ಮಯ್ಯನು, ಪ್ರಪಂಚಕ್ಕೆ ಸಾರಿ ಹೇಳುತ್ತಾ ಶಪಥಮಾಡಿದನೆಂದು ಅಣ್ಣಿಗೆರೆಯ ೧೧೮೪ರ ಶಾಸನವು ಹೇಳುತ್ತದೆ.[೪] ಅದೇ ಶಾಸನವು ಕಾವಣನನ್ನು ಪರಶುರಾಮನ ತಂದೆ ಜಮದಗ್ನಿಗೆ ಹೋಲಿಸಿ ಅವನನ್ನು ಮೋಸದಿಂದ ಕೊಂದ ಕಾರ್ತವೀರ್ಯಾರ್ಜುನನನ್ನು ಪರಶುರಾಮನು ಕೊಂದ ಹಾಗೆ ಬಮ್ಮರಸನು ಕಲಚುರ್ಯರನ್ನು ನಾಶಮಾಡಿದನೆಂದು ಹೇಳುತ್ತದೆ. ಮತ್ತು ಅದೇ ಕದನದಲ್ಲಿ ಬಮ್ಮರಸನ ತಮ್ಮ ನಾರಸಿಂಹನು ಕಲಚುರಿ ಕೊನೆಯ ಅರಸು ಸಂಕಮನನ್ನು ಕೊಂದನೆಂದು ಹೇಳಿದೆ.[೫] ಈ ಶಾಸನದ ತೇದಿ ೧೧೮೪. ಇಷ್ಟೊತ್ತಿಗೆ ಕಲಚುರಿವಂಶವು ಕೊನೆಗೊಂಡಿತು. ಇದು ಕಲ್ಯಾಣ ಕ್ರಾಂತಿಯ ರಾಜಕೀಯ ಪರಿಣಾಮ. ಆದ್ದರಿಂದ. ಈ ಕ್ರಾಂತಿಯು ೧೧೬೮ರಲ್ಲಿ ಆಗಲಿಲ್ಲ, ೧೧೮೩-೧೧೮೪ರಲ್ಲಿ ಆಯಿತೆಂದು ನನ್ನ ಊಹೆ.

ಮೇಲೆ ಹೇಳಿದ ಅಣ್ಣಿಗೆರೆಯ ಶಾಸನದಲ್ಲಿ ಬಮ್ಮರಸನು ಕೊಲ್ಲಿಸಿದ ಕಲಚುರಿ ಮುಖಂಡನು ಯಾರೆಂದು ಹೇಳಿಲ್ಲ. ಆದರೆ ಅದರಲ್ಲಿ ಎಲ್ಲಾ ಕಲಚುರಿಗಳು ನಾಶವಾದರೆಂದು ಹೇಳಿದೆ. ಬಿಜ್ಜಳನೂ ಇದೇ ವೇಳೆಗೆ ಹತನಾಗಿರಬೇಕು. ಇದಕ್ಕೂ ಮುಂಚೆ ಅವನು ಹತನಾದನೆಂದು ಎಲ್ಲಿಯೂ ಹೇಳಿಲ್ಲ. ೧೧೬೮ರಲ್ಲಿ ಅವನ ಕೊನೆಯ ಶಾಸನವಿರುವುದರಿಂದ ಆಗಲೇ ಅವನು ನಿಧನವಾಗಿರಬೇಕು. ಆಗಲೇ ಕಲ್ಯಾಣಕ್ರಾಂತಿಯಾಯಿತೆಂದು ಇದುವರೆಗೂ ಅನೇಕ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಇದಕ್ಕೆ ಯಾವ ಶಾಸನದ ಬೆಂಬಲವೂ ಇಲ್ಲ. ೧೧೮೩-೮೪ರಲ್ಲಿ ಕೊನೆಯ ಕಲಚುರಿ ಅರಸ ಸಂಕಮ ಮತ್ತು ಎಲ್ಲಾ ಕಲಚುರಿಗಳು ನಾಶರಾದರೆಂದು ಆ ಕಾಲದ ಅಣ್ಣಿಗೆರೆ ಶಾಸನವು ಹೇಳುತ್ತದೆ. ಸಂಕಮನ ಕೊನೆಯ ತಮ್ಮ ಸಿಂಘಣ.[೬] ಇವನು ಚಾಳುಕ್ಯರಿಗೆ ಶರಣಾಗತನಾಗಿ ಉಳಿದುಕೊಂಡನು. ಇನ್ನು ಉಳಿದ ಕಲಚುರಿ ಮುಖಂಡ ಬಿಜ್ಜಳ. ಅಣ್ಣಿಗೆರೆ ಶಾಸನವು ಪರಶುರಾಮನನ್ನು ಬಮ್ಮರಸನಿಗೂ, ಅವನ ತಂದೆ ಜಮದಗ್ನಿಯನ್ನು ಕಾವಣನಿಗೂ ಹೋಲಿಸುವುದರಿಂದ ಜಮದಗ್ನಿಯನ್ನು ಕೊಂದ ಕಾರ್ತ

* ಸ್ವಸ್ತಿ ನಂ. ೧. ೧೫ನೇ ಕ್ರಾಸ್, ನವೋದಯನಗರ, ಧಾರವಾಡ - ೫೮೦ ೦೦೩

ವೀರಾರ್ಜುನನು ಬೇರೆ ಯಾರು ಅಲ್ಲದೆ ಬಿಜ್ಜಳನು. ಮೋಸದಿಂದ ಶತ್ರುಗಳನ್ನು ಕೊಲ್ಲುವುದು ಬಿಜ್ಜಳನು ಮೊದಲಿನಿಂದಲೂ ಮಾಡಿಕೊಂಡು ಬಂದ ಕೆಲಸ. ತನ್ನ ಒಡೆಯರಾದ ಎಲ್ಲಾ ಚಾಳುಕ್ಯರನ್ನು ಸಂಹರಿಸಿದ. ನಾಲ್ಕನೆಯ ಸೋಮೇಶ್ವರನು ಈ ಹತ್ಯಾಕಾಂಡ ನಡೆದಾಗ ಕಲ್ಯಾಣದಲ್ಲಿರಲಿಲ್ಲವಾದ್ದರಿಂದ ಉಳಿದುಕೊಂಡ ತನ್ನನ್ನು ಬಿಟ್ಟು ಉಳಿದ ಎಲ್ಲಾ ಚಾಳುಕ್ಯ ಅರಸುಮನೆತನದವರನ್ನು ನಾಶಮಾಡಿದ ಬಿಜ್ಜಳನನ್ನು ತನ್ನ ಸೇನಾಪತಿ ಮುಖಾಂತರ ನಾಶಮಾಡಿಸಿದ.

ಆದರೆ ಬಿಜ್ಜಳನನ್ನು ಕೊಂದವರು ಜಗದೇವ ಮತ್ತು ಮಲ್ಲೆಬೊಮ್ಮರೆಂದು ನಾವು ಮೊದಲು ನೋಡಿದ್ದೇವೆ. ಈ ಜಂಗಮರಿಗೆ ಒಬ್ಬ ರಾಜನನ್ನು ಕೊಲ್ಲುವ ಶಕ್ತಿ ಎಲ್ಲಿಂದ ಬಂತು. ಆ ಶಕ್ತಿಯೇ ಬಮ್ಮರಸ. ಇವನು ಅವರಿಗೆ ತನ್ನ ಸೈನ್ಯದ ಸಹಾಯವನ್ನು ಕೊಟ್ಟಿರಬೇಕು. ಈ ಸೈನ್ಯದ ನೆರವಿನಿಂದ ಅವರು ಬಿಜ್ಜಳನ ಅರಮನೆಗೆ ಹೋಗಿ ಅವನನ್ನು ಕೊಂದಿರಬೇಕೆಂದು ನನ್ನ ಊಹೆ. ಈ ಕೊಲೆಗಾರರ ಜತೆಗೆ ಗುತ್ತಿಯ ಅರಸ ಮಲ್ಲಿದೇವನು ಇದ್ದಿರಬಹುದು. ಯಾಕೆಂದರೆ ಕುಂಜಾಪುರದ ಶಾಸನದಲ್ಲಿ ಅವನನ್ನು 'ಬಿಜ್ಜಿಗೆ ಶಿರಚ್ಛೇದಕ' ನೆಂದು ಕರೆದಿದೆ. ಈ ಶಿರಚ್ಛೇದನ ೧೧೬೭-೬೮ರಲ್ಲಿ ಆಗಿರಲಾರದು. ಮೇಲೆ ಹೇಳಿದ ಕಾರಣಗಳಿಂದ ೧೧೮೩-೮೪ರಲ್ಲಿ ಆಗಿರಬೇಕು. ಆದ್ದರಿಂದ ೧೧೮೩-೧೧೮೪ರಲ್ಲಿ ಜಗದೇವ, ಮಲ್ಲೆ ಬೊಮ್ಮ ಮತ್ತು ಮಲ್ಲಿದೇವರು ಬಮ್ಮರಸನ ಸೈನ್ಯದ ಸಹಾಯದಿಂದ ಬಿಜ್ಜಳನನ್ನು ಕೊಂದಿರಬೇಕು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. *SII*, XV, ನಂ. ೫೯.
೨. *SII*, XX, ನಂ. ೧೫೪.
೩. *EI*, VI, ಪುಟ. ೯೨.
೪. *SII* , XV, ನಂ. ೫೯.
೫. ಅದೇ ಶಾಸನದಲ್ಲಿ ೧೭ನೆ ಸಾಲು.
೬. *SII.*, XV, ನಂ. 58.
೭. *SII.*, IX, (i) ನಂ. ೨೧೭.

ಡಾ|| ಹನುಮ ನಾಯಕ*

# ಮುಳೂರಿನ ಕಿಳ್ಳ ವಂಶಸ್ಥರು

ಇತಿಹಾಸವು ಕೇವಲ ಗತಕಾಲದ ಅಭ್ಯಾಸವಾಗಿರದೆ, ಗತಕಾಲದ ಜ್ಞಾನವನ್ನು ವಿಶ್ಲೇಷಿಸಿ ಶ್ರೀಮಂತಗೊಳಿಸುವ ವಿಷಯವಾಗಿದೆ. ಇತಿಹಾಸದಲ್ಲಿ ಸಂಪೂರ್ಣ ವಸ್ತು ನಿಷ್ಠತೆಯನ್ನು ಸಾಧಿಸುವುದು ಅಸಾಧ್ಯವಾದ ಕೆಲಸ. ಈ ಮಾತು ವಿಜ್ಞಾನದ ವಿಷಯಗಳಿಗೂ ಸಹ ಸತ್ಯ. ಉದಾಹರಣೆಗೆ ಜೇಮ್ಸ್ ಮಿಲ್‌ರು ತಮ್ಮ ಪುಸ್ತಕದಲ್ಲಿ[೧] ಅಶೋಕನ ಬಗ್ಗೆಯಾಗಲಿ ಅಥವಾ ಗುಪ್ತರ ಬಗ್ಗೆಯಾಗಲಿ ಬರೆಯಲಿಲ್ಲ. ಏಕೆಂದರೆ ಆಗಿನ್ನೂ ಶಾಸನಗಳಾಗಲೀ ಅಥವಾ ಬೇರಾವುದೇ ಆಧಾರಗಳು ಅವರಿಗೆ ದೊರಕಿರಲಿಲ್ಲ. ಅದೇ ರೀತಿ ವಿನ್ಸೆಂಟ್ ಸ್ಮಿತರು ಸಹ ತಮ್ಮ ಪುಸ್ತಕದಲ್ಲಿ[೨] ಹರಪ್ಪ ಸಂಸ್ಕೃತಿಯನ್ನು ಸೇರಿಸಲಿಲ್ಲ. ಏಕೆಂದರೆ ಹರಪ್ಪ ಮತ್ತು ಮೊಹೆಂಜೊದಾರೋ ಸಂಸ್ಕೃತಿಯು ೧೯೨೧ರಲ್ಲಿ ಬೆಳಕಿಗೆ ಬಂದಿತ್ತು. ಕಾಲಕ್ರಮೇಣ ಐತಿಹಾಸಿಕ ಸಾಮಗ್ರಿಗಳು ಮತ್ತು ಸಲಕರಣೆಗಳು ದೊರಕಿದಂತೆ, ಅವುಗಳ ಸಹಾಯದಿಂದ ಇಂದು ನಾವು ಇತಿಹಾಸವನ್ನು ಹಳೇಶಿಲಾಯುಗದಿಂದ ಪ್ರಾರಂಭಿಸಿದ್ದೇವೆ. ಈ ಮಧ್ಯೆ ಇತಿಹಾಸದ ವಿಷಯವು ಗುಣಾತ್ಮಕವಾಗಿಯೂ ಹಾಗೆ ಪರಿಮಾಣಾತ್ಮಕವಾಗಿಯೂ ಸಾಕಷ್ಟು ಬದಲಾವಣೆ ಹೊಂದಿದೆ.

ಇತಿಹಾಸವು ಮೂಲತಃ ಆಧಾರಗಳ ಮೂಲಕ ರಚಿತವಾದದ್ದು. ಇದನ್ನು ರಾಂಕೆ ಪದ್ಧತಿಯೆನ್ನುತ್ತಾರೆ. ಆದರೆ ಇತ್ತೀಚೆಗೆ ಇತಿಹಾಸ ರಚಿಸಲು ಸಾಂಪ್ರದಾಯಿಕ ಆಧಾರಗಳನ್ನಲ್ಲದೆ ಇತರ ಆಕರಗಳಾದ ಮೌಖಿಕ ಪರಂಪರೆ ಮತ್ತು ಜಾನಪದವನ್ನು ಬಹಳ ಪರಿಣಾಮಕಾರಿಯಾಗಿ ಬಳಸಿಕೊಳ್ಳಲಾಗುತ್ತಿದೆ. ಇದರಿಂದಾಗಿ, ಇದುವರೆಗೂ ಒಪ್ಪಿಕೊಳ್ಳಲಾಗಿದ್ದ ಹಾಗೂ ಪ್ರಚಲಿತದಲ್ಲಿದ್ದ ಐತಿಹಾಸಿಕ ವಿಷಯಗಳು ಗಣನೀಯ ಪ್ರಮಾಣದಲ್ಲಿ ಚರ್ಚೆಗೊಳಪಟ್ಟಿರುವುದನ್ನು ಇಂದು ನಾವು ನೋಡಬಹುದಾಗಿದೆ.

ಈ ಹಿನ್ನೆಲೆಯಲ್ಲಿ ನಾವು ಪ್ರಾಂತೀಯ ಇತಿಹಾಸದ ಬೆಳವಣಿಗೆಯನ್ನು ಗಮನಿಸಿದಾಗ ಇದೇ ಸ್ವರೂಪವನ್ನು ಕಾಣಬಹುದು. ಅಂತಹ ಸ್ಥಳೀಯ ಇತಿಹಾಸದಲ್ಲಿ ತುಳುನಾಡು ಸಹ ಒಂದು ಪ್ರಮುಖ ನಿದರ್ಶನವಾಗಿದೆ. ತುಳುನಾಡನ್ನು ಪರಶುರಾಮ ಕ್ಷೇತ್ರವೆಂದು ಪೌರಾಣಿಕವಾಗಿಯೂ, ಅಳ್ವಖೇಡ ಎಂದು ಐತಿಹಾಸಿಕವಾಗಿ ಕರೆಯಲಾಗಿದೆ. ತುಳುನಾಡಿನ ಇತಿಹಾಸವನ್ನು ರಚಿಸುವಲ್ಲಿ ಇತಿಹಾಸಕಾರರು ಹೆಚ್ಚಾಗಿ ಶಾಸನಗಳನ್ನು ಬಳಸಿಕೊಂಡಿದ್ದಾರೆ. ಶಾಸನಗಳು ಇತಿಹಾಸದ ಸ್ವರೂಪವನ್ನು ಬದಲಾಯಿಸುವಲ್ಲಿ ಪ್ರಮುಖವಾದ ಪಾತ್ರ ವಹಿಸುತ್ತವೆ. ಅಂತಹ ಶಾಸನಗಳಲ್ಲಿ ಮುಳೂರಿನ ಶಾಸನಗಳು ತುಳುನಾಡಿನ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲುತ್ತವೆ.

ಮುಳೂರು ಗ್ರಾಮವು ಬಂಟ್ವಾಳ ತಾಲೂಕಿನ ಮುದಿಪು ಬಳಿಯಿದೆ. ಇದು ಬಾಳೆಪುಣಿಯ ಒಂದು ಭಾಗವಾಗಿದ್ದು, ಮೂರು ಶಿಲಾಶಾಸನಗಳನ್ನು ಹೊಂದಿದೆ. ಈ ಶಾಸನಗಳು ಇಲ್ಲಿಯ ಪರಮೇಶ್ವರ ದೇವಸ್ಥಾನದ ಆವರಣದಲ್ಲಿವೆ. ಈ ಶಾಸನಗಳನ್ನು ೧೯೫೧-೫೨ರ ಎ. ಆರ್. ಐ. ಇ.ಯಲ್ಲಿ ಸ್ಪಷ್ಟ ವರದಿ ಮಾಡಲಾಗಿದೆ.[೩] ಶಾಸನದ ಪಾಠ ನೀಡಿಲ್ಲ. ಆದ್ದರಿಂದ ಈ ಲೇಖನವನ್ನು ಎ.ಆರ್.ಐ. ಇ ಯಲ್ಲಿ ನೀಡಿರುವ ವರದಿ, ಕ್ಷೇತ್ರ ಪರಿಶೀಲನೆ ಮತ್ತು ಸ್ಥಳೀಯರಿಂದ ಸಂಗ್ರಹಿಸಿದ ವಿಷಯಗಳನ್ನು ಆಧರಿಸಿ ಬರೆಯಲಾಗಿದೆ.

ಮೊದಲ ಶಾಸನವು[೪] ಕ್ರಿ. ಶ. ೧೦ನೇ ಶತಮಾನದ್ದಾಗಿದ್ದು, ಕನ್ನಯ್ಯ ಮತ್ತು ವಿಕ್ರಮಾದಿತ್ಯ ಎಂಬ ಸಹೋದರರು ಕಿಳ್ಳ ವಂಶಕ್ಕೆ ಸೇರಿದ್ದು, ಅವರಿಗೆ ಮೂಲಪುರ ಪರಮೇಶ್ವರ ಎಂಬ ಬಿರುದಿದ್ದುದನ್ನು ತಿಳಿಸುತ್ತದೆ. ಇದರ ಪ್ರಕಾರ ಇಂದಿನ ಮುಳೂರು ಅಂದು ಮೂಲಪುರ ಎಂದು ಕರೆಯಲಾಗಿದ್ದು, ಅದರ ಅಧಿಪತಿಯು ವಿಕ್ರಮಾದಿತ್ಯನೆಂದು ತಿಳಿದುಬರುತ್ತದೆ. ಎರಡನೇ ಶಾಸನವು ವಿಕ್ರಮಾದಿತ್ಯನು ಸತ್ತ ವಿಷಯ ಹಾಗೂ ಅಲ್ಲಿ ಕೆರೆ ಕಟ್ಟಿದುದನ್ನು ತಿಳಿಸುತ್ತದೆ. ಮೂರನೆ ಶಾಸನವು[೬] ಕ್ರಿ.ಶ. ೧೬ನೇ ಶತಮಾನದ್ದಾಗಿದ್ದು, ಮಂಗಳೂರು ರಾಜ್ಯ ಮತ್ತು ಅದರ ಅಧಿಕಾರಿ ಶ್ರೀಧರ ದೇವನೆಂದು ತಿಳಿಸುತ್ತದೆ.

ಈ ಮೂರು ಶಾಸನಗಳಿಂದ, ಇಂದಿನ ಮುಳೂರು ಕ್ರಿ. ಶ. ೧೦ನೇ ಶತಮಾನದಿಂದ ೧೬ನೇ ಶತಮಾನದವರೆಗೂ ಒಂದು ಆಡಳಿತ ಕೇಂದ್ರವಾಗಿತ್ತೆಂದು ಸ್ಪಷ್ಟವಾಗುತ್ತದೆ. ಸ್ಥಳೀಯರ ಪ್ರಕಾರ ಇಲ್ಲಿಯ ಪರಮೇಶ್ವರ ದೇವಸ್ಥಾನದ ಪಶ್ಚಿಮ ಭಾಗದಲ್ಲಿ ಅರಮನೆ ಮತ್ತು ಪೂರ್ವ ಭಾಗದಲ್ಲಿ ೨ ಕೆರೆಗಳಿದ್ದುದು ತಿಳಿದು ಬರುತ್ತದೆ. ಸ್ಥಳ ವೀಕ್ಷಣೆ ಮಾಡಿದಾಗ ಅರಮನೆ ಇದ್ದ ಆವರಣದಲ್ಲಿ ಈಗಲೂ ಕಲ್ಲಿನಿಂದ ಮಾಡಿದ ಒಳಚರಂಡಿ ಮತ್ತು ಮಣ್ಣಿನ ಗುಡ್ಡೆ ಇರುವುದು ಕಂಡು ಬಂದಿದೆ. ಸ್ಥಳೀಯರ ಪ್ರಕಾರ ಈ ಮಣ್ಣಿನ ಗುಡ್ಡೆಯಲ್ಲಿ ನಿಧಿಯಿದ್ದು, ಯಾರಾದರೂ ಮುಟ್ಟಿದರೆ ಅಥವಾ ಹಾಳು ಮಾಡಲು ಯತ್ನಿಸಿದರೆ ಸರ್ಪ ಕಾಣಿಸಿಕೊಳ್ಳುತ್ತದೆಯೆಂದು ಹೇಳುತ್ತಾರೆ. ದೇವಸ್ಥಾನದ ಪೂರ್ವ ಭಾಗದಲ್ಲಿರುವ ೨ ಕೆರೆಗಳಲ್ಲಿ ಒಂದನ್ನು ನೆಲಸಮ ಮಾಡಿ ಅಲ್ಲಿ ಈಗ ತೋಟ ಮಾಡಲಾಗಿದೆ. ಇನ್ನೊಂದು ಅಲ್ಪಸ್ವಲ್ಪ ಕೆರೆಯ ಲಕ್ಷಣಗಳನ್ನು

* ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ಮಂಗಳೂರು - ೫೭೪ ೧೯೯

ಹೊಂದಿದೆ. ಈ ಕೆರೆಯ ಪಕ್ಕದಲ್ಲಿಯೇ ಇನ್ನೊಂದು ಮಣ್ಣಿನ ಗುಡ್ಡೆಯಿದ್ದು, ಸ್ಥಳೀಯರ ಪ್ರಕಾರ ರಾಜನ ಅರಮನೆಯನ್ನು ಶತ್ರುಗಳು ಮುತ್ತಿಗೆ ಹಾಕಿದಾಗ ಅಲ್ಲಿಯ ನಿಧಿಯನ್ನು ತಂದು ಕೊಪ್ಪರಿಗೆಯಲ್ಲಿ ಹಾಕಲಾಗಿದೆಯಂತೆ. ಇಲ್ಲಿಯೂ ಸಹ ಆ ನಿಧಿಗೆ ಸರ್ಪ ಕಾವಲಿದೆಯೆಂದು ಹೇಳುತ್ತಾರೆ.

ಅದೇನೇ ಇರಲಿ, ಈ ಪ್ರದೇಶವು ಒಂದು ಆಡಳಿತ ವಂಶದ ಅಧೀನಕ್ಕೊಳಪಟ್ಟಿತ್ತೆನ್ನುವುದರಲ್ಲಿ ಸಂದೇಹವಿಲ್ಲ. ಏಕೆಂದರೆ, ಈ ಪ್ರದೇಶವು ಬಹಳ ಫಲವತ್ತಾಗಿದ್ದು, ನೀರಿನ ಸೌಕರ್ಯ ವಿದ್ದುದರಿಂದ, ಈ ಪ್ರದೇಶ ಆಡಳಿತ ಕೇಂದ್ರವಾಗಿ ಬೆಳೆದಿರ ಬಹುದು. ಇದು ಉತ್ತರದಲ್ಲಿ ನೇತ್ರಾವತಿ ನದಿ ಮತ್ತು ದಕ್ಷಿಣದಲ್ಲಿ ವಿಟ್ಲ ಸೀಮೆಯಿಂದ ಕೂಡಿದ್ದು ಬಹಳ ಆಯಕಟ್ಟಿನ ಜಾಗದಲ್ಲಿದೆ. ಈ ಪಟ್ಟಣವು ಇಂದಿನ ಮಂಗಳೂರಿಗೆ (ಕುಡ್ಲ) ವ್ಯಾಪಾರ ಸಂಪರ್ಕಹೊಂದಿದ್ದು ಅದು ನೇತ್ರಾವತಿ ನದಿ - ಅಲ್ಲಿಂದ ಒಡ್ಡಕ್ಕನ ಕಟ್ಟೆ - ಮುಳೂರು - ಮತ್ತು ಅಲ್ಲಿಂದ ಪಾತೂರಿಗೆ ಹೋಗುತ್ತಿತ್ತೆಂದು ಸ್ಥಳೀಯರು ಹೇಳುತ್ತಾರೆ.

ಆದರೆ ತುಳುನಾಡಿನ ಐತಿಹಾಸಿಕ ಕೃತಿಗಳಲ್ಲಿ ಈ ವಂಶ ಅಥವಾ ಈ ಪ್ರದೇಶದ ಬಗ್ಗೆಯಾಗಲಿ ಎಲ್ಲಿಯೂ ಉಲ್ಲೇಖ ವಾಗಿಲ್ಲ. ತುಳುನಾಡಿನ ಬಗ್ಗೆ ಪ್ರಪ್ರಥಮವಾಗಿ ಐತಿಹಾಸಿಕ ಬೆಳಕು ಚೆಲ್ಲಿದವರು ಶೀನಪ್ಪ ಹೆಗ್ಗಡೆ[೬] ಮತ್ತು ಗಣಪತಿ ಐಗಳ್[೭] ಇವರ ಪುಸ್ತಕದಲ್ಲಿ ಕಿಳ್ಳ ವಂಶಸ್ಥರ ಬಗ್ಗೆ ಉಲ್ಲೇಖವಿಲ್ಲ. ನಂತರದ ಪ್ರಮುಖ ಕೃತಿಯೆಂದರೆ ಬಿ. ಎ. ಸಾಲೆತೂರರವರದು.[೮] ಇದರಲ್ಲಿ ತುಳುನಾಡಿನ ಇತಿಹಾಸವನ್ನು ಬೃಹತ್ ಶಿಲಾಯುಗದಿಂದ ವಿಜಯನಗರ ಸ್ಥಾಪನೆಯಾಗುವವರೆಗೆ ಕಾಣಬಹುದು. ಆದರೆ ಈ ಪಟ್ಟಿಯಲ್ಲಿ ಕಿಳ್ಳ ವಂಶಸ್ಥರ ಬಗ್ಗೆ ಪ್ರಸ್ತಾಪವಾಗಿಲ್ಲ. ಇವರು ಕಿಗ್ಗ ಶಾಸನದ ಆಧಾರದ ಮೇಲೆ ಕಿಳ್ಳ ಎಂಬ ಶಬ್ದವನ್ನು ಒಂದು ಪ್ರದೇಶವಾಗಿ ಗುರುತಿಸಿದ್ದಾರೆ. ಆದರೆ ಕಿಗ್ಗ ಶಾಸನವು[೯] ಆಳುಪ ದೊರೆ ಚಿತ್ರವಾಹನನು ಪೊಂಬುಚ್ಚವನ್ನು ಆಳುತ್ತಿರುವಾಗ, ನಾಗಣ್ಣ ಎಂಬುವವನು ಕಿಳ್ಳೂ ಎಂಬ ಪ್ರದೇಶದ ಅಧಿಕಾರಿಯಾಗಿದ್ದನೆಂದು ತಿಳಿಸುತ್ತದೆ. ಆದರೆ ಕಿಳ್ಳ ಎಂದಲ್ಲ. ಸಾಲೆತೂರ್ ಅವರ ಅಭಿಪ್ರಾಯವನ್ನೇ ನಂತರದ ಇತಿಹಾಸಕಾರರಾದ ಡಾ. ಕೆ. ವಿ. ರಮೇಶ್[೧೦] ಮತ್ತು ಡಾ. ಗುರುರಾಜ್ ಭಟ್ಟರವರು[೧೧] ತಳೆದಿದ್ದಾರೆ.

ಕಿಳ್ಳ ವಂಶಸ್ಥರು ಕನ್ನಯ್ಯ ಮತ್ತು ವಿಕ್ರಮಾದಿತ್ಯ ಎಂಬ ಹೆಸರನ್ನು ಹೊಂದಿರುವುದು ತುಂಬಾ ಆಸಕ್ತಿಯುತವಾಗಿದೆ. ಏಕೆಂದರೆ, ರಾಷ್ಟ್ರಕೂಟರ ಪ್ರಸಿದ್ಧ ದೊರೆಯಾದ ಮೂರನೇ ಕೃಷ್ಣನಿಗೆ ಕನ್ನರ, ಕನ್ನಯ ಎಂಬ ಹೆಸರಿನಿಂದ ಗುರುತಿಸಲಾಗಿದೆ. ಹಾಗೂ ವಿಕ್ರಮಾದಿತ್ಯ ಎಂಬ ಹೆಸರು ಚಾಲುಕ್ಯರಲ್ಲಿ (ವಾತಾಪಿ ಹಾಗೂ ಕಲ್ಯಾಣಿ) ಬಹಳ ಪ್ರಸಿದ್ಧವಾದುದು. ಇಂತಹ ಹೆಸರುಗಳನ್ನು ತುಳುನಾಡಿನಲ್ಲಿ ಕಾಣುವುದು ಬಹಳ ಅಪರೂಪ. (ಬಹುಶಃ ಇಲ್ಲವೇನೋ). ಇದರಿಂದ ಪ್ರಮುಖವಾಗಿ ತಿಳಿದು ಬರುವುದೇನೆಂದರೆ, ಈ ಕಿಳ್ಳ ಸಹೋದರರು ಆಳೂಪರ ಅಧೀನರಾಗಿರದೆ, ಕರ್ನಾಟಕದ ಪ್ರಸಿದ್ಧ ಅರಸು ಮನೆತನಗಳಾದ ವಾತಾಪಿ ಚಾಳುಕ್ಯರು ಮತ್ತು ರಾಷ್ಟ್ರಕೂಟರ ಅಧಿಪತ್ಯವನ್ನು ಒಪ್ಪಿಕೊಂಡಿದ್ದು, ಅದರ ಸೂಚಕವಾಗಿ ಅವರ ಹೆಸರುಗಳನ್ನು ತಾವಿಟ್ಟುಕೊಂಡು ಆಳೂಪರಿಗೆ ಸಮನಾಂತರವಾಗಿ ಕಾರ್ಯ ನಿರ್ವಹಿಸಿದಂತೆ ಕಂಡು ಬರುತ್ತದೆ. ಇಂತಹ ಪ್ರವೃತ್ತಿ ಅಂದಿನ ರಾಜಕಾರಣದಲ್ಲಿ ಸರ್ವೇಸಾಮಾನ್ಯ. ಇದಕ್ಕೆ ನಿದರ್ಶನಗಳು ಹಲವಾರು ಸಿಗುತ್ತವೆ.[೧೨]

ಈ ಶಾಸನದ ವೈಶಿಷ್ಟ್ಯವೇನೆಂದರೆ, ಇದನ್ನು ಜೈನ ಶಾಸನವೆಂದಾಗಲಿ ಅಥವಾ ವೀರಗಲ್ಲು ಎಂದಾಗಲೀ ಹೇಳುವುದು ಕಷ್ಟವಾಗಿದೆ. ಏಕೆಂದರೆ ಇದರಲ್ಲಿ ವೀರಗಲ್ಲಿನ ಲಕ್ಷಣಗಳಾಗಲೀ ಅಥವಾ ಜೈನ ಶಾಸನದ ಕುರುಹಾಗಲಿ ಇಲ್ಲ. ಆದರೂ ಶಾಸನದ ಮೇಲಿರುವ ಶಿಲ್ಪವು ಒಬ್ಬ ವ್ಯಕ್ತಿಯು ಧ್ಯಾನಾರೂಢ ಸ್ಥಿತಿಯಲ್ಲಿ ಇರುವುದರಿಂದಲೂ ಹಾಗೂ ಎರಡನೇ ಶಾಸನವು[೧೩] ಮೂಲಪುರ ಪರಮೇಶ್ವರನಾದ ವಿಕ್ರಮಾದಿತ್ಯನು ಸತ್ತ ವಿಷಯವನ್ನು ಹೇಳುವುದರಿಂದ ಬಹುಶಃ ಇದು ಅವನ ಸ್ಮರಣಾರ್ಥಕವಾಗಿ ತಯಾರಿಸಿದ ವೀರಗಲ್ಲಾಗಿಬಹುದು.

ಮೂರನೇ ಶಾಸನವು[೧೪] ಕ್ರಿ. ಶ. ೧೬ನೇ ಶತಮಾನ ದ್ದಾಗಿದ್ದು, ಮಂಗಳೂರು ರಾಜ್ಯ ಮತ್ತು ಅದರ ಅಧಿಕಾರಿ (ರಾಜ್ಯಪಾಲ) ಶ್ರೀಧರ ದೇವನನ್ನು ಉಲ್ಲೇಖಿಸುತ್ತವೆ. ಅಳ್ವಖೇಡವು ಅದರ ಪ್ರಾರಂಭದಿಂದಲೂ ಅಖಂಡವಾಗಿದ್ದು. ಒಂದನೇ ವೀರ ಕುಲಶೇಖರನ ಕಾಲದಲ್ಲಿ (ಕ್ರಿ. ಶ. ೧೧೭೦-೧೨೨೦) ಎರಡು ಪ್ರಾಂತ್ಯಗಳಾಗಿ ವಿಭಜನೆ ಹೊಂದಿ ಮಂಗಳೂರು ರಾಜ್ಯವು ದಕ್ಷಿಣದಲ್ಲಿ ಮತ್ತು ಬಾರಕೂರು ರಾಜ್ಯವು ಉತ್ತರದಲ್ಲಿ ಅಸ್ತಿತ್ವಕ್ಕೆ ಬಂದವು.[೧೫] ಅಂದಿನಿಂದ ಇವರೆಡೂ ಪ್ರತ್ಯೇಕವಾಗಿ ಕಾರ್ಯ ನಿರ್ವಹಿಸುತ್ತಿದ್ದುವು. ಆದರೆ ಕ್ರಿ.ಶ. ೧೪ನೇ ಶತಮಾನ ದಲ್ಲಿ ಹೊಯ್ಸಳರು ರಾಜಕೀಯವಾಗಿ ಕ್ಷೀಣಿಸಿದುದರಿಂದ, ಅವರ ಸ್ಥಾನವನ್ನು ವಿಜಯನಗರದ ಅರಸರು ವಹಿಸಿಕೊಂಡಾಗ, ಸ್ವಾಭಾವಿಕವಾಗಿ ಇಲ್ಲಿ ಅವರ ಅಧಿಕಾರ ಅಸ್ತಿತ್ವಕ್ಕೆ ಬಂದಿತು. ಅಂದಿನಿಂದ (೧೪ನೇ ಶತಮಾನದಿಂದ) ವಿಜಯಗರದ ಪತನದ ವರೆಗೆ (೧೫೬೫) ಸಂಪೂರ್ಣ ಹತೋಟಿ ಹೊಂದಿತ್ತು. ಇಲ್ಲಿಯ ಆಡಳಿತದ ಅನುಕೂಲಕ್ಕೋಸ್ಕರ ಬಾರಕೂರು ಮತ್ತು ಮಂಗಳೂರು ರಾಜ್ಯಗಳಿಗೆ ಪ್ರತ್ಯೇಕ ರಾಜ್ಯಪಾಲರನ್ನು ನೇಮಿಸಿದ್ದರು. ಡಾ. ಕೆ. ವಿ. ರಮೇಶ್‌ರವರು ತಮ್ಮ ಕೃತಿಯಲ್ಲಿ ಬಾರಕೂರು ಮತ್ತು ಮಂಗಳೂರು ರಾಜ್ಯವನ್ನಾಳಿದ ರಾಜ್ಯಪಾಲರ ಪಟ್ಟಿ ಯನ್ನು ವ್ಯವಸ್ಥಿತವಾಗಿ ಮಾಡಿದ್ದಾರೆ.[೧೬] ಗುರುರಾಜ ಭಟ್ಟರ ಕೃತಿಯಲ್ಲೂ ಇದೇ ಮಾದರಿಯನ್ನು ಕಾಣಬಹುದು.[೧೭] ರಮೇಶ್‌ರವರ ಈ ಪಟ್ಟಿಯ ಪ್ರಕಾರ ಮಂಗಳೂರಿನ ಪ್ರಥಮ ರಾಜ್ಯಪಾಲ ಶಂಕರದೇವ ಒಡೆಯ (ಕ್ರಿ.ಶ. ೧೩೪೫) ಹಾಗೂ ಕೊನೆಯ ರಾಜ್ಯಪಾಲ ರತ್ನಪ್ಪ ಒಡೆಯನಾಗಿದ್ದ (ಕ್ರಿ. ಶ. ೧೫೧೫)[೧೮]. ಆದರೆ ಗುರುರಾಜಭಟ್ಟರ ಪಟ್ಟಿಯ ಪ್ರಕಾರ ಮಂಗಳೂರಿನ ಪ್ರಥಮ ರಾಜ್ಯಪಾಲ ಶಂಕರದೇವ ಒಡೆಯ ನಾಗಿದ್ದು ಕೊನೆಯ ರಾಜ್ಯಪಾಲ ಸದಾಶಿವರಾಯ ನಾಯಕ

ನಾಗಿದ್ದಾನೆ[೧೯] (ಕ್ರಿ.ಶ. ೧೫೫೭). ಈ ರೀತಿ ಗುರುರಾಜ ಭಟ್ಟರು ಮಂಗಳೂರನ್ನು ಆಳಿದ ರಾಜ್ಯಪಾಲರ ಆಡಳಿತವನ್ನು ಕ್ರಿ. ಶ. ೧೫೧೫ರಿಂದ ಕ್ರಿ. ಶ. ೧೫೫೭ರವರೆಗೆ (ಸು. ೪೨ ವರ್ಷ) ವಿಸ್ತರಿಸಿದ್ದಾರೆ. ಆದ್ದರಿಂದ ಮುಳೂರು ಶಾಸನದ ಶ್ರೀಧರ ದೇವನು[೨೦] ೧೬ನೇ ಶತಮಾನಕ್ಕೆ ಸೇರಿರುವುದರಿಂದ ಇವನು ಬಹುಶಃ ಕ್ರಿ.ಶ. ೧೫೧೫ರ ನಂತರ ಅಥವಾ ೧೫೫೭ರ ನಂತರ ಮಂಗಳೂರಿನ ರಾಜ್ಯಪಾಲನಾಗಿ ಕಾರ್ಯನಿರ್ವಹಿಸಿರಬಹುದು. ೧೫೬೫ರಲ್ಲಿ ನಡೆದ ರಕ್ಕಸತಂಗಡಿ ಯುದ್ಧದೊಂದಿಗೆ ಕೊನೆಗೊಂಡ ವಿಜಯನಗರ ಸಾಮ್ರಾಜ್ಯವು ಸರಿ ಸುಮಾರು ಇದೇ ಸಮಯದಲ್ಲಿ ತನ್ನ ಹಿಡಿತವನ್ನು ಅಳ್ವಖೇಡದಲ್ಲಿ ಕಳೆದುಕೊಂಡು, ನಂತರ ಇಕ್ಕೇರಿ ನಾಯಕರ ಆಡಳಿತಕ್ಕೆ ಅನುವು ಮಾಡಿಕೊಟ್ಟಿತು.

ಸದ್ಯ ತುಳುನಾಡಿನ ಇತಿಹಾಸದ ಬಗ್ಗೆ[೨೧] ಕೆಲವು ಹೊಸ ಮಾಹಿತಿಗಳನ್ನು ಒದಗಿಸುವ ಪ್ರಯತ್ನ ಮಾಡಲಾಗಿದೆ. ತುಳುನಾಡಿನ ಸಾಮಂತ ದೊರೆಗಳ ಪಟ್ಟಿಯಲ್ಲಿ ಕಿಳ್ಳ ವಂಶವು ಒಂದಾಗಲಿದೆ. ಈ ಸಾಮಂತ ದೊರೆಗಳು ಸ್ವತಂತ್ರವಾಗಿರದಿದ್ದರೂ, ತಮ್ಮ ನಾಡಿನ ಅಥವಾ ಪ್ರಾಂತ್ಯದ ಸಂಸ್ಕೃತಿ, ಪರಂಪರೆ ಮತ್ತು ಭಾಷೆಗಳನ್ನು ಸಂರಕ್ಷಿಸುವಲ್ಲಿ ಮತ್ತು ಅದರ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಇದರೊಟ್ಟಿಗೆ ಈ ಸಾಮಂತ ದೊರೆಗಳು ಸಾರ್ವಭೌಮರ ಅಥವಾ ಸಾರ್ವಭೌಮತ್ವದ ಅಳಿವು ಮತ್ತು ಉಳಿವುಗಳಲ್ಲಿ ಗಣನೀಯ ಪಾತ್ರ ವಹಿಸಿದ್ದಾರೆ. ಆದ್ದರಿಂದ ರಾಷ್ಟ್ರೀಯ ಬೆಳವಣಿಗೆಯನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಳ್ಳಬೇಕಾದರೆ, ಪ್ರಾಂತೀಯ ಇತಿಹಾಸದ ಅಧ್ಯಯನ ಅತ್ಯಗತ್ಯ.



(ಈ ಶಾಸನಗಳನ್ನು ನನ್ನ ಗಮನಕ್ಕೆ ತಂದು, ಕ್ಷೇತ್ರಕಾರ್ಯದಲ್ಲಿ ತುಂಬಾ ಸಹಕಾರ ನೀಡಿದ ಮುಳೂರಿನವರೇ ಆದ ನನ್ನ ಮಿತ್ರ ನಾರಾಯಣ ಭಟ್‌ರವರಿಗೆ ನಾನು ತುಂಬಾ ಆಭಾರಿಯಾಗಿದ್ದೇನೆ.)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಜೇಮ್ಸ್ ಮಿಲ್., (೧೯೭೮), ದಿ ಹಿಸ್ಟರಿ ಆಫ್ ಬ್ರಿಟೀಷ್ ಇಂಡಿಯಾ**, ಸಂಪುಟ ೧ (ಮೊದಲ ಮುದ್ರಣ ೧೮೧೭-ಎರಡನೆಯ ಮುದ್ರಣ ೧೯೭೮), ನವದೆಹಲಿ.

೨. ವಿನ್ಸೆಂಟ್ ಸ್ಮಿತ್., (೧೯೧೧), **ದಿ ಆಕ್ಸ್‌ಫರ್ಡ್ ಹಿಸ್ಟರಿ ಆಫ್ ಇಂಡಿಯ**, (ಆಕ್ಸ್‌ಫರ್ಡ್-೧೯೧೯).

೩. **ಆರ್ಕಿಯಾಲಾಜಿಕಲ್ ರಿಪೋರ್ಟ್ಸ್ ಆಫ್ ಇಂಡಿಯನ್ ಎಪಿಗ್ರಾಫಿ**, ೧೯೫೧-೫೨ (ಇನ್ನು ಮುಂದೆ ಎ ಆರ್ ಇ ಐ) ಶಾಸನ ಸಂಖ್ಯೆಗಳು ೧೪೯, ೧೫೦ ಮತ್ತು ೧೫೧ ಇದರ ಪಡಿಯಚ್ಚನ್ನು ಮೈಸೂರಿನ ಶಾಸನಶಾಸ್ತ್ರ ಕಚೇರಿಯಲ್ಲಿ ವಿಚಾರಿಸಿದಾಗ ಕಾಣೆಯಾಗಿದೆಯೆಂದು ತಿಳಿದು ಬಂತು. ನಾನೇ ಇದರ ಪಡಿಯಚ್ಚನ್ನು ತೆಗೆಯಲು ಪ್ರಯತ್ನಿಸಿದಾಗ, ಕಲ್ಲು ಸವೆದಿರುವ ಕಾರಣ ಸಫಲನಾಗಲಿಲ್ಲ. ಶಾಸನ ಸಂಖ್ಯೆ ೧೪೯ ಮತ್ತು ೧೫೦ ಶಾಸನಗಳು ಒಂದೇ ಕಲ್ಲಿನಲ್ಲಿ ಮುಂಭಾಗ, ಹಿಂಭಾಗ ಮತ್ತು ಅದರ ಎಡಭಾಗದಲ್ಲಿ ಕೆತ್ತಲಾಗಿದೆ. ಶಾಸನದ ಮುಂಭಾಗದ ಮೇಲೆ ಒಬ್ಬ ವ್ಯಕ್ತಿಯು ಮುದ್ರಾಸನದಲ್ಲಿ ಕುಳಿತಿರುವಂತೆ ಕೆತ್ತಲಾಗಿದೆ. ಶಾಸನ ಸಂಖ್ಯೆ ೧೫೧ನ್ನು ಬೇರೆ ಕಲ್ಲಿನಲ್ಲಿ ಕೆತ್ತಲಾಗಿದೆ.

೪. ಅದೇ ಸಂಖ್ಯೆ ೧೪೯.

೫. ಅದೇ ಸಂಖ್ಯೆ ೧೫೦.

೬. ಅದೇ ಸಂಖ್ಯೆ ೧೫೧.

೬ಅ. ಎಸ್. ಎ. ಶೀನಪ್ಪ ಹೆಗ್ಡೆ., (೧೯೮೧), **ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳಪಾಂಡ್ಯ ರಾಯನ ಅಳಿಯಕಟ್ಟು**, ದ್ವಿತೀಯ ಮುದ್ರಣ ಉಡುಪಿ, ಮೊದಲನೆ ಮುದ್ರಣ, ೧೯೧೯.

೭. ಎಂ. ಗಣಪತಿ ರಾವ್ ಐಗಳ್., (೧೯೨೩), **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ**, ಮಂಗಳೂರು.

೮. ಬಿ.ಎ. ಸಾಲೆತ್ತೂರ್., (೧೯೩೬), **ಏನ್ಸಿಯಂಟ್ ಕರ್ನಾಟಕ**, ಸಂಪುಟ, ೧, **ಹಿಸ್ಟರಿ ಆಫ್ ತುಳುವ**, ಪೂನಾ, ಪುಟ. ೭೨.

೯. **ಎಪಿಗ್ರಾಫಿಯಾ ಕರ್ನಾಟಿಕ**, ಸಂಪುಟ - ೭, ಕೊಪ್ಪ ಸಂಖ್ಯೆ ೩೭, ಸ್ವಸ್ತಿ ಶ್ರೀಮತ್ ಚಿತ್ರವಾಹನ ಪಿನ್ನುವ್ವಾಳೆ, ಕಿಳ್ಳಂ ನಾಗಣ್ಣನಧಿಕಾರಿಗೀಗಾಗ....

೧೦. ಡಾ. ಕೆ. ವಿ. ರಮೇಶ್., (೧೯೭೦), **ಎ ಹಿಸ್ಟರಿ ಆಫ್ ಸೌಥ್ ಕೆನರಾ**, ಧಾರವಾಡ, ಪುಟಗಳು ೫೨ ಮತ್ತು ೨೪೪.

೧೧. ಡಾ. ಪಿ. ಗುರುರಾಜ ಭಟ್., (೧೯೭೫), **ಸ್ಟಡೀಸ್ ಇನ್ ತುಳುವ ಹಿಸ್ಟರಿ ಎಂಡ್ ಕಲ್ಚರ್**, ಮಣಿಪಾಲ, ಪುಟಗಳು, ೬೦-೧೪೧, ಇವರು ತುಳುನಾಡನ್ನು ಆಳಿದ ಹಲವು ಸಾಮಂತ ವಂಶಗಳನ್ನು ಗುರುತಿಸಿದ್ದಾರೆ. ಆದರೆ ಮುಳೂರಿನ ಕಿಳ್ಳ ವಂಶದ ಬಗ್ಗೆ ಎಲ್ಲಿಯೂ ಉಲ್ಲೇಖಿಸಿಲ್ಲ.

೧೨. ಹೊಯ್ಸಳರು ಕಲ್ಯಾಣಿ ಚಾಲುಕ್ಯರ ಅಧೀನದಲ್ಲಿದ್ದಾಗ, ಅವರ ಪ್ರಮುಖ ಬಿರುದಾದ ತ್ರಿಭುವನಮಲ್ಲ ಎಂಬುದನ್ನು, ಕೊಂಗಾಳ್ವರು ಮತ್ತು ಚೆಂಗಾಳ್ವರು ಚೋಳ ಎಂಬ ಹೆಸರಿನ ಉಪಾಧಿಯನ್ನು ಇಟ್ಟು ಕೊಂಡಿರುವುದನ್ನು ಶಾಸನಗಳಲ್ಲಿ ಹೆಚ್ಚಾಗಿ ಕಾಣಬಹುದು.

೧೩. ಎ. ಆರ್. ಐ. ಇ. ಸಂಖ್ಯೆ ೧೫೦.

೧೪. ಅದೇ, ಸಂಖ್ಯೆ ೧೫೧.

೧೫. ಗುರುರಾಜ್ ಭಟ್, ಪೂರ್ವೋಕ್ತ, ಪುಟ ೩೭.

೧೬. ಕೆ. ವಿ. ರಮೇಶ್, ಪೂರ್ವೋಕ್ತ, ಪುಟಗಳು. ೧೫೩-೨೧೧.

೧೭. ಗುರುರಾಜ್ ಭಟ್, ಪೂರ್ವೋಕ್ತ, ಪುಟಗಳು, ೪೯ ಮತ್ತು ೫೦.

೧೮. ಕೆ. ವಿ. ರಮೇಶ್, ಪೂರ್ವೋಕ್ತ, ಪುಟಗಳು ೧೫೩ ಮತ್ತು ೨೧೧.

೧೯. ಗುರುರಾಜ್ ಭಟ್, ಪೂರ್ವೋಕ್ತ, ಪುಟಗಳು ೪೯ ಮತ್ತು ೫೦.

೨೦. ಎ.ಆರ್.ಐ.ಇ. ಸಂಖ್ಯೆ ೧೫೧.

೨೧. ಇತ್ತೀಚಿನ ತುಳುನಾಡಿನ ಇತಿಹಾಸದ ಬಗ್ಗೆ ತಿಳಿಯಲು ನೋಡಿ: **ಪೊಲಿ ಕೆನರಾ ೨೦೦**, ಸಂಪಾದಕರು, ಎಂ. ಮುಕುಂದ ಪ್ರಭು (ಮಂಗಳೂರು ೨೦೦೦).

ಮಹೇಶಕುಮಾರ. ಹ. ಪಾಟೀಲ*

# ಬಾಗಡಗೆಯ ಸಿಂಧರು: ಸಾಂಸ್ಕೃತಿಕ ಅವಲೋಕನ

ಕರ್ನಾಟಕವನ್ನಾಳಿದ ಮನೆತನಗಳಲ್ಲಿ ಕಲ್ಯಾಣದ ಚಾಲುಕ್ಯ ಮನೆತನವೂ ಒಂದಾಗಿದೆ. ಆ ಚಾಲುಕ್ಯರು ತಮ್ಮ ವಿಶಾಲವಾದ ಸಾಮ್ರಾಜ್ಯವನ್ನು ಆಡಳಿತಾನುಕೂಲಕ್ಕಾಗಿ ಹಲವಾರು ವಿಭಾಗಗಳಲ್ಲಿ ವಿಂಗಡಿಸಿದ್ದರು. ಅವುಗಳಿಗೆ ತಮ್ಮ ನಿಷ್ಠಾವಂತ ಸಾಮಂತರುಗಳನ್ನು ನೇಮಿಸುತ್ತಿದ್ದರು. ಅಂತಹ ಸಾಮಂತರುಗಳಲ್ಲಿ ಬಾಗಡೆಗೆಯ ಸಿಂಧರೂ ಒಬ್ಬರು. ಆರಂಭದಲ್ಲಿ ಸಾಮಂತರಾಗಿ, ಮಹಾ ಸಾಮಂತರಾಗಿ ಮುಂದೆ ಮಹಾಮಂಡಳೇಶ್ವರರಾಗಿ ಇವರು ಆಳ್ವಿಕೆ ಮಾಡಿದ್ದಾರೆ.

### ಮೂಲ

ಇವರ ಮೂಲ ಪುರುಷ ನಿಡುದೋಳ್ ಸಿಂಧನೆಂದು ತಿಳಿಸುವ ಭೈರನಮಟ್ಟಿ ಶಾಸನದ ವಿವರಣೆ ಹೀಗಿದೆ: "ಧರಣೇಂದ್ರಾಧೀಶ್ವರ ಒಮ್ಮೆ ಭೂಲೋಕವನ್ನು ಸಂಚರಿಸಲು ತನ್ನ ಪತ್ನಿಯೊಡನೆ ಬಂದಾಗ, ಅವಳು ಗರ್ಭವತಿಯಾಗಿ ಅಹಿಚ್ಛತ್ರದಲ್ಲಿ ಅವಳಿಗೆ ಒಂದು ಮಾನವರೂಪಿ ಮಗು ಜನಿಸಿತು. ಅವನೇ ನಿಡುದೋಳ್ ಸಿಂಧನಾದ" ಎಂದಿದೆ.[೧] ರಂಜೋಲದ ಸಿಂಧರ ಶಾಸನ ಲಲಾಟಲೋಚನದ ಮಯೂರವರ್ಮನ ಬಗ್ಗೆ ಹೇಳಿ. "ಲಲಾಟಲೋಚನದ ಉರಿಯನ್ನು ಆರಿಸಲು ಸಿಂಧನು ಚಾಚಿದ ತೋಳಿನಿಂದ ನಿಡುದೋಳ್ ಸಿಂಧನಾದನು" ಎಂದಿದೆ.[೨] ಮುಂದುವರೆದು ಇದೇ ಶಾಸನವು ಕದಂಬ ಮಯೂರವರ್ಮನ ಮಗಳೊಡನೆ ರಕ್ತ ಸಂಬಂಧವನ್ನು ಬೆಳಸಿದ ವಿವರ ಹೀಗೆ ನೀಡಿದೆ: "ಮಯೂರವರ್ಮನು ಇವನ ಪರಾಕ್ರಮವನ್ನು ಕೇಳಿ, ತನ್ನ ಮಗಳಾದ ಲಕ್ಷ್ಮೀಮತಿಯನ್ನು ನೀಡಿ ವಿವಾಹ ಮಾಡಿದನೆಂದೂ, ಅವರಿಬ್ಬರಿಗೆ ನಾಲ್ಕು ಮಕ್ಕಳಾದವೆಂದೂ, ಮುಂದೆ ಅವರು ಶಸ್ತ್ರಶಾಸ್ತ್ರ ವಿದ್ಯಾಪಾರಂಗತರಾಗಿ ದಕ್ಷಿಣಕ್ಕೆ ಬಂದರು. ಅವರಲ್ಲಿ ಪ್ರಭುಸೇವ್ಯನು ಬಾಗಡೆಗೆ ಪ್ರದೇಶದಲ್ಲಿ ನಿಂತು ರಾಜ್ಯಭಾರ ಮಾಡಿದ"ನೆಂದು ತಿಳಿಸಿದೆ.[೩] ಇದಾದ ನಂತರ ೩೧ ಜನ ಅರಸರು ಈ ಮನೆತನದಲ್ಲಿ ಆಳಿದ್ದರೂ ಯಾವುದೇ ದಾಖಲೆಗಳಿಂದ ಅವರ ಹೆಸರುಗಳು ತಿಳಿಯುವುದಿಲ್ಲ.

### ಸಿಂಧರಸ

ಇವನನ್ನು ಮಹಾಕೂಟ[೪] ಶಾಸನ ಹಾಗೂ ಭೈರನಮಟ್ಟಿ' ಶಾಸನ[೫] 'ಸೇವ್ಯಂ ಕಂತು ಸಮಾನಂ' ಎಂದು ಕರೆದಿದೆ. ಆದರೆ ಇವರ ನಂತರ ಇವರ ಮಗನಾಳಿದ ವಿವರ ದೊರೆತಿಲ್ಲ. ಗಮನಿಸಬಹುದಾದ ಅಂಶವೆಂದರೆ; ಇವನ ಮಗಳ ಮಗ ಇವನ ಉತ್ತರಾಧಿಕಾರಿಯಾದುದು.

### ಕಮ್ಮರಸ

ಸಿಂಧನ ತರುವಾಯ ಆಡಳಿತಕ್ಕೆ ಬಂದ ಇವನು ಅವನ ಮೊಮ್ಮಗ. ಇದನ್ನು ಮಹಾಕೂಟ ಶಾಸನ ನಮಗೆ ತಿಳಿಸಿದೆ. ಭೈರನಮಟ್ಟಿ ಶಾಸನವು ಇವನನ್ನು ಕಮ್ಮರ, ಕಮ್ಮಯ್ಯ, ಕಮ್ಮರಸ, ಕಮ್ಮಯ್ಯರಸ ಎಂದು ಕರೆಯುತ್ತಾ ಇವನ ಪತ್ನಿ 'ವಿಧಿತಗುಣಗಣ ಶೀಲಾಭರಣ ಭೂಷಿತ'ಳಾಗಿದ್ದಳೆಂದೂ, ಇವರಿಗೆ ಪುಲಿಕಾಲನೆಂಬ ಮಗ ಜನಿಸಿದನೆಂದು ಹೇಳಿದೆ.[೬]

### ಪುಲಿಕಾಲ

ಇವನ ಕಾಲ ಕ್ರಿ. ಶ. ೯೯೦-೧೦೧೫ರವರೆಗೆ. ಇವನ ಕಾಲದಿಂದ ಇವರ ಆಡಳಿತದ ಸ್ಪಷ್ಟ ಚಿತ್ರಣ ನಮಗೆ ದೊರೆಯುತ್ತದೆ. ಇವನು ಕಲ್ಯಾಣ ಚಾಲುಕ್ಯ ಎರಡನೇ ತೈಲಪನ ಸಾಮಂತನಾಗಿ ಬಾಗಡೆಗೆನಾಡಿನ ರಾಜ್ಯಭಾರವನ್ನು ಮಾಡುತ್ತಿದ್ದನು. ಈತನ ರಾಣಿ ರೇಕಬ್ಬರಸಿಯಲ್ಲಿ ಇವನಿಗೆ ನಾಗಾದಿತ್ಯನೆಂಬ ಮಗನು ಜನಸಿದನು.[೮]

### ನಾಗಾದಿತ್ಯ

ಇವನು ಕ್ರಿ.ಶ. ೧೦೧೫-೧೦೪೦ರ ವರೆಗೆ ಆಡಳಿತ ಮಾಡಿದನು. ಶಾಸನಗಳು ಇವನಿಗೆ ಮಹಾಸಾಮಂತನೆಂದೂ, ನಾಗತಿ, ನಾಗತಿಯರಸ,. ನಾಗಾದಿತ್ಯ ಎಂದು ಅನೇಕ ಹೆಸರಿನಿಂದಲೂ ಕರೆದಿವೆ.[೯] ಇವನು ಎರಡನೆಯ ಜಯಸಿಂಹನ ಸಾಮಂತನಾಗಿದ್ದನು. ಕ್ರಿ.ಶ. ೧೦೩೩-೩೪ರ ಹಳ್ಳೂರು ಶಾಸನವೂ ಕೂಡಾ ಇವನನ್ನು 'ಮಹಾಸಾಮಂತ ನಾಗತಿಯರಸ' ಎಂದು ಉಲ್ಲೇಖಿಸಿದೆ.[೧೦] ಇವನ ರಾಣಿ ಪೊಲೆಯಬ್ಬರಸಿ, ಅವಳಿಗೆ ಪೊಲಸಿಂಧನೆಂಬ ಮಗ ಜನಿಸಿದನು. ಇವನ ಇನ್ನೊಬ್ಬ ರಾಣಿಯಿಂದ ಏಳು ಜನ ಮಕ್ಕಳು ಜನಿಸಿ ಅವರು ಯಲಬುರ್ಗಿ ಸಿಂಧ ಮನೆತನಕ್ಕೆ ಮುಖ್ಯಸ್ಥರಾದರು. ಅವರಿಗೆ ಈ ಪ್ರದೇಶವನ್ನು ನಾಗಾದಿತ್ಯನು ಬಿಟ್ಟುಕೊಟ್ಟನೆಂದು ದಿನಕರ ದೇಸಾಯಿಯವರು ಅಭಿಪ್ರಾಯಪಡುತ್ತಾರೆ.[೧೧] ಇದರಿಂದಾಗಿ ಬಾಗಡೆಗೆ ಸಿಂಧ ಮನೆತನ ಈ ಕಾಲಕ್ಕೆ ಕವಲೊಡೆದಂತಾಯಿತು.

### ಪೊಲಸಿಂಧ

ಈತನು ತನ್ನ ತಂದೆಯ ತರುವಾಯ ಕ್ರಿ. ಶ. ೧೦೪೦ರಲ್ಲಿ

* ನಂ. ೬೬, 'ಅಮರೇಶ್', ೧ ನೇ ಮುಖ್ಯರಸ್ತೆ, ಶ್ರೀನಗರ, ಧಾರವಾಡ - ೫೮೦ ೦೦೩

ಪಟ್ಟಕ್ಕೆ ಬಂದು ಕ್ರಿ. ಶ. ೧೦೬೫ರ ವರೆಗೆ ಆಳ್ವಿಕೆಯನ್ನು ಮಾಡಿದನು. ಈತನೂ ಸಹ ಎರಡನೆಯ ಜಯಸಿಂಹನ ಸಾಮಂತನಾಗಿದ್ದನು. ಈತನು ಖಾಂಡವ ಮಂಡಳೇಶ್ವರನ ಮಗಳಾದ ಬಿಜ್ಜಲದೇವಿಯನ್ನು ಮದುವೆಯಾದನು. ಇವರಿಗೆ ಸೇವ್ಯರಸನೆಂಬ ಮಗ ಜನಿಸಿದನು.[೧೨]

**ಸೇವ್ಯರಸ**

ಶಾಸನಗಳು ಇವನನ್ನು ಮಹಾಮಂಡಳೇಶ್ವರ, ಪಂಚ ಮಹಾಶಬ್ದ ಮುಂತಾಗಿ ಕರೆದಿವೆ. ಇವನು ಬಾಗಡೆಗೆ ಸಿಂಧ ಮನೆತನದ ಕೊನೆಯ ದೊರೆ. ಇವನು ಎರಡನೆಯ ಸೋಮೇಶ್ವರನ ಸಾಮಂತನಾಗಿದ್ದನೆಂದು ತಿಳಿದು ಬರುತ್ತದೆ.[೧೩] ಇವನ ನಂತರ ಈ ವಂಶ ಕಣ್ಮರೆಯಾಗಿ ಯಲಬುರ್ಗಿ ಸಿಂಧರ ಆಡಳಿತಕ್ಕೆ ಇವರ ಪ್ರದೇಶ ಸೇರಿಹೋಗುತ್ತದೆ.

***ಆಡಳಿತ*** : ಭೈರನಮಟ್ಟಿ ಶಾಸನದ ಪ್ರಕಾರ ನಾಗಾದಿತ್ಯ ಮತ್ತು ಸೇವ್ಯರಸರು 'ಸಿಂಧವಿಷಯಾಧಿರಾಜ'ರಾಗಿದ್ದರು ಎಂದು ಹೇಳಿದೆ.[೧೪] ಇವರು ಕಲ್ಯಾಣಿ ಚಾಲುಕ್ಯರ ಸಾಮಂತರಾಗಿ ಇಂದಿನ ಬಾಗಲಕೋಟೆ ಜಿಲ್ಲೆಯ ಮುಖ್ಯ ಕೇಂದ್ರ ಪಟ್ಟಣವಾದ ಬಾಗಲಕೋಟೆಯಲ್ಲಿ ಆಡಳಿತ ನಡೆಸುತ್ತಿದ್ದರು. ಹಿಂದೆ ಬಾಗಡೆಗೆ ದೇಶ್ಯ, ಬಾಗಡೆಗೆನಾಡು ಎಂಬ ಆಡಳಿತ ವಿಭಾಗದ ಮುಖ್ಯ ಪಟ್ಟಣವಿದಾಗಿತ್ತು. ಇವರು ಬಾಗಡೆಗೆ-೭೦ ಮತ್ತು ಕಿಸುಕಾಡು-೭೦ ಎಂಬ ಎರಡು ಉಪವಿಭಾಗಗಳನ್ನು ಆಳುತ್ತಿದ್ದರೆಂದು ತಿಳಿಯುತ್ತದೆ.[೧೫]

***ದಾನ-ದತ್ತಿ*** : ಮಹಾಸಾಮಂತ ನಾಗಾದಿತ್ಯನು ಪರತ್ರಯ ಸಿಂಹರಾಶಿ ಭಟ್ಟನಿಗೆ ಕಿರಿಯ ಸಿರವೂರಿನಲ್ಲಿನ ಒಂದುಸಾವಿರ ಮತ್ತರು ಭೂಮಿಯನ್ನು ಪಟ್ಟಿಯ ಮತ್ತರು ಅಳತೆಗೋಲಿನ ಪ್ರಕಾರ ದಾನವಾಗಿತ್ತನು. ಅದು ಆ ಭೂಮಿಯ ಮೇಲಿನ ೧೨ ಗದ್ಯಾಣ, ಆರುವಣ ತೆರಿಗೆಯನ್ನೊಳಗೊಂಡಿತ್ತು ಎಂದು ತಿಳಿದುಬರುತ್ತದೆ. ಅಲ್ಲದೇ ಅದೇ ಶಾಸನ ಮುಂದುವರೆದು ಅವನು ನೀಡಿದ ಇನ್ನೊಂದು ದಾನದ ಕುರಿತು ಹೀಗೆ ಉಲ್ಲೇಖಿಸಿದೆ. "ತೇಜೋರಾಸಿ ಪಂಡಿತನಿಗೆ ಸಿಂಧೇಶ್ವರ ದೇಗುಲದ ಜೀರ್ಣೋದ್ಧಾರಕ್ಕಾಗಿ ಪುರದಕೇರಿ ಗ್ರಾಮವನ್ನು ದಾನವಾಗಿ ನೀಡಿದನು" ಎಂದು ಹೇಳಿ ಆ ತೇಜೋರಾಸಿ ಪಂಡಿತನು ಸಿಂಧೇಶ್ವರ ದೇಗುಲದ ಆಚಾರ್ಯನಾಗಿದ್ದನೆಂದು ಹೇಳಿದೆ.[೧೬]

ಕ್ರಿ.ಶ. ೧೦೩೩-೩೪ರ ಬಾಗಲಕೋಟೆ ತಾಲೂಕಿನ ಹಳ್ಳೂರಿನ ಬಸವೇಶ್ವರ ದೇಗುಲದ ಶಾಸನದ ಪ್ರಕಾರ, "ಚಾಲುಕ್ಯ ಜಗದೇಕಮಲ್ಲದೇವನ ಅಂದರೆ ಎರಡನೆಯ ಜಯಸಿಂಹನ ಮಹಾಸಾಮಂತನಾದ ನಾಗತಿಯರಸರು ಪುರದಕೇರಿಯ ಬಾಗೆದೆಶೆಯ... ದೇವರ್ಗ್ಗೆ ಬಿಟ್ಟದಾನ" ಎಂದು ವಿವರಿಸಿದೆ.[೧೭] ಇದು ಶಾಸನವಿರುವ ಬಸವೇಶ್ವರ ದೇಗುಲಕ್ಕೆ ಬಿಟ್ಟದಾನವಾಗಿರಬಹುದು.

***ಧರ್ಮ*** : ಬಾಗಡೆಗೆಯ ಸಿಂಧರು ಶೈವ ಮತಾವಲಂಬಿಗಳಾಗಿದ್ದರೆಂದು ಅವರ ಭೈರನಮಟ್ಟಿ ಶಾಸನದಲ್ಲಿ ನಾಗಾದಿತ್ಯನು ಸಿಂಧೇಶ್ವರ ದೇಗುಲಕ್ಕೆ ನೀಡಿದ ದಾನ[೧೮] ಮತ್ತು ಹಳ್ಳೂರಿನ ಬಸವೇಶ್ವರ ದೇಗುಲಕ್ಕೆ ನೀಡಿದ ದಾನ[೧೯]ವನ್ನು ನೋಡಿದಾಗ ನಮಗೆ ತಿಳಿಬರುತ್ತದೆ.

***ದೇಗುಲ ನಿರ್ಮಾಣ*** : ಇವರ ಯಾವುದೇ ಶಾಸನಗಳಲ್ಲಿಯೂ ದೇಗುಲ ನಿರ್ಮಾಣದ ಉಲ್ಲೇಖವಿಲ್ಲವಾದರೂ ಭೈರನಮಟ್ಟಿ ಶಾಸನವು ಸಿಂಧೇಶ್ವರ ದೇಗುಲದ ಆಚಾರ್ಯನಾದ ತೇಜೋರಾಸಿ ಪಂಡಿತನಿಗೆ ಆ ದೇಗುಲ ಜೀರ್ಣೋದ್ಧಾರಕ್ಕಾಗಿ ನೀಡಿದ ದಾನದ ಕುರಿತು ವಿವರಿಸುತ್ತದೆ.[೨೦] ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ, ಅವರ ವಂಶವಾದ ಸಿಂಧ ಮನೆತನದ ಹೆಸರಿನಲ್ಲಿರುವ ಶಾಸನೋಲ್ಲೇಖಿತ ದೇಗುಲವು ಈ ಮನೆತನದ ಸಿಂಧರಾಜಕುಮಾರ ಅಥವಾ ಸಿಂಧಮನೆತನದವರಿಂದಲೋ ನಿರ್ಮಾಣವಾಗಿರಬೇಕು. ಏಕೆಂದರೆ, ಪ್ರಾಚೀನ ಕಾಲದಲ್ಲಿ ದೇವರುಗಳಿಗೆ ತಮ್ಮ ಹೆಸರನ್ನು ಸೇರಿಸಿ ದೇವಾಲಯಗಳನ್ನು ನಿರ್ಮಾಣ ಮಾಡುತ್ತಿದ್ದ ಉದಾಹರಣೆಗಳು ಸಾಕಷ್ಟಿವೆ. ಆದರೆ ಈ ಊಹೆಯನ್ನು ಸಮರ್ಥಿಸಲು ನಮಗೆ ಸಿಂಧರ ಯಾವುದೇ ಬಲವಾದ ಆಧಾರಗಳು ದೊರೆತಿಲ್ಲ.

***ಬಿರುದುಗಳು*** : *ಅರಿನೃಪತಿ ಕರಿಕುಂಭಿ ಕುಂಭಸ್ಥಲ, ಸಮರ ಸಂಘಟ್ಟನ ವೀರ, ವಿಜಯರಾಜ್ಯ ಲಕ್ಷ್ಮೀ ವಕ್ಷಸ್ಥಲ ದೃಷ್ಟಿ, ವಿಷಕುಳ ತಿಳಕ, ನಾಗಧ್ವಜ ಪ್ರತಾಪ, ನನ್ನಿಗ ಆಶ್ರಯ, ರಣರಂಗ ಕೇಸರಿ, ಸಿಂಧನಾರಾಯಣ, ನಲ್ಲರ್ಗನಲ್ಲ ಡಾಮರಮಲ್ಲ, ಮುಂತಾದ ಬಿರುದುಗಳನ್ನು ಪುಲಿಕಾಲನು; ದಕ್ಷಿಣದೋರ್ದ್ದಂಡ, ಉಭಯ ಬಳಗಂಡ, ಅರಿನೃಪತಿ ಸಂಹಾರಕಾರಣ, ವನಿತಾ ಜನ ಕಂದ, ಅಕಳಂಕಸಿಂಧ ಎಂಬ ಬಿರುದುಗಳನ್ನು ನಾಗಾದಿತ್ಯನು; ನಾಗರಾಜ ಚರಿತ, ಫಣಿಕೇತನ, ಅನ್ನರಾಜವೇದಂಡ, ಶ್ರೀರಕ್ಷಮಂಡನ ಮುಂತಾದವುಗಳನ್ನು ಪೊಲಸಿಂಧನು ಮತ್ತು ದಕ್ಷಿಣಭುಜಾದಂಡನು; ಅನೇಕ ಶಸ್ತ್ರಶಾಸ್ತ್ರ ಪಾರಾವಾರ ಪಾರಾಯಣ, ಪರಮಮಾಹೇಶ್ವರ, ರಿಪುಮಂಡಳಿಕ ದೈತ್ಯ, ಭುಜಬಲಭೀಮ, ಸಕಳಕಳಾಕಳಿತಾ, ಸಾಹಿತ್ಯ ವಿದ್ಯಾವಿವೇಕ ವಿರಿಂಚನ, ಪಾತಾಳ ಚಕ್ರವರ್ತಿ, ವಿದ್ಯಾಸಹದೇವ ಮುಂತಾದವುಗಳನ್ನು ಸೇವ್ಯರಸನು ಧರಿಸಿದ್ದನೆಂದು ತಿಳಿದುಬರುತ್ತದೆ.*[೨೧]

ಹೀಗೆ ಅವರು ಧರಿಸಿದ್ದ ಈ ಬಿರುದುಗಳಿಂದ ಸಿಂಧರು ಅತ್ಯಂತ ಪರಾಕ್ರಮಿಗಳು, ವಿದ್ಯಾಪಕ್ಷಪಾತಿಗಳು, ಸಾಹಿತ್ಯ ಪ್ರೇಮಿಗಳು, ಕಲೆಯ ಆರಾಧಕರು, ದಾನಗುಣಸಂಪನ್ನರು ಹಾಗೂ ಸಕಲ ಧರ್ಮ ಪಾಲಕರು ಆಗಿದ್ದರೆಂದು ತಿಳಿದುಬರುತ್ತದೆ. ಅಲ್ಲದೇ

ಈ ಮೇಲಿನ ವಿಷಯಗಳೆಲ್ಲವುಗಳಿಂದ, ಈ ವಂಶದ ಅರಸರು ನಮ್ಮ ಕನ್ನಡನಾಡಿಗೆ, ಅದರ ರಕ್ಷಣೆಗೆ, ಅವರ ಪ್ರಭುಗಳಿಗೆ ನಿಷ್ಠರಾಗಿ, ಸಂಸ್ಕೃತಿಯ ಬೆಳವಣಿಗೆಗೆ ತುಂಬಾ ಮಹತ್ವದ ಕೊಡುಗೆ ಸಲ್ಲಿಸಿದ್ದಾರೆ ಎಂಬುದು ಸಿದ್ಧವಾಗುತ್ತದೆ.



(ನನ್ನ ಈ ಪತ್ರಿಕೆಯನ್ನು ಸಿದ್ಧಪಡಿಸುವಲ್ಲಿ ನನಗೆ ಮಾರ್ಗದರ್ಶನ ನೀಡಿದ ನನ್ನ ಗುರುಗಳಾದ ಡಾ. ಎಸ್. ರಾಜಶೇಖರರವರನ್ನು ಹಾಗೂ ಸಲಹೆ ನೀಡಿದ ಮಿತ್ರರಾದ ಅಶೋಕ ಕಂದಗಲ್, ಶ್ರೀಶೈಲ ಮನಗುತ್ತಿ ಅವರನ್ನು ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯಾ ಇಂಡಿಕಾ**, ಸಂ-೩, ನಂ-೩೩, ಪು-೨೩೦-೩೬, ಬೈರನಮಟ್ಟಿ.
೨. 'ರಂಜೋಲದ ಸಿಂಧರ ಶಾಸನ' (ಸಂ.) ಗೋಪಾಲ ಬಾ.ರಾ. **ಕರ್ನಾಟಕ ಭಾರತಿ**, ಸಂ-೧, ಸಂಚಿಕೆ-೧, ಪು-೧೪೭-೧೫೬.
೩. ಅದೇ.
೪. ಸೌ.ಇ.ಇ. ಸಂ-೨೦, ನಂ-೨೮೦, ಮಹಾಕೂಟ.
೫. ಎ.ಇ. ಸಂ-೩, ನಂ-೩೩, ಪು-೨೩೩, ಬೈರನಮಟ್ಟಿ.
೬. ಸೌ.ಇ.ಇ., ಸಂ-೨೦, ನಂ-೨೮೦, ಮಹಾಕೂಟ.
೭. ಅದೇ.
೮. ಅದೇ.
೯. ಅದೇ.
೧೦. ಸೌ.ಇ.ಇ., ಸಂ.-೧೧, ಭಾಗ-೧, ನಂ.೭೧, ಪುಟ-೬೨, ಹಳ್ಳೂರು.
೧೧. Desai Dinakar., *Mahamandaleshwars Under the Chalukyas of Kalyani*, p-71.
೧೨. ಎ.ಇ., ಸಂ-೩, ನಂ-೩೩, ಪುಟ-೨೩೩, ಬೈರನಮಟ್ಟಿ.
೧೩. ಅದೇ.
೧೪. ಅದೇ.
೧೫ Gopal, B.R., *Chalukyas of Kalyana and Kalachuries*, p-227.
೧೬. ಅದೇ
೧೭. ಸೌ.ಇ.ಇ., ಸಂ-೧೧, ಭಾಗ-೧, ನಂ-೭೧, ಪುಟ-೬೨, ಹಳ್ಳೂರು.
೧೮. ಎ.ಇ., ಸಂ-೩, ನಂ-೩೩, ಪು-೨೩೩, ಬೈರನಮಟ್ಟಿ.
೧೯. ಸೌ.ಇ.ಇ., ಸಂ-೧೧, ಭಾಗ-೧, ನಂ೭೧, ಪುಟ-೬೨, ಹಳ್ಳೂರು.
೨೦ ಎ.ಇ., ಸಂ-೩, ನಂ-೩೩, ಪು-೨೩೩, ಬೈರನಮಟ್ಟಿ.
೨೧. ಅದೇ, ಪು-೨೩೨-೩೫.

ಡಾ|| ಬಿ. ನಂಜುಂಡ ಸ್ವಾಮಿ*

# ಮೂಗೂರು ಪ್ರಭುಗಳು

ಮೈಸೂರು ಜಿಲ್ಲೆ.ತಿರುಮಕೂಡಲು-ನರಸೀಪುರ ತಾಲೂಕಿನ ಈ ಗ್ರಾಮ ಸಾಂಸ್ಕೃತಿಕವಾಗಿ ಬಹಳ ಹಿರಿಯ ಸ್ಥಾನವನ್ನು ಪಡೆದಿದೆ. ನಾಡು ನುಡಿಯ ಮಾಹಿತಿಗಳು ನಮ್ಮ ಹಿರಿಯರಿಗೆ ರಕ್ತಗತವಾಗಿ ಬಂದಿದೆ. ಸಾಂಸ್ಕೃತಿಕವಾದ ಅರಿವು ಆಚರಣೆ ಅವರಲ್ಲಿ ಸಹಜವಾಗಿದೆ.

ಆದರೆ ಸಾಂಸ್ಕೃತಿಕವಾದ ಅರಿವು ಹೊಸ ಜನಾಂಗದಲ್ಲಿ ಕಡಿಮೆಯಾಗುತ್ತಾ ಇದೆ. ತಮ್ಮ ಗ್ರಾಮದ ಪರಿಸರದ ಇತಿಹಾಸವನ್ನು ಯುವ ವಿದ್ವಾಂಸರು ಅಧ್ಯಯನ ಮಾಡಿ ಮುಂದಿನ ಜನಾಂಗಕ್ಕೆ ಉಳಿಸಿಕೊಡುವ ಗುರುತರ ಜವಾಬ್ದಾರಿ ಅವರುಗಳ ಹೆಗಲ ಮೇಲೆ ಇದೆ.

ಹಿರಿಯ ಶಾಸನ ತಜ್ಞರಾದ ಬಿ. ಲೂಯಿಸ್ ರೈಸ್‌ರವರು ತಮ್ಮ *Mysore Gazetteer, Vol. II, (Revised Edition),* ಪುಟ ೨೭೫ರಲ್ಲಿ :

*Mugur - A large village in Tirumakudlu - Narasipura Taluq, situated 6 miles south east of Narasipura- Head quarters of the Mugur Hobli; population 3,735.*

*It has a temple of Tibba Devi, which is the scene of an annual festival in December or January, resorted to by 2,000 people. There is also a Palace belonging to one of the members of the Mysore Royal Family,* ಎಂದೆಲ್ಲ ವಿವರವಿದೆ.

೧೯೮೮ರಲ್ಲಿ ಪ್ರಕಟವಾದ ಮೈಸೂರು ಗ್ಯಾಸೆಟಿಯರ್‌ನಲ್ಲಿ *"Mugur Is an old capital town of a minor principality (10 km. from T. Narasipura) popularly called 'Mugur', In Hiriyanadu under the Hoyasalas. The earliest mention of the Palace is 'Mugur' in a Ganga record of 10th century.*

ಗಂಗರ ಶಾಸನದಲ್ಲಿ ಮೂಗೂರು ಉಲ್ಲೇಖಗೊಂಡಿದೆ. ಈ ಶಾಸನದ ಕಾಲ ಹತ್ತನೇ ಶತಮಾನ. ಹೊಯ್ಸಳರ ಕಾಲದಲ್ಲಿ ಈ ಪ್ರದೇಶವನ್ನು ಹಿರಿಯನಾಡು ಎಂದು ಕರೆಯುತ್ತಾ ಇದ್ದರು. ಹಿರಿಯನಾಡ ಪ್ರಭುಗಳಿಗೆ ಸಂಬಂಧಪಟ್ಟ ಒಂದು ಶಾಸನ ಹರವೆ ಗ್ರಾಮದಲ್ಲಿ ಇದೆ. ***(E.C. IV, ಚಾಮರಾಜನಗರ ೬೯೩)*** ಗ್ರಾಮಕ್ಕೆ ಈಶಾನ್ಯ ಶಂಕರೇಶ್ವರ ದೇವಾಲಯದ ಮುಂದೆ ಗಾಣದ ಮೇಲೆ ಇರುವ ಶಾಸನವು, ಹಿರಿಯನಾಡನ್ನು ಆಳುತ್ತಿದ್ದ ಪ್ರಭುವಿನ ಹೆಸರು ತಗಡೂರ "ಅಂಕಗೌಡ" ಎಂದು ಉಲ್ಲೇಖಿಸುತ್ತದೆ. ಮೂಗೂರು ಹಿರಿಯನಾಡ ಒಂದು ಭಾಗವಾಗಿದ್ದು ಹರವೆ ಭಾಗದ ಹಿರಿಯ ನಾಡನ್ನು ತಗಡೂರ ಪ್ರಭುಗಳು ಆಳುತ್ತಾ ಇದ್ದರು ಎಂದು ತಿಳಿಯುತ್ತದೆ.

ದೇಶೇಶ್ವರ ದೇವಸ್ಥಾನದ ಎದುರಿನ ಗರುಡಗಂಬದ ಬಳಿ ಇರುವ ಕಲ್ಲು (*E.C. V.* ತಿ. ನರಸೀಪುರ ೨೬೧.) ಹೊಯ್ಸಳ ಮೂರನೇ ವೀರನರಸಿಂಹನ ಕಾಲದ್ದು, ಶಾಸನದ ಕಾಲ ಶಾಲಿವಾಹನ ಶಕ ೧೧೯೯ ಈಶ್ವರ ಸಂವತ್ಸರ ಜೇಷ್ಠ ಬ ೧೩ ಮಂಗಳವಾರ ಕ್ರಿ.ಶ. ೧೨೭೭ ಜೂನ್ ೧ ನೇ ದಿನಾಂಕಕ್ಕೆ ಹೊಂದಿಕೊಳ್ಳುತ್ತದೆ. ವಿಜಯಣ್ಣನ ಮಗ ಸಂಕಣ್ಣ ಮೂಗೂರ ಪ್ರಭುವಾಗಿ ಅಧಿಕಾರ ನಡೆಸುತ್ತಾ ಇದ್ದ. ಅವರ ಒಪ್ಪಿಗೆ ಪಡೆದು ಈ ಸ್ಥಳವನ್ನು ವ್ಯಾಪಾರಸ್ಥಳವಾಗಿ ಅಭಿವೃದ್ಧಿ ಪಡಿಸಲು ಸಂತೆಯ ಸ್ಥಳವಾಗಿ ಮಾಡಲು *ಆ ಪಟ್ಟಣದಲಿ ಮನೆಯ ಮಾಡುವವರಿಗೆ ಮೊದಲವೊಂದು ವರ್ಷ ಮಾನ್ಯ. ಆ ಪಟ್ಟಣಕೆ ಹೊಸದಾಗಿ ಬಹ ವೊಕ್ಕಲಿಗೆ ಎರಡು ವರ್ಷ **ಮನೆದೆಱೆ** ಮಾನ್ಯ. ಒಕ್ಕಲು ಬೇರೆ ಕಡೆ ಇದ್ದು ಮನೆ ಮಾತ್ರ ಮಾಡಿದರೆ, ಅವರಿಗೆ ಒಂದು ವರ್ಷ ಮನೆ ತೆರಿಗೆ ಇಲ್ಲ. ಒಕ್ಕಲು ಸಮೇತ ಬಂದರೆ ಅವರಿಗೆ ಎರಡು ವರ್ಷ ಮನೆ ತೆರಿಗೆ ಇಲ್ಲ.* ತಮ್ಮ ಊರನ್ನು ವ್ಯಾಪಾರ ಸ್ಥಳವಾಗಿ ಅಭಿವೃದ್ಧಿಪಡಿಸಲು ತೆಗೆದುಕೊಳ್ಳುತ್ತಾ ಇದ್ದ ಕ್ರಮವನ್ನು ಈ ಶಾಸನ ತಿಳಿಸುತ್ತದೆ. ಶಾಸನತಜ್ಞರು ಈ ಶಾಸನವನ್ನು ಕುರಿತು ಈ ಮಾತನ್ನು ಹೇಳಿದ್ದಾರೆ. *The Record refers to Bachanna Mallanna, the mahapasayata and states that Desinath was governing Kumarana - nad alias Tore-nad which appears to be the same as Hiriya-nad.*

ಸಂತೆಮರಹಳ್ಳಿಗೆ ಹೋಗುವ ದಾರಿಯಲ್ಲಿ ನೆಟ್ಟ ವೀರಗಲ್ಲು ***(E.C. V. ತಿ. ನರಸೀಪುರ ೨೮೬)*** ಒಬ್ಬ ವೀರನ ಕಥೆಯನ್ನು ಹೇಳುತ್ತದೆ. ಮೂಗೂರ ಮಹಾಪ್ರಭು ಮಾದಣ್ಣನವರ ಮಗ ಮಾದಪ್ಪನೂ ತಲೆಮಲೆಗೆ ಹೋಗುತ್ತಾ ಇದ್ದಾಗ ನಲವತ್ತು ಜನ ಕಳ್ಳರು ಹಂದಿಗನಹಳ್ಳಿಯ ಘಟ್ಟದಲ್ಲಿ ಮಹಾಪ್ರಭುಗಳನ್ನು ಅಟಕಾಯಿಸಿದಾಗ ಪ್ರಭುಗಳ ರಕ್ಷಣೆಗೆ ಹೋರಾಡಿ ಕಳ್ಳರನ್ನು ಓಡಿಸಿ ಇಬ್ಬರು ಕಳ್ಳರನ್ನು ಕೆಡಹಿ ತನ್ನೊಡೆಯನ ಪ್ರಾಣವನ್ನು ರಕ್ಷಣೆ ಮಾಡಿದ ವೀರನ ಸ್ಮರಣೆಗಾಗಿ ಹೊಯ್ಸಿದ ವೀರಗಲ್ಲು ಎಂದಿದೆ. ಇದರ ಕಾಲ ಸುಮಾರು ೧೪ನೇ ಶತಮಾನ.

* ಪಂಡಿತ್ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಶಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ, ತುಮಕೂರು - ೫೭೨ ೧೦೨

ಗುಂಜಾ ನರಸಿಂಹ ದೇವಸ್ಥಾನದ ಉತ್ತರ ಮಹಾದ್ವಾರದ ಮುಂದೆ ಇರುವ ಮಂಟಪದಲ್ಲಿ ಮೇಲ್ಛಾವಣಿಯ ಕೆಳಗೆ ತೊಲೆಗಳ ಮೇಲೆ *(E.C. V., ತಿ. ನರಸೀಪುರ ೧.)* ಶಾ.ಶ. ೧೬೪೬ನೇ ಕ್ರೋಧಿ ಸಂವತ್ಸರದ ಮಾಘ ಶು ೫ ಈ ಕಾಲಮಾನ ಕ್ರಿ.ಶ. ೧೭೨೫ ಜನವರಿ ೮ನೇ ದಿನಾಂಕಕ್ಕೆ ಹೊಂದಿಕೊಳ್ಳುವಂತಹ ಕಾಲಮಾನದ ಈ ಶಾಸನ ಸ್ಥಾಪನೆಯಾದಾಗ ಮೂಗೂರ ಪ್ರಭುಗಳು ಮೈಸೂರು ಒಡೆಯರ ಅಧೀನರಾಗಿದ್ದು, ಆಗ ಮೈಸೂರು ಸಿಂಹಾಸನದ ಮೇಲೆ ದೊಡ್ಡ ಕೃಷ್ಣರಾಜ ಒಡೆಯರವರು (೧೭೧೪-೧೭೩೨) ರಾಜ್ಯಭಾರ ಮಾಡುತ್ತಾ ಇದ್ದರು. ಮೂಗೂರಪ್ರಭು ಸೋಮರಾಜು ವಡೆಯರವರ ಮೊಮ್ಮಗ ಕೃಷ್ಣ ಅರಸಿನವರ ಧರ್ಮಪತ್ನಿ ಚಾಮಂಮ್ಮಣಿಯವರು ಗುಂಜಾ ನರಸಿಂಹಸ್ವಾಮಿಗೆ ಈ ಮಂಟಪವನ್ನು ಕಟ್ಟಿಸಿ ಅರ್ಪಿಸಿದ್ದಾರೆ.

ಈ ಶಾಸನದಲ್ಲಿ ಮೂಗೂರಪ್ರಭು ಸೋಮರಾಜು ವಡೆಯರ ಕುಮಾರರು ವಿ x x ಮುಂದೆ ಎರಡು ಅಕ್ಷರ ತ್ರುಟಿತವಾಗಿರುವುದರಿಂದ ರಾಜನ ಹೆಸರು ತಿಳಿಯದಾಗಿದೆ. ಮೈಸೂರು ಅಥವಾ ಶ್ರೀರಂಗಪಟ್ಟಣದ ಸಿಂಹಾಸನದ ಪ್ರಖ್ಯಾತ ದೊರೆಯಾದ ಚಿಕ್ಕದೇವರಾಜ ಒಡೆಯರ ಆಸ್ಥಾನ ಕವಿ - ಮಂತ್ರಿಯಾಗಿದ್ದ "ತಿರುಮಲಾರ್ಯ" ವಿರಚಿತ "ಲಕ್ಷ್ಮಿ ಸ್ವಯಂವರ ಶೋಭಾನ" ಕೃತಿಯ ಪರಿಚಯವು *G.O.M.L.* ಮದ್ರಾಸ್ ೧೯೫೮ (ಪುಟ ೫೯ - ೬೩) ಶ್ರೀ ಟಿ. ಚಂದ್ರಶೇಖರನ್ ರವರಿಂದ ಸಂಪಾದಿತವಾಗಿ ಪ್ರಕಟವಾಗಿರುವ ಹಸ್ತಪ್ರತಿ ಸೂಚಿ VII ನೇ ಸಂಪುಟದಲ್ಲಿದೆ :

ರಾಜವಂಶದ ಸೋಮರಾಜನಂದನ ವೀರ
ರಾಜೇಂದ್ರ ಪೇಳ್ವುದೆನೆ ಪೇಳ್ವೆ
ರಾಜೇಂದ್ರ ಪೇಳ್ವುದೆನೆ ಪೇಳ್ವೆನೀಯಬ್ಧಿ।
ರಾಜನಂದನೆಯ ಮದುವೆಯ॥

(ಶೋಭಾನೆ ಪದ, ಪುಟ-೬೦)

ಸಿರಿದೇವಿ ಸಹಿತ ಜಗಕೆ ಭಕ್ತಜನ ಸುರಧೇನುವೆನಿಸಿ ಮೆರೆವ ನರಸಿಂಹ
ಪುರದೊಳಿರುವ ಪ್ರಹ್ಲಾದ ವರದನಾಡಿದ ನುಯ್ಯಲಾ ॥ ೪೮॥
ಸೋಮಕುಲ ಸೋಮರಾಜ ಗರ್ಭಾಬ್ಧಿಸೋಮ ವರ ವೀರರಾಜ
ಭೂ xxxxxx ನೊಲಿದು ಪೊರೆದ ಕಲ್ಯಾಣ ಧಾಮ ನಾಡಿದನುಯ್ಯಲಾ
॥ ೪೯॥

(ಉಯ್ಯಾಲೆ ಪದ ೬೧)

ಈ ಮೇಲಿನ ಹಾಡಿನ ಸಹಾಯದಿಂದ ಶಾಸನದ ನಾಲ್ಕನೇ ಸಾಲಿನ ಕಡೆಯಲ್ಲಿ ತ್ರುಟಿತವಾಗಿರುವ ದೀರ್ಘದ ಜೊತೆಗಿನ ಎರಡು ಅಕ್ಷರವನ್ನು 'ೀರರಾ' ಎಂದು ತುಂಬಿದರೆ ಶಾಸನದ ಪೂರ್ಣಪಾಠ ಲಭ್ಯವಾದಂತೆ. ಶಾಸನವನ್ನು ಹಾಕಿಸಿ ಮಂಟಪವನ್ನು ಕಟ್ಟಿಸಿದ ಚಾಮಂಮಂಣಿ ಯವರ ಮಾವನ ಹೆಸರು ವಿ(ೀರರಾ)ಜು ವಡೇರು ಎಂದು ಸ್ಪಷ್ಟವಾಗಿ ಹೇಳಬಹುದು.

ಶೃಂಗೇರಿ ಮಠದ ತಾಮ್ರಶಾಸನದಲ್ಲಿ *(E.C. XI ಚಿಕ್ಕಮಗಳೂರು ೨೯ : ರಿ ೧೯೩೩-೩೧)* ಮೂಗೂರು ಸೋಮ-ರಾಜೈಯ್ಯ ಅರಸನವರ ಕುಮಾರರು ದೇವರಾಜೈಯ್ಯ ಅರಸಿನವರ ಉಲ್ಲೇಖ ಬಂದಿದೆ. ಈ ತಾಮ್ರಶಾಸನದ ಅಧ್ಯಯನ ದಿಂದ ಮೂಗೂರ ಸೋಮರಾಜನಿಗೆ ವೀರರಾಜನಲ್ಲದೆ, ದೇವರಾಜ ಎಂಬ ಮಗನಿದ್ದ ಎಂಬುದು ಸ್ಪಷ್ಟವಾಗುತ್ತದೆ.

ಎರಡು ಹಲಗೆ ಇರುವ ಈ ತಾಮ್ರಶಾಸನದ ಕಾಲ ಕ್ರಿ.ಶ. ೧೬೫೯ ಪೈಂಗಳನಾಮ ಸಂವತ್ಸರ ಆಷಾಢ ಶು ೧೫ ಭಾರ್ಗವಾರ. ಈ ಕಾಲಮಾನ ಇಂಗ್ಲೀಷ್ ತೇದಿ ಜುಲೈ ೧ ೧೭೩೭ಕ್ಕೆ ಹೊಂದಿಕೊಳ್ಳುತ್ತದೆ. ಈ ಶಾಸನದ ಕಾಲದಲ್ಲಿ ಮೈಸೂರು ದೊರೆ ಇಮ್ಮಡಿ ಕೃಷ್ಣರಾಜ ಒಡೆಯರು ರಾಜ್ಯಭಾರ ಮಾಡುತ್ತಿದ್ದರು. ಇಲ್ಲಿ ಉಲ್ಲೇಖಗೊಂಡ ಮೂಗೂರ ಸೋಮರಾಜೈಯ್ಯ ಅರಸಿನವರ ಕುಮಾರು ದೇವರಾಜೈಯ್ಯ, ಮೂಗೂರ ವೀರರಾಜ ಅರಸಿನವರ ಕಿರಿಯ ತಮ್ಮ ನಾಗಿರಬಹುದು.

"ಶ್ರೀ ಮನ್ಮಹಾರಾಜ ಚಾಮರಾಜೇಂದ್ರ ಒಡೆಯರವರ ವಂಶರತ್ನಾಕರ" ಮೈಸೂರು ಅರಮನೆಯ ಜಗನ್ಮೋಹನ ಮುದ್ರಾಕ್ಷರ ಶಾಲೆಯಲ್ಲಿ ೧೮೮೭ರಲ್ಲಿ ಮುದ್ರಿಸಿ ಪ್ರಕಟಿಸಲ್ಪಟ್ಟಿವೆ. ಆ ಕೃತಿ ಕರ್ತೃಗಳು ಎಂ.ವಿ.ಕೆ. ಮತ್ತು ಎಂ. ಎಲ್. ಎನ್. ಎಂದಿದೆ. ಈ ಇಬ್ಬರು ಮೈಸೂರು ನಗರದಲ್ಲಿ ವಾಸಮಾಡುತ್ತಾ ಇದ್ದ ಅರಮನೆಯ ಆಸ್ಥಾನದ ವಿದ್ವಾಂಸರು. ಪ್ರಕಟಿತ ಈ ಪುಸ್ತಕದ ೨೨ ಮತ್ತು ೨೩ನೇ ಪುಟದಲ್ಲಿ ಮೂಗೂರು ಮನೆತನದ ಬಗ್ಗೆ ಸ್ವಲ್ಪ ಮಾಹಿತಿ ಲಭ್ಯವಾಗುತ್ತದೆ. ರಾಜಒಡೆಯರು (೧೫೫೨-೧೬೧೮) ರಾಜ್ಯಭಾರ ಮಾಡುತ್ತಿರುವಾಗ ಮೂಗೂರು ಮೈಸೂರು ರಾಜ್ಯದಲ್ಲಿ ಲೀನವಾದದ್ದನ್ನು ದಾಖಲಾತಿಗಳು ಹೇಳುತ್ತವೆ.

"ಶಾ.ಶಕ ೧೫೩೮ ರಾಕ್ಷಸ ಸಂವತ್ಸರದ ಚೈತ್ರ ಶುದ್ಧ ೧ ಲ್ಲಿ ಬಸವಾರಜಯ್ಯನಿಂದ ಬಾಳಲೋಚನಾಯಕನು ಕಟ್ಟಿ ಕೊಂಡು ಇದ್ದದ್ದನ್ನು ಜಯಸಿದ್ದು ಮೂಗೂರ"

**ಚಿಕ್ಕದೇವರಾಜ ಒಡೆಯರವರು** (೧೬೭೩-೧೭೦೪) ಮೈಸೂರಿನ ಪ್ರಸಿದ್ಧ ದೊರೆಯಾದ ಚಿಕ್ಕದೇವರಾಜ ಒಡೆಯರ ಮೂರನೇ ಪತ್ನಿ ಕೆಂಪಮ್ಮಣಿಯವರು "ಮೂಗೂರು ಸೋಮ-ರಾಜಯ್ಯನವರ ಕುಮಾರತಿ".

ಚಿಕ್ಕದೇವರಾಜ ಒಡೆಯರವರು ಅರಸು ಮನೆತನಗಳಲ್ಲಿ ನಡೆಯುವ ಆಚಾರ ವಿಚಾರದ ಬಗ್ಗೆ ಕಟ್ಟು ನಿಟ್ಟಾದ ವ್ಯವಸ್ಥೆ ಮಾಡಿದರು. "ಅರಸುಗಳು ೧೩ ಮನೆತನದ ಮತ್ತು ೧೮ ಮನೆತನಗಳನ್ನು ವ್ಯವಸ್ಥೆ ಮಾಡಿ - ಶಾ. ಶಕ ೧೬೧೨ನೇ ಪ್ರಮೋದೂತ ಸಂವತ್ಸರದ ಆಶ್ವಯುಜ ಶುದ್ಧ ೧೦ಯಲ್ಲಿ, ಅರಸುಗಳ ಬಂಧುಗಳಲ್ಲಿ ಕೆಲವರು ಸಂಧ್ಯಾವಂದನೆಯನ್ನು ಮಾತಾ ಪಿತೃಗಳ ಶ್ರಾದ್ಧಗಳನ್ನೂ ಬಿಟ್ಟು ಗೌಡುಪಟ್ಟು ಸಂಬಂಧ

ಮಾಡಿದ್ದರಿದಲೂ, ಮತ್ತೆ ಕೆಲವರು ಇದೇ ರೀತಿಯಾಗಿ ಬಡಜಾತಿ ಸಂಬಂಧವನ್ನು ಮಾಡಿದ್ದರಿಂದಲೂ, ಹಾಗೆ ಬೆರೆತು ಇದ್ದ ಅರಸುಗಳನ್ನು ಚೆನ್ನಾಗಿ ಪರಾಂಪರಿಸಿ ವಿಚಾರಣೆಮಾಡಿ, ಇನ್ನು ಮೇಲೆ ಹೀಗೆ ಬಂಧುತ್ವ ಸಂಕಲಿತವಾಗಿ ಇರಬಾರದೆಂದು, ಗೌಡಪಟ್ಟು ಸಂಬಂಧವನ್ನು ಮಾಡಿದವರನ್ನೂ ಬಡಜಾತಿ ಸಂಬಂಧ ಮಾಡಿದವರನ್ನು ವಿಂಗಡಿಸಿ ಆಯಾಜಾತಿಗೆ ಸೇರಿಸಿ ಬಿಟ್ಟು, ಅನಾದಿಯಾಗಿ ಪರಿಶುದ್ಧವಾಗಿ ಹೊಂದಿ ಬಂದ ಸಂಬಂಧ ಗಳುಳ್ಳ ಅರಸುಗಳನ್ನು ವಿಂಗಡಿಸಿ ನೇಮಕ ಮಾಡಿಸಿ ೧೩ ಮನೆತನವೆಂತಲೂ, ಅರಸುಗಳ ಸಂಪ್ರದಾಯದಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾಗಿ ನಡೆದ ಅರಸುಗಳನ್ನು ೧೮ ಮನೆತನವೆಂತಲೂ ನಿಬಂಧನೆ ಮಾಡಿದರು".

ಈ ಹದಿಮೂರು ಮನೆತನದಲ್ಲಿ ೧) ಮಹಿಶೂರನಗರದ ದೊರೆಗಳ ಮನೆತನ ೨) ಮೂಗೂರವರ ಮನೆತನ ೩) ಯಳಂದೂರವರ ಮನೆತನ ೪) ಕೊತ್ತಾಗಾಲದವರ ಮನೆತನ ಮುಂತಾದವು. ಈ ೧೩ ಮನೆತನದವರು ೧೩ ಮನೆತನ ಗಳಲ್ಲಿಯೇ ಹೆಣ್ಣು ಕೊಟ್ಟು ತೆಗೆದುಕೊಳ್ಳುವುದು, ೧೮ ಮನೆತನದವರು ೧೮ ಮನೆತನಗಳಲ್ಲಿಯೇ ಹೆಣ್ಣು ಕೊಟ್ಟು ತೆಗೆದುಕೊಳ್ಳುವದೆಂತಲೂ ನಿಬಂಧನೆ ಮಾಡಿದ್ದಲ್ಲದೆ, ೧೩ ಮನೆತನದ ಅರಸುಗಳ ಹೆಣ್ಣುಗಳನ್ನು ೧೮ ಮನೆತನದವರಿಗೆ ಕೊಡಕೆಲಸವಿಲ್ಲವೆಂತಲೂ, ೧೮ ಮನೆತನದ ಹೆಣ್ಣು ಮಕ್ಕಳನ್ನು ೧೩ ಮನೆತನದ ಅರಸುಗಳಿಗೆ ೨-೩ನೇ ಮದುವೆಗೆ ತರಬಹುದು ಎಂತಲೂ ನಿಬಂಧನೆ ಮಾಡಿದರು. ಈ ಅರಸುಗಳ ಆಚಾರ ವಿಚಾರವನ್ನು ನೋಡಿಕೊಳ್ಳಲು ಚಿಕ್ಕದೇವರಾಜ ಒಡೆಯರವರ ಮಾವಂದಿರಾದ ಮೂಗೂರು ಮನೆತನದ ಸೋಮರಾಜಯ್ಯ ನವರನ್ನು ಸಮ್ಮುಖದ ಗುರಿಕಾರರನ್ನಾಗಿ ನೇಮಿಸಿದ್ದರು. ಅರಸುಗಳ ಮನೆಯಲ್ಲಿ ನಡೆಯುವ ಶುಭಪ್ರಸ್ತಗಳಲ್ಲಿ ಹೆಣ್ಣಿನಮನೆಯವರೂ ಗಂಡಿನ ಮನೆಯವರೂ ಮಹಾರಾಜ ಚಿಕ್ಕದೇವರಾಜ ಒಡೆಯರವರಿಗೆ ಒಪ್ಪಿಸಿ ತಕ್ಕ ಹೂವಿನಹಾರ, ಸುತ್ತು ವೀಳ್ಯ ಮತ್ತು ಎರಡು ಹೊನ್ನುಗಳನ್ನು ಮೂಗೂರು ಸೋಮರಾಜಯ್ಯನ ವರಿಗೆ ಕೊಡತಕ್ಕದ್ದು ಎಂದು ಅಪ್ಪಣೆ ಮಾಡಿದ್ದರು.

ಹೀಗೆ ವೈಷ್ಣವ ದೀಕ್ಷೆಯನ್ನು ಅಂಗೀಕರಿಸಿದ ಅರಸುಗಳು ದೊರೆಗಳ ಪಾದಕ್ಕೆ ಬರೆದುಕೊಂಡ ಬಿನ್ನವತ್ತಳೆಯಲ್ಲಿ "ಸ್ವಾಮಿಯವರ ದಿವ್ಯಶ್ರೀ ಪಾದಪದ್ಮಂಗಳಿಗೆ - ಭಾವ ಸಂವತ್ಸರದ ಚೈತ್ರಶುದ್ಧ ೧೦ರಲ್ಲಿ, ಸ್ವಾಮಿಯವರ ಪಾದಬಂಧುಗಳಾದ ವಾಸಿಷ್ಠಗೋತ್ರದ ಮೂಗೂರು ಮನೆತನದ ದೊಡ್ಡಯ್ಯ, ಬಸವರಾಜಯ್ಯ, ವೀರಾಜಯ್ಯ, ಚನ್ನರಾಜಯ್ಯ, ನಂಜರಾಜಯ್ಯ, ಬಾಳಯ್ಯ, ರಾಮರಾಜಯ್ಯ, ರಾಜಯ್ಯ, ಚಂದ್ರಯ್ಯ, ನಂಜರಾಜಯ್ಯ, ಲಿಂಗರಾಜಯ್ಯ, ಬಾಳಯ್ಯ ಲಿಂಗರಾಜಯ್ಯ, ಸಹ ಸದ್ವಿನಯ ಭಯಭಕ್ತಿಯಿಂದ ಸಾಷ್ಟಾಂಗವೆರಗಿ ಪೊಡಮಟ್ಟು ಮಾಡುವ ಬಿನ್ನಹ"..... ಎಂದು ಚಿಕ್ಕದೇವರಾಜ ಒಡೆಯರಿಗೆ ಬಿನ್ನಹ ಪತ್ರ ಬರೆದು ಕೊಂಡಿದ್ದಾರೆ.

ಈ ಮೇಲಿನ ರಾಜಬಂಧುಗಳೆ ಮತ್ತೆ ಧಾತು ಸಂವತ್ಸರದ ಜೇಷ್ಠ ಬಹುಳದಲ್ಲಿ ಇನ್ನೊಂದು ಬಿನ್ನವತ್ತಳೆಯನ್ನು ಬರೆದು ಕೊಂಡು..."ಅದು ಮೊದಲು ನಮ್ಮ ಕುಲದೇವತೆಗಳನ್ನು ಬಿಟ್ಟು, ನಾರಾಯಣ ಪೂಜೆಯೇ ಮುಖ್ಯವಾಗಿ ನಡೆದದ್ದರಿಂದ ನಮಗೆ ಮನೆಗಳಲ್ಲಿ ಕೆಲವು ಕಷ್ಟಗಳು ಪ್ರಾಪ್ತವಾದ್ದರಿಂದ, ಈಗ ಪುನಃ ಸ್ವಾಮಿಯವರಿಗೆ ಬಿನ್ನಹ ಮಾಡಿಕೊಳ್ಳುವದೇನೆಂದರೆ ನಮ್ಮ ನಮ್ಮ ಕುಲದೇವತಾಪೂಜೆ, ಸ್ವಾಮಿಯವರು ಕಟ್ಟು ಮಾಡಿಸಿದ ಕ್ಷತ್ರಿಯ ಕರ್ಮಕ್ಕೆ ಉಚಿತವಾದ ಅಮವಾಸ್ಯೆ ಮುಂತಾದ ವೈದಿಕ ಕರ್ಮಗಳನ್ನು ಮಾಡಿಕೊಂಡು, ನಾವೆಲ್ಲರೂ ಕೂಡಿ ಐಕ್ಯಮತ್ಯರಾಗಿ ಸ್ವಾಮಿ ಯವರು ಕಟ್ಟು ಮಾಡಿಸಿದ ಮೇರೆಗೆ"....

ಈ ಮೇಲಿನ ಎಲ್ಲಾ ದಾಖಲೆಗಳಿಂದ ಮೂಗೂರು ಮನೆತನದವರಿಗೆ ಮೈಸೂರು ಅರಮನೆಯಲ್ಲಿ ವಿಶೇಷವಾದ ಸ್ಥಾನಮಾನ ಇತ್ತು ಎಂದು ಸ್ಪಷ್ಟವಾಗುತ್ತದೆ.

ಮದ್ರಾಸ್‌ನ *G.O.M.L. (Government Oriental Manuscripts Library, Madras) Vol. VII* ಪುಟ ೧೪೮ ಕ್ರಮಸಂಖ್ಯೆ ೧೩೩೧ರಲ್ಲಿ ಹಲವು ಹಾಡುಗಳ ಪರಿಚಯನ್ನು ಮಾಡಿಕೊಡಲಾಗಿದೆ. ಮೋಕ್ಷಪುರ ಅರ್ಥಾತ್ ಮೂಗೂರ ವಿಜಯನಾಥೇಶನ ಸ್ತುತಿಯನ್ನು ಈ ರೀತಿ ಮಾಡಲಾಗಿದೆ.

ಶ್ರೀಮದತಿಶಯ ದೇವದುಂದುಭಿರಾಜ।
ಸ್ವಾಮಿ ಜಯಜಯ ವಿಜಯನಾಥ ಜನರಾಜ॥ ಪಲ್ಲವಿ॥
ಮನಸಿಜಮಹಾರಣ್ಯ ಪಾವಕಮದೀಶ॥
ಜಿನನಾಥ ಮೋಹಮಲ್ಲಾಸುರ ವಿನಾಶ॥
ಘನಮಹಿಮಸುಜ್ಞಾನನಿಧಿ ಕೃಪಾಕೋಶ
ಅನವರತ **ಮೋಕ್ಷಪುರ ವಿಜಯನಾಥೇಶ** ॥ ೩॥

**ತಿಬ್ಬಾದೇವಿ**

ತ್ರಿಮಕೂಟ ದಕ್ಷಿಣದಿಶಾಭಾಗದಲ್ಲಿ
ಪ್ರಮಥ ತಿಬ್ಬಾದೇವಿ ಮೆಱೆದೆ ತೇಜದಲ್ಲಿ ॥ ಪಲ್ಲವಿ॥
ಶಕಟೋತ್ಸ(ವ) [ವಾದ] ರಥೋತ್ಸವಗಳನು।
ಪ್ರಕಟದಿಂ ಮಾಡಿ ನೇಱಲ ವೃಕ್ಷಗಳನು॥
ಸಕಲ ಕೊಂಬುಗಳಲೆಯು ಯಿಲ್ಲದಂತದನು।
ಮೊಕಗೆಡಿಸಿ ಕೊಚ್ಚಲ್ಕೆ ತೋರ್ಪಫಲಗಳನು॥ ॥ ೧॥
ವರುಷ ಮೂಱಾದ ಜೋಳದ ದಂಟ ತಂದು।
ಚರಣ ಸನ್ನಿಧಿಯಲ್ಲಿ ನೀರೆಱೆಯಲೆಂದು
ವರನಿಜದಿ ಹಸುರೆಲೆಯು ತೋಱುತಿಹುದೆಂದು
ಕರುಣ ನಿಮ್ಮಯ ಕೃಪಾಮಹಿಮೆಯೊಳಗೆಂದು ॥ ೨॥
ಧರೆಯೊಳಗೆ ಮಿಗಿಲೆನಿಪ ಮೋಕ್ಷಪುರದಲ್ಲಿ।
ಗರುವೆ ನೀನಹುದು ದೆಸೆದೆಸೆ ಕೀರ್ತಿಯಲ್ಲಿ॥
ಅರಸು ಲಿಂಗೇಂದ್ರಗೂರನಿತ್ತು ಬೇಗದಲಿ।
ಕರುಣದಿಂ ತಿಬ್ಬಮ್ಮ ಸಲಹು ಹರುಷದಲಿ ॥ ೩॥

**ಬನ್ನಿಮಹಂಕಾಳಿ**

ಈಶನರ್ಧಾಂಗಿಯಸುರರ ವಜ್ರಕೆ ಧಾಳಿ
ಲೇಸಿತ್ತು ರಕ್ಷಿಪುದು ಬನ್ನಿಮಹಂಕಾಳಿ ॥ ಪಲ್ಲವಿ॥

ವಸುಧೆಗುನ್ನತವಾದ ಮೋಕ್ಷಪುರವೆಂದು
ಪೆಸರ್ವಡೆದ ಗ್ರಾಮದುತ್ತರದಲ್ಲಿ ನಿಂದು॥
ರಸಿಕಲಿಂಗೇಂದ್ರನಿಗೆ ವರವೀವೆನೆಂದು।
ಒಸೆದು ಮಹಂಕಾಳಿ ನಿಂದಳು ಕೃಪಾಸಿಂಧು ॥ ೩॥

**ದೊಡ್ಡರಸರಾಜೇಂದ್ರ ಭೂಪ**

ಕಮ್ಮಗಣೆಯನರೂಪ ಕಾಮಿನೀ ಜನಕೆ।
ಸುಮ್ಮಾನಿ ದೊಡ್ಡರಸರಾಜೇಂದ್ರ ಭೂಪ ॥ ಪಲ್ಲವಿ॥

ಇಟ್ಟ ಚೌಕುಳಿ ಕಂಠಮಾಲೆ ಸರದಿಂದ।
ತೊಟ್ಟವಜ್ರಾಂಗಿ ಪೈರಣಿ ವಸ್ತ್ರದಿಂದ॥
ಮೆಟ್ಟುಮೆಟ್ಟಲಿ ಪೊಳೆವ ಕಡಗರವದಿಂದ
ಕಟ್ಟಾಳು ಮನ್ಮಥನು ಯಿವನಲ್ಲದಿಲ್ಲ ॥ ೧॥

ಥಳ ಥಳಿಪ ಪದಕ ಕೇಯೂರ ಹಾರದಿಂದ।
ಖಳಖಳಿಸುತಿಹ ತಾಲಿಕಟಿಸೂತ್ರದಿಂದ॥
ಹೊಳೆಹೊಳೆವುತಿಹ ತಿಲಕ ತನುಕಾಂತಿಯಿಂದ।
ಝುಳಝುಳಿಪ ಪಾವುಗೆಯ ಧ್ವನಿಗೆಯ್ದುದಂದ ॥ ೨॥

ಕಸ್ತೂರಿ, ಜವ್ವಾಜಿ ಕರ್ಪುರ ಸಾದುಗಳನು।
ಉತ್ತಮ ಕದಂಬ ಪರಿಮಳ ಸುಗಂಧವನು॥
ವಿಸ್ತರಿಸಿ ಧರಿಸಿ ವಿಮಲಾಂಗ ಕೋವಿದನು।
ಹಸ್ತಿಗಮನದಿ ಪೋಲ್ವ ಹಸುಳರೂಪಿವನು ॥ ೩॥

ಕಂಜಳದ ನೇತ್ರೆಯರು ಕಾಣೆ ಮುದದಿಂದ।
ಮುಂಜೆರಗ ಜಾರಿಸುತ ಸವಿವಾತಗೊಡುತ॥
ಅಂಜದವನಲ್ಲಲ್ಲಿಯರಸಿ ಕಾಣುತ್ತ।
ಮಂಜುಕವಿದಂತೆಯಂಗನೆಯರರಸುತ್ತ ॥ ೪॥

ಕಂಭಕೂಣ ತವಲಪುಡಿ ಪುಟಸಾದಕವನು
ಯಿಂಬಿನೊಳುಮಾಡಿ ಬಹುಶಸ್ತ್ರದಲ್ಲಿವನು॥
ಸಂಭ್ರಮದಿ ಸಾಧನೆಯ ವಿವರವೆಲ್ಲವನು।
ದೊಂಬಿಯಿಲ್ಲದೆ ಮಾಡಿ ಜರೆದು ರಾಜಿಪನು ॥ ೫॥

ಮಲ್ಲಗಾಳೆಗಕೆ ಮಲೆವರ ಗಂಡ ನೀನು।
ಸಲ್ಲೀಲೆಯಿಂದಶ್ವದುವ್ವಾಲಿಗಳನು॥
ನಿಲ್ಲದೆ ವಾರಣದ ವೈಹಾಳಿಗಳನು।
ಸಲ್ಲೀಲೆಯಿಂ ಮಾಡಿ ಪಡೆದ ಕೀರ್ತಿಯನು ॥ ೬॥

ಭಾರತಾಲಂಕಾರ ಕಾವ್ಯ ಕುಶಲವನು।
ಲೀಲೆಯಿಂದೊಪ್ಪುತಿಹ ಲೀಲಾ[ವತಿ]ನು॥
ಮೇಲಾದ ಜೈಮಿನಿಯ ರಸಕಾವ್ಯಗಳನು
ಲೀಲೆಯಿಂದೋದಿ ಸಾಹಿತ್ಯ ವಿವರವನು ॥ ೭॥

ಅಷ್ಟಾದಶವರ್ಣನೆಯ ವಿವರವೆಲ್ಲವನು।
ಸೃಷ್ಟಿಯೊಳು ಚೌಷಷ್ಟಿ ಕಲೆಯ ವಿವರವನು॥
ಪುಟ್ಟಿಹಾ ನವರಸದ ಭರಿತ ಕಾವ್ಯವನು।
ವಿಸ್ತರದಿಯೋದಿ ಸಹಕಾವ್ಯವೆಲ್ಲವನು॥

ಕ್ಷೀರಸಾಗರದಿ ಶಶಿ ಜನಿಸಿದಂದದಲಿ
ಚಾರುಗುಣ ಲಿಂಗರಾಜೇಂದ್ರನಾತ್ಮದಲಿ॥
ಶೂರದೊಡ್ಡರಸೇಂದ್ರ ಸುಖದೊಳಿರುತಿರಲಿ
ಕಾರುಣ್ಯ ನಂಜುಂಡ ಲಿಂಗ ರಕ್ಷಿಸಲಿ ॥ ೯॥

ಬಹಳ ಶಿಥಿಲವಾದ ಈ ಪ್ರತಿಯ ಈ ಮೇಲಿನ ಸ್ವರವಚನ ಅಥವಾ ಹಾಡುಗಳಲ್ಲಿ ಎಲ್ಲಾ ಹಾಡುಗಳು ಮುದ್ರಣವಾದರೆ ಅನೇಕ ಐತಿಹಾಸಿಕ ಅಂಶಗಳು ಬೆಳಕಿಗೆ ಬರುತ್ತವೆ. ತಿಬ್ಬಾದೇವಿ ಸ್ತುತಿಯಲ್ಲಿ, ಅಲ್ಲಿ ನಡೆಯುವ ಜಾತ್ರೆಯ ವಿಶೇಷವಾದ ವರ್ಣನೆ ಇದೆ. ರಥೋತ್ಸವಾದ ಮರುದಿನ ದೇವಿಯು ಮೂಗೂರುಗೆ ಸುಮಾರು ಎರಡು ಮೈಲಿ ದೂರದಲ್ಲಿರುವ ಹೊಸಹಳ್ಳಿಗ್ರಾಮ ದೇವಾಲಯಕ್ಕೆ ಬಿಜಯಮಾಡಿಸುವಳು. ಅದಕ್ಕೆ ಹಿಂದಣ ರಾತ್ರಿ ಅರ್ಚಕನು ನಿಯಮದಿಂದ ಹೊಸಹಳ್ಳಿಯ ದೇವಾಲಯದಲ್ಲಿ ದೇವರ ಹಿಂಭಾಗದಲ್ಲಿರುವ ನೇರಿಳೆ ಮರದಲ್ಲಿ ಗೊತ್ತಾದ ಒಂದೆಡೆ ಎಲೆಗಳನ್ನೆಲ್ಲ ಸವರಿ (ಕೂಚ್ಚಿ) ಆ ಕಾಂಡಕ್ಕೆ ಅರಿಶಿನ ದಾರ ಕಟ್ಟಿ ಬರುವನು. ಮಾರನೆಯ ದಿನ ಮಧ್ಯಾಹ್ನ ದೇವತೆಯು ಉತ್ಸವವಾಗಿ ಅಲ್ಲಿಗೆ ಬರುವ ಹೊತ್ತಿಗೆ ಬತ್ತಕ್ಕಿಂತಲೂ ಉದ್ದಕ್ಕಿರುವ ಹಳದಿ ಬಣ್ಣದ ಚಿಗುರು ಐದು, ಏಳು ಈ ಕ್ರಮದಲ್ಲಿ ಚಿಗುರಿರುವುದು. ಮೂಗೂರಲ್ಲಿ ದೇವರ ಉತ್ಸವ ಹೊರಡುವ ಹೊತ್ತಿಗೆ ಸರಿಯಾಗಿ ಇಲ್ಲಿ ಚಿಗುರುವುದೆಂದು ಪ್ರತೀತಿಯಿದೆ. ದೇವರು ಇಲ್ಲಿಗೆ ಬಂದ ಮೇಲೆ ಆ ಅರ್ಚಕನೇ ಮರಕ್ಕೆ ಹತ್ತಿ ಆಯುಧದಿಂದ ಚಿಗುರನ್ನು ಚಿವುಟಿತಂದು ದೇವರಿಗರ್ಪಿಸಿದ ಬಳಿಕ ದೇವಸ್ಥಾನದ ಅಧಿಕಾರಿಗಳು ಅದನ್ನು ಮೈಸೂರು ಅರಮನೆಗೆ ಪ್ರಸಾದ ರೂಪವಾಗಿ ಕಳುಹಿಸಿಕೊಡುತ್ತಾರೆ. ಅಲ್ಲದೆ ದೇವಿಯ ಪಾದತಲದಲ್ಲಿ ಮೂರು ವರ್ಷ ಒಣಗಿದ ಜೋಳದ ದಂಟನ್ನು ಇಟ್ಟು ನೀರನ್ನು ಎರೆದರೆ, ಒಣಗಿದ ಜೋಳದ ದಂಟು 'ಹಸಿರಾಗಿ ನಳನಳಿಸುವುದು'. ಇದು ತಿಬ್ಬಾದೇವಿಯ ಕೃಪೆ ಎಂದು, ಮೂಗೂರ ಅರಸ ಲಿಂಗೇಂದ್ರನಿಗೆ ವರವಿತ್ತು ರಕ್ಷಿಸಿದ ತಾಯಿ ನಮ್ಮನ್ನು ರಕ್ಷಿಸು ಎಂದು ಕವಿ ಪ್ರಾರ್ಥಿಸುತ್ತಿದ್ದಾನೆ.

ಮೂಗೂರು ಗ್ರಾಮದ ಉತ್ತರದಿಕ್ಕಿನಲ್ಲಿ ನೆಲೆಸಿರುವ "ಬನ್ನಿಮಹಾಂಕಾಳಿ" ತಾಯಿ ನಮ್ಮ ಅರಸ ರಸಿಕಲಿಂಗೇಂದ್ರನಿಗೆ ವರವನ್ನು ಕೊಟ್ಟು ರಕ್ಷಿಸಿದ ರೀತಿ ನಮ್ಮನ್ನು ರಕ್ಷಿಸು ಎಂದು ಪ್ರಾರ್ಥಿಸಿದ್ದಾನೆ. ಕಡೆಯ ಸ್ವರವಚನದಲ್ಲಿ ಮೂಗೂರ ಅರಸ ದೊಡ್ಡರಸರಾಜೇಂದ್ರ ಭೂಪನ ವರ್ಣನೆ ಇದೆ. ಅಂದಿನ ದಿನ ಮಾನದಲ್ಲಿ ರಾಜಕುಮಾರರ ಅಲಂಕಾರ, ವಸ್ತ್ರವಿನ್ಯಾಸ, ಆಭರಣ, ಸುಗಂಧದ್ರವ್ಯ ರೂಪು, ನಡೆ, ನುಡಿ, ಅವರು ಕಲಿಯುತ್ತಾ ಇದ್ದ ವಿದ್ಯೆ, ಇದೆಲ್ಲವನ್ನು ಕವಿ ಈ ಸ್ವರವಚನದಲ್ಲಿ ವರ್ಣಿಸಿದ್ದಾನೆ. ಅಂದಿನ ದಿನ ಮಾನದಲ್ಲಿ ರಾಜಕುಮಾರರು ೬೪ ವಿದ್ಯೆಗಳನ್ನು ಬಲ್ಲಂಥವರಾಗಿರಬೇಕಲ್ಲದೆ, ನವರಸಭರಿತ ಕಾವ್ಯಗಳನ್ನು ಆಳವಾಗಿ ಅಧ್ಯಯನ ಮಾಡಿರುತ್ತಿದ್ದರು. ಇಂತಹ ಪುತ್ರರತ್ನ

ಮೂಗೂರು ಲಿಂಗರಾಜೇಂದ್ರನಿಗೆ ಜನಿಸಿದ. ಅವನೇ "ದೊಡ್ಡರ ಸೇಂದ್ರ" ಮಹಾ ಶೂರ ಎಂದು ಕವಿ ವರ್ಣಿಸಿದ್ದಾನೆ.

ಆರ್. ನರಸಿಂಹಚಾರ್ಯ ವಿರಚಿತ ಕವಿಚರಿತೆಯ ತೃತೀಯ ಸಂಪುಟದಲ್ಲಿ ಸು. ೧೭೫೦ರಲ್ಲಿ ಇದ್ದ 'ನಂಜಯ್ಯ'ನ ಬಗ್ಗೆ ಈ ಮಾತುಗಳನ್ನು ಬರೆದಿದ್ದಾರೆ: ಇವನು 'ಕಪೋತ ವಾಕ್ಯ', 'ಶಬರಧನಂಜಯ ವಿಲಾಸ ಮಂಜರಿ' 'ಎಂಬ ಯಕ್ಷಗಾನಗಳನ್ನು ಬರೆದಿದ್ದಾನೆ. ಈತನು ಮೂಗೂರು ಅರಸುಗಳ ವಂಶಕ್ಕೆ ಸೇರಿದವನು. ಕಾಶ್ಯಪಗೋತ್ರದವನು. ಇವನ ಪರಂಪರೆ ಹೀಗೆ ಹೇಳಿದೆ : ಬಾಗಿಳಿ ಕೆಂಪಭೂಪಾಲ, ಮಗ ದೇಶಭೂಪತಿ, ಮಗ ಆಹವವಿಜಯ ಲಿಂಗರಾಜೇಂದ್ರ, ಮಗ ಕವಿನಂಜಯ್ಯ ಇವನು ಸುಮಾರು ೧೭೫೦ರಲ್ಲಿ ಇದ್ದಿರಬಹುದು. ಮೊದಲನೆಯ ಯಕ್ಷಗಾನದಲ್ಲಿ ರಾಮನು ಸುಗ್ರೀವನಿಗೆ ಹೇಳಿದ ಕಪೋತದ ಕಥೆ ವಿವರಿಸಿದೆ. ನಂಜಕವಿಯ "ಕಪೋತವಾಕ್ಯಂ" ಕೃತಿಯನ್ನು ಹಿರಿಯ ವಿದ್ವಾಂಸರಾದ ಎಂ. ಎ. ರಾಮಾನುಜ ಅಯ್ಯಂಗಾರ್‌ರವರು ಕರ್ನಾಟಕ ಕಾವ್ಯಕಲಾನಿಧಿಯಿಂದ ೧೯೧೨ರಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ. ಕೃತಿ ಅವಲೋಕನೆಗೆ ಲಭ್ಯವಾಗಿಲ್ಲ.

ಮೂಗೂರು ಪ್ರಭುಗಳು ನಾಟ್ಯಕಲೆಗೆ ವಿಶೇಷವಾದ ಪ್ರೋತ್ಸಾಹವನ್ನು ನೀಡಿದರು. ಈ ಪ್ರೋತ್ಸಾಹದಿಂದ ಹತ್ತಾರು ಹಿರಿಯ ನಾಟ್ಯ ಕಲಾವಿದೆಯರು ಮೈಸೂರು ಅರಮನೆಯಲ್ಲಿ ವಿಶೇಷವಾದ ಸೇವೆಯನ್ನು ಸಲ್ಲಿಸಿದರು. ನಟುವಾಂಗದವರನ್ನು, ಗಾನಕಲೆಯವರನ್ನು, ನಾಟ್ಯದ ಕಲಾವಿದೆಯರಿಗೆ ಈ ಅರಸರಲ್ಲಿ ಸಿಕ್ಕ ಪ್ರೋತ್ಸಾಹ ಸ್ಮರಣೀಯವಾದದ್ದು. ತಿಬ್ಬಾದೇವಿ ದೇವಾಲಯದ ಕುದುರೆಯ ವಾಹನದ ಮೇಲೆ "ಮದ್ದಲೆ ಲಿಂಗಯ್ಯನ ಮಗಳು ಕೆಂಪಾಸಾನಿ ಸೇವಾರ್ಥ" *(EC. V. ತಿ. ನರಸೀಪುರ ೨೭೫)* ಎಂದು ಲಿಖಿಸಲ್ಪಟ್ಟಿದೆ. ಅದೇ ದೇವಸ್ಥಾನದ ಪಲ್ಲಕ್ಕಿ ಮೇಲೆ

೧ ಶ್ರೀ ಮೂಗೂರು ತ್ರಿಪುರಸುಂದರಿ ಅಂಮ್ಮನವರ
೨ ಸಂನಿಧಿಗೆ।। ಆಳಿದಾ ಮಹಾಸ್ವಾಮಿಯವ
೩ ರ ಪಾದಚಾಕರಳಾದ ಮೈಸೂರಲ್ಲಿ
೪ ಯಿರುವ ಮೂಗೂರು ಅಮೃತಾಸಾನಿ ಸೇ
೫ ವಾರ್ಥ।। ಶ್ರೀ (ತಿ. ನರಸೀಪುರ ೨೭೬) ಎಂಬ ಶಾಸನ ಬರಹವಿದೆ.

ಈ ಪಲ್ಲಕ್ಕಿ ಶಾಸನದಲ್ಲಿ ಉಲ್ಲೇಖಗೊಂಡಿರುವ ಮೂಗೂರು ಅಮೃತಾಸಾನಿ ಬಹಳ ಮೇಲುಮಟ್ಟದ ಕಲಾವಿದೆ. ತನ್ನ ಸ್ವಗ್ರಾಮದ ತ್ರಿಪುರಸುಂದರಿ ಅಮ್ಮನವರಿಗೆ ತನ್ನ ಸೇವೆ ಸಲ್ಲಿಸಿದ್ದಾಳೆ. ಮೂಗೂರಿನ ಕೆಂಪಾಜಮ್ಮ, ಮರಿಯಮ್ಮ, ಜೇಜಮ್ಮ, ಅಮೃತಾಸಾನಿ ಮುಂತಾದ ಮಹಿಳೆಯರು ಪ್ರಸಿದ್ಧ ನೃತ್ಯಗಾರ್ತಿಯರಾಗಿದ್ದರು.

ಪ್ರಕಟಿತ ಶಾಸನಗಳು, ಬಿನ್ನವತ್ತಳೆಗಳು, ಸ್ವರವಚನಗಳು ಮತ್ತು ಸಾಹಿತ್ಯದ ಮೂಲಗಳಿಂದ ಮೂಗೂರು ಪ್ರಭುಗಳ ಬಗ್ಗೆ ಇಷ್ಟು ಮಾಹಿತಿ ಲಭ್ಯವಾಗುತ್ತದೆ :

೧ ಗಂಗರ ಶಾಸನದಲ್ಲಿ ಮೂಗೂರು ಉಲ್ಲೇಖಗೊಂಡಿದೆ. ಈ ಶಾಸನದ ಕಾಲ ಸುಮಾರು ೧೦ನೇ ಶತಮಾನ.

೨ ಹೊಯ್ಸಳ ಮೂರನೇ ವೀರನರಸಿಂಹನ ಆಳ್ವಿಕೆಯ ಕ್ರಿ. ಶ. ೧೨೭೭ರ ಕಾಲಮಾನದಲ್ಲಿ ಈ ಪ್ರದೇಶವನ್ನು ಮೂಗೂರು ಸಂಕಣ್ಣ ವಿಜೆಯಣ್ಣ ಅಧಿಕಾರದಲ್ಲಿ ಇದ್ದರು. ಈ ಪ್ರದೇಶವನ್ನು ಕುಮಾರನವಾಡು, ಹಿರಿಯನಾಡು, ಹದಿನಾಲ್ಕುನಾಡು ಎಂದು ಕರೆಯುತ್ತಾ ಇದ್ದರು. ಹದಿನಾಲ್ಕನೇ ಶತಮಾನದಲ್ಲಿ ಹಿರಿಯನಾಡ ಮಹಾಪ್ರಭು ಮೂಗೂರ ಮಾದಣ್ಣವರ ಮಗ ಮಾದಪ್ಪನೂ ಆಳ್ವಿಕೆ ನಡೆಸುತ್ತಾ ಇದದ್ದು ವೀರಗಲ್ಲಿನ ಶಾಸನದಿಂದ ತಿಳಿಯುತ್ತದೆ.

೪ ರಾಜ ಒಡೆಯರವರು (೧೫೫೨-೧೬೧೭) ರಾಜ್ಯಭಾರ ಮಾಡುವಾಗ "ಶಾ. ಶಕ. ೧೫೩೮ನೇ ರಾಕ್ಷಸ ಸಂವತ್ಸರ ಚೈತ್ರ ಶುದ್ಧ ೧ಲ್ಲು ಬಸವರಾಜಯ್ಯನಿಂದ ಬಾಳಲೋಚನ ನಾಯಕನು ಕಟ್ಟಿಕೊಂಡು ಇದ್ದದ್ದನ್ನು ಜಯಿಸಿದ್ದು ಮೂಗೂರು"

೫ ಗುಂಜಾ ನರಸಿಂಹಸ್ವಾಮಿ ಮಂಟಪ ಶಾಸನದ ಕಾಲ ಕ್ರಿ. ಶ. ೧೭೨೫. ಈ ಶಾಸನದಲ್ಲಿ ಸೋಮರಾಜು ಒಡೆಯರವರು ವಿ(ೀರರಾ)ಜು ಒಡೆಯರವರು - ಕೃಷ್ಣೇ ಅರಸಿನವರ ಉಲ್ಲೇಖವಿದೆ. ಈ ಶಾಸನದಲ್ಲಿ ಮೂಗೂರು ವಂಶಪರಂಪರೆ ಸ್ಪಷ್ಟವಾಗುತ್ತದೆ. ತಾತ, ಮಗ, ಮೊಮ್ಮಗ ಮತ್ತು ಆತನ ಪತ್ನಿ ಚಾಮಂಮಂಣಿ ಹೆಸರು ತಿಳಿದು ಬರುತ್ತದೆ.

೬ ಚಿಕ್ಕದೇವರಾಜ ಒಡೆಯರ ಮಂತ್ರಿ ಮತ್ತು ಆಸ್ಥಾನ ವಿದ್ವಾಂಸ ತಿರುಮಲಾರ್ಯ ಬರೆದ "ಲಕ್ಷ್ಮೀಸ್ವಯಂವರ ಶೋಭಾನ" ಕೃತಿಯಲ್ಲಿ ಸೋಮರಾಜ-ಅವನ ನಂದನ ವೀರರಾಜನ ಉಲ್ಲೇಖವಿದೆ.

೭ ಶೃಂಗೇರಿ ತಾಮ್ರ ಪಟದಲ್ಲಿ ಸೋಮರಾಜೈಯ್ಯ - ಕುಮಾರ ದೇವರಾಜೈಯ್ಯನ ಉಲ್ಲೇಖವಿದೆ. ಈ ಶಾಸನದ ಕಾಲ ಕ್ರಿ. ಶ. ೧೭೩೭, (ಸೋಮರಾಜೈಯ್ಯನ ಮಗ - ವೀರರಾಜು ಒಡೆಯರವರ ಕಿರಿಯ ಸಹೋದರ ದೇವರಾಜೈಯ್ಯ)

೮. ತಿಬ್ಬಾದೇವಿ, ಬನ್ನಿಮಹಂಕಾಳಿ, ದೊಡ್ಡರಸರಾಜೇಂದ್ರ ಭೂಪನ ವರ್ಣನೆ, ಅರಸು ಲಿಂಗೇಂದ್ರ ಅವನ ಮಗ ದೊಡ್ಡರಸರಾಜೇಂದ್ರ ಭೂಪನ ಉಲ್ಲೇಖ, ಸ್ವರವಚನದಲ್ಲಿ ಇದೆ.

೯ ಸು. ೧೭೫೦ರಲ್ಲಿ ಇದ್ದ ಕವಿನಂಜಯ್ಯ ಕೊಟ್ಟಿರುವ ತನ್ನ ವಂಶಪರಂಪರೆ ಬಾಗಳಿ ಕೆಂಪಭೂಪಾಲ- ದೇಶಭೂಪತಿ- ಆಹವವಿಜಯ ಲಿಂಗರಾಜೇಂದ್ರ - ಕವಿನಂಜಯ್ಯ. ಹಯವದನರಾಯರು, ಗ್ಯಾಸೆಟಿಯರ್‌ನಲ್ಲಿ ಮೂಗೂರು

ಬಗ್ಗೆ ಬರೆಯುವಾಗ ತಿಬ್ಬಾದೇವಿ ದೇವಾಲಯದ ಪಕ್ಕ *"The house of Devaraj urs to the left of the temple is a quiant old structure"*. ಈ ಮನೆ ಸೋಮರಾಜಯ್ಯನ ಮಗ ದೇವರಾಜೈಯ್ಯನ ಮನೆ ಇರಬಹುದೆ? ಮೂಗೂರು ಪರಿಸರದಲ್ಲಿ ಕ್ಷೇತ್ರಕಾರ್ಯ ಮಾಡಿ ತಲಸ್ಪರ್ಶಿ ಅಧ್ಯಯನ ಮಾಡಿದರೆ ಇನ್ನಷ್ಟು ವಿಷಯ ಸ್ಪಷ್ಟವಾಗಬಹುದು. ತ್ರಿಪುರಸುಂದರಿ ಅಥವಾ ತಿಬ್ಬಾದೇವಿ ಜಾತ್ರೆ ಹಾಗೆ ತಿರುಮಕೂಡಲ ನರಸೀಪುರದ "ಗುಂಜಾ ನರಸಿಂಹ ಸ್ವಾಮಿ" ಜಾತ್ರೆಯಲ್ಲಿ ಮೂಗೂರು ಪ್ರಭುಗಳ ಮನೆತನದವರ ಸೇವೆ ನಡೆಯುತ್ತಾ ಇರಬಹುದು. ಜಾತ್ರೆಯ ಸಮಯದಲ್ಲಿ ಆ ಬಗ್ಗೆ ಸಂಶೋಧನೆ ಮಾಡಬೇಕು. ಅಳಿದು ಉಳಿದಿರುವ ಅರಸು ಮನೆತನದವರ ಮನೆಗಳಲ್ಲಿ ಇರುವ ಕಾಗದ ಪತ್ರಗಳ ಅಧ್ಯಯನದಿಂದ ಬಹಳಷ್ಟು ಹೊಸ ವಿಷಯಗಳು ಬೆಳಕಿಗೆ ಬರಬಹುದು.

ಮೂಗೂರು ಪರಿಸರದ ಹಸ್ತಪ್ರತಿಗಳು, ಕವಿಗಳು ಬರೆದಿರುವ ಕೃತಿಯಗಳನ್ನು ನಾವು ಗಮನಿಸಬೇಕು. ಧಾರವಾಡದ ವಚನ ವಾಙ್ಮಯ ಭಂಡಾರದಲ್ಲಿ ಇರುವ ಎಲ್ಲಾ ಪುರಾತನರ ವಚನ ಕಟ್ಟು (ಸಂಖ್ಯೆ ೪೧೪) "ಮೂಗೂರು ಚನ್ನಂಜೇದೇವರು ಸೇರಿಸಿದ ಎಲ್ಲಾ ಪುರಾತನರ ವಚನ" ಎಂದಿದೆ.

ಭಟ್ಟಬಾಸ್ಕರಕೃತ ಯಜುರ್ವೇದ ಭಾಷ್ಯಕ್ಕೆ ಕನ್ನಡ ಟೀಕೆಯನ್ನು ಬರೆದ ಗುರುನಂಜ ಮೂಗೂರಿನವನು. ವೀರಶೈವಕವಿ, ಸಿದ್ಧಲಿಂಗನ ಶಿಷ್ಯ. ನಾಸಾಪುರ (ಮೂಗೂರು) ಮಠನಿವಾಸಿ "ಶ್ರೀಮದನಂತಮುಕ್ತಿ ಸೀಮಂತಿನೀಸೀಮಂತಸರಣಿ ವಿಹಾರ ಲೋಲಯೋಗೀಂದ್ರ. ಪರಮಶಿವಾನ್ವಯೋಗ ಯೋಜಕ, ಸ್ಮೃತಿಪುರಾಣ ಶಾಸ್ತ್ರಾರ್ಥದರ್ಶನ ನಿರಂಜನ ಸಿದ್ಧ" ಎಂದು ತನ್ನನ್ನು ವಿಶ್ಲೇಷಿಸಿ ಕೊಂಡಿದ್ದಾನೆ. ಈ ಮೇಲಿನ ವಿಶ್ಲೇಷಣೆ ನೋಡಿದರೆ ಈತನು ವೀರಶೈವ ವಿರಕ್ತ ಮಠದ ಸ್ವಾಮಿಯಾಗಿದ್ದಂತೆ ಕಾಣುತ್ತದೆ. ಇವನ ಟೀಕೆ ಪ್ರೌಢವಾಗಿದೆ. ಇದಕ್ಕೆ ರುದ್ರಭಾಷ್ಯ ಎಂಬ ಹೆಸರಿರುವಂತೆ ತೋರುತ್ತದೆ ಎಂದು ಕವಿಚರಿತ್ರೆಕಾರರು ಹೇಳಿದ್ದಾರೆ. ಈ ಟೀಕೆಯನ್ನು ಸತಾವರ ಶಾಂತಯೋಗಿಯ ಇಷ್ಟಾನುಸಾರವಾಗಿ ಬರೆದಂತೆ ಟೀಕಾಕಾರ ಹೇಳುತ್ತಾನೆ. ಇವನ ಕಾಲವನ್ನು ಕವಿಚರಿತ್ರೆಕಾರರು ಸುಮಾರು ಕ್ರಿ. ಶ. ೧೫೦೦ ಎಂದು ಊಹಿಸಿದರೆ ಇತ್ತೀಚಿನ ಆಕಾರಗಳ ಸಹಾಯದಿಂದ ಪ್ರೊ|| ಸಿ. ಮಹದೇವಪ್ಪನವರು ಕ್ರಿ. ಶ. ಸುಮಾರು ಕ್ರಿ.ಶ. ೧೬೨೦ ಎಂದು ೧೯೭೪ರಲ್ಲಿ ಪ್ರಕಟವಾಗಿರುವ ಮೈಸೂರು ವಿಶ್ವವಿದ್ಯಾನಿಲಯದ "ಸಿದ್ಧಲಿಂಗ ಶಿವಯೋಗಿ" ಪುಸ್ತಕದಲ್ಲಿ ಹೇಳಿದ್ದಾರೆ. ಗುರುನಂಜೆ ಸ್ವಾಮಿಗಳು ಸೇರಿಸಿದ ಉಮಾಸ್ತೋತ್ರಷಟ್ಪದ ಅಥವಾ ತ್ರಿಪುರಸುಂದರೀ ಸ್ತೋತ್ರ ಅಷ್ಟಾವರಣಸ್ತೋತ್ರಷಟ್ಪದ ಈ ಕೃತಿಗಳನ್ನು ಮೂಗೂರು ಗುರುನಂಜನೇ ರಚನೆ ಮಾಡಿರಬಹುದು ಎಂದು ಕವಿಚರಿತ್ರೆಕಾರರು ಹೇಳಿದ್ದಾರೆ. ಪ್ರೊ|| ಪಿ. ಮಹದೇವಪ್ಪನವರು ಚಂದ್ರಕವಿಯ ಶಂಕರಶತಕದ ಪೀಠಿಕೆ ಪುಟ ೧೪ರಲ್ಲಿ "ಸ್ತೋತ್ರ ಷಟ್ಪದಗಳನ್ನು ಸೇರಿಸಿದ ಗುರುನಂಜೇ ಸ್ವಾಮಿಯೂ ಶಿವಕಾರುಣ್ಯಾಹ್ವಾನಾದಿ ಶತಕ ಸಂಕಲನಕಾರನಾದ "ಬರೆಹದ ಗುರು ನಂಜೇಸ್ವಾಮಿ" ಅಭಿನ್ನವ್ಯಕ್ತಿಯೆಂದು ನಾಮಸಾದೃಶ್ಯ ಹಾಗು ಸಂಪಾದನೆಯ ಸಮಯ ಸಾದೃಶ್ಯದಿಂದ ಹೇಳಬಹುದಾಗಿದೆ ಎಂದಿದ್ದಾರೆ. ಕೊಪ್ಪಳ ಗವಿಮಠದ ಹಸ್ತಪ್ರತಿ ಭಂಡಾರದಲ್ಲಿ ಗುರುನಂಜನು ಯಜುರ್ವೇದ ಭಾಷ್ಯಕ್ಕೆ ಬರೆದ ಟೀಕೆಯ ಹಸ್ತಪ್ರತಿ ಇದ್ದು ಅದರಲ್ಲಿ ಇದ್ದ ಪುಷ್ಪಿಕೆಯನ್ನು ಪ್ರೊ|| ಜಿ. ಎಂ. ಉಮಾಪತಿ ಶಾಸ್ತ್ರಿಗಳು ಪಾರಮಾರ್ಥ ಪ್ರಕಾಶಿಕೆ ಅರಿಕೆ ಪುಟ ೫೬ (೧೯೭೪) ರಲ್ಲಿ ನೀಡಿದ್ದಾರೆ.

"ನಾಸಾಪುರಿವಾಸ ಗುರುನಂಜೇಶ ಪಾಣಿಪದ್ಮ ಜನ್ಮ ಶಬ್ದಕರ್ತ ವೇದಾಂತ ಪುರಾಣಾಗಮೇತಿಹಾಸಕೋವಿದ ಸಿದ್ಧಾಂತ ಜ್ಞಾನಸಿದ್ಧ ಶಿವಪದಕಮಲೋನ್ಮೀಲನ ಪ್ರೌಢಭಾನು ಶ್ರೀಮತ್ಸಿದ್ಧ ಮಲ್ಲಿಕಾರ್ಜುನ ಪಂಡಿತ"ನು ಶಾಲಿವಾಹ ಶಕ ವರ್ಷ ವಿಭವ ಸಂವತ್ಸರ ವೈಶಾಖ ಶುದ್ಧ ಪಂಚಮಿ ಸೋಮವಾರ (ಶಾ. ಶ ೧೫೫೦, ಕ್ರಿ.ಶ. ೧೬೨೬) ಮಾಡಿರುವನು; ಎಂದಿದ್ದಾರೆ. ಈ ಮೇಲಿನ ಪುಷ್ಪಿಕೆಯಿಂದ ಅಂದಿನ ದಿನಮಾನದಲ್ಲಿ ಮೂಗೂರಿನಲ್ಲಿ ಎಂತಹ ವಿದ್ವತ್ ಪ್ರತಿಭೆಗಳು ವಾಸಮಾಡುತ್ತಾ ಇದ್ದರು, ಎಂಬುದು ತಿಳಿದುಬರುತ್ತದೆ. ತನ್ನ ವಿದ್ಯಾಗುರು ಬರೆದ ಕೃತಿಯನ್ನು ಶಿಷ್ಯ ಎಷ್ಟು ಗೌರವದಿಂದ ಪ್ರತಿ ಮಾಡಿದ್ದಾನೆ ಎಂಬುದು ತಿಳಿಯುತ್ತದೆ. ಮೂಗೂರಿಗೆ ಸಂಬಂಧಪಟ್ಟ ಸಾಹಿತ್ಯವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದರೆ ಮೂಗೂರು ಪ್ರಭುಗಳ ಬಗ್ಗೆ ಇನ್ನಷ್ಟು ವಿಷಯಗಳು ತಿಳಿದು ಬರಬಹುದು. ಬಹಳಷ್ಟು ಸಾಹಿತ್ಯ ಇನ್ನು ಹಸ್ತಪ್ರತಿಗಳಲ್ಲೇ ಇದೆ. ದೇವಲಾಪುರದ ನಂಜುಂಡ (೧೮೪೧) ರಚಿಸಿದ "ತಿಬ್ಬಾಂಬಿಕಾ ಶತಕ" ಉಪಲಬ್ಧವಾಗಿಲ್ಲ.

ಅಳಿದು ಉಳಿದಿರುವ ಹಸ್ತಪ್ರತಿಗಳು, ಶಾಸನಗಳು, ಕಾಗದ ಪತ್ರಗಳು ಲಭ್ಯವಾದರೆ ಇನ್ನಷ್ಟು ಹೊಸ ವಿಷಯಗಳು ಗೊತ್ತಾಗಬಹುದು. ಆ ನಿಟ್ಟಿನಲ್ಲಿ ಪರಿಸರದ ಕಿರಿಯ ವಿದ್ವಾಂಸರು ಪ್ರಯತ್ನ ಮಾಡಲಿ ಎಂಬುದೇ ಲೇಖಕನ ಬಹು ದೊಡ್ಡ ಆಸೆ.



ಭಾರತಿ ಅಳವಂಡಿಮಠ*

# ಹರಪನಹಳ್ಳಿಯ ಮೊದಲ ಪಾಳೆಯಗಾರ ಬಾಗಳಿಯ ದಾದಯ್ಯನಾಯಕ

ರಕ್ಕಸತಂಗಡಿ ಯುದ್ಧದಲ್ಲಿ ವಿಜಯನಗರ ಸಾಮ್ರಾಜ್ಯದ ಪತನಾ ನಂತರ ಕನ್ನಡನಾಡಿನಲ್ಲಿ ಹಲವು ಪಾಳೆಯಪಟ್ಟುಗಳು ಉದ್ಭವವಾದವು. ಅವುಗಳಲ್ಲಿ ಹರಪನಹಳ್ಳಿಯ ಪಾಳೆಯಪಟ್ಟು ಒಂದು. ಇದರ ಇತಿಹಾಸದ ರೀತ್ಯಾ ವಿಜಯನಗರ ಸೈನ್ಯದಲ್ಲಿ ಹರಪನಹಳ್ಳಿ ಹಾಗೂ ಹೊಸಪೇಟೆಯ ಬೇಡ ಜನಾಂಗದವರು ಸು. ೨೦೦ ವರ್ಷಗಳ ಕಾಲ ಸೇವೆ ಸಲ್ಲಿಸುತ್ತ ಬಂದಿದ್ದರು. ಯುದ್ಧದ ನಂತರ ಅಳಿದುಳಿದ ಬೇಡ ಜನಾಂಗದ ನಾಯಕರುಗಳಲ್ಲಿ ಒಬ್ಬನಾದ ದಾದಯ್ಯನೆಂಬುವನು ದೈವದಲ್ಲಿ ನಂಬಿಕೆ ಇಟ್ಟು ಕಣ್ಣು ಕಿತ್ತುಕೊಡುವ ಕಾಮಾರಿಯ (ಶಿವ) ಕೃಪೆಗೆ ಪಾತ್ರನಾದ ಕಣ್ಣಪ್ಪನ ಕುಲದವನು. ಗಂಡುಗಲಿ ಕಮಾರರಾಮನ ವಂಶದವನು. ಪರಮದೈವ ಭಕ್ತನು. ಇವನ ಮೂಲ ನೆಲೆ ಬಾಗಳಿ.

ಮಾಚಿನಾಯಕ ಅಥವಾ ಮುದ್ದಾನಾಯಕ ಎಂಬುವರಿಗೆ ನಾಲ್ಕು ಜನ ಪುತ್ರರು. ಅವರಲ್ಲಿ ಮೊದಲನೆಯವನೇ ಈ ದಾದಯ್ಯ. ಇವನು ಪರಮ ಶೂರನೂ, ಧೀರನೂ ಸತ್ಯವಂತ, ಧರ್ಮಪರ, ಉದಾರಿ, ದೈವಭಕ್ತ. ಪಟ್ಟಾಭಿಷೇಕವಿಲ್ಲದೆ ಹತ್ತುವರ್ಷ, ಪಟ್ಟಾಭಿಷೇಕವಾದ ಮೇಲೆ ಇಪ್ಪತ್ತಾರು ವರ್ಷ ಒಟ್ಟಿಗೆ ಮೂವತ್ತಾರು ವರ್ಷಗಳ ಕಾಲ ರಾಜ್ಯವಾಳಿದನು. ಕ್ರಿ.ಶ. ೧೮೦೦ರಲ್ಲಿ ಹರಪನಹಳ್ಳಿಯು ಬ್ರಿಟೀಷರ ವಶವಾಗುವ ಕಾಲದಲ್ಲಿ ಅವರಿಗೆ ಬರೆದು ಕೊಟ್ಟ ಕೈಫಿಯತ್ತಿನ ರೀತ್ಯಾ ಇವನಿಗೆ ಕ್ರಿ. ಶ. ೧೫೬೭ರಲ್ಲಿ ಪಟ್ಟಾಭಿಷೇಕವಾಯಿತು ಎಂದು ತಿಳಿದುಬರುತ್ತದೆ. ಕ್ರಿ.ಶ. ೧೫೮೦ರಲ್ಲಿ ದಾದಯ್ಯನಾಯಕನೂ ಮೊದಲ ಪಾಳೆಯಗಾರನಾಗಿದ್ದ ಎಂದು ಕೆಳದಿ ನೃಪವಿಜಯದಲ್ಲಿ ಉಲ್ಲೇಖಿಸಿದ ಹಾಗೆ ಇವನೇ ಮೂಲಪುರುಷ ಎಂದು ಹೇಳಬಹುದು. ಆದರೆ ಇವನು ಕ್ರಿ.ಶ. ೧೫೫೭ರಿಂದ ೧೫೯೩ ರವರೆಗೆ ಆಳಿದನೆಂದು ಹೇಳಿಕೆಗಳಿವೆ. ಈ ನಾಯಕ ವಿಜಯನಗರ ಅರಸರಿಂದ ಶ್ರೀ ಮನ್ಮಹಾನಾಯಕಾಚಾರ್ಯ, ಭಾಷೆಗೆ ತಪ್ಪದ ನಾಯಕರ ಗಂಡ, ಮೊರೆ ಹೊಕ್ಕವರ ಕಾಯ್ವ, ಮಾರಾಂತರ ಗೆಲುವ ಎಂಬ ಬಿರುಗಳನ್ನು ಪಡೆದಿದ್ದನು. ಹೀಗೆ ವಿಜಯನಗರದ ಮನ್ನಣೆಯನ್ನು ಪಡೆದ ಈತ ಹರಪನಹಳ್ಳಿಯ ಪ್ರಾಂತ್ಯವನ್ನು ಪಾಲಿಸುವುದಕ್ಕೆ ಅನುಕೂಲವಾದ ಸಿಬ್ಬಂದಿಯನ್ನು ಪಡೆದನೆಂದು ತಿಳಿಯಬಹುದು. ಈ ಮನೆತನದವರೂ ಈಗಲೂ ಹರಪನಹಳ್ಳಿಯಲ್ಲಿ ಇದ್ದಾರೆ.

ದಾದೇನಾಯಕ ಬೇಟೆಯಾಡುವುದರಲ್ಲಿ ನಿಸ್ಸೀಮನಾಗಿದ್ದನು. ಹೀಗೆಯೇ ತಮ್ಮ ಕುಲಪದ್ಧತಿಯ ಪ್ರಕಾರ ಬೇಟೆಯಾಡಲು ಹೋದಾಗ ಹುಲಿಯನ್ನು ಅಂಜಿಸುತ್ತಿದ್ದ ಇವನ ಬೇಟೆ ನಾಯಿಗಳು ಮೊಲಗಳನ್ನು ಕಂಡು ಹೆದರಿ ಓಡಿ ಹೋದದ್ದನ್ನು ಕಂಡು ಇವನಿಗೆ ಹೆದರಿಕೆಯಾಗಿ ಜೋಯಿಸರನ್ನು ಕೇಳಿದನಂತೆ. ಅವರು ದೈವಶಕ್ತಿಯನ್ನು ನೆನೆ ಎಂದರು. ಆಗ ಅವನಿಗೆ ದೈವವಾಣಿ "ಕುಮಾರಾ ಶ್ರೀ ತುಂಗಾಭದ್ರನದಿಯನ್ನು ದಾಟಿ ಬಾಗಳಿ ಎಂಬ ಪುಣ್ಯಕ್ಷೇತ್ರಕ್ಕೆ ನೀನು ಪುನಃ ಪ್ರಯಾಣ ಬೆಳೆಸು. ಅಲ್ಲಿ ನೀನು ರಾಜ್ಯವಾಳು" ಎಂದು ಹೇಳಿತಂತೆ. ಅಂದೇ ದಾದಯ್ಯ ಬಾಗಳಿಗೆ ಬಂದು ಆ ಗ್ರಾಮದ ಗೌಡರ ಮನೆಯಲ್ಲಿ ವಾಸಮಾಡತೊಡಗಿದ. ಅಲ್ಲಿಯೇ ಇದ್ದುಕೊಂಡು ದಾದಯ್ಯನು ಕೂಡಲೇ ಹರಪನಹಳ್ಳಿಯ ಎರಡು ಕೆರೆಗಳ ಮಧ್ಯದಲ್ಲಿ ಕೋಟೆಯನ್ನು ಸುಭದ್ರಗೊಳಿಸಿ ಎರಡು ಸುತ್ತುಗಳಾಗಿ ವಿಸ್ತರಿಸಿ ಸುತ್ತಲಿನ ಕಂದಕದ ಆಳವನ್ನು ಹೆಚ್ಚಿಸಿದನು. ತನ್ನ ಸೈನ್ಯವನ್ನು ಬಲಪಡಿಸಿಕೊಳ್ಳುತ್ತಾ ಆಡಳಿತದಲ್ಲಿ ಸುಧಾರಣೆ ತಂದು ಪ್ರಬಲ ಪಾಳೆಯಗಾರನೆನಿಸಿ, ಮದಲಗಟ್ಟ, ಕೋಗಳಿ, ಸಂಡೂರು, ನೀಲಗುಂದದವರೆಗೂ ವಿಸ್ತರಿಸಿ ತನ್ನ ಆಡಳಿತ ವ್ಯಾಪ್ತಿಗೆ ಸು. ೪೦೦ ಹಳ್ಳಿಗಳನ್ನು ಸೇರಿಸಿಕೊಂಡನು. ಪ್ರತಿವರ್ಷ ತನಗೆ ಆರ್ಥಿಕವಾಗಿ ಆದಾಯ ಬರುವಂತೆ ಮಾಡಿಕೊಂಡು ಪ್ರಬಲನಾದನು. ಇವನು ಅನೇಕ ಕೆರೆ, ಬಾವಿಗಳನ್ನು ನಿರ್ಮಾಣ ಮಾಡಿ ಕೃಷಿಗೆ ಹೆಚ್ಚು ಪ್ರಾಧಾನ್ಯತೆ ನೀಡುವ ಮೂಲಕ ಜನ ಮನ್ನಣೆ ಪಡೆದ.

ಚಿತ್ರದುರ್ಗದ ಪಾಳೆಯಗಾರ ಜಕ್ಕಣನಾಯಕ, ಆಡಳಿತ ನಡೆಸುತ್ತಿದ್ದಾಗ ಬಸವಾಪಟ್ಟಣದ ಕೆಂಗಣ್ಣನಾಯಕನು ಚಿತ್ರದುರ್ಗದ ಕೋಟೆಯನ್ನು ದುರ್ಬಲಗೊಳಿಸಲು ಮುತ್ತಿಗೆ ಹಾಕಿದನು. ಈ ಸಂದರ್ಭದಲ್ಲಿ ಶಿಸ್ತು ಮತ್ತು ಶೌರ್ಯಕ್ಕೆ ಹೆಸರಾದ ದಾದೇನಾಯಕನ ಸಹಾಯ ಯಾಚಿಸಿದಾಗ ದಾದಯ್ಯನು ಸಮಾಲೋಚಿಸಿ ತನ್ನ ಸೈನ್ಯದೊಂದಿಗೆ ಧಾವಿಸಿ ಕೆಂಗಣ್ಣನಾಯಕನನ್ನು ಮೂರೇ ದಿನಗಳಲ್ಲಿ ಸೋಲಿಸಿ ಹಿಮ್ಮೆಟ್ಟಿಸಿದನು. ಈ ಆಪತ್ತಿನಿಂದ ಪಾರುಮಾಡಿ ವಿಜಯ ಸಾಧಿಸಿದ ದಾದಯ್ಯನಿಗೆ ಜಕ್ಕಣನಾಯಕನು ತನ್ನ ಮಗಳಾದ ಹೊನ್ನನಾಯಕಿಯನ್ನು ಕೊಟ್ಟು ವಿವಾಹ ಮಾಡಿದ. ಇದರಿಂದ ದಿನೇ ದಿನೇ ಪ್ರವರ್ಧಮಾನಕ್ಕೆ

* ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩ ೨೭೬

ಬರುತ್ತಿದ್ದ ದಾದಯ್ಯನ ಉನ್ನತಿಯನ್ನು ಕಂಡು, ತನ್ನ ಮಗಳೊಂದಿಗೆ ಅವನ ಆಡಳಿತದಲ್ಲಿ ನೆರವಾದ. ಇದನ್ನೆಲ್ಲ ಕಂಡ ಹೊನ್ನನಾಯಕಿ ತನ್ನ ತಂದೆಗೆ ಗಂಡನ ವಿಷಯವನ್ನು ವಿವರವಾಗಿ ಪತ್ರದ ಮೂಲಕ ತಿಳಿಸಿದಳು. ಜಕ್ಕಣ್ಣನಾಯಕ ಸಂತೋಷದಿಂದ ಉಚ್ಚಂಗಿದುರ್ಗ ವನ್ನು ಅಳಿಯನಿಗೆ ಬಳುವಳಿಯಾಗಿ ಕೊಟ್ಟನು. ಚಿತ್ರದುರ್ಗದ ಕೆಲವು ಹಳ್ಳಿಗಳನ್ನು ನೀಡಿದನು.

ಹೀಗೆ ಪತಿಯೊಂದಿಗೆ ಸುಖವಾಗಿದ್ದ ಹೊನ್ನನಾಯಕಿ ಪತಿಯ ಪರಾಕ್ರಮವನ್ನು ಕಂಡು ಮಹಡಿಯ ಮೇಲೆ ಅವನನ್ನು ಹೊಗಳುತ್ತಾ ಹೋಗುವಾಗ ಮುಗ್ಗರಿಸಿಯೋ, ಕಾಲುಜಾರಿಯೋ ಆಕಸ್ಮಿಕವಾಗಿ ಮಹಡಿಯ ಮೇಲಿಂದ ಹೊಂಡದೊಳಕ್ಕೆ ಬಿದ್ದು ಪ್ರಾಣ ಬಿಟ್ಟಳು. ಇದರಿಂದ ದಾದೇನಾಯಕ ದಿಕ್ಕುಗೆಟ್ಟವನಂತೆ ಕುಳಿತಿರಲು, ಅವನ ದಿವಾನರು, ಪುರೋಹಿತರು, ಬೇರೆ ಸ್ತ್ರೀಯನ್ನು ಮದುವೆಯಾಗಲು ಒಪ್ಪಿಸಿದರು. ನಂತರ ಜರಿಮಲೆ ಪಾಳೆಯಗಾರನ ಮಗಳು ಚಂಪಾನಾಗತಿ, ಗುಡೇಕೋಟೆ ಪಾಳೆಯಗಾರನ ಮಗಳು ಬರ್ಮಾನಾಗತಿ, ಬಿಳಿಚೋಡೆ ಪಾಳೆಯಗಾರನ ಮಗಳು ಹನುಮನಾಯಕಿ ಎಂಬ ಮೂವರನ್ನು ಮದುವೆ ಮಾಡಿಸಿದರು.

ದಾದೇನಾಯಕ, ಹರಪನಹಳ್ಳಿಯ ದೇವರು ತಿಮ್ಮಲಾಪುರ ದಲ್ಲಿ ವೆಂಕಟರಮಣ ದೇವಾಲಯವನ್ನು ತನ್ನ ಆಡಳಿತದ ಕೊನೆಯಲ್ಲಿ ಕಟ್ಟಿಸಿದ.

ಹೀಗೆ ದಾದಯ್ಯ, ಹರಪನಹಳ್ಳಿ ಸಂಸ್ಥಾಪಕನೂ, ವಿದ್ಯಾಪಕ್ಷ ಪಾತಿಯೂ ಕವಿಗಳ ಪೋಷಕನು ಆಗಿದ್ದ. ಈತನ ಮೂಲ ಸ್ಥಳ ಬಾಗಳಿಯಾಗಿತ್ತು. ಉದಾಹರಣೆ ಎಂದರೆ ಆ ಗ್ರಾಮದ ಸುಪ್ರಸಿದ್ಧ ಶಿಲ್ಪ ಕಲೆಯ ಕಲ್ಲಿನಾಥ ದೇವಾಲಯದಲ್ಲಿದ್ದುಕೊಂಡು ದೇವ (ದೇಪ)ಕವಿ ರಾಜಪೋಷಿತನಾಗಿ ೧೫೪೨ರಲ್ಲಿ ಮರುಳ ಸಿದ್ಧಚರಿತ್ರೆಯನ್ನು ರಚಿಸಿದ್ದಾನೆ.



ಎಂ. ಜಿ. ನಾಗರಾಜ್*

# ಕೊಡಗಿನ ಮನೆಪೆದಗಳು (ಮನೆತನಗಳ ಹೆಸರು)

ಮನೆತನದ ಹೆಸರು ವಂಶದ ವ್ಯಕ್ತಿತ್ವದ ಸಂಕೇತವಾಗಿದೆ. ಕೊಡಗಿನಲ್ಲಿಯ ಕುಟುಂಬಗಳಿಗೆ ಸಾಮಾನ್ಯವಾಗಿ ಕಾಣಬರುವ ಮನೆತನದ ಹೆಸರನ್ನು ಮನೆಪೆದ ಎನ್ನುತ್ತಾರೆ. ವಂಶದ ಮೂಲ ಹಿರಿಯ ಅಥವಾ ವಂಶಕ್ಕೆ ಹೆಸರು ತಂದುಕೊಟ್ಟವನು ವಂಶದ ಗುರುಕಾರೊಣಪುರುಷ ಎನಿಸುತ್ತಾನೆ. ಗುರುಕಾರೊಣ ಪುರುಷೆಯರೂ (ಕಾರೊಣ ಸ್ತ್ರೀ) ಉಂಟು. ಗೌರವತರುವ ಹೆಸರಾದ ಮನೆಪೆದ, ಒಂದು ರೀತಿಯಲ್ಲಿ ಗೋತ್ರ, ಬಳಿ, ಬೆಡಗು ಎಂಬಂಥ ಮೌಲ್ಯ ಪರಂಪರೆಯನ್ನು ಹೊಂದಿದೆ. *Gotra (Lineage)- it is said the latest ancestor or one of the Latest ancestors of a person by whose name his family has been known for generations. Gotra really means 'herd' of family or clan.*[೧]

ಕೊಡಗಿನಲ್ಲಿ ಪ್ರಚಲಿತವಾಗಿರುವ ಕೊಡವ ಭಾಷೆಯ ಈ 'ಮನೆಪೆದ' ಎಂಬ ಶಬ್ದಕ್ಕೆ ಅಲ್ಲಿ ವಿಶೇಷ ಮಹತ್ವವಿದೆ. ನೀಂಗ *ದಾರ*? ಎಂದರೆ ಸರ್ವೇಸಾಮಾನ್ಯವಾಗಿ ಯಾರು? ಯಾರ ಮನೆಯವರು? ಎಂದು ವಿಚಾರಿಸಿಕೊಳ್ಳುವುದಾಗಿದೆ. ಅದೇ ನೀಂಗ *ದಾಡ*? ಎಂದರೆ ಯಾವ ಮನೆಪೆದ-ಮನೆತನದವರು ಎಂದು ನಿಖರವಾಗಿ ಗೌರವಯುತವಾಗಿ ಕೇಳುವುದಾಗಿದೆ. ಅದಕ್ಕೆ ಭಾವನಾತ್ಮಕ ಸಂಬಂಧವಿರುತ್ತದೆ, ಸ್ಥಳೀಯ ಸಂಸ್ಕೃತಿಯ ಸಂಕೇತವಿರುತ್ತದೆ. ಮನೆತನವನ್ನು ಎತ್ತಿ ನಿಲ್ಲಿಸಿದವರ ಹೆಸರಿನಲ್ಲಿಯೋ, ಪ್ರಸಿದ್ಧಿ ತಂದುಕೊಟ್ಟವರ ಹೆಸರಿನಲ್ಲಿಯೋ, ಪ್ರಸಿದ್ಧರಾದವರ ಹೆಸರಿನಲ್ಲಿಯೋ ಮನೆಪೆದಗಳಿರುತ್ತವೆ. ಸರಿ. ಹಾಗೆಂದು ಆ ಮನೆತನಕ್ಕೆ ಹೆಸರು ತಂದುಕೊಟ್ಟವನಿಗೆ, ಬೇರೆಡೆ ಹೋಗಿ ವಂಶಸ್ಥಾಪಿಸಿದವನಿಗೆ, ಅವನ ಹಿಂದಿನ ಹಿರಿಯರಿರಲಿಲ್ಲ ವೆನ್ನಲಾದೀತೇ? ಆದರೆ ಅಂಥ ಪುರುಷನ ಅಥವಾ ಸ್ತ್ರೀಯ ಹೆಸರಿನಲ್ಲಿದ್ದರೆ ವಂಶಕ್ಕೆ ಗೌರವ ಎಂದು ಪರಿಭಾವಿಸಿ ಮನೆಪೆದ ಹೇಳುವುದುಂಟು. ಆ 'ಪುರುಷ-ಸ್ತ್ರೀ', ವಂಶಕ್ಕೆ ಗುರು ಸಮಾನರು. ಕೆಲವು ವೇಳೆ ಹಿಂದೆ ಇದ್ದ ಮನೆಪೆದ ಅಥವ ಮನೆತನದ ಹೆಸರನ್ನು ಬದಲಾಯಿಸಿಕೊಂಡು ಪ್ರಸಿದ್ಧಿಗೊಂಡವನ ಹೆಸರನ್ನೋ, ಇನ್ನಾವುದೋ ಪರಿಣಾಮಕಾರಿ ಘಟನೆಯ ಕಾರಣವಾಗಿ ಒದಗಿದ ಹೆಸರನ್ನೋ ಇಟ್ಟುಕೊಂಡು ಹೊಸ ಮನೆಪೆದವನ್ನು ಚಾಲ್ತಿಗೊಳಿಸಿ ಕೊಂಡುದುದೂ ಉಂಟು. ಕುಂದಗ್ರಾಮದ 'ಚೋಳಂಡ'ಮನೆತನ ಕೊಡಗಿನ ಅತ್ಯಂತ ಪ್ರಾಚೀನ ಕೊಡವ ಮನೆತನಗಳಲ್ಲಿ ಒಂದಾಗಿತ್ತು. ಹಾಲೇರಿ ಅರಸ ದೊಡ್ಡವೀರರಾಜೇಂದ್ರ ಒಡೆಯನ ಕಾಲಕ್ಕೆ 'ಮನೆಯಪ್ಪಂಡ' ಎಂಬ ಹೆಸರಿನಲ್ಲಿ ರೂಢಿಗೆ ನಿಂತದ್ದು, ಮೇಲಿನ ಮಾತಿಗೆ ಒಂದು ಉದಾಹರಣೆ.[೨] ಕಾರೊಣ ಪುರುಷ, ಕಾರೊಣ ಪುರುಷೆಯ ಕಾರಣ ಒದಗಿರುವ ಮನೆಪೆದಗಳನ್ನು ಗಮನಿಸಿದರೆ ಅವು ಕೊಡಗಿನ ಮಾತೃಪ್ರಧಾನ ಹಾಗೂ ಪಿತೃಪ್ರಧಾನ ವ್ಯವಸ್ಥೆಯ ಸಹಯೋಗದಂತೆ ಕಾಣುತ್ತವೆ.

ಕೊಡಗಿನಲ್ಲಿ ಅಮ್ಮಕೊಡವರು, ಕೊಡವರು, ಗೌಡರು, ಹೆಗ್ಗಡೆ, ಐರಿರ, ದಲಿತ ಕೆಂಬಟ್ಟಿ, ಕೊಯವ, ಮಾರಂಗಿ, ಅಡಿಯ, ಯರವ, ಕೊಡವನಾಯಿಂದ, ಕೊಡವ ಮಡಿವಾಳ ಕುಡಿಯ, ಕಾಪಳ, ಜಮ್ಮಮಾಪಿಳ್ಳೆ ಮುಂತಾದವರ ಮನೆತನ ಗಳವರಿಗೆ ನಿರ್ದಿಷ್ಟ ಮನೆಪೆದಗಳಿವೆ. ಈ ಮನೆಪೆದಗಳು ಆಯಾ ಕುಟುಂಬಗಳಲ್ಲಿ ನಡೆದುಬರುವುದು ಆಯಾ ವಂಶದ ಹಿರಿಮೆ ಎಂದೇ ಭಾವಿಸಲಾಗುತ್ತದೆ.

ಈ ಮನೆಪೆದಗಳು, ಕುತ್ತಿ (ವಂಶ) ನಿಲ್ಲಿಸಿದವರ ಹೆಸರಿನಲ್ಲಿ ಸಾಮಾನ್ಯವಾಗಿ ಇರುತ್ತವೆ. ಅದನ್ನೆ 'ಕುತ್ತಿ ನಿಲ್ಲಿಸಿದವರು' ಎನ್ನುವುದು. ಆದರೆ ಎಲ್ಲ ಸಂದರ್ಭಗಳಲೂ ಕುತ್ತಿ ನಿಲ್ಲಿಸಿದವರ ಹೆಸರಿಗೇ ಅನ್ವಯ ಎನ್ನುವಂತಿಲ್ಲ. ಅದು ಅಡ್ಡ ಹೆಸರು ಎನ್ನುವಂತಿಲ್ಲ. ಇಲ್ಲಿ *Nick Name* (ವ್ಯಕ್ತಿನಾಮ-*personal or person's name*) ಇಡೀ ಕುಟುಂಬಕ್ಕೆ ಅನ್ವಯಿಸುವ *Surname* (ಪಾರಂಪರಿಕ ವಂಶನಾಮ) ಕೂಡ ಆಗಬಹುದು. ಸಾಂದರ್ಭಿಕ ಕಾರಣಗಳಿಂದ ಒಂದು ಕುಟುಂಬದ ವ್ಯಕ್ತಿಗೆ ಬೇರೆ ಮನೆತನದ ಮನೆಪೆದವೂ ಅಂಟಬಹುದು.

ಕಲಬುರ್ಗಿ ಅವರ ರೀತ್ಯಾ ಅಡ್ಡ ಹೆಸರು (< ಅರ್ಧ ಹೆಸರು)ಉತ್ತರ ಕರ್ನಾಟಕದಲ್ಲಿ *Surname* ಗೆ ಅನ್ವಯವಾದರೆ ದಕ್ಷಿಣ ಕರ್ನಾಟಕದಲ್ಲಿ *Nickname* ಎಂಬುದಕ್ಕೆ ಪರ್ಯಾಯ ಬಳಕೆ ಎನ್ನಲಾಗಿದೆ; ತಲೆತಲಾಂತರದಿಂದ ಬಂದಿದ್ದರೆ ವ್ಯಕ್ತಿಯ ತಲೆಮಾರಿಗೆ ಅದು ಹೆಸರಾಗಿ ನಿಂತು ಬಿಡುತ್ತದೆ. ಉತ್ತರಕರ್ನಾಟಕ ದವರು ಪ್ರಾಚೀನತೆಯ ಪ್ರಿಯರು. ಅವರಲ್ಲಿ ಕುಟುಂಬನಾಮ ಪ್ರಧಾನ. ಅವರು ಹೆಚ್ಚು ಜಾನಪದೀಯರು; ದಕ್ಷಿಣ ಕರ್ನಾಟಕದವರು ವರ್ತಮಾನನಿಷ್ಠರು. ಅವರಲ್ಲಿ ವ್ಯಕ್ತಿ ನಾಮ ಪ್ರಧಾನ, ಹೆಚ್ಚು ಶಿಷ್ಟಪದೀಯರು,[೩] ಎಂದಿದೆ. ಆದರೆ ದಕ್ಷಿಣ ಕರ್ನಾಟಕದಲ್ಲಿ ಸಾಮಾನ್ಯವಾಗಿ ಸಂಕ್ಷಿಪ್ತ ಸೂಚಿ ಎನಿಸಿದರೂ ಹುಟ್ಟಿದೂರು ವ್ಯಕ್ತಿಯ ಹೆಸರಿಗೆ ಅಂಟಿರುತ್ತದೆ. ಇನ್ನು ಕರ್ನಾಟಕದ ದಕ್ಷಿಣ ಪಾರ್ಶ್ವದ ಕೊಡಗಿನಲ್ಲಿ ವ್ಯಕ್ತಿಯ ಹೆಸರನ್ನು ಅಡ್ಡ

* 'ಅನರ್ಘ್ಯ, ಶ್ರೀ ಐಚನಿಕೃಪ', ೨೨೧, ೬೮ನೇ ಅಡ್ಡರಸ್ತೆ, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

ಹೆಸರೆನ್ನಲಾಗದೆ ಮನೆತನದ ಹೆಸರಿನೊಡನೆಯೆ ಅದು ಪ್ರಧಾನವಾಗಿರುತ್ತದೆ. ವ್ಯಕ್ತಿಗೆ ಹುಟ್ಟಿದೂರಿನ ಹೆಸರಿರುವುದಿಲ್ಲ. ಮನೆತನದ ಹೆಸರು, ತಂದೆಯ ಹೆಸರು ಮಾತ್ರ ವ್ಯಕ್ತಿಯ ಹೆಸರಿಗೆ ಸದಾ ಅಂಟಿಕೊಂಡೇ ಇರುವಂತೆ ಬರುತ್ತದೆ. ಕಾರಣ ಮನೆತನದ ಹೆಸರು ಹೇಳಿದರೆ ಸಾಕು, ಅದು ಹಾಗು ಅದರ ಮೂಲಮನೆ ಯಾದ ಐನ್ (ಅಯ್ಯನ) ಮನೆ ಇರುವ ಊರಿನ ಹೆಸರು ಕೊಡಗಿನವರಿಗೆ ತಲೆಮಾರುಗಳ ನೆನಪಿನಿಂದ ಅಂತರ್ಗತ ಚಾಲ್ತಿಯಾಗಿ ತಿಳಿದಿರುತ್ತದೆ. ಕೊಡಗಿನವರಲ್ಲಿ ಕುಟುಂಬನಾಮ, ವ್ಯಕ್ತಿನಾಮ ಎರಡೂ ಪ್ರಧಾನವಾಗಿರುವಲ್ಲಿ ಅವರು ಜಾನ ಪದೀಯರೂ ಹೌದು, ಶಿಷ್ಟಪದೀಯರೂ ಹೌದು.

ವ್ಯಕ್ತಿಯೊಬ್ಬ ಒಂಟಿಯಾಗಿ ಅಥವ ಕುಟುಂಬ ಸಹಿತ ವಲಸೆ ಬಂದು ಊರನ್ನು ಕಟ್ಟಿದರೆ, ಆ ಊರಿಗೆ ಅವನ ಹೆಸರು ನಿಲ್ಲಬಹುದು; ವಂಶಕ್ಕೂ ಅವನ ಹೆಸರು ನೆಲೆನಿಂತ ಊರಲ್ಲಿ ರೂಢಿಯಾಗಬಹುದು. ಅಥವಾ ಹಿಂದೆ ಇದ್ದ ಊರಿನ ಹೆಸರಿನ ನೆನಪಿನಲ್ಲಿ ಮನೆತನಕ್ಕೆ ಹೆಸರು ನಿಲ್ಲಬಹುದು. ವಲಸೆಯ ಹಾದಿಯಲ್ಲಿ ಪರಿಣಾಮ ಬೀರಿದ ವಸ್ತು, ಘಟನೆ ಅಥವಾ ಇದ್ದ ಪರಿಸರ ಮನೆತನದ ಹೆಸರಿಗೆ ಕಾರಣವಾಗಬಹುದು. ಉದಾಹರಣೆಗೆ ಕದಂಬವೃಕ್ಷದ ಕಾರಣ ಕದಂಬರು ಎಂಬ ವಂಶಿಕ ಹೆಸರು ಪ್ರಾಚೀನಕ್ಕಾದರೆ, 'ಅಜಗುಂಡಿ' ಎಂಬ ಕೆರೆಯ ಬಳಿ ಇದ್ದ ಕಾರಣ ಅಜಗುಂಡಿ ಎಂಬ ಮನೆಹೆಸರನ್ನು ಹೊಂದಿ ವಲಸೆ ಬಂದ ಕಡೆಯೂ **ಅಜಗುಂಡಿ** ಮನೆತನದವರೆಂದು ಹೆಸರಾದದ್ದೂ ವರ್ತಮಾನದಲ್ಲಿದೆ.[೩] 'ಕೀಲೇಟಿ' ಎಂಬ ಹೊಳೆದಾಟಿ ಕೊಡಗಿಗೆ ಬಂದು ನೆಲೆನಿಂತ ಕಾರಣ ಕೀಲೇಟಿರ ಎಂಬ ಮನೆಪದ ನಾಪ್ಲೋಕ್ಲು ಹಳೆತಾಲೂಕಿನ ಕೊಡವ ಮನೆತನವೊಂದಕ್ಕಿದೆ.

ಕೊಡಗಿನ ದಲಿತವರ್ಗದ ಕೆಂಬಟ್ಟಿಗಳಲ್ಲಿ ತಾವು ಸೇವೆ ಅಥವಾ ನೆರವು ಸಲ್ಲಿಸಿದ ಮಠ ಹಾಗು ಮನೆತನದ ಹೆಸರುಗಳ ಜೊತೆಗೆ ಕುಟ್ಟ ಅಥವಾ ಕುಡಿ ಎಂಬ ಶಬ್ದಗಳನ್ನು ಸೇರಿಸಿಕೊಂಡು ರೂಪುಗೊಂಡ ಮನೆಹೆಸರುಗಳಿವೆ; ಮಠತ್ ಕುಡಿ, ಬೆಳ್ಳಿಕುಟ್ಟಡ, ಮೇರಿಯಂಡಕುಡಿ, ಎಂದೆಲ್ಲ ಹೆಸರುಗೊಂಡಿವೆ. ಇದು ಒಂದು ರೀತಿಯಲ್ಲಿ ಅಧಿರಾಜರ ಹೆಸರಿನ ಭಾಗವನ್ನು ಆಧೀನ ರಾಜರು ಇಟ್ಟುಕೊಳ್ಳುತ್ತಿದ್ದ ರೂಢಿಯನ್ನು ನೆನಪಿಗೆ ತರುತ್ತದೆ. ಕೊಡಗಿನ ಕೊಂಗಾಳ್ವರಲ್ಲಿ ಪೂರ್ಣವಾಗಿ; ಮೊದಲ ಚಂಗಾಳ್ವರಲ್ಲಿ ಕೆಲವರ ಮಟ್ಟಿಗೆ, 'ಚೋಳ' ಎಂಬ ಉಪಾಧಿಯನ್ನು ಚೋಳರಿಂದ ಸೋತ ಕಾರಣ ಸೇರಿಸಿಕೊಂಡಂತೆ ಈ ಮನೆತನಗಳ ಹೆಸರುಗಳಿವೆ.

ಮನೆತನಗಳ ಹೆಸರನ್ನು ಗ್ರಾಮನಾಮವಾಚಿ, ವೃತ್ತಿ ನಾಮವಾಚಿ, ವಸ್ತುನಾಮವಾಚಿ ಎಂಬ ಸ್ಥೂಲವಿಂಗಡನೆ ಮಾಡಿರುವುದುಂಟು. ಆದರೆ ವ್ಯಕ್ತಿನಾಮವಾಚಿ, ಘಟನಾನಾಮ ವಾಚಿ, ವಲಸೆನಾಮವಾಚಿ, ಸೇವಾನಾಮವಾಚಿ, ಶೌರ್ಯ ನಾಮವಾಚಿ, ಭೂ ಹಿಡುವಳಿ ನಾಮವಾಚಿ ಇತ್ಯಾದಿ ಸೂಕ್ಷ್ಮ ನೆಲೆಯಲ್ಲಿಯೂ ಮನೆಪದಗಳನ್ನು ವಿವೇಚಿಸಬೇಕಾಗುತ್ತದೆ. ಇದಕ್ಕೆ ಉದಾಹರಣೆಯಾಗಿ *ಅಜ್ಜಿಕುಟ್ಟಿರ, ಮಾದಂಡ, ಕೊಲ್ಲೀರ, ಪುದಿಯೊಕ್ಕಡ, ಅಡ್ಡಂಡ, ದೇಚಕುಟ್ಟಡ, ಕೈಬಿಲಿರ, ಕಲ್ಯಾಟಂಡಕುಡಿ, ಕಲ್ಯಾಟಂಡ* ಇತ್ಯಾದಿ ಮನೆಪದಗಳ ಹೆಸರು ಕಾಣಬರುತ್ತದೆ. ಕೊಡಗಿನಲ್ಲಿ ಅಡ್ಡ ಹೆಸರು, ವ್ಯಕ್ತಿ ಹೆಸರು ಪರ್ಯಾಯವಾಗಿ ಪ್ರಧಾನ ಎನ್ನುವಂತಿಲ್ಲ. ವ್ಯಕ್ತಿಯ ಹೆಸರಿನಷ್ಟೇ ಮುಖ್ಯವಾದ ಅಥವಾ ಅದನ್ನು ಮೀರಿಯೋ ಇರುವಂಥ ಮುಖ್ಯ ಅಡ್ಡ ಹೆಸರು ಎನ್ನಲಾಗದೆ ಮನೆತನದ ಹೆಸರೂ ಪ್ರಾಮುಖ್ಯವಾಗಿ ಸಮಸಮತ್ವದಲ್ಲಿ ಕಾಣಬರುತ್ತದೆ. ಕೆಲವು ಸಂದರ್ಭಗಳಲ್ಲಿ ಆಧುನಿಕ ಹೆಸರುಗಳಂತು ಸಂಕ್ಷೇಪಗೊಂಡು ಸಂಕೇತ ಮೊದಲಕ್ಷರ ಸೂಚಿಯಾಗಿ (ಇನಿಷಿಯಲ್ಸ್) ಕುಟುಂಬ ಹಾಗು ಪಿತೃನಾಮ ಗಳಿಗಿದ್ದು ವ್ಯಕ್ತಿಯ ಹೆಸರು ಪ್ರಧಾನವಾಗಿ ವರ್ತಮಾನದಲ್ಲಿ ಕಾಣಬರುವುದುಂಟು. ಆದರೆ ವಂಶನಾಮವನ್ನು ಬಳಸಿಯೇ ಹೇಳಿಕೊಳ್ಳುವುದು ಇಂದಿಗೂ ಬಹಳ ಬಳಕೆಯಲ್ಲಿದೆ. ಪತ್ರಿಕೆಗಳಲ್ಲಿ ಅಲ್ಲಿನ ವ್ಯಕ್ತಿಗಳ ಹೆಸರನ್ನು ಹೇಳುವಲ್ಲಿ ಇದು ಸರ್ವೇಸಾಮಾನ್ಯ ವಾಗಿ ಕಂಡುಬರುತ್ತದೆ. ಅಲ್ಲದೆ ಇಂದೂ ಬರೆಯುವ ವಂಶವೃಕ್ಷದಲ್ಲಿ ಕುತ್ತಿ ನಾಮವು (ವಂಶ- ಕುಟುಂಬನಾಮ) ವ್ಯಕ್ತಿನಾಮದ ಜೊತೆ ಜೊತೆ ಕಾಣಬಂದು ಪ್ರಾಚೀನತೆ ಹಾಗು ಆಧುನಿಕತೆಯ ಸಮ್ಮಿಳನ ಕಾಣಬರುತ್ತದೆ. ವ್ಯವಹಾರದಲ್ಲಿ ಹೆಸರು ಹೇಳುವಾಗ ಮನೆತನದ ಹೆಸರು ಸಹಿತವಾಗಿ ಹೇಳುತ್ತಾರೆ. ಆಧುನಿಕ ದಾಖಲೆಗಳಲ್ಲಿ ಎರಡೂ ಪದ್ಧತಿಗಳ ಮಿಶ್ರಣವಿದ್ದರೂ ಪ್ರಾಧಾನ್ಯವಿರುವುದು ತಲೆಮಾರಿನ ಪದ್ಧತಿಗೇ ಆಗಿದೆ.

ಮಾದರ ಚೆನ್ನಯ್ಯ, ಮಡಿವಾಳ ಮಾಚಿದೇವ ಡೋಹರ ಕಕ್ಕಯ್ಯ ಇತ್ಯಾದಿ ೧೨ನೆಯ ಶತಮಾನದ ಶರಣರಲ್ಲಿ ಕಸಬು ಆಧಾರಿತ ಉಪಾಧಿಗಳಿದ್ದರೂ ಆ ವೃತ್ತಿನಾಮವಾಚಿ ಉಪಾಧಿಯು ಹಿಂದಿನ ಪಂಗಡವಾಚಿಯೂ ಆಗಿದೆ. ಅಲ್ಲಿ ನಿರ್ದಿಷ್ಟ ಮನೆತನ, ಕುಟುಂಬ ಎನ್ನುವ ಬದಲು ಒಂದು ನಿರ್ದಿಷ್ಟ ಸಮುದಾಯದ ಒಟ್ಟಾರೆ ನಾಮವಾಚಿಯಾಗಿ ಕಾಣುತ್ತದೆ. ಕೊಡಗಿನಲ್ಲಿ ವೃತ್ತಿವಾಚಿಯಾಗಿ ಅಥವಾ ಜಾತಿವಾಚಿಯಾಗಿ ಮಡಿವಾಳರ, ಐರಿರ (ಬಡಗಿ) ಕೊಯವ (ಕುಂಬಾರಿಕೆ), ಹರಿಜನರ, ಕೆಂಬಟ್ಟಿಯಡ (ದಲಿತ), ಮೇದರ ಎಂದೆಲ್ಲ ಜನಾಂಗವಾಚಿಯಾಗಿ ಹೇಳಿದರೂ ಪ್ರತ್ಯೇಕ ಮನೆಪದಗಳು ಆಯಾ ಜನಾಂಗೀಯ ಘಟಕಗಳಾಗಿ ಕಾಣಬರುತ್ತವೆ. ಕೊಡವ ಮಡಿವಾಳ, ಕೊಡವ ನಾಯಿಂದ, ಕೊಯವ ಮುಂತಾದವರಿಗೆ ಮನೆಪದಗಳಿವೆ. ಕೊಡವ, ಗೌಡ, ಹೆಗ್ಗಡೆ ಮುಂತಾದ ಜನಾಂಗದವರಲ್ಲಿ ಮನೆಪದಗಳಲ್ಲಿ ಜಾತಿ ಸೂಚಕತೆಯು ಅಷ್ಟಾಗಿ ಎದ್ದು ತೋರುವುದಿಲ್ಲ. ಕ್ವಚಿತ್ ಉದಾಹರಣೆಯಾಗಿ ಗೌಡಂಡ, ಶಿವಾಚಾಳಿಯಂಡ, ಪಟ್ಟಡ ಇತ್ಯಾದಿ ಮನೆಪದಗಳು ಕೊಡವ ಮನೆತನಗಳೆನಿಸುವ ಮುಂಚೆ ಯಾವ ಜಾತಿಯಿಂದ ಬಂದರು ಎಂಬ ಸೂಚನೆಯನ್ನು ತೋರುವಂತಿವೆ.

ವಸ್ತುನಾಮವಾಚಿಯಲ್ಲಿ ಯಾವುದೇ ಕುಟುಂಬ ಸಂಬಂಧದ ವಸ್ತುವೊಂದರ ಪ್ರಾಧಾನ್ಯಕ್ಕನುಸಾರವಾಗಿ ಮನೆತನದ ಹೆಸರಿರುವುದುಂಟು. ಕದಂಬ, ಚಲುಕ್ಯ (ಸಲ್ಲಕಿವೃಕ್ಷ), ಇದ್ದಂತೆ ಕಲ್‌ಮಾಡಂಡ, ಅಸೇಗೌಡಿ (ಹಸಿಗೋಡೆ), ಕೊಳ್ಳಿಮನೆ, ಮಾಂಗೆರ, ಮಾಂಗೆಕುಟ್ಟಿರ ಇತ್ಯಾದಿ ಮನೆಪೆದಗಳು ಕೊಡಗಿನಲ್ಲಿ ಕಾಣಬರುತ್ತವೆ. ಇದಲ್ಲದೆ ವ್ಯಕ್ತಿಗಳ ರೂಪ, ಗುಣ ಆಧಾರಿತ ಮನೆತನಗಳೂ ಪ್ರಾಚೀನ ಶಾಸನಗಳಲ್ಲಿ ಕಾಣಬರುತ್ತವೆ. ಮೇವುಂಡಿ ಮಲ್ಲಾರಿ ಅವರು, ಕ್ರಿ.ಶ. ೧೧೬೧ರ ಮನಗೂಳಿ ಶಾಸನದ 'ಹುರ್ವಿನವರು' ಎಂಬ ಶಬ್ದ ಮನೆತನದ ಸೂಚಿ ಎಂದಿದ್ದಾರೆ.[೬] ಕೊಡಗಿನಲ್ಲಿ ಅಚ್ಚಿಯಂಡ್ರ, ಅಪ್ಪಚ್ಚಿರ ಎಂಬ ಮನೆಪೆದಗಳು ಸ್ತ್ರೀ, ಪುರುಷ ಮೂಲವ್ಯಕ್ತಿಯದಾಗಿವೆ; ಆದೇಂಗಡ ಮನೆತನ ಸುಂದರ ರೂಪಿನವರ ಮನೆತನದ್ದಾಗಿದೆ ಹಾಗು ಪ್ರಾಚೀನ ಎಂಬ ಸಂಕೇತವೂ ಇದೆ. ಅಡ್ಡಂಡ, ಮನೆಯಪ್ಪಂಡ, ಕೊಡಂದೇರ ಮನೆಪೆದಗಳು, ಮನೆತನದವರ, ದಾನ, ಆಶ್ರಯ ನೀಡಿಕೆ, ಇತ್ಯಾದಿ ಗುಣ ಸೂಚಿಸುವಂಥಹವಾಗಿವೆ.

ಕೊಡಗು ಜಿಲ್ಲಾಗ್ಯಾಸೆಟಿಯರ್‌ನಲ್ಲಿ ಕೊಡವ ಜನಾಂಗದ ೮೭೫ ಮನೆಪೆದಗಳು, ಗೌಡ ಜನಾಂಗದ ೩೫೫ ಮನೆಪೆದಗಳು ದಾಖಲಾಗಿವೆ. ಬ್ರಹ್ಮಗಿರಿ ಕೊಡವಭಾಷಾ ಪತ್ರಿಕೆಯು ಕೊಡವ ಮನೆಪೆದಗಳನ್ನು ಕೆಲವಷ್ಟು ಹೊಸದಾಗಿ ಕೊಟ್ಟಿದೆ. ಆದರೂ ಇನ್ನಷ್ಟು ಮನೆಪೆದಗಳು ನನ್ನ ಶೋಧದಲ್ಲಿ ಸಿಕ್ಕಿದ್ದು ಅವನ್ನು ಮುಂದಿನ ಪುಟಗಳಲ್ಲಿ ದಾಖಲು ಮಾಡಿದೆ. ಇದನ್ನು ವಂಶಾವಳಿ ಪಟ್ಟಿ, 'ಶಿಸ್ತು', ಹಾಲೇರಿ ಅರಸರ ನಿರೂಪಗಳು, ಸನ್ನದುಗಳು, ಕ್ಷೇತ್ರಕಾರ್ಯ, ಜನಪದಗೀತೆಗಳಿಂದ ಸದ್ಯ ಹೆಕ್ಕಲಾಗಿದೆ. ಆದರೂ ಮತ್ತಷ್ಟು ಶೋಧದಲ್ಲಿ ಈ ಸಂಖ್ಯೆ ಹೆಚ್ಚು ಗೊಳ್ಳಬಹುದು.

ಎಂ.ಜಿ. ನಾಗರಾಜ್ ಅವರ 'ಕೆಂಬಟ್ಟಿ ಸಂಸ್ಕೃತಿ' ಕೃತಿಯಲ್ಲಿ ೧೨೧ ಕೆಂಬಟ್ಟಿ ಮನೆಪೆದಗಳು ದಾಖಲಾಗಿವೆ.[೭] ಅನಂತಕೃಷ್ಣ ಅಯ್ಯರ್ ಅವರ ಕೃತಿಯಲ್ಲಿ ಕೆಂಬಟ್ಟಿಗಳ ೯ ಮನೆಪೆದಗಳು[೮] ಮಾತ್ರ ಇದ್ದು ಅವು ಈ ೧೨೧ ಸಂಖ್ಯೆಯ ಪಟ್ಟಿಯಲ್ಲಿ ಸೇರಿಸಿಕೊಂಡಿವೆ. ಡಾ. ಪಿ. ಎನ್. ಹರೀಶ್ ಅವರ 'ಎರವರ ಸಂಸ್ಕೃತಿ' 'ಕೃತಿಯಲ್ಲಿ, ಕುಲವನ್ನು ಸೂಚಿಸುವ ೩೩ ಮನೆಪೆದ ಗಳಿವೆ. ಎರವರಲ್ಲಿ ಅದು ಚೆಮ್ಮ (ವಂಶ) ಎನಿಸಿ ಕೊಳ್ಳುತ್ತದೆ.[೯] ಬೆಟ್ಟಕುರುಬರು, ಕಾಪಳರು ಜನಾಂಗದ ಮನೆಪೆದಗಳು ಕ್ವಚಿತ್ತಾಗಿ ಉಕ್ತವಾಗಿವೆ.

ಪಟ್ಟೋಲೆ ಪಳಮೆಯ[೧೦] ಹಾಡುಗಳಲ್ಲಿ ಮನೆಪೆದಗಳು ಸಾಕಷ್ಟು ಕಾಣಬರುತ್ತವೆ. ಹಾಗೂ ಅವುಗಳ ಮೂಲರೂಪದಲ್ಲಿ ದಾಖಲಾಗಿವೆ (ಪಾಂಡಿ, ಪರದ, ಕಳ್ಳಿ, ಬೊಳ್ಳಿ, ಅಚ್ಚುಕೂಟ ಚಾಂಡಾಳ ಇತ್ಯಾದಿ); ಕುಡಿಯರ ಮನೆಪೆದಗಳು ಡಾ. ಡಿ.ಬಿ. ರಾಮಚಂದ್ರಾಚಾರ್ ಅವರ 'ಕುಡಿಯರ ಸಂಸ್ಕೃತಿ' ಕೃತಿಯಲ್ಲಿ ಸೂಚಿತವಾಗಿವೆ.

ಅಮ್ಮಕೊಡವ, ಹೆಗ್ಗಡೆ, ಐರಿರ, ಕೊಯವ, ಜಮ್ಮ ಮಾಪಿಳ್ಳೆಗಳ ಜನಾಂಗಗಳ ಮನೆಪೆದಗಳು ದಾಖಲಾಗಿಲ್ಲ. ಅವುಗಳ ಕ್ವಚಿತ್ ಉಲ್ಲೇಖಗಳು 'ಹರತಿಸಿರಿ', 'ಇತಿಹಾಸ ದರ್ಶನ' ಇತ್ಯಾದಿ ಸಂಪಾದಿತ ವಿದ್ವತ್ ಲೇಖನಗಳ ಗ್ರಂಥಗಳಲ್ಲಿ ಬಂದಿವೆ. ಹಾಲೇರಿ ಅರಸರ ಶಿಸ್ತು, ಹುಕುಂನಾಮೆ ನಿರೂಪ, ಸನ್ನದುಗಳಿಂದ ಹಾಗು ಆಂಗ್ಲರ ಕಾಲದ ಸನ್ನದು ನಿರೂಪಗಳಿಂದ ಅವನ್ನು ಹೆಕ್ಕಬೇಕಿದೆ.

**ಕೊಡಗಿನ ಶಾಸನಗಳಲ್ಲಿ**[೧೧] ಅಲ್ಲಿನ ಮನೆಪೆದಗಳ ಯಾ ಮನೆತನಗಳ ಹೆಸರುಗಳ ಪ್ರಾಚೀನತೆಯ ನಿದರ್ಶನವಿದೆ.

ಗಂಗರ ಕೂಟಶಾಸನವೆನ್ನಲಾದ ಮಡಿಕೇರಿಯ ಕ್ರಿ.ಶ. ೪೬೬ರದೆನ್ನುವ ತಾಮ್ರಪಟವು ೯ನೇ ಶತಮಾನದ ಲಿಪಿ ಯಲ್ಲಿದ್ದು '**ಕೊಟ್ಟಗರ** ಬದಣಗುಪ್ಪೆ' ಎಂಬ ಶಬ್ದವನ್ನು ಹೊಂದಿದೆ. ಇಲ್ಲಿ ಸ್ಥಳನಾಮಕ್ಕೆ ಅಂಟಿಬಂದ ವಂಶ ಅಥವ ಮನೆತನದ ಕಸಬು ಮೂಲದ ಹೆಸರು ತಾಗಿರುವಂತಿದೆ. ಕ್ರಿ.ಶ. ೮೮೮ರ ಕೋತೂರು ಶಾಸನ (ಸಂಖ್ಯೆ ೯೭)ದಲ್ಲಿ **ಜಡಲ** ಎಱು'ಯಂಗ ಗಾವುಣ್ಡ ಎಂದಿದೆ. ಬಹುಶಃ ಜೌಗು ಅಥವ ತೀರ ಶೀತಲನೆಲೆಯೊಂದನ್ನು ಸೂಚಿಸುವ ನಿಸರ್ಗವಾಚಿ ಶಬ್ದವಾಗಿ, ಮನೆತನಕ್ಕೆ ಆ ಶಬ್ದ ಅಂಟಿರ ಬಹುದು; ಜಡಲಗ್ರಾಮದವ ಎಂದಾಗಬಹುದು; (ಜೈನ ಗೌಡ!) ಗೌಡ ಜನಾಂಗದ ಕುಟುಂಬವೊಂದರ ಹೆಸರೂ ಆಗಿರಬಹುದು; ಗ್ರಾಮನಾಮವಾಚಿಯಾಗಿ ಮನೆತನಕ್ಕೆ ಹೆಸರು ನಿಂತಿರಬಹುದು. ದ. ಕೊಡಗಿನ ಅಂದಿನ ಜೈನ ಪರಿಸರದಲ್ಲಿಯ ಗ್ರಾಮದ ಈ ಶಾಸನ ಈ ಎಲ್ಲ ಊಹೆಗಳಿಗೆ ಅವಕಾಶ ನೀಡುತ್ತದೆ. ಜೊತೆಗೆ ಮನೆತನದ ಹೆಸರುಗಳ ಪ್ರಾಚೀನ ರೂಪಕ್ಕೆ ಸಾಕ್ಷಿಯೂ ಆಗುವಂತಿದೆ. ಮಡಿಕೇರಿಯ ಕ್ರಿ.ಶ. ೧೦೦೧ರ ಶಾಸನದಲ್ಲಿ (ಸಂ. ೨) 'ಗಣಗೂರ ಬಿಹಗಾಮುಣ್ಡನ ಮಗಂ ಹಞ್ಚಮಶೆಟ್ಟಿ' ಎಂದಿದೆ. ಇದೊಂದು ರೀತಿ ಮನೆಪೆದಗಳ ಉಗಮಕ್ಕೆ ಪ್ರೇರಣಾತ್ಮಕ ಸೂಚಿಯಾಗಿ ಕಾಣಬರುವಂತಿದೆ. ತಂದೆ ಹಾಗು ಗ್ರಾಮದ ಹೆಸರೂ ಅಂಟಿಕೊಂಡಿರುವುದು ಅಂದಿನ ರೂಢಿಯ ಕಲ್ಪನೆಯನ್ನು ಒದಗಿಸಿಕೊಡುತ್ತದೆ. ಈ ವ್ಯಕ್ತಿ ಒಕ್ಕಲಿಗ ಗೌಡನೋ, ಜೈನ ಗೌಡನದೋ ಎಂಬ ಶಂಕೆ ಬಂದರೂ 'ರಾಮೇಶ್ವರಂ ಅರ್ಚಿ' ಎಂಬ ಕ್ರಿಯಾರ್ಥಕ ಶಬ್ದ ಶಾಸನದಲ್ಲಿರುವುದರಿಂದ ಬಹುಶಃ ಒಕ್ಕಲಿಗ ಗೌಡ ಜನಾಂಗಕ್ಕೆ ಸೇರಿದ ಹೆಸರು 'ಹಞ್ಚಮಶೆಟ್ಟಿ' ಯದಾಗಿರಬೇಕು. ಕ್ರಿ.ಶ. ೯೧೧ರ ಬೇಳೂರಿನ ಹೊಸ ಶಾಸನದಲ್ಲಿ[೧೨] 'ಯಳೆಫಟು'ಯ ಶಕ್ರಮನ್' ಎಂಬುದು ಗ್ರಾಮನಾಮವಾಚಿ ಉಪಾಧಿಯನ್ನು ಹೊಂದಿದೆ. **ಯಳೆಫಟು**'ಯ ಇಂದಿನ ಉಲುಗುಲಿ ಗ್ರಾಮ. ಮನೆತನದ ಹೆಸರು ಹುಟ್ಟೂರಿನ ಅಥವಾ ಬಾಳಿದ ಊರಿನ ಹೆಸರಿನಲ್ಲಿ ಐಕ್ಯಗೊಂಡಿದ್ದು ಅದನ್ನು ಸಾರ್ವತ್ರೀಕರಣವಾಗಿಸುತ್ತಿದ್ದ ರೂಢಿಯಂತೆ ತೋರುತ್ತದೆ. ಇಂಥ ಸಂದರ್ಭದಲ್ಲಿ ಮನೆಪೆದದ ಕುಟುಂಬವಾಚಿ ನಿಖರತೆಯನ್ನು ಹೇಳುವುದು ಕಷ್ಟವಾಗುತ್ತದೆ. ಅದು ಅಂದಂದಿನ ರೂಢಿಯಷ್ಟೆ.

ಇದೇ ಶಾಸನದಲ್ಲಿ 'ಕಬ್ಬಿಯರ ವಿತ್ತಿಯ ದೇವಿರಯ', ಎಂದಿದೆ. 'ಕಬ್ಬಿ' ಎಂಬ ಶಬ್ದಕ್ಕೆ ಧಾನ್ಯ, ಕುದುರೆ ಕಡಿವಾಣ ಎಂಬ ಅರ್ಥಗಳಿರುವಲ್ಲಿ ಅನ್ವಯಿಕವಾಗಿ ಕೃಷಿ, ಕುದುರೆ ಸಾಕಣೆ, ಇತ್ಯಾದಿ ಕಸಬು ಮೂಲದ ಅರ್ಥವನ್ನು ಮಾಡಬಹುದು. ಈ ಶಾಸನವೊಂದು ಕೊಡಗಿನ ಮೊದಲ ವೀರ ವೇಳವಾಳಿ ವೀರಗಲ್ ಶಾಸನವಾಗಿರುವಲ್ಲಿ ಬಹುಶಃ ಬೇಸಾಯ ಮನೆತನದ ಅಥವಾ ಕುದುರೆ ಸಾಹಣಿ ವಂಶದವರಾಗಿ ಶಕ್ರಮನ್ ಹಾಗು ದೇವಿರಯ್ಯ (ಕಲ್ಲನ್ನಿರಿಸಿದವ) ಕಾಣಬರುತ್ತಾರೆ. ಹೀಗಾಗಿ ಕಸಬು ಮೂಲದ ಮನೆತನದ ಹೆಸರು ಶಾಸನದಲ್ಲಿ ದಾಖಲಾಗಿರುವಂತಿದೆ. ಕ್ರಿ.ಶ. ೧೪೯೮ರ ತಾಕೆರಿ ಶಾಸನದಲ್ಲಿ (ಸಂಖ್ಯೆ ೪೪) 'ಹಾನಗಲ ಲಿಂಗೇಗಲುಡನಿಗೆ' ಗ್ರಾಮನಾಮವಾಚಿ ಉಪಾಧಿ ಇದ್ದರೆ (ತಾಕೆರಿ ಗ್ರಾಮದ ನೆರೆಗೆ ಹಾನುಗಲ್ಲು ಇದೆ), **ಗಲುಳಿ** ನಂಜರಪ್ಪಯ್ಯನಿಗೆ ಕಸಬು ಆಧಾರಿತ ಮನೆಹೆಸರಿದೆ. ೧೦ನೇ ಶತಮಾನದ ಹಾರೋಹಳ್ಳಿ ಶಾಸನದಲ್ಲಿ (ಸಂಖ್ಯೆ ೯೦) 'ತೆಯಲಯ್ಯ ಜೂಬು' ಎಂಬ ಹೆಸರು ದಲಿತವರ್ಗದ ವ್ಯಕ್ತಿಗೆ ಅನ್ವಯವೆಂಬಂತಿದೆ. 'ತೆಯ' ಹೊಡೆಯುವುದು ಎಂದರೆ ಕೆಸರುಗದ್ದೆ ಸಮಮಾಡಲು ನಾಟಿಗೆ ಹದಮಾಡುವುದು, ಅದಕ್ಕೆ ಬಳಸುವ ಶಬ್ದ. ಕೊಡಗಿನ ಮೂಲನಿವಾಸಿ ದಲಿತವರ್ಗದ ಕೃಷಿಕಾರರಾದ ಕೆಂಬಟ್ಟಿಗಳು ಪಾರಂಪರಿಕವಾಗಿ ಈ ಕೆಲಸ ಮಾಡಿಕೊಂಡು ಬಂದಿದ್ದಾರೆ. ಇಂಥ ಹೆಸರೂ ಅವರಲ್ಲಿ ಕಾಣಬರುತ್ತದೆ. ಹೀಗಾಗಿ ಕೃಷಿಕ ಕಸುಬಿನ ಕಾರಣ ಬಂದ ಮನೆಹೆಸರು ಇದಾಗಿರುವಂತಿದೆ.

೧೧ನೇ ಶತಮಾನದ ನಲ್ಲೂರು ಶಾಸನದಲ್ಲಿ (ಸಂಖ್ಯೆ ೧೦೦) ಯಮಚ್ಚರಿ ಜಕ್ಕಿಯಬ್ಬೆ, ದದ್ಯರ ಮಂತ್ರಕಿ ಜಕ್ಕಿಯಬ್ಬೆ, ಶ್ರಾವಕಿ ಚನ್ದಿಯಬ್ಬೆ ಗಾವುಣ್ಡೆ ಇತ್ಯಾದಿ ಹೆಸರುಗಳಲ್ಲಿನ ಉಪಾಧಿಗಳು, ಗುಣವಾಚಕತ್ವ, ಧಾರ್ಮಿಕ ಆಚಾರ ಹಾಗು ವೃತ್ತಿ ಪ್ರಾಮುಖ್ಯದ ಹಿನ್ನೆಲೆಯಲ್ಲಿದ್ದು ಮನೆಪದಗಳಿಗೆ ಪ್ರೇರಕ ಶಬ್ದ ಗಳಂತೆ ಗೋಚರಿಸುತ್ತವೆ. (ಯಮಚ್ಚರಿ : ಅಷ್ಟಾಂಗ ಯೋಗದ ಮೊದಲನೆಯ ಅಂಗವಾಗಿ ಅದರ ಸಾಧನೆಯ ಗುಣವಾಚಕ ಶಬ್ದವಿರಬಹುದು. ದದ್ಯರ ಮಂತ್ರಕಿ ಎಂಬಲ್ಲಿ ತೀವ್ರ ಜಿನಭಕ್ತಿ ಪ್ರೇರಿಸುವ ಗುಣವಾಚಕತ್ವದ ಸೂಚನೆ ಇರಬಹುದು). ಕ್ರಿ.ಶ. ೧೦೦೪ರ ಮಾಲಂಬಿ ಶಾಸನದಲ್ಲಿ (ಸಂಖ್ಯೆ ೬೫) ***ಗಾವುಣ್ಡ ರಾಚಮ್ಮನ ವಂಶಮ ಸಾಕ್ಷಿ*** ಎಂದಿರುವುದು ಮನೆಪದದ ಒಂದು ಪ್ರಾಚೀನ ವ್ಯಕ್ತಿನಾಮವಾಚಿ ರೂಪವೆನಿಸುವಂತಿದೆ. ಸ್ಥಾನಮಾನ ಅಥವಾ ವೃತ್ತಿವಾಚಿಯಾಗಿ ಅಂಟಿಕೊಂಡ ಮನೆಹೆಸರಿನಂತಿದೆ. ಪುರುಷರಿಗೂ ಆ ಕಾಲಕ್ಕೆ 'ಅಮ್ಮ' ಎಂಬ ಉಪಾಧಿ ಇದ್ದ ಸೂಚನೆ ಕಾಣುತ್ತದೆ. ಇಂದಿಗೂ ಕೊಡಗಿನಲ್ಲಿಯ ಕೆಲವು ಮನೆತನಗಳ ಪುರುಷ ಹಿರಿಯರಲ್ಲಿ ಇಂಥ ಬಗೆಯ ಹೆಸರುಗಳು ಕಾಣಬರುತ್ತವೆ. (ಕಲ್ಯಾಟಂಡ ಅಚ್ಚಮ್ಮ, ಮೂಕಳೀರ ಅಯ್ಯಮ್ಮ). 'ಗಾವುಣ್ಡ ರಾಚಮ್ಮ' - ಗಂಗರಸರ ಹೆಸರಿನ ಪ್ರಭಾವವಾಗಿಯೂ ಹೆಸರುಗೊಂಡಂತಿದೆ (ಗಂಗರ 'ರಾಚಮಲ್ಲ' ಹೆಸರನ್ನು ಗಮನಿಸಿ).

ಕ್ರಿ. ಶ. ೧೧೭೫ರ ನಂದಿಗುಂದ ಶಾಸನದಲ್ಲಿ (ಸಂಖ್ಯೆ ೮೭) 'ಬಲ್ಲೆಯ ದಣ್ಡನಾಯಕ ಹಡಿಯಱ ಕಿರಿಕಣ ಯಿಂತ್ತಿನಿಬರು' ಎಂದಿದೆ. ಇಲ್ಲಿ ಗ್ರಾಮನಾಮ ಅಥವಾ ಶೌರ್ಯಸೂಚಕ ಅಥವಾ ವ್ಯಕ್ತಿನಾಮಸೂಚಕ ಉಪಾಧಿಯೊಡನೆ ಹೆಸರುಗಳಿರುವಂತಿದೆ. ಪಡಿಎಱ (ಹಡಿಯಱ) ಎಂದರೆ ಬಾಗಿಲ ಪ್ರತಿಹಾರಿ ಅಥವ ಮನೆಮಗ ಎಂಬರ್ಥದಲ್ಲಿಯೂ ಗಮನಿಸಬಹುದು. ಅಲ್ಲದೆ, 'ಹಡಿಯಱ', ಕುಮಾರವೃತ್ತಿಯ ಅಥವಾ ಬೀಳಾನುವೃತ್ತಿ ರೀತಿಯ ಶಬ್ದವಾಗಬಹುದು. ಇಲ್ಲಿ ದಂಡನಾಯಕ ಸ್ಥಾನಮಾನದಲ್ಲಿರುವ ವ್ಯಕ್ತಿಯೊಡನೆ 'ಹಡಿಯಱ' ಎಂಬ ಶಬ್ದ ಬಂದಿರುವುದು ಗಮನಾರ್ಹ. ಹೀಗಾಗಿ ಕುಮಾರವೃತ್ತಿಯ ಯಾ ಬೀಳಾನುವೃತ್ತಿಯ ಮನೆಮಗ ಕಿರಿಕಣನ (ಕೃಷ್ಣ!) ವಂಶನಾಮ 'ಹಡಿಯಱ' ಆಗಿರುವಂತಿದೆ. ಜೊತೆಗೆ ಇನ್ನೊಂದು ಶಾಸನದಲ್ಲಿ (ಗಣಗೂರು ೫೨) ಹಡಿಯಱ(ಪಡಿಎಱ) ಎಂಬ ಉಪಾಧಿ 'ಶ್ರೀಮನ್ಮಹಾ ಪ್ರಧಾನ ಪಡಿಎಱ ಬಾನಮ್ಮರಾಜ'ನಿಗಿರುವುದೂ ಮೇಲಿನ ಮಾತುಗಳಿಗೆ ಪೋಷಕವಾಗುವಂತಿದೆ. ಇಂದು ಹೆಗ್ಗಡೆ ಜನಾಂಗದಲ್ಲಿ 'ಪಡಿಂಞಾರಂಡ' ಎಂಬ ಮನೆಪದ ಕಿಗ್ಗಾಲು ಗ್ರಾಮದಲ್ಲಿ ಇರುವುದು ಗಮನಾರ್ಹವಾಗಿದೆ. ಕ್ರಿ.ಶ. ೧೧೭೬ರ ಮಡಿಕೇರಿ ಶಾಸನದಲ್ಲಿ ನಯಕೀರ್ತಿ ಜೈನಮುನಿಯ ಶಿಷ್ಯ ಹರಿಯಣ್ಣ ಹೆಗ್ಗಡೆ ಅಶ್ವಾಧ್ಯಕ್ಷ ಆಗಿದ್ದ ವಿಷಯವಿರುವಲ್ಲಿ ಜೈನ ಹೆಗ್ಗಡೆ ಮನೆಪದಗಳೂ ಇದ್ದ ಸೂಚನೆ ಆಗಿದೆ.

ಕ್ರಿ. ಶ. ೧೨೫೫ರ ನಿಡುತ ಶಾಸದಲ್ಲಿ ಕಹಿಗೋಡಿನ ಬೀರಗಲುಡ, ೧೨೭೮ರ ಅಲ್ಲಿಯ ಇನ್ನೊಂದು ಶಾಸನದಲ್ಲಿ *ಕೊಱಕಡಹು ಹರಿಯಂಣ, ಕೊಱಕಡಹು* ವೀರಣ್ಣ ಎಂಬ ಹೆಸರಿನಲ್ಲಿಯ ಉಪಾಧಿಗಳು ಬಹುಶಃ ಗ್ರಾಮನಾಮವಾಚಿ ಎನಿಸಿದರೆ ೧೨ ನೇ ಶ.ದ . ಮಡಿಕೇರಿ ಶಾಸನದಲ್ಲಿ (ಸಂಖ್ಯೆ ೩) ಹರಿಯಣ್ಣ ಹೆಗ್ಗಡೆ ಎಂದು ಜನಾಂಗವಾಚಿ ಉಪಾಧಿ ಕಾಣಬರುತ್ತದೆ. ಅವೆಲ್ಲ ಮನೆಪದಗಳಿಗೆ ಪ್ರೇರಕಗಳೆನ್ನಬಹುದು.

ಕ್ರಿ.ಶ. ೧೪೯೬ರ ಮುಳ್ಳೂರು ಶಾಸನದಲ್ಲಿ (ಸಂಖ್ಯೆ ೮೦) ***ಬೊಪ್ಪಗೌಡಿಯ*** ಮಲ್ಲೆಯ, ಬೊಪ್ಪಗೌಡಿಯ ಮಲ್ಲೆಯ ಮದ್ದೆಯ ಎಂಬಲ್ಲಿ ಮಾತೃಪ್ರಧಾನ ಸ್ತ್ರೀವಾಚಿ ವಂಶನಾಮ ಪುರುಷರಿಗೆ ಅಂಟಿರುವುದು ಕಾಣುವಂತಿದೆ. ಚಿಕ್ಕಮಂಡೂರಿನ ಕ್ರಿ.ಶ. ಸು. ೧೬೪೦ರ ಸುಮಾರಿನ ಅಚ್ಚುನಾಯಕನ ಸಾಕುತಾಯಿಯ ಹೆಸರು ಮೇದಮಾಡ ಅಯ್ಯವ್ವಗೌಡಿ ಎಂದಿದ್ದು ಪ್ರತ್ಯೇಕ ಮನೆಪದವೂ ಇದೆ. ಆದರೆ 'ಬೊಪ್ಪ ಗೌಡಿಯ' ಎನ್ನುವಾಗ ಆಕೆಯ ವಂಶದವರು ಎಂಬ ಶಕ್ತಿಯುತ ಮನೆಹೆಸರಿನಂತೆಯೆ ಇಲ್ಲಿಯೂ ಕಾಣುತ್ತದೆ. ನಾಪೋಕ್ಲುವಿನ ಹಳೆ ತಾಲ್ಲೂಕಿನಲ್ಲಿ 'ಬೊಪ್ಪಂಡ' ಮನೆತನದ ಹಿರಿಯರ ಸ್ಮಾರಕಕಟ್ಟಡವಾದ 'ಕೈಮಡ' ಇದೆ. ಚಂಗಾಳ್ವ ಬೊಪ್ಪದೇವನ (ಕ್ರಿ.ಶ. ೧೨೪೫) ವಂಶೀಕರೆಂದು ದಿ|| ಬೊಪ್ಪಂಡ ಎನ್. ಕಾಳಪ್ಪನವರು ಹೇಳಿಕೊಂಡದ್ದುಂಟು. ಹೀಗಾಗಿ

'ಬೊಪ್ಪಗೌಡಿಯ;' ಕೇವಲ ಗೌಡಾಳಿಕೆಯ ಸ್ಥಾನಮಾನ ಸೂಚನೆಯಲ್ಲದೆ ವಂಶನಾಮಸೂಚಿಯಾಗಿ ಬಳಸಿರುವಂತಿದೆ.

೧೩ನೇ ಶತಮಾನದ ಗಣಗೂರು ಶಾಸನದಲ್ಲಿ (ಸಂಖ್ಯೆ ೫೨) ಈಗಾಗಲೇ ಹೇಳಿದಂತೆ 'ಶ್ರೀಮನ್ಮಹಾಪ್ರಧಾನ ಪಡಿಎರ (ಹಡಿಯಜಿ!) ಬಾನಮ್ಮ ರಾಜನ ಪುತ್ರ ಹೆಗ್ಗಡೆ ನಾಕಣಂ' ಎಂದಿದೆ. ಇಲ್ಲಿ 'ಪಡಿಎರ' ಎಂಬ ವೃತ್ತಿಸೂಚಕ ವಂಶನಾಮ, ಮಾತೃಪ್ರಧಾನ ವ್ಯವಸ್ಥಾಸೂಚಕ ಹೆಸರಾದ 'ಬಾನಮ್ಮ' ಹಾಗು ಜನಾಂಗೀಯ ಉಪಾಧಿಯಾದ 'ಹೆಗ್ಗಡೆ' ಇವೆಲ್ಲ ಇವೆ. ಇಲ್ಲಿ 'ಪುತ್ರ' ಎಂಬುದಷ್ಟೆ ಇರಲು ಮನೆಮಗ ಎಂಬುದಕ್ಕೆ ಬಹುಶಃ ತಾಳೆ ಆಗಲಾರದು. ಬಹುಶಃ ಬಾನಮ್ಮರಾಜನವರೆಗೆ ಇದ್ದ 'ಪಡಿಎರ' ವಂಶನಾಮ, ಅವನ ಪ್ರಸಿದ್ಧಿಯ ನಂತರ ಅವನ ವಂಶಿಕ ಶಾಖೆಗಳಿಗೆ ಬಾನಂಡ, ಬಾನಂಗಡ ಎಂಬ ಮನೆಪೆದಗಳು ಬಂದಿರಬಹುದೇ? ಎನಿಸುತ್ತದೆ. ('ಬಾನಮ್ಮ' ಅಮ್ಮಕೊಡವರ ಮನೆಪೆದವಿರಬಹುದೆ?) ಇದು ಬಾಣವಂಶದ ಕಾರಣ ಬಂದ ಮನೆಪೆದವಲ್ಲ. ಕಾರಣ ಕೊಡಗಿನಲ್ಲಿ ಬಾಣವಂಶದವರ ಆಳ್ವಿಕೆ ಇರಲಿಲ್ಲ, ಎಂಬುದನ್ನು ವಿದ್ವಾಂಸರು ಸ್ಪಷ್ಟಗೊಳಿಸಿದ್ದಾರೆ.[೧೩] ಪಟ್ಟೋಲೆ ಪಳಮೆಯ ಐವ ಮಕ್ಕ ದೇಬುವಡ ಪಾಟ್‌ನಲ್ಲಿ[೧೪] 'ಬಾನಂಡಮ್ಮ ಮಾದಮ್ಮ' ಎಂಬ ಮನೆಪೆದ ಸಹಿತ ಹೆಸರಿದೆ. ಹೀಗಾಗಿ ಬಾನಮ್ಮ ರಾಜ, ಅವನ ಪುತ್ರ ಹೆಗ್ಗಡೆ ನಾಕಣ ಕೇವಲ ಪದವಿ ಸೂಚಕನಾಮವೆನಿಸದೆ ಅವರು ಹೆಗ್ಗಡೆ ಜನಾಂಗದ ವ್ಯಕ್ತಿಗಳಾಗಿರಬೇಕೆನ್ನಿಸುತ್ತದೆ. 'ಪಡಿಂಞಾರಂಡ' ಎಂಬ ಹೆಗ್ಗಡೆ ಮನೆತನದವರಿಗೆ ಕೈಮಡ ಇಲ್ಲದಿದ್ದರೂ ಗುರುಕಾರೊಣ ಇದ್ದು, ನೆಲ್ಲಕ್ಕಿ ನಡುಬಾಡೆಯಲ್ಲಿ 'ಕಾರೊಣ ಕೊಡುವುದು' ಆಚರಿಸುತ್ತಾರೆ.[೧೫] ಅಂದರೆ ಬಹುಶಃ ಚಂಗಾಳ್ವರ ಕಾಲದಲ್ಲಿ ಬಾನಮ್ಮರಾಜನ ಪದವಿಯನ್ನು ಗಮನಿಸಿ ಹೇಳಿದರೆ, ಅವನು ಅವರ ಸಚಿವನಾಗಿದ್ದಿರುವಂತಿದೆ. ಅವನ ಮನೆತನದ ಹೆಗ್ಗಡೆಗಳಿಗೆ ಪಡಿಎರ>ಪಡಿಯರ>ಪಡಿಂಞಾರ ಎಂಬ ಮನೆಪೆದ ರೂಪ ಒದಗಿ, ಕನ್ನಡಶಬ್ದವೊಂದು ಕೊಡವ ಭಾಷೆಯ ಪ್ರಚಲಿತ ರೂಪಕ್ಕೆ ತಿರುಗುವಲ್ಲಿ ಅವರ್ಗೀಯ ವ್ಯಂಜನ ಅನುನಾಸಿಕ ವರ್ಗೀಯಾಂತ್ಯವ್ಯಂಜನವಾದಂತಿದೆ. ಹೆಗ್ಗಡೆಗಳ ಇಂದಿನ ಆಡುಭಾಷೆ-ಮನೆಭಾಷೆ ಕೊಡವ ಭಾಷೆಯಾಗಿರುವುದೇ ಈ ರೀತಿಯ ಉಚ್ಚಾರಕ್ಕೆ ಕಾರಣವಾಗಿರುವಂತಿದೆ. ಅಲ್ಲದೆ ಪಡಿಂಞಾರ+ಅಂಡ>ಪಡಿಂಞಾರಂಡ ಎಂಬ ಪ್ರಚಲಿತ ಗೌರವಸೂಚಕ ಬಹುವಚನ ರೂಪದ ಮನೆಪೆದ ಶಬ್ದವಾಗಿ ಚಾಲ್ತಿಗಿದೆ. ಕ್ರಿ.ಶ. ೧೨೦೩ರ ಶಿವಮೊಗ್ಗಾ ಜಿಲ್ಲೆಯ ಶಾಸನದಲ್ಲಿ (ಸಂಖ್ಯೆ ೮೮)[೧೬] 'ವೀರಬಲ್ಲಾಳರಾಯನ ದಿವ್ಯ ಶ್ರೀಪಾದ ಪದುಮೋಪಜೀವಿಯಪ್ಪ ಮಹಾಪ್ರಧಾನ ಹಿರಿಯ 'ಪಡಿಯೂರ' ಮಾರಯ' ಎಂದಿದೆ. ಇಲ್ಲಿ ಮಹಾಪ್ರಧಾನನು ರಾಜನ ಅಧೀನ ಮುಖ್ಯ ಸಚಿವ, ಬೀಳಾನುವೃತ್ತಿಯಲ್ಲಿದ್ದವನೆಂದು ಪರಿಭಾವಿಸಿದರೆ ಪಡಿಎರ>ಪಡಿಯಾರ (ಹಡಿಯಜಿ) ಎಂಬ ಮನೆಪೆದವೊಂದು ಹೊಯ್ಸಳರ ಕಾಲದಿಂದಲೂ ಅಸ್ತಿತ್ವವಿದ್ದ ಬಗ್ಗೆ ತಿಳಿಯುವಂತಾಗುತ್ತದೆ. ಹೀಗಾಗಿ ಕೊಡಗಿನಲ್ಲಿಯೂ ಚಂಗಾಳ್ವರ ಕಾಲದಲ್ಲಿ ಆ ಮನೆತನದ ಅಸ್ತಿತ್ವದ ಬಗ್ಗೆ ಕಲ್ಪನೆ ಒದಗುತ್ತದೆ. ಇದಲ್ಲದೆ ಪಾಡಿರ ಎಂಬ ಕೊಡವ ಮನೆಪೆದ ಹಾಗು 'ಪಾಡಿ' ಎಂಬ ಗೌಡ ಜನಾಂಗದ ಮನೆಪೆದಕ್ಕೂ ರೂಪಾಂತರಿತವಾದ ಇಂಥ ಮೂಲವಿದೆಯೆ? ಎಂಬುದೂ ಪರಿಶೀಲನಾರ್ಹವಾಗುತ್ತದೆ.

ಕ್ರಿ.ಶ. ೧೩೫೯ರ ಹುಲುಕೋಡು ಶಾಸನದಲ್ಲಿ 'ತ್ರಿನಮೇರ ದೇವಣ್ಣ', 'ಹುಲುಕೋಡ ಚಿಕ್ಕಣ್ಣಯ ಬೆಂಮ್ಮಗೌಡನ ಬೀರಗಲು' ಎಂದಿದೆ.[೧೭] 'ತ್ರಿನಮೇರ' ಎಂಬ ಮನೆತನದ ಹೆಸರು ಮಡಿಕೇರಿ-ಹಾಲೇರಿ ಹಾದಿಯ ಮಕ್ಕಂದೂರು ಸಮೀಪದಲ್ಲಿ ಇತ್ತು ಎಂದು ಅಲ್ಲಿನ ಹಿರಿಯರು ಹೇಳುತ್ತಾರೆ. ಹಾಗಿದ್ದಲ್ಲಿ, ಶಾಸನೋಕ್ತ ಖಚಿತ ಮನೆಪೆದವಾಗಿ ೧೪ನೇ ಶತಮಾನದ ಇತಿಹಾಸದ ಪುರಾವೆ ಅದಕ್ಕೆ ಸಿಕ್ಕಿದಂತಾಗುತ್ತದೆ. ಇಂದು ಈ ಕುತ್ತಿ (ವಂಶ) ಕಾಣಬರುತ್ತಿಲ್ಲ.[೧೮] ಈ ಮನೆಪೆದ ಗೌಡ ಜನಾಂಗದ್ದೆನ್ನಬಹುದಾದರೂ ನಿಖರವಾಗಿ ಹೇಳುವುದು ಕಷ್ಟ. ಕೊಡವ ಮನೆಪೆದವೂ ಆಗಿರಬಹುದು. ತ್ರಿನಮ(ತಿರುನಮ) ಎಂಬ ದೇವವಾಚಿ ಶಬ್ದಕ್ಕೆ 'ಏರ' ಎಂಬ ಗೌರವ ಸೂಚಕ ಪ್ರತ್ಯಯ ಸೇರಿ ಆಗಿದ್ದರೆ ನಾಮದ ಮನೆಯವರು ಎಂದಾಗಬಹುದು. ಆಗ ಅದು ದಾಸಪ್ಪ ಪರಂಪರೆಯ 'ಗೌಡ' ಜನಾಂಗದ ಮನೆಪೆದವಾಗಬಹುದು ಅಥವ ಮೂರು ನಮೇರು ಪುಷ್ಪಗಳ (ಸುರಗಿ ಹೂ) ಗಿಡಗಳ ಮನೆಯವರು ಎಂಬ ವೃಕ್ಷವಾಚಿ ಮನೆಪೆದವಾಗಿರಬಹುದು. 'ತ್ರಿನಮೇರ' ಎಂಬ ಗ್ರಾಮವಂತು ಕೊಡಗಿನ ಗ್ರಾಮನಾಮಗಳಲ್ಲಿ ಕಂಡುಬರುವುದಿಲ್ಲ. ಕೊಡಗಿನ ಸಾಂಸ್ಕೃತಿಕ ಚೌಕಟ್ಟಿನಲ್ಲಿ ಈ ಶಬ್ದ, 'ಮನೆತನದ ಹೆಸರು' ಎಂಬುದಕ್ಕೆ ಅಂಟುತ್ತದೆ. ಈ ಶಾಸನದ 'ಚಿಕ್ಕಣ್ಣಯ ಬೆಂಮ್ಮಗೌಡ' ಪಿತೃನಾಮವಾಚಿ ಗೌಡ ಮನೆಪೆದವಾಗಿ ಕಾಣುತ್ತದೆ. ಹೀಗೆಯೆ ೧೩ನೇ ಶತಮಾನದ ಚೌಡ್ಲುವಿನ ಶಾಸನದಲ್ಲಿ (ಸಂಖ್ಯೆ ೬೦) 'ಮಾಚಜೀಯ ನಕಣ' ಬಹುಶಃ ಜೈನ ಮುನಿ ಹೆಸರಿನ ಮೂಲದ (ಶಿಷ್ಯತ್ವದ) ಮನೆಪೆದವಾಗಿದ್ದರೆ, 'ಅಜಣ ಬೆಣಚ' (ಅಜನ ಪೂಣಚ್ಚ!) ಎಂಬ ಗೌಡ ಮೂಲದ ಮನೆಹೆಸರೆಂದು ಭಾಸವಾಗುತ್ತದೆ. ಕ್ರಿ.ಶ. ೧೩೭೧ರ ಭಾಗಮಂಡಲದ ಶಾಸನದಲ್ಲಿ (ಸಂಖ್ಯೆ ೨೧), 'ಪಕಣ್ಡಲ ಆಯಾರಿ' ಎಂಬ ಶಬ್ದ ಭಗಂಡೇಶ್ವರನ ಭಾಗಮಂಡಲದ ಐರಿರ (ಬಡಗಿ) ಮನೆತನದ ಹೆಸರಿನಂತಿದೆ. ಅಥವಾ ಪಕಣ್ಡಲ (=ಭಗಂಡಲ> ಭಾಗಮಂಡಲ) ಗ್ರಾಮನಾಮ ಸೂಚಿಯಾಗಿ ಐರಿರ ಮನೆತನವೊಂದನ್ನು ಹಾಗೆ ಗುರುತಿಸಿದ್ದಿರಬಹುದು. ಮಡಿಕೇರಿಯ ಕ್ರಿ.ಶ. ೧೮೦೭ರ ಶಾಸನದಲ್ಲಿನ (ಸಂಖ್ಯೆ ೧೭) 'ಬಿದ್ದಂಡರ ಬೋಪು' ಎಂಬ ಪದಗಳಲ್ಲಿ ಬಿದ್ದಂಡ್ರ (ಬಿದ್ದಂಡ) ಎಂಬ ಕೊಡವ ಮನೆಪೆದವನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ. ಇಲ್ಲಿ 'ಬಿದ್ದ' ಎಂಬ ಕನ್ನಡ ಅರ್ಥ ಅಥವಾ

ಬಿತ್>ಬಿದ್, ವಿಧಿ>ಬಿದಿ (ಬಿದ್ದಪ್ಪ, ಬಿದ್ದಯ್ಯ) ಅಥವಾ ಬಿತ್ತಂಡ>ಬಿದ್ದಂಡ (ಬಿತ್ತಬೇಡ!)[೧೮೮] ಎಂಬ ಕೊಡವ ಭಾಷಾರೂಪ ಹಾಗೂ ಅರ್ಥಗಳೂ ಇವೆ. ಬದಲು "ಭದ್ರ>ಬದ್ದೆ ಎಂದು ಮಾಡಿ 'ಗ' ಸೇರಿ ಭದ್ರದೇವ- ಬದ್ದೆಗ ಎಂದು ಪಂಪನಲ್ಲಿ ಅರಿಕೇಸರಿಯ ಪೂರ್ವಜನಿಗೆ ಬಳಸಿರುವಂತೆ" ಎಂದು ವಿದ್ವಾಂಸರು ಹೇಳಿರುವುದನ್ನು ಗಮನಿಸಿದರೆ, ಭದ್ರಂಡ>ಬದ್ದಂಡ> ಬಿದ್ದಂಡ್ರ ಎಂದು ಉಚ್ಚಾರದಲ್ಲಿ ಆಗಿದ್ದರೆ, ಈ ಮನೆಪೆದಕ್ಕೆ ಕೊಡಗಿನ ಬಹು ಪ್ರಾಚೀನ ಶೈವ ಅಥವಾ ಜೈನ ಮೂಲವೂ ಇರಬಹುದೆ? ಎನಿಸುತ್ತದೆ. ಹಾಗಿದ್ದರೆ ಇದರ ಇತಿಹಾಸವನ್ನು ಕೊಂಗಾಳ್ವರ, ಚಂಗಾಳ್ವರ ಕಾಲಕ್ಕೆ (೧೧-೧೨ ನೇ ಶತಮಾನ) ಒಯ್ಯುವಂತಾಗುತ್ತದೆ. ಕಾಲಾಂತರದಲ್ಲಿ ಈ ಮನೆತನ ಶಿವಪರ ವಾದುದಕ್ಕೆ ಪಾರಂಪರಿಕ ಸಾಕ್ಷಿ ಇದೆ. ಅದರಲ್ಲಿ ಒಂದು ಮಡಿಕೇರಿಯಲ್ಲಿ ರಾಜರ ಗದ್ದುಗೆ ಆವರಣದಲ್ಲಿರುವ ಬಿದ್ದಂಡ ಬೋಪುವಿನ ಸಮಾಧಿಯ ಮೇಲಿರುವ ಬಸವನ ಶಿಲ್ಪ, ಇನ್ನೊಂದು ಬಾವಲಿ ಗ್ರಾಮದಲ್ಲಿರುವ ಆ ಮನೆತನದ ಸಮಾಧಿ ಕೈಮಡ ಆರಾಧನೆ, ಆಗಿವೆ. ೧೯ನೇ ಶತಮಾನದ ತಲಕಾವೇರಿಯ ಅಗಸ್ತ್ಯೇಶ್ವರದೇಗುಲ ಶಾಸನದಲ್ಲಿ (ಸಂಖ್ಯೆ ೨೫) *'ಮನೆಯಪಂಡ ಮೊಣಪ್ಪ',* ಪಾಡಿ ಇಗ್ಗುತಪ್ಪ ದೇಗುಲದ ಬಾಗಿಲ ಹಿತ್ತಾಳೆ ತಗಡಿನ ಮೇಲಿನ ಕ್ರಿ.ಶ. ೧೮೩೪-೩೫ರ ಶಾಸನದಲ್ಲಿ (ಸಂಖ್ಯೆ ೨೭) **'ಅಪ್ಪಾರಂಡ ಬೋಪು'** ಎಂಬ ಹೆಸರುಗಳಿದ್ದು ಕೊಡವ ಮನೆಪೆದಗಳನ್ನು ಸ್ಪಷ್ಟವಾಗಿ ಸೂಚಿಸಿವೆ. ಕ್ರಿ.ಶ. ೧೮೫೭ರ ಕುಂದಬೆಟ್ಟದ ಮಹಾದೇವರ ಗುಡಿಯ ಸ್ತಂಭಶಾಸನದಲ್ಲಿ (ಸಂಖ್ಯೆ ೯೯) ಪಾರುಪತ್ಯಗಾರು *'ಮನೆಪ್ಪಂಡ್ರ ಪುಚ್ಚೆಯ', 'ಕೊಡಂದೇರ ಮುದ್ದೆಯ ಮತ್ತು ಮೇದ್ದೆಯ', 'ಸಣ್ವಂಡ್ರ ಬೋಳ್ಳಯ್ಯ', 'ಮಣಂಡೆ ತಿಂಮ್ಮೆಯ ಗವುಡ', 'ತಿಂಮ್ಮೆಯ ಗಉಡ ಚಿಂನೆಗವು ಡನ ಚಂಣಪ್ಪ'* ಎಂಬ ಮನೆಪದ ಸಹಿತವಾದ ವ್ಯಕ್ತಿನಾಮಗಳಿವೆ. ಇವುಗಳಲ್ಲಿ ಕೊಡವ ಮನೆಪೆದಗಳಾದ ಮನೆಪ್ಪಂಡ, ಕೊಡಂದೇರ, ಸಣ್ವಂಡ್ರ ಅವರ ಮನೆತನದವರು ಇಂದಿಗೂ ಕುಂದಬೆಟ್ಟದ ತಪ್ಪಲಿನ ಕುಂದ ಹಾಗು ಹಾತೂರು ಗ್ರಾಮಗಳಲ್ಲಿ ಇದ್ದಾರೆ. **'ಮಣಂಡೆ'** ಗೌಡ ಜನಾಂಗದ ಮನೆಪೆದವು ಕೊಡಗು ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ದಾಖಲಾಗಿಲ್ಲ. ಆ ಮನೆತನದವರು ಇಂದು ಕಾಣಬರುತ್ತಿಲ್ಲ. ಬಹುಶಃ ಇದೇ ಮನೆಪೆದಕ್ಕೆ ಚಂಣಪ್ಪ ಸೇರಿರಬೇಕು. ೧೮೭೭ರ ಮಡಿಕೇರಿ ಶಾಸನವು (ಸಂಖ್ಯೆ ೧೪) *'ಬದ್ದಂಡ್ರ'* ಮನೆಪೆದವನ್ನು ಹೆಸರಿಸಿದೆ. ೧೮೮೧ರ ಭಗಂಡೇಶ್ವರ ದೇಗುಲ ಶಾಸನದಲ್ಲಿ (ಸಂಖ್ಯೆ ೨೩) **ಮಣವಟ್ಟಿ** ತಿಮ್ಮಯ್ಯ, **ಮಣೊಟ್ಟಿ** ಬೆಳ್ಳಿಯಪ್ಪ ಎಂಬ ಹೆಸರುಗಳು ಕೊಡವ ಮನೆಪೆದ ಸಹಿತವಾಗಿವೆ.

***ಮನೆಪೆದ-ಮನೆತನಗಳ ಹೆಸರುಗಳ ಉಗಮ :*** ಮನೆಪೆದಗಳು ಸ್ಥಳೀಯ ಸಂಸ್ಕೃತಿಯ ದ್ಯೋತಕವಾಗಿವೆ. ಶಾಸನಗಳಲ್ಲಿ ಹಾಲೇರಿ ಅರಸರ ಮುನ್ನವೂ ಇದ್ದ ಮನೆಪೆದಗಳ ಸ್ವರೂಪ ತಿಳಿಯುತ್ತದೆ. ಹಾಲೇರಿ ಅರಸರ ಕಾಲದಲ್ಲಿ, ತೋರಿದ ಶೌರ್ಯ ಪ್ರದರ್ಶನ ಹಾಗು ಸಲ್ಲಿಸಿದ ಸೇವೆಗಾಗಿ ಜಮ್ಮದಭೂಮಿ ನೀಡಿದ ಸಂದರ್ಭದಲ್ಲಿ ಮನೆತನ ಗುರುತಿಸಲು ರೂಪಿಸಿದ ಮನೆಪೆದಗಳೂ ಇವೆ; ಆಸ್ತಿ ಪಡೆದ ಸ್ವತಂತ್ರ ಮನೆ ಕಟ್ಟಿಕೊಂಡು ಮನೆಪೆದ ಇಟ್ಟುಕೊಂಡ, ಪಡೆದುಕೊಂಡ ಉದಾಹರಣೆಗಳೂ ಇವೆ.

ಮನೆತನದ ಮೂಲ ಪುರುಷನೆನಿಸುವ (ಗುರು) 'ಕಾರೊಣ'ರು ಆಸ್ತಿಯನ್ನು ರೂಢಿಸಿಕೊಂಡು ಬೇರೆಮನೆಗಳನ್ನು ಕಟ್ಟಿಕೊಂಡು ವಾಸಿಸತೊಡಗಿ, ಅಂತಹ ಮನೆಗೊಂದೊಂದು ಹೆಸರನ್ನು ಇಟ್ಟುಕೊಂಡರೆಂದಿದೆ.[೧೯] *(ಆದರೆ 'ಕೊಪ್ಪ' ಎಂಬುದು ಮನೆತನದ ಶಾಖೆಯವರು ಬೇರೆಡೆ ಆಸ್ತಿ ಮಾಡಿ ಮನೆಕಟ್ಟಿಕೊಂಡು ಮೂಲ ಮನೆತನದ ಮನೆಪೆದವನ್ನು ಇಟ್ಟುಕೊಂಡು, ಬಾಳುವ ನೆಲೆ ಆಗಿರುತ್ತದೆ. ಸಾಂಸ್ಕೃತಿಕ ಆಚಾರ ವಿಚಾರಕ್ಕೆ 'ಗುರುಕಾರೊಣ' ಕಟ್ಟಿದ್ದೆನ್ನಲಾದ ಮೂಲ 'ಐನ್‌ಮನೆ - ಐನ್ ಆರ್ವಾಡು'ವಿಗೆ ಆವರು ಬಂದು ಭಕ್ತಿ ಗೌರವ ಸಲ್ಲಿಸಿ ನೆನೆಯುತ್ತಾರೆ).* ಪಳಂಜೊಲ್ಲ್ (ಹಳೆ ನುಡಿ) ನಲ್ಲಿ ಬರುವ ಮಾತು 'ಮಣ್ಣುಂಡೇಗಿ ಮನಸ್ಥಾನ' (ಜಮ್ಮ ಭೂಮಿ-ಆಸ್ತಿ ಇದ್ದರೆ ಮನೆತನದ ಹೆಸರಿರುತ್ತದೆ) ಎಂದಿದೆ.[೨೦] ಇಲ್ಲಿ ಮಣ್ಣಿನ ಮಾತು ಮನೆತನದ ವ್ಯಕ್ತಿಗಳು ಸಾಧಿಸಿ ಗಳಿಸಿದ ಸಂದರ್ಭಕ್ಕಾಗಿ ಬಂದಿದೆ. ಕುಮಟೂರು ಗ್ರಾಮದ ಜಾನಪದ ಕಲಾವಿದ ದಿ|| ಬಾಚರಣಿಯಂಡ ಕೆ. ಅಣ್ಣಯ್ಯ ಅವರು 'ಮನೆಪೆದ'ದ ಕುರಿತು ಕೊಡವ ಭಾಷೆಯ **ಅಪ್ರಕಟಿತ** ಜನಪದ ಗೀತೆಯನ್ನು ನನಗೆ ಹೇಳಿದ್ದುದು ಇಂತಿದೆ:

*ಆಳ್‌ಪೆದ ಕೊಡವಡ ನೋಟ್<br>ಆಳಣ್ಣ ಎನ್ನಿರೋ ಅದೇ ಪಾಟ್<br>ಆಳ್ ಪೆದತುಳ್ಳ ಆಚಾರವೋ<br>(ಬಕ್ಕ ಪೆದತುಳ್ಳ ಬಕ್ಕಣೆಯೋ!)<br>ಒಕ್ಕ ಪೆದತುಳ್ಳ ಒಕ್ಕಣೆಯೋ<br>ಸಮಸಮ ಕೂಟಿತ್ ಪಾಡಿರಿದಾ<br>ಕೊಡವಡ ಮನೆಪೆದ ಎನ್ನ<br>ಮನೆಪೆದಕೆನ್ನತ ಕಥೆ ಎಣ್ಣ್<br>ಮನೆಪೆದ ಇದ್‌ನ ಕೇಳಿರಿದಾ<br>ಕೊಡವಡ ಕೊಂಬಾಟ್ ಆಟೊ<br>ಪಾಡಿರೋ ಮನೆಪೆದ ಪಾಟೋ<br>ಎಚ್ಚಕ್ ಒಕ್ಕಳೋ ತಕ್ಕಾಮೆ<br>ತಕ್ಕಾಮೆಕ್ ಬತ್ತ ಒಕ್ಕಾಮೆ<br>ನಾವುಕ್ ತೇನ್‌ನ ತೂರಿಂಜನ್ನೆ<br>ಒಕ್ಕಪೆದ ಇದ್ ಉಳ್ಳುವುದಾ<br>ಪಾಟ್ ಮೊಳಿ ಕೂಟಿ ಪಾಡಿರಲ್ಲಾ<br>ಆದಿಮೂಲ ಲೇಲೇಲಾ ಲೇಲಾ*

★ ★ ★

*(ಕನ್ನಡ ಭಾವಾನುವಾದವನ್ನು ಹೀಗೆ ಮಾಡಬಹುದು)*
*ವೀರನ ಹೆಸರಿಗೆ ಕೊಡವನ ನೋಡು*

ವೀರನ ಅಣ್ಣ ಎಂದರೆ ಅದೆ ಹಾಡು
ವೀರನ ಖ್ಯಾತಿಗೆ ನಡಸುವ ಚರ್ಯೆ
(ಶೌರ್ಯದ ಹೆಸರದು ಕೋಟೆಗು ಎತ್ತರ)
ಒಕ್ಕಲು ಹೆಸರೊತ್ತಿದೆ ಒಪ್ಪಿತಕಾರ್ಯಕೆ
ಒಕ್ಕಲು ಒಕ್ಕೂಟವಿದೆ ಸಮ್ಮತ ಕಾರ್ಯಕೆ
ಜೊತೆಜೊತೆ ಕೂಡಿ ಹಾಡಿರಿ ಈ ಹಾಡು
ಕೊಡವರ ಮನೆಪೆದ ಆದುದು ಹೇಗೆ?
ಮನೆಪೆದ ಎಂತಾದುದು ಕತೆಯನೆ ಹೇಳೆನ್ನುವಿರಾ?
ಮನೆಪೆದವಾದುದುದಿಂತಿದೆ ಕೇಳು
ಕೊಡವರ ಕೊಂಬಾಟವನಾಡುತ
ಹಾಡಿರಿ ಮನೆಪೆದ ಹಾಡನೆ ಎಲ್ಲರು
ಎಷ್ಟಿದೆ ಒಕ್ಕವು ಅಷ್ಟಕು ತಕ್ಕಾಮೆಯು (ಹಿರಿಮೆಗೆ ಹೆಸರದು)
ತಕ್ಕಾಮೆಗೆ ಬಿತ್ತದು ಒಕ್ಕಲು ಬಳಗವು
ನಾಲಗೆಗದೆ (ಬಾಯಿಗೆ) ಜೇನದು ಸುರಿತವು
ಮನೆಪೆದದೊಳಗಣ ಸವಿ ಉಕ್ಕುವುದು
ಈ ಮೊದಲ ಹಾಡ ಹಾಡಿರೆಲ್ಲ ಕೂಡಿ
ಈ ಮೊದಲ ಹಾಡ ಹಾಡಿರೆಲ್ಲ ಕೂಡಿ
ಮಂಗಳವು ಮಂಗಳವು ಆದಿಮೂಲಗೆ ನೋಡಿ

- ಈ ಹಾಡಿನಲ್ಲಿ ಮನೆತನದ ಶೂರನ ನೆನಪಿದೆ, ಭಕ್ತಿ ಇದೆ. ಅವನ ಹೆಸರಿಗೆ ಊನ ಬರದಂತೆ ವಂಶೀಕರು ನಡೆದುಕೊಳ್ಳುವ ಪ್ರಜ್ಞೆ ಇದೆ. ಕುಟುಂಬದ ಒಗ್ಗಟ್ಟಿನ ಚಿತ್ರವಿದೆ. ಮನೆಪೆದ ಬರಲು ಕುಟುಂಬದ ಸಾಧನೆ, ಶೌರ್ಯ, ಕೌಶಲ್ಯವೇ ಕಾರಣ ಎಂಬ ದನಿಯಿದೆ. ವಂಶಗೌರವ ಎತ್ತಿ ಹಿಡಿಯಬೇಕೆನ್ನುವ ಆಶಯವಿದೆ. ಬಂಧು ಬಳಗದ ಸಾಮರಸ್ಯದ ಚಿತ್ರವಿದೆ. ಮನೆಪೆದ ಹೇಳಿಕೊಳ್ಳುವುದೆ ನಾಲಗೆಗೆ ಜೇನು ಸವಿದಂತಾಗುತ್ತದೆ. ಅದಕ್ಕೆ ಅಂಥ ಸವಿ ಹಿರಿಮೆ ಇದೆ, ಇತಿಹಾಸವಿದೆ. ಮನೆಪೆದದ ಹಾಡೆಂದರೆ ಮನೆತನದ ಇತಿಹಾಸದ ಮೊದಲ ಹಾಡು ಆಗಿದೆ, ಎಂದೆಲ್ಲ ಧ್ವನಿಸುವ ಈ ಹಾಡಿನ ಸಂವಾದ ಶೈಲಿ ಆತ್ಮೀಯವಾಗಿದ್ದು ತಕ್ಕಾಮೆಯೆ ಮನೆಪೆದಕ್ಕೆ ಕಾರಣವಾಗಿದೆ ಎಂದು, ಹೇಳುವಂತಿದೆ ಹಾಗು ಮನೆಪೆದದ ಉಗಮದ ಬಗ್ಗೆ ಸುಳುಹನ್ನು ದಟ್ಟವಾಗಿ ನೀಡುತ್ತದೆ. ಈ ಬಗೆ ಕೊಡಗಿನ ವಿವಿಧ ಜನಾಂಗಗಳಲ್ಲಿನ ಮನೆಪೆದ, ಮನೆತನಗಳ ಹೆಸರುಗಳ ಮೂಲದಲ್ಲಿ ಕಾಣಬರುತ್ತದೆ.

ಸಿರಿಬಾಯಿ ದೊಡ್ಡವೀರಪ್ಪ ಕ್ರಿ.ಶ. ಸು. ೧೬೮೮-೮೯ರ ಸಮಯದಲ್ಲಿ ಪಾಲ್ಪರೆಗೆ ಬಂದ ಚಿಕ್ಕದೇವರಾಜ ಒಡೆಯರ ಸೈನ್ಯವನ್ನು ಎದುರಿಸಿ ಸೋಲಿಸಿ ಹಂಪಾಪುರದವರೆಗೆ ಬೆನ್ನಟ್ಟಿದ ಸಂದರ್ಭ. ಆಗ ಪಾಲ್ಪರೆಯಲ್ಲಿ 'ಕಾಂಡಂಡ' ಮನೆಯವರಲ್ಲಿ ಅಶ್ವಸೇನೆ ಸಹಿತ ರಾತ್ರಿ ಉಳಿದು ಬೆಳಗ್ಗೆ ಎದ್ದಾಗ, ಸೂರ್ಯನ ಬಿಸಿಲು ಮನೆಯೊಳಗಣ ನೆಲ್ಲಕ್ಕಿ ನಡುಬಾಡೆಯವರೆಗೆ ಬೀಳುತ್ತಿದ್ದುದನ್ನು ಕಂಡ. ಆಗ 'ಕಾಂಡಂಡ' ಮನೆತನಕ್ಕೆ ಮರು ನಾಮಕರಣಮಾಡಿ 'ಉದಿಯಾಂಡ' ಎಂಬ ಹೆಸರನ್ನು ಕೊಟ್ಟನಂತೆ. ಅಂದರೆ ಮನೆಪೆದಕ್ಕೆ ರಾಜಗೌರವ ನೀಡಿದಂತಾಗಿತ್ತು.

ಪಟ್ಟೋಲೆಪಳಮೆಯ 'ಬಾಲಲೀಲೆ' ಹಾಡಿನಲ್ಲಿ ಜೋಗುಳ ಪಾಡುತ್ತ ಕತೆ ಹೇಳುತ್ತಾ:[೨೧]

ತಟ್ಟಾಂಡಾಣೆಲ್ ತಾರ್ ಕೊಡಂದೆ
ಉದಿಯಾಂಡಾಣೆಲ್ ನೂರ್ ಕುದುರೆ
ಪಂಡೇತಜ್ಜಂಡ ಪಡೆ ಬಂದ ಕಾಲ

-ಎಂದಿದೆ. ಈ ಸಾಲುಗಳು ಸಿರಿಬಾಯಿ ದೊಡ್ಡವೀರಪ್ಪನ ಕಾಲದ 'ಕಾಂಡಂಡ' ಮನೆತನಕ್ಕೆ ಸಂಬಂಧಿಸಿದ ಕತೆಯ ಸೂಚನೆ ಎಂದು ದಿ|| ಬಾಚರಣಿಯಂಡ ಕೆ. ಅಣ್ಣಯ್ಯ ಅಭಿಪ್ರಾಯ ಪಡುತ್ತಿದ್ದರು. ಹೀಗಾಗಿ ರಾಜರು ಕೊಟ್ಟ 'ಉದಿಯಾಂಡ' ಹೆಸರು ಘಟನಾವಾಚಿಯಾಗಿತ್ತು. ತುಲಾ ಸಂಕ್ರಮಣದ ತೀರ್ಥೋದ್ಭವ ಸಮಯದಲ್ಲಿ ಅಮ್ಮತ್ತಿ-ಬಿಳುಗುಂದ ನಾಡಿನಲ್ಲಿ ಪೊಂಗಮರದ ಬೊತ್ತ್ (ಕತ್ತರಿ ಆಕೃತಿ ಪೊಂಗಮರದ ಕೋಲು ಅಥವಾ ಬಿದಿರು ಕಡ್ಡಿಗಳ ತುದಿಗೆ ವೃತ್ತಾಕಾರದಲ್ಲಿ ಕೈಬಳ ಬಳ್ಳಿ ಸುತ್ತಿ ನಿಲ್ಲಿಸುವುದು) ಬದಲು ಕಾಂಡಗಿಡದ ಒಂದು ಕಾಂಡ ಬಳಸಿ 'ಕಾಂಡಬೊತ್ತ್' ನಿಲ್ಲಿಸುವುದುಂಟು. ಬಹುಶಃ ಈ ಬಗೆ ಬೊತ್ತ್ ಇಡುವ ವಿಶೇಷ ಪದ್ಧತಿ ಹತ್ತ್‌ಗಟ್ಟ್‌ನಾಡಿನ ಪಾಲ್ಪರೆಯ 'ಕಾಂಡಂಡ' ಮನೆತನದಲ್ಲಿದ್ದುದರಿಂದ ಮೊದಲಿಗೆ ನಿಸರ್ಗವಾಚಿ ಮನೆಪೆದ ಅವರಿಗೆ ಬಂದಿದ್ದಿರಬೇಕು. 'ಕಾಂಡ ಬೊತ್ತಿನ ಮನೆಯವರು' ಆದ್ದರಿಂದ 'ಕಾಂಡ' ಶಬ್ದಕ್ಕೆ, 'ಅಂಡ' ಎಂಬ ಬಹುವಚನ ಪ್ರತ್ಯಯ (of =ಅವರ) ಸೇರಿ **ಕಾಂಡಂಡ** ಆಗಿತ್ತೆನಿಸುತ್ತದೆ. ನಾಲಡಿಗ್ರಾಮದ ಪರದಂಡ ಮನೆತನಕ್ಕೆ ಮೊದಲಿಗೆ ಮನೆಪೆದ 'ನಂಬಿಮಡ' ಎಂದಿತ್ತು. ಅದು ಕೇರಳದ ಮೂಲದಿಂದ ಬಂದ ಮನೆತನ. ಹಾಗಾಗಿ ಕೇರಳದಿಂದ ಶ್ರೀ ಇಗ್ಗುತಪ್ಪದೇವರು, ಸೋದರರು ಹಾಗು ಸೋದರಿಯೊಡನೆ (ಪನ್ನಂಗಾಲತಮ್ಮೆ) ಯುವಕಪಾಡಿಯ ನಾಲಡಿಗೆ ಬಂದಾಗ ಈ ಮನೆಯವರು ನೀರು ಹುಡುಕಿ ತಂದುಕೊಟ್ಟರು - ***'ಪರದಿ ತನ್ನೈನಿಕೊಂಡ್ ಇನ್ನ್‌ಮೊದಲ್ ಪರದಂಡ ಅನ್ನ್ ಮನೆಪೇರ್ ಇರ್ಕಟ್ಟೆ'***- ಅಂದರೆ ತಣ್ಣೆ (ನೀರು) ಯನ್ನು ಅರಸಿತಂದು ಕೊಟ್ಟು ದಾಹ ತಣಿಸಿದ್ದರಿಂದ ಇನ್ನು ಮುಂದೆ **ಪರದಂಡ** ಎಂಬ ಮನೆಹೆಸರು ಇರಲಿ ಎಂದರ್ಥ. ಇಗ್ಗುತಪ್ಪ ದೇವರು ಕೊಟ್ಟ ಮನೆಪೆದವೆಂದು ಅವರು ದೇವತಕ್ಕರಾದರಂತೆ.

***ರಾಜರು ಕೊಟ್ಟ ಮನೆಪೆದಗಳು :*** ಮಡಿಕೇರಿ ತಾಲೂಕು ಬಲಮುರಿ (ಬಲಂಬೇರಿ) ಗ್ರಾಮದಲ್ಲಿ **ನೆರವಂಡ** ಮನೆತನವಿತ್ತು. ಆ ಮನೆತನದ ಸುಬ್ಬಯ್ಯ ಹಾಲೇರಿ ಅರಸರಲ್ಲಿ ಕರಣಿಕನಾಗಿದ್ದ. ಮಡಿಕೇರಿ ಅರಮನೆಗೆ ದಿನವೂ ಕುದುರೆ ಮೇಲೆ ಅಷ್ಟು ದೂರದಿಂದ ಹೋಗಿ ಬರುವುದು ತ್ರಾಸದಾಯಕವಾಗಿತ್ತು. ಆಗ ದೊರೆಯು ಅವನಿಗೆ ಮಡಿಕೇರಿ ಸಮೀಪದ ಪೂರ್ವದ ಹಾದಿಯ ಕಾಟಕೇರಿ ಗ್ರಾಮದಲ್ಲಿ ಭೂಮಿಕಾಣಿ ಕೊಟ್ಟು ಬೈರೇಟಿರ ಸುಬ್ಬಯ್ಯ ಎಂದು ಮನೆಪೆದವಿಟ್ಟ. ಬೈರೇಟಿರ ಒಕ್ಕಕ್ಕೆ ಸುಬ್ಬಯ್ಯ ಮೂಲಪುರುಷನಾದ.[೨೨] ಬಹುಶಃ ಕಾಟಕೇರಿಯ ಭದ್ರಕಾಳಿ ದೇವತೆ ಬಹಳ ಉಗ್ರದೇವತೆ ಎಂದು ಪ್ರಸಿದ್ಧಿ ಇದ್ದ ಕಾರಣವೋ,

ಮನೆದೈವದಲ್ಲಿ ಪತ್ತುಕೂಟಪಾತಾಳ ದೈವಗಳಲ್ಲಿ ಭೈರವನೂ ಒಬ್ಬನಾಗಿದ್ದು, ಸುಬ್ಬಯ್ಯನ ಆಶಯವನ್ನು ತಿಳಿದೋ ರಾಜ ಅವನಿಗೆ ದೈವಸಂಬಂಧವಾಚಿ ಹೊಸ ಮನೆಪೆದ ಕೊಟ್ಟಂತಿದೆ. ಹೀಗೆ ದೊರೆಗಳೂ ಮನೆಪೆದಗಳ ಸೃಷ್ಟಿಗೆ ಕಾರಣರಾಗಿದ್ದರು. ಚಂಗಾಳ್ವ ಅಥವಾ ಕೊಂಗಾಳ್ವರ ಹೆಸರಿಗೆ ಉಪಾಧಿಯಾಗಿ 'ಚೋಳ' ಎಂಬ ಶಬ್ದ ಸೇರಿದ್ದುದು ಶಾಸನೋಕ್ತ. ಬಹುಶಃ ಅವರ ವಂಶಿಕರಾಗಿ 'ಚೋಳಂಡ' ಎಂಬ ಪ್ರಾಚೀನ ಮನೆತನ ಪಾಲ್ಪರೆಯಿಂದ ಬಂದು ಕುಂದಗ್ರಾಮದಲ್ಲಿ ನೆಲೆಯಾಗಿತ್ತು. ದೊಡ್ಡ ವೀರರಾಜೇಂದ್ರ ಒಡೆಯನು ೧೭೮೯-೯೦ರ ಸಮಯದಲ್ಲಿ ಪಿರಿಯಾಪಟ್ಟಣ ದಿಂದ ತಪ್ಪಿಸಿಕೊಂಡು ಬಂದಾಗ, ಈ ಮನೆತನ ಆಸರೆ ಕೊಟ್ಟ ಕಾರಣ 'ಮನೆಯಪ್ಪಂಡ' ಎಂಬ ಹೊಸ ಮನೆಪೆದ ಆ ಮನೆತನಕ್ಕೆ ಬಂದಿತಂತೆ.ಮುಕ್ಕಾಟಿರ ಎಂಬ ಮನೆಪೆದದ ಐರಿರ ಮನೆತನಕ್ಕೆ ರಾಜರ (ಹಾಲೇರಿ) ಕಾಲದಲ್ಲಿ 'ಮೂಲೆಮನೆ' ಎಂಬ ಮನೆಪೆದ ಇತ್ತರಂತೆ. ಹೀಗೆಯೇ ರಾಜರು ಕೊಟ್ಟ ಎಷ್ಟೋ ಮನೆಪೆದಗಳಿವೆ.

ಕುಟುಂಬದ ಹೆಸರುಗಳು ಸ್ಥಳ, ಹಾಗು ಸನ್ನಿವೇಶಕ್ಕೊಳ ಪಟ್ಟಿವೆ. ***ಬಾಳಿಯಡ, ಬಾಳಕುಟ್ಟಿರ ಬಾಳಂಡ*** ಎಂಬ ಮನೆ ಹೆಸರುಗಳ ಮೂಲ '***ಬಾಳ್***'; ***ನೆಲ್ಲಿರ, ನೆಲ್ಲಚಂಡ, ನೆಲ್ಲಮಕ್ಕಡ, ನೆಲ್ಲಪಟ್ಟಿರ*** ಎಂಬ ಮನೆತನಗಳ ಹೆಸರುಗಳ ಮೂಲ 'ನೆಲ್ಲ್'; ***ಮಂದಪಂಡ, ಮಂದನೆರವಂಡ*** ಎಂಬ ಕುಟುಂಬಗಳ ಹೆಸರಿನ ಮೂಲ 'ಮಂದ್'; ಮಂದ್ ಎಂದರೆ ದೇಗುಲ, ಅಂಬಲ ಹಾಗಾಗಿ ದೇವಮೂಲ, ನ್ಯಾಯಸಂಬಂಧದ್ದು. *(ಮಂದ್‌ತ್ ಅವ್ವ-ಮಂದ್‌ತವ್ವ ಎಂದರೆ 'ಪಾರ್ವತಿ'ಯ ಹೆಸರಂತೆ. ದಕ್ಷಿಣ ಕೊಡಗು ಪೊನ್ನಂಪೇಟೆ ನಾಡಿನ ಬೆಕ್ಕೆಸೊಡ್ಲೂರಿನಲ್ಲಿ ಮಂದ್‌ತವ್ವನ ವೃತ್ತವೇದಿಕೆಯಲ್ಲಿ ಆಕೆಗೆ ಸ್ತಂಭರೂಪದ ಶಿಲ್ಪ ಚಿತ್ರವಿದ್ದು ಪೂಜೆ ಉಂಟು)*. ಅಣ್ಣಿರ, ನೆಲ್ಲಿರ, ಕೊಲ್ಲಿರ ಎಂಬ ಮನೆಪೆದಗಳ ಮೂಲ ಆ ಶಬ್ದಗಳ ಮೊದಲ ಎರಡಕ್ಷರಗಳಾದ ಅಣ್ಣಿ, ನೆಲ್ಲಿ, ಕೊಲ್ಲಿಗಳಿಂದಾಗಿದ್ದು ರ-ಕಾರ ಪ್ರತ್ಯಯ ಹೊಂದಿವೆ. ಅಮ್ಮಂಡ, ಜಮ್ಮಡ, ಅಯ್ಯಂಡ, ಪಟ್ಟಡ ಇತ್ಯಾದಿ ಹೆಸರುಗಳು 'ಡ' ಕಾರ ಪ್ರತ್ಯಯ ಸೇರಿದ 'ಅಮ್ಮ, ಜಮ್ಮ, ಅಯ್ಯ, ಪಟ್ಟ' ಶಬ್ದಗಳ ಮೂಲ ಹೊಂದಿವೆ; ***ಅಜ್ಜಮಾಡ, ಕಾಳಿಮಾಡ, ಪಟ್ಟಮಾಡ, ಮಾರಮಾಡ*** ಇತ್ಯಾದಿ ಮನೆ ಹೆಸರುಗಳಲ್ಲಿ 'ಮಾಡ' ಎಂದರೆ ಮನೆಗಳು ಎಂಬರ್ಥವಿದ್ದು ಹೆಸರುಗಳ ಮೊದಲೆರಡು ಅಕ್ಷರಗಳು ಅವುಗಳ ಮೂಲವನ್ನೂ ಹೇಳುತ್ತವೆ ಎಂಬ ಅಭಿಪ್ರಾಯವನ್ನು ಐ. ಮಾ. ಮುತ್ತಣ್ಣನವರು ವ್ಯಕ್ತ ಪಡಿಸಿದ್ದಾರೆ.[೨೩] ಇಲ್ಲಿ 'ಬಾಳ್' ಎಂದರೆ 'ಕತ್ತಿ' 'ಬದುಕು; 'ಜೀವನ-ಜೀವಿತ' ಎಂಬರ್ಥಗಳೂ ಇವೆ.[೨೪] ಶೌರ್ಯ ಸೂಚಕ 'ಕತ್ತಿ' ಎಂಬ ಅರ್ಥವನ್ನು ಪರಿಗಣಿಸಿ ವೀರರಿಗೆ ಹೆಸರಾದ ಮನೆತನದವರು ಎಂದಿಟ್ಟುಕೊಳ್ಳಬಹುದು. ಡ, ರ, ಅಂಡ ಪ್ರತ್ಯಯಗಳನ್ನು ಸೇರಿಸಿಕೊಳ್ಳುವುದು ಬೇರೆ ಬೇರೆ ಒಕ್ಕಗಳನ್ನು ಗುರುತಿಸಲು ಮಾಡಿಕೊಂಡ ವ್ಯವಸ್ಥೆ ಎನಿಸುವಂತಿದೆ. ***ಚಂಗೇಟಿರ, ಚಂಗೇಪಂಡ, ಚಂಗಣಮಾಡ, ಚಾಂಗನ*** ಇತ್ಯಾದಿ ಮನೆಪೆದಗಳು ಬಹುಶಃ ಚಂಗಾಳ್ವವಂಶ ಪರಂಪರೆಯೆನಿಸುತ್ತದೆ; ***ಕೊಂಗಾಂಡ, ಕೊಂಗಿಪಂಡ, ಕೋಗೀರ, ಕೊಂಗೇಟ್ಟಿರ, ಕೊಂಗೆರ*** ಇತ್ಯಾದಿ ಮನೆಪೆದಗಳು ಕೊಂಗಾಳ್ವ ಅರಸು ವಂಶ ಮೂಲವನ್ನು ತೋರುವಂತಿವೆ.

ಪೆಣ್ಣೆಕಡಂಗಗಳು ಅಂದರೆ ಕಡಂಗಗಳಿಂದ ರಕ್ಷಿತವಾದ ಪನ್ಯ ಜಮೀನುಗಳು ಕೊಡಗಿನಲ್ಲಿ ೧೧ನೇ ಶತಮಾನದ ಪೂರ್ವದಿಂದಲೂ ಇವೆ. ರಾಜರ ಪನ್ಯಗಳೆಂದರ ಅವರ ಖಾಸಗಿ ಕೃಷಿ ಜಮೀನು ಅರ್ಥಾತ್ ಅರಮನೆಯ ಬೇಸಾಯಭೂಮಿ. ರಾಜರ ಪನ್ಯಗದ್ದೆಗಳಲ್ಲಿ ಹೆಚ್ಚಾಗಿ, ಬಿಳಿಭತ್ತ ಹಾಗು ಸಿಹಿಯಾದ ಕೆಂಪು ಭತ್ತವೆನಿಸಿದ 'ಕರ್ತಭತ್ತ'ವನ್ನು ಬೆಳೆಯುತ್ತಿದ್ದರು. ದೇಶಕಟ್ಟ್ ಪಾಟ್‌ನಲ್ಲಿ: 'ಪಾಬೊಳಿಯ ಮೇಂದಲೆ ಕೆಂಗಳಮೆ ಕ್‌ಗ್ಗಟ್ಟ್' -ಅಂದರೆ ಮೇಂದಲೆ ನಾಡು (ನಾಪೋಕ್ಲು ಕಾವೇರಿ ಹೊಳೆ ಯಾಚೆ) ಬಿಳಿಭತ್ತಕ್ಕೆ: ಪಾಲ್‌ಬೊಳಿಯ>ಪಾಬೊಳಿಯ=ಬಿಳಿ ಭತ್ತ ಬೆಳೆಗೆ ಹೆಸರಾಗಿದೆ; ಕ್‌ಗ್ಗಟ್ಟ್‌ನಾಡು ಕೆಂಗಳಮೆ(ಕರ್ತಭತ್ತ) = ಕೆಂಪು ಭತ್ತದ ಬೆಳೆಗೆ ಹೆಸರಾಗಿದೆ, ಎಂದರ್ಥದಲ್ಲಿ ಹೇಳಿದೆ.

ಹೀಗಿರುವಲ್ಲಿ ನಾಪೋಕ್ಲು ಸನಿಹದ ಯವಕಪಾಡಿಯಲ್ಲಿ ಕರ್ತಭತ್ತ ಬೆಳೆದೋ ಅಥವಾ ಕರ್ತಭತ್ತ ಬೆಳೆಯುತ್ತಿದ್ದ ಕ್‌ಗ್ಗಟ್ಟ್ ನಾಡಿನಿಂದ ಬಂದು ನೆಲೆಯಾದ ಕಾರಣವೋ 'ಪನ್ನಂಗಾಲತಮ್ಮೆ' ದೇವತೆ ಸಂಬಂಧದ 'ಕರ್ತಂಡ' ಬಟ್ಟತ್ತಕ್ಕರು (ದೇವಾಚಾರ ಮುಖ್ಯರಲ್ಲಿ ಒಬ್ಬರು), 'ಕರ್ತಂಡ' ಎಂಬ ಮನೆಪೆದವನ್ನು ಹೊಂದಿದರೆಂದು ತೋರುತ್ತದೆ.

ವಿಜಯನಗರ ಪತನಾನಂತರ ೧೬ನೇ ಶತಮಾನದ ಕೊನೆಗೆ ಕೊಡಗು ೧೨ ನಾಯಕರ ಆಳ್ವಿಕೆಯಲ್ಲಿತ್ತು ಎಂಬುದು ಫೆರಿಸ್ತನ ಮಾತು. ಈ ನಾಯಕರಿಗೆ ಮುಂಚೆ ೧೫೬೫-೮೫ರ ಅವಧಿಯಲ್ಲಿ ಕೊಡಗಿನಲ್ಲಿ ಅರಾಜಕ ಅವಸ್ಥೆಯಿತ್ತು. ಆ ಸಮಯದಲ್ಲಿ ಬಾಳುಕಾರರು, ಬಾಚೆಕಾರರು, ನಾಡ್ ಬಾಚೆಕಾರರು (ಆರೆ ಬಾಚೆ-ಕಾರರು) ಎಂದುಕೊಳ್ಳುತ್ತ ಕೊಡಗಿನ ಒಂದೊಂದು ಭಾಗವನ್ನು ಹಿಡಿತದಲ್ಲಿಟ್ಟುಕೊಂಡಿದ್ದರು. ಇವರು ಪರಸ್ಪರ ಕಲಹ ವಾಡುತ್ತಿದ್ದರು.[೨೫] ನಾಯಕರು ಬಂದ ಮೇಲೆ ಇವರು ಅವರ ಅಧೀನರಾಗಿ ಸೈನಿಕಮುಖ್ಯರಾಗಿ ಬಾಳುವೆ ಮಾಡಿದಂತಿದೆ. ಬಹುಶಃ ***ಬಾಳುವಂಡ, ಬಾಚರಣೆಯಂಡ, ಬಾಚಮಾಡ, ಬಾಚೆಟ್ಟಿರ ಬಾಚ್ಚಳ್ಳಿರ, ಬಾಳಂಡ*** ಇತ್ಯಾದಿ ಮನೆಪೆದಗಳು ಈ ಮೂಲದಿಂದ ರೂಪುಗೊಂಡಂತಿವೆ. ಈ ಮನೆತನದವರು, ಹಾಲೇರಿ ಅರಸರ ಪೂರ್ವದಿಂದಲೂ ಇದ್ದು, ಹಾಲೇರಿ ಅರಸರ ಕಾಲಕ್ಕೆ ಗೌರವಾನ್ವಿತವಾಗಿ ಜಮ್ಮ ಆಸ್ತಿಯನ್ನು ರೂಢಿಸಿಕೊಂಡಿರುವಂತಿದೆ. ಕುಮಟೂರಿನ ಬಾಚರಣೆಯಂಡ ಮನೆತನದ ಐನ್‌ಮನೆಯ (ಕೊಪ್ಪದ ನೆಲೆ: ಕುಮಟೂರು ಗ್ರಾಮ) ಹಸ್ತಿಸೋಪಾನ, ಕಲ್‌ಬೋಟೆ, ಬಟ್ಟಗಲ್ಲು ವ್ಯವಸ್ಥೆ, ಇತ್ಯಾದಿಗಳು

ಕೊಳಗದಾಳುವಿನಲ್ಲಿರುವ ಮೂಲಮನೆಯ ಬಾಚರಣಿಯಂಡ ಮನೆತನಕ್ಕೆ ಬಂದ ವ್ಯವಸ್ಥೆಯ ಪ್ರತೀಕ ಎನಿಸುತ್ತದೆ. ಈ ಮನೆತನದ ಮೂಲಪುರುಷನ ಹೆಸರು 'ಮಣಿಯ' ಎಂದಿದ್ದು ಮೊದಲಿಗೆ 'ಮುದ್ದುಮಣಿಯಂಡ' ಎಂಬ ಮನೆಪೆದವಿತ್ತು. ಮನೆತನವು ತೋರಿದ ಶೌರ್ಯದ ಕಾರಣ ಬಾಚಮಣಿಯಂಡ ಎಂದಾಗಿ ಮುಂದೆ 'ಬಾಚರಣಿಯಂಡ' ಎಂಬ ಹೆಸರು ರೂಢಿಗೆ ನಿಂತಿತಂತೆ.[೨೬] ತಾವಳಗೇರಿ ಮೂರ್ನಾಡುವಿನಲ್ಲಿ ಕೈಬಿಲಿರ ಮನೆತನವಿದೆ. ಇದು ಹಾಲೇರಿ ಅರಸುವಂಶಪೂರ್ವದಿಂದಲೂ ಇದ್ದ ಮನೆತನವೆನ್ನಲಾಗಿದೆ. ಕೈಲ್‌ಪೊಳ್ದು ಹಬ್ಬದಲ್ಲಿ (ಕೊಡಗಿನ ಆಯುಧ ಪೂಜೆ ಹಬ್ಬ) ಬೇಟೆಗೆ ಹೋಗುವ ತರುಣರಿಗೆ ಹಿರಿಯರು ಹೇಳುತ್ತಿದ್ದ ಎಚ್ಚರಿಕೆಯ ನುಡಿ : 'ಕೈಬಲ್ಯ ನರಿ(=ಹುಲಿ)' ಎಂದರೆ 'ಹುಲಿಗೆ' ಕೈಯಲ್ಲಿ ಹೆಚ್ಚು ಬಲ ಎಂದರ್ಥ. ಅಂದರೆ ಈ ಮನೆಯವರು ತೋಳ್ಬಲಕ್ಕೆ ಪ್ರಸಿದ್ಧಿಗೊಂಡವರಾಗಿ ಈ ಹೆಸರು ಪಡೆದಂತಿದೆ. ಕೈಬಲ್ಯ>ಕೈಬಿಲ್ಯ>ಕೈಬಿಲ್ಲ>ಕೈಬಿಲ>ಕೈಬಿಲಿ>ಕೈಬಿಲಿರ ಆಗಿರಬಹುದು. ಹೀಗೆಯೇ ಅಜ್ಜಿ ಸಾಕಿದ ಮಕ್ಕಳು 'ಅಜ್ಜಿಕುಟ್ಟಿರ' ಎಂಬ ಮನೆಪೆದ ವಾಗಿ ಅಂಜಿಗೇರಿನಾಡಿನಲ್ಲಿ ಕಾಣಬರುತ್ತದೆ. ಮನೆಯ ಬಳಿ ಹಲಸಿನ ಮರ ಇದ್ದ ಕಾರಣ (ಚಕ್ಕೆ=ಹಲಸು) 'ಚಕ್ಕೆರ' ಮನೆಪೆದ ಮೂಡಿ ಬಂದಂತಿದೆ. ಬೆಟ್ಟಿಯತ್‌ನಾಡಿನಲ್ಲಿ (ಹಳ್ಳಿಗಟ್ಟು) ರಾಜರ ಕಾಲಕ್ಕೆ ಶತ್ರುಗಳಿಗೆ ಅಡ್ಡವಾದವರು, ದಾನಕ್ಕೆ ಹೆಸರಾದವರು ಎಂಬ ಕಾರಣಕ್ಕಾಗಿ 'ಅಡ್ಡಂಡ' ಎಂಬ ಹೆಸರು ಬಂತೆನ್ನಲಾಗಿದೆ. 'ಪುತ್ತರಿ'(=ಹುತ್ತರಿ) ಹಬ್ಬದ ಸಂಬಂಧದ ಯಾವುದೋ ಕಾರಣಕ್ಕಾಗಿ ಪುತ್ತರಿರ(ಚಟ್ಟಳ್ಳಿ) ಮನೆಪೆದ ಬಂತೆನ್ನಲಾಗಿದೆ.

ಪಟ್ಟೋಲೆ ಪಳಮೆಯ ಎವ್ವಮಕ್ಕಡ ದೇಬುವಡ ಪಾಟ್‌ನಲ್ಲಿ, *ಪಾಂಡಿ, ಪರದ, ಕುಡುವ, ಬಡುವ, ಪೋರೆಯು, ಪರುವ* ಇತ್ಯಾದಿ ಏಕವಚನ ಸಂಬೋಧಿತ ಮನೆಪೆದಗಳಿವೆ. ಅವು ಕ್ರಮವಾಗಿ ರಾಜರ ಕಾಲಕ್ಕೆ ಗೌರವಾನ್ವಿತವಾಗಿ *ಪಾಂಡಿರ, ಪರದಂಡ, ಕುಡುವಂಡ, ಬಡುವಂಡ, ಪೋರಿರ, ಪರುವಂಡ* ಎಂಬ ಬಹುವಚನರೂಪಿ ಮನೆಪೆದಗಳಾಗಿ ರೂಢಿಗೊಂಡಿವೆ. ಇದಲ್ಲದೆ ಹಿಡುವಳಿ ಶಿಸ್ತು ದಾಖಲೆಗಳಲ್ಲಿ *ಅಜ್ಜಾಮಕ್ಕಳ, ಅಂಡಾಮಕ್ಕಳ, ಕೋರಮಕ್ಕಳ, ಅಣ್ಣೆಮಕ್ಕಳ, ಅಕ್ಕಣಿಮಕ್ಕಳ* ಇತ್ಯಾದಿ ಮನೆಪೆದಗಳು ದೊಡ್ಡ ಅವಿಭಕ್ತ ಕುಟುಂಬದ ಸಂಕೇತವಾಗಿ ಅಜ್ಜಾಮಾಡ ಅಂಡಾಮಾಡ, ಕೋರಮಾಡ, ಅಣ್ಣೆಮಾಡ, ಅಕ್ಕಣಿಮಾಡ ಎಂದು ಚಾಲ್ತಿಗೊಂಡವು.

'ಮಾಡ' ಎಂದರೆ (ಮನೆತನದ) ತುಂಬಾ ಜನರು ವಾಸಿಸುವ ದೊಡ್ಡಮನೆ ಎಂಬ ಅರ್ಥವೂ ಇದೆ.[೨೭] *ಕುಟ್ಟಂಡ, ಕೋದಂಡ, ಕೊರವಂಡ* ಎನ್ನುವಲ್ಲಿ ರಾಜರ ಬಳಿ ಇದ್ದು ಹೆಸರು ಮಾಡಿದ ವ್ಯಕ್ತಿ ಹೆಸರಿನ ಮೂಲದವಾಗಿವೆ. ಇಲ್ಲಿ ಅಂಡ (= of = ಅವರ) ಎಂಬ ಬಹುವಚನ ಪ್ರತ್ಯಯ ಸೇರಿ ಗೌರವ ಸೂಚಕ ಮನೆಪೆದಗಳಾಗಿವೆ. ೧೯೨೯ರ ಸುಮಾರಿನಲ್ಲಿ ಒಂದು ಮನೆತನವು ಕೊಡವರೆನ್ನಿಸಿಕೊಂಡ ಸಂಗತಿ ಇದೆ (ಕೊಡವ ಆಚಾರ ವಿಚಾರ, ಭಾಷೆ, ಪದ್ಧತಿ ಅನುಸರಿಸಿ ಆ ಸಮಾಜದಿಂದ ಸಮ್ಮತಿಗೊಂಡವರು) ಎಂದಿದ್ದಾರೆ ಕೆ. ಎ. ತಮ್ಮಯ್ಯ.[೨೮] ಇಂಥ ಸಂಗತಿ ಈಚೆಗೂ ಅಂದರೆ ೧೯೯೦ರ ದಶಕದಲ್ಲೂ ನಡೆದು ಗೌಡ ಜನಾಂಗದ 'ಕೃಷ್ಣೇಗೌಡ' ಎಂಬುವರು ಕೊಡವರಾದ ಬಗ್ಗೆ ಕೊಡಗಿನ ಪತ್ರಿಕಾವಾರ್ತೆ ತಿಳಿಸಿದೆ. ಹಿಂದೆ 'ಮೇಣಿಯಚಂಡ' ಎಂಬ ಕೊಡವ ಮನೆಪೆದವಿದ್ದುದು ಈಚೆಗೆ ತಿಳಿದುಬಂದಿದೆ (ಬ್ರಹ್ಮಗಿರಿ ೨೯.೧೦.೨೦೦೧). ಪಾಲ್ಬರೆ ಬಳಿಯ ಸುಳುಗೋಡುಕೇರಿಯಲ್ಲಿ ತುಳುಗೌಡ ಉಪ್ಪಂಡೀರ ಮನೆತನವಿತ್ತಂತೆ. ಆ ವಂಶ ಹೋದ ಮೇಲೆ ಆ ಮಣ್ಣಿಗೆ ಕಳ್ಳಿಚಂಡ ಕೊಡವ ಮನೆತನ ನಿಂತಿದೆ.

ಇನ್ನು, ಮನೆಪೆದಗಳು ಕೊನೆಯ ಅಕ್ಷರ ಅಥವಾ ಶಬ್ದ ಇರ, ಏರ ಡ,ಳ, ಅಂಡ, ಮಾಡ, ಇತ್ಯಾದಿ ಪ್ರತ್ಯಯಗಳನ್ನು ಕೂಡುವ ಮೂಲಕ ಕಾಣಿಸಿಕೊಳ್ಳುತ್ತವೆ. ಈ ಪ್ರತ್ಯಯಗಳು ಆಯಾ ಮನೆತನಕ್ಕೆ, ಮನೆಪೆದಕ್ಕೆ ಗೌರವ ತರುವ 'ಇಂಥ ಮನೆಯವರು' ಎಂಬರ್ಥ ಸಂಯುಕ್ತವಾಗಿ ಸೇರಿವೆ. ಇವು ಸೇರಿಕೊಳ್ಳುವುದರಲ್ಲೂ ಕ್ರಮವಿದೆ; ಹಾಗು ಅಸ್ತಿತ್ವ ಸ್ವಾತಂತ್ರ್ಯವನ್ನು ಗುರುತಿಸಲು ನೆರವಾಗಿವೆ. ಅಲ್ಲದೆ ಮನೆಪೆದ ಇರುವಲ್ಲಿ, ಮನೆತನದ (ಗುರು ಕಾರೋಣ) ಮೂಲಪುರುಷ ನಿರ್ಮಿತ ಐನ್ ಆರ್ವಾಡು (ಬಲ್ಯಮನೆ), ಅವನ ಸ್ಮಾರಕ ಕಟ್ಟಡವಾದ 'ಕೈಮಡ', ಸಾಧಿಸಿದ ವಂಶಪಾರಂಪರ್ಯ ಹಕ್ಕಿನ ಪರಭಾರೆ ಮಾಡಬಾರದೆನ್ನುವ 'ಜಮ್ಮ', ತೂಟಂಗಳ (ರುದ್ರಭೂಮಿ) ಬಾಣೆ, ಗೆರೆಕಾಡು, ನಾತ, ಗುಳಿಗದೈವನೆಲೆ, ಕೆರೆ ಇವೆಲ್ಲದರ ಸಂಯುಕ್ತ ವ್ಯೂಹದ ಭಾವನಾತ್ಮಕ ನಂಟು ಹೊಂದಿರುತ್ತದೆ; ಸಾಂಸ್ಕೃತಿಕ ಸಂಯುಕ್ತವಾಗಿರುತ್ತದೆ. ಇದನ್ನೆ 'ಮನಸ್ಥಾನ' ಎನ್ನುವುದು; ಹಾಗು 'ಮನೆಸ್ಥಾನ' ಎಂಬ ಧ್ವನಿಯನ್ನು ಹೊಂದಿರುವುದು ಆಗಿ ವಂಶಾವಳಿ ಪಟ್ಟಿ(ವಂಶವೃಕ್ಷ) ಹೊಂದಿ ಗೌರವಾನ್ವಿತ ಪಾರಂಪರಿಕ ಮನೆತನವೆನಿಸುತ್ತದೆ. ವಂಶವೃಕ್ಷವನ್ನು ಬರೆದಿಟ್ಟಿಲ್ಲದಿದ್ದರೂ ಬಾಯ್ದೆರೆಯಲ್ಲಿ ಹೇಳುವವರುಂಟು. ಇದೊಂದು ಸಾಮಾಜಿಕ ಬಂಧ. ಈ ವಂಶವೃಕ್ಷವು, ಹುಟ್ಟಿದ ಮಕ್ಕಳ ಮನೆಪೆದ, ಮದುವೆ ಆಗಿ ಹೋದ ಹೆಣ್ಣುಮಕ್ಕಳಿಗೆ ದಕ್ಕಿದ ಗಂಡನ ಮನೆಯ ಮನೆಪೆದ, ಮಣ್ಣಿಗೆ ಬಂದು ನಿಂತವರು ಹೊಂದಿದ್ದ ಮನೆಪೆದ ಇವುಗಳನ್ನೆಲ್ಲ ತೋರುತ್ತ ಮನೆತನದ ಸಾಂಸ್ಕೃತಿಕ ಇತಿಹಾಸವನ್ನು ತೆರೆದಿಡುತ್ತದೆ. ವಂಶದ ಅಸ್ತಿತ್ವವನ್ನು ನಿರ್ಮಿಸಿದ ವ್ಯಕ್ತಿ, ಘಟನೆ, ಪರಿಸರ, ಶೌರ್ಯ ಕಾರಣಗಳು ಇವುಗಳಿಗೂ ಇಂದಿನ ವಂಶಿಕ ಘಟಕವಾಗಿ, ಉಳಿದಿರುವರು ಸ್ಮರಿಸಿ ಆತ್ಮೀಯ ಬಾಂಧವ್ಯದ ಕೃತಜ್ಞತೆಯನ್ನು ತೋರಿಸಲು ಇರುವ ಐತಿಹಾಸಿಕ ಸಂಕೇತವೇ ಮನೆಪೆದ, ಎನ್ನಬೇಕು. ಸಾಮಾನ್ಯವಾಗಿ ಪದಾಂತ್ಯದ ಹಿಂದಿನ ಅಕ್ಷರ ಇ, ಈ, ಉ, ಎ, ಏ ಕಾರಾಂತ ಸ್ವರ ಸಹಿತ ವ್ಯಂಜನವಾಗಿದ್ದರೆ ಬಹುವಚನ ಪ್ರತ್ಯಯವಾಗಿ ಮನೆಪೆದಗಳಿಗೆ 'ರ' ಎಂಬ

ಅವರ್ಗೀಯ ವ್ಯಂಜನ ಸೇರಿ ಮನೆಪೆದ ತದನುಗುಣವಾಗಿ ರೂಪುಗೊಳ್ಳುತ್ತದೆ (*ಅಪ್ಪಚ್ಚಿರ, ಗುಮ್ಮಟೀರ, ಪಾಸುರ, ಅಪ್ಪುರ, ಕೋಟೆರ, ಪೈಕೇರ*); ಪದಾಂತ್ಯದ ಹಿಂದಿನಕ್ಷರ ಅ,ಆ, ಉ, ಏ, ಅಂ, ಕಾರಾಂತ ಸ್ವರ ಸಹಿತ ವ್ಯಂಜನವಾಗಿದ್ದರೆ ಬಹುವಚನ ಪ್ರತ್ಯಯವಾಗಿ ಡ, ಮಾಡ, ಳ ಎಂಬ ವರ್ಗೀಯ ಹಾಗು ಅವರ್ಗೀಯ ವ್ಯಂಜನಗಳು ಸೇರಿ ಮನೆಪೆದ ತದನುಗುಣ ರೂಪುಗೊಳ್ಳುತ್ತದೆ(ಅರಮಡ, ಉಳ್ಳಿಯಡ ಕುಪ್ಪಣಮಾಡ, ಇಗ್ಗುಡ, ಪರದಂಡ, ಶಿವಚಾಳಿಯಂಡ, ಮಾಚಂಗಳ.....).

ಈ ಹಿನ್ನೆಲೆಗಳಿಗೆ ಒಂದು ಉದಾಹರಣೆಯಾಗಿ ಬೆಟ್ಟಿಯತ್ ನಾಡಿನ ಕುಂದಗ್ರಾಮದ ಬಳಿಯ ***ಈಚೂರಿನ ತೀತಾಮಾಡ*** ಮನೆತನದ ವಂಶಾವಳಿ ಪಟ್ಟಿಯನ್ನು ೫ನೇ ತಲೆ ಕಾರೋಣನಿಂದ ಮುಂದಿನ ಪುಟದಲ್ಲಿ ನೀಡಲಾಗಿದೆ.⊕ ತಲೆಗೆ ಮುವತ್ತು ವರ್ಷ ಗಳ ಲೆಖ್ಖದಲ್ಲಿ ವಂಶಾವಳಿಯ ಇತಿಹಾಸ ಸಾಮಂಜಸ್ಯಕ್ಕೆ ಅದು ಸಾಕ್ಷಿಯಾಗಿದೆ. ಈ ಮನೆತನಕ್ಕೆ ಹಾಲೇರಿ ಅರಸರ ಕಾಲದಲ್ಲಿ ಕೊಟ್ಟ ಜಮ್ಮಾದ ಭೂಮಿಗೆ ಆಂಗ್ಲರ ಕಾಲದಲ್ಲಿ ಒದಗಿದ ಕ್ರಿ.ಶ. ೧೮೪೩ರ **ಅಪ್ರಕಟಿತ** ಸನ್ನದು ನಿರೂಪ ಹೀಗಿದೆ:

***ಕೊಡಗು ದೇಶದ ಕಮೀಸನರ್***

***ಸರಕಾರ ಕುಂಪಣಿ ಬಹದ್ದುರವರ ಯಿಲಾಖಾ***

***ಕೊಡಗು ದೇಶದ ಕಮೀಸನರ್ ಮೇಜರ್ ಜರ್ನಲ್***

***ಮಾರ್ಕ ಕಬನ್ ಸಾಹೇಬ ಬಹದ್ದುರವರು***

*ಕಿಗ್ಗಟ್ಟುನಾಡು ತಾಲ್ಕು ಪೈಯ್ಕಿ ಬೆಟ್ಟಿಯತ್ ಮೂರ್ನಾಡು ಯೀಚೂರ್‍ರು ಗ್ರಾಮದಲ್ಲು ಯಿರುವ ಜಂಮ್ಮದ ಕೊಡಗ ತೀತಾಮಕ್ಕಳ* ***ಜೋಯಪಗೆ*** *ಬರಶಿಕೊಟ್ಟ ಜಂಮ್ಮದ ಭೂಮಿ ಸನದು ನಿರೂಪ ಯೆನಂದ್ರೆ। ನೀನು ಹಜೂರಿಗೆ ಬಂದು* ***ರಾಜಾಸಾಹೇಬರ ದಿವಸದಲ್ಲು*** *ಕೊಟ್ಟಂಥಾ ಜಂಮ್ಮದ ಭೂಮಿಗೆ ಯಿವರಿಗೆ ಸರಕಾರದ ಲೆಖ್ಖ। ಪ್ರಕಾರ ಕಂದಾಯ ತೆತ್ತುಕೊಂಡು ಬರ್ರುವದೆ ಹೊರತ್ತು ಸನದು ನಿರೂಪಯಿಲ್ಲಾ ಯಿ ಬಗ್ಗೆ ನಿರೂಪಕ್ಕೆ ಹುಕ್ಕುಂ ಯಾಗಬೇಕೆಂಬುದಾಗಿ ಜಾಹೇರು ಮಾಡಿಕೊಂಡ ಕಾರಣ ಹುಕ್ಕುಂ ಕೊಡಿಸುವದೆನಂದ್ರೆ। ಯಿದೆ ಗ್ರಾಮದಲ್ಲು ನೀನು ಮಾಡುವ ಮುಕ್ಕಾಟಿರ ವರ್ಗದಿಂದ ವಿಂಗಡಿಶಿ ಬಂದ ಯೇಕದ ತುಂಡುತ್ತೇವದ ವರ್ಗವಂಗ್ಗದರ। ಶಿಸ್ತಿನ ಲೆಖ್ಖ ಪ್ರಕಾರ ಭೂಮಿ ನಿಗಧಿ ಕೇಳಿ ಬಟ್ಟಿ ನೂರಯಪ್ಪತ್ತೇಳು ವರ್ರೆ*
*೧೭೭॥೦*
*ಯಿ ವರ್ಗಕ್ಕೆ ಶೇರಿದ ಬಾಣೆ ಬಾರಿಕೆ ವಿವರಾ। ಚಿಕ್ಕ ತೀತಾಮಕ್ಕಳ ವರ್ಗದಿಂದ ವಿಂಗಡಿಶಿ ಬಂದ ಮನೆದಳ ವಂಗ್ಗದು। ತೀತಾಮಕ್ಕಳ ಮಾರಮಾಡು ಬಾಣೆಯಿಂದ ವಿಂಗಡಿಶಿ ಬಂದ ತೆಂಕ್ಕ ಧಿಕ್ಕಿನ ತುಂಡು ವಂಗ್ಗದು। ಭಗವತಿ ದೇವರ ವರ್ಗಕ್ಕೆ ಶೇರಿದ ಮಾರುಮಾಡು ಮುರಿಬಾಣೆ ವತ್ತು ಪಡುವ ಧಿಕ್ಕು। ಸದರಿ ಮಾರಮಾಡು ಬಾಣೆಯಿಂದ ವಿಂಗಡಿಶಿ ಬಂದ ನಡು ತುಂಡು ವಂಗ್ಗದು। ಅಂತ್ತು ಮ್ಮೂರು ಸಹಾ ಯಿಶೀಮೆ ಯಲ್ಲು ಜಂಮ್ಮದ ರೈಹಿತರಿಗೆ ಲಾಗಾಯ್ತು ನಡದು। ಬರುವ ಕಾಯಂ ದಸ್ತೂರಿ ಮೇರೆ ಸರಕಾರದಿಂದ ನೀನು ಗಟ್ಟಿ ಜಂಮ್ಮ ಪಡಕೊಂಡಿರುವ ಕಾರ। ಣ ಯಿದಂನ್ನು ನಿಂನ್ನ ಪುತ್ರ ಪೌತ್ರ ಪಾರಂಪರ್ಯ್ಯವಾಗಿ ಜಂಮ್ಮವಾಗಿ ಅನುಭವಿಶಿಕೊಂಡು ಸದರಿ ನ್ನೂರಯಪ್ಪತ್ತೇಳುವರ್ರೆ*
*೧೭೭॥೦*



*ಬಟ್ಟಿ ಭೂಮಿಗೆ ಜಂಮ್ಮ ಪ್ರಕಾರ ದರ ನ್ನೂರ್‍ರು ಬಟ್ಟಿ ಭೂಮಿಗೆ ಯ್ಯೆದು*
*೧೦೦*
*ರೂಪಾಯಿ ಮೇರೆ ಬರತ್ಕ ನಾಂಣ್ಯ ಯರಡು ವರಹಾವು ಯರಡು*
*೨(೨ಉ*
*ಹಣ ಮೂರು ವೀಸವಂನ್ನು ಕಾಲ ಕಾಲಂ ಪ್ರತಿಯಲ್ಲು ಸರಕಾರಕ್ಕೆ ವಪ್ಪಿಸುತ್ತ ಸುಖದಿಂದ ಯಿರುವದೆಂಬದಾಗಿ ಅಪ್ಪಣೆ ಕೊಡಿಸ್ತ ಸನದು ನಿರೂಪಕೆ ಬತಾರೀಕು ೨೮ನೆ ಪೆಪರವರಿ ಸಂನ್ ೧೮೪೩ನೆಯ ಯಿಸವಿ। ದರಜಾನಾ। ಬೆಂಗಳೂರು*

ಮೊ॥ ರು॥ ನರಸೈಯ್ಯ
ಮುನಷಿ ಹಜಿರ್‍ರು

**M. Cubbon**
Commissioner for Coorg




* ೧೯೮೩ರಲ್ಲಿ ಪಟ್ಟೇದಾರರಾಗಿದ್ದವರು ಶ್ರೀ ತೀತಾಮಾಡ ಎಂ. ಪೊನ್ನಪ್ಪನವರು (೭೫)

** ಈ ವಂಶವೃಕ್ಷವನ್ನು ೧೭.೯.೧೯೮೩ರಲ್ಲಿ ನನಗೆ ತಿಳಿಸಿಕೊಟ್ಟವರು ಶ್ರೀ ತೀತಾಮಾಡ ಎಂ. ಕಾರ್ಯಪ್ಪ (೫೯), ಈಚೂರು ಗ್ರಾಮ.

ವಿ.ಸೂ. : ೧೮೪೩ರಲ್ಲಿ ಆಂಗ್ಲಕಮೀಷನರ್ ಕಬ್ಬನ್, ಕೊಟ್ಟಿರುವ ನಿರೂಪದಲ್ಲಿ *'ಜಂಮದ ಕೊಡಗ ತೀತಾಮಕ್ಕಳ ಜೋಯಪಗೆ ಬರಶಿ ಕೊಟ್ಟ ಜಮ್ಮಾದ ಭೂಮಿ ಸನದು'* ಎಂದಿದೆ. ಇದು ತಲೆಗೆ ಮೂವತ್ತು ವರ್ಷದ ಲೆಕ್ಕ ಹಿಡಿಯುವಲ್ಲಿ ಈ ವಂಶಾವಳಿಯ ಕಾಲಮಾನ ಪರಂಪರೆಗೆ (೧೮೪೩-೧೯೮೩ರವರೆಗೆ) ಇತಿಹಾಸ ಸಾಮಂಜಸ್ಯವಿರುವುದನ್ನು ತೋರುತ್ತದೆ.

ಕೊಡಗಿನಲ್ಲಿ ೭ನೇ ತಲೆ ಕಾರೊಣ, ೫ನೇ ತಲೆ ಕಾರೊಣರು (ಮೂಲಪುರುಷರು) ರಾಜಮಾನಿತರಾದ ಕಾರಣ ಅವರಿಂದ ವಂಶವೃಕ್ಷ ಆರಂಭಿಸುವ ರೂಢಿ ಇದೆ. ವಾರಸುದಾರರಿಲ್ಲದೆ ಕುತ್ತಿ (ವಂಶ) ನಾಶವಾಗಿದ್ದರೆ ರಾಜರ ಕಾಲದಲ್ಲಿ ಅಂಥವರ ಭೂಮಿಯನ್ನು ಬೇರೆ ಮನೆತನಕ್ಕೆ, ನೀಡಿ ಹಿಂದಿನ ಮನೆಪೆದವನ್ನು ಸ್ಮರಿಸುವ ಪದ್ಧತಿ ಇತ್ತು. ಹಾಗೆಯೇ ಗಂಡು ಸಂತಾನವಿಲ್ಲದಿದ್ದಾಗ, ಬೇರೊಂದು ಮನೆತನದ ಗಂಡು ಬಂದು ಸದರಿ ಮಣ್ಣಿಗೆ ನಿಂತು, ಮದುವೆಯಾದ ಹೆಣ್ಣಿನ ಮನೆಪೆದವನ್ನು ಮುಂದುವರಿಸಿಕೊಂಡು ಹೋಗುವ ಪದ್ಧತಿ ಇದೆ. ಮೊದಲಿದ್ದ ಮನೆತನದವರ ಕುತ್ತಿ ಹೋದಾಗ, ಬೇರೆ ಜನಾಂಗದವರು ಮಣ್ಣಿಗೆ ಬಂದು ನಿಂತರೂ ಹಿಂದಿದ್ದ ಮನೆಪೆದವನ್ನು ಉಳಿಸಿರುವ ಸಂದರ್ಭಗಳಿವೆ. ಮಡಿಕೇರಿ ತಾ. ಹೆಬ್ಬೆಟ್ಟಗೇರಿ- ಕರವಲೆ ಬಾಡಗಕ್ಕೆ ಹೊಂದಿಕೊಂಡಿರುವ ಸಿದ್ಧಮ್ಮಂಡ ಬಾಣೆಯಲ್ಲಿ ಗೊಲ್ಲ ಜನಾಂಗದ *ಚೊಟ್ಟಂಡ* ಮನೆತನದ ವೀರನ ಶಿಲ್ಪವಿದೆ. ಮಣ್ಣು, ಚೊಟ್ಟಂಡ ಮನೆತನಕ್ಕೆ ಸೇರಿದ್ದ ಕಾರಣ ಅಲ್ಲಿಗೆ ಬಂದು ನಿಂತ ಬಿಲ್ಲವ ಜನಾಂಗದವರು ವೀರಗಲ್ಲು ವೀರನಿಗೆ ನಡೆದುಕೊಂಡು ವಾರ್ಷಿಕವಾಗಿ ಎಡೆ ಇಟ್ಟು 'ಚೊಟ್ಟಂಡ' ಮನೆಪೆದವನ್ನು ಸ್ಮರಿಸುತ್ತಾರೆ.[೨೯]

ಒಂದೇ ಮನೆಪೆದವಿರುವ ಕುಟುಂಬದ ಹೆಣ್ಣು ಗಂಡುಗಳ ನಡುವೆ ವಿವಾಹ ನಡೆಯುವುದಿಲ್ಲ. ಹಾಗೆಯೆ ಸಾಕಿದ ಮನೆತನದವರೊಡನೆ ಸಾಕಿಸಿಕೊಂಡವರ ಮನೆತನದ ಹೆಣ್ಣು-ಗಂಡುಗಳ ನಡುವೆಯೂ ತೌಯಿ ಗೌರವದ ಮನೆ ಎಂದು ವಿವಾಹ ಸಂಬಂಧ ಇರುವುದಿಲ್ಲ. ಉದಾ. ಐಚೆಟ್ಟಿರ ಮನೆಪೆದ ಹಾಗು ಬಲ್ಲಚಂಡ ಮನೆಪೆದವಿರುವ ಮನೆತನಗಳಲ್ಲಿ ವಿವಾಹ ಸಂಬಂಧ ಹೀಗಾಗಿ ಇಲ್ಲ. ಇನ್ನು ಕೊಡವ ಮತ್ತು ಅಮ್ಮಕೊಡವರಲ್ಲಿ ವಿವಾಹ ಸಂಬಂಧವಾಗಿರುವುದಕ್ಕೆ ಉದಾ. ಆಗಿ ಹಳ್ಳಿಗಟ್ಟು ಗ್ರಾಮದ ಮೂಕಳೇರ ಗುರುಕಾರೊಣ ಚಿಟ್ಟಿಯಣ್ಣನಿಗೆ 'ತಿರುವಡೀರ' ಮನೆಯ ಅಮ್ಮಕೊಡವತಿ ಅವನ ಕಾರೊಣಚ್ಚಿ ಆಗಿದ್ದಾಳೆ; ಕೊಡವ ಹಾಗು ಗೌಡ ಜನಾಂಗದ ಇಂಥದೇ ವಿವಾಹ ಸಂಬಂಧವು ನಾಪೋಕ್ಲುವಿನ ಕೊಂಬನ ಮನೆತನದಲ್ಲಿ ನಡೆದು ಬಂದಿದೆ. ಇದು ಪಾರಂಪರಿಕವಾಗಿದೆ.

ಬೀಳೂರು ಗ್ರಾಮದ ತಿರುಕುಚೇಲ ಕುಟುಂಬ ಅಮ್ಮ ಕೊಡವರದಂತೆ. ಅದು ನಂತರದಲ್ಲಿ ಕೊಡವ ಮನೆತನವಾಯಿತಂತೆ. ಹೀಗೆಯೆ ತಲ್ತರೆ ಶೆಟ್ಟಳ್ಳಿಯಲ್ಲಿ 'ಕುರಾದ ಗೌಡ' ಮನೆತನ ಮೂಲದಲ್ಲಿ ವೀರಶೈವ ಮನೆತನವಾಗಿತ್ತು. ಶಿವಬಾಳಿಯಂಡ ಮತ್ತು ಮುದ್ದುರ ಮನೆತನಗಳ ಮೂಲವೂ ಲಿಂಗಾಯತ ಮೂಲದಿಂದ ಹಾಗು ಹಾಲೇರಿ ಅರಸುವಂಶಿಕ ಮೂಲದಿಂದ ಬಂದದ್ದೆನ್ನಲಾಗಿದೆ. ಪಟ್ಟಡ ಮನೆತನವು. ಬ್ರಾಹ್ಮಣ ಮೂಲದಿಂದ ಬಂದದ್ದು. 'ಪಟ್ಟ' ಎಂದರೆ ಕೊಡವ ಭಾಷೆಯಲ್ಲಿ 'ಬ್ರಾಹ್ಮಣ' ಎಂದಿದೆ; 'ನಾಗಸೆಟ್ಟಿರ' ಎಂಬ ಮನೆಪೆದದ ಮೂಲ ಸ್ವಯಂವ್ಯಕ್ತವಿದೆ. 'ನಡುವೆಟ್ಟಿರ', ಮನೆಪೆದ ಮೊದಲು ಗೌಡ ಜನಾಂಗದ್ದಾಗಿದ್ದು ಈಗ ಕೊಡವ ಮನೆತನದ್ದಾಗಿದೆ, ಎನ್ನಲಾಗಿದೆ. ಹೀಗೆಯೇ ಮುವತ್ತೊಕ್ಕಲಿನ 'ಕುತ್ತನಳ್ಳಿರ' ಎಂಬ ಗೌಡಮನೆಪೆದ, 'ಮಂಡೀರ' ಎಂಬ ಕೊಡವ ಮನೆಪೆದವಾಯಿತಂತೆ.

ಅಮ್ಮಕೊಡವರು ಜನಿವಾರ ಧರಿಸಿಕೊಳ್ಳುತ್ತಾರೆ. ಸಾಮಾನ್ಯವಾಗಿ ಸಸ್ಯಾಹಾರಿಗಳು. ವೈನಾಡಿನಿಂದ ಬಂದವರೆಂದರೂ (ವೈನಾಡು ಕನ್ನಡದ ನೆಲೆಯಾಗಿ ಮೊದಲಿಗೆ ಬಯನಾಡೆನಿಸಿ ಇಂದು ಕೇರಳಕ್ಕೆ ಸೇರಿದೆ) ಜನಿವಾರ ಬಿಟ್ಟು ಬಿಟ್ಟಿದ್ದ ಅವರಿಗೆ ೧೮೩೪ರಲ್ಲಿ ಕೊಡಗು ರಾಜರ ಕರಣಿಕ ತಿಮ್ಮಪ್ಪೈಯ್ಯನು ಬಲಮುರಿಯಲ್ಲಿ ಪಾಡಿ ನಾಡಿನ ಆ ಅಮ್ಮ ಕೊಡವರಿಗೆಲ್ಲ ಜನಿವಾರ ಹಾಕಿಸಿ ಶ್ರೀರಾಮಚಂದ್ರಾಪುರ ಮಠದ ಗುರುಗಳ ಶಿಷ್ಯರನ್ನಾಗಿ ಮಾಡಿದನಂತೆ. ಕಿಗ್ಗಟ್ಟುನಾಡಿನ ಅಮ್ಮಕೊಡವರಿಗೆ ಉಡುಪಿ ಮಠದವರು ಜನಿವಾರ ಹಾಕಿ ಮಠದ ಶಿಷ್ಯರನ್ನಾಗಿ ಮಾಡಿಕೊಂಡರು.[೩೦] ಪಟ್ಟೋಲೆ ಪಳಮೆಯ ರೀತ್ಯಾ ನೂರೊಕ್ಕಲು ಕುಟ್ಟಚಮ್ಮನ ಕುಟ್ಟಮ್ಮ ಸುಬೇದಾರನ ದವಲತ್ತಿನಲ್ಲಿ 'ಕಾವೇರಿ ಬ್ರಾಹ್ಮಣರು' ಎಂದುಕೊಂಡು ಶಿವಮೊಗ್ಗಾ ಡಿಸ್ಟ್ರಿಕ್ಟ್‌ನ ರಾಮಚಂದ್ರಾಪುರದ ಮಠದ ಶಿಷ್ಯರಾಗಲು ನವೆಂಬರ್ ೧೮೩೪ರಲ್ಲಿ ಗುರುಗಳಿಗೆ ಬಿನ್ನವಿಸಿ ಬಲಮುರಿಯ ಕಾವೇರಿ ತೀರದಲ್ಲಿ ಜನಿವಾರ ಧರಿಸಿದರು. ಅನುಗುಣ ಆಚಾರಗಳನ್ನು ಇನ್ನೂ ಮುಂದೆ ನಡೆಸಿಕೊಂಡು ಬರಬೇಕೆಂದು ಫೆಬ್ರವರಿ ೧೮೩೭ರಲ್ಲಿ ಮಠದ ಗುರುಗಳು ನಿರೂಪ ಕಳುಹಿಸಿದರು. ಕಿಗ್ಗಟ್ಟುನಾಡಿನ ಅಮ್ಮ ಕೊಡವರು ಉಡುಪಿಯ ಕಾನೂರ ಮಠದ ಶಿಷ್ಯರಾದರೆ ಮತ್ತೆ ಕೆಲವರು ಸುಬ್ರಮಣ್ಯ ಮಠದ ಶಿಷ್ಯರಾದರು.[೩೧] ಕಿಗ್ಗಟ್ಟುನಾಡಿನ ಕೆಲವು ಅಮ್ಮಕೊಡವ ಮನೆತನಗಳು ಈ ನಡುವೆಯೂ ವಾರ್ಷಿಕ ಮನೆತನದ ಸಂಸ್ಕಾರಗಳನ್ನು ಗದ್ದುಗೆಗೆ ವೀರಶೈವ ಜಂಗಮರಿಂದ ಮಾಡಿಸುವುದುಂಟು. (ಉದಾ. ಹೆಮ್ಮಚ್ಚಿ ಮನೆತನ)

ಅಮ್ಮಕೊಡವರಲ್ಲಿ ಬರುವ ಅನೇಕ ಮನೆಪೆದಗಳಲ್ಲಿ 'ಅಮ್ಮ' ಎಂಬ ಶಬ್ದವೂ ಕೂಡಿ ಬರುವಲ್ಲಿ ಪುರುಷ ವ್ಯಕ್ತಿಗಳ ಹೆಸರಲ್ಲಿ 'ಅಮ್ಮಯ್ಯ' ಎಂದು ಸೇರಿ ಉಚ್ಚಾರಗೊಳ್ಳುತ್ತವೆ. ವೀರರಾಜೇಂದ್ರಪೇಟೆ. ತಾ. ಬೆಟ್ಟಿಯತ್ ನಾಡಿನಲ್ಲಿನ *ಅಚ್ಚಿಯಂಡ, ಮಂಜ್ಪಂಡ, ಚೇಂದುವಂಡ, ತೆಲ್ಲಿರ, ಬೂವಚೆಮ್ಮಂಡ, ಪಿಂಜೋಡಿರ,* ರುದ್ರೀರ ಮನೆತನಗಳ ಪೈಕಿ ಅಚ್ಚಿಯಂಡ, ಮಂಜ್ಪಂಡ ಮನೆಪೆದಗಳ ಮನೆತನಗಳು ಉಳಿದಿವೆ. ಅಚ್ಚಿಯಂಡಮನೆತನದ ಬೆಳ್ಳಿಯಪ್ಪಮ್ಮಯ್ಯನ ಕೈಮಡ (೭ನೇ ತಲೆ ಕಾರೊಣ), ಪಿಂಜಡೀರ ಮನೆತನದ (ಕುತ್ತಿ ಇಲ್ಲದಿದ್ದರೂ) ಕಾರೊಣಚ್ಚಿಯ ಮಾಸ್ತಿ ಕೈಮಡ ಉಳಿದಿದೆ. ಶ್ರೀಮಂಗಲನಾಡಿನ

ಕೋತೂರಿನಲ್ಲಿ 'ಹೆಮ್ಮಚ್ಚಿಮನೆ, ಮನ್ನಕ್ಕಮನೆ, ಬಾಚಮನೆ, ಪೊನ್ನಂಪೇಟೆನಾಡಿನಲ್ಲಿ 'ಪುತ್ತಾಮನೆ', ಮನೆಪದದ ಮನೆತನಗಳಿವೆ. ಮಾಯಮುಡಿಯಲ್ಲಿ ಬಾನಂಡ ಮನೆತನವಿದೆ. ಇಲ್ಲಿ 'ಅಚ್ಚಿ', 'ಅಕ್ಕ', ಶಬ್ದಗಳು ಕಾರೊಣ ಸ್ತ್ರೀ ಮೂಲದ ಮನೆಪದವನ್ನು ತೋರಿಸುತ್ತವೆ. ಬೆಕ್ಕೆಸೊಡ್ಲೂರಿನಲ್ಲಿ 'ಕರ್ತಂಗಡ;' ಪೇರೂರಿನಲ್ಲಿ ಆಮ್ಮಂಡ (ಕೊಂಡಿಂಜಮ್ಮನ),; ಸೂರ್ಲಬಿಯ ಮುಟ್ಲು ಗ್ರಾಮದಲ್ಲಿ 'ಚಲ್ಲಜ್ಜಮ್ಮನ'; ಪಾಡಿಯಿಂದ ಬಂದ ಮೇದು ಅಮ್ಮಯ್ಯ ಗುರುಕಾರಣನಿಂದಾಗಿ 'ಪಾಡಿಯಮ್ಮನ' ಎಂಬ ಮನೆಪದಗಳು ವ್ಯಕ್ತಿ ಹಾಗು ಸ್ಥಳನಾಮವಾಚಿ ಮೂಲದ ಮನೆಪದಗಳಾಗಿ ಕಾಣುತ್ತವೆ.

ಹೀಗೆಯೆ ಗುಂಬೀರ, ಬಲ್ಯಂಡ, ಆಂಡಮಾಡ, ಅಣ್ಯೇರ, ನಾಳಿಯಮ್ಮಂಡ, ಪಾಡಿಯಮ್ಮಂಡ, ಕರ್ತಮ್ಮ, ಬೇರಮ್ಮಂಡ ಬೊಟ್ಟಾಳಿಯಮ್ಮನ, ಬಡಕಡಮ್ಮನ, ಪಾಡಿ ಇರಾರಮ್ಮನ, ಬಾಚಮ್ಮಂಡ, ನೆರೆಯಂಡಮ್ಮಂಡ, ಕುರಿಯಮ್ಮನ, ಊರೊಳಮ್ಮನ, ಕುಪ್ಪುಡೀರ, ಕರ್ತಿಂಗಡ, ಅಮ್ಮತ್ತೀರ, ಚೆಮ್ಮಡಮಾಡ, ಬಾಚಮ್ಮಡ, ಮೂಕಳಮಾಡ, ಬೊಟ್ಟಿಕೋರಿಯಂಡ, ಕುಮ್ಮಚ್ಚಮ್ಮನ, ಚೇಲ್ರಮ್ಮನ ಇತ್ಯಾದಿ ಮನೆಪದಗಳಿವೆ. ಕೇಕಡಮ್ಮನ ಮತ್ತು ತಕ್ಕಡಮ್ಮನ. ಮನೆತನಗಳು ಇಂದಿಲ್ಲ.[೩೨] ಈ ಮನೆಪದಗಳಲ್ಲಿ 'ರ,ಡ, ಅಂಡ., ಮನೆ, ಮಾಡ, ಅಮ್ಮನ' ಎಂದು ಅಂತ್ಯ ಪದಗಳು ಕಾಣ ಬರುತ್ತವೆ. ಮಾತೃಮೂಲದ ಪರಂಪರೆ ಇಲ್ಲಿನ ಮನೆಪದಗಳಲ್ಲಿವೆ.

ಗೌಡ ಜನಾಂಗದ ಮನೆಪದಗಳಲ್ಲಿ ಗೋವಿಂದಮ್ಮನ, ಅಂಚೆಮನೆ, ಅಂಚೀರ, ಅಂಬೆಕಲ್ಲು, ಅಚ್ಚಾಂಡಿರ, ಪೆಮ್ಮುಡೀರ, ಪರ್ಲಕೋಟಿ, ಅಮ್ಮವ್ವನ, ಅಯ್ಯೇಟಿರ, ಉದಿಯನ, ಉಪ್ಪುಕುಳಿ, ಕಳವಾಜೆ, ಕುಂಬುಗೌಡನ, ಕುತ್ಯಾಡಿ, ಕುದುಪುಜೆ, ಕುರುಂಜಿ, ಕೊಳುಂಬೆ, ಎಡಿಕೇರಿ, ಕೇಟೋಳಿರ, ಗೋಣಗಾರ, ಗುಡ್ಡೆಮನೆ, ಚೊಕ್ಕಾಡಿ, ನಂಜನಮಲೆ, ನಡವಟ್ಟಿರ, ಪಟ್ಟತಿ, ಪಡ್ಡಂಬೈಲು, ಕೊಡಗನ, ನೈಯಣಿ, ಪೂಜಾರಿಗದ್ದೆ, ಬಾರಿಯಂಡ, ಶಾಂತೆಯಂಡ ಬೊಮ್ಮೇಗೌಡನ, ದಂಬೆಕೋಡಿ, ಹುಲಿಮನೆ, ಯಂಕನ, ಬಸವೇಗೌಡನ, ಸಣ್ಣಮ್ಮನ ಇತ್ಯಾದಿ ಮನೆಪದಗಳು, ವೃತ್ತಿವಾಚಿ, ವ್ಯಕ್ತಿವಾಚಿಯಾಗಿ (ಪುರುಷ ಮತ್ತು ಸ್ತ್ರೀ) ವಲಸೆ ಬಂದಸ್ಥಳ, ಇರುವ ಸ್ಥಳನಾಮವಾಚಿ, ಜನಾಂಗವಾಚಿ, ಶೌರ್ಯವಾಚಿ ಮೂಲದ ಮನೆಪದಗಳಾಗಿ ಕಾಣಬರುತ್ತವೆ. ಅಂದರೆ ಕೊಡಗಿನಲ್ಲಿ ಪ್ರಾಚೀನದಿಂದಲೂ ಇದ್ದ, ಮೈಸೂರು, ದ. ಕನ್ನಡ ಜಿಲ್ಲೆಯಿಂದ ವಲಸೆ ಬಂದ ಮನೆತನಗಳ ಮಿಶ್ರಣವಾದ ಮನೆಪದಗಳಂತೆ ಇವು ತೋರುತ್ತವೆ. ದಲಿತವರ್ಗದ ಕೆಂಬಟ್ಟಿಗಳ ಮನೆಪದಗಳಲ್ಲಿ ಅಜ್ಜನಿಕುಟ್ಟಡ, ಉಮ್ಮಣಕುಟ್ಟಡ, ಚಂಗಣಕುಟ್ಟಡ, ಪೆಮ್ಮಂಡ ಕುಟ್ಟಂಡ್ರ, ಮಂಜಕುಟ್ಟಂಡ್ರ, ಬಾಳೆಕುಟ್ಟ, ಅಂಜಪರವಂಡಕುಡಿ, ಕಲ್ಯಾಟಂಡ ಕುಡಿ, ಮಠತ್ ಕುಡಿ, ಅವರೆಕುಟ್ಟಡ, ಕೊಂಬುಕುಟ್ಟಡ, ಯರಕುಟ್ಟ ಇತ್ಯಾದಿ ಮನೆಪದಗಳು 'ಮನೆಮಕ್ಕಳಾಗಿದ್ದ ಮೂಲ'ದ ಕುರುಹನ್ನು ತೋರುತ್ತವೆ. ಅಲ್ಲದೆ ಸಸ್ಯ, ಕಸುಬು, ಬೆರಸು ಜನಾಂಗೀಯ ಮೂಲದತ್ತ ಸೂಚಿಸುವ ಮನೆಪದಗಳೂ ಕಾಣುತ್ತವೆ. ವೀರಶೈವ ಮತ ಸಂಬಂಧೀ ಮನೆಮಕ್ಕಳ ಮೂಲವನ್ನು ಸೂಚಿಸುವ ಮನೆಪದಗಳೂ ತೋರುತ್ತವೆ. 'ಕುಟ್ಟ' ಎಂದರೆ, 'ಕುಡಿ' ಅಥವಾ ಮನೆಮಕ್ಕಳು ಎಂಬರ್ಥದಲ್ಲಿಯೇ ಪ್ರಯೋಗ ಏದೆ. ಮನೆಪದಗಳ ಅಂತ್ಯದಲ್ಲಿ ಇವು ಸಾಮಾನ್ಯವಾಗಿ ಕಾಣಬರುತ್ತವೆ. ಆದರೆ ಕೊಡಗಿನ 'ಕುಟ್ಟ' ಗ್ರಾಮದಿಂದ ಬಂದ ಕಾರಣ ಅವರ ಮನೆಪದವಾಯಿತೆನ್ನುವುದು ಪೂರ್ಣ ಸತ್ಯವಲ್ಲ. ಕೆಲವು ಮನೆತನಗಳು ಕುಟ್ಟದಲ್ಲಿ ರಾಜರ ಕಾಲದಲ್ಲಿದ್ದು, ಆ ನಂತರ ಬೇರೆಡೆ ಇದ್ದ ಕೆಂಬಟ್ಟಿಗಳೊಡನೆ ಸೇರಿದರೆನ್ನಬೇಕು. ಆದರೆ ಇಂದು ಅವರ ಮನೆಪದಗಳಿಗೆ 'ಡ', 'ಅಂಡ' ಶಬ್ದಾಂತ್ಯವಾಗಿ ಅವು ಬಹುವಚನ ಸ್ವರೂಪ ಪಡೆಯುತ್ತಿರುವುದು ಗಮನಾರ್ಹ ಸಾಮಾಜಿಕ ತಿರುವೆನಿಸುತ್ತದೆ.

**ಕೊಯವ** (ಕುಂಬಾರಿಕೆ) ಜನಾಂಗದಲ್ಲಿ 'ಮೆಚ್ಚಿದ ಶೂರ' ಮನೆತನವಾದ ಮೇಚಿರ ಎಂಬ ಶೂರ ವ್ಯಕ್ತಿವಾಚಿ ಮನೆಪದವಿದೆ. 'ಮಲ್ಲಂಡ' (ಬಾಳಾಜೆ) ಮನೆಪದವೂ ಅವರಲ್ಲಿದೆ.

**ಐರಿರ** (ಬಡಗಿ) ಜನಾಂಗದಲ್ಲಿ ಬಿಟ್ಟಂಗಾಲದ ಕಾಮಯಂಡ, ಆರಪಟ್ಟು ಗ್ರಾಮದ ಅನ್ನಂಬಿರ (ಮೊದಲಿಗೆ ಐಳಿ ಐರಿರ ಎಂಬ ಹೆಸರಿತ್ತು), ಚೆಟ್ಟಿ ಐರಿರ ಎಂಬ ಹೆಸರಿದ್ದ ವಿಶ್ವಕರ್ಮ ಮನೆತನಕ್ಕೆ ಈಗ 'ಪೊನ್ನೀರ' ಎಂಬ ಮನೆಪದವಿದೆ-ೞಿಳರಲ್ಲಿ ಮಣ್ಣು ಸಂಪಾದನೆ ಮಾಡಿದ ಮೇಲೆ ಚೆಟ್ಟಿ ಐರಿರ ಎಂದಿದ್ದು ಮನೆದೇವರು 'ಪೊನ್ನಿ' (ಇ-ಕಾರಾಂತ್ಯವಾದ ಕಾರಣ ಮನೆಪದಕ್ಕೆ 'ರ' ಅಂಟಿದೆ) ಆದಕಾರಣ 'ಪೊನ್ನೀರ' ಎಂಬ ಮನೆಪದ ಒದಗಿತು. ಕಾಮೆಯಂಡ, ಬಾಳೆಯಡ, ಮುಕ್ಕಾಟಿರ (ಗಾಳಿ ಬೀಡು), ಅಮ್ಮಚ್ಚಿ ಮಣಿಯಂಡ ಎಂಬವು ಐರಿರ ಮನೆಪದಗಳಲ್ಲಿವೆ. ಐರಿರ ಮನೆತನದವರು ಮೊದಲಿಗೆ ಕೇರಳ ದಿಂದ ಬಂದವರು.

**ಕಣಿಯರ** ಜನಾಂಗದಲ್ಲಿ 'ಕೋಲೆಯಂಡ' ಎಂಬ ಮನೆಪದವಿದೆ. ಈ ಮನೆತನ ಕೇರಳದಿಂದ ಬಂದ ಮಣಿಯಾಣಿ (ಮಣಿಕವಡೆ ಹಾಕಿ ರಾಶಿ ಫಲ ನೋಡುವವರು) ಮನೆತನ ವಾಗಿದ್ದು ಕೊಡಗಿಗೆ ಬಂದ ಮೇಲೆ ಮನೆಪದ ಪಡೆದಿದೆ.

**ಹೆಗ್ಗಡೆ** ಜನಾಂಗದಲ್ಲಿ ಕಿರಗೂರಿನ ಕೊರಕುಟ್ಟೀರ, ಕಿಗ್ಗಾಲುವಿನ ಪಡಿಂಞಾರಂಡ ಹಾಗು ಇವರ ಮಣ್ಣಾರುವ (ನೆರವಿಗೆ) ಚಾರಿಮುಂಡ, ಬೆಟ್ಟಗೇರಿಯ ಕಟ್ರತಂಡ, ಪೊಕ್ಕಳಚಂಡ, ಭೀಮಂಡ, ತಂಬಾಂಡ ಇತ್ಯಾದಿ ಮನೆಪದಗಳಿದ್ದು, ವೃತ್ತಿ-ವ್ಯಕ್ತಿ-ಆಹಾರವಾಚೀ (ಪೊಕ್ಕಳ=ರೊಟ್ಟಿ ತಯಾರಿಕೆಗೆ ಪ್ರಸಿದ್ಧಿಯವರು) ಮನೆಪದಗಳಾಗಿ ಕಾಣಬರುತ್ತವೆ.

**ಕೃಷ್ಣಕುಳ ಗೊಲ್ಲಜನಾಂಗದಲ್ಲಿ** ಹೆಬ್ಬೆಟ್ಟುಗೇರಿಯ ಬಿದಕಂಡ ಅಯ್ಯಂಗೇರಿಯ ಬದ್ದಿಯಂಡ ಮನೆಪದಗಳಿವೆ. ಪಾಡಿ ಅಮ್ಮಂಗೇರಿಯ (ಪೊಂಗೆರ) ಪೊಂಜ್ಞೀರ; ಆರೆಯಂಡ (ಕರವಲೆ ಬಾಡಗ); ಅಯ್ಯಂಗೇರಿಯಲ್ಲಿ ಚಂಗಂಡ, ತೆಕ್ಕದ, ತೊತ್ತಿಯಂಡ,

*ಉದ್ದುಮಂಡ, ಆಚಿರ* ಎಂಬ ಮನೆಪೆದಗಳಿವೆ. (ಕೊಡವರಲ್ಲು ತೆಕ್ಕಡ, ತೊತ್ತಿಯಂಡ ಮನೆಪೆದಗಳು ಇವೆ.)

**ಜಮ್ಮಮಾಪಿಳ್ಳೆ**ಗಳಲ್ಲಿ ಟಿಪ್ಪುಸುಲ್ತಾನನ ಕೊಡಗಿನಾ ಕ್ರಮಣದ ಕಾಲದಲ್ಲಿ ಮತಾಂತರಿಸಲ್ಪಟ್ಟ ಕೊಡವ ಕುಟುಂಬ ಗಳಿವೆ. ಅವುಗಳು ಮೊದಲಿನ ತಮ್ಮ ಕೊಡವ ಮನೆಪದಗಳನ್ನು ಉಳಿಸಿಕೊಂಡಿವೆ. ಎಮ್ಮೆಮಾಡಿನಲ್ಲಿ *ಚಂಬಾರಂಡ, ಚಕ್ಕೆರ, ಚೆರಿಯ ಚಂಬಾರಂಡ, ಕಾಳೆರ, ಪೂಲುಮಾಡಂಡ, ಬಲ್ಲಾಜಿಕಾರಂಡ, ಕುಂಜಿಲದ ಕುಂಡಂಡ;* ನರಿಯಂದಡದ *ಕುಪ್ಪೋರಂಡ, ಎರಟಿಯಂಡ;* ಕೊಳಕೇರಿಯ *ಚೆರುಮನೆಕಾರಂಡ;* ಕೊಟ್ಟೋಳಿಯ *ಕುಟ್ಟೋಳಿಯಂಡ, ಕುವ್ವೆಂಡ,* ಮೈತಾಡಿಯ *ಕುವೆಲರ, ಪುಡಿಯಂಡ;* ಐಮಂಗಲದ *ಕೋಳುಮಂಡ;* ನಲವತ್ತೊಕ್ಕಲಿನ *ಮದ್ಯಂಡ, ಕನ್ನಡಿರ;* ಕೊಂಡಗೇರಿಯ *ಕಪ್ಪಂದಿರ;* ಕಂಡಂಗಾಲದ *ಮುಂದಮಾಡ, ಚೆನಿವಾಡ ಆಲಿರ* ಮನೆಪೆದಗಳು ಕಾಣಬರುತ್ತವೆ.[೩೩] ಇವಲ್ಲದೆ ಪೊನ್ನಂಪೇಟೆನಾಡಿನಲ್ಲಿ *ಆಲೀರ,* ಮುವತ್ತೊಕ್ಕಲಿನಲ್ಲಿ *ಅನ್ನಡಿಯಂಡ* ಮನೆಪೆದಗಳು ನನಗೆ ಕಂಡುಬಂದಿವೆ. ಮೀನಿಕ್ಕರ ಎಂಬ ಮನೆಪೆದವೂ ಕಾಣಬರುತ್ತದೆ.

**ಎರವ**ರಲ್ಲಿ ಕುಲವನ್ನು 'ಚೆಮ್ಮ' ಎನ್ನುತ್ತಾರೆ. ಸ್ತ್ರೀ ಮೂಲದ ೨೨ ಚೆಮ್ಮಗಳು ಇವರಲ್ಲಿವೆ. ತಿರ್ನೆಲಿಮಂಜು, ಕೋಟೆ ಚರುವಳ್ಳೀಳ, ಕುಪ್ಪೆತೋಡು, ಮುದುರೆ, ಮಾಡಚೇರಿ, ತಿರುಮುಂಡ, ಪುದುಚೇರಿ, ಕಚ್ಚಲೆ, ಪುತ್ತುರು, ಆಂಜಿಲ, ಪಾವುಡ, ಬೆಳ್ಳಿಚಾಲು ಇತ್ಯಾದಿ ಕುಲನಾಮಗಳಿವೆ. ಈ ೨೨ ಚೆಮ್ಮಗಳು ಮೂರು ಗುಂಪುಗಳಾಗಿ ತಿರ್ನೆಲಿಮಂಜು, ಬಡಾಕ್ಕಂಜು, ಪೊದರ್ಮಂಜು ಎಂದು ವಿಂಗಡನೆಗೊಂಡಿವೆ.[೩೪] ತಿರ್ನೆಲಿ ವೈನಾಡಿಗೆ ಸೇರಿದ್ದು ಕನ್ನಡ ಶೆಟ್ಟರ ಪ್ರಭಾವವಿದ್ದ ನೆಲೆ. ಹೀಗಾಗಿ 'ತಿರ್ನೆಲಿಮಂಜು' ಕುಲನಾಮವು ಸ್ಥಳನಾಮ ಮೂಲದ್ದಾಗಿದೆ. ಕೊಡಗಿಗೆ ಬಂದ ಎರವರು ಪಂಜರಿ, ಪನ್ನ, ಬಡವ, ಕಾಗಿ ಎರವರು ಎಂದು ವಿಭಾಗಗೊಂಡಿದ್ದಾರೆ.[೩೫] ಇವರಲ್ಲದೆ ಪಣಿಯ ಯರವರೂ ಇದ್ದಾರೆ. ಎರವರ ಹಾಡಿನಲ್ಲಿ ಬರುವ 'ಊರು ಸೆಕೆಂಡು ವುಡಸೇಕಂಡು **'ಪಾಲೇರಿ ಅರಚಕು'** ಪೊನ್ನು ಕೊಡ್ತು, ಮಣ್ಣು ಬಾವುಂದು ಕಂಬಮ್ ಇಟ್ಟು ಕವೆಮ್ ಇಟ್ಟು" (ಎಂದರೆ ನಾಡಿನ ದೊರೆ ಹಾಲೇರಿ ಒಡೆಯನಲ್ಲಿ ಹೋಗಿ ಚಿನ್ನ ಕೊಟ್ಟು ಭೂಮಿಕೊಂಡು ಕಂಬ ಕವೆ ನಿಲ್ಲಿಸಿ ಮನೆಕಟ್ಟಿ) ***ಕಲ್ಲಿಲಾ ಚೆಮ್ಮದ*** ಒಂದು ಕುಟುಂಬ ದಕ್ಷಿಣಕೊಡಗಿನಲ್ಲಿ ಮೊದಲು ಬಂದು ನಂತರ ಅವರ ಹಲವು ಕುಟುಂಬಗಳು ಬಂದು ನಿಂತವೆಂದಾಗಿದೆ.[೩೬] ಹಾಲೇರಿ ಅರಸರ ಕಾಲದಲ್ಲಿ ಪನ್ಯ ಜಮೀನಿಗೆ ಅಂದರೆ ರಾಜರ ಖಾಸಗಿ ಕೃಷಿ ಜಮೀನು, ಅರಮನೆ ಕೃಷಿ ಜಮೀನಿನ ಕೆಲಸಕ್ಕೆ ಬಂದರೆಂದಾಗುತ್ತದೆ. ಅಂತೇ ಪನ್ಯಯರವರು ಎಂಬ ವಿಭಾಗವಿದೆ. ಬಹುಶಃ ಸಿರಿಬಾಯಿ ದೊಡ್ಡ ವೀರಪ್ಪನ ಕಾಲದಲ್ಲಿ ಈ ವಿಭಾಗವು ಬಂದಂತಿದೆ. ಸೋಲಿಗರ ಒಂದು ಭಾಗ ಯರವರಲ್ಲಿ ಸೇರಿಹೋಗಿದೆ.

**ಕುಡಿಯರ** ಪೈಕಿ ಕೊಡಗಿನಲ್ಲಿ ಊಮಾಲೆ (ಊರು ಮಲೆ) ಕುಡಿಯರು, ಅಡಿಕೆ ಅಥವಾ ತೇಮಲೆ ಕುಡಿಯರು (ಈಗ ಬೈನೆಮರದಿಂದ ಸೇಂದಿಯನ್ನು ಇಳಿಸುತ್ತಾರೆ.) ಇದ್ದಾರೆ. ತೇಮಲೆ ಎಂದರೆ ತೇನ್=ಜೇನು ಮಲೆ ಎನ್ನುವಲ್ಲಿ ಜೇನು ಇಳಿಸುವ ಕುಡಿಯರೂ ಎಂದಾಗಬಹುದು. ಯವಕಪಾಡಿಯ ಪೂಮಲೆ ಕುಡಿಯ ಜನಾಂಗದಲ್ಲಿ ***'ಕೋಲಿಂದ ಒಕ್ಕ'*** (ಬ್ರಹ್ಮಗಿರಿ : ೫.೮.೨೦೦೨) ಇರುವುದು ತಿಳಿದು ಬಂದಿದೆ.

**ಕಾಪಳರು** ಮಲೆಯಾಳದಿಂದ ಕೊಡಗಿಗೆ ಬಂದ ನಾಯಮಾರ್ ಸಂತತಿಯವರೆಂದು ಕೊಳ್ಳುತ್ತಾರೆ. ಅವರಲ್ಲಿ ಮೂರು ಕುತ್ತಿಗಳಿವೆ: ಆರಂಗದ್, ಬೊಲ್ಲದ, ಪೊಲೆ-ಕುಟ್ಟ ಎಂಬ ವಿಭಾಗಗಳಿಗೆ ಚೊಲಿಪೊವ್ವದಿ, ಕರಿಂಗಾಳಿ ಪೊವ್ವದಿ-ಚಾವುಂಡಿ ದೈವಗಳಿವೆ. ಇವರಲ್ಲಿ ಬೊಲ್ಲದ ಕಾಪಳ, ಚೆತ್ತಿ ಕಾಪಳ, ಅಜ್ಜು ಕಾಪಳ, ಕರಿ ಕಾಪಳ, ಎರಿಂಬ ಕಾಪಳ,[೩೭] ಎಂಬವು ವ್ಯಕ್ತಿಮೂಲವಾಚಿ ಮನೆಹೆಸರುಗಳಾಗಿ ಕಾಣಬರುತ್ತದೆ. ಇವರು ನಾಲ್ನಾಡು ಅರಮನೆ ಬಳಿಯಲ್ಲಿದ್ದು, ಕಾಟಾಳು ಬೊಳ್ತಜ್ಜ (ಕಲ್ಯಾಟಜ್ಜಪ್ಪನ ಆತ್ಮೀಯ) ಇವರ ಮುಖ್ಯ ವಂಶಿಕ ಆರಾಧ್ಯ ದೈವವಾಗಿದೆ.

**ಬೆಟ್ಟಕುರುಬ**ರಲ್ಲಿ ಮುಂಡಪಾಡಿ (ಮೂರು ಗ್ರಾಮ ದವರು), ಎಲ್ವಾಡಿ (ಏಳುಗ್ರಾಮದವರು) ಎಂಬ ೨ ಗೋತ್ರಗಳಿವೆ.

ಕೊಡಗಿನಲ್ಲಿ **ಬ್ರಾಹ್ಮಣ** ಹಾಗು **ವೀರಶೈವ**ರ ಅಸ್ತಿತ್ವ ೧೧ನೇ ಶತಮಾನದಿಂದಲೇ ಇದ್ದ ಬಗ್ಗೆ (ಕ್ರಿ.ಶ.೧೧೮೫) ಯಡೂರು ಶಾಸನೋಕ್ತ ಸೂಚನೆ ಇದೆ. ಆದರೆ ಹಾಲೇರಿ ಅರಸರ ಶಿಸ್ತು, ಹುಕುಂನಾಮೆಯಲ್ಲಿ ಜಂಗಮಸೋಮಯ್ಯ. ಶಿವಾಚಾರದ ಮಲ್ಲಯ್ಯ, ಬ್ರಾಹ್ಮಣ ವೆಂಕಟರಮಣಯ್ಯ, ಎಂದು ಜಾತಿ ವಾಚಕವಾಗಿ ಕರೆಯುತ್ತಿದ್ದುದು ದಾಖಲಾಗಿರುವುದು ಕಾಣುತ್ತದೆ. ಇಂದು ಶ್ರೀ ಇಗ್ಗುತಪ್ಪದೇವರ ಪ್ರಧಾನ ಅರ್ಚಕರ (ಶಾಂತಿಕಾರರು) ಹೆಸರು ಎಳಚಿತ್ತಾಯ ರಾಮಣ್ಣ ಸುಂದರ, ಮುವತ್ತೊಕ್ಕಲಿನ ದೇಗುಲದ ಅರ್ಚಕರ ಹೆಸರು ರಾಮಕೃಷ್ಣ ಸರಳಾಯ ಎಂದಿದ್ದು. ಅವರು ದ. ಕನ್ನಡದ ತಮ್ಮ ಮನೆತನದ ಹೆಸರನ್ನು ಕೊಡಗಿನಲ್ಲಿ ನೆಲೆಯಾದರೂ ಉಳಿಸಿಕೊಂಡಿದ್ದಾರೆ. ಹೀಗೆಯೇ ಬಂಟರ ಚಾಮುಶೆಟ್ಟಿ, ದಿವರು (ದೀವರು), ಮಕ್ಕಳ ಕೆಂಚಪ್ಪ, ನಾಯರ ರಾಮ, ಹಜಾಮರ ಎಂಕ್ಟ, ಬಲಗೈಸುಬ್ಬ, ಅಗಸರ ಲೀಲಮ್ಮ, ಮಡಿವಾಳರ ಮಲ್ಲಸೆಟ್ಟಿ, ಬಿಲ್ಲವರ ಮೋಟ, ಎಂದೆಲ್ಲ ಗುರುತಿಸುತ್ತಿದ್ದುದು ಕಾಣಬರುತ್ತದೆ.

***ಅಪ್ರಕಟಿತ ಮನೆಪೆದಗಳು*** *(ಶಿಸ್ತು, ಹುಕುಂನಾಮೆಯ ಹಸ್ತಪ್ರತಿಗಳಿಂದ ನಮೂದಿತ):*

***ಕೊಡವ*** *: ಅಪ್ಪಂಚ್ಚಗಳ, ತಬ್ಬಂಗಳ, ಉಳುವಂಗಳ, ಉಳಿಯಂಗಳ, ತಡಿಯಂಗಳ, ಪಡಂಗಳ, ಚಟ್ಟಂಗಳ, ಚಟ್ಟಿ ಮೇಚಂಗಳ, ನಿಟ್ಟಂಗಳ, ಬಿಳಿಯಂಗಳ, ತುತ್ತುಂಗಳ, ಪೊಕ್ಕಳಂಗಳ,*

(ಮೊದಲಿನ ರೂಪಗಳು) ಕರ್ನಕುಟ್ಟಿರ, ಕುಪ್ಪುಡೀರ, ಹೆಮ್ಮನೀರ, ಚಿಲಿಪಿಲಿ ಮಕ್ಕಳ, ಮಚ್ಚಾಮಕ್ಕಳ, ಎರಮಿಮಕ್ಕಳ, ದೇಕಾಮಕ್ಕಳ, ಕುಡಿಕೆರ, ಆಮೇರ, ಬಸುವೆಯಂಡ(!) ತಮ್ಮಂಡ(!) ಕೊಳ್ಳಯಕ್ಕಳ(!) ಚೆರಿಯ ಮುಳ್ಳಂಗಳ, ಜಮ್ಮನಿರಾಚೆರಿಯ, ನಂಬುಡಿಮಕ್ಕಳ, ಪೋರಿಮಕ್ಕಳ, ಓಲಂಗಡ (ಹರಿಹರಗ್ರಾಮ-ಕುತ್ತಿ ಇಲ್ಲ), ಮಲಿಪಂಗಡ, ಕೊಯಿಲಂಗಡ ಬರಿಕೇರಿ (ಪೇರೂರು), ಚಂದುರ (ಕುತ್ತಿ ಇಲ್ಲ) ಮಳಾಂಡ (ರುದ್ರಗುಪ್ಪೆ), ತಾಂಡಮಾಡ, ಪಂಡೇತರ (ತಾವಳಗೇರಿ), ತಿರುನೆಲ್ಲಿಮಾಡ, ಕುಂಡರಂಡ, ಪೊನ್ನಪ್ಪಂಡ (ಗಾಳಿಬೀಡು) ಆಳಮೇಂಗಡ, ಕನಿಗಂಡ, ಗೌಡಂಗಡ (ಕೊಟ್ಟಗೇರಿ), ಸೆದು ಮೂಡಿರ, ಕೇಮಂಗಡ (ಕುತ್ತಿ ಇಲ್ಲ-ತೂಚಮಕೇರಿ)

**ಆಮ್ಮಕೊಡವ** : ಮಂಡಾಮನೆ(?) ಮಂದಾಮನೆ(?) ಚೊಟ್ಟೆ ಕೊರಿಯನ (ಚೊಟ್ಟೆ ಕೊರಿಯಂಡ ಅಮ್ಮನ), ಅಚ್ಚಮನೆ(!), ಬೆಳಂದಮ್ಮನ, ಮೂಕಿಯಂಡ (ಕುತ್ತಿ ಇಲ್ಲ ಕುಂದಗ್ರಾಮ), ಮಾದಿಕ್ಕಮ್ಮಡ, ಚಮ್ಮಡಮಾಡ, ಕೈಗಲಮ್ಮ (ಆಯ್ಯಂಗೇರಿ).

**ಗೌಡ ಜನಾಂಗ** : ಅರೆಯನ, ಮಲ್ಲನ, ಪಟ್ಟೆಮನೆ (?), ಬೋರೆಯಂಡ, ಪಟ್ಟಮನೆ, ಒಡೆಮ್ಮನ, ಆಸೇಗೌಡನ, ಪುದಿಯೊಕ್ಕಡ, ಚೀಯಂಡಿರ, ಸಂಕರನ (ಬಲ್ಲಮಾವಟಿ), ಅನ್ನಚ್ಚಿರ (ಬೆಟ್ಟಗೇರಿ), ಹಂಚೆಟ್ಟಿರ (ಬೀದಳ್ಳಿ ಗ್ರಾಮ - ಅವರದು ಒಂದೇ ಹೆಂಚಿನ ಮನೆ ಇದ್ದ ಕಾರಣ ಈ ಮನೆಹೆಸರು ಬಂತು), ಕೊಡಲಿಂಗನ, ಲಕ್ಕಪ್ಪನ, ಕೈಮಂದನ, ಮಣಂಡೆ.

**ಹೆಗ್ಗಡೆ ಜನಾಂಗ** : ಹೆಗ್ಗಡೆ ಪೊಯ್ಯಂಗಳ, ಹೆಗ್ಗಡೆ ಮಾನೆಗಕುಟ್ಟೀರ, ಬೊಪ್ಪಂಡ ಹೆಗ್ಗಡೇರ, ಹೆಗ್ಗಡೇರ, ಚಿನ್ನ ಹೆಗ್ಗಡೇರ, ಸುಳ್ಳಿರ.

ಜೈನಿರ (ಕೊಡವಗೌಡ); **ಮಡಿವಾಳ**: ಭೀಮಚಂಡ (ಟಿ. ಶೆಟ್ಟಿಗೇರಿ, ಸುಮಾರು ೧೯೪೦ರಲ್ಲಿ ಒದಗಿದ ಹೆಸರು); ಮಲ್ಲೀರ (ಬಲ್ಲಮಾವಟಿ); ಮಾಚಿರ (ಹೇರ್ಮಾಡು-ಮಾಚಿರ ಮಣ್ಣೆಗೆ ಬಂದು ನಿಂತು ಪಡೆದ ಹೆಸರು); **ಜಮ್ಮ ಮಾಪಿಳ್ಳೆ**: ಚೀರಂಡ (ಮತ್ತೂರು), ಪಾಲೇಕಂಡ (ದೇವಣಗೇರಿ ಮಾಪಿಳ್ಳೆಗಳು, ಪುಡಿಯಾಂಡರಿ).

**ಅನಿರ್ದಿಷ್ಟ**: ಗಂಗರ ಕುಟ್ಟೀರ, ಶಿಂಡುಕುಟ್ಟೀರ, ಪಂಕಂಡ, ಗಾರೆಯಂಡ, ಕುಂದಂಡ, ಶಿದ್ದಂಡ, ಉದ್ದಿಚಂಡ ಬಕಾರಂಡ, ಕುಂಬಾರಂಡ (ಕೊಯವ?), ಕಲ್ಲುಶೆಟ್ಟಿರ, ಗಾಗೆಯಂಡ, ಅಮ್ಮನಾಯಕಂಡ, ಬಣ್ಣಂಡ, ಕುಲ್ಲಡ, ಬಟ್ಟಮಕ್ಕಳ, ಕಚರಮಕ್ಕಳ, ಹೊನ್ನಮಕ್ಕಳ, ಹೊಂಗೆಮಕ್ಕಳ, ಊರುಮಟ್ಟೀರ, ಮುಳ್ಳಂಗಳ, ಪಣಿಕಂಡ, ಬೊಜ್ಜಂಗಳ, ಬೋಣಿಮನೆ, ಚೆರಿಯ ಕುಂದಿಮಕ್ಕಳ, ಚೆರಿಯ ಕೂತಂಗಳ ಅಲ್ಲೇಟಿರ, ಪುತ್ತೆರೀರ(!) ಕೆಂಚೆಟ್ಟೀರ, ಕೋಳೀಮಕ್ಕಳ, ಕಾಜಮಕ್ಕಳ, ಕೊಮ್ಮೆಂಗಳ, ಕೋರಮಕ್ಕಳ ಇತ್ಯಾದಿ.,

ಈ ಮನೆಪೆದಗಳುಳ್ಳವರು ದೇಶ ಸೀಮೆ, ನಾಡು, ಊರು ತಕ್ಕರಾಗಿ, ಪಟೇಲರಾಗಿ ಕೊಡಗಿನಲ್ಲಿ ಸೇವೆ ಸಲ್ಲಿಸಿದ್ದಾರೆ. ಇನ್ನು ಹುತ್ತರಿಹಬ್ಬ, ಭದ್ರಕಾಳಿಯ ಬೇಡು ಹಬ್ಬ ಮುಂತಾದ ಸಾಂಸ್ಕೃತಿಕ ಸಂದರ್ಭಗಳಲ್ಲಿ ಗ್ರಾಮದ ಮನೆಗಳಿಗೆ ಹೋಗಿ 'ಮನೆಮನೆ ಹಾಡುವ' ಹಾಡುಗಳನ್ನು ಶುಭ ಹಾರೈಸಿ ಹಾಡುಗಾರರು ಹಾಡುತ್ತಾರೆ. ತಕ್ಕರ (ಕುಟುಂಬ/ಜನಾಂಗದ ಆಚಾರ ವಿಚಾರಗಳನ್ನು ನೇರ್ಪುಗೊಳಿಸುವ ಮುಖ್ಯಸ್ಥ) ಮನೆಯ ಬಳಿ ಹೋಗಿ ಮನೆಪೆದ ಹೇಳಿ ಅವರು, 'ಒಕ್ಕದ ಮನೆಜನವೆಲ್ಲ ತಣ್ಣನೆ ಬಾಳೋ'- ಒಕ್ಕದ ಮನೆಯ ಜನರೆಲ್ಲ ತಂಪಾಗಿ ಬಾಳಲಿ ಎಂದು ಹಾರೈಸುತ್ತಾರೆ. ಒಟ್ಟಾರೆ ಒಂದು 'ಮನೆಪೆದ'ದ ಸುತ್ತ ಇರುವ ಪಾರಂಪರಿಕ ಸಾಂಸ್ಕೃತಿಕ ವರ್ತುಲ ಎಂದರೆ ಗುರುಕಾರೊಣ (ಕಾರೊಣನ ಲೋಹಶಿಲ್ಪ ಅಥವಾ ಹುತ್ತ ಅಥವಾ ಮರದ ಬೊಂಬೆ ಅಥವಾ ತ್ರಿಶೂಲ ಅಥವಾ ಶಿಲೆ ಅಥವ ಶಿವಲಿಂಗದ ರುದ್ರಭಾಗ, ಅಥವಾ ವೀರ-ಮಾಸ್ತಿ ಶಿಲ್ಪ ಸಂಕೇತಗಳಲ್ಲಿ), ಹೊಂದಿದ ಜಮ್ಮದ ಗದ್ದೆ ಭೂಮಿ, ಕಟ್ಟಿದ ಐನ್‌ಮನೆ ಹಾಗು ಕಲ್‌ಬೋಟಿ, ಆಲೆಪರೆ (ಹೊರಮನೆ), ಹುತ್ತರಿ-ಬೇಡುಹಬ್ಬದ ಕಳಿವೇಷ ಇತ್ಯಾದಿಗಳು ಕಂಡುಬರುತ್ತವೆ. ಇದಕ್ಕೆ ಉದಾಹರಣೆ ಆಗಿ i. **ಕೋಕೇರಿಯ ಪೊನ್ನಚಂಡ ಗುರುಕಾರೊಣ ಚರಮಣ ಅಜ್ಜಪ್ಪನ ಕೈಮಡ-ಶಿಲ್ಪ, ii. ಚಿಟ್ಟಳ್ಳಿಯ ಪುತ್ತೆರಿರ ಜಮ್ಮ ಭೂಮಿ, ಐನ್‌ಮನೆ, iii. ಆರಮೇರಿ ಬಾಚಿರ ಐನ್‌ಮನೆ ಮುಂದಿನ ಕಲ್‌ಬೋಟಿ, ಆಲೆಪರೆ ಹಾಗು ಹುತ್ತರಿ ಕಳಿವೇಷದ** ಛಾಯಾಚಿತ್ರವನ್ನು ಕೆಳಗೆ ನೀಡಲಾಗಿದೆ. ಇಂಥ ಸಾಂಸ್ಕೃತಿಕ ನೆಲಗಟ್ಟನ್ನು 'ಮನೆಪೆದ'ಗಳು ಪರಿಸರವಾಗಿ ಉಳಿಸಿಕೊಂಡ ಕಾರಣವೆ ಕೊಡಗಿನಲ್ಲಿ ಮನೆತನಗಳು ತಮ್ಮ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಸ್ತಿತ್ವಗಳನ್ನು ಆಧುನಿಕ ಜಾಯಮಾನಗಳ ನಡುವೆಯೂ ಗಟ್ಟಿಯಾಗಿ ತೋರಿಕೊಳ್ಳಲು ಅವಕಾಶವಾಗಿದೆ.



i. i. i.



ii ii iii

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Banerjee B.N., (1979), *Hindu Culture*, Agam Prakashana, Delhi, pp. 164-65.

೧. ಅ. ಕುಂದಗ್ರಾಮದಲ್ಲಿರುವ, ಈ ಮನೆತನದ ಹಿರಿಯ ಮಹಿಳೆಯೊಬ್ಬರಿಂದ ೧೯೮೨ರಲ್ಲಿ ಪಡೆದ ಮಾಹಿತಿ.

೨. ಡಾ. ಎಂ. ಎಂ. ಕಲಬುರ್ಗಿ., (೧೯೮೯), *ಕನ್ನಡ ನಾಮವಿಜ್ಞಾನ*, ಬೆಂಗಳೂರು ವಿಶ್ವವಿದ್ಯಾಲಯ, ಪು. ೩೬, ೩೮.

೩. ಅಜಗುಂಡಿಮನೆತನದ (ಧಾರವಾಡ ಜಿಲ್ಲೆ) ಶ್ರೀ ಎಂ. ಬಿ. ಪಾಟೀಲರು (ಬೆಂಗಳೂರು), ತಿಳಿಸಿದ ವಿಷಯ.

೪. ಡಾ. ಎಂ. ಎಂ. ಕಲಬುರ್ಗಿ., ಅದೇ, ಪು. ೩೮-೪೦.

೫. ಎಂ. ಜಿ. ನಾಗರಾಜ್., (೧೯೯೩), *ಕೆಂಬಟ್ಟಿ ಸಂಸ್ಕೃತಿ*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೫೮.

೬. ಎಂ. ಎಂ. ಕಲಬುರ್ಗಿ., ಅದೇ, ಪು. ೪೦.

೭. ಎಂ. ಜಿ. ನಾಗರಾಜ್., *ಕೆಂಬಟ್ಟಿ ಸಂಸ್ಕೃತಿ*, ಅದೇ, ಪು. ೫೯-೬೩.

೮. L. Anathakrishna Iyer., (1948), *The Coorg Tribes and Castes*, Madras, p. 31.

೯. ಡಾ. ಪಿ. ಎನ್. ಹರೀಶ್., (೧೯೯೩), *ಎರವರ ಸಂಸ್ಕೃತಿ*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು. ೧೧೦, ೧೧೩

೧೦. **ಪಟ್ಟೋಲೆ ಪಳಮೆ**., (೧೯೭೫), *ನಡಿಕೇರಿಯಂಡ ಚಿಣ್ಣಪ್ಪ* (ಸಂ), ಮೈಸೂರು ವಿಶ್ವವಿದ್ಯಾಲಯ, ಪು. ೩೩.

೧೧. *ಎಪಿಗ್ರಾಫಿಯ ಕರ್ನಾಟಕ* (ಹೊಸತು) ಸಂ. ೧., (೧೯೭೨), ಕೊಡಗು ಜಿಲ್ಲೆ, ಮೈಸೂರು ವಿಶ್ವವಿದ್ಯಾಲಯ- ಇದರಲ್ಲಿ ಉಕ್ತವಿರುವ ಶಾಸನಗಳಿಂದ ಹೆಕ್ಕಿ ತೆಗೆಯಲಾದ ಮನೆಹೆಸರುಗಳು.

೧೨. ಎಂ. ಜಿ. ನಾಗರಾಜ್., (೧೯೮೭), *'ಕೊಡಗಿನ ಕೊಲೆ ಕಲ್ಲುಗಳು'*, **ಹರತಿಸಿರಿ**, ಲಕ್ಷ್ಮಣ್ ತೆಲಗಾವಿ (ಸಂ), ಹರ್ತಿಕೋಟೆ, ಪು. ೭೩೨.

೧೨. ಅ. ಕನ್ನಡ ನಿಘಂಟು (೨ನೆಯ ಸಂಪುಟ)., (೧೯೭೬), ಕನ್ನಡ ಸಾಹಿತ್ಯ ಪರಿಷತ್ತು, ಪು. ೧೫-೧೦.

೧೩. ಎಂ. ಜಿ. ನಾಗರಾಜ್., *'ಕೊಡಗಿನ ಕೊಲೆಕಲ್ಲುಗಳು'*, **ಹರತಿಸಿರಿ**, ಅದೇ, ಪು. ೭೧೪, ೭೧೬.

೧೪. **ಪಟ್ಟೋಲೆ ಪಳಮೆ**., ಅದೇ, ಪು. ೩೨೩.

೧೫. ಎಂ. ಜಿ. ನಾಗರಾಜ್., (೨೦೦೦), *'ಕೊಡಗಿನ ಕೈ ಮಡಗಳು ಮತ್ತು ಪೂರ್ವ ಪ್ರೇರಣೆಗಳು;'* ***ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ*** (ಸಹಸ್ರಮಾನಸಂಪುಟ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಸಂ. ೭೮, ಸಂಯುಕ್ತ ಸಂಚಿಕೆ (೨-೪), ಪು. ೫೬.

೧೬. **ಎಪಿಗ್ರಾಫಿಯ ಕರ್ನಾಟಕ, ಸಂಪುಟ ೭ (ರೈಸ್ ಆವೃತ್ತಿ)**, ಶಿವಮೊಗ್ಗ ಜಿಲ್ಲೆ, ಶಾಸನಸಂಖ್ಯೆ ೮೮.

೧೭. **ಎ.ಕ. ಸಂಪುಟ ೧ (ಹೊಸತು)**, ಅದೇ, ಶಾಸನ ಸಂಖ್ಯೆ ೩೯.

೧೮. ಎಂ. ಜಿ. ನಾಗರಾಜ್., *'ಕೊಡಗಿನ ಕೊಲೆಕಲ್ಲುಗಳು'*, **ಹರತಿಸಿರಿ**, ಅದೇ, ಪು. ೭೧೧.

೧೮. ಅ. ಐ. ಮಾ. ಮುತ್ತಣ್ಣ., (೧೯೮೩), ***ಕೊಡವ ಕನ್ನಡ ನಿಘಂಟು***; (೧೯೮೮), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೧೩೭; **ಕೊಡವನುಡಿ ಅರ್ಥಕೋಶ ಸಂಸ್ಕೃತಿ ಅಧ್ಯಯನ**, (೧೯೮೮), ಕೊಡವ ಸಮಾಜ, ಬೆಂಗಳೂರು, ಪು. ೧೧೩.

೧೯. ಪೇರಿಯಂಡ ಚಂಗಪ್ಪ., (೧೯೬೧), **ಕೊಡವಡ ಆಂದೋಳತ್ ಪಾಟ್**, ಕೈಕಾಡು ಗ್ರಾಮ, ಪಾರಾಣೆ ಅಂಚೆ, ಕೊಡಗು ಜಿಲ್ಲೆ, ಪು. ೭೨.

೨೦. ಪಟ್ಟೋಲೆ ಪಳಮೆ., ಅದೇ, ಪು. ೪೯೬.

೨೧. ಅದೇ, ಪು. ೮೧.

೨೨. ಕುಪ್ಪಚ್ಚಿರ ಮೊಣ್ಣಪ್ಪ., (೧೯೮೯), **ಪೊಮ್ಮಾಲೆ ಕೊಡಗ್**, ಮಗ್ಗುಲ ಗ್ರಾಮ, ವೀರರಾಜೇಂದ್ರಪೇಟೆ, ಪು. ೧೦.

೨೩. ಐ. ಮಾ. ಮುತ್ತಣ್ಣ., (೧೯೮೮), ***ಕೊಡವನುಡಿ ಅರ್ಥಕೋಶ ಮತ್ತು ಸಂಸ್ಕೃತಿ ಅಧ್ಯಯನ***, ಅದೇ, ಪು. ೧೪೮.

೨೪. **ಕನ್ನಡ ನಿಘಂಟು, ೭ನೆಯ ಸಂಪುಟ**., (೧೯೯೦), ***ಕನ್ನಡ ಸಾಹಿತ್ಯ ಪರಿಷತ್ತು***, ಬೆಂಗಳೂರು.

೨೫. **ಪಟ್ಟೋಲೆ ಪಳಮೆ**., ಅದೇ, ಪು. ೨೩.

೨೬. ಎಂ. ಜಿ. ನಾಗರಾಜ್., (೨೦೦೦), *'ಕೊಡಗಿನ ಕೈ ಮಡಗಳು ಮತ್ತು ಪೂರ್ವ ಪ್ರೇರಣೆಗಳು'*, ಅದೇ, ಪು. ೩೭.

೨೭. **ವಿಶ್ವಕರ್ನಾಟಕ** (ವಾರಪತ್ರಿಕೆ): ೧೯. ೬. ೧೯೨೭.

೨೮. ಕೆ. ಎ. ತಮ್ಮಯ್ಯ., *'ಕೊಡಗು ದೇಶ ಮತ್ತು ಕೊಡವ ಮನೆತನ'*, **ವಿಶ್ವಕರ್ನಾಟಕ** (ವಾರಪತ್ರಿಕೆ) ೧೩.೧೦.೧೯೨೯, (ಸಂ) ತಿರುಮಲೆ ತಾತಾಚಾರ್ಯ ಶರ್ಮ, ಬೆಂಗಳೂರು.

೨೯. ಎಂ. ಜಿ. ನಾಗರಾಜ್., ***'ಕೊಡಗಿನ ಕೊಲೆ ಕಲ್ಲುಗಳು'***, ಅದೇ, ಪು. ೬೯೪

೩೦. ಡಿ. ಎನ್ ಕೃಷ್ಣಯ್ಯ., (೧೯೭೪), ***ಕೊಡಗಿನ ಇತಿಹಾಸ***, ಮೈಸೂರು ವಿಶ್ವವಿದ್ಯಾಲಯ, ಪು. ೬೨೨.

೩೧. **ಪಟ್ಟೋಲೆ ಪಳಮೆ**., ಅದೇ, ಪು. ೨೦.

೩೨. ಡಾ. ಡಿ. ಬಿ. ರಾಮಚಂದ್ರಾಚಾರ್., (೧೯೯೮), ***ಕೊಡಗು***, *ಸುನಂದ ಪ್ರಕಾಶನ*, ವೀರರಾಜೇಂದ್ರಪೇಟೆ, ಪು. ೮೩.

೩೩. ಕುಪ್ಪಚ್ಚಿರ ಮೊಣ್ಣಪ್ಪ., ಅದೇ, ಪು. ೧೦೯.

೩೪. ಡಾ. ಪಿ. ಎನ್. ಹರೀಶ್., (೧೯೯೩), *ಎರವರ ಸಂಸ್ಕೃತಿ*, ಕರ್ನಾಟಕ ಸಾಹಿತ್ಯ ಅಕಾಡೆಮಿ, ಪು. ೧೧೩, ೧೧೫.

೩೫. G. Richter., (1887), *Ethnographical Compendium - Casters and Tribes found in the province of Coorg*, Bangalore, p. 9.

೩೬. ಡಾ. ಪಿ. ಎನ್. ಹರೀಶ್, ಅದೇ, ಪು. ೬೪, ೬೫.

೩೭. G. Richter., OP. Cit., p. 8.

ಕೆಳದಿ ಗುಂಡಾಜೋಯಿಸ್*

# ಕೆಳದಿ ರಾಜ್ಯಾಡಳಿತದಲ್ಲಿ ಗೌಡ ಸಾರಸ್ವತರು

ದಕ್ಷಿಣ ಭಾರತದ ಚರಿತ್ರೆಯಲ್ಲಿ ಕ್ರಿ.ಶ. ೧೫೬೫ರ ರಕ್ಕಸಗಿ ತಂಗಡಗಿ ಯುದ್ಧದ ಪರಿಣಾಮದಿಂದ ವಿಜಯನಗರದ ಚಿನ್ನ ಭಂಡಾರದ ನಾರಣಪ್ಪಯ್ಯ ಆದಿಯಾಗಿ ೧೫೬೦ರ ಗೋವಾದ ಪೋರ್ಚುಗೀಸರ ದುರಾಡಳಿತದಿಂದ (ಇಂಕ್ವಿಜಿಷನ್) ಗೌಡಸಾರಸ್ವತರು ಹಾಗೂ ಕ್ರೈಸ್ತರ ವಲಸೆಗಳವರೆಗೆ ಯಾವ ರಾಜನಿಗೂ ಕಡಮೆಯಾಗದಂತೆ ವಲಸೆ ಬಂದು ಆಶ್ರಯ ಬೇಡಿದವರನ್ನು ರಕ್ಷಿಸಿ ಅವರನ್ನು ಆಯಾ ಧರ್ಮದಲ್ಲಿಯೇ ನೆಲೆಗೊಳಿಸಿ ಉದ್ಯೋಗವನ್ನು ಕಲ್ಪಿಸಿಕೊಟ್ಟು ನೆಮ್ಮದಿಯುಂಟು ಮಾಡಿದುದು ಕೆಳದಿ ಅರಸರ ಮಾನವೀಯ ಹೆಗ್ಗಳಿಕೆಯಾಗಿದೆ. ಕೊಂಕಣಿ ಜನಪದವೊಂದು-

ದೆವ್ಲಿ ಸೊಮ್ದಿರಾಕ್ ಮಾಯಿ
ಆಯ್ಲಿ ಮಂಗ್ಳೂರಾಕ್
ಆಯ್ಲಿ ಮಂಗ್ಳೂರಾಕ್ ಮಾಯಿ
ಗೆಲಿ ಬೊಳಾರಾಕ್[೧]

ಎಂದಿರುವಲ್ಲಿ ಪೋರ್ಚುಗೀಸ್ ದುರಾಡಳಿತದಿಂದ ಸರ್ವಸ್ವವನ್ನೂ ತ್ಯಜಿಸಿ ಗೋವಾದಿಂದ ವಲಸೆ ಬಂದು ಕೆಳದಿ ರಾಜ್ಯದಲ್ಲಿ ನೆಲೆಯೂರಿದ ಗೌಡಸಾರಸ್ವತರು ಆಡಳಿತದಲ್ಲಿ ಉದ್ಯೋಗ ಗಳಿಸಿಕೊಂಡು ನಿರ್ವಹಿಸಿದ ಪಾತ್ರವನ್ನು ಕುರಿತು ಇಲ್ಲಿ ಸ್ಥೂಲವಾಗಿ ನಿರೂಪಿಸಲಾಗಿದೆ.

***ಗೋವಾದಿಂದ ಕೆಳದಿ ರಾಜ್ಯಕ್ಕೆ ಹಿಂದೂಗಳ ವಲಸೆ:*** ಆಫ್‌ಘಾನಿಸ್ಥಾನದ ಕ್ರೂರ ಧಾರ್ಮಿಕ ದಬ್ಬಾಳಿಕೆಯಂತೆ ೧೫೬೦ರಂದು ಗೋವಾ ವೈಸ್‌ರಾಯಿ ಡೋಮ್ ಆಟೋ ಡಿ ನರೋನ್ಹಾನಿಂದ ಇಂಕ್ವಿಜಿಷನ್ *(Inquisition)* ಮೇರೆಗೆ ಹಿಂದೂ ಧರ್ಮ ಹಾಗೂ ದೇವಮಂದಿರಗಳ ವಿನಾಶದ ಪರಿಣಾಮವಾಗಿ ಗೌಡಸಾರಸ್ವತರು ಮನೆ ಮಾರುಗಳನ್ನು ಕಳೆದುಕೊಂಡು ಜನ್ಮ ಸ್ಥಾನವನ್ನೇ ತ್ಯಜಿಸುವಂತಾಯಿತು. ದಿ। ಮಂಜೇಶ್ವರ ಗೋವಿಂದ ಪೈ ಕ್ರೈಸ್ತಗ್ರಂಥವನ್ನಾಧರಿಸಿ ಹೀಗೆ ದುಃಖದಿಂದ ಉದ್ಗರಿಸಿದ್ದಾರೆ.

*1. In the year 1560 AC, the Jesuits proceeded to evangelize in the province of Salselte which became thence forward the chief field of their labours, the village of cortalim being the first to witness the celebration of mass by them ... The conversion of the inhabitants of this province was indeed very rapid, hundreds and thousands of them being baptized almost every year. Owing to this several churches were erected on the ruins of Hindu temples, 280 of which are said to have been razed to the ground in 1567 (p. 65)*

*2. Also the ruins of 200 idol temples which Viceroy Noronha totally demolished*[*1] *that no memory might remain of monuments of such gross Idolatry (P. 154)*

*3. These were also Jews, who had their own synagognes and their own mode of worship, but the Hindus were not allowed the public exercise of their religion (p. 154)*[೨]

ಈ ಕಾರಣಗಳಿಂದ ಗೋವಾ ಪ್ರಾಂತ್ಯದಲ್ಲಿ ಹಿಂದೂಗಳು ಒಂದೋ ಕ್ರೈಸ್ತರಾಗಬೇಕು; ಇಲ್ಲವೇ ಗೋವೆಯನ್ನು ಬಿಟ್ಟು ಹೋಗಬೇಕು ಎಂಬ ಪರಿಸ್ಥಿತಿಯು ವೈಸ್‌ರಾಯಿ ನರೋಹ್ನಾ ಆಜ್ಞೆಯಿಂದ ನಿರ್ಮಾಣವಾಯಿತು. ಸಾಸಷ್ಟಿಕರ ಹಾಗೂ ಕುಶಸ್ಥಳೀಕರು ವಿಜಯನಗರ ಚಿನ್ನಭಂಡಾರದ ನಾರಣಪ್ಪನಂತೆ ಪ್ರಮುಖರನೇಕರು ಕೆಳದಿ ರಾಜ್ಯಕ್ಕೆ ವಲಸೆ ಬಂದು ರಾಜಾಶ್ರಯ ಪಡೆದು ವಿವಿಧ ಉದ್ಯೋಗಗಳನ್ನು ಗಳಿಸಿಕೊಂಡರು. ಸಾಸಷ್ಟಿಕರು > ಗೌಡಸಾರಸ್ವತರು; ಕುಶಸ್ಥಳೀಕರು>ಮಧ್ವವೈಷ್ಣವದವರು, ಅದನ್ನು ಬಿಟ್ಟುಕೊಟ್ಟು ಮೊದಲಿದ್ದಂತೆ ಅದ್ವೈತಿ ಸ್ಮಾರ್ತರೆನಿಸಿದರು.[೪] ಕೆಳದಿ ನೃಪವಿಜಯದಲ್ಲಿ ಕವಿ ಲಿಂಗಣ್ಣನು ನುಡಿದಂತೆ *"ನಾಲ್ದೆಸೆಯೊಳಿರ್ಪ ವರ್ತಕ ಪೈರುದಾರ ಗಂದಿಗ ಕೊಂಕಣಿಗರ್ ಮುಂತಾದ ಮಹಾನಾಡವರಂಬರಿಸಿ ವೇಣುಪುರವರದೊಳ್ ಸ್ಥಳ ನಿವೇಶನ ಪೇಟೆ ಸಾಲ ಕ್ಲುಪ್ತಿಗಳಂ ಮಾಡಿಸಿ ಸ್ಥಿರ ಲೇಖನಗಳಂ ಬರೆಸಿತ್ತು... ಬ್ರಹ್ಮ ಕ್ಷತ್ರಿಯಾದಿ ವರ್ಣಾಶ್ರಮಾಚಾರ ಧರ್ಮ ಕರ್ಮಂಗಳಂ ಶ್ರುತಿ ಸ್ಮೃತ್ಯುಕ್ತ ಮಾರ್ಗೋಲ್ಲಂಘನಮಾಗದಂತು ನಡೆಯಿಸಿ ಶೈವ ವೈಷ್ಣವಾದಿ ಷಡ್ದರ್ಶನ ವರ್ತಿಗಳಂ ತತ್ತ ದುಕ್ತಮಾರ್ಗದೊಳ್ ನಡೆವಂತು ನಿಯಾಮಕಂಗೈಸಿ, ಸ್ವರಾಷ್ಟ್ರ ಸ್ಥಿತ ಸಮಸ್ತ ಜನರೊಳ್ ಜಾತಿ ಸಂಕರಮಾಗಿ ನಡೆಯ ದಂತಾಜ್ಞಾಪಿಸಿ ತಾಂ ಧರ್ಮದಿಂ ರಾಜ್ಯಭಾರ ವಿಚಾರತತ್ಪರರಾಗಿ ರಾಜಧರ್ಮದಿಂ ವರ್ತಿಸುತ್ತುವಿರ್ದು.."*[*೫] ಎಂಬುದಾಗಿ ಹಿಂದೂ ಧರ್ಮಕ್ಕೆ ಧಕ್ಕೆಯಾಗದಂತೆ ವಲಸೆಗಾರರನ್ನು ಕೆಳದಿ ಅರಸರು ರಕ್ಷಿಸಿ ಕಾಪಾಡಿದರು. ಕೆಳದಿ ರಾಜ್ಯಾಡಳಿತದಲ್ಲಿ ಗೌಡಸಾರಸ್ವತರು ಗಳಿಸಿದ ಪ್ರಮುಖ ಹುದ್ದೆಗಳ ಕುರಿತು ಅನುಬಂಧದಲ್ಲಿ ಪ್ರತ್ಯೇಕವಾಗಿ ನೀಡಲಾಗಿದೆ.

***ಕೆಳದಿ ಆಡಳಿತದಲ್ಲಿ ಗೌಡಸಾರಸ್ವತರ ನಿಷ್ಠೆ :*** ಕೆಳದಿ ರಾಜ್ಯಕ್ಕೆ

* ಗೌರವ ಕ್ಯೂರೇಟರ್, ಕೆಳದಿ ಮ್ಯೂಸಿಯಂ, ಕೆಳದಿ, ಸಾಗರ ತಾಲೂಕು - ೫೭೭ ೪೦೧

ಶ್ರೇಷ್ಠ ರಾಜವರ್ತಕರಾಗಿ ವಾಣಿಜ್ಯೋದ್ದಿಮೆಯಲ್ಲಿ ಅರಸರ ನಿಕಟವರ್ತಿಗಳಾಗಿದ್ದು ರಾಜಭಂಡಾರವನ್ನು ಸಂಪದ್ಭರಿತವನ್ನಾಗಿಸುವಲ್ಲಿ ಗೌಡಸಾರಸ್ವತರು ನಿಷ್ಠೆಯಿಂದ ಸೇವೆ ಸಲ್ಲಿಸಿದ್ದಾರೆ. ದುಭಾಷಿ ವಿಠ್ಠಲ ಶೆಣೈ ದಿ. ೮-೧೧-೧೬೨೩ ರಂದು ಗೋವಾ ವೈಸ್‌ರಾಯಿ ಸಿಗ್ ಫರ್ನಾಂಡೆಜ್, ಇಟಲಿ ಪ್ರವಾಸಿ ಪಿಯತ್ರೋಡೆಲ್ಲಾ ವಲ್ಲೆಯನ್ನು ರಾಜಧಾನಿಯ ಅರಮನೆಯಲ್ಲಿ ಭೇಟಿಯಾಗುವಂತೆ ಏರ್ಪಡಿಸಿದುದು ರಾಜಕೀಯ ಚಾಣಾಕ್ಷತನವಾಗಿದೆ. ಇಟಲಿ ಪ್ರವಾಸಿಗೆ ತಂಗಲು ಬಿಡದಿಗಳ ಏರ್ಪಾಟು ಆದಿಯಾಗಿ ಅವನು ಸ್ವದೇಶಕ್ಕೆ ಹಿಂದಿರುಗುವವರೆಗೆ ರಚಿಸಿದ್ದ ಪ್ರವಾಸಿ ಕಥನಗಳು ಗಮನಾರ್ಹವಾಗಿವೆ. ಡೆಲ್ಲವಲ್ಲೆಯು ಕೆಳದಿ ರಾಜಧಾನಿಯಲ್ಲಿ ಸತೀ ಸಹಗಮನ ಕುರಿತು ಸೋನೆಟ್, ವಿಠಲಶೆಣೈ ರಾಯಭಾರಿಗೆ ನೀಡಿದ ಓಲೆಗರಿ ಹಸ್ತಪ್ರತಿ ಇಟಲಿ ತ್ರಿಯೇಸ್ಥೆ ವಸ್ತುಸಂಗ್ರಹಾಲಯದಲ್ಲಿದೆ.[೬] ೧೬೨೯-೪೫ರಲ್ಲಿ ವೀರಭದ್ರನಾಯಕನ ರಾಯಭಾರಿ ದೇವರಸಶೆಣೈ ಹಾಗೂ ರಾಮಪೈ ಅಕ್ಕಿ-ಮೆಣಸು ವಾಣಿಜ್ಯೋದ್ದಿಮೆಯಲ್ಲಿ ವಹಿಸಿದ ಪಾತ್ರ ಪ್ರಮುಖವಾದುದು. ಲಿಯೋನಾರ್ಡೋ ಪಾಯೇಸ್‌ನ ಉಲ್ಲೇಖದಂತೆ ಪ್ರಸಿದ್ಧ ಶಿವಪ್ಪನಾಯಕನ ಕಾಲದಲ್ಲಿ ಕೆಳದಿ ರಾಜ್ಯ ಮಿರ್ಜಾನ್‌ನಿಂದ ಕಾಸರಗೋಡಿನವರೆಗೂ ವ್ಯಾಪಿಸಿ, ರಾಜಭಂಡಾರವು ತುಂಬಿದ್ದೂ ಬಲಾಢ್ಯ ಸೇನೆಯನ್ನು ಹೊಂದಿದ್ದ ಅರಸನು ಸ್ವತಹ ಪರಾಕ್ರಮಶಾಲಿಯಾಗಿದ್ದರಿಂದ ರಾಜ್ಯದಲ್ಲಿ ಪೋರ್ಚುಗೀಸರ ಉಪಟಳವೇ ಇಲ್ಲದಂತಾಯಿತು. ಕೆಳದಿಯಿಂದ ಗೋವೆ ಹಾಗೂ ವಿದೇಶಗಳಿಗೆ ಆಹಾರ ಪದಾರ್ಥಗಳ ಅಗತ್ಯತೆಯುಂಟಾಗಿ, ಪೋರ್ಚುಗೀಸರು ಸಿಲೋನ್‌ನಲ್ಲಿ ಯುದ್ಧದಲ್ಲಿ ಮಗ್ನರಾಗಿದ್ದುದರಿಂದ ವೈಸ್‌ರಾಯಿಯ ಆದೇಶದಂತೆ ಪೋರ್ಚುಗೀಸರು ಕೆಳದಿಯ ತಂಟೆಗೆ ಬಾರದೆ ಶಾಂತಿಯಿಂದಿರುವಂತಾಯಿತು. ೧೬೬೦ರಲ್ಲಿ ಹಿಂದೂಗಳ ಮತಾಂತರ ಪ್ರಕರಣವೊಂದರಲ್ಲಿ ಸೆರೆಯಲ್ಲಿದ್ದ ಕ್ರೈಸ್ತ ಪಾದ್ರಿಯನ್ನು ಕ್ಷಮೆಯ ಮುಖಾಂತರ ಬಿಡಿಸಿಕೊಂಡು ಬರಲು ರಾಮೂಜಿಶೆಣೈ ಕೊಠಾರಿಯ ಮೂಲಕ ಕೆಳದಿ ಅರಸನಿಗೆ ಪಾರಿತೋಷಕ ಸಲ್ಲಿಸಿದ ಸಂಗತಿಯು ಗಮನಾರ್ಹವಾದುದು. ಪೋರ್ಚುಗೀಸ್ ದಾಖಲೆಯೊಂದರಲ್ಲಿ ಹಿರಿಯ ವೆಂಕಟಪ್ಪನಾಯಕನು ದಿ. ೧೦-೧೧-೧೬೨೯ರಂದು ಕಾಲವಾಗಿದ್ದುದು ಕಂಡುಬರುತ್ತದೆ.[೭] ಕೆಳದಿ ರಾಜಧಾನಿ ಬಿದನೂರಿನಲ್ಲಿ ೧೬೬೪ರ ಫೆಬ್ರವರಿಯಂದು ಗೋವೆಗೆ ಮಲ್ಲಪ್ಪಮಲ್ಯನನ್ನು ನಿಯೋಗಿಯಾಗಿ ಕಳುಹಿಸಿದ ಸಂದರ್ಭದಲ್ಲಿ ಭದ್ರಪ್ಪನಾಯಕನ ಕೊಲೆಯಾಯಿತು. ಭದ್ರಪ್ಪನ ತಮ್ಮ ಸೋಮಶೇಖರನು ಅಧಿಕಾರಕ್ಕೇರುವಲ್ಲಿ ಮಲ್ಲಪ್ಪ ಮಲ್ಯನ ಸೋದರ ನಾರಾಯಣಮಲ್ಯನು ನೆರವಾದನು.[೮] ಗೋವೆ ವೈಸ್‌ರಾಯಿ ನಾರಾಯಣಮಲ್ಯ ರಾಜಧಾನಿಯಲ್ಲಿದ್ದ ಬಾಬು ಪೈ, ಈಶ್ವರ ಕಾಮತ್ ಸೇರಿ ಮಂಗಳೂರನ್ನು ಡಚ್ಚರಿಗೆ ನೀಡುವಂತೆ ಸೋಮಶೇಖರನಿಗೆ ಒತ್ತಾಯಿಸಿದ ಸಂಗತಿಗಳು ಬಟಾವಿಯಾ ಡಾಗ್ ರಿಜಿಷ್ಟರಿನಲ್ಲಿ ಉಲ್ಲೇಖನಗೊಂಡಿವೆ.[೯] ದಿ. ೨೯-೩-೧೬೯೭ರಂದು ಗೋವೆಯಲ್ಲಿ ಸೇರಿದ್ದ ಮಂತ್ರಾಲೋಚನಾ ಸಭೆ ವರದಿಯೊಂದು ರಾಣಿ ಚೆನ್ನಮ್ಮಾಜಿಯ ಮರಣ ಹಾಗೂ ಬಸಪ್ಪನಾಯಕನ ಪಟ್ಟಾಭಿಷೇಕ ಸಂಗತಿಯನ್ನೊಳಗೊಂಡಿದೆ.[೧೦] ಈತನ ಕಾಲದಲ್ಲಿ ಅರೇಬಿಯಾ ಮಸ್ಕತ್,[೧೧] ಹಾಗೂ ಫ್ರೆಂಚ್ ವರ್ತಕರು ಕೆಳದಿ ರಾಜ್ಯದಿಂದ ಮೆಣಸು ಹಾಗೂ ಇತರ ಸರಕುಗಳನ್ನು ಕೊಳ್ಳಲು ದಿ. ೧೬-೯-೧೬೬೮ರಂದು ನಡೆಸಿದ ಪತ್ರ ವ್ಯವಹಾರಗಳು, ಬಾರಕೂರು ನಾರಣಮಲ್ಯನ ಅರಮನೆ ವಾಣಿಜ್ಯೋದ್ದಿಮೆ, ಫ್ರೆಂಚ್ ವೈಸ್‌ರಾಯಿ ಡೂಪ್ಲೆ ಹಾಗೂ ಕೆಳದಿ ಅರಸರ ಹೋರಾಟ[೧೨] ಹೊನ್ನಾವರದ ವೆಂಕಟಮಲ್ಯ, ಹರಕಾಮತಿ, ಸುಬ್ಬಶೈಣೈ (ಕಸ್ಟಂ ಅಧಿಕಾರಿ) ಮುಂತಾದವರ ಸಂಗತಿಗಳು ಕಡಲ ತೀರದ ಕೆಳದಿ ವಾಣಿಜ್ಯೋದ್ದಿಮೆಯ ಇತಿಹಾಸದಲ್ಲಿ ರೋಚಕ ಸಂಗತಿಗಳನ್ನೊಳಗೊಂಡಿವೆ. ಕೆಳದಿಗೆ ಸ್ವಾಮ್ಯದ ಹಡಗಿನ ಹೆಸರು "ಈಶ್ವರಿ ಮಹಾಮಾಯೆ" ಎಂಬುದೂ ಗಮನಾರ್ಹವಾದುದು.[೧೩]

***ಗೌಡ ಸಾರಸ್ವತರ ಗೋವಾ ಪರ್ತಗಾಳಿ ಜೀವೋತ್ತಮ ಮಠ :*** ಗೋವಾ ರಾಜ್ಯದ ಕಾಣಕೋಣ ತಾಲ್ಲೂಕಿನಲ್ಲಿ ಮಡಗಾಂನಿಂದ ಸುಮಾರು ೩೦ ಕಿ.ಮೀ ದೂರದಲ್ಲಿರುವ ಗೌಡಸಾರಸ್ವತ ಮಠವು ಪೋರ್ಚುಗೀಸ್ ಹಾವಳಿಯಿಂದ ಪಾರಾಗಿ ಕೆಳದಿ ಅರಸರ ರಕ್ಷಣೆಯಲ್ಲಿ ಜೀರ್ಣೋದ್ಧರಿಸಲ್ಪಟ್ಟಿತು. ಆದಿ ಗುರು ಶ್ರೀನಾರಾಯಣತೀರ್ಥರು ಭಟ್ಕಳದಲ್ಲಿ ಇದನ್ನು ಸ್ಥಾಪಿಸಿದರು. ಸಾಗರ ರಾಮಚಂದ್ರನ ಕೊಂಕಣಾಭ್ಯುದಯಮ್ ಹಾಗೂ ಗುರು ಪರಾಮೃತಮ್‌ನ ಉಲ್ಲೇಖದಂತೆ.

ತಸ್ಮಿನ್ ಕಾಲೇ ಮಹಾರಾಜಃ ಕೆಲಲದೀತ್ಯುಪನಾಮಕಃ।
ತೇನೈತೇಭ್ಯಃ ಪದಂ ದತ್ತಂ ವಡೇರೇತಿ ಸಾದರಮ್॥

ಎಂಬಂತೆ 'ವಡೇರ' ಎಂಬ ಬಿರುದು ಕೆಳದಿ ಸಿದ್ಧಪ್ಪನಾಯಕನಿಂದ ನೀಡಲ್ಪಟ್ಟು ಮಠವು ಮಾನ್ಯ ಹೊಂದಿರುವುದು ವ್ಯಕ್ತಪಡುತ್ತದೆ.[೧೪] ಕ್ರಿ.ಶ. ೧೫೭೦-೮೦ ರವರೆಗೆ ಕೆಳದಿ ಆಡಳಿತ ನಡೆಸಿದ ಚಿಕ್ಕಸಂಕಣ್ಣನ ಪುತ್ರನೇ ಸಿದ್ಧಪ್ಪನಾಯಕ. ಶಿವತತ್ತ್ವ ರತ್ನಾಕರದ ಉಲ್ಲೇಖದಂತೆ ಈತನು ಸಕಲಶಾಸ್ತ್ರ ಕೋವಿದನಾಗಿ ಪರಿಣತಿ ಹೊಂದಿದ್ದು ರಾಜ್ಯಾಧಿಪತ್ಯಕ್ಕೆ ಸಮ ಹಕ್ಕುದಾರನಾಗಿದ್ದನು. ರಾಬರ್ಟ್ ಸೀವೆಲ್ ಪ್ರಕಾರ ಈತನು ಕೇವಲ ಒಂದು ವರ್ಷ ಮಾತ್ರ ಅಧಿಪತಿಯಾಗಿದ್ದನು.[೧೫] ಈತನಿಗೆ ಈರ್ವರು ಪತ್ನಿಯರು. ಮೊದಲನೇ ಪತ್ನಿಯಲ್ಲಿ ಜನಿಸಿದವನೇ ಪ್ರಸಿದ್ಧ ಕೆಳದಿ ಶಿವಪ್ಪನಾಯಕ. ಒಂಭತ್ತನೇ ಗುರು ಶ್ರೀ ಲಕ್ಷ್ಮೀನಾರಾಯಣತೀರ್ಥರನ್ನು ಕೆಳದಿ ರಾಣಿ ಚೆನ್ನಮ್ಮಾಜಿಯು ರಾಜಧಾನಿಗೆ ಅಹ್ವಾನಿಸಿ ದೀವಟಿಗೆ, ಛತ್ರ ಚಾಮರಗಳನ್ನಿತ್ತು ಸತ್ಕರಿಸಿ ಗೌರವಿಸಿದಳು. ರಾಣಿಚೆನ್ನಮ್ಮಾಜಿಯ ಶಾಸನವೊಂದು ಮಠದಲ್ಲಿದೆ.[೧೬] ಗೌಡಸಾರಸ್ವತರ ಇನ್ನೊಂದು ಪೀಠ

ಕಾಶೀಮಠಕ್ಕೂ ಕೆಳದಿ ಅರಸರು ನೀಡಿದ ಉಂಬಳಿ ವಿವರಗಳೂ ನನ್ನ ಸಂಶೋಧನೆಯಲ್ಲಿ ಕಂಡುಬಂದಿವೆ. ಪುಣೆಯ ಭಾರತೀಯ ಇತಿಹಾಸ ಸಂಶೋಧನಾ ಮಂಡಳದ ನಿರ್ದೇಶಕ ಹಾಗೂ ಖ್ಯಾತ ಮರಾಠಾ ವಿದ್ವಾಂಸ ಡಾ. ಖರೆ ಅವರ ಪ್ರಕಾರ ದಿ. ೧೭-೩-೧೬೪೫ರ ಖುರ್ದಖತವೊಂದು ಉಂಬಳಿ ಉತ್ತಾರಗಳನ್ನು ಸರ್ವಧರ್ಮಸಮನ್ವಯತೆಯ (ಪೂರ್ವಾಗ್ರಹ ಪೀಡಿತರಾಗದಂತೆ) ಸಮಾನ ಗೌರವ ನೀಡಿ ವಿನಿಯೋಗಿಸ ಬೇಕೆಂದು ಕೆಳದಿ ಅರಸರು ವಿಶದೀಕರಿಸಿರುವುದು ಗಮನಾರ್ಹ ವಾದುದು. ಈಗಿನ ಪೀಳಿಗೆಗೆ ಇದು ಸರ್ವಮಾನ್ಯವಾಗಿದೆ.*[೧೭]

ಗೌಡಸಾರಸ್ವತ ಕಾಶೀಮಠದ ದಾಖಲೆಯೊಂದರಲ್ಲಿ :

*The 6th Guru Shri Devendra Thirtha was the disciple of the 5th Guru Raghavendra Thirtha and a sanad was given to him by Soma'sekhara Nayaka the Raja of* ***Keladi*** *Samsthan in the year 1734 A.D. He had also made the Jirnodhar Pratishta of Shri Venkatapati Devaru of Cochin in the year 1719. A.D. along with his shishya shri Madhavendra Thirtha. His Samadhi is at Bantwal, S.K. Dist.*[೧೮]

- ಈ ರೀತಿ ಕಂಡುಬರುತ್ತದೆ. ಸ್ಮಾರ್ತ ಪಂಗಡದ ಗೌಡ ಸಾರಸ್ವತ ಚಿತ್ರಾಪುರ ಮಠವು ಶಿರಾಲಿಯಲ್ಲಿದೆ. ೧೭೩೯-೫೪ರಲ್ಲಿ ಆಳಿದ ಕೆಳದಿ ಬಸಪ್ಪನಾಯಕನು ಪರಿಜ್ಞಾನಾನಂದತೀರ್ಥ ಶ್ರೀ ಗಳಿಗೆ ಪೀಠಾಶ್ರಮ ಕಾಲದಲ್ಲಿ ಗೌರವಿಸಿ "ಶ್ರೀ ಶಂಕರಾನಂದ ಸ್ವಾಮಿ"ಗಳೆಂದು ಅಭಿಧಾನದಿಂದ ಉತ್ತಾರ ನೀಡಿದನು.*[೧೯] ಕ್ರಿ. ಶ. ೧೭೨೦, ೧೭೨೨, ೧೭೩೯ರ ಮಠದ ಚಾರಿತ್ರಿಕ ದಾಖಲೆಗಳಲ್ಲಿ ಸಮಾಜವು ಗುರುಗಳನ್ನು ಸ್ವೀಕರಿಸಿದ ರೀತಿ, ಧಾರ್ಮಿಕ ಕಟ್ಟಳೆ ಮತ್ತು ಮಠದ ಧಾರ್ಮಿಕ ಕಾರ್ಯಗಳು ಸಾಂಗವಾಗಿ ಜರುಗಲು ಕೆಳದಿ ಬಸಪ್ಪನಾಯಕನು 'ಉಳುವರೆ' ಗ್ರಾಮವನ್ನಿತ್ತ ವಿವರಗಳಿವೆ. ಮಂಜೇಶ್ವರ ಭದ್ರನರಸಿಂಹದೇವರಿಗೆ ಕೆಳದಿ ಅರಸರಿಂದ ಲಭಿಸಿದ ಉತ್ತಾರವೂ ಕಂಡುಬಂದಿದೆ. ಈ ಕುರಿತು ವಿವರಗಳು ಪ್ರಕಟವಾಗಿವೆ.[೨೦]

**ಉಪಸಂಹಾರ**

೧೫೬೫ರ ವಿಜಯನಗರ ಘೋರ ಯುದ್ಧದ ಪರಿಣಾಮ ದಿಂದ ಆರಂಭಿಸಿ ಕೆಳದಿ ರಾಣಿ ಚೆನ್ನಮ್ಮಾಜಿಯವರೆಗೆ ವಲಸೆಗಾರ ರಾಗಿ ಓಡಿಬಂದ ಗೌಡಸಾರಸ್ವತರು ಕೆಳದಿ ಆಡಳಿತದಲ್ಲಿ ವರ್ತಕ ಶ್ರೇಣಿಯಲ್ಲಿ ಉನ್ನತ ಹುದ್ದೆ ಪಡೆದು ಪ್ರಾಮಾಣಿಕ ಸೇವೆ ಸಲ್ಲಿಸಿ ರಾಜಭಂಡಾರವನ್ನು ಗಮನಾರ್ಹವಾಗಿ ವೃದ್ಧಿಸಿ, ಅರಸರ ಜನಸಾಮಾನ್ಯರ ನೆಮ್ಮದಿಗೆ ಧಕ್ಕೆಯುಂಟಾಗದಂತೆ ಸ್ಪಂದಿಸಿದ್ದಾರೆ. ವೀರಶೈವರಾಗಿದ್ದರೂ ಈ ಅರಸರ ಸರ್ವಧರ್ಮ ಸಮನ್ವಯ ಧೋರಣೆ ಬಗ್ಗೆ ಪುಣೆಯ ಖ್ಯಾತ ವಿದ್ವಾಂಸ ಪ್ರೊ. ಖರೆ ಅವರು ಹೇಳಿದ್ದಾರೆ. ಅಲ್ಲದೆ ಗೋವಾ ಪರ್ತಗಾಳಿ ಮಠದ ಖುರ್ದಖತ ಚಾರಿತ್ರಿಕ ದಾಖಲೆ ಇಂದಿನ ಎಲ್ಲ ಧರ್ಮಾಧಿಕಾರಿಗಳಿಗೂ ಮಾದರಿಯಾಗಿದೆ ಎಂದಿದ್ದಾರೆ. ಕೆಳದಿ ಸಾಗರೋತ್ತರ ಗೌಡಸಾರಸ್ವತರ ಇತಿಹಾಸದಲ್ಲಿ ಕಂಡುಬರುವ ವಿಶಲಶೆಣ್ಯೆಯಿಂದ ಆರಂಭಿಸಿ, ಫ್ರೆಂಚ್ ವೈಸ್‌ರಾಯಿ ಡೂಪ್ಲೆ ಹಾಗೂ ನಾರಾಯಣ ಮಲ್ಯನವರೆಗೆ ರೋಚಕ ಸಂಶೋಧನಾ ಮಾಹಿತಿಗಳಿವೆ. ಗೋವಾ ಪಿಸುರ್ಲೆಂಕರ್, ಗಜಾನನ ಘಾಟ್‌ಕರ್ ಅವರ ಆಕರಗಳೂ ಬೆಳಕು ಚೆಲ್ಲುತ್ತವೆ. ಗೋವಾ ಪರ್ತಗಾಳಿಮಠದಲ್ಲಿ ನಾನು ಸಿದ್ಧಪಡಿಸಿ ಕೊಟ್ಟ ಕ್ಯಾಟ್‌ಲಾಗ್, ಡಾ. ಖರೆ ಹಾಗೂ ಡಾ ಚಿಟ್ನೀಸ್‌ರವರ ಮರಾಠಿ ಮೋಡಿ ದಾಖಲೆಗಳು, ಚಿತ್ರಾಪುರ ಹಾಗೂ ಎಡನೀರು ಮಠ ಸಂಗ್ರಹಗಳು, ಗೋವಾಚರ್ಚ್‌ನ ಶೇಖರಣೆಯಲ್ಲಿರುವ ಖಾಂಡೇವಿ ಲಿಪಿಯ ಕೊಂಕಣಿ ಭಾಷೆಯಲ್ಲಿರುವ ದಾಖಲೆಗಳು, ಪರಿಶೋಧನೆಗೆ ಅರ್ಹ ವಾಗಿವೆ.[೨೧]

ಪೋರ್ಚುಗೀಸ್ ತಜ್ಞ ದಿ|| ಡಾ. ಬಿ. ಎಸ್. ಶಾಸ್ತ್ರಿಗಳು ನುಡಿದಂತೆ-

*The Portuguese influenced Indian languages and literature too. The konkani language spoken in Goa contains a large number of Portuguese words-direct or derived. Many such Portuguese words are found in Marathi, Gujarathi, Bengali, Kannada, Malayalam and Tamil Indian words particularly the names of various boats, articles of trade and weights and measures peculiar to india, are found used in the portuguese language.*

ಇದು ದ್ರಾವಿಡ ಭಾಷಾವಿಜ್ಞಾನದಲ್ಲಿ ಗಮನಾರ್ಹ ಸಂಶೋಧನೆ ನೀಡಬಲ್ಲದು. ಫ್ರೆಂಚ್ ಮತ್ತು ಕೆಳದಿ ಆಕರಗಳು ಪಾಂಡಿಚೆರಿ ಪತ್ರಾಗಾರದಲ್ಲಿದ್ದು, ಭಾಷಾ ಅಜ್ಞಾನದಿಂದ ಬೆಳಕು ಕಾಣದೆ ನರಳುತ್ತಿವೆ. ಪೋರ್ಚುಗೀಸ್, ಡಚ್, ಪರ್ಷಿಯಾ, ಮರಾಠಿ, ಇಟಾಲಿಯನ್ ಭಾಷಾ ಜ್ಞಾನದ ವಿದ್ವಾಂಸರು ಬೃಹತ್ ಯೋಜನೆ ಹಮ್ಮಿಕೊಳ್ಳಬೇಕು. ಕೊನೆಯ ಪಕ್ಷ ಮುಂದಿನ ಪೀಳಿಗೆಗೆ ಆಕರದ ಕ್ಯಾಟಲಾಗ್ ಕನ್ನಡದಲ್ಲಿ ಸಿದ್ಧಪಡಿಸುವುದು ಅಗತ್ಯವಾಗಿದೆ.

***ಕಾರ್ಟೇಜೆಸ್* (Cartazes)** : ಕೆಳದಿ ಅರಸರನ್ನೊಳ ಗೊಂಡು ದೇಶೀಯ ಸಂಸ್ಥಾನದ ಸ್ವಾತಂತ್ರ್ಯಹರಣ ಸಂಕೇತ ವೊಂದನ್ನು ದಿ|| ಬಿ. ಎಸ್. ಶಾಸ್ತ್ರಿಗಳು ಪೋರ್ಚುಗೀಸ್ ಮಾಹಿತಿಯಿಂದ ಹೊರಗೆಡಹಿದ್ದಾರೆ. *Cartazes* ಮುಖಾಂತರ ಸಾಗರೋತ್ತರ ವಾಣಿಜ್ಯ ಅಧಿಕಾರವನ್ನು ಸ್ವಯಂ ಘೋಷಿಸಿ ಕೊಂಡು ಪೋರ್ಚುಗೀಸರು ತಮ್ಮ ಪರವಾನಿಗೆಯಿಲ್ಲದೆ ಹಡಗನ್ನು ಬಿಡುತ್ತಿರಲಿಲ್ಲ. ಇದರಿಂದ ವಿನಾಕಾರಣದ ಸ್ವಾಭಿಮಾನಕ್ಕೆ ಧಕ್ಕೆಯುಂಟಾಗಿ ಗಲಭೆಗೆ ಕಾರಣವಾಗುತ್ತಿತ್ತು. ದೇಶೀಯರು ಮೊದಲುಗೊಂಡು ಫ್ರೆಂಚ್, ಅರಬ್, ಡಚ್, ಇಂಗ್ಲೀಷರಿಗೂ ಇದು ನೆಮ್ಮದಿಗೆ ಧಕ್ಕೆಯುಂಟು ಮಾಡುತ್ತಿದ್ದುದರಿಂದ ಗಲಭೆಯುಂಟಾಗುತ್ತಲೇ ಇತ್ತು. ೧೭೦೪ ರಿಂದ ೧೮೧೭ರ ವರೆಗಿನ ಇಂತಹ ಉಪಲಬ್ಧ ಆಕರಗಳನ್ನು ದಿ। ಡಾ. ಬಿ. ಎಸ್.

ಶಾಸ್ತ್ರಿಯವರು ಗುರ್ತಿಸಿರುವುದನ್ನು ತಿಳಿಸಿದ್ದಾರೆ. ಇಂತಹ ಅಮೂಲ್ಯ ಆಕರಗಳು *Cartazes*ನಲ್ಲಿ ಉಪಲಬ್ಧವಿದ್ದು ಮುಂದಿನ ಪೀಳಿಗೆಗೆ ರಕ್ಷಿಸಲು ಸಂಶೋಧನಾತ್ಮಕ ಕ್ಯಾಟಲಾಗ್ ಕನ್ನಡದಲ್ಲಿ ಸಿದ್ಧಪಡಿಸುವುದು ಅಗತ್ಯ.[೨೨]





ಗೋವಾ ಪರ್ತಗಾಳಿ ಮಠದಲ್ಲಿನ ಕನ್ನಡ ದಾಖಲೆ



A Malabar Pirathi Ship - 1634 AD

## ಆಧಾರಗ್ರಂಥ ಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಪಿ. ಎಫ್. ಪಿಂಟೋ., (೧೯೯೯), **ಕರಾವಳಿ ಕರ್ನಾಟಕದ ಕ್ರೈಸ್ತರ ಇತಿಹಾಸ**, ಪು. ೨೩೨.
೨. ನೋಡಿ V. N. Kudva., *History of Dakshinatya Saraswaths*, pp. 347-354.
೩. Jose Nicholan da fouccas., *Sketech of City of God* (ಮಂ. ಗೋ.ಪೈ. ಸಂಪುಟ. ಪು. ೬೨೨).
೪. *Gazetteer of Goa, Daman and Diu.*, (1979)., Dr V.T. Gune (Ed), P. 222.
೫. ಲಿಂಗಣ್ಣ ಕವಿಯ ಕೆಳದಿ ನೃಪವಿಜಯ., (೧೯೭೭), ಕನ್ನಡ ಸಾಹಿತ್ಯ ಪರಿಷತ್ತು, ಆ. ೭ ಲಿಂಗಣ್ಣ ಕವಿಯ.
೬. **ಕರ್ನಾಟಕ ಇತಿಹಾಸ ದರ್ಶನ**., ಸಂ. ೮/೧೯೯೩, ಪು. ೮೮.
೭. Dr. B.S. Sastry., (1987), *Studies in Indo portugese History*, Goa, p. 55
೮. *English Factory Records.*, 1661-64 Ad, p. 349.
೯. ಕೆಳದಿ-ಡಚ್ ಚಾರಿತ್ರಿಕ ದಾಖಲೆಗೆ ಅನುಬಂಧ ಗಮನಿಸಿ.
೧೦. Assentos, V p. 42.
೧೧. ಕಡಲ ತೀರದ ಹಡಗು ವಾಣಿಜ್ಯೋದ್ಯಮದಲ್ಲಿ ನೂತನ ಬೆಳಕನ್ನೊಳಗೊಂಡ ಪೋರ್ಚುಗೀಸರ (Cartazyes) ಸ್ವಯಂ ಘೋಷಿತ ಅನುಚಿತ ನಿಯಮಗಳು ಕುತೂಹಲಕರವಾಗಿವೆ.
೧೨. ಡಾ. ಪಿ. ಎಸ್. ಪಿಂಟೋ., ಅದೇ, ಪು. ೯೫-೯೬ ಮತ್ತು Late Dr. B. S. Sastry., op. cit., pp. 182.
೧೩. ೧೭ನೇ ಶತಕದ ಜಹಜಿನ ಮಾದರಿಗೆ ಛಾಯಾ ರೇಖಾಚಿತ್ರವಿದೆ.
೧೪. Millennium Konkani Sammelan July 2.4.2000., Chikago fllinois Dr. S. U. Kamath; *Origin and spread of gowda Saraswaths*, pt. I; Dr. Khare, Pune; Proceedings of the *Indian Historical Commission 1951*, Jaipur; ಸಾಗರ ರಾಮಾಚಾರ್ಯರ **'ಸುನೀತಿ ಭಾಗವತ'**, (೧೯೭೭), O.R.I. Cocchi.
೧೫. List of antiquities II, pp. 177; Buchanan III, p. 126; *KNV IV* and *STR VI, I.*
೧೬. **ಸುದರ್ಶನ** (ಟಿ.ಎಂ.ಪೈ ಅಭಿನಂದನಾಸಂಪುಟ) ಹಿನ್ನೆಲೆ, ಪು.೧೯; **ಜೀವೋತ್ತಮ**, ಸಂ. ೧೮, ಸಂ. ೩,೬.೩.೧೯೭೬.
೧೭. ಶೃಂಗೇರಿ ಮಠದ ನಿರೂಪವೊಂದರಲ್ಲಿ ಹಾಗು ಹುಬ್ಬಳ್ಳಿ ಮೂರು ಸಾವಿರ ಮಠದ ದಾಖಲೆಯೊಂದರಲ್ಲಿ ಉಕ್ತ.
೧೮. Souvenior Platinum Jubilee Celeberations form 16.3.1979 to 5.3.1980, Sri Sudhindra Thirtha Swamy Kashi Mutt, Shri Maha Ganapathi Mahamaya Temple, Shirali, p. 2.
೧೯. ಈ ಬಗೆಗಿನ ದಾಖಲೆಯನ್ನು ನೋಡಲು ಸಮಾಜ ಬಾಂಧವರು, ಚಿತ್ರಾಪುರದ ಶ್ರೀಗಳು ನಮ್ಮ ಮನೆಗೆ ದಯ ಮಾಡಿಸಿದ್ದರು.
೨೦. ಡಾ. ಕೆ. ಜಿ ವಸಂತ ಮಾಧವ., 'ಕರಾವಳಿ ಕರ್ನಾಟಕದ ಅಪರೂಪ ದಾಖಲೆ ಪತ್ರಗಳು', **ಇತಿಹಾಸ ದರ್ಶನ**, ಸಂ.೨, ಸಂ ೧, ೧೯೮೭, ಪು. ೩; *Religions in coastal Karnataka*; ಅದೇ; ೧೯೮೫, ಪು. ೪೬.
೨೧. ಖಾಂಡೇವಿ>ಕನ್ನಡ ಲಿಪಿ, ICHR ನೆರವಿನಿಂದ ೧೯೯೨ರಲ್ಲಿ ಯೋಜನೆ ಸಿದ್ಧಪಡಿಸಿ ಸಲ್ಲಿಸಲಾಗಿದೆ; *Goan Marathi Records in Halakannada Script*, Goa: ಅವರ ರೀತ್ಯಾ ಇದರ ಪ್ರತಿಯೊಂದು ಸ್ಪೇನ್‌ನಲ್ಲಿ ಪ್ರಕಟಗೊಂಡಿದೆ.
೨೨. Dr. B. S. Sastry., *Journal of Indian History*, Vol. L I, pt III, No 152, August 1973, Trivandram.

## ಅನುಬಂಧ - ೧

# ಕೆಳದಿ ರಾಜ್ಯದಲ್ಲಿ ಆಡಳಿತ ಸೇವೆಯಲ್ಲಿದ್ದ ಗೌಡಸಾರಸ್ವತರು

| ನಂ. | ಕಾಲ | ಕೆಳದಿ ಅರಸರು | ಗೌಡ ಸಾರಸ್ವತರು | ಕಾಲ | ಆಕರಗಳು |
|---|---|---|---|---|---|
| ೧ | ೧೫೯೩ ೧೬೨೯ | ಹಿರಿಯ ವೆಂಕಟಪ್ಪನಾಯಕ | ವಿಠಲ ಸಿನಾಯಿ ಅಥವಾ ಶೆಣ್ವೆ ರಾಯಭಾರಿ | ೧೬೨೭- ೧೬೪೯ | *Pietro Della Valle Travels II pp. 248-49, See for a graphic description of the dress worn by Vithal Sinoy and Notions of the Reign. No. 14 year 1630; Folios 212, 213, No 81* |
| ೨. | ೧೬೨೯-೪೫ | ವೀರಭದ್ರನಾಯಕ | ಅದೇ ಮತ್ತು ರಾಮಪೈ (ದೇವರಸ ಶೆಣೈ?) ರಾಯಭಾರಿ | ಅದೇ ೧೬೩೩ ೧೬೨೭ | *Assentos III pp. 239;* ರಾಮಪೈ ಶಿವಪ್ಪ ನಾಯಕನ ಕಾಲದಲ್ಲಿಯೂ ಇದ್ದುದು ಕಂಡು ಬರುತ್ತದೆ. ವಾದಿರಾಜ ಗುರುವರ ಚರಿತ್ರೆಯಲ್ಲಿ ಹೇಳಿದ ರಾಮಕೃಷ್ಣಪ್ರಭು ಚಿನ್ನಭಂಡಾರದ ರಾಮ-ಕೃಷ್ಣನಾಗಿದ್ದು ಕರ್ನಾಟಕ ಬ್ರಾಹ್ಮಣ. ಈತನ ವಂಶೀಕರು ಈಗಲೂ ಇದ್ದಾರೆ. ಈ ಕುರಿತ ಅಪ್ರಕಟಿತ ಚಾರಿತ್ರಿಕ ದಾಖಲೆಗಳು ಕೆಳದಿ ಸಂಶೋಧ ನಾಲಯದಲ್ಲಿದೆ. *QJMs. Vol. No LXXXIIII 4 - 1992* ಡಾ|| ವೆಂಕಟೇಶ್ ಅವರ ಲೇಖನ ನೋಡಿರಿ. |
| ೩. | ೧೬೪೫-೬೦ | ಶಿವಪ್ಪನಾಯಕ | ವಿಠ್ಠಲ ಮಲ್ಯ (ರಾಯಭಾರಿ) ಮಲ್ಲಪ್ಪ ಮಲ್ಯ (ನಿಯೋಗಿ) | ೧೬೫೩ ೧೬೫೪ | *Assentos III pp. 229-30* ಈತನು ವಿಠ್ಠಲ ಮಲ್ಯನ ಮಗ; *Assentos II, pp. 319-22* |
| ೪. | ೧೬೬೦-೬೧ | ಕಿರಿಯ ವೆಂಕಟಪ್ಪನಾಯಕ | ರಾಮೂಜ ಶೆಣೈ ಕೊಠಾರಿ (ರಾಯಭಾರಿ) (ಗಣಪತಿ ಮಲ್ಯ?) | | ಈತನು ಪೋರ್ಚುಗೀಸರ ರಾಯಭಾರಿಯಾಗಿ (ದಿ ೫-೨-೧೬೬೧) ಕೆಳದಿ ಅರಸನಲ್ಲಿಗೆ ಕ್ಷಮಾಪಣೆ ಕೇಳಲು ಪಾರಿತೋಷಕದೊಂದಿಗೆ ಬಂದಿದ್ದನು. |
| ೫. | ೧೬೬೧-೬೩ | ಭದ್ರಪ್ಪನಾಯಕ | ಮಲ್ಲಪ್ಪ ಮಲ್ಯ (ರಾಯಭಾರಿ + ಮಂತ್ರಿ) | ೧೬೬೪ | *The English Factories in India 1661-64, p. 342;* ಈತನು ಅರಸನ ಪರಮಾಪ್ತನಾಗಿದ್ದು, ಇವನ ಜೀವಿತ ವೃತ್ತಾಂತಗಳಿಗೆ ಕುಡ್ವರವರ *Dakshinatya Saraswaths* ಪು. ೯೮-೯೯ ನೋಡಿರಿ. |
| ೬. | ೧೬೬೧-೭೭ | ಹಿರಿಯ ಸೋಮಶೇಖರ ನಾಯಕ | ನಾರಾಯಣ ಮಲ್ಯ ಆಸ್ಥಾನ ವರ್ತಕ ಮತ್ತು ರಾಯಭಾರಿ. ಬಾಬು ಪೈ ಮತ್ತು ಈಶ್ವರ ಕಾಮತ್ (ನಿಯೋಗಿ ಮತ್ತು ರಾಯಭಾರಿ) ವಿಠ್ಠಲ ಮಲ್ಯ ಗೋಪಣ ಶೆಣೈ | ೧೦-೧೨-೧೬೬೩ ಅದೇ ೨೦-೪-೧೬೭೧ ೧೬೭೧ | ಮಲ್ಲಪ್ಪ ಮಲ್ಯನ ಅನಾರೋಗ್ಯದಿಂದ ಈತನಿಗೆ ಅಧಿಕಾರ ಲಭಿಸಿತು. ಇವನು ಮಲ್ಲಪ್ಪನ ಸಹೋದರ. ನಾರಾಯಣಮಲ್ಯನ ಮಾವನನ್ನು ಪೋರ್ಚುಗೀಸರ ಮನುವೆಲನು ಸೆರೆಹಿಡಿಯಲು ಪ್ರಯತ್ನಿಸಿದ್ದನು. *(Assentos IV p. 537)* ಮಲ್ಯರ ಮಠದ ಗರ್ಭಗೃಹದಲ್ಲಿರುವ ಬರಹದಂತೆ ವೇರ್ಣೆ ಗ್ರಾಮದ ವಿಠಲಮಲ್ಯನ ಮಗ. ಶಾಸನದಲ್ಲಿ ಕೌಶಿಕ ಗೋತ್ರದ ಆಶ್ವಲಾಯನ ಸೂತ್ರದ ವೇರ್ಣೆಗ್ರಾಮದ ವಿಠಲಮಲ್ಯನ ಪ್ರಪೌತ್ರ ಗಣಪತಿಮಲ್ಯನ ಪೌತ್ರ ವಿಠಲಮಲ್ಯನ ಪುತ್ರ ನಾರಾಯಣಮಲ್ಯನೆಂದು ಉಲ್ಲೇಖವಿದೆ. ಗೋವೆಯಿಂದ *inquisition* ಮೇರೆಗೆ ಕೆಳದಿಗೆ ವಲಸೆ ಬಂದ ಈತನು ನಿರ್ಮಿಸಿದ |

| ಸಂ. | ಕಾಲ | ಕೆಳದಿ ಅರಸರು | ಗೌಡ ಸಾರಸ್ವತರು | ಕಾಲ | ಆಕರಗಳು |
|---|---|---|---|---|---|
| | | | | | ದೇವಾಲಯ ಮತ್ತು ೧೫೫೦ರಲ್ಲಿ ಸ್ಥಾಪಿಸಿದ ಮಠಕ್ಕೆ ಗಂಗೊಳ್ಳಿ ಗ್ರಾಮದಿಂದ ೧೨೦ ವರಹ ಭೂಮಿ ಕೆಳದಿ ಭದ್ರಪ್ಪನಾಯಕನು ಉಂಬಳಿಯಾಗಿತ್ತನು. (ಗಂಗೊಳ್ಳಿಯ ಇತಿಹಾಸ : ಡಾ. ವಸಂತ ಮಾಧವ) ಈತನ ಕಾಲದಲ್ಲಿದ್ದ ಅವಿನಹಳ್ಳಿ ನರಸಪ್ಪಯ್ಯ ಹಾಗೂ ಮಲ್ಲಪ್ಪಮಲ್ಯನು ಪರಮಾಪ್ತರಾಗಿದ್ದರು. [ಕೆನ್ನವಿ VIII) *Mac. Call 353;* ಕೊಡಕರೋ ಮಾಗಣೆ ಕೈಫಿಯತ್ತು; ಕರ್ನಾಟಕ ಕೈಫಿಯತ್ತು; ಡಾ.ಕಲ್ಬುರ್ಗಿ; ಕ.ವಿ.ವಿ. ಪು. ೨೬೮-೬೯] *English Factories in India, 1661-64, p. 349; JBHS, Vol III, No. 2;* ಬಾಬುಶ್ಯೆ ಮತ್ತು ಈಶ್ವರ ಕಾಮತ್ ಡಚ್ಚರ ಪರವಾಗಿ ನಿಯೋಗಿಗಳಾಗಿದ್ದರು. ವಿಠ್ಠಲಮಲ್ಯ ಗೋಪಣ ಶೆಣೈ *(Assentos IV pp. 216-7) (The origin and spread of Gowda Saraswaths Pi. I ; Dr. S. Kamath)* |
| ೭. | ೧೬೭೧-೯೭ | ರಾಣಿ ಚೆನ್ನಮ್ಮಾಜಿ | ಕೃಷ್ಣನಾಯಕ (ರಾಯಭಾರಿ ಮತ್ತು ನಿಯೋಗಿ) | ೧೦-೧೨-೧೬೭೮<br>೧೬೮೦ | *(Biker. J.F.J. Collecas de tratadose Concertos de Prizes IV pp. 212-3)*<br>*Studies in Indo Portuguese History* - ಪೂರ್ವೋಕ್ತ ಪು. ೨೨೮ |
| | | | ಮಲ್ಲಪ್ಪ ಮಲ್ಯ (ಹೊನ್ನಾವರ ಅಧಿಕಾರಿ) | ೧-೮-೧೬೭೯ | ಅದೇ (ಪೂರ್ವೋಕ್ತ ಪು. ೨೧೫) ಹೊನ್ನಾವರ ಬಾಳೇರಿ ವಂಶಕ್ಕೂ ಇದಕ್ಕೂ ಸಂಬಂಧವಿದೆಯೇ? ಕ.ಇ.ದ. ಪು. ೨೫೦ ಸಂ. ೧೩-೧೯೯೮ |
| ೮. | ೧೬೯೭-೧೭೧೪ | ಹಿರಿಯ ಬಸಪ್ಪನಾಯಕ | ಕಡ್ತಾಸೆ ದಾಮರಸಪ್ರಭು<br>ಗೋವಾರಾಯಭಾರಿ | ೧೭೦೭<br>೨೮-೧೨-೧೭೧೩ | *Archivo Portuguese Oriental*<br>*Braganca Pereira* |
| ೯. | ೧೭೧೪-೩೯ | ಇಮ್ಮಡಿ ಸೋಮಶೇಖರ ನಾಯಕ | ಸುಂದರದಾಸ<br>ವಿಷ್ಣುದಾಸ } (ಆಸ್ಥಾನ ವರ್ತಕ ಮತ್ತು ನಿಯೋಗಿಗಳು) | ೨೨-೧೧-೧೭೨೮ | ಕೆಳದಿ ಅರಸರ ಅನುಮತಿಯೊಂದಿಗೆ ಇವರು ೪ ಹಡಗುಗಳನ್ನು ಹೊಂದಿದ್ದರು. *APo (BP)* ಪೂರ್ವೋಕ್ತ ೧೨೬-೭; *Studies in Indo Portuguese History P. 214; Assentos (V p. 378; ) V P. 378* |
| | | | ರಘುನಾಥ ಒಡೆಯ<br>ನಾರಣ ಪ್ರಭು<br>ಗೋವಾ ರಾಯಭಾರಿ | ೧೨-೫-೧೭೩೩<br>೧೭೩೪ | ರಘುನಾಥ ಒಡೆಯನು ಮಂಗಳೂರಿನ ಮಂಡಲಾಧಿಕಾರಿ *(APO (B.P) op. cit, 303 - 4* (ಈ ಕಾಲದಲ್ಲಿ ಹೊನ್ನಾವರ ಅಧಿಕಾರಿ ವೆಂಕಟಮಲ್ಯ) *Archivo Portuguese Oriental III pt IV No. 176* |
| ೧೦. | ೧೭೩೯-೫೪ | ಇಮ್ಮಡಿ ಬಸಪ್ಪನಾಯಕ | ತ್ರಿಯಂಬಕದಾಸ<br>ಹರಕಮತಿ (ವರ್ತಕ)<br>ಹೊನ್ನಾವರ | ೧೭೪೭ | *LCC II, 1747-69 FL 1;* ೧೬-೯-೧೬೬೬ರಲ್ಲಿ ನಾರಣಮಲ್ಯ ನೆಂಬುವನು ಕೆಳದಿಯ ಪರವಾಗಿ ಫ್ರೆಂಚ್ ವಿರುದ್ಧ ಹೋರಾಡಿದವನು *Secretariat Inward Letter Book; No. 3 B/ 1741-42, p. 336* |

## ಅನುಬಂಧ - ೨

## ಗೌಡ ಸಾರಸ್ವತರಿಗೆ ನೀಡಿದ್ದ ಕೆಳದಿ ಅರಸರ ಶಾಸನಗಳು

೧. ಶಾ.ಶ. ೧೫೮೩, ಶಾರ್ವರಿ ಸಂ॥ ದ ಆಶ್ವೀಜ ಶುದ್ಧ ೧೧ರಂದು ಇಮ್ಮಡಿ ವೆಂಕಟಪ್ಪನಾಯಕನು ಗಣಪತಿಮಲ್ಯಗೆ ನೀಡಿದ ಶಾಸನ - ಸಹಿ: ವೆಂಕಟಾದ್ರಿ, ಗೋವಾ ಪರ್ತಗಾಳಿ ಮಠದಲ್ಲಿದೆ (Ephemeries ಪ್ರಕಾರ ಸು. ತಾ. ೭-೮-೧೬೬೦ ಮಂಗಳವಾರ)

೨. ಶಾ.ಶ. ೧೫೯೬, ಪ್ರಮಾಥಿ ಸಂ॥ ದ ಜೇಷ್ಟ ಶುದ್ಧ ೧೫ ಕೆಳದಿ ರಾಣಿ ಚೆನ್ನಮ್ಮಾಜಿ ಗಂಗುವಳ್ಳಿ ನಾರಾಯಣಮಲ್ಯಗೆ ನೀಡಿದ ತಾಮ್ರಶಾಸನ - ಸಹಿ - ಸದಾಶಿವ - ಗೋವಾ ಪರ್ತಗಾಳಿ ಮಠದಲ್ಲಿದೆ (Ephemeries ಪ್ರಕಾರ ಸು. ತಾ. ೨೦-೫-೧೬೭೩)

೩. ಶಾ. ಶ. ೧೫೮೫ರಲ್ಲಿ, ಶಿವಪ್ಪನಾಯಕನ ಪುತ್ರ ಭದ್ರಪ್ಪನಾಯಕನು ಹೊನ್ನಾವರ ರಾಮಚಂದ್ರಮಲ್ಯ ಪ್ರತಿಷ್ಠೆ ಮಾಡಿದ ವೆಂಕಟೇಶ್ವರ ದೇವರ ದೇವತಾ ಕಟ್ಟಳಿಗೆ ನೀಡಿದ ಶಾಸನ (ಕಾಗದ) (**ಇತಿಹಾಸ ದರ್ಶನ**., ಸಂ. ೧೩/೧೯೯೮, ಪು. ೨೫೨)

೪. (ನಂ. ೩೭)ಕೆಳದಿ ಸೋಮಶೇಖರನಾಯಕರು ಗೋವೆಯ ದೇವಲಕಾರಿ ಸೂಸುತಮ್ಮಯೋರಿಗೆ? ಅಂಡಿಗೆ ವೀರಭದ್ರಣ್ಣನ ಮುಖಾಂತರ ಮದ್ದುಗುಂಡು ಜಿನಿಸು ಆಮದು ಬಗ್ಗೆ;

೫. (ನಂ. ೨೮) ಬಸಪ್ಪನಾಯಕ - (ಅದೇ)

೬. (ನಂ. ೨೬) ಕೆಳದಿ ನಿರ್ವಾಣ ಮಂತ್ರಿಯಿಂದ ಕೆಳದಿ- ಪರ್ತಗಾಳಿ ಮಠಕ್ಕೆ ಸ್ನೇಹಕ್ಕೆ ಅಂತರ ಬರಬಾರದಾಗಿ ನಿರೂಪ.

೭. (ನಂ ೪೯) ಕೆಳದಿ ಬಸಪ್ಪನಾಯಕರಿಂದ (ದೇಕ ಸ್ತಿಲನವು ಮಾರ್ಕೆಜರಿಗೆ ಅರಮನೆಯಿಂದ ಜನಿಸು ರವಾನೆ ಬಗ್ಗೆ)

೮. (ನಂ. ೩೬) - ಅದೇ -ಸದಾಶಿವ ಸಹಿಯಿದೆ (ಚಿನ್ನದ ಹಾಳೆ).

೯. (ನಂ. ೮೦) ಪೂರ್ವೋಕ್ತ, ನಂ. ೬, ಓಲೆ ಪ್ರತಿ.

೧೦. (ನಂ. ೬೫) ಕೆಳದಿ ಬಸಪ್ಪನಾಯಕರು ವಿಷ್ಣು ಸಭಾಯಿತರಿಗೆ ಕಳುಹಿದ ನಿರೂಪ. ಚೆನ್ನಮ್ಮಾಜಿಯವರು ಕೊಂಕಣಿಗರ ರಘುಚಂದ್ರ ಒಡೆಯರ ಶಿಷ್ಯ ಲಕ್ಷ್ಮೀನಾರಾಯಣ ಸನ್ಯಾಸಿಗಳ ಮಠಕ್ಕೆ ಮಿಡಿಜೆ ಸೀಮೆ ಬಾವಿಕೊಡಲ ಗ್ರಾಮದಿಂದ ೩೬ ವರಹ ಸ್ವಾಸ್ಥೆ ಶಿವಾರ್ಪಿತವಾಗಿ ಬಿಟ್ಟ ಬಗ್ಗೆ ನಿರೂಪ.

೧೧. (ನಂ ೧೭) ಚೆನ್ನಮ್ಮಾಜಿಯವರು ಕೃಷ್ಣೆಗೆ ಬರಶಿ ಕಳುಹಿದ ಕಾರ್ಯ ಕೊಂಕಣಿಗರ ರಘುಚಂದ್ರ ಸನ್ಯಾಸಿ ಹಾಗೂ ಶಿಷ್ಯ ಲಕ್ಷ್ಮೀನಾರಾಯಣ ಸನ್ಯಾಸಿಗಳಿಗೆ ೧೨೦ ವರಹ ಕಾಣಿಕೆ ಬಗ್ಗೆ (**ಇತಿಹಾಸ ದರ್ಶನ**., ಸಂ. ೧೩/೧೯೯೮, ಪು. ೨೫೪)

೧೨. ಕೆಳದಿ ವೀರಭದ್ರನಾಯಕರು ಮಠದ ವಿವಾದ ಬಗೆಹರಿಸಿದ ಕುರಿತು ನಿರೂಪ ಹಾಗೂ ಭಾಷಾ ಪತ್ರಿಕೆ.

೧೩. ಹೊನ್ನಾವರ ವೆಂಕಟೇಶ ದೇವಾಲಯದಲ್ಲಿರುವ ೧೬೬೩ರ ೩ ತಾಮ್ರಶಾಸನಗಳು ಮಠಸ್ತ ಗಣೇಶ ರಾಮಚಂದ್ರಶರ್ಮರಲ್ಲಿರುವುದಾಗಿ ಕಂಡು ಬರುತ್ತದೆ. (ದಾ. ಸಾ. ಪು. ೯೯) ಕೆಳದಿ ಕಾಲದ ದೇವಾಲಯದ ಭಿತ್ತಿ ಚಿತ್ರ ಅಪೂರ್ವವಾಗಿವೆ.

೧೪ ಶಾ.ಶ. ೧೫೯೨ - ಕೆಳದಿ ಸೋಮಶೇಖರನಾಯಕರು ಸಂಕಪ್ಪಗೆ ಬರಶಿ ಕಳುಹಿದ ಕಾರ್ಯ್ಯ ಕೋಡೆಯಾಲ ಸೊಂನಕಂಮತ್ತಿ ಮಗ ನಾರಣ ಕಮತಿಯು ಹುಜೂರಿಗೆ ಬಂದು ಮಂಜೇಶ್ವರ ಅನಂತ ದೇವರಿಗೆ ಸ್ವಾಸ್ತೆ ಬಗ್ಗೆ ವಿನಂತಿ ಮೇರೆಗೆ ಮಂಗಳೂರು ಬಂಗರ ಉಂಬಳಿಯಲ್ಲಿರುವ ಮಂಚಿ ಗ್ರಾಮದ ನೂಜಿ ಉತ್ತಾರ ನೀಡಿದ್ದು. ಈಗಲೂ ದೇವರ ಸೇವಾ ಕಾರ್ಯಗಳ ಕುರುಹಾಗಿ ಇಕ್ಕೇರಿ ನಾಣ್ಯ ಬಳಸಲಾಗುತ್ತಿದೆ.

೧೫. ಶಾ. ಶ. ೧೬೬೭ ರಾಣಿ ಚೆನ್ನಮ್ಮಾಜಿ ವೆಂಕಟೇಶಮಲ್ಯಗೆ ಮಂಜೇಶ್ವರ ಅನಂತೇಶ್ವರ ದೇವರಿಗೆ ಅಮೃತಪಡಿ ನಂದಾದೀಪ ರಥೋತ್ಸವ ಕಟ್ಟಲೆ ಬಗ್ಗೆ ನೀಡಿದ ಉತ್ತಾರ.

೧೬. ಶಾ. ಶ. ೧೬೨೮, ಬಸಪ್ಪನಾಯ್ಕರು ಬಸಪ್ಪಗೆ ಕಳುಹಿದ ಕಾರ್ಯ್ಯ ಮಂಜೇಶ್ವರ ಮಾಗಣೆ ಹೊಸಬೆಟ್ಟು ಗ್ರಾಮ ಉತ್ತಾರ.

೧೭. ಶಾ. ಶ. ೧೬೩೬, ಸೋಮಶೇಖರನಾಯಕರು ಮಾದಪ್ಪಗೆ ಬರಶಿ ಕಳುಹಿದ ಕಾರ್ಯ್ಯ ಮಂಜೇಶ್ವರ ದೇವಸ್ಥಾನದ ತಂತ್ರಿ ಸುಬ್ಬಾಭಟರಿಗೆ (ಕೊಂಕಣಿವರ್ಗದ) ಉಳಾಳಲದ ಕುಂಬಾರದೆರೆ ಭೂಮಿ ದೇವರಿಗೆ ಅಮೃತಪಡಿ - ನಂದಾದೀಪ್ತಿ ಬಗ್ಗೆ ನೀಡಿದ ಉಂಬಳಿ.

೧೮. ಗಂಗೊಳ್ಳಿ ಮಲ್ಯರ ಮಠದಲ್ಲಿರುವ ಶಿಲಾಶಾಸನ;

೧೯. ಮಲ್ಯರ ಮಠದ ತಾಮ್ರ ಶಾಸನ ಸೇನಾಪುರ ನರಸಿಂಹಾಚಾರ್ಯರಲ್ಲಿದೆ.

೨೦. ಕಾಶೀ ಮಠಕ್ಕೆ ನೀಡಿದ ಸೋಮಶೇಖರನಾಯಕರ ಶಾಸನ ಇದೇ ಪ್ರಬಂಧದಲ್ಲಿ ಅಡಕವಾಗಿದೆ.
[(ಕೆಳದಿ ರಾಜಧಾನಿ ಬಿದನೂರಿನಲ್ಲಿ 'ಮಹಾಲೆ' ಎಂಬ ಮಂತ್ರಿಯಿಂದ ನಿರ್ಮಿಸಲ್ಪಟ್ಟ ಗಂಗೊಳ್ಳಿ ವೆಂಕಟರಮಣ ದೇಗುಲದ ಅರ್ಚಕರು ಸೇನಾಪುರ ಆಚಾರ್ಯರ ಪೀಳಿಗೆಗೆ ಸೇರಿದವರು. ಈ ಪೈಕಿ ರಾಮಾನಾಥಾಚಾರ್ಯರ ಪುತ್ರ ಗೋವಿಂದಾಚಾರ್ಯರು ಕಮಲಾನಾಥ ತೀರ್ಥ ಶ್ರೀಪಾದ ವಡೇರ ಅಭಿಧಾನದಲ್ಲಿ ಬಹುಕಾಲ ಗುರುಪೀಠ ಅಲಂಕರಿಸದೇ ಇದ್ದು ಸಾಯುಜ್ಯವನ್ನು ಸೇರಿದ್ದರಿಂದ ಶ್ರೀಮತ್ ದ್ವಾರಕಾನಾಥ ತೀರ್ಥ ಶ್ರೀಪಾದ ವಡೇರು ಪಟ್ಟಕ್ಕೇರಿದರು. (ಜೀವೋತ್ತಮ, ಸಂ. ೧೮, ಸಂ. ೧, ದಿ. ೧೦-೯-೧೯೭೫, ಪು. ೧೩)].

೨೧. *Lists of the Antiquarian Remains in the Presidency of Madras* by Roberts Sewel . Vol. I, 1882 (p. 851).
No. 41, ACP in the hands of the local Pujari Records in pramadicha, Grant of 90 pagodas and 2 1/2 Phanams of land to God Venkateswara by Chennammaji - Ibid No. 462.

೨೨. ಹೊನ್ನಾವರ ಕುರಿತು, ೧೬೭೫ರ ಸೋಮಶೇಖರನಾಯಕನ ತಾಮ್ರಶಾಸನ; ಇದು ಉಡುಪಿ ಐರೋಡಿ ರಾಮಚಂದ್ರ ಪೈರವರಲ್ಲಿದೆ. *Studies in Tuluva History Culture*, Dr. G. Bhatt, A note on Primary Sources, P. XXV.

### *ಕೆಳದಿ ಇತಿಹಾಸೋತ್ತರ ದಾಖಲೆಗಳು*

*The documents from Parthagali Mutt relate to a representation by disciple Ramachandra Kamathi in Kannada A.D. 1823 to Kraya Muli Sadhana mentioning, among other things the* ***Aramane Sistu Dasoha****, to a Jamabandi of some village pattis granted to the Mutts, dated 1224 phasli mentioning Hydari Varahas etc., Phasli 1218 to the Patti Jamabandi of Magani Gokarn of Talivka AnkoaLa, to a grant of sale deed of Ardaya Mula Sadana in Kesngade village by, Govind Hegde to Sankara Kamati dated 1715. The Mutt archives also includes a letter from Siddapur to Ananda Tirtha about some complaint from Lingayats to the Muslim ruler / governor. These are all in Kannada* (ಇದು ನಾನು ಡಾ. ಚಿಟ್ನೀಸ್‌ರವರಿಗೆ ನೀಡಿದ ದಾಖಲೆ).

ಕ್ರಿ. ಶ. ೧೬೨೩ರಲ್ಲಿ ಇಟಲಿ ಪ್ರವಾಸಿ ಡೆಲ್ಲಾವೆಲ್ಲಿ ರಚಿಸಿದ ಭೂಪಟ. ಇದರಲ್ಲಿ ಕೆಳದಿ ಮಂಗಳೂರು, ಉಳ್ಳಾಲ, ಬಂಗೆಲ, ಕಾರ್ನಾಟೆ (ಕಾರ್ನಾಡು), ಒಮಂಜೂರು (ವಾಮಂಜೂರು) ಮತ್ತು ಕಾಂಗೋರಟೊ (ಕಾಸರಗೋಡು) ಗುರುತಿಸಿದೆ. ಈ ಭೂಪಟದಿಂದ ಈ ಮೇಲೆ ಕಾಣಿಸಿದ ನಗರಗಳು ಆಗಿನ ಕಾಲದ ರಾಜಕೀಯದಲ್ಲಿ ಪ್ರಮುಖ ಪಾತ್ರಗಳನ್ನು ವಹಿಸಿದ್ದವು ಎಂದು ತಿಳಿದುಬರುತ್ತದೆ.

(ಕೃಪೆ : ಗೋವಾ ರಾಜ್ಯ ಪತ್ರಾಗಾರ ಖಾತೆ.)



ಪ್ರೊ|| ಗೋಪಾಲಕೃಷ್ಣ ಸಾಮಗ*

# ತುಳುನಾಡಿನಲ್ಲಿ ಕೆಳದಿ ವೀರಶೈವ ಅರಸರು ಹಾಗೂ ಧರ್ಮ ಸಹಿಷ್ಣುತೆ

ಕರ್ನಾಟಕ ರಾಜ್ಯದ ಪಶ್ಚಿಮ ಕರಾವಳಿಯಲ್ಲಿರುವ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು ಇತಿಹಾಸ ಕಾಲದಿಂದಲೂ ತುಳುನಾಡು ಎಂದು ಕರೆಯಲಾಗಿದೆ. ಇಲ್ಲಿನ ಬಹುಸಂಖ್ಯಾತ ಜನತೆಯ ಆಡು ಭಾಷೆಯಾಗಿರುವ 'ತುಳು' ವಿನಿಂದ ಈ ನಾಡಿಗೆ ತುಳುನಾಡು ಎಂಬ ಹೆಸರು ಬಂತು.

ತುಳುನಾಡನ್ನು ಅನೇಕ ಅರಸರು ರಾಜ್ಯವಾಳಿದ್ದರು. ಅವರಲ್ಲಿ ಮಣ್ಣಿನ ಮಕ್ಕಳಾದ ದೀರ್ಘಕಾಲ ರಾಜ್ಯವಾಳಿದ ಆಳುಪರು ಮೊದಲಿಗರು. ಕರ್ನಾಟಕವನ್ನಾಳಿದ ಇತರ ರಾಜ 'ಮನೆತನ'ಗಳೂ ಆಗಾಗ ತುಳುನಾಡಿನ ಮೇಲೆ ತಮ್ಮ ಅಧಿಕಾರ ವಿಸ್ತರಿಸಿದ್ದವು. ಇವರಲ್ಲಿ ವಿಜಯನಗರ ಪತನಾನಂತರ ಪ್ರಖ್ಯಾತಿಗೆ ಬಂದ ಕೆಳದಿ ಅರಸರೇ ಪ್ರಮುಖರು. ಕೆಳದಿ ಅರಸರು ವೀರಶೈವ ಧರ್ಮಿಗಳು. ಕೋಮು ಸೌಹಾರ್ದಕ್ಕೆ ಅವರು ನೀಡಿದ ಕೊಡುಗೆಯನ್ನು ಅರಿಯಲು ಹಲವಾರು ಆಧಾರಗಳು ಈ ನಾಡಿನಲ್ಲಿ ಸಿಗುತ್ತವೆ. ಹಾಗೂ ಈ ನಾಡಿನಲ್ಲಿ ಈ ಕಾಲವನ್ನು (ಕ್ರಿ.ಶ. ೧೪೯೯-೧೭೬೩) ವೀರಶೈವ ಧರ್ಮದ ಉಚ್ಛ್ರಾಯ ಕಾಲವೆನ್ನಬಹುದು.

**ಶೈವ ಧರ್ಮಕ್ಕೆ ನೀಡಿದ ಪ್ರೋತ್ಸಾಹ**

ತುಳುನಾಡಿನ ಪ್ರಾಚೀನ ಧರ್ಮ ಪರಂಪರೆಯಲ್ಲಿ ಶಿವಾರಾಧನೆ ಅತಿ ಪ್ರಾಚೀನವಾದದ್ದು. ತುಳುನಾಡಿನ ಶೈವ ಕೇಂದ್ರಗಳಿಗೆ ವೀರಶೈವ ಅರಸರು ನೀಡಿದ ದಾನ ಧರ್ಮಗಳ ದಾಖಲೆಗಳು ಶೃಂಗೇರಿ ಮಠದಲ್ಲಿ ಸಾಕಷ್ಟಿವೆ. ಅಂತೆಯೇ ಕೊಲ್ಲೂರು, ಶಂಕರನಾರಾಯಣ, ಕಳಸ ಮೊದಲಾದೆಡೆ ಇವರು ತುಂಬಾ ದಾನ ಧರ್ಮಗಳನ್ನು ನೀಡಿದ್ದರು ಎಂದು ತಿಳಿಯಬಹುದು. ಈ ಬಗ್ಗೆ ಸಾಕಷ್ಟು ಶಾಸನಾಧಾರಗಳು ಇವೆ. ಬಹುತೇಕವಾಗಿ ಶೈವಧರ್ಮವು ಈ ನಾಡಿನಲ್ಲಿ ವೀರಶೈವರ ಮೂಲಕ ಪುನರುತ್ಥಾನವನ್ನು ಪಡೆಯಿತು. ಹಿಂದಿನ ಮಹಾದೇವ ದೇವಾಲಯಗಳು ಕ್ರಮೇಣ ಮಹಾಲಿಂಗ, ಸಿದ್ಧೇಶ್ವರ, ಮಹಾಲಿಂಗೇಶ್ವರ ದೇವಾಲಯಗಳಾದವು ಎಂಬ ಅಭಿಪ್ರಾಯವನ್ನು ದಿ| ಡಾ. ಪಿ. ಗುರುರಾಜಭಟ್ಟರು ನೀಡಿದ್ದಾರೆ. ಧರ್ಮಸ್ಥಳದ ಮಂಜುನಾಥ ದೇವಾಲಯವನ್ನು ಗೌರವಿಸಿ ಜೀರ್ಣೋದ್ಧಾರಕ್ಕೆ ಸಹಕರಿಸಿದರೆಂಬುದನ್ನು ಲಿಂಗಣ್ಣ ಕವಿಯ "ಕೆಳದಿ ನೃಪವಿಜಯಂ" ಎಂಬ ಗ್ರಂಥದಿಂದ ತಿಳಿಯಬಹುದು.[೧]

ಗಂಗೊಳ್ಳಿಯ ಕೋಟೆಯ ಸಮೀಪವಿರುವ ಗುಹೇಶ್ವರ ದೇವಾಲಯವು ಕೆಳದಿ ಅರಸರಿಂದ ಸಾವಿರ ಪಗೋಡ ದಾನ ಪಡೆದಿದ್ದನ್ನು ಪೋರ್ಚುಗೀಸ್ ದಾಖಲೆಯು ತಿಳಿಸುತ್ತದೆ. ಪೋರ್ಚುಗೀಸರಿಂದ ಈ ದೇವಾಲಯದಲ್ಲಿ ಅಪವಿತ್ರತೆ ಉಂಟಾದುದರಿಂದ ಶಿವಪ್ಪ ನಾಯಕನು ಗಂಗೊಳ್ಳಿಯ ದ್ವೀಪವನ್ನು (ಕುದುರು) ಶುದ್ಧಕಾರ್ಯ ನಿಮಿತ್ತ ಕೊಡುವಂತೆ ಕೇಳಿಕೊಂಡನು. ಕ್ರಿ.ಶ. ೧೬೨೭ರ ಕೆಳದಿ ಅರಸರ ಪತ್ರವೊಂದು ಕೋಟೇಶ್ವರ ದೇವಾಲಯದ ಜೀರ್ಣೋದ್ಧಾರದ ವಿವರಗಳನ್ನು ನೀಡುತ್ತದೆ.[೨]

**ವೈಷ್ಣವ ಹಾಗೂ ಮಾಧ್ವಮತಕ್ಕೆ ಪ್ರೋತ್ಸಾಹ**

ಕೆಳದಿ ಅರಸರ ಕಾಲದಲ್ಲಿ ಧರ್ಮ ಸುಧಾರಕರಾದ ಪುರಂದರದಾಸರು, ಕನಕದಾಸರು, ಶ್ರೀರಾಘವೇಂದ್ರ ಯತಿ ಸಾರ್ವಭೌಮರು (ಕ್ರಿ.ಶ. ೧೬೨೭-೭೧) ಈ ನಾಡಿನ ಉಡುಪಿ, ಸುಬ್ರಹ್ಮಣ್ಯ ಮೊದಲಾದೆಡೆ ದರುಶನವಿತ್ತು ಧರ್ಮ ಪ್ರಚಾರ ನಡೆಸಿದರು.[೩] ಸೋದೆ ವಾದಿರಾಜರೂ[೪], ಗೋವ ಸಮೀಪದ ಪರ್ತಗಾಳಿ ಜೀವೋತ್ತಮಮಠದ ಗೌಡಸಾರಸ್ವತ ಪಂಥದ ಗುರುಗಳೂ ಇಲ್ಲಿ ಯಾವುದೇ ನಿರ್ಬಂಧವಿಲ್ಲದೆ ಧರ್ಮ ಪ್ರಚಾರ ನಡೆಸಿದರು.[೫]

ಉಡುಪಿಯು ವೈಷ್ಣವ ಮತದ ಮಾಧ್ವಪಂಥದ ಕೇಂದ್ರವಾಗಿತ್ತು. ಇಲ್ಲಿಯ ಶ್ರೀಕೃಷ್ಣಮಠಕ್ಕೆ ಇವರು ದಾನ ದತ್ತಿಗಳನ್ನು ನೀಡಿದ್ದರು. ಹಿರಿಯ ವೆಂಕಟಪ್ಪನಾಯಕನ ಶಾ. ಶಕ ೧೫೩೬ರ ಉಡುಪಿಯ ಶಿಲಾ ಶಾಸನವು ಶ್ರೀ ಮಧ್ವದ ವೇದ್ಯತೀರ್ಥ ಶ್ರೀಪಾದಂಗಳು ಉಡುಪಿಯಲ್ಲಿ ಪರ್ಯಾಯ ಹಾಗೂ ಪೂಜಾ ಕಾರ್ಯವನ್ನು ನಿರ್ವಹಿಸುತ್ತಿದ್ದ ಸಮಯದಲ್ಲಿ ಶ್ರೀ ಕೃಷ್ಣ ದೇವಾಲಯವು ಮರದಿಂದ ನಿರ್ಮಿತವಾದ್ದರಿಂದ ಶ್ರೀ ಕೃಷ್ಣ ಗುಡಿಯನ್ನು ಮತ್ತು ಅದರ ಮುಂದಿನ ಮಠವನ್ನು ಶಿಲೆಯಿಂದ ನಿರ್ಮಿಸಿ ಅದರ ಮೇಲೆ ಎರಡು ನೆಲೆಯಾಗಿ ತಾಮ್ರದ ಹೊದಿಕೆ ಹೊದಿಸಿ ಜೀರ್ಣೋದ್ಧಾರಗೈದರೆಂದು ತಿಳಿಸುತ್ತದೆ.[೬] ಅಂತೆಯೇ ಅದೇ ಸಂದರ್ಭದಲ್ಲಿ ಬಾರಕೂರು ಪ್ರದೇಶಕ್ಕೆ ಸೇರಿದ ಹೂವಿನಕೆರೆಯೆಂಬ ಗ್ರಾಮವನ್ನು ಈ ದೇವಾಲಯಕ್ಕೆ ದಾನವಾಗಿ ನೀಡಿದ್ದರು.[೭] ಇನ್ನೋರ್ವ ಅರಸ ವೀರಭದ್ರನಾಯಕನೂ ಶ್ರೀಕೃಷ್ಣ ದೇವರಿಗೆ ಕಾಣಿಕೆ ಸಲ್ಲಿಸಿದ್ದನು.[೮] ಸೊರಬ ತಾಲೂಕಿನ ಶಾಸನವೊಂದು ಈ ಅರಸರು ಉಡುಪಿ ದೇವಾಲಯಕ್ಕೆ ನೀಡಿದ ಉತ್ತಾರದ

* ಮುಖ್ಯಸ್ಥರು, ಇತಿಹಾಸ ವಿಭಾಗ, ಸಂತ ಮೇರಿ ಕಾಲೇಜು, ಶಿರ್ವ, ದ. ಕ. - ೫೭೪ ೧೧೭

ಬಗೆಗೆ ಹೇಳುತ್ತದೆ.[೯] ಇಲ್ಲಿ ವೈಷ್ಣವ - ವೀರಶೈವ ವಿರೋಧ ಭಾವನೆಗಳಿರಲಿಲ್ಲ. ದ್ವೈತ ಸಂಪ್ರದಾಯದಲ್ಲಿ ಗೌಡಸಾರಸ್ವತರ ಆಚಾರಣೆಗಳೂ ಸಮ್ಮಿಳಿತಗೊಂಡಿವೆ. ಗೋವೆಯಿಂದ ಬಂದ ವೈಷ್ಣವ ಸಾರಸ್ವತರು ಇಲ್ಲಿ ವೀರಶೈವರ ಕೃಪೆಯಿಂದ ಪ್ರಬಲ ವ್ಯಾಪಾರಿಗಳಾಗಿದ್ದರು. ಗಂಗೊಳ್ಳಿಯ ವೆಂಕಟರಮಣ ದೇವಾಲಯಕ್ಕೆ ಕ್ರಿ. ಶ. ೧೬೭೪ರ ಶಿಲಾ ಶಾಸನವು ಕೆಳದಿ ಅರಸರು ಗೌಡ ಸಾರಸ್ವತರಿಗೆ ನೀಡಿದ ಅನುದಾನದ ಬಗ್ಗೆ ತಿಳಿಸುತ್ತದೆ. ಈ ಕಾಲದಲ್ಲಿ ಗಂಗೊಳ್ಳಿ, ಪುತ್ತೂರು, ಕುಂದಾಪುರ ಮೊದಲಾದೆಡೆಗಳಲ್ಲಿ ವೀರಶೈವ ರಾಜಾಶ್ರಯದಿಂದ ವೆಂಕಟರಮಣ, ವಿಠಲಮಂದಿರ ಮೊದಲಾದವುಗಳು ಜೀರ್ಣೋದ್ಧಾರಗೊಂಡವು.[೧೦] ಈ ಮೇಲಿನ ವಿವರಗಳಿಂದ ವೀರಶೈವರು ವೈದಿಕ ವಿರೋಧಿಗಳು, ಹರಿವಾಣ ಎಂಬ ಪದ ಪ್ರಯೋಗದಂಥ ವಿಷಯದಲ್ಲೂ ಹರವಾಣ ಎನ್ನುತ್ತಿದ್ದರು ಎಂಬ ಮಾತಿನಲ್ಲಿ ಹುರುಳಿಲ್ಲ ಎಂಬ ಅಭಿಪ್ರಾಯಕ್ಕೆ ಬರಬಹುದು.

**ಜೈನಧರ್ಮ**

ಕೆಳದಿ ಅರಸರ ಕಾಲದಲ್ಲಿ ಈ ನಾಡಿನಲ್ಲಿ ಜೈನಧರ್ಮಕ್ಕೂ ಪ್ರೋತ್ಸಾಹ ದೊರೆಯಿತು. ಮೂಡಬಿದಿರೆಯು ಇವರ ರಾಜ್ಯಾಡಳಿತಕ್ಕೊಳಪಟ್ಟಿತ್ತು. ಕಾರ್ಕಳದ ಪುತ್ತಿಗೆಯಿಂದ ಆಡಳಿತ ನಡೆಸುತ್ತಿದ್ದ ಚಿಕ್ಕರಾಯ ಒಡೆಯ ಚೌಟನು ಮತ್ತು ಮೂಡ ಬಿದಿರೆಯ ಶ್ರೀದಿಗಂಬರಜೈನಮಠದ ಶ್ರೀ ಅಭಿನವ ಚಾರುಕೀರ್ತಿ ಪಂಡಿತದೇವ ಮತ್ತು ನಗರದ ೮ ಮಂದಿ ಶೆಟ್ಟಿಗಾರರೊಡನೆ ಮಾಡಿಕೊಂಡ ಒಪ್ಪಂದಕ್ಕೆ ವೀರಭದ್ರನಾಯಕನು ಸಾಕ್ಷಿಯಾಗಿದ್ದನು. ಅರಸನ ಅಣತಿಯಂತೆ ಈ ಒಪ್ಪಂದದ ನಂತರ ಬಸದಿಗಳಲ್ಲಿ ಹಿಂದಿನಂತೆ ಪೂಜಾ ಕ್ರಮಗಳನ್ನು ಜರುಗಿಸಲು ಅನುವು ಮಾಡಿಕೊಡಲಾಯಿತು.[೧೧] *(ಕೆಳದಿ ಅರಸರ ಶಾಸನ ಸಂಪುಟ, ಶಾಸನ ೮೮, ಪುಟ ೧೩೩)* ಇದು ವೀರಶೈವ ಅರಸರು ಜೈನಧರ್ಮಕ್ಕೆ ತೋರಿದ ಆದರವನ್ನು ಎತ್ತಿ ತೋರಿಸುತ್ತದೆ.

ಕೆಳದಿ ವೆಂಕಟಪ್ಪನಾಯಕನು ಕ್ರಿ. ಶ. ೧೫೩೦ರಲ್ಲಿ ಮೂಡಬಿದಿರೆಯಲ್ಲಿ ತ್ರಿಭುವನತಿಲಕ ಚೂಡಾಮಣಿ ಬಸದಿಯನ್ನು ನಿರ್ಮಿಸಿದನಲ್ಲದೆ ಪೂಜೆ ಹಾಗೂ ನಂದಾದೀಪಕ್ಕೆ ದಾನಧರ್ಮಗಳನ್ನು ನೀಡಿದನು. ಕ್ರಿ. ಶ. ೧೫೪೪ರ ತಾಮ್ರ ಶಾಸನವು ಈ ಬಗ್ಗೆ ಗಮನಾರ್ಹ ವಿಚಾರಗಳನ್ನು ನೀಡುತ್ತದೆ. ಕ್ರಿ.ಶ. ೧೬೪೦ರಲ್ಲಿ ವೀರಭದ್ರನಾಯಕನು ಜೈನ ಗುರು ಅಭಿನವಚಾರುಕೀರ್ತಿ ದೇವರಿಗೆ ನೀಡಿದ ದಾನದತ್ತಿಗಳು ಹಾಗೂ ಕ್ರಿ. ಶ. ೧೬೪೬ ರಲ್ಲಿ ಕಾರ್ಕಳದ ಗೋಮಟಾಭಿಷೇಕಕ್ಕೆ ನೀಡಿದ ಆರ್ಥಿಕ ಸಹಕಾರ, ಒದಗಿಸಿದ ಇತರ ಸೌಲಭ್ಯಗಳು ಉಲ್ಲೇಖನೀಯ. ಸೂರಾಲಿನ ತೋಳಹ ಅರಸರು ವೀರಶೈವ ಮಠಗಳೊಂದಿಗೆ ಉತ್ತಮ ಬಾಂಧವ್ಯ ಹೊಂದಿದ್ದರು. ಈ ಎಲ್ಲಾ ಘಟನೆಗಳನ್ನು ಅವಲೋಕಿಸಿದಾಗ ಬಾರಕೂರಿನಲ್ಲಿ ಜೈನಮಂದಿರಗಳ ನಿರ್ಮೂಲನ ವೀರಶೈವರಿಂದಾಯಿತು ಎಂಬ ಮಾತು ಸತ್ಯಕ್ಕೆ ದೂರ ಎಂದೆನಿಸುತ್ತದೆ. ಮೂಡಬಿದಿರೆಯ ಜೈನ ಕವಿ ರತ್ನಾಕರವರ್ಣಿ ಸ್ವಯಿಚ್ಛೆಯಿಂದ ವೀರಶೈವ ಧರ್ಮಕ್ಕೆ ಮತಾಂತರಗೊಂಡದ್ದು, ಉಲ್ಲಾಳದ ರಾಣಿ ಅಬ್ಬಕ್ಕದೇವಿಗೆ ಕೆಳದಿ ಅರಸನು ಸಹಕಾರ ನೀಡಿದುದು ಇವೆಲ್ಲ ವೀರಶೈವ ಜೈನ ಸಂಬಂಧಗಳ ಕುರಿತು ಸಾಕಷ್ಟು ಬೆಳಕನ್ನು ಚೆಲ್ಲುತ್ತವೆ.

**ಇಸ್ಲಾಂ**

ಕೆಳದಿ ಆಳ್ವಿಕೆ ಅವಧಿಯಲ್ಲಿ ತುಳುನಾಡು ಹಲವಾರು ದೇಶೀಯ ಪಂಥಗಳ ಜತೆಗೆ ವಿದೇಶಿ ಧರ್ಮಗಳ ಬೆಳವಣಿಗೆಗಳ ಕೇಂದ್ರವೂ ಆಯಿತು. ತುಳುನಾಡಿನ ಹೊರಗೆ ಕೆಳದಿ ಸಾಮ್ರಾಜ್ಯದಲ್ಲಿ ಈ ಅರಸರು ಮಸೀದಿ ನಿರ್ಮಾಣಗಳಿಗೆ ಹಾಗೂ ಇಸ್ಲಾಂ ಧರ್ಮ ರಕ್ಷಣೆಗೆ ಪ್ರೋತ್ಸಾಹ ನೀಡಿದರು. ಈ ಅಭಿಯಾನವು ತುಳುನಾಡಿನಲ್ಲಿ ಇಸ್ಲಾಂ ಪರ ಧೋರಣೆಗೆ ಅನುವು ಮಾಡಿಕೊಟ್ಟಿತ್ತು. ಈ ನಾಡಿನಲ್ಲಿ ಮುಸ್ಲಿಂ ಸಮಾಧಿಯ ಗೌರವ ಪೂಜೆಯಾದ ಉರುಸ್‌ಗಳಿಗೆ ವೀರಶೈವ ಅರಸರು ಪ್ರೋತ್ಸಾಹ ಹಾಗೂ ಅಭಿಮಾನದಿಂದ ಧನ ಸಹಾಯವನ್ನು ನೀಡುತ್ತಿದ್ದರು.[೧೨]

**ಕ್ರೈಸ್ತಧರ್ಮ**

ತುಳುನಾಡ ಕರಾವಳಿಯಲ್ಲಿ ಕ್ರೈಸ್ತ ಧರ್ಮಕ್ಕೂ ವೀರಶೈವ ಅರಸರ ರಾಜಾಶ್ರಯವಿದ್ದಿತು. ಕ್ರೈಸ್ತ ಧರ್ಮವನ್ನು ಹಿಂಸಿಸಬಾರದು ಮತ್ತು ಯಾರನ್ನೇ, ಆಗಲಿ ಮತಾಂತರಗೊಳಿಸಬಾರದು ಎಂದು ಸೋಮಶೇಖರ ನಾಯಕನು ತಾಕೀತು ಹಾಕಿದ್ದನು.[೧೩] ಕ್ರಿ. ಶ. ೧೬೯೮ರಲ್ಲಿ ಪೋರ್ಚುಗೀಸರೊಂದಿಗೆ ನಡೆದ ಒಪ್ಪಂದದಲ್ಲಿ ಧಾರ್ಮಿಕ ವಿವಾದಗಳಿಗೆ ಕ್ರಿಶ್ಚಿಯನ್ ಧರ್ಮ ಗುರುಗಳನ್ನು ಕರೆಸಿ ಇತ್ಯರ್ಥ ಪಡಿಸಿರುವುದು ತಿಳಿದುಬರುತ್ತದೆ.[೧೪] ಕ್ರಿ. ಶ. ೧೭೨೭ ರಲ್ಲಿ ಮಂಗಳೂರಿನಲ್ಲಿ ಬಂಧಿತರಾಗಿದ್ದ ಧರ್ಮ ಗುರು ಒಬ್ಬರನ್ನು ಫಾದರ್ ಅಗೋಸ್ತಿನರ ಸಹಾಯದಿಂದ ಬಿಡುಗಡೆ ಮಾಡಿಸಿದ್ದನು.[೧೫] ರಾಣಿ ಚೆನ್ನಮ್ಮಾಜಿಯು ರೋಮನ್ ಕೆಥೋಲಿಕರಿಗೆ ಮಂಗಳೂರಿನ ಹಂಪನಕಟ್ಟೆಯಲ್ಲಿ ಮಿಲಾಗ್ರೀಸ್ ಚರ್ಚ್ ಕಟ್ಟಲು ನಿವೇಶನವನ್ನು ದಾನವಾಗಿ ನೀಡಿದ್ದಳು.[೧೬] ವಿದೇಶಿ ಶಿಲ್ಪಶೈಲಿಯ ಹಲವಾರು ಕ್ರೈಸ್ತ ದೇವಾಲಯ ಈ ನಾಡಿನಲ್ಲಿ ಕೆಳದಿ ಅರಸರ ಕಾಲದಲ್ಲಿ ಕಟ್ಟಲ್ಪಟ್ಟವು ಹಾಗೂ ಇಲ್ಲಿ ಅವರ ಪ್ರೋತ್ಸಾಹ ಗಮನಾರ್ಹವಾಗಿದೆ.[೧೭] ಗಂಗೊಳ್ಳಿಯ ಸ್ಥಳೀಯರ ತಂಡವೊಂದು ಚರ್ಚ್ ಗೋಪುರವನ್ನು ಒಡೆದ ಸಂದರ್ಭದಲ್ಲಿ ವೀರಭದ್ರನಾಯಕನು ಪವಿತ್ರ ಶಿಲುಬೆಯನ್ನು ಪುನಃ ಪ್ರತಿಷ್ಠಾಪಿಸಿದನು.[೧೮]

**ಇತರ ದೇವಾಲಯಗಳು**

ಇವಲ್ಲದೆ ಕೊಲ್ಲೂರು, ಸುಬ್ರಹ್ಮಣ್ಯ, ಕಳಸ, ಶಂಕರ

ನಾರಾಯಣ ಮೊದಲಾದೆಡೆ ಇತರ ಹಿಂದೂ ದೇವಾಲಯಗಳಿಗೆ ದಾನಧರ್ಮಗಳನ್ನು ಕೆಳದಿ ಅರಸರು ನೀಡಿದ್ದರು. ಚೆನ್ನಮ್ಮಾಜಿ, ವೀರಭದ್ರನಾಯಕ, ಇಮ್ಮಡಿ ಬಸವಪ್ಪನಾಯಕ ಮೊದಲಾದ ಅರಸರು ಆಗಾಗ ಕೊಲ್ಲೂರು ದೇವಳಕ್ಕೆ ಬರುತ್ತಿದ್ದರು ಹಾಗೂ ಸೇವೆ ಸಲ್ಲಿಸುತ್ತಿದ್ದರು.[೧೯] ಕೊಲ್ಲೂರು, ಸುಬ್ರಹ್ಮಣ್ಯ ದೇವಾಲಯಗಳ ಹಾಸುಗಲ್ಲುಗಳಲ್ಲಿ ಅರಸರ ಹೆಸರಿನಲ್ಲಿ. 'ನಮನ'ಗಳನ್ನು ಬರೆಸಿದ್ದುದು ಇದೆ. ಕೊಲ್ಲೂರು ದೇವಳದ ಗಂಟೆಯಲ್ಲಿ ಚೆನ್ನಾಮ್ಮಾಜಿಯ ಕೊಡುಗೆಯನ್ನು ಹೆಸರಿಸಲಾಗಿದೆ. ಮೊಳಲಿ ಜಾತ್ರೆಯ ದಿನಗಳ ವಿಸ್ತರಣೆ ಹಾಗೂ ಅನುದಾನ ಚೆನ್ನಾಮ್ಮಾಜಿಯ ಕೊಡುಗೆಯಾಗಿದೆ.

ವೀರಶೈವ ಧರ್ಮಾವಲಂಬಿಗಳಾದ ಕೆಳದಿ ಅರಸರು ತುಳುನಾಡಿನಲ್ಲಿ ವೀರಶೈವ ಮಠಗಳು, ಶೈವ ದೇವಾಲಯಗಳು ಹಾಗೂ ಇತರ ಧಾರ್ಮಿಕ ಚಟುವಟಿಕೆಗಳಿಗೆ ಉತ್ತೇಜನ ನೀಡಿದರು. ಹಿಂದಿನ ಶೈವ ದೇವಾಲಯಗಳು ಪುನರ್ ನವೀಕರಣ ಗೊಂಡು ವೀರಶೈವ ದೇವಾಲಯಗಳಾದವು. ಈ ನಾಡಿನಲ್ಲಿ ೬೪ ವೀರಶೈವ ಮಠಗಳನ್ನು ಕಟ್ಟಿಸಿದರು.[೨೦] ಅವುಗಳು ಶೈಕ್ಷಣಿಕ, ಧಾರ್ಮಿಕ ಹಾಗೂ ಆಡಳಿತ ಚಟುವಟಿಕೆಗಳ ಕೇಂದ್ರಗಳಾಗಿದ್ದವು. ಇವುಗಳಲ್ಲಿ ಬೆಣ್ಣೆಕುದ್ರು, ಉಡುಪಿ, ಗುರುಪುರ, ಕಲ್ಯಾಣಪುರ ಮೊದಲಾದ ಮಠಗಳು ಹೆಚ್ಚಿನ ಪ್ರಾಮುಖ್ಯತೆ ಪಡೆದಿದ್ದವು.

ಒಟ್ಟಿನಲ್ಲಿ ವೀರಶೈವ ಧರ್ಮಾವಲಂಬಿಗಳಾದ ಕೆಳದಿ ಅರಸರ ಆಡಳಿತಾವಧಿಯಲ್ಲಿ ತುಳುನಾಡು ಸರ್ವಧರ್ಮ ಪ್ರೋತ್ಸಾಹ ಹಾಗೂ ಸಮನ್ವಯತೆ ಪಡೆದಿತ್ತು. ಇಲ್ಲಿ ಧರ್ಮ ಸಾಮರಸ್ಯಕ್ಕೆ ಇವರು ಭದ್ರ ಬುನಾದಿ ಹಾಕಿದ್ದರು ಎಂದು ಮೇಲಿನ ವಿವರಣೆಗಳಿಂದ ತಿಳಿಯುತ್ತದೆ.

ಸಾಮಾಜಿಕ ಸ್ಥಾನಮಾನಗಳ ವಿಷಯಕ್ಕೆ ಸಂಬಂಧಿಸಿದಂತೆ ಕೆಲವೊಮ್ಮೆ ಭಿನ್ನಾಭಿಪ್ರಾಯ, ಮತೀಯ ವೈಷಮ್ಯಗಳು ತಲೆದೋರಿದ್ದುಂಟು. ಆದರೂ ಇವುಗಳನ್ನು ಪರಿಹರಿಸುವಲ್ಲಿ, ನ್ಯಾಯೋಚಿತ ಪರಿಹಾರ ಕಂಡುಕೊಳ್ಳುವುದರಲ್ಲಿ ಅವರು ತೋರಿದ ಜಾಣ್ಮೆ, ದೃಢ ನಿರ್ಧಾರ ಹಾಗೂ ಸಹಕಾರ ಆದರಣೀಯ. ಇವರ ಕಾಲವನ್ನು ಕೋಮು ಸಾಮರಸ್ಯದ ಕಾಲವೆಂದು ಹೇಳಬಹುದು. ಧಾರ್ಮಿಕ ಹೊಂದಾಣಿಕೆ, ಸಮತೋಲನ ಮತ್ತು ಭದ್ರತೆಯನ್ನು ಈ ತುಳುನಾಡಿನಲ್ಲಿ ಜಾರಿಗೆ ತರಲು ಕೆಳದಿ ಅರಸರು ಪ್ರಯತ್ನಿಸಿ ತುಳುನಾಡಿನ ಸಂಸ್ಕೃತಿಯನ್ನು ಬಲಿಷ್ಠಗೊಳಿಸಿದರು. "ಕೆಳದಿ ಅರಸರು ಧಾರ್ಮಿಕ ರಕ್ಷಣೆಗೆ ನೀಡಿದಷ್ಟು ಮಹತ್ವವನ್ನು ದೇಶ ರಕ್ಷಣೆ ಕೊಡುತ್ತಿರಲಿಲ್ಲ." ಎಂಬುದು ಪೋರ್ಚುಗೀಸ ಪತ್ರ ದಾಖಲೆಗಳಿಂದ ವ್ಯಕ್ತವಾಗುತ್ತದೆ. ಆದರೂ ಈ ಹೇಳಿಕೆಯು ಅವರ ಧಾರ್ಮಿಕ ಆಸಕ್ತಿ ಹಾಗೂ ಸರ್ವಧರ್ಮ ಸಮನ್ವಯತೆಯ ಬಗ್ಗೆ ಒತ್ತಿ ಹೇಳುತ್ತದೆ, ಎಂದರೆ ತಪ್ಪಾಗಲಾರದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ|| ಕೆ. ಜಿ. ವೆಂಕಟೇಶ್ ಜೋಯಿಸ್., **ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪುಟ, ೮೦.
೨. **ಕೆಳದಿ ಅರಸರ ಶಾಸನ ಸಂಪುಟ**., ಶಾಸನ ೬೧, ಪುಟ. ೯೮.
೩. **ಕರ್ನಾಟಕ ಹರಿದಾಸ ಸಾಹಿತ್ಯ**., ಪುಟ, ೩೨.
೪. ಡಾ|| ಕೆ. ಜಿ. ವೆಂಕಟೇಶ್ ಜೋಯಿಸ್., ಅದೇ, ಪು. ೬೮.
೫. **ಟಿ.ಎಂ.ಎ. ಪೈ ಅಭಿನಂದನಾ ಗ್ರಂಥ**., ಪುಟ ೧೬-೧೯.
೬. **ಕೆಳದಿ ಅರಸರ ಶಾಸನ ಸಂಪುಟ**., ಶಾಸನ ೪೬, ಪುಟ ೮೦.
೭. ಅದೇ.
೮. ಎ. ಆರ್.ಎಸ್.ಐ.ಇ. ೧೯೬೩:೬೪, ಸಂ. ೪೧.
೯. **ಕೆಳದಿ ಅರಸರ ಶಾಸನ ಸಂಪುಟ**., ಶಾಸನ ೩೪.
೧೦. ಕೆ. ಜಿ. ವಂಸತಮಾಧವ., **ರಿಲಿಜನ್ಸ್ ಇನ್ ಕೋಸ್ಟಲ್ ಕರ್ನಾಟಕ**, ೧೫೦೦-೧೭೬೩.
೧೧. **ಕೆಳದಿ ಅರಸರ ಶಾಸನ ಸಂಪುಟ**., ಶಾಸನ ೮೮, ಪುಟ. ೧೩೩.
೧೨. ಕೆ. ಜಿ. ವಸಂತಮಾಧವ., (೧೯೯೮), **ಕರಾವಳಿ ಕರ್ನಾಟಕದ ರಾಜಕೀಯ ಇತಿಹಾಸ ಅಧ್ಯಯನ ಮತ್ತು ಸಂಶೋಧನೆ**, ಪುಟ. ೧೧೮.
೧೩. ಬಿ. ಎಸ್. ಶಾಸ್ತ್ರಿ., **ಕೆಳದಿ ಅರಸರು ಮತ್ತು ಪೋರ್ಚುಗೀಸರು**, ಪುಟ. ೧೨೫-೧೭೬.
೧೪. ಅದೇ, ಪುಟ. ೧೩೩-೧೩೫
೧೫. ಅದೇ, ಪುಟ. ೧೫೪
೧೬. ಸಿರೀವ್ ಸ್ಲಿವ್., (೧೯೫೮), **'ಹಿಸ್ಟರಿ ಆಫ್ ಕ್ರಿಶ್ಚಾನಿಟಿ ಇನ್ ಕೆನರಾ'**, ಕಾರವಾರ್.
೧೭. ಕೆ. ಜಿ. ವಸಂತಮಾಧವ., ಅದೇ, ಪುಟ. ೧೧೮
೧೮. **ಸೊರೂನ್ನ ಪೊರ್ಚುಗೀಸ್ ಡೈರಿ**.
೧೯. **ಕೆಳದಿ ಅರಸರ ಶಾಸನ ಸಂಪುಟ**., ಶಾಸನ ೬೬, ಪುಟ. ೧೦೧
೨೦. **ಸೌತ್ ಕೆನರಾ ಗ್ಯಾಸೆಟಿಯರ್**

ಪ್ರೊ|| ಕ. ವೆಂ. ರಾಜಗೋಪಾಲ್*

# ನಾಗಮಂಡಲ ಎಂಬ ಆಚರಣೆ

ನಾಗಮಂಡಲವು ದಕ್ಷಿಣಕನ್ನಡ ಜಿಲ್ಲೆಗಳ ಒಂದು ಪುರಾತನ ಆಚರಣೆ ಹಾಗೂ ವಿಧಿ. ಇದನ್ನು ಎಲ್ಲಾ ವರ್ಗಗಳೂ ಬುಡಕಟ್ಟು ಜನಾಂಗಗಳೊಡನೆ ಒಪ್ಪಂದ ಮಾಡಿಕೊಂಡಂತೆ ಈ 'ವಿಧಿ'ಯಲ್ಲಿ ನಡೆದುಕೊಳ್ಳುತ್ತವೆ.

ಈ ಆಚರಣೆಯು ಈಗ ಒಂದು ಕಲಾತ್ಮಕ ಸತ್ವವುಳ್ಳ ರೀತಿ ನೀತಿಯನ್ನೂ ಕಾಪಾಡಿಕೊಂಡು ಭಕ್ತಿಯಂಥ ಭಾವುಕತೆಯನ್ನು ಪಡೆದುಕೊಂಡಿದೆ. ಬೇರೆಡೆಯಲ್ಲಿ ಇಂಥ ಆರಾಧನಾ ರಂಗಕಲೆಯು ಎಲ್ಲಾ ವರ್ಗಗಳನ್ನು ಆಳಬಲ್ಲ ಒಂದು ಬಗೆಯಾಗಿದೆಯಷ್ಟೆ. ಅದುದರಿಂದ ಈ ನಾಗಾರಾಧನೆಯ ಪುರಾತನ ಕ್ರೇತ್ರವೊಂದನ್ನು ಈ ದಕ್ಷಿಣಕನ್ನಡ ವಲಯದಲ್ಲಿ ಗುರುತಿಸಬಹುದಾಗಿದೆ. ಸದ್ಯಕ್ಕೆ ದಕ್ಷಿಣಕನ್ನಡದ ಕುಕ್ಕೆಸುಬ್ರಮ್ಹಣ್ಯಕ್ಷೇತ್ರವು ಅಂತಹ ಒಂದು ಕನ್ನಡ ನಾಡಿನ ಅತ್ಯಂತ ಹಳೆಯ ಪುಣ್ಯ ಕ್ಷೇತ್ರವಾಗಿದೆ - ಅಲ್ಲದೆ ಇದು ಉಡುಪಿಯ ಅಷ್ಟಮಠಗಳಿಗೆ ಹಳೆಯದೂ ಸ್ವತಂತ್ರವೂ ಆದುದಾಗಿದೆ.

ಮಾಧ್ವಮಠಗಳು 'ನಾಗಮಂಡಲ', ವಿಧಿಯನ್ನು ಒಪ್ಪಿಕೊಳ್ಳುತ್ತವೆಯಲ್ಲದೆ, ಅದನ್ನು ಎರಡು ಪರ್ಯಾಯಗಳಿಗೆ ನಡುವೆ ಜರುಗುವ ಒಂದು ಆರ್ಷೇಯ 'ವಿಧಿ' ಎನ್ನುವಂತೆ ಆಚರಿಸುತ್ತಲೂ ಬಂದಿವೆ. ಅಂದಮೇಲೆ 'ನಾಗಮಂಡಲ'ವನ್ನು ಬಹಳ ಅಂದರೆ ೧೪ನೇ ಶತಮಾನಕ್ಕೂ ಪೂರ್ವದ್ದೆಂದೂ ಮಾಧ್ವರು 'ನಾಗಾರಾಧಕ'ರೆಂದೂ ಗುರುತಿಸಲೇಬೇಕಾಗುತ್ತದೆ.

ಧರ್ಮಸ್ಥಳ ಕ್ಷೇತ್ರದಲ್ಲಿ ಭೂತಾರಾಧನೆಯ ಪ್ರಾಮುಖ್ಯತೆಯು ಉಳಿದು ಬಂದಿದೆ. ಈ ಬಗೆಯಲ್ಲಿ ಸೂಚನೆಯು ದೊರಕುವಂತೆ, ಕುಳಿಕ ಮತ್ತು ಉಲ್ಲಾಳಿ ಭೂತಗಳ ಸ್ವರೂಪವು ಸರ್ಪಾರಾಧನೆಯ ಪರ್ಯಾಯಗಳೆನ್ನುವಂತೆ ಗುರುತಿಸಬೇಕಾಗಿದೆ. ಕುಳಿಕನ ವಿಧಿಯನ್ನು ಕ್ರಿ.ಶ. ೧೦ನೇ ಶತಮಾನದಷ್ಟು ಹಳೆಯದೆಂದು (ಪಂಪಕವಿಯಲ್ಲಿ - ಕುಳಿಕನ ಪಲ್ಲಂಕಳೆವೊಡೆ-ವಿ. ವಿಜಯ) ಅದರ ದುಷ್ಟ ಸಾಮರ್ಥ್ಯವನ್ನು ಗುರುತಿಸಬಹುದಾಗಿದೆ. ಉಲ್ಲಾಳಿಯ ಆರಾಧನೆಯು ಮಂಗಳೂರಿನ ಪೂರ್ವಕಾಲದೆಂದೂ ಗುರುತಿಸಬಹುದಾಗಿದೆ. ಕದ್ರಿಯು ನಾಥಪಂಥಕ್ಕೆ ಸೇರಿರುವುದನ್ನು ಈಗಲೂ ಅಲ್ಲದೆ ಆಗಲೂ ಕರೆಯುತ್ತಿದ್ದಿರಬಹುದು - ಇಲ್ಲಿಯ ರೋಗ ಪರಿಹಾರಕವಾದ - ಮುಖ್ಯವಾಗಿ ಹಳದಿ ಮತ್ತು ನೀರಿನ ಬಣ್ಣದ, ಅಲ್ಲದೆ ಹಸಿ-ಬಿಸಿ ನೀರಿನ ಊಟೆಗಳ-ಕೊಳಗಳು, ವಜ್ರಯಾನದ ಯೋಗಿಗಳ ನೆಲೆಯೆಂಬುದನ್ನೂ ಗುರುತಿಸುವಲ್ಲಿ ನೆರವಾಗುತ್ತವೆ. ಆದರೂ ನಾಗಾರಾಧನೆಗೂ ಈ ಕ್ಷೇತ್ರಕ್ಕೂ ಸಂಬಂಧಗಳು ಕಾಣುತ್ತಿಲ್ಲ. ಆದರೆ ಉಲ್ಲಾಳಿಯ ಆಭರಣಗಳು ಮತ್ತು ಅಡಿಕೆಗರಿಗಳಿಂದ ಮಾಡಿರುವ ಆಭರಣಗಳೂ (ಪ್ರಭಾವಳಿಸಹಿತ) ಹಿಂಗಾರದ ಪ್ರಸಾದವೂ ನಾಗಾರಾಧನೆಯನ್ನು ಬೆರಳು ಮಾಡಿ ತೋರಿಸುತ್ತಿವೆ. ಯಾವುದೇ ಭೂತವೂ, ಹಿಂಗಾರದ (=ಸಿರಿ, ಎಂದು ಇದಕ್ಕೆ ಹೆಸರಿದೆ) ಪ್ರಸಾದವೂ ನಾಗಾರಾಧನೆಯನ್ನು ಸೂಚಿಸುತ್ತವೆ. ಅಲ್ಲದೆ ಯಾವುದೇ ಭೂತವಾಗಲಿ ಈ ಹಿಂಗಾರದ ಪ್ರಸಾದವಲ್ಲದೆ ಅಡಿಕೆ ಮರದ ಗರಿಯಿಂದ ಅಲಂಕರಿಸಿಕೊಳ್ಳುವುದನ್ನು ಮರೆಯುವಂತಿಲ್ಲ.

ನಾಗಾರಾಧನೆಯ ಅಸ್ತಿತ್ವವಿರುವುದೇ ಹಿಂಗಾರದಲ್ಲಿ. ಇದು ಪಂಚವರ್ಣಗಳ ಮಂಡಲಕ್ಕೂ ಪ್ರಾಕೃತಿಕ - ಧಾರ್ಮಿಕ ಸತ್ವವನ್ನು ತಂದುಕೊಡುತ್ತದೆ. ನಾಗಮಂಡಲದ ಆಚರಣೆಯಲ್ಲಿ ಅದರ ರೌದ್ರ - ಅದ್ಭುತ ಆದೇಶದ ಸ್ಥಿತಿ-ಗತಿಯಿಂದ 'ಶಾಂತಕ್ಕೆ' (ಆ ಮೂಲಕ ಪ್ರಸಾದಕ್ಕೆ) ತಿರುಗಿಸುವುದರಲ್ಲಿ ಹಿಂಗಾರವೇ ಮುಖ್ಯ ಸಾಧನವೂ ಆಗಿದೆ. ನಾಗಮಂಡಲದ ಆಚರಣೆಯ ಫಲಪ್ರಾಪ್ತಿಯನ್ನು ಸಫಲಗೊಳಿಸಬಲ್ಲುದೆನ್ನುವ ದೃಢ ನಂಬಿಕೆ ವಿಶ್ವಾಸಗಳ ಸಂಕೇತವಾಗಿ ಈ ಹಿಂಗಾರವಿರುತ್ತದೆ. ಇದರಲ್ಲಿ ಬಹುಮುಖ್ಯ ಅಂಶವೆಂದರೆ ಈ 'ಪ್ರಸಾದ' - ಹಿಂಗಾರವು ಬುಡಕಟ್ಟು ಜನಾಂಗಗಳಿಗೆ ಅತ್ಯಂತ ಶ್ರೇಷ್ಠ, ದೈವಗಳಕೊಡುಗೆ ಅಥವಾ ಬದುಕಿನ ಆಶಯಗಳನ್ನು ದೊರಕಿಸಬಲ್ಲ ವಸ್ತುವೂ ಆಗಿದೆ. ಆದುದರಿಂದ ಹಿಂಗಾರವಿಲ್ಲದೆ, ನಾಗಮಂಡಲದ ಆಚರಣೆಯೂ ಅಸಾಧ್ಯವಿರುತ್ತದೆ. ಉಡುಪಿಯ ಅಷ್ಟಮಠಗಳಲ್ಲಿ ಆಶ್ರಯವನ್ನು ಕಂಡುಕೊಂಡ ಮಾಧ್ವಬ್ರಾಹ್ಮಣರಿಗೂ ನಾಗಾರಾಧನೆಯು ಪ್ರಮುಖ ಆಚರಣೆಗಳಲ್ಲಿ ಒಂದಾಯಿತು. ಸಂತಾನ ಪ್ರಾಪ್ತಿಗೆ ಅದರಲ್ಲೂ ಗಂಡುಸಂತಾನದ ಬಯಕೆಗೆ ಬ್ರಾಹ್ಮಣರೆಲ್ಲರೂ ನಾಗಾರಾಧನೆಗೇ ಶರಣು ಹೋಗುತ್ತಾರೆ. ಅಷ್ಟೇ ಅಲ್ಲದೆ ಕುಷ್ಠರೋಗ, ತೊನ್ನು ಮುಂತಾದ ಚರ್ಮರೋಗಗಳಿಗೆ ನಾಗನ ಹುತ್ತದ ಮಣ್ಣು - ಮೃತ್ತಿಕೆ, ಔಷಧವಾಗಿಯೂ ಬಳಕೆಯಾಗುತ್ತವೆ. ನಾಗರಕಲ್ಲು - ಸ್ಥಾಪಿಸಿ ಆರಾಧಿಸುವುದು - ಒಂದು ವಿಶಿಷ್ಟ ಆಚರಣೆಯಾಗಿ ಸಂತಾನ ಪ್ರಾಪ್ತಿಯ ಗೋಪ್ಯ - ಆಚರಣಾ ವಿಧಾನವೊಂದು ಇಂದಿಗೂ ಉಳಿದು ಬಂದಂತಿದೆ; ಇದನ್ನು ಆಶ್ಲೇಷಾ ನಕ್ಷತ್ರದ ಸಂಬಂಧಕ್ಕೆ ಸೇರುವ ಒಂದು ವಿಶೇಷ ಬಗೆಯ ನಾಗಮಂಡಲದ ಆಚರಣೆಯೂ ಆಗಿದೆ. ಆದರೆ ನಾಗಮಂಡಲವು

* ಎಂಐಜಿ - ೪೧, ೮೦ ಅಡಿರಸ್ತೆ, ೭ನೇ ಹಂತ ಕೆಂಗೇರಿ ಉಪನಗರ, ಬೆಂಗಳೂರು - ೫೬೦ ೦೬೦

ದಕ್ಷಿಣ ಕನ್ನಡದ ಬುಡಕಟ್ಟು ಜನಾಂಗಗಳೂ ಬ್ರಾಹ್ಮಣರೂ ಏಕರೀತಿಯಾಗಿ ಗೌರವಿಸುವ ಒಂದು ಅತ್ಯಂತ ಹಳೆಯ ಆಚರಣೆಯಾಗಿದೆಯೆಂದರೆ ಕೊಂಚ ವಿವರಣೆಯೂ ಬೇಕಾದೀತು. ಮುಂದಿನಭಾಗದಲ್ಲಿ ಇದರ ವಿಸ್ತರಣೆ ಬರುತ್ತದೆ. ಒಟ್ಟಿನಲ್ಲಿ 'ನಾಗಮಂಡಲ'ವು ಜಾತೀಯತೆಯ ಕಟ್ಟುಪಾಡುಗಳನ್ನು ಮುರಿಯುವಂಥದು - ಇದರ ರುದ್ರರಮಣೀಯ ಅದ್ಭುತ ಆಚರಣೆ - ರಂಗಕ್ರಿಯೆಯನ್ನು ಮಾನವ ಸಂಸ್ಕೃತಿಗಳ ಹಳೆಯ ಕಾಲಕ್ಕೆ - ಬಹುಶಃ ಬೃಹತ್ ಶಿಲಾಯುಗಕ್ಕೆ ಸೇರಿಸಬಹುದು. ಇದನ್ನು ಅರಿಯದ ಅಂದರೆ ಈ ಬಗೆಯ ಆಚರಣೆಯನ್ನು ಅರಿಯದ ಬುಡಕಟ್ಟುಗಳೂ ಇರಬಹುದು - ಆದರೆ ದಕ್ಷಿಣ ಕನ್ನಡದ ಅಥವಾ ಕರಾವಳಿ ಪ್ರದೇಶದ ಯಾವುದೇ ಬುಡಕಟ್ಟಿಗೂ ಈ ಆಚರಣೆಯು ಪರಕೀಯವಾಗಿರುವಂತೆ ಕಂಡುಬರುವುದಿಲ್ಲ. ಆದುದರಿಂದ ಯಾರೇ ಆಗಲಿ ನಾಗಮಂಡಲವೆಂದರೆ ನಡುರಾತ್ರಿಯ ಅದ್ಭುತವೆನ್ನಬಹುದಾದ ಈ ಆಚರಣೆಯ ಪ್ರಸಾದಕ್ಕಾಗಿ ಕಾಲ್ನಡಗೆಯಾದರೂ ಹಿಂಜರಿಯದೆ ಸಹಸ್ರಾರು ಮಂದಿ ಹೋಗುತ್ತಾರೆ (ನಾಗಮಂಡಲಕ್ಕೆ ಬಂದವರು ಯಾರೂ ಉಪವಾಸ ಹಿಂದಿರುಗಬಾರದೆಂಬ ನಿಯಮವೂ ಇದೆ). ತೀರ ಯಕ್ಕಶ್ಚಿತರೆಂದೂ ಆದಿವಾಸಿಗಳೆಂದೂ ಕರೆಸಿಕೊಳ್ಳುವ ಕೊರಗರೂ ಈ ಸಂದರ್ಭದಲ್ಲಿ ಸೇವೆ ಸಲ್ಲಿಸುತ್ತಾರೆ. ತಮ್ಮ ಹಳೆಯ ರೀತಿಯ (ಕೊಳಲು ಮೊದಲಾದವು)ವಾದ್ಯಗಳಿಂದ (ಭೂತಾರಾಧನೆಗೂ ಕೊರಗರ ಸೇವೆ ಇರುತ್ತದೆ). ಇವರಿಗೂ ನಾಗಮಂಡಲದ ಸಮಯದಲ್ಲಿ ಪ್ರತ್ಯೇಕ ಪಂಕ್ತಿಯ ಭೋಜನ ವಿರುತ್ತದೆ. ಇಂಥ ಸ್ಥಿತಿಗತಿಯ ತಥ್ಯವನ್ನು ತಿಳಿಯಲು ಕರಾವಳಿ ಪ್ರದೇಶದ ಸಾಮಾಜಿಕತೆಯ ಬಗ್ಗೆ ಕೂಲಂಕಶ ಗಮನಿಸಬೇಕಾದ ಅವಶ್ಯಕತೆ ಯಿರುತ್ತದೆ.

★ ★ ★

ಕರಾವಳಿ ತೀರ ಪ್ರದೇಶವನ್ನು ಸುಮಾರು ೩೦೦ ಮೈಲಿ ಗಳೆಂದು ಗುರುತಿಸಲಾಗಿದೆ. ಇದರ ಉದ್ದ-ಅಗಲ (ಕಡಲತೀರ - ಘಟ್ಟಗಳು)ಕ್ಕೂ ಬಹಳ ಹಿಂದಿನಿಂದಲೂ ಮಾನವನ ನೆಲೆದಾಣವಾಗಿದೆ. ಇಲ್ಲಿನ ಬೃಹತ್ ಶಿಲಾಯುಗದ ಕುರುಹುಗಳು ಖಚಿತವಾಗಿರುವುದಲ್ಲದೆ ಅಂತಹ ನೆಲವೀಡಿನ ಸಂಸ್ಕೃತಿ ಯಲ್ಲಿ ಭೂತಾರಾಧನೆ - ಪ್ರಮುಖವಾಗಿರುವುದನ್ನು ಗಮನಿಸ ಬೇಕಾಗುತ್ತಿದೆ. ಗೋಕರ್ಣತೀರದಲ್ಲಿ ಹವ್ಯಕರು (ಅಹಿಚ್ಛತ್ರಪುರ ದಿಂದ ಕದಂಬ ಮಯೂರವರ್ಮನ ಆಶ್ರಯಕ್ಕೆ ಬಂದವರು); ಅವರ ಕಣ್ಣಿನಲ್ಲೇ ಉಳಿದಿರುವರ ಹಾಲಕ್ಕಿಯವರು ಮತ್ತು ಗೊಂಡರು - ನಂತರ ಕುಂದಾಪುರದಿಂದ ಉಡುಪಿಯ ಮಲ್ಪೆವರೆಗೆ ಬ್ರಾಹ್ಮಣರು (-ವೈದಿಕರು) ಮತ್ತು ಇಂದಿಗೂ ಆಶ್ರಯವನ್ನಷ್ಟೇ ಬಯಸುವ ಕೊರಗರು ಸಾಲಿಗ್ರಾಮ ಪ್ರದೇಶದಲ್ಲಿ ಬ್ರಾಹ್ಮಣರ ಪ್ರಭಾವ ಮತ್ತು ಅಧೀನದಲ್ಲಿರುವ 'ನಾಯಿರಿ'ಗಳು, ಇನ್ನೂ ದಕ್ಷಿಣಕ್ಕೆ ಮಂಗಳೂರಿನವರೆಗೂ ಇರಬಹುದಾದ ಬಂಟರು, ಬಿಲ್ಲವರು, ಕುಡಿಯರು, ಧರ್ಮಸ್ಥಳದ ಪರಿಸರದ ಕುಡುಮಿಗಳು; ಮುಂತಾದವರು,....... ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಬೌದ್ಧ, ಜೈನ ಮತಗಳ ನೆಲೆಗಳು ಕಂಡು ಬಂದರೂ ಮಲ್ಪೆಗೆ ಸಂಬಂಧಿಸಿದ ಆಕ್ಸಿರಿಂಕಸ್ ಪ್ಯಾಪಿರಿ - ಯ ಆಧಾರದಿಂದ ಗುರುತಿಸಿರುವ ಪಂಡಿತಮಾನ್ಯ ಗ್ರೀಕೋ- ರೋಮನ್ ಪ್ರಭಾವಗಳು ... ಇಂಥ ಹೊರಗಿನ ಪ್ರಭಾಗಳಿದ್ದರೂ ಇಲ್ಲಿಯ ಬುಡಕಟ್ಟು ಜನಾಂಗಗಳು ಅಂಥ ಸಂಸ್ಕೃತಿಯನ್ನು ಗೌರವಿಸುತ್ತ ಬಂದಿದ್ದಾರೆಯೇ ಹೊರತು ತಮ್ಮತನವನ್ನು ಅಂದರೆ ನಾಗಾರಾಧನೆ ಹಾಗೂ ಭೂತಾರಾಧನೆಗಳನ್ನು ಕಳೆದುಕೊಳ್ಳದೇ ಇರುವುದೇ ಆಶ್ಚರ್ಯವನ್ನುಂಟುಮಾಡುತ್ತಿದೆ.

ಕರಾವಳಿಯಲ್ಲಿ ಬಂದು ನೆಲೆಸಿದ ಹವ್ಯಕರು ಮೊದಲಾಗಿ ಬ್ರಾಹ್ಮಣರೆಲ್ಲರೂ 'ಅಡಕೆ'ಯ ಸಂಸ್ಕೃತಿಯೊಂದನ್ನು ಪೋಷಿಸಿ ಕೊಂಡು ಬಂದಿದ್ದಾರೆ. ಇದು ಎಷ್ಟು ಹಳೆಯ ಸಂಸ್ಕೃತಿ ಯೆಂಬುದನ್ನು ಗುರುತಿಸಬಹುದಾದರೂ ಕಾಲನಿರ್ಣಯವು ಸುಲಭವಾಗಿಲ್ಲ. ಆದುದರಿಂದ ನಾಗಾರಾಧನೆಯು ಬಹು ಹಳೆಯ ಸತ್ವವಾಗಿ ಬೌದ್ಧ, ಜೈನ ಮತ್ತು ವೈದಿಕ ಸಂಸ್ಕೃತಿಗಳನ್ನೂ ಸಹಿಸಿ ಕೊಂಡು ತನ್ನತನವನ್ನು ಬಿಟ್ಟು ಕೊಡದೇ ಉಳಿದಿದೆ. ಇಂತಹ ಉಳಿಕೆಯ (ಪಳಯುಳಿಕೆ) ಕಾಲವನ್ನು ಮಾತ್ರ ಗುರುತಿಸಲು ಬನವಾಸಿಯ 'ನಾಗಸಿರಿ'ಯ ಶಾಸನವು ಒಂದು ಐತಿಹಾಸಿಕ ದಾಖಲೆಯಾಗಿದೆ. ಇದರ ಕಾಲವನ್ನು ಸುಮಾರು ಕ್ರಿ.ಶ. ೨೦೦ ಎಂದು ವಿದ್ವಾಂಸರು ಗುರುತಿಸಿದ್ದಾರೆ. ಇದು ವಾಸ್ತವವಾಗಿ ಅಕ್ಸಿರಿಂಕಸ್ ಪ್ಯಾಪಿರಿಯಷ್ಟೇ ಹಳೆಯದಿರಬಹುದಾಗಿದೆ. ದಮೊರಿಕ ಎಂಬ ಗುರುವಿನ ಶಿಷ್ಯನಾದ (?) ಒಬ್ಬ 'ಣಟಕ'ನು- ಇದು ನಟಕ ಎಂಬುದರ ಪೂರ್ವ ರೂಪ - ಈ ಶಾಸನವನ್ನು (ನಾಗಪ್ರತಿಮೆಯ ಚೌಕಟ್ಟಿನಲ್ಲಿ) ರಚಿಸಿದ್ದಾನೆ - ಪ್ರತಿಮೆಯನ್ನೂ ರಚಿಸಿದ್ದಾನೆ. ಅಂಥ ಪ್ರಾಕೃತ ಪಂಡಿತನೂ ಆಗಿದ್ದಾನೆ. ಇದು ಮುಖ್ಯವಾಗಿ ನಾಗಶಾಸನ - ಸಂತಾನ ಪ್ರಾಪ್ತಿಗಾಗಿ ಹೊಯ್ಸಿದ ಶಾಸನ. ಇದರಲ್ಲಿ ಕಡೆದಿರುವ (ಉಬ್ಬು ಶಿಲ್ಪದ ಶೈಲಿ) ನಾಗನಿಗೆ ಐದು ತಲೆಗಳಿವೆ. ದೇಹದಲ್ಲಿ 'ಪವಿತ್ರ'ದ ಗಂಟುಕಟ್ಟು ಇದೆ. ಈ ಪವಿತ್ರದ ಗಂಟು ನಾಗಮಂಡಲದ ಆರಾಧನಾ ಸತ್ವ-ಸಂಕೇತ ವಾಗಿದೆ. ಇದರ ಆಚರಣೆಯನ್ನು ನಾಯಿರಿಗಳು, ಬಂಟರು, ಬಿಲ್ಲವರು, ಬ್ರಾಹ್ಮಣರು ಗೌರವಿಸುತ್ತಾರೆ. ಇದರ ನಿಜವಾದ ಕರ್ತೃ ಸತ್ವಶಾಲಿಗಳಾದ ಪಾತ್ರಿ ಮತ್ತು ದ್ಯೋತಕ 'ವೈದ್ಯ' ರೆಂಬುವವರಾಗಿದ್ದಾರೆ. (ಭೂತಾರಾ ಧನೆಯಲ್ಲಿ 'ಬೈಂದರ್ ಕಳ್' ಎಂದಿರುವುದನ್ನು ಇದೇ ಹಿನ್ನೆಲೆಯಲ್ಲಿ ನೆನೆಯ ಬಹುದಾಗಿದೆ.)

ನಾಗಮಂಡಲದ ಪಾತ್ರಿಯು ನಾಗನನ್ನು ಆವಾಹನೆ ಮಾಡಿಕೊಂಡು ನಂಬಿಕೆಯುಳ್ಳ ಬುಡಕಟ್ಟುಜನಾಂಗಗಳಿಗೆ. 'ದರ್ಶನವನ್ನು ನೀಡುವಲ್ಲಿ ಸಫಲತೆಯುಂಟಾಗುತ್ತದೆ. ಅದನ್ನೇ

'ಪ್ರಸಾದ'' ಎಂದು ಸ್ವೀಕರಿಸಲಾಗುತ್ತದೆ. ಹೀಗೆ ನಡೆಯುವ ಆಚರಣೆಯಲ್ಲಿ ಒಂದು ಅದ್ಭುತ ಆರಾಧನೆಯೂ ಸಾಧ್ಯವಾಗುತ್ತಿದೆ. ನಾಗಮಂಡದಲ್ಲಿ ನಾಗಪಾತ್ರಿಯು 'ಅದ್ಧೂರಿ' ಎನ್ನಬಹುದಾದ ಅನುಕರಣೆಯು (ಆವಾಹನೆಯು) ಬೆರಗನ್ನುಂಟುಮಾಡುತ್ತದೆ. ಇಂತಹ ಆವೇಶಕ್ಕಾಗಿ - ದರ್ಶನಾರ್ಥಿಗಳು - ಭಕ್ತಾದಿಗಳು (ಧರ್ಮ ಸ್ಥಳದ ಧರ್ಮಾಧಿಕಾರಿಗಳೂ) ಕಾದಿರುತ್ತಾರೆ. ಇದು ಬರಿಯ ನಾಟಕೀಯತೆಯಲ್ಲವೆನ್ನುವಂತೆ ನಟನೊಬ್ಬನ 'ಎಚ್ಚರ ವನ್ನೂ ಪಾತ್ರಿಯಲ್ಲಿ ಗುರುತಿಸಬಹುದಾಗಿದೆ - ನಾಗನು ಅತೃಪ್ತನಾದನೆಂದೂ ಆರಾಧನೆಯ ತಹತಹವು ಹರಡಿದಂತೆ ಕ್ಷಮೆ ಕೇಳುವಲ್ಲಿ ಇಡೀ ಸಮಾಜವೇ ವರ್ತಿಸಬಹುದಾಗಿದೆ. ಆವಾಹನೆ ಯಂತೆ ನಾಗನ ಪ್ರತ್ಯಕ್ಷತೆಯು ಅನುಭವಕ್ಕೆ ಸಲ್ಲುವಂತಾಗುತ್ತದೆ. ಇದನ್ನೇ ಶಿವರಾಮಕಾರಂತರು 'ರುದ್ರ-ಅದ್ಭುತ-ರಮಣೀಯತೆ'- ಎಂದು ಗುರುತಿಸಿದ್ದಾರೆ - ಇದನ್ನೇ ಭಕ್ತಾದಿಗಳು 'ವರದಾನದ ಸ್ಥಿತಿಗತಿಯೆಂದು ತಲೆಬಾಗಿ ವಿನೀತರಾಗಿ ಪ್ರಸಾದವನ್ನು ಸ್ವೀಕರಿಸುತ್ತಾರೆ.

ಈ ಆಚರಣೆಯ ಮತ್ತೊಂದು ವಿಶೇಷವೆಂದರೆ ಐದು (ಪಂಚ) ವರ್ಣಗಳಲ್ಲಿ (ಬಿಳಿ, ಕಪ್ಪು, ಹಳದಿ, ಹಸಿರು ಮತ್ತು ಕೆಂಪು) ರಚಿಸುವ ನಾಗನ ಚಿತ್ರ ಶಿಲ್ಪ - ಇದೇ ಮಂಡಲವೆನ್ನಿಸಿ ಕೊಳ್ಳಲು ಮತ್ತೆರಡು ಮೂರು ಅಂಶಗಳು (ಬ್ರಹ್ಮಯಕ್ಷ, ನಾಗಯಕ್ಷಿ, ಶೂಲದಂಥದು ಮತ್ತು ಫಲ ಸಮೃದ್ಧಿಯನ್ನು ಒಳಗೊಳ್ಳುವ ಕೇಪುಳ (ಹೂವು), ಅಡಕೆಯ ಹೂಗೊಂಚಲ, ಬಾಳೆಯ ಹಣ್ಣಿನ ಚಿಪ್ಪು, ಇತ್ಯಾದಿ - ಒಟ್ಟಿನಲ್ಲಿ ವೈದಿಕ ಪೂಜಾವಿಧಾನವಿದ್ದರೂ ವೇದ ಮಂತ್ರಗಳಿಗೆ ಇಲ್ಲಿ ಅವಕಾಶವಿಲ್ಲ. ನಾಗಸ್ವರ ವಾದ್ಯಗಳು ಆಚರಣೆಯು ಉದ್ದಕ್ಕೂ (ಸುಮಾರು ನಾಲ್ಕೈದು ಘಂಟೆಗಳ ಅವಧಿ) ನಡದೇ ಇರುತ್ತವೆ. ನಿಜವಾದ 'ನಾಗ' ಪ್ರಚೋದನೆಯು ಅರ್ಧಧಾರಿ ವೇಷದ ವೈದ್ಯನದು - ಆತನ ಹೊಗಳಿಕೆಯ 'ನಾಗಪದಗಳಿಂದ ಮತ್ತು ಅದಕ್ಕೆ ಆತನು ಬಳಸುವ 'ದಕ್ಕೆ'ಯ ಮೃದು - ಮಂದ ತಾಳ ಗತಿಯಿಂದ ಎನ್ನಬಹುದು, ಈ ವೈದ್ಯನಿಲ್ಲದೆ 'ನಾಗನ ಆವಾಹನೆಯೇ ಇರಲಾರದು. ಒಟ್ಟಿನಲ್ಲಿ ಇಂಥ ಅನುಭವವು ನಾವು ಇಂದಿನ ರಂಗಭೂಮಿಯಲ್ಲಿ ಕಾಣಲಾಗದಷ್ಟು 'ಅದ್ಭುತ-ರಮ್ಯ-ಅಭಿನಯ ಎನ್ನಬಹುದು ನಾಗನು ಮೈಮರೆಯುವ ಸ್ಥಿತಿಯೇ ಇಲ್ಲಿಯ ನಿರ್ಣಾಯಕ ಪರಿಸ್ಥಿತಿ. ಈತನು ನಾಗರಹಾವಿನಂತೆ ಅಭಿನ ಯಿಸುತ್ತಾನೆ - ಅಂದರೆ ಅನುಕರಣೆಯು ಪ್ರಧಾನವಾದ ರೀತಿಯಲ್ಲಿ ಸಂಚರಿಸುತ್ತಾ ಮೆರೆಯುತ್ತಾನೆ - ಅದರಂತೆ ಸರಿದಾಡುವಂತೆ ಹೆಜ್ಜೆಯಿರಿಸುತ್ತಾ ಆವೇಶದ ಭರತದಲ್ಲಿ ನಾಗಮಂಡಲದ ವೈದ್ಯನನ್ನು ಆಲಿಂಗಿಸಲು ಮುಂದಾಗುತ್ತಾನೆ! ಈ ಆವೇಶವನ್ನೇ ವೈದ್ಯನು 'ಹಿಂಗಾರ'ದಿಂದ ಮತ್ತು ತಣ್ಣೀರಿನಿಂದ 'ಶಮನಿ'ಸುತ್ತಾನೆ. ಇದಾದ ಕೂಡಲೆ ನಾಗಪಾತ್ರಿಯು 'ಶಾಂತ' ಮತ್ತು ಭಕ್ತರಿಗೆ ವರದಾಯಕ! ಇದಕ್ಕಾಗಿ ರಚಿತವಾಗುತ್ತಿದ್ದ 'ನಾಗ ಮಂಡಲ'ವು ಈಗ ಅಳಿಸಿಹೋಗುತ್ತದೆ.

ಇದನ್ನು ಬರಿಯ 'ಅಭಿನಯ'ವೆಂದರೆ ಸಾಲದು - ಆಚರಣೆಯ ಅಭಿನಯವೆನ್ನಬಹುದು - ಇದರ ರಂಗಮಂಟಪವು ಅಡಕೆಯ (ಹವಳದಂತೆ ಬಣ್ಣವುಳ್ಳ) ಗೊಂಚಲು (ಅಡಕೆಯ ಪಾರಿ ಎನ್ನುವುದುಂಟು) ಹೂವುಗಳು (ಕೆಂಪುಳ-ತುಳು) ಬಾಳೆಯ ಕಂದು, ತೆಂಗಿನ ಪಾರಿ ಇತ್ಯಾದಿಗಳಿಂದ ಅಲಂಕೃತವಾಗಿರುತ್ತದೆ. ಇದರ ನಡುವೆ ನೆಲವನ್ನು ಸಾರಿಸಿ (ಶುದ್ಧೀಕರಣ) ನಾಗಮಂಡಲವನ್ನು ಚಿತ್ರ-ಶಿಲ್ಪವಾಗಿಸಲು ಐದು ಹುಡಿಬಣ್ಣಗಳಿಂದ (ಮಸಿ-ಕಪ್ಪು, ಬಿಳಿ ಅಕ್ಕಿಯ ಹಿಟ್ಟು, ಹಳದಿ-ಅರಿಶಿನ ಪುಡಿ, ರಕ್ತ ಕೆಂಪು-ಕುಂಕುಮ, ಹಾಗೂ ಹಸಿರು-ಹಸಿರೆಲೆಯ ಪುಡಿ) ರಚಿಸಲಾಗುತ್ತದೆ.

ಇಲ್ಲಿ ಚಿತ್ರ ಶಿಲ್ಪ (ಉಬ್ಬು ಶಿಲ್ಪದಂತೆ) ಶಾಸ್ತ್ರೀಯ ಸೂತ್ರ ಬದ್ಧತೆಗೆ ಒಳಪಡಿಸಿದ್ದು ಅಭಿನಯ ಕಲೆಗೆ ನೆರವಾಗುವುದನ್ನು ಕಾಣಬಹುದು - ಮೊದಲು ಕಪ್ಪಿನ ಸರಳ ಆಕಾರವನ್ನು ಗುರುತುಮಾಡಿ ಅದರಲ್ಲಿ ನಿಜ (ಯಾ ಕಲ್ಪಿತ) ನಾಗನ ನೆನಪು (ಕಾಳಿಂಗ ನಾಗ) ಮೂಡ ಬಲ್ಲ ಚಿತ್ರಕಲೆಯ ವಿಶೇಷ - ಇಷ್ಟು ಕಾಲವೂ ಯಾವುದೇ ವೈದಿಕವಾದ ತತ್ವದ (ಫಿಲಾಸಫಿ) ಸಂಬಂಧವಿಲ್ಲದ ಒಂದು ವಿಧಿವಿಧಾನವಾಗಿ ಜರುಗುತ್ತಾ ಬಂದಿರುವ ಆಚರಣೆಯು ಕ್ರಿ.ಶ. ೨೦೦ರಿಂದ ಎಂದರೆ ತಪ್ಪಾಗಲಾರದು. ಆದುದರಿಂದ ನಾಗಮಂಡಲದ ಅನುಭವಕ್ಕೆ ಆಚರಣೆಗೆ ಸುಮಾರು ೨೦೦೦ ವರ್ಷಗಳೇ ಆಗಿರುವಂತಿದೆ. ಇಂತಹ ಉದಾಹರಣೆಯು ನಮ್ಮ ಇತಿಹಾಸದಲ್ಲಿ ಮತ್ತೊಂದಿಲ್ಲ (ಸಿಗುತ್ತಿಲ್ಲ).

ಇಲ್ಲಿ ಐದು ಬಣ್ಣಗಳ - ಬಿಳಿ, ಕಪ್ಪು, ಹಸಿರು, ಹಳದಿ ಮತ್ತು ಕೆಂಪು ಮತ್ತು ನಮ್ಮ ಲಲಿತಕಲೆಗಳ ನೆಲೆಯನ್ನು ಒಂದು ಶಾಸನವು (ಬನವಾಸಿಯಲ್ಲಿ ಕ್ರಿ.ಶ. ೨೦೦ ಸುಮಾರಿಗೆ) ನಾಗಾರಾಧನೆಯ (ಸದ್ಯಕ್ಕೆ) ಅತಿಪ್ರಾಚೀನವಾಗಿರುವ ಆಧಾರ ವಾಗಿರುತ್ತದೆ. ಇದರ ಐತಿಹಾಸಿಕ ಬೆಳವಣಿಗೆಯನ್ನು ಕರಾವಳಿ ಪ್ರದೇಶದ, ಅಲ್ಲಲ್ಲಿ ಕಂಡುಬರುವ ನಾಗಬನಗಳಲ್ಲಿಯೂ ಕಾಣಬಹುದು. ಅಲ್ಲೆಲ್ಲಾ ಈ ಶಿಲ್ಪದ 'ಪವಿತ್ರದ ಗಂಟಿ'ನ ನಾಗಶಿಲ್ಪಗಳಿವೆ. ಮೂಡಬಿದರೆಯ ಸಾವಿರ ಕಂಬದ ಬಸದಿಯ ರಂಗಮಂಟಪದಲ್ಲಿ ನಾಲ್ಕು, ಎಂಟು ಮತ್ತು ಹದಿನಾರು 'ಗಂಟು'ಗಳಿಂದ ಒಡಮೂಡುವ ನಾಗಮಂಡಲ ಕೆತ್ತನೆಗಳನ್ನು ಕೊರೆದು ಗುರುತಿಸಲಾಗಿದೆ.

★ ★ ★

ಕ್ರಿ.ಶಕದ ಪ್ರಾರಂಭದ ವೇಳೆಗಾಗಲೆ ಪಂಚವರ್ಣಗಳ ಬಳಕೆ ಮತ್ತು ಪ್ರಯೋಜನಗಳು ನಮ್ಮ ದೇಶದಲ್ಲಿ ಒಡಮೂಡಿರ ಬಹುದೆಂಬ ಅನುಮಾನಕ್ಕೆ ಈ ಬನವಾಸಿಯ ಪ್ರಾಕೃತ ಶಾಸನವು ಎಡೆ ಮಾಡಿಕೊಡುತ್ತಿದೆ. ಈ ಬಣ್ಣಗಳನ್ನು ಕುರಿತ ಖಚಿತವಾದ

ದಾಖಲೆಯು ಅಮರಕೋಶದಲ್ಲಿದೆ. ಈ ಐದು ಬಣ್ಣಗಳನ್ನೂ ಕ್ರಮವಾಗಿ ಎರಡು, ಮೂರು, ನಾಲ್ಕು ಮತ್ತು ಐದು ಬಣ್ಣಗಳನ್ನು ಬೆರೆಸುವುದರಿಂದ (ಸುಮಾರು ಐವತ್ತು) ವಿವಿಧ ಬಣ್ಣಗಳು ರೂಪತಾಳುವ ವಿಷಯವು ಅದರಲ್ಲಿದೆ. ಜೈನಧರ್ಮದ ಕಲಾವಂತಿಕೆಯಲ್ಲಿ ೨೪ ತೀರ್ಥಂಕರರನ್ನು ಈ ಪಂಚವರ್ಣಗಳನ್ನಾಗಿ ವಿಂಗಡಿಸಿರುವಂತೆ ಲೆಪ್ಪದ ಪ್ರತಿಮೆಗಳನ್ನು ಮೂಡಬಿದರೆಯ (ದ.ಕ. ಜಿಲ್ಲೆ) ಲೆಪ್ಪದ ಬಸದಿಯಲ್ಲಿ ಇಂದಿಗೂ ಗುರುತಿಸಬಹುದು (ಇವು ದಿಗಂಬರ ಪ್ರತಿಮೆಗಳು ಕೂಡ - ಆದುದರಿಂದ ವಡ್ಡಾರಾಧನೆಯ ಆಧಾರದಿಂದ ಜೈನರು ದಿಗಂಬರ ಮತ್ತು ಶ್ವೇತಾಂಬರರಾಗುವುದಕ್ಕೂ ಮುಂಚಿನಕಾಲ) ಬಹುಶಃ ಆರನೇ ಶ್ರುತ ಕೇವಲಿಯ ಕಾಲದಲ್ಲಿ ದಿಗಂಬರದಲ್ಲಿ ಶ್ವೇತಾಂಬರ ಪಂಗಡವು ಸಿಂಧುದೇಶದ ಮತ್ತು ರಾಜಸ್ಥಾನದ ಸಂದರ್ಭದಲ್ಲಿ ಬಿಳಿಯ (ಶ್ವೇತ ವರ್ಣದ ಅಂಬರ ಮಾತ್ರ) ವರ್ಣಕ್ಕೆ ಅವಕಾಶವುಂಟಾಗಿರುವಂತಿದೆ - ಅದರಲ್ಲೂ ಅರ್ಧ ಕಪ್ಪಡವಾಗಿ ನಂತರ ಪೂರ್ಣ ಕಪ್ಪಡವಾಗಿರಬಹುದೆಂಬುದಕ್ಕೆ ಸೂಚನೆಗಳಿವೆ. ಆದುದರಿಂದ ಜೈನ ಧರ್ಮದಲ್ಲಿ ಪಂಚವರ್ಣಗಳ ಇತಿಹಾಸವನ್ನು ಬೌದ್ಧ ಧರ್ಮಗ್ರಂಥಗಳಷ್ಟೇ (ಪಂಚವರ್ಣಗಳಿಗಾಗಿ) ಹಿಂದಕ್ಕೆ ಆಗಬಹುದೆಂಬ ಸೂಚನೆಗೆ ಸದವಕಾಶವಿದೆ- ಬೌದ್ಧ ಗುಹಾಂತರಗಳಲ್ಲಿ ಧಾರ್ಮಿಕ ಚಿತ್ರಗಳು ಪಂಚವರ್ಣಗಳಲ್ಲಿ ರಚಿತವಾಗಿರುತ್ತವೆಯಷ್ಟೆ (ಇವುಗಳಲ್ಲಿ ಕಪ್ಪಿನ ಜಾಗದಲ್ಲಿ ಊದಾಬಣ್ಣವು ಬಂದಿರುವುದನ್ನು 'ನೀಲ' ಎಂಬುದಕ್ಕೆ ಸೇರಿದಂತೆ ಗುರುತಿಸಬಹುದಾಗಿದೆ).

ಅಲ್ಲೆಲ್ಲಾ ಈ ಐದು ವರ್ಣಗಳ ಹಿರಿಮೆಯನ್ನೂ ನೆಲೆಯನ್ನೂ ಧಾರ್ಮಿಕವಾಗಿ ಗಮನಿಸಲು, ಬೆಳಕು (ಹಗಲು) ಇರುಳು (ಕತ್ತಲು) ಪ್ರಕೃತಿ (ಹಸಿರು), ರಕ್ತ (ಕೆಂಪು) ಮತ್ತು ಮೂಲಿಕೆ - ಔಷಧ (ಅರಿಶಿನ) ಹೀಗೆ ಅವಕಾಶವಿರುವಂತಿದೆ

ಪುರಾತನ (ಶಿಲಾಯುಗ) ಮಾನವನು ಹಂದಿಯ ರಕ್ತವನ್ನೂ ಕಪ್ಪು ಕಲ್ಲಿನ ಪುಡಿಯನ್ನೂ ಬಿಳಿಯ ಸುದ್ದೆಯ ಮಣ್ಣು ಹಾಗೂ ಹಳದಿಯ (ಹುಸಿಗಲ್ಲು) ಪುಡಿಯನ್ನೂ ಜೊತೆಗೆ ಹಸಿರು (ಎಲೆಗಳ ಪುಡಿ) ಹುಡಿಯನ್ನೂ (ಕಲ್ಲಿನಲ್ಲಿಯೂ ಈ ವರ್ಣವನ್ನು ಕಾಣಬಹುದು) ಬಳಸುತ್ತಿದ್ದಿರಬಹುದು (ಅಜಂತಾಗುಹೆಗಳ ಬಣ್ಣಗಳು ಅದರ ಸುತ್ತ ಮುತ್ತಲಲ್ಲಿ ದೊರಕುವ ಅದಿರುಕಲ್ಲುಗಳ ಪುಡಿಯಿಂದ ಒದಗಿರುವಂತೆ ತಿಳಿದು ಬರುತ್ತಿದೆ. ಅಲ್ಲದೆ ಟಿಬೆಟ್ಟಿನ ಬೌದ್ಧ ಕಲಾವಿದರು ಇಂದಿಗೂ ಕಲ್ಲುಪುಡಿಗಳಿಂದ ಅರೆದು ಮಾಡಿಕೊಂಡ 'ಪೇಸ್ಟ್' ಗಳಿಂದ ಚಿತ್ರಗಳನ್ನು (ಮಂಡಲಗಳನ್ನು) ತಾಂತ್ರಿಕ ವ್ಯವಸ್ಥೆಯಲ್ಲಿ ಬಳಸುವುದನ್ನು ಇಲ್ಲಿ ನೆನೆಯಬಹುದು - ಇವರು ಮುಖವಾಡಗಳಿಗೆ ಇಂಥ ಐದು ಬಣ್ಣಗಳನ್ನು ಬಳಸುತ್ತಾರೆ. ಒಟ್ಟಾರೆ ಹೇಳಬಹುದಾದರೆ ಕ್ರಿ.ಶಕದ ಪ್ರಾರಂಭದ ವೇಳೆಗಾಗಲೆ ಶಿಲ್ಪರಚನೆಗೂ ಹಿಂದಕ್ಕೆ ಚಿತ್ರರಚನೆಗಳನ್ನು ಒಯ್ಯಬಹುದು. ವಾಸ್ತವವಾಗಿ ಬಣ್ಣಗಳನ್ನು ನಮ್ಮ ಪುರಾತನರು ಖನಿಜ ಸಂಪತ್ತಿನಿಂದ ಗುರುತಿಸಿ ತಾಂತ್ರಿಕ, ಚಿತ್ರಗಳಿಗೆಂದು (ಅಂದರೆ ಮಂಡಲ ರಚನೆಗೆ) ಬಳಸುತ್ತಿದ್ದಿರಬಹುದೆಂಬುದಕ್ಕೆ ಇಂಥ ಆಧಾರಗಳು ಬೆರಳು ಮಾಡಿತೋರುತ್ತಿವೆ. ನಾಗಮಂಡಲ ರಚನೆಯು ಒಂದು ತಾಂತ್ರಿಕ ಪ್ರಾಯಶಃ ಶಾಕ್ತ ಧರ್ಮಕ್ಕೆ ಸೇರಿಕೊಂಡಂತೆ ನಾಗಮಂಡಲದ ಪೂರ್ವದ ಆಚರಣೆಯಾದ ದಖ್ಖೆ ಬಲಿ ಎಂಬ ಆಚರಣೆಗೆ ಸಂಬಂಧವನ್ನು ಕಾಣಬಹುದಾಗಿದೆ. ಇಂದಿಗೂ ಈ 'ದಖ್ಖೆ ಬಲಿ'ಯ ಆಚರಣೆಯು ಈ ಆಚರಣೆಯ ಅಧಿಕೃತ ವರ್ಗವೆನ್ನಬಹುದಾದ ವೈದ್ಯರಲ್ಲಿ ಗುರುತಿಸಬಹುದಾಗಿದೆ - ಗುಹಾಂತ ದೇವಾಲಯಗಳ ಮೊಸೇಕ್ ರಚನೆಗೆ ಈ ಬಣ್ಣದ ಹುಡಿ ಹಾಗೂ ಪೇಸ್ಟ್ ಮುಖ್ಯವೆಂಬುದಕ್ಕೆ ಬೇರೆಯ ವಿವರ ಬೇಕಾಗಿರುವುದಿಲ್ಲ (ಇದನ್ನು ನನ್ನ ಮುಂಚಿನ ಕೃತಿ ಯೊಂದಾದ **ಬೌದ್ಧ ಮತದಲ್ಲಿ ಯಕ್ಷಕಲೆಯಲ್ಲಿ** ಹೆಚ್ಚಿನ ಮಾಹಿತಿಗಳನ್ನು ಕೊಡಲಾಗಿದೆ.)

★ ★ ★

ಉಪಸಂಹಾರ

೧. ಬುಡಕಟ್ಟು ಜನಾಂಗಗಳಲ್ಲಿ ಕೊರಗರು ತಮ್ಮ ಪೂರ್ವಜರ ಹಬ್ಬವನ್ನು ಆಚರಿಸುವಲ್ಲಿ ಅವರ ಆದಿ ಪುರುಷರ ಪ್ರತಿಮೆಯನ್ನು ಮಣ್ಣಿನಲ್ಲಿ ಮಾಡಿ ಎಡೆ(?)ಯಿಟ್ಟು ತಾವೂ ಉಂಡು-ತಿಂದು, ಕುಣಿದು ಮೆರೆದು ತಮ್ಮ ತಮ್ಮ ಗೂಡುಗಳಿಗೆ ತೆರಳುತ್ತಾರೆಂದು ತಿಳಿದು ಬರುತ್ತಿದೆ. ಆದುದರಿಂದ ಕಲೆಗಳ ಪ್ರಯೋಜನವು ದ.ಕನ್ನಡದ ಬುಡಕಟ್ಟು ಆಚರಣೆಗಳಲ್ಲಿ ಸಹಜವಾಗಿದ್ದಂತೆ ಅರಿಯಬಹುದು. ಅವರಲ್ಲಿ ನಾಗಾರಾಧನೆಯು ಸಹಜವಾಗಿರುವುದರಿಂದ 'ನಾಗಮಂಡಲ' ವು ಎಲ್ಲಿ ಜರುಗಲಿ ಅಲ್ಲಿ ತಮ್ಮ ಸೇವೆಯನ್ನು ಸಲ್ಲಿಸದೇ ಉಳಿಯುವುದಿಲ್ಲ.

೨. ಕೊರಗರು ಭೂತಾರಾಧನೆಯಲ್ಲದೆ ಸೂರ್ಯಾರಾಧಕರೂ ಇರುವುದರಿಂದ ರಥಸಪ್ತಮಿಯನ್ನು ಆಚರಿಸುತ್ತಾರೆ. ಮಕ್ಕಳಿಗೆ ನಾಗನ ಹೆಸರಿಡುತ್ತಾರೆ. ಹಿರಿಯ ಮಗಳಿಗೆ ನಾಗರತ್ನ-ಎಂದು ಕರೆಯುವ ಪದ್ಧತಿಯಿರುವುದನ್ನೂ ಗುರುತಿಸಬಹುದು - ಕಾಲವನ್ನು ಸಂಕ್ರಮಣಗಳ ಗಣನೆಯಿಂದ ಗುರುತಿಸುತ್ತಾರೆ - ಇದನ್ನೇ ಭೂತಾರಾಧನೆಗೂ ಬಳಸುವುದನ್ನು ಕಾಣುತ್ತೇವೆ. ಈ ವಿಷಯದಲ್ಲಿ ಮುಹೂರ್ತವನ್ನು ನಿರ್ಧರಿಸುವವರು ಮಾತ್ರ ಬ್ರಾಹ್ಮಣ ಪುರೋಹಿತರಿದ್ದಾರೆ.

೩. ಬನವಾಸಿಯ ಶಾಸನದಲ್ಲಿ 'ನಾಗಸಿರಿ' ಎಂಬ ರಾಜಕುಮಾರಿಯ ಹೆಸರು ಬರುತ್ತದೆ. ದಾಮೊರಿಕ-ಎಂಬ ಗುರು ಹಾಗೂ ಹೆಸರಿಲ್ಲದ 'ಣಟಕ' ಎಂದು ಹೇಳಿಕೊಳ್ಳುವ ಕಲಾವಿದನ ಮಾತು ಬರುತ್ತದೆ- ತನ್ನ ಹೆಸರನ್ನು ಗೋಪ್ಯ ಮಾಡಿಕೊಳ್ಳುವ ಕಲಾವಿದ ಈತ ವಿದ್ಯಾಪಾರಂಗತನೂ ಶಾಸನ ರಚಕನೂ

ಶಿಲ್ಪದ ಕರ್ತೃವೂ ಅಲ್ಲದೆ ಮಾಂತ್ರಿಕ ಧರ್ಮದ - ವ್ಯಕ್ತಿಯೂ (ಮ್ಯಾಜಿಕ್ ಕಲ್ಟ್) ಆಗಿದ್ದಿರಬೇಕೆನ್ನಲು ಅವಕಾಶವಿದೆ. 'ನಾಗಸಿರಿ' ಎಂಬ ಹೆಸರು ನಾಸಿಕ್ ಶಾಸನಗಳಲ್ಲಿ ವಾಕಾಟಕರ ನೆಲೆಯಿಂದ ಗುರುತಿಸಬಹುದಾಗಿದೆ.

೪. ಅಂದಿನ ಶಾಸನಕರ್ತೃಗಳಲ್ಲಿ ಸಕಲವಿದ್ಯಾಪಾರಂಗತ ತನವು ಒಂದು ಅಳತೆಗೋಲಾಗಿದ್ದಿರಬೇಕೆಂಬುದನ್ನು ಮಣ್ಣೆಯ ಕ್ರಿ.ಶ. ೮೦೧ರ ಶಾಸನದಿಂದಲೂ ಸಮರ್ಥಿಸಬಹುದಾಗಿದೆ. ನಾಗಮಂಡಲದ ವೈದ್ಯರು ಸ್ವತಹ ನಾಗಬನಗಳ ಒಡೆಯರಾಗಿರು ವಂತೆ ಕ್ಷೇತ್ರ ಕಾರ್ಯದಿಂದ ಪತ್ತೆಯಾಗುತ್ತಿದೆ. ಈ ವರ್ಗವೊಂದು ದ.ಕನ್ನಡ ಜಿಲ್ಲೆಯಲ್ಲಿ ಉಳಿದು ಬಂದಿರುವುದು ಸೋಜಿಗದ ವಿಷಯವೇ ಆಗಿದೆ. ಬೇರೆ ಯಾವುದೇ ಸಿದ್ಧಾಂತವಾಗಲಿ ಈ ವೈದ್ಯರನ್ನು ವಿಚಲಿಸಗೊಳಿಸಲಾಗಿಲ್ಲ. ದ್ವೈತಮತದ ನಂಬಿಕೆಗಳನ್ನು ಇರಿಸಿಕೊಂಡಿರಬಹುದೆಂದು ಅನುಮಾನ ಬರುತ್ತದೆಯಾದರೂ ತಮ್ಮ 'ಕುಲಕರ್ಮ'ವೆಂಬಂತೆ ನಾಗಾರಾಧನೆಯನ್ನು ಕಾಪಾಡಿರುತ್ತಾರೆ. ಇವರು 'ವೈದಿಕ'ರಲ್ಲ ಏಕೆಂದರೆ ವೈದಿಕ ಪುರಾಣಗಳಾಗಲಿ ಭಾಗವತವಾಗಲಿ ಇವರಿಗೆ ಸೇರುವುದಿಲ್ಲ - ಇವರ ನಾಗಪೂಜೆಯಾಯಿತು ಇವರಾಯಿತು - ಎನ್ನಬೇಕಾಗಿದೆ.



(ಶಾಸನದ ಒಕ್ಕಣೆಯನ್ನು ಡಾ. ಹೆಚ್. ಆರ್. ರಘುನಾಥ ಭಟ್ಟರು ಸ್ವಂತ ಚಿತ್ರಣದ ಆಧಾರದಿಂದ ಲೇಖನವನ್ನು ಪ್ರಕಟಿಸಿದ್ದಾರೆ, ಅದರ ಒಕ್ಕಣೆಗೆ ಮಾತ್ರ ನಾನು ಋಣಿಯಾಗಿದ್ದೇನೆ)

ಡಾ|| ಎನ್. ನಂದೀಶ್ವರ*

# ಮಧ್ಯಕಾಲೀನ ಕರ್ನಾಟಕದಲ್ಲಿ ಶಕುನಗಳು

ಮನುಷ್ಯ ಜೀವನದಲ್ಲಿ ಪ್ರತಿಯೊಂದು ಕಾರ್ಯಗಳಿಗೂ ಪೂರ್ವಭಾವಿಯಾಗಿ ಫಲಾಪೇಕ್ಷೆಯನ್ನು ತಿಳಿಯುವ ಕುತೂಹಲ ಸ್ವಾಭಾವಿಕವಾಗಿ ಬಂದಿದೆ. ಈ ಕಾರಣದಿಂದ ಮನುಷ್ಯನಿಗೆ ಭವಿಷ್ಯದ ಮೊರೆ ಬೀಳುವುದು ಸಹಜ : ಸಾಮಾನ್ಯ. ಶಕುನಗಳು ಭವಿಷ್ಯವನ್ನು ಸೂಚಿಸುವ ಸಂಗತಿಗಳು ಎಂಬ ನಂಬಿಕೆ ಇದೆ. "ಮುಂಬರುವ ಜಯಾಪಜಯಗಳ ಅಥವಾ ವೃದ್ಧಿಹಾನಿಗಳ ಮಂಗಳಾಮಗಂಳ ಸೂಚನೆಯೇ ಶಕುನ."[೧] ಮತ್ತೊಂದು ಹೇಳಿಕೆಯಂತೆ "ನಿಮಿತ್ತಿಗಳ ಮೂಲಕ ಮುಂದಿನ ಹಾಗೂ ಹೋಗುಗಳನ್ನು ತಿಳಿಸುವ ಶಾಸ್ತ್ರವೇ ಶಕುನಶಾಸ್ತ್ರ."[೨] ಕೆಲವು ಶಕುನಗಳು ಆಕಾರದಿಂದ ಅಥವಾ ರೂಪದಿಂದ, ಅಥವಾ ನೋಟದಿಂದ ತಿಳಿಯುವಂತಹವು. ಇನ್ನು ಕೆಲವು ಜೀವಿಗಳ ಕೂಗುವಿಕೆಗಳಿಂದ ತಿಳಿಯುವಂತಹವು ಗಳಾಗಿರುತ್ತವೆ.[೩]

ಭಾರತದಲ್ಲಿ ಬಹು ಪುರಾತನ ಕಾಲದಲ್ಲಿ ಅಂದರೆ ತ್ರೇತಾಯುಗ, ದ್ವಾಪರಯುಗ ಪೂರ್ವದಲ್ಲಿ ಋಷಿಮುನಿಗಳ ಮೂಲಕ ಶಕುನಶಾಸ್ತ್ರವು ತಲೆತಲಾಂತರಗಳಿಂದ ಬೆಳೆದು ಬಂದಿದೆ,[೪] ಎಂಬ ಮಾತಿದೆ. ಶಕುನಕ್ಕೆ ಸಂಬಂಧಿಸಿದಂತೆ ವಸಿಷ್ಠ, ಗಾರ್ಗ್ಯ, ಲಾಕುಳನಾಥ, ವಸಂತರಾಜ, ಮುಂತಾದವರು ಶಕುನಶಾಸ್ತ್ರ ಗ್ರಂಥಗಳನ್ನು ರಚಿಸಿದ್ದಾರೆಂಬ ವಿಚಾರ ಚಾಕರಾಜನ (೧೫೦೦) ಶಕುನ ಪ್ರಪಂಚವೆಂಬ ಗ್ರಂಥದಿಂದ ತಿಳಿದುಬರುತ್ತದೆ.[೫] ಇತಿಹಾಸ, ಪುರಾಣ, ಕಾವ್ಯಗಳೂ ಅದಕ್ಕೆ ಮಣೆಹಾಸಿವೆ. ಜ್ಯೋತಿಶ್ಯಾಸ್ತ್ರದಲ್ಲಿ ಇದೊಂದು ಜನಪ್ರಿಯ ಶಾಖೆ. ಅದುದರಿಂದಲೇ ಜ್ಯೋತಿಷ್ಯದಲ್ಲಿ ಈ ಶಾಸ್ತ್ರದ ಜಾಡು ಹೆಚ್ಚು ಸವೆದಿದೆ. ಪ್ರಸಿದ್ಧ ಜ್ಯೋತಿಷಿ ವರಾಹಮಿಹಿರ ತನ್ನ ಬೃಹತ್ಸಂಹಿತೆಯ ಒಂದು ನೂರು ಆರು ಅಧ್ಯಾಯಗಳಲ್ಲಿ ಹತ್ತು ಅಧ್ಯಾಯಗಳನ್ನು ಶಕುನ ಭಾಗಕ್ಕಾಗಿಯೇ ಮೀಸಲಿಟ್ಟಿದ್ದಾನೆ. ಅಂದರೆ ಶಕುನಶಾಸ್ತ್ರವು ಒಂದು ಪ್ರಮುಖವಾದ ಶಾಸ್ತ್ರವಾಗಿತ್ತು ಎಂದು ತಿಳಿದುಬರುತ್ತದೆ. ರಾಜಸಭೆ ಶೋಭಿಸಬೇಕಾದರೆ ಇರಬೇಕಾದ ನಾನಾ ವಿಧವಾದ ಕಲಾವಿದರಲ್ಲಿ 'ಶಕುನಶಾಸ್ತ್ರಜ್ಞರೂ' ಒಬ್ಬರೆಂದು ಸೋಮನಾಥ ಕವಿ ಹೇಳುತ್ತಾನೆ.[೬] ಪುರಂದರದಾಸರು ಹಕ್ಕಿ ಶಕುನದ ಮಹಿಮೆಯನ್ನು ಸಾರುತ್ತ ಹಿಂದೆ ಅಂಬರೀಷರಾಯ, ಗಜರಾಯ, ಪ್ರಹ್ಲಾದ, ಉದ್ಧವ, ಅಜಾಮಿಳ ಮುಂತಾದವರನೇಕರು ಹಕ್ಕಿ ಶಕುನದ ಫಲವನ್ನುಂಡು ಅದರಿಂದ ಪ್ರಯೋಜನವನ್ನು ಪಡೆದರು ಎಂದು ಅದರ ಪೂರ್ವೇತಿಹಾಸ ವನ್ನೇ ನಮ್ಮ ಮುಂದಿಡುತ್ತಾರೆ.[೭] ಯಾವುದು ಶುಭ ಶಕುನ, ಯಾವುದು ಅಶುಭ ಶುಕನ, ಎಂಬುದನ್ನು ಕೇವಲ ಮೇಲು ನೋಟದಿಂದ ಅಥವಾ ಅವುಗಳ ಗುಣ ಸ್ವರೂಪದಿಂದ ನಿರ್ಧರಿತ ವಾಗುವುದಿಲ್ಲ. ಉದಾಹರಣೆಗೆ ಹೆಂಡ ಹಾಗೂ ವೇಶ್ಯೆ ಇವುಗಳ ಬಗ್ಗೆ ಎಂದಿನಿಂದಲೂ ಜನರಲ್ಲಿ ಸದ್ಭಾವನೆ ಮೂಡಿಲ್ಲ. ಅವು ಮನುಷ್ಯನನ್ನು ಅನೀತಿಗೆಳೆದು ಹಾಳು ಮಾಡುವುವು ಎಂಬ ಭಾವನೆ ಸಮಾಜದಲ್ಲಿ ಬೆಳೆದು ನಿಂತಿದೆ. ಆದರೆ ಶಕುನಕಾರರ ದೃಷ್ಟಿಯಲ್ಲಿ ಇವೆರಡೂ ಶುಭ ಶಕುನಗಳು.[೮] ಹಾಗೆಯೇ ವಿಪ್ರಸಂಕುಲ ಶುಭ ಶಕುನವಾದರೆ,[೯] ಒಂಟಿ ಬ್ರಾಹ್ಮಣನ ದರ್ಶನ ಅಪಶಕುನ.[೧೦] ಹೆಂಗಸರಿಗೆ ವಾಮನಯನ ಸ್ಫುರಣ, ವಾಮಬಾಹುಸ್ಪಂದನ ಶುಭ ಶಕುನವಾದರೆ, ಗಂಡಸರಿಗೆ ದಕ್ಷಿಣಾಂಗದ (ಬಲ) ಚಲನೆ ಶುಭ ಸೂಚಕ.[೧೧] ಅಂದರೆ ಗಂಡಸರಿಗೆ ಎಡ ಅಶುಭವಾದರೆ, ಹೆಂಗಸರಿಗೆ ಅದು ಶುಭ. ಹೀಗೆ ಶಕುನಗಳ ಅರ್ಥವ್ಯಾಪ್ತಿ ಈ ವಿಚಿತ್ರ ಗತಿಯಲ್ಲಿ ಬೆಳೆದಿದೆ, ಸಾಗಿದೆ. ದೈವ ಸೃಷ್ಟಿಯಲ್ಲಿ ಶಕುನದ ವ್ಯಾಪ್ತಿಗೆ ಸಿಕ್ಕದ ವಸ್ತುಗಳೇ ಅಪರೂಪವೆಂದು ಹೇಳಬೇಕು. ಉದಾಹರಣೆಗೆ ಬಸವರಾಜನ ಶಿವತತ್ತ್ವ ರತ್ನಾಕರದಲ್ಲಿ ಶಕುನಗಳ ಪಟ್ಟಿಯನ್ನು ಕೊಟ್ಟಿರುವರು.[೧೨] ಶಕುನ ಸೂಚಕ ವಸ್ತುಗಳ ಪಟ್ಟಿಯನ್ನು ನೋಡಿದರೆ ಅದರಲ್ಲಿ ಚರಾಚರ ವರ್ಗದಲ್ಲಿರುವ ಅನೇಕ ವಸ್ತುಗಳು ಕಂಡು ಬರುತ್ತವೆ. ಮುಖ್ಯವಾಗಿ ಪ್ರಾಣಿ, ಮನುಷ್ಯ ಮತ್ತು ಸಸ್ಯ ವರ್ಗ ಹಾಗೂ ಇತರ ಕೆಲವು ವಸ್ತುಗಳು.[೧೩]

**ಹಕ್ಕಿಗಳ ಶಕುನ**

ಹಕ್ಕಿಗಳ ಶಕುನಗಳು ಒಂದು ಪ್ರಮುಖವಾದ ಶಕುನ ಪ್ರಕಾರ ವಾಗಿದ್ದವು.[೧೪] ಬಸವರಾಜನ ಶಿವತತ್ತ್ವರತ್ನಾಕರದಲ್ಲಿ ಕಾಗೆ, ಪಿಂಗಳಿ (ಗೂಬೆ), ಹದ್ದು, ಕೊಕ್ಕರೆಗಳನ್ನು ಶಕುನ ಪಕ್ಷಿಗಳನ್ನಾಗಿ ಸೂಚಿಸಿದ್ದಾರೆ.[೧೫]

***ಕಾಗೆಯ ಶಕುನ :*** ಕಾಗೆಯು ಕೆಲವು ಜಾಗದಲ್ಲಿ ಕಂಡರೆ ಇಷ್ಟಾರ್ಥ ಸಿದ್ಧಿಯನ್ನು ಅಥವಾ ಮೃಷ್ಟಾನ್ನ ಭೋಜನ ದೊರಕುವುದನ್ನು ಸೂಚಿಸುತ್ತದೆ. ಆಲ, ಎಕ್ಕ ಮುಂತಾದ ಮರಗಿಡಗಳ ಮೇಲೆ ಕೂಗುತ್ತಾ ಅಥವಾ ಮಲ ವಿಸರ್ಜನೆ ಮಾಡುತ್ತಾ ಇದ್ದರೆ ಭೋಜನ ಪಾನಗಳು ಸಿಕ್ಕುವುದನ್ನು ಸೂಚಿಸುತ್ತದೆ. ವಿಚಿತ್ರವಾದ 'ಕ್ರಾಂಕ್ರಾಂ' ಈ ಧ್ವನಿಯು ಕ್ಷೇಮವನ್ನು, 'ಕ್ರೀಂ ಕ್ರೀಂ' ಎಂಬುದು ಹಣ ಸಿಗುವುದನ್ನು, ಕ್ವೀಂ ಕ್ವೀಂ ಚಿನ್ನ ಸಿಗುವುದನ್ನು ಸೂಚಿಸುತ್ತದೆ. ಬಳ್ಳಿ, ಕೂದಲು, ಕಡ್ಡಿ, ಚರ್ಮ,

* ಪ್ರಾಂಶುಪಾಲರು, ಶ್ರೀ ಮರಡಿ ರಂಗನಾಥಸ್ವಾಮಿ ಪದವಿ ಪೂರ್ವ ಕಾಲೇಜು, ಕಳ್ಳಂಬೆಳ್ಳ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ

ಮೂಲೆ, ಹಳೆ ಬಟ್ಟೆ, ಇದ್ದಿಲು, ಅರಗು, ಕೊಳ್ಳಿ, ಮಡಕೆ ಚೂರು ಇವುಗಳನ್ನು ಕೊಕ್ಕಿನಿಂದ ಕಚ್ಚುವ ಕಾಗೆ ತುಂಬಾ ಭಯ ಉಂಟಾಗುವುದನ್ನು ಸೂಚಿಸುತ್ತದೆ. ದಿಟ್ಟತನದಿಂದ ತನ್ನ ರೆಕ್ಕೆಗಳನ್ನು ಉಪಯೋಗಿಸಿಯೂ, ಕೊಕ್ಕಿನಂದ ಕುಕ್ಕುತ್ತಲೂ, ಜನರ ಮೇಲೆ ಆಕ್ರಮಣ ಮಾಡುವ ಕಾಗೆಗಳು ಶತ್ರುಗಳು ಹೆಚ್ಚುವುದನ್ನು ಸೂಚಿಸುತ್ತದೆ. ರಾತ್ರಿ ಕೂಗಿಕೊಳ್ಳುವ ಕಾಗೆಗಳು ಎಲ್ಲಾ ಜನರೂ ನಾಶವಾಗುವುದನ್ನು ಸೂಚಿಸುತ್ತದೆ. ಗಂಡಸಿನ ತಲೆಯ ಮೇಲೆ ಕುಳಿತ ಕಾಗೆಯು ಮರಣ ಮುಂತಾದ ಕೆಡುಕಿಗೆ ಸೂಚಕ ವಾಗಿರುತ್ತದೆ. ಹೆಂಗಸಿನ ತಲೆಯ ಮೇಲಾದರೆ ಜನಾಪವಾದಕ್ಕೆ ಅಥವಾ ದುಃಖಕ್ಕೆ ಕಾರಣವಾಗುತ್ತದೆ. ಕಾಗೆಯು 'ಕರ ಕರ' ಎಂಬ ಶಬ್ದ ಮಾಡುವುದು ಮನುಷ್ಯರ ಯುದ್ಧಕ್ಕೂ (ಜಗಳಕ್ಕೂ), 'ಕಣ ಕಣ' ಎಂಬುವುದು ಜ್ವರಕ್ಕೂ, 'ಕುಲು ಕುಲು' ಎಂಬ ಧ್ವನಿ ಪ್ರಿಯ ಸಮಾಗಮಕ್ಕೂ, 'ಕುಟು ಕುಟು' ಎಂಬುವುದು ಸೊಗಸಾದ ಅನ್ನ ಸಿಗುವುದನ್ನು ಸೂಚಿಸುತ್ತದೆ. ಧೂಳಿನಲ್ಲಿ ಹೊರಳಾಡಿ ನೀರು ಕಂಡು ಕೂಗುವ ಕಾಗೆಯು ಮಳೆಯು ಬರುವುದನ್ನು ಸೂಚಿಸುತ್ತದೆ.[೧೬]

*ಪಿಂಗಳ(ಗೂಬೆ) ಶಕುನ :* ಪಿಂಗಳ ಶಕುನದ ಬಗ್ಗೆ ಸೋಮೇಶ್ವರನು ಮಾನಸೋಲ್ಲಾಸದಲ್ಲಿ ಸುಧೀರ್ಘವಾಗಿ ವಿವರಿಸಿದ್ದಾನೆ. ಪಿಂಗಳ ಪಕ್ಷಿ ಇರುವ ಆಲ, ಆರಳಿ, ಮುತ್ತುಗ, ಅತ್ತಿ ಮರವನ್ನು ಏಕಾಗ್ರಚಿತ್ತದಿಂದ ಪೂಜಿಸಿ ಅದರ ಧ್ವನಿಯನ್ನು ಮತ್ತು ಚೇಷ್ಟೆಯನ್ನು ನೋಡಬೇಕು. ಪಾರ್ಥಿವ ಸ್ವರಾನಂತರ ಜಲಸ್ವರ ಕೇಳಿ ಬಂದರೆ ಎಲ್ಲವೂ ಸಿದ್ಧಿಸುತ್ತದೆ. ವ್ಯತ್ಯಸ್ತ ಕ್ರಮದಲ್ಲಿ ಧ್ವನಿ (ಜಲ ಸ್ವರಾನಂತರ ಪಾರ್ಥಿವ ಸ್ವರ) ಕೇಳಿ ಬಂದರೆ ಫಲನಾಶ ಉಂಟಾಗುತ್ತದೆ. ಮೊದಲು ಪಾರ್ಥಿವ ಧ್ವನಿ ಕೇಳಿ ಬಂದು ನಂತರ ತೈಜಸಧ್ವನಿ ಕೇಳಿದರೆ ಅಭೀಷ್ಟ ಫಲ ಸಿದ್ಧಿಸುತ್ತದೆ. ವಿಪರೀತ ಕ್ರಮ (ತೈಜಸ ಧ್ವನಿ ಮೊದಲು ಅನಂತರ ಪಾರ್ಥಿವ ಧ್ವನಿ) ಆದರೆ ಫಲವು ಅನ್ಯಥಾ (ಅಭೀಷ್ಟ ಫಲನಾಶ) ಆಗುತ್ತದೆ. ಮೊದಲು ಪಾರ್ಥಿವ ಧ್ವನಿಯಾಗಿ ಅನಂತರ ವಾಯು ಧ್ವನಿಯಾದರೆ ಮೊದಲು ಲಾಭವಾಗಿ ಅನಂತರ ನಾಶವಾಗುತ್ತದೆ. ಮೊದಲು ಭೌಮಧ್ವನಿಯಾಗಿ ಎರಡನೆಯದು ಆಕಾಶಧ್ವನಿಯಾದರೆ ಮೊದಲು ಸೌಖ್ಯ, ಅನಂತರ ದುಃಖವು, ಜಲ ಸ್ವರಾನಂತರ ತೈಜಸ ಸ್ವರ ಕೇಳಿಬಂದರೆ ಫಲಸಿದ್ಧಿ ಉಂಟಾಗಿ ಅನಂತರ ನಾಶವಾಗುತ್ತದೆ. ಮೊದಲು ಆಪ್ಯ ಧ್ವನಿಯಾಗಿ ಬಳಿಕ ವಾಯು ಧ್ವನಿಯಾದರೆ ಭಯವು ಧನನಾಶವು ಆಗುತ್ತದೆ. ಮೊದಲು ಆಪ್ಯ ಧ್ವನಿಯಾಗಿ ಬಳಿಕ ಆಕಾಶ ಧ್ವನಿಯಾದರೆ ಸ್ನೇಹಿತರೊಡನೆ ಹೊಡೆದಾಡಿ ಮರಣ ಉಂಟಾಗುತ್ತದೆ. ಮೊದಲು ಅಗ್ನಿ ಸ್ವರ ಬಳಿಕ ವಾಯು ಸ್ವರ ಕೇಳಿ ಬಂದರೆ ಧನಾಪಹರಣ ಎಂದೂ, ತೈಜಸ-ನಾಭಸ ಧ್ವನಿಗಳು ಕ್ರಮದಿಂದ ಆಗಲಿ ಅಥವಾ ವ್ಯತ್ಯಸ್ತ ಕ್ರಮದಿಂದಲಾಗಲಿ ಕೇಳಿಬಂದರೆ ಉಗ್ರವಾದ ಕಲಹ ಮತ್ತು ಮಹತ್ತರವಾದ ಭಯವನ್ನು ಸೂಚಿಸುತ್ತದೆ. ವಾಯು ಮತ್ತು ಆಕಾಶ ಸ್ವರಗಳು ಕ್ರಮವಾಗಿ ಆಗಲಿ ಅಥವಾ ಕ್ರಮ ವ್ಯತ್ಯಾಸದಿಂದಾಗಲಿ ಕೇಳಿಬಂದರೆ ರಾಜನಿಗೆ ಧನಹಾನಿ ಮತ್ತು ಯುದ್ಧದಲ್ಲಿ ಮೃತ್ಯು ಫಲಗಳು ಉಂಟಾಗುತ್ತವೆ. ಮೂರು ಅಥವಾ ನಾಲ್ಕು ಧ್ವನಿಗಳು ಕೇಳಿ ಬಂದಾಗ ಕೊನೆಯಲ್ಲಿ ಪಾರ್ಥಿವ ಧ್ವನಿ ಕೇಳಿ ಬಂದರೆ ಅದು ಉತ್ತಮ ಫಲವನ್ನು ಸೂಚಿಸುತ್ತದೆ. ಪಿಂಗಳ ಪಕ್ಷಿಯು ಮರದ ಮೇಲೆ ತಾನಿರುವ ಸ್ಥಳದಿಂದ ಮೇಲಕ್ಕೆ ಹಾರಿ ಪಾರ್ಥಿವ ಮತ್ತು ಜಲ ಈ ಎರಡು ಧ್ವನಿಗಳನ್ನು ಮಾಡಿದರೆ ಲಾಭ ಶುಭ ಕೀರ್ತಿ ಮತ್ತು ಜಯ ಈ ಫಲಗಳು ಉಂಟಾಗುತ್ತವೆ. ಪಿಂಗಳ ಪಕ್ಷಿಯು ಬಾಯಲ್ಲಿದ್ದ ಆಹಾರವನ್ನು ತ್ಯಜಿಸಿ ಪಾರ್ಥಿವ ಮತ್ತು ಜಲಜ ಈ ಎರಡು ಶುಭ ಧ್ವನಿಗಳಿಂದ ಕೂಗಿದರೆ ಸಂಪತ್ತಿಗೆ ಹಾನಿ ಎಂದು ತಿಳಿಸುತ್ತದೆ. ಪಿಂಗಳ ಪಕ್ಷಿಯು ಎಡಗಡೆಯಿಂದ ಶಾಂತ ದಿಕ್ಕಿಗೆ ಹೋಗಿ, ಶುಭ ಧ್ವನಿಯನ್ನು ಮಾಡಿದರೆ ಕ್ಷಿಪ್ರದಲ್ಲಿ ಶುಭ ಫಲ ಉಂಟಾಗುತ್ತದೆ.[೧೭] ರಾತ್ರಿಯ ವೇಳೆ ಮನೆಯ ಮೇಲೆ ಕೂಗುವ ಪಿಂಗಳ ಪಕ್ಷಿ (ಗೂಬೆ) ದುಃಖಕ್ಕೆ ಹಾಗೂ ಮಾನವನ ಸಾವಿಗೆ ಕಾರಣವಾಗುತ್ತದೆ. ಏಳು ರಾತ್ರಿ ಕೂಗಿದರೆ ಗೃಹಸ್ಥನ ಸಾವು, ಹದಿನಾಲ್ಕು ದಿವಸ ಕೂಗಿದರೆ ರಾಜ ನಾಶವಾಗುತ್ತಾನೆ. ಮನೆಯ ಬಾಗಿಲಿನಲ್ಲಿ ಮೂರು ದಿವಸ ಪಿಂಗಳ ಪಕ್ಷಿ (ಗೂಬೆ) ಕೂಗಿದರೆ ಕಳ್ಳರು ಬಲವಂತವಾಗಿ ಹಣವನ್ನು ಕದ್ದುಕೊಂಡು ಹೋಗುವರು. ಸಂಧ್ಯೆಯ ಸಮಯದಲ್ಲಿ ನೆಲದ ಮೇಲೂ, ಮನೆಯ ಮುಂಬಾಗಿಲಿನಲ್ಲೂ ಕೂಗುವ ಪಿಂಗಳ ಪಕ್ಷಿಯು ರೋಗವನ್ನೂ, ರೋಗಿಗಳಾಗಿರುವವನಿಗೆ ತುಂಬಾ ಕೆಡಕನ್ನು ಸೂಚಿಸುತ್ತದೆ ಎಂಬುದಾಗಿ ಶಕುನಕಾರರು ನಂಬಿಕೆ ಹೊಂದಿದ್ದರು.[೧೮]

**ಪ್ರಾಣಿಗಳ ಶಕುನಗಳು**

ಬಸವರಾಜನ ಶಿವತತ್ವರತ್ನಾಕರದಲ್ಲಿ ಶ್ವಾನ (ನಾಯಿ), ನರಿ, ಹಲ್ಲಿ, ಮೀನು, ಎತ್ತು, ಹಸು, ಬೆಕ್ಕು, ಕೋತಿ, ಹೆಸರಗತ್ತೆ, ಕತ್ತೆಕಿರುಬ, ಕತ್ತೆ, ಟಗರುಗಳ ಹಿಂಡು ಇವುಗಳನ್ನು ಶಕುನದ ಪ್ರಾಣಿಗಳನ್ನಾಗಿ ಸೂಚಿಸಿದ್ದಾರೆ.[೧೯] ಅವುಗಳಲ್ಲಿ ಕೆಲವು ಪ್ರಾಣಿಗಳಿಂದ ವಿವಿಧ ರೀತಿಯ ಶಕುನಗಳಾಗುವುದನ್ನು ತಿಳಿಯ ಬಹುದು.

*ಶ್ವಾನ(ನಾಯಿ) ಶಕುನ :* ಪ್ರಾಚೀನ ಕಾಲದಿಂದಲೂ ನಾಯಿಯು ಒಂದು ಶಕುನದ ಪ್ರಾಣಿಯಾಗಿತ್ತು. ನಾಯಿಯು ಪೊರಕೆ, ಹತ್ತಿ, ಸೆಣಬು, ಮೊರ, ಚಾವಟಿ ಇವುಗಳಲ್ಲಿ ಯಾವುದಾದರೊಂದನ್ನು ಕಚ್ಚಿಕೊಂಡು ಯಾವುದಾದರೊಂದು ಜಾಗವನ್ನು ತಲೆಯಿಂದ ಮುಟ್ಟಿ ಅದನ್ನೆ ದಿಟ್ಟಿಸಿ ನೋಡಿದರೆ ಅಲ್ಲಿ ದೊಡ್ಡ ನಿಧಿ ಅಡಗಿರುತ್ತದೆಯೆಂಬ ರಹಸ್ಯವನ್ನು ಹೊಂದಿರುತ್ತದೆ. ನಾಯಿಯು ಮುಂದೆ ಹೋಗುತ್ತಾ ತಲೆಯೆತ್ತಿ ದಿಕ್ಕುಗಳನ್ನು ನೋಡಿ ಕಾಲಿನಿಂದ ನೆಲಗಿವಿ ಕಿವಿಗಳನ್ನು ಪಟಪಟ

ಆಡಿಸಿದರೆ ಎಲ್ಲಾ ಕಾರ್ಯಗಳು ಹಾಳು. ವ್ಯಕ್ತಿಯ ಹಿಂದುಗಡೆ ಬೊಗಳಿ ತನ್ನ ಬಾಲವನ್ನು ಕಚ್ಚಿಕೊಂಡು ಕೂಡಲೇ ಏನಾದರೂ ಜಗಳ ಸಂಭವಿಸುತ್ತದೆ. ಹುಲ್ಲಿನ ಜಾಗದಲ್ಲಿ ಅಥವಾ ಕಡ್ಡಿಗಳಿರುವ ಕಡೆ ನಾಯಿಯು ಮೂತ್ರ ವಿಸರ್ಜನೆ ಮಾಡಿ ಕಾಲಿನಿಂದ ನೆಲ ಮುಟ್ಟಿದರೆ ಅವನು ಯಾತ್ರೆ ಹೋದಾಗ ಹಣ ಕಳೆದುಕೊಳ್ಳುವನು. ಹಗ್ಗ, ಚರ್ಮ, ಹುಲ್ಲು ಇವುಗಳಲ್ಲಿ ಯಾವುದಾದರೊಂದನ್ನು ಕಚ್ಚಿಕೊಂಡು ಹೋಗುವಾಗ ಅಟ್ಟಿಸಿಕೊಂಡು ಓಡಿಸಿದ ನಾಯಿಯು ದಕ್ಷಿಣ ದಿಕ್ಕಿಗೆ ಹೋಗುತ್ತಾ ಎಡಗಾಲಿನಿಂದ ನೆಲವನ್ನು ಮುಟ್ಟಿದರೆ (ಗೀರಿದರೆ) ಕಾಲಿಗೆ ತೊಂದರೆಯಾಗುತ್ತದೆ.[೨೦] ವಿಜಯಯಾತ್ರೆಗೆ ಹೊರಡುವ ಸಮಯದಲ್ಲಿ ಗಂಡುನಾಯಿಯು ಬಲಗಡೆಯಿಂದ ಎಡಗಡೆಗೆ ಹೋದರೆ ಅಥವಾ ಎಡ ಕಿವಿಯನ್ನು ಮುಟ್ಟಿದರೆ ಆಗ ಯಾತ್ರೆಯು ಸಿದ್ಧಿಸುತ್ತದೆ. ಪ್ರವೇಶ ಕಾಲದಲ್ಲಿ (ಗಂಡುನಾಯಿಯು) ಬಲಗಡೆಗೆ ಹೋದರೆ, ಆಕಳಿಸಿದರೆ ಅಥವಾ ರತಿಕ್ರೀಡಾ ಉದ್ಯೋಗದಲ್ಲಿದ್ದರೆ ಅತ್ಯಂತ ಸೌಖ್ಯ ಉಂಟಾಗುತ್ತದೆ. ಹೆಣ್ಣು ನಾಯಿಯಾದರೆ ಇದಕ್ಕೆ ವಿರುದ್ಧವಾದ ಫಲ ಉಂಟಾಗುತ್ತದೆ. ಆನೆ ಇರುವ ಸ್ಥಳ ಕುದುರೆ ಇರುವ ಸ್ಥಳ, ಹುಲ್ಲು ಪ್ರದೇಶ, ಮಲಗುವ ಪ್ರದೇಶ, ಫಲಸಿರುವ ಮರ, ಇಟ್ಟಿಗೆ ರಾಶಿ, ಮಣ್ಣು ಗುಡ್ಡೆ, ಹೂವು ಹಣ್ಣುಗಳು ಇರುವ ಸ್ಥಳ ಈ ಪ್ರದೇಶಗಳಿಗೆ ನಾಯಿಯು ಹೋದರೆ ಶುಭ ಫಲ ಉಂಟಾಗುತ್ತದೆ. ಗಂಡುನಾಯಿ ಮುಂದುಗಡೆ ಮೂತ್ರಿಸುತ್ತಾ ಹೋದರೆ ಆಗ ಪ್ರಯಾಣ ಮಾಡುತ್ತಿರುವವನಿಗೆ ಅಭೀಪ್ಸಿತ ಕಾರ್ಯವು ನಿಶ್ಚಯವಾಗಿ ಸಿದ್ಧಿಸುತ್ತದೆ. ಅನ್ನ ಮಾಂಸ ಯಾವುದಾದರೂ ಹೊಸ ಪದಾರ್ಥ ಇವನ್ನು ಬಾಯಿಯಲ್ಲಿ ಇಟ್ಟುಕೊಂಡು ಹೋಗುವ ನಾಯಿ ಪ್ರಯಾಣ ಮಾಡುವವನಿಗೆ ಲಾಭವಾಗುತ್ತದೆ. ಹಸಿಮೂಳೆ, ಹಾಗೆಯೇ ಬಟ್ಟೆ, ಪಾದರಕ್ಷೆ ಇವನ್ನು ಬಾಯಿಯಲ್ಲಿ ಕಚ್ಚಿಕೊಂಡು ಸಮೀಪಕ್ಕೆ ಬಂದ ನಾಯಿ ಅದನ್ನು ಬಿಟ್ಟಿದ್ದೆ ಆದರೆ ಸೌಖ್ಯ ಉಂಟಾಗುತ್ತದೆ. ಎಂಬ ನಂಬಿಕೆಯನ್ನು ಹೊಂದಿದ್ದರು.[೨೧]

*ನರಿಯ ಶಕುನ :* ನರಿಯು ಸಹ ಶಕುನದ ಒಂದು ಮುಖ್ಯ ಪ್ರಾಣಿಯಾಗಿತ್ತು. ಹೆಣ್ಣು ನರಿ ರಾತ್ರಿ ಊಳಿಟ್ಟರೆ ಆ ಊಳಿಡುವ ಸ್ವರದಿಂದ ಸೂಚಿತವಾಗುವ ಫಲ ಹಗಲಿನಲ್ಲೂ ಇರುತ್ತದೆ. ದಕ್ಷಿಣ ದಿಕ್ಕಿನಲ್ಲಿ ರಾತ್ರಿ ಹೆಣ್ಣು ನರಿ ಕಂಡಲ್ಲಿ ನೆಮ್ಮದಿ, ಹಾಗೂ ಬೆಳಿಗ್ಗೆ ಕಣ್ಣಿಗೆ ಕಾಣಿಸಿಕೊಂಡರೆ ಎದುರಿಗೆ ಬಂದರೆ ಅದಕ್ಕಿಂತ ಬೇರೆ ಫಲ ಅಂದರೆ ಅಸೌಖ್ಯ ಮತ್ತು ಅಶುಭ. ಪಶ್ಚಿಮ ದಿಕ್ಕಿನಲ್ಲಿ ಹೆಣ್ಣು ನರಿ ಕಂಡರೆ ಶತ್ರು ಸೈನ್ಯದಿಂದ ಭಯ. ಉತ್ತರ ದಿಕ್ಕಿನಲ್ಲಿ ಶುಭ. ಕುದುರೆಗಳ ಮಧ್ಯೆ ಸೇರಿಕೊಂಡು ಊಳಿಡುವ ನರಿ ಯುದ್ಧಗಳ ಸರಣಿಯನ್ನು ಸೂಚಿಸುತ್ತದೆ. ಯಾವ ಕ್ಷೋಭೆಯೂ ಇಲ್ಲದ ಶಾಂತವಾದ ದಿಕ್ಕಿನಲ್ಲಿ ಹೆಣ್ಣು ನರಿ ಊಳಿಟ್ಟರೆ ಕ್ರಮವಾಗಿ ಒಂದು ಧನಲಾಭ, ಎರಡು ಮಿತ್ರಲಾಭ, ಮೂರು ಪ್ರಿಯ, ನಾಲ್ಕು ಭೋಗ, ಐದು ನೆಮ್ಮದಿ, ಆರು ಜಯ (ರಾಜ್ಯ), ಏಳು ಭಯ ಇವು ಒಂದು ಸಲದ ಎರಡು ಸಲದ... ಇತ್ಯಾದಿ ಊಳಿಡುವಿಕೆಗೆ ಫಲಗಳು. ಪೆ ಪೇ-ಎಂದು ಕೂಗುವುದು ಪಟ್ಟಣ ನಾಶ ವಾಗುವುದನ್ನು ಹೂ ಹೂ ಎಂದು ಕೂಗುವುದು ಶುಭಗಳಾಗು ವುದನ್ನು, ಭೂ ಭೂ ಎಂದು ಕೂಗುವುದು ಕೆಡಕನ್ನು, ಹಹ ಎಂದು ಕೂಗುವುದು ರಾಜ ನಾಶವಾಗುವುದನ್ನು ಸೂಚಿಸುತ್ತದೆ ಎಂಬುದಾಗಿ ತಿಳಿದು ಬರುತ್ತದೆ.[೨೨] ಪ್ರಯಾಣ ಹೊರಟಾಗ ನರಿ, ಮುಂಗುಸಿ, ಹುಲಿ, ಪಿಂಗಳ ಪಕ್ಷಿ (ಗೂಬೆ), ಹಾಗೂ ಪಕ್ಷಿಗಳು ಬಲಗಡೆ ಕಾಣಿಸುವುದು ಪ್ರಶಸ್ತ. ಎಡಗಡೆ ಕಂಡರೆ ಅಪ್ರಶಸ್ತ. ಸೂರ್ಯ, ಜಿಂಕೆ, ಆಡು, ಕತ್ತೆ, ಕಾಗೆ, ಮೊಲ ಇವುಗಳನ್ನು ಎಡಗಡೆ ಪ್ರಯಾಣ ಕಾಲದಲ್ಲಿ ನೋಡುವುದು ಪ್ರಶಸ್ತ. ಬಲಗಡೆಯಾದರೆ ಅಪ್ರಶಸ್ತ ಎಂಬುದಾಗಿ ಶಕುನಕಾರರು ತಿಳಿಸಿರುತ್ತಾರೆ.[೨೩]

*ಹಲ್ಲಿಯ ಶಕುನ :* ಹಲ್ಲಿಯು ಒಂದು ಶಕುನದ ಪ್ರಾಣಿಯಾಗಿತ್ತು. ಹಲ್ಲಿಯನ್ನು ಪೂಜಿಸಿದ ನಂತರ ಹಲ್ಲಿಯ ಲೊಚಗುಟ್ಟುವಿಕೆಯ ಸ್ವರವನ್ನು ಎಣಿಸಿ ಫಲಗಳನ್ನು ತಿಳಿಯಬೇಕು. ಒಂದು ಸಿದ್ಧಿ, ಎರಡು ಲಾಭ, ಮೂರು ದುಃಖ, ನಾಲ್ಕು ಹೆದರುವಿಕೆ, ಐದು ಲಾಭ ಇಲ್ಲದಿರುವಿಕೆ, ಆರು ಆಧಿ (ಚಿಂತೆ), ಏಳು ವೃದ್ಧಿ, ಎಂಟು ಸಾವು, ಒಂಬತ್ತು ರಾಜ ಸಮ್ಮಾನ, ಹತ್ತು ಬಂಧು ದರ್ಶನ, ಹನ್ನೊಂದು ಇಷ್ಟಸಿದ್ಧಿ, ಹನ್ನೆರಡು ಅನಿಷ್ಟ ಒದಗುವುದು - ಇವು ಹನ್ನೆರಡು ಸ್ವರದವರೆಗಿನ ಫಲ. ದೇವಸ್ಥಾನದ ವಿಮಾನ (ಮುಖ್ಯ ಗೋಪುರ)ದಲ್ಲಿ, ಮರದಲ್ಲಿ ಅಥವಾ ಸಭಾ ಭವನದಲ್ಲಿರುವ ಹಲ್ಲಿ ಕೂಗಿದರೆ ಶೀಘ್ರವಾಗಿ ಶುಭ ಫಲ ಉಂಟಾಗುತ್ತದೆ. ಮುಳ್ಳಿನ ಮರದಲ್ಲಿ, ಒಣಗಿದ ಮರದಲ್ಲಿ, ಹೊಂಗೆ ಮರದಲ್ಲಿ, ಕಗ್ಗಲಿ ಮರದಲ್ಲಿ ಹಲ್ಲಿ ನುಡಿದರೆ ಅಲ್ಪ ಫಲ ಉಂಟಾಗುತ್ತದೆ, ಎಂಬುದಾಗಿ ತಿಳಿಸಿರುತ್ತಾರೆ.[೨೪]

**ಮನುಷ್ಯನ ವಿವಿಧ ಅಂಗಾಂಗಗಳಿಂದ ಆಗುವ ಶಕುನಗಳು**

ಮನುಷ್ಯನ ವಿವಿಧ ಅಂಗಾಂಗಗಳು ವಿವಿಧ ರೀತಿಯಲ್ಲಿ ಬದಲಾವಣೆ ಹೊಂದುವುದರಿಂದಲೂ ಶಕುನವನ್ನು ನೋಡಬಹುದು. ಯಾತ್ರೆಯ ಸಮಯದಲ್ಲಿ ಬಲಗಾಲು ಹೆಬ್ಬೆರಳು ಮುಂತಾದ ಜಾಗದಲ್ಲಿ ಎಡವಿದರೆ ದುಡ್ಡು, ಬಟ್ಟೆ ಯಾರಾದರೊಡನೆ ವಿರೋಧ, ಜಗಳ ಪಡೆಯುತ್ತಾನೆ. ಇದೇ ರೀತಿ ಎಡಗಾಲಿನಲ್ಲಿ ಎಡವಿದರೆ ಶುಭ ಕಾರ್ಯ ವಿಫಲ ವಾಗುವುದು. ಜಗಳ ಸ್ನೇಹ ಇಷ್ಟವಾದ ಫಲ ಅಥವಾ ನೆಮ್ಮದಿ ಇವುಗಳಲ್ಲಿ ಯಾವುದಾದರೂ ಒಂದನ್ನು ಪಡೆಯುತ್ತಾನೆ.[೨೫] ಬಸವರಾಜನ ಶಿವತತ್ವರತ್ನಾಕರದಲ್ಲಿ ಮನುಷ್ಯನ ವಿವಿಧ ಭಾಗ ಅದುರಿದರೆ ಅದರಿಂದ ಆಗುವ ಶಕುನಗಳ ಬಗ್ಗೆ ತಿಳಿಸಿರುತ್ತಾನೆ. ತಲೆ ಅದುರಿದರೆ ರಾಜ್ಯ ಲಾಭ, ಹಣೆ ಅದುರಿದರೆ ಉನ್ನತ ಪದವಿ ಪ್ರಾಪ್ತಿ. ಹುಬ್ಬಿನ ಮಧ್ಯೆ ಅದುರಿದರೆ ಹಣದ ಪ್ರಾಪ್ತಿ. ಹುಬ್ಬು ಅದುರಿದಲ್ಲಿ ಸ್ತ್ರೀ ಪ್ರಾಪ್ತಿ. ಮೂಗು ಅದುರಿದರೆ ಸುಗಂಧ

ಪ್ರಾಪ್ತಿ. ಬಲಗಣ್ಣಿನ ಕೊನೆಗಳು ಅದುರಿದರೆ ಇರುವ ದುಃಖದ ನಾಶವು ಹೋಗುವುದು. ಕಣ್ಣಿನ ಕೆಳಕೊನೆ ಅದುರಿದರೆ ಹಾನಿ. ಕೆಳತುಟಿ ಅದುರಿದರೆ ತೊಂದರೆ, ಬಲಗಿವಿ ಅದುರಿದರೆ ಗಂಡಸರಿಗೆ ಯಾವಾಗಲೂ ಶುಭ. ಎಡಗಿವಿ ಅದುರಿದರೆ ಕೆಟ್ಟ ವಾರ್ತೆ. ಕೊರಳು ಅದುರಿದರೆ ಸಂಪತ್ತು ಹಾನಿ. ಬಲ ಅಂಗೈ ಅದುರಿದರೆ ಧನಲಾಭ. ಎಡ ಅಂಗೈಯಾದರೆ ವೇದನೆ. ಮಂಡಿಯಿಂದ ಕೆಳಕಾಲಿನವರೆಗಿನ ಭಾಗದಲ್ಲಿ ಪಲ್ಲಕ್ಕಿ. ವಾಹನ ಹಾಗೂ ಛತ್ರ ಸಂಪತ್ತುಗಳು ದೊರೆಯುವುವು. ಹೊಟ್ಟೆಯಾದರೆ ಧಾನ್ಯ ಲಾಭ. ಹೊಕ್ಕಳಾದರೆ ಒಳ್ಳೆಯ ಭೋಜನ ಎಂಬುದಾಗಿ ಶಕುನಕಾರರು ಭಾವಿಸಿದ್ದರು.[೨೬]

***ಸೀನಿನ ಶಕುನ :*** ಸೀನುವುದು ಸಹ ಶಕುನ ಸೂಚಕ ವಾಗಿರುತ್ತಿತ್ತು. ಚಿಕ್ಕ ಮಕ್ಕಳು, ಮುದುಕರು, ನೆಗಡಿ ಬಂದವರು ಬಲವಾಗಿ ಸೀನಿದರೆ ಅದರ ಫಲವೇನು ಇಲ್ಲ. ನಮ್ಮ ಎದುರಲ್ಲಿ ಯಾರಾದರೂ ಸೀನಿದರೆ ಅದು ಯಾವುದನ್ನೂ ಸೂಚಿಸುವುದಿಲ್ಲ. ಬಲಗಡೆಯಲ್ಲಿ ಯಾರಾದರೂ ಹಿಂದಬದಿಯಲ್ಲಿ ಸೀನಿದರೆ ಅದು ಕೆಡಕನ್ನು ಸೂಚಿಸುತ್ತದೆ. ಹಿಂತಿರುಗಿಸಿಕೊಂಡು ಸೀನಿದರೆ ಕಾರ್ಯಸಿದ್ಧಿ, ಎಡಗಡೆಯಲ್ಲಿ ಸೀನಿದರೆ ಕ್ಷೇಮ. ಚಿಕಿತ್ಸೆಯ ಸಂದರ್ಭದಲ್ಲಿ ವಾಹನವನ್ನು ಹತ್ತುವಾಗ ಕೂತುಕೊಳ್ಳುವಾಗ ಮಲಗುವಾಗ, ಊಟ ಮಾಡುವಾಗ ವಿದ್ಯಾರಂಭದ ಸಮಯದಲ್ಲಿ ಮತ್ತು ಬೀಜ ಬಿತ್ತುವಾಗ ಸೀನುವುದು ಶುಭ.[೨೭] ಸರಿ ಸಂಖ್ಯೆಯ ಸೀನುಗಳು ಸಹ ಶುಭ ಸೂಚಕ ಶಕುನಗಳೆಂದು, ನಂಬಿಕೆಯನ್ನು ಹೊಂದಿದ್ದರು.

***ಇರುವೆ ಶಕುನ :*** ಮನೆಯಲ್ಲಿ ಇರುವೆ ಏಳುವುದು ಶುಭಾಶುಭ ಶಕುನವನ್ನು ಕೊಡುತ್ತದೆಯೆಂದು ಜನಜನಿತ ನಂಬಿಕೆ. ಚಾವುಂಡರಾಯ ಆ ವಿಚಾರವನ್ನು ಕೂಡ ಇಲ್ಲಿ ಹೇಳುವುದನ್ನು ಮರೆತಿಲ್ಲ. ಆ ಪ್ರಕಾರ ಕೆಂಪು ಇರುವೆ ನಡು ಮನೆಯಲ್ಲಿ ಎದ್ದರೆ ಧನಲಾಭ, ಆಗ್ನೇಯ, ತೆಂಕಣ, ಪಡುವಣ ದಿಕ್ಕಿನಲ್ಲಿ ಎದ್ದರೆ ಕ್ರಮವಾಗಿ ಇಷ್ಟ ಜನಗಳ ಆಗಮನ. ಇಷ್ಟ ಕಾರ್ಯಸಿದ್ಧಿ, ಶುಭಪ್ರದ. ಉತ್ತರ ದಿಕ್ಕಿನಲ್ಲಿ ಕಾಣಿಸಿಕೊಂಡರೆ ಅರ್ಥಲಾಭ, ನೈರುತ್ಯ ಮತ್ತು ವಾಯುವ್ಯ ದಿಕ್ಕಿನಲ್ಲಿ ಎದ್ದರೆ ಬರ ಮತ್ತು ಸತಿ ಲಾಭ, ಈಶಾನ್ಯ ದಿಕ್ಕಿನಲ್ಲಿ ಎದ್ದರೆ ಭಯದ ಸೂಚನೆ. ಅಂತೆಯೇ ಒಲೆಯಲ್ಲಿ ಎದ್ದರೆ ಅಗ್ನಿ ಭಯ. ದೀಪವಿಡುವ ಸ್ಥಾನದಲ್ಲಿ ಕಾಣಿಸಿಕೊಂಡರೆ ಸರ್ವನಾಶ. ಹೊಸ್ತಿಲು ಮೇಲೆ ಎದ್ದರೆ ಯಜಮಾನನಿಗೆ ಅನಿಷ್ಟ. ತುಪ್ಪದ ಮಡಿಕೆಯ ತಳದಲ್ಲಿ ಎದ್ದರೆ ಬರ, ಧಾನ್ಯ ಸಂಗ್ರಹದಲ್ಲಾದರೆ ಧಾನ್ಯನಾಶ, ಮಂಚದಡಿ ಯಲ್ಲಾದರೆ ರೋಗ ಭಯ, ಪಶುಸ್ಥಾನ ದಲ್ಲಿ ಎದ್ದರೆ ಗೋನಾಶ ಉಂಟಾಗುವುದು. ಇನ್ನು ದಾರಿ ದೇವಾಲಯ, ಕೊಟ್ಟಿಗೆ ಬೀದಿ ಮುಂತಾದ ಸ್ಥಾನಗಳಲ್ಲಿ ಕಾಣಿಸಿಕೊಂಡರೆ ಗ್ರಾಮಕ್ಕೆ ಕೇಡು ಸಂಭವಿಸುವುದು ಎಂದು ತಿಳಿಯಬೇಕು.[೨೮]

**ಯಾತ್ರೆಯಲ್ಲಿ ಮಂಗಲವನ್ನುಂಟುಮಾಡುವ ಶುಭ ಶಕುನಗಳು**

ಪೂರ್ಣ ಕುಂಭವನ್ನಾಗಲಿ ಹಾಗೆಯೇ ಕನ್ನಡಿಯನ್ನಾಗಲಿ, ಮೊಸರನ್ನಾಗಲಿ, ಹೆಂಡವನ್ನಾಗಲಿ, ಹಾಗೆಯೇ ಮಾಂಸವನ್ನಾಗಲಿ, ಮೀನನ್ನಾಗಲಿ ಶಂಕುವನ್ನಾಗಲಿ, ಧ್ವಜವನ್ನಾಗಲಿ, ಛತ್ರಿಯನ್ನಾಗಲಿ, ಚಾಮರವನ್ನಾಗಲಿ, ವೇಶ್ಯೆಯನ್ನಾಗಲಿ, ಬಿಲ್ಲನ್ನಾಗಲಿ, ಜಿಂಕೆ ಯನ್ನಾಗಲಿ, ಭಾರಧ್ವಾಜ ಪಕ್ಷಿಯನ್ನಾಗಲಿ, ಹಣ್ಣು - ಹೂವು ಅಕ್ಷತೆಗಳನ್ನಾಗಲಿ, ವೃಷಭವನ್ನಾಗಲಿ, ಮದಿಸಿದ ಆನೆಯನ್ನಾಗಲಿ, ಬಿಳಿ ಕುದುರೆಯನ್ನಾಗಲಿ, ದ್ವಿಜೋತ್ತಮನನ್ನಾಗಲಿ, ಚಿನ್ನವಾಗಲಿ, ಶ್ರೇಷ್ಠವಾದ ರತ್ನವನ್ನಾಗಲಿ, ವೀಣೆಯನ್ನಾಗಲಿ, ಅಂತೆಯೇ ನಗಾರಿಯನ್ನಾಗಲಿ, ಕಟ್ಟಿರುವ ಹಸುವನ್ನಾಗಲಿ, ವಿಜಯಯಾತ್ರೆಗೆ ಹೊರಟಿರುವಾಗ ಕಂಡರೆ ಫಲ ಸಿದ್ಧಿ ಉಂಟಾಗುತ್ತದೆ. ರಾಜನು, ಬ್ರಾಹ್ಮಣನು, ಸ್ನೇಹಿತನು, ವೇಶ್ಯೆ, ಬಿಳಿ ಬಟ್ಟೆಯನ್ನು ಉಟ್ಟಿರುವ ಕನ್ಯೆ, ವೃಷಭಗಳು ಮತ್ತು ಆನೆಯ ಮೇಲೆ ಕುಳಿತಿರುವ ಗಂಡಸರು, ಹೆಂಗಸರು (ಸುಮಂಗಲಿಯರು ಇವರ ದರ್ಶನ ವಿಜಯ ಯಾತ್ರಾರಂಭಕಾಲದಲ್ಲಿ) ಶುಭಪ್ರದವಾದುದ್ದು. 'ಹೋಗು' ಎಂಬ ಶಬ್ದದ ಧ್ವನಿ ಹಿಂದುಗಡೆಯಲ್ಲೂ 'ಬಾ' ಎಂಬ ಶಬ್ದ ಧ್ವನಿ ಮುಂದುಗಡೆಯಲ್ಲೂ ಕೇಳಿ ಬಂದರೆ ಶುಭಫಲ ಉಂಟಾಗುತ್ತದೆ. ಆಶೀರ್ವಾದವು ಇವೆಲ್ಲದಕ್ಕಿಂತ ಪ್ರಶಸ್ತವಾದುದು. ಮನಸ್ಸಿನ ತುಷ್ಟಿಯು ಬಲಿಷ್ಠವಾದುದ್ದು. 'ಛಿಂದಿ' (ಚೂರು ಮಾಡು), 'ಭಿಂದಿ' (ಭಾಗ ಮಾಡು), 'ಜಹಿ' (ಕೊಲ್ಲು) ಇವೇ ಮೊದಲಾದ ಶಬ್ದಗಳು ನಿಷಿದ್ಧಗಳಾಗಿದ್ದರೂ ಶತ್ರುನಾಶ ಪಾಪಕಾರ್ಯಗಳಲ್ಲೂ ಸರ್ವಕಾಲದಲ್ಲೂ ಶುಭಪ್ರದವಾದುದ್ದು ಎಂಬುದಾಗಿ ತಿಳಿದು ಕೊಂಡಿದ್ದರು.[೨೯]

***ಅಪಶಕುನಗಳು :*** ಕೆಲವು ಶಕುನಗಳು ಮನುಷ್ಯನಿಗೆ ಶುಭ ಸೂಚನೆಯನ್ನು ತೋರಿಸಿದರೆ ಕೆಲವು ಪ್ರಾಣಿಗಳು, ಪಕ್ಷಿಗಳು ಮತ್ತು ವಿವಿಧ ಘಟನೆಗಳು ಅಪಶಕುನಗಳನ್ನು ಸೂಚಿಸುತ್ತವೆ. ಮಹಾರಾಣಿಯು ಋತುಮತಿ ಆಗಿರುವಾಗ, ಅಕಾಲದಲ್ಲಿ ಮಳೆ ಬಿದ್ದಾಗ, ದಾಯಾದಿಗಳೊಡನೆ ಜಗಳಮಾಡಿದಾಗ, ಅಂತೆಯೇ ವೃಷ ದಂಶಕಮೃಗಗಳು (ಗೂಳಿ, ಎತ್ತು, ನಾಯಿ ಮೊದಲಾದವು ಗಳು) ಜಗಳ ಮಾಡುತ್ತಿರುವಾಗ ಮನೆ ಸುಟ್ಟ ಕಾಲದಲ್ಲಿ ಮತ್ತು ಭೂಕಂಪವಾದ ಸಮಯದಲ್ಲಿ, ಬಿರುಗಾಳಿ ಬೀಸುತ್ತಿರುವ ಕಾಲದಲ್ಲಿ, ದಿಗ್ದಾಹ ಕಾಲದಲ್ಲಿ, ಭೂಮಿ ಗುಡುಗಿದ ಕಾಲದಲ್ಲಿ ಜಯಾಭಿಲಾಷಿಯಾದ ರಾಜನು ವಿಜಯಯಾತ್ರೆಗೆ ಹೊರಡ ಬಾರದು. ತಾನಾಗಲೀ ಮತ್ತಾರಾದರಾಗಲೀ ಸೀನಿದಾಗ, ಪ್ರಯಾಣ ಸಮಯದಲ್ಲಿ ಮತ್ತಾರಾದರೂ ತಡೆದಾಗ ಅಗ್ನಿಜ್ವಾಲೆ ಇಲ್ಲದೆ ಹೊಗೆಯನ್ನು ಮಾತ್ರ ನೋಡಿದಾಗ, ಹೊಟ್ಟು, ಸೌದೆ ಇವನ್ನು ನೋಡಿದಾಗ, ಇದ್ದಿಲು, ಬೂದಿ, ಎಣ್ಣೆ, ಒಣಗಿದ ಸಗಣಿ ಮೊಲ, ದಿಗಂಬರ ಸನ್ಯಾಸಿ, ಸರ್ಪ ಇವನ್ನು ಕಂಡಾಗ ಸುಖಾಪೇಕ್ಷಿ ಯಾದವರು ವಿಜಯಯಾತ್ರೆ ಹೋಗಬಾರದು. ಕತ್ತೆ ಒಂಟೆ

ಕೋಣಗಳ ಮೇಲೆ ಸವಾರಿಮಾಡುತ್ತಿರುವವರು, ಸನ್ಯಾಸಿ, ಜೈನ ಸಂಸಾರಿ, ಚಂಡಾಲರು, ಕಿವಿ ಮೂಗು ಮೊದಲಾದ ಅಂಗಗಳಿಲ್ಲದವರು, ಕೂದಲಿಲ್ಲದ ಬೋಳು ತಲೆಯವರು, ಕಪ್ಪು ಬಟ್ಟೆಯನ್ನುಟ್ಟಿರುವವರು, ಕೂದಲು ಬಿಚ್ಚಿ (ಕೆದರಿ) ಕೊಂಡಿರುವವರು, ಬಹಳ ಕಪ್ಪು ಬಣ್ಣದ ಶರೀರದವರು, ಎಣ್ಣೆ ಒತ್ತಿಗೊಂಡಿರುವವರು, ಮುಟ್ಟಾಗಿರವವರು. ಗರ್ಭಿಣಿಯರು, ವಿಧವೆಯರು, ಹುಚ್ಚರು, ನಪುಂಸಕರು, ಕುರುಡರು, ಕಿವುಡರು, ಈ ಜನರ ದರ್ಶನವಾದಾಗ ಯಾವಾಗಲೂ ಪ್ರಯಾಣಹೋಗ ಬಾರದು ಮತ್ತು ತಾನು ಚಿಂತಾಕ್ರಾಂತನಾಗಿದ್ದಾಗ ವಿಜಯಯಾತ್ರೆಗೆ ಹೊರಟರೆ ಫಲಸಿದ್ದಿ ಉಂಟಾಗುವುದಿಲ್ಲ. ಇವು ಅಮಂಗಲ ಶಕುನಗಳು ಎಂಬುದಾಗಿ ನಂಬಿಕೆಯನ್ನು ಹೊಂದಿದ್ದರು.[೩೦]

ಪ್ರಾಚೀನ ಸಮಾಜದಲ್ಲಿ ಕಾಗೆ ಪಿಂಗಳ ಶಕುನಗಳಿಗೆ ಮಾತ್ರವಲ್ಲದೆ ಅಶ್ವ, ಆನೆ ಶಕುನಗಳಿಗೂ ಪ್ರಾಶಸ್ತ್ಯವಿತ್ತು. ಏಕೆಂದರೆ ಅವು ವಿಶೇಷವಾಗಿ ರಾಜನಿಗೆ ಸಂಬಂಧಿಸಿದ ಶಕುನಗಳಾಗಿದ್ದವು. ಆದ್ದರಿಂದ ಚಾವುಂಡರಾಯನು ಲೋಕೋಪಕಾರಂನಲ್ಲಿ ಶಕುನ ವಿಚಾರಗಳಲ್ಲಿ ಆ ಸಂಗತಿಗಳು ಮಿಳಿತಗೊಂಡಿವೆ. ಅದರಂತೆ ಅರಸನು ದಂಡಯಾತ್ರೆ ಕೈಗೊಂಡ ಸಂದರ್ಭದಲ್ಲಿ ಆನೆಗಳು ನಿಡುಸುಯ್ದರೆ ಒಳ್ಳೆಯದಲ್ಲ. ಹಾಗೆ ಬೆಚ್ಚಿ ಓಡುವುದು, ಕಣ್ಣೆವೆಯಿಕ್ಕದಿರುವುದು, ಮಗ್ಗಲು ಹಾಕುವುದು, ತೂಕಡಿಸುವುದು ಅಪಾಯ ಸೂಚಕ. ಇನ್ನು ಆನೆ ಬಲಭಾಗದ ಕುಂಭಸ್ಥಳವನ್ನು ಸೊಂಡಿಲಲ್ಲಿ ಒತ್ತಿಕೊಳ್ಳುವುದು, ಸೊಂಡಿಲನ್ನೆತ್ತಿ ಘೀಳಿಡುವುದು ಯುದ್ಧದ ಮುನ್ಸೂಚನೆ. ಆದರೆ ಆ ಆನೆ ಸೊಂಡಿಲಿನಿಂದ ಉದಕವನ್ನು ಮೈಮೇಲೆ ಎರಚಿಕೊಂಡು ಮದವೇರಿ ಕುಣಿದರೆ ವೈರಿರಾಯರನ್ನು ಸೀಳಿ ಜಯ ತಂದು ಕೊಡುವುದು ಎಂದು ತಿಳಿಯಬೇಕು. ಇನ್ನು ಕುದುರೆಯನ್ನೇರಿ ಕಾಳಗಕ್ಕೆ ಹೊರಟ ಸಂದರ್ಭದಲ್ಲಿ ಅದರ ಸ್ವರ ಹೀನವಾದರೆ ಅಶುಭ, ಬೆಚ್ಚಿದಂತೆ ಅತ್ತಿತ್ತ ಓಡಾಡಿದರೂ ಕೇಡು. ಒಂದು ಬಾರಿ ಮಲಮೂತ್ರಗಳನ್ನು ವಿಸರ್ಜಿಸುತ್ತ ಕಣ್ಣೀರು ಸುರಿಸಿದರೆ ಅರಸನಿಗೆ ಸೋಲು ಖಂಡಿತ, ಆದರೆ ಚಲಿಸದೆ ನಿಂತು ಬಲಚೇಷ್ಟೆಗಳನ್ನು ಮಾಡಿದರೆ ಶುಭಪ್ರದ. ಈ ಕುದುರೆ ಅರಸನಿಗೆ ಭೀಕರ ಕಾಳಗದಲ್ಲಿಯೂ ಜಯ ತಂದುಕೊಡುವುದು ನಿಶ್ಚಿತ ಎಂದು ಹೇಳಲಾಗಿದೆ.[೩೧] ಸೂರ್ಯೋದಯದ ಮುನ್ನ ಹಾಗೂ ಆ ಬಳಿಕ ಬೆಕ್ಕುಗಳು ಪ್ರಯಾಣಕ್ಕೆ ಎದುರಾಗಿ ಕಾದಿದರೆ ಅಶುಭ. ಸಾಮಾನ್ಯವಾಗಿ ಜನಪದ ನಂಬಿಕೆಗಳಲ್ಲಿ ಬೆಕ್ಕು ದಾರಿಗೆ ಅಡ್ಡವಾಗುವುದು ಒಳ್ಳೆಯದಲ್ಲ ಎಂಬ ಭಾವನೆ ಇದೆ.[೩೨]

ಶಕುನಗಳನ್ನು ಕೇಳವ ಶುಭಕಾಲ ಸ್ಥಳಗಳನ್ನು ಕುರಿತು ಸಹ ತಿಳಿಸಿರುತ್ತಾರೆ. ಚಾವುಂಡರಾಯನು ಲೋಕೋಪಕಾರಂನಲ್ಲಿ ಓಸರಿ ಕೇಳುವುದಕ್ಕೆ ಶುಭಕಾಲ ಸ್ಥಳಗಳನ್ನು ಕುರಿತು ಹೀಗೆ ತಿಳಿಸಿರುತ್ತಾನೆ. ದೃಢ ಮನಸ್ಸಿನಿಂದ ಓಸರಿ ಕೇಳಲು ಹೋದಾತನು ಎಡಕಿವಿಯನ್ನು ಮುಚ್ಚಿಕೊಂಡು "ಚಾಮುಂಡೀ ಶ್ರವಣ ಪಿಶಾಚೀ ಸ್ವಾಹ"[೩೩] ಎಂಬ ಮಂತ್ರದಿಂದ ಉಪಶ್ರುತಿ ಶಕುನ ಕೇಳಬೇಕು. ಈ ಉಪಶ್ರುತಿ ಶಕುನ ಕೇಳುವುದಕ್ಕೆ ಅರುಣೋದಯ ಸಂಧ್ಯಾ ಸಮಯ, ಮಧ್ಯಾಹ್ನದ ವೇಳೆ ಪ್ರಶಸ್ತ. ದಾರಿಯಲ್ಲಿ ಭೇರಿ, ಮಂಗಳ ವಾದ್ಯಗಳ ಮೊಳಗು, ಸಂಗೀತ ಮಂತ್ರಾಕ್ಷತೆ ಹಾಡಿನ ಧ್ವನಿ ಕೇಳಿಸಿದರೆ ಶುಭಪ್ರದ. ತೋರಣ ಕಾಣುವುದು ಎದುರಿಗೆ ಮಂದಹಾಸ ಬೀರುವ ವ್ಯಕ್ತಿ ಬರುವುದು ಒಳ್ಳೆಯ ಸೂಚನೆ. ಓಸರಿ ಕೇಳಲು ಹೋಗುವಾಗ ಶುಭವಾರ್ತೆಯನ್ನಾಲಿಸಿದರೆ ಒಳ್ಳೆಯದು. ನಡೆದುಹೋದ ಕಾರ್ಯಗಳ ಬಗೆಗಿನ ವಾರ್ತೆ ಯನ್ನಾಲಿಸಿದರೆ ಅಲ್ಪಕಾರ್ಯಸಿದ್ಧಿ. ನೀರು ತಡಿ, ಹೊಳೆ, ಜನಜಂಗುಳಿ ತಾಣ, ಹೊಲಗೇರಿ, ಸ್ಮಶಾನ, ಅಗಸನ ಮನೆ, ದೇವಾಲಯಗಳ ಸ್ಥಾನಗಳಲ್ಲಿ ಓಸರಿ ಕೇಳುವುದು ಸೂಕ್ತ. ಆದರೆ ಅಪ್ರಬುದ್ಧ ಪ್ರಲಾಪ, ಜಗಳ, ಗೋಳಿನ ಧ್ವನಿ, ಶೋಕದ ಧ್ವನಿ, ಕನ್ನ ಹಾಕಿದ ಮನೆ, ಬೆಂದಮನೆ, ಕಷ್ಟಕ್ಕೀಡಾದವರ ಮನೆಗಳು, ಉಪಶ್ರುತಿ ಕೇಳಲು ಪ್ರಶಸ್ತವಲ್ಲ. ಓಸರಿ ಕೇಳಲು ಅಕ್ಷತೆಯನ್ನು ತುಳಿದು, ಮನದಲ್ಲಿ ಮೂಗರ ಮರ್ಯಾದೆಯಲ್ಲಿ ಮಾತನಾಡಿ ಕೊಂಡರೆ ಅಕಾರ್ಯ. ತಾನು ಸುಮ್ಮನಿದ್ದು ನೆರೆಯವರು ಶುಭನುಡಿ ಗಳನ್ನಾಡಿದರೆ ಪ್ರಶಸ್ತವೆನ್ನುತ್ತಾರೆ. ಮೂರನೇ ಸೋಮೇಶ್ವರನು ಮಾನಸೋಲ್ಲಾಸದಲ್ಲಿ ತೋರಣ ಸ್ಥಾನದಲ್ಲಿ ಶಕುನ ತಿಳಿಯಲು ಹೋಗುತ್ತಿರುವವನ ದಕ್ಷಿಣ (ಬಲ) ಪಾರ್ಶ್ವಕ್ಕೆ ಹೆಣ್ಣು ಕೃಷ್ಣ ಪಕ್ಷಿಯು ಶಬ್ದ ಮಾಡದೆ ಅಥವಾ ಹೀನಶಬ್ದಮಾಡುತ್ತ ಹೋದರೆ ಆಗ ಪ್ರಶಸ್ತವೆಂದು ತಿಳಿಸಿರುತ್ತಾರೆ.[೩೪]

ಶಕುನಗಳನ್ನು ಜನಪದರು ಪ್ರಜ್ಞಾಪೂರ್ವಕವಾಗಿಯೇ ಆಚರಣೆ ತಂದಿದ್ದಾರೆ. ಇಂತಹ ಶಕುನಗಳು ಮನುಷ್ಯನ ಭಾವನಾತ್ಮಕ ಸ್ಥಿತಿಯನ್ನು ಸೂಚಿಸುತ್ತದೆ. ಶಕುನದ ಬಗ್ಗೆ ವೈಜ್ಞಾನಿಕ ವಿಶ್ಲೇಷಣೆ ನಡೆಸುವವರು ಕೂಡ ತಮಗೆ ಅರಿವಿಲ್ಲದಂತೆ ಅದಕ್ಕೆ ಕಟ್ಟು ಬಿದ್ದಿರುತ್ತಾರೆ. ಹಾಗೆ ನೋಡಿದರೆ ಶಕುನ ನಂಬದ ಜನಾಂಗವಿಲ್ಲ. ಅವು ಜನ ಜೀವನದ ಅನಿವಾರ್ಯ ಅಂಶಗಳೇನೋ ಎನ್ನುವಷ್ಟರ ಮಟ್ಟಿಗೆ ಪ್ರಭಾವಶಾಲಿಯಾಗಿವೆ. ಆದರೆ ಅವುಗಳ ಫಲಾಫಲಾಗಳನ್ನು ಕುರಿತು ವ್ಯಾಖ್ಯಾನ ದೇಶದಿಂದ ದೇಶಕ್ಕೆ, ಜನರಿಂದ ಜನಕ್ಕೆ ವ್ಯತ್ಯಾಸಗೊಳ್ಳುತ್ತದೆ. ಇವುಗಳಿಂದ ಮಾನವನ ಸ್ಥಿತಿಗತಿಗಳನ್ನು ಅರಿಯುವುದಕ್ಕೆ ಸಾಧ್ಯವಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ದೇಜಗೌ., **ಜಾನಪದ ಸೌಂದರ್ಯ**, ಪು. ೨೨.
೨. **ಕನ್ನಡ ನಿಘಂಟು**, ಸಂ. ೮., ಬಸವರಾಧ್ಯ ಎನ್. (ಪ್ರ.ಸಂ.) ಪು. ೮೦೬೭.
೩. **ಕೆಳದಿ ಬಸವರಾಜ** ಸಂಕಲಿಸಿದ **ಶಿವತತ್ವರತ್ನಾಕರ.**, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ (ಸಂ), ಪು. ೨೭೬.
೪. ರಾ. ಗೌ., ಮಳಲಿ ವಸಂತಕುಮಾರ್., **ಜನಪದ ನಂಬಿಕೆಗಳು**, ಪ್ರಸ್ತಾವನೆ, ಪು. VII.
೫. ನರಸಿಂಹಾಚಾರ್ ಆರ್., **ಕರ್ನಾಟಕ ಕವಿಚರಿತೆ**, ಭಾಗ - ೨ ಪು. ೧೭೩. (ಇದಕ್ಕೆ ಪಿಂಗಲಿಯಶಾಸ್ತ್ರ, ಪಿಂಗಲಿಯ ಶಕುನ ಎಂಬ ಹೆಸರುಗಳೂ ಉಂಟು).
೬. **ಪಾಲ್ಕುರಿಕೆ ಸೋಮನಾಥನ ಸೋಮೇಶ್ವರ ಶತಕ.**, ಮುಗಳಿ ಆರ್. ಎಸ್. (ಸಂ), ಪದ್ಯ, ೫೮.
೭. ಪುರಂದರದಾಸರು., **ಪುರಂದರದಾಸರ ಕೀರ್ತನೆಗಳು**, ೧-೧೮೧.
೮. ಮುಗಳಿ ಆರ್. ಎಸ್., ಅದೇ, ಪದ್ಯ ೬೭.
೯. ನರಸಿಂಹಾಚಾರ್ ಆರ್., ಅದೇ, ೧೭೪; ಮುಗಳಿ ಆರ್. ಎಸ್., ಅದೇ, ಪು. ೬೭. 'ವಿಪ್ರದ್ವಯ' ಕೂಡ ಶುಭಶಕುನ.
೧೦. ಮುಗಳಿ ಆರ್. ಎಸ್., (ಸಂ), ಅದೇ, ಪದ್ಯ ೬೮, ನೋಡಿ: 'ವಿಷ್ಣುಸ್ಮೃತಿ' ೬೩-೩.
೧೧. ಕುಮಾರವ್ಯಾಸ, **ಗದುಗಿನಭಾರತ**, ೧೧-೧೮ (ವಾಮ ನಯನ ಸ್ಫುರಣ ಪರಿಗತವಾದ ಬಾಹು ಸ್ಪಂದವಾದುದು ಭಾಮಿನಿಗೆ ಭೂಪತಿಗೆ ಚಲಿಸಿತು ದಕ್ಷಿಣಾಂಗದಲಿ ವೈಮನಸ್ಯವ್ಯಸನ ನೀರಸನಕ್ಕೇ ಮಹಾಶಕುನಗಳಿವೆಯಂದಾ.. ನೇನಪುತಿರ್ಮನು).
೧೨. ನೋಡಿ: **ಕೆಳದಿ ಬಸವರಾಜ ಸಂಕಲಿಸಿದ ಶಿವತತ್ವರತ್ನಾಕರ.**, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ (ಸಂ), ಪು. ೨೮೪, ೨೮೫.
೧೩. ಸೋಮೇಶ್ವರ ವಿರಚಿತ **ಮಾನಸೋಲ್ಲಾಸ.**, ಕಲಬುರ್ಗಿ ಎಂ. ಎಂ. (ಪ್ರ.ಸಂ.), ೨-೮೧೧ರಿಂದ ೯೨೭ ಆರ್.ಎಸ್. ಮುಗಳಿ(ಸಂ) ಪಾಲ್ಕುರಿಕೆಸೋಮನಾಥನ **ಸೋಮೇಶ್ವರ ಶತಕ** ಪದ್ಯಗಳು. ೬೭,೬೮,೬೯.
ನರಸಿಂಹಾಚಾರ್. ಆರ್., **ಕರ್ನಾಟಕ ಕವಿಚರಿತೆ**, ಭಾಗ-೨ ಪ್ರ ೧೭೪
೧೪. ಬಾಹುಬಲಿ, **ನಾಗಕುಮಾರ ಚರಿತೆ**, ೯-೪೭, 'ಶಕುನದ ಪಷೆ ಬಿದ್ದಂತೆ ಬಲೆಯೊಳಗೆ'; **ಪುರಂದರದಾಸರ ಕೀರ್ತನೆಗಳು** ೧-೮೧ "ಜಯವಧೆ, ಜೋವದೆ ಈ ಮನೆತನಕೆ ಬಹಳ ಜಯವದೆ ಹಕ್ಕಿ ನುಡಿಯಿತಣ್ಣ ನುಡಿಯಿತು ಒಂದು ಶುಭವಚನ".
೧೫. ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ., ಅದೇ, ಪು. ೨೮೫.
೧೬. ಅದೇ., ಪು. ೨೮೧-೨೮೨, ಇದೇ ರೀತಿಯ ವಿಷಯ ಕಲಬುರ್ಗಿ.
ಎಂ. ಎಂ. (ಪ್ರ.ಸಂ.) ಪೂರ್ವೋಕ್ತ ೨-೮೪೪ರಿಂದ ೨೪೬ ರವರೆಗೆ ತಿಳಿದು ಬರುತ್ತದೆ.
೧೭. ಡಾ|| ಎಂ. ಎಂ. ಕಲಬುರ್ಗಿ., ಅದೇ, ೨-೮೪೪ರಿಂದ ೯೧೯.
೧೮. ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ., ಅದೇ, ಪು. ೨೮೨.
೧೯. ಅದೇ, ಪು. ೨೮೫.
೨೦. ಅದೇ, ಪು. ೨೮೦.
೨೧. ಡಾ|| ಎಂ. ಎಂ. ಕಲಬುರ್ಗಿ., ಅದೇ, ೨-೨೮೪-೮೩೨.
೨೨. ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ., ಅದೇ, ಪು. ೨೮೦, ೨೯೧.
೨೩. ಅದೇ, ಪು. ೨೮೩.
೨೪. ಅದೇ, ಪು. ೨೭೯, ಇದೇ ವಿಷಯವನ್ನು ಡಾ|| ಎಂ.ಎಂ. ಕಲಬುರ್ಗಿ (ಸಂ.), ಪೂರ್ವೋಕ್ತ ೨-೮೪೧ರಲ್ಲಿ ತಿಳಿದು ಬರುತ್ತದೆ.
೨೫. ಅದೇ, ಪು. ೨೭೬.
೨೬. ಅದೇ, ಪು. ೨೮೩.
೨೭. ಅದೇ, ಪು. ೨೭೮.
೨೮. ಡಾ|| ಎ. ರಂಗಸ್ವಾಮಿ., **ಚಾವುಂಡರಾಯನ ಲೋಕೋಪಕಾರಂ ಒಂದು ಅಧ್ಯಯನ**, ಪು. ೩೭೫.
೨೯. ಡಾ|| ಎಂ. ಎಂ. ಕಲಬುರ್ಗಿ., ಅದೇ, ೨-೮೧೧ ರಿಂದ ೮೧೭.
೩೦. ಡಾ|| ಎಂ. ಎಂ. ಕಲಬುರ್ಗಿ., ಅದೇ, ೨-೮೧೧ ರಿಂದ ೮೧೭.
೩೧. ಡಾ|| ಎ. ರಂಗಸ್ವಾಮಿ., ಅದೇ, ಪೂರ್ವೋಕ್ತ, ಪು. ೨೭೨.
೩೨. ಅದೇ, ಪು. ೩೭೩.
೩೩. **ಚಾವುಂಡರಾಯನ ಲೋಕೋಪಕಾರಂ**. ೧೨-೪೯.
೩೪. ಡಾ|| ಎಂ. ಎಂ. ಕಲಬುರ್ಗಿ., ಅದೇ, ೨-೮೫೯.

ಅರುಣಕುಮಾರ್ ಎಸ್. ಆರ್.*

# ಅರಸು ಪಟ್ಟಾಭಿಷೇಕ ಮೌಖಿಕ ಇತಿಹಾಸದ ಹಿನ್ನೆಲೆ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಲವಾರು ಅರಸು ಮನೆತನಗಳು ಇಂದಿಗೂ ಅಸ್ತಿತ್ವದಲ್ಲಿವೆ. ಕರಾವಳಿ ಕರ್ನಾಟಕದಲ್ಲಿ ವಿಜಯನಗರ, ಕೆಳದಿ ಅರಸರುಗಳಿಂದ ನಿಯುಕ್ತಿಗೊಂಡ ರಾಜ್ಯಪಾಲರು, ದಂಡನಾಯಕರು ಇದ್ದರೂ ಸ್ಥಳೀಯ ತುಂಡರಸರು ತಮ್ಮ ತಮ್ಮ ರಾಜ್ಯಗಳಲ್ಲಿ ಸ್ವತಂತ್ರವಾಗಿ ಆಡಳಿತವನ್ನು ನಡೆಸುವ ಸ್ವಾತಂತ್ರ್ಯವನ್ನು ಪಡೆದುಕೊಂಡಿದ್ದರು. ಸೀಮೆ, ಮಾಗಣೆ, ಗ್ರಾಮ, ಊರುಗಳ ಜೊತೆಗೆ ಗುತ್ತು, ಬರ್ಕೆ, ಬಾಳಿಕೆ ಇವುಗಳು ಒಳಾಡಳಿತದ ಪ್ರಮುಖ ಘಟಕಗಳು. ಇವುಗಳ ಸಹಕಾರದೊಂದಿಗೆ ವಂಶಪಾರಂಪರ್ಯದಿಂದ ಆಡಳಿತ ನಡೆಸುತ್ತಾ, ಧರ್ಮರಕ್ಷಣೆ, ನ್ಯಾಯ ಪರಿಪಾಲನೆಯನ್ನು ಮಾಡುತ್ತ ಜೊತೆಗೆ ತಮ್ಮ ಅಧಿಕಾರದ ವ್ಯಾಪ್ತಿಯಲ್ಲಿ ಬರುವ ಪ್ರಜೆಗಳ ರಕ್ಷಣೆಯನ್ನು ಮಾಡುವ ಜವಾಬ್ದಾರಿ ಆಯಾ ಅರಸರಿಗೆ ಇತ್ತು. ಬ್ರಿಟಿಷರ ಆಡಳಿತ ಕಾಲ ಮತ್ತು ಸ್ವಾತಂತ್ರ್ಯಾನಂತರವೂ ಇವರ ಅಧಿಕಾರದ ಭಾವನೆ ಇದ್ದುದು ನಮಗೆ ಮುಖ್ಯ.

ಇಂತಹ ಅರಸರು ತೀರಿಕೊಂಡಾಗ ನಡೆಸುವ ಅಪರಕ್ರಿಯೆ ಹಾಗೂ ಅದೇ ಸಂದರ್ಭದಲ್ಲಿ ನಡೆಸುವ ಹೊಸ ಅರಸುಗಳ ಆಯ್ಕೆ, ಪಟ್ಟಾಭಿಷೇಕದ ವಿಧಿವಿಧಾನಗಳು, ಆಚರಣಾ ಸಂಭ್ರಮಗಳು ಪ್ರಾದೇಶಿಕವಾಗಿ ಎಷ್ಟು ಮುಖ್ಯವಾಗುತ್ತದೋ, ಐತಿಹಾಸಿಕವಾಗಿಯೂ ಬಹಳ ಮುಖ್ಯವಾಗುತ್ತದೆ. ಹರಿಜನ ಮುಖಾರಿಯಿಂದ ಹಿಡಿದು ರಾಜಪುರೋಹಿತರ ವರೆಗೆ ವಿವಿಧ ವರ್ಗಗಳು, ಉಳಿದ ಅಧಿಕಾರಿ ವಲಯಗಳು ಆ ಸಂದರ್ಭದಲ್ಲಿ ಹೇಗೆ ಕೆಲಸ ಮಾಡುತ್ತವೆ ಮತ್ತು ಅವುಗಳು ಲಿಖಿತ ರೂಪದಲ್ಲಿ ಇರದಿದ್ದರೂ, ಬಾಯ್ದೆರೆಯಾಗಿ ಅವುಗಳ ವಿಧಿವಿಧಾನಗಳು ಉಳಕೊಂಡ ಕ್ರಮವನ್ನು ಗಮನಿಸಿದಾಗ, ಸಮಗ್ರ ರಾಜ್ಯದ ಬಹು ಸಣ್ಣ ಘಟಕಗಳಾದ ಅರಸುಮನೆತನಗಳು ಆಡಳಿತವನ್ನು ಶಾಸನಬದ್ಧವಾಗಿ ಮಾಡಿರುವುದಕ್ಕೆ ಮತ್ತು ಅವುಗಳ ಹಿಂದೆ ಅರಸು ಮನೆತನದ ಕುರಿತು ಆಯಾ ಪ್ರದೇಶದ ಎಲ್ಲಾ ವರ್ಗದವರಲ್ಲಿದ್ದ ಗೌರವ, ಪೂಜ್ಯತೆ ಅರಿವಿಗೆ ಬರುತ್ತದೆ.

ಇವಾವುದೂ ಶಾಸನಗಳಲ್ಲಿ ಕಾಣಬರದು. ೧೯೨೩ರ 'ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ' ಎಂಬ ಪುಸ್ತಕದಲ್ಲಿ ವೇಣೂರಿನ ಅಜಿಲರು ಮತ್ತು ಮುಲ್ಕಿಯ ಸಾಮಂತರ ಪಟ್ಟಾಭಿಷೇಕದ ಕುರಿತಾಗಿ ಸ್ವಲ್ಪ ಮಾಹಿತಿ ಇದೆ. ೧೯೯೫ರಲ್ಲಿ ವೇಣೂರಿನ ಅಜಿಲ ಅರಸರಿಗೆ ಪಟ್ಟವಾದ ಮೇಲೆ, ಆ ಬಗ್ಗೆ ಒಂದಿಷ್ಟು ಲೇಖನಗಳು ಬಂದವು.

***ವೇಣೂರು ಅಜಿಲರ ಪಟ್ಟಾಭಿಷೇಕ :*** ಅಜಿಲರ ಪಾರಂಪರಿಕ ಇತಿಹಾಸವು ಸುಮಾರು ೧೨ನೇ ಶತಮಾನದ ಮಧ್ಯಭಾಗದಿಂದ ಆರಂಭವಾಗುತ್ತದೆ. ಪೂಂಜ ಎಂಬ ಬಂಟನೊಬ್ಬನಿಂದ ಆಳಲ್ಪಡುತ್ತಿದ್ದ ಕಾರಣ, ಈ ಸೀಮೆಗೆ ಪೂಂಜಳಿಕೆಯ ರಾಜ್ಯ ಎಂಬ ಹೆಸರು ಬಂತು ಎಂಬುದು ಇತಿಹಾಸಕಾರರ ಅಭಿಪ್ರಾಯ. ಒಂದನೇ ತಿಮ್ಮಣ್ಣ ಅಜಿಲ (ಕ್ರಿ.ಶ. ೧೧೫೪-೧೧೮೦) ನಿಂದ ಮೊದಲ್ಗೊಂಡು, ಇಲ್ಲಿನ ಅರಸು ಪರಂಪರೆ ಮುಂದುವರಿಯುತ್ತಿದ್ದು, ಪ್ರಸ್ತುತ ಪಟ್ಟದಲ್ಲಿರುವ ಶ್ರೀ ತಿಮ್ಮಣ್ಣರಸ ಡಾ. ಪದ್ಮಪ್ರಸಾದ ಅಜಿಲರು ಆ ವಂಶಾವಳಿಯಲ್ಲಿ ೨೪ನೆಯವರು ಎಂದು ಹೇಳುತ್ತಾರೆ.[೧] ವೃತ್ತಿಯಲ್ಲಿ ವೈದ್ಯರಾಗಿರುವ ಇವರು ೧೯೯೫ರಲ್ಲಿ ತಂದೆ ಪಾಂಡ್ಯಪ್ಪ ಅರಸ ಕೃಷ್ಣರಾಜ ಅಜಿಲರ ನಿಧನದ ನಂತರ ಪಟ್ಟಕ್ಕೆ ಬಂದವರು.

ಪಟ್ಟಾಭಿಷೇಕದ ಸಂದರ್ಭದಲ್ಲಿ ಈ ಅರಸರ ಆಡಳಿತಕ್ಕೆ ಒಳಪಟ್ಟ ನಾಲ್ಕು ಗುತ್ತುಗಳು ಸಕ್ರಿಯವಾಗಿರುತ್ತವೆ. ಸಾಮಾನ್ಯವಾಗಿ ಎಷ್ಟು ಗ್ರಾಮಗಳಿರುತ್ತವೋ ಅಷ್ಟೇ ಗುತ್ತುಗಳಿರುವುದು ಸಹಜ. ಅಜಿಲರಿಗೆ ಹದಿಮೂರು ಮಾಗಣೆಗಳ ಅಧಿಕಾರ, ಅಂದರೆ ೧೩ ಗುತ್ತಿನ ಮನೆಗಳು ಇತ್ತು. ಅಜಿಲ ಅರಸುಗಳಿಗೆ ಸಂಬಂಧಪಟ್ಟ ಪ್ರಮುಖ ರಾಜ್ಯ ಗುತ್ತುಗಳೆಂದರೆ:

*೧. ಅಳದಂಗಡಿ ರಾಜ್ಯ ಗುತ್ತು (ಅರಸರನ್ನು ಪಟ್ಟದ ಮಂಚದಲ್ಲಿ ಕುಳ್ಳಿರಿಸುವ ಹಕ್ಕು); ೨. ಬೆಳ್ಳೂರು ರಾಜ್ಯಗುತ್ತು (ಪಟ್ಟದ ಉಂಗುರ ಜಾರಿಸುವ ಹಕ್ಕು); ೩. ಕುಕ್ಕೇಡಿ ಗುತ್ತು (ಪಟ್ಟದ ಕತ್ತಿಕೊಡುವ ಹಕ್ಕು); ೪. ಪೆರಿಂಜೆ ರಾಜ್ಯ ಗುತ್ತು (ಪಟ್ಟದ ಹೆಸರು ಇಡುವ ಹಕ್ಕು)*[೨]

ಈಗಿನ ಅಳದಂಗಡಿ ಗುತ್ತನ್ನು ಶ್ರೀ ಗಣಪತಿರಾವ್ ಅವರು ಅರವದಗುತ್ತು ಎಂದೂ, ಪೆರಿಂಜೆ ಗುತ್ತನ್ನು ಪೆರಿಂಜೆಗುತ್ತು ಎಂದು ಗುರುತಿಸಿದ್ದಾರೆ.[೩] ಆದರೆ ಅವುಗಳ ಕೆಲಸಗಳಲ್ಲಿ ಯಾವುದೇ ವ್ಯತ್ಯಾಸಗಳಿರುವುದಿಲ್ಲ. ವೇಣೂರಿನ ವೇದನಾಯಕನ ಮನೆತನದವರು ಪ್ರಧಾನಿಗಳಾಗಿ ನಿಯುಕ್ತಿ ಗೊಂಡಿರುವುದನ್ನು ಶ್ರೀ ಗಣಪತಿ ರಾವ್‌ರವರು ಧೃಡಪಡಿಸುತ್ತಾರೆ.

ಅರಸರು ಕಾಲವಾದರೆ ಸಂಬಂಧಪಟ್ಟ ಎಲ್ಲಾ ಗುತ್ತಿನ ವರಿಗೂ ಸೂತಕ ಇರುತ್ತದೆ. ಉತ್ತರಕ್ರಿಯೆಯ ಕೆಲಸವನ್ನು ರಾಜ್ಯಗುತ್ತಿನವರು ಮಾಡುತ್ತಾರೆ. ಪಟ್ಟ ಆಗುವವರನ್ನು ಆ ಸಂದರ್ಭದಲ್ಲಿ ಯಾರಿಗೆ ಪಟ್ಟ ಆಗಿರುತ್ತದೋ ಅವರು ಪಟ್ಟದ

* ಕನ್ನಡ ಉಪನ್ಯಾಸಕರು, ಎಂ. ಜಿ. ಎಂ. ಕಾಲೇಜು, ಉಡುಪಿ - ೫೭೬ ೧೦೨

ಮಂಚದ ಹತ್ತಿರ ಕರೆದುಕೊಂಡು ಬಂದು ನೆರೆದಿರುವ ಸಭೆ ಮುಂದೆ ಒಪ್ಪಿಗೆ, ಸಹಕಾರ ಕೇಳಿ[೪] ಜೈನ ಮನೆತನದ ಪಟ್ಟ ಆಗಿರುವ ರಾಜ್ಯಗುತ್ತಿನ ಮನೆಯವರು ಅದಕ್ಕೆ ಒಪ್ಪಿಗೆ ಸೂಚಕವಾಗಿ ಮಾತುಗಳನ್ನು ಹೇಳಿದ ಮೇಲೆ ಉತ್ತರಾಧಿಕಾರಿಯನ್ನು ಪಟ್ಟದಲ್ಲಿ ಕೂರಿಸುತ್ತಾರೆ.[೫] ಆ ಮೇಲೆ ಕಾಲವಾದ ಅರಸರ ಕೈಯಲ್ಲಿರುವ ಉಂಗುರವನ್ನು ಮತ್ತು ದೇವರ ಉಂಗುರವನ್ನು ನಿಧನರಾದ ಅರಸರ ಕೈಬೆರಳಿನಲ್ಲಿಟ್ಟು, ಮೇಲಿನಂತೆ ಎಲ್ಲರಲ್ಲೂ ಹೇಳಿಕೆ ಮಾಡಿಸಿಕೊಂಡು, ಕಾಲವಾದ ಅರಸರ ಕೈಬೆರಳಲ್ಲಿರುವ ಉಂಗುರವನ್ನು ದಾರದ ಮೂಲಕ ಬೆಳ್ಳೂರು ರಾಜ್ಯಗುತ್ತಿನವರು ನೂತನ ಅರಸರ ಬೆರಳಿಗೆ ಜಾರಿಸುತ್ತಾರೆ. ಇದರಂತೆಯೇ ದೀವಟಿಗೆ, ಸತ್ತಿಗೆ, ಕತ್ತಿ ಹಾಗೂ ಅರಸರಿಗೆ ಹೆಸರಿಡುವ ಕಾರ್ಯಕ್ರಮವೂ ನಡೆಯುತ್ತದೆ. ಅಜಿಲ ಅರಸರಿಗೆ ಇರುವ ಪಟ್ಟದ ಎರಡು ಅನುಕ್ರಮ ಪರ್ಯಾಯ ಹೆಸರುಗಳೆಂದರೆ ಪಾಂಡ್ಯಪ್ಪ, ಅರಸ ಅಜಿಲ ಹಾಗೂ ತಿಮ್ಮಣ್ಣ ಅರಸ ಅಜಿಲ. ಈಗಿನ ಅರಸರಾಗಿ ಶ್ರೀ ತಮ್ಮಣ್ಣ ಅರಸ ಡಾ. ಪದ್ಮ ಪ್ರಸಾದ ಅಜಿಲರು ಅಧಿಕಾರ ಹೊಂದಿದ್ದಾರೆ.[೬] ಆ ಮೇಲೆ ಅರಸರಿಗೆ ತೆಂಗಿನಕಾಯಿ ವೀಳ್ಯದಲೆ, ಅಡಿಕೆ ಹೋಳು ಸಹಿತ ಮೊದಲು ಅಸ್ರಣ್ಣರು, ನಂತರ ಪಟ್ಟ ಆದವರೆಲ್ಲರೂ ಕಾಣಿಕೆ ನೀಡುತ್ತಾರೆ. ಅಲ್ಲಿಂದ ನಂತರ ಜಿನಮಂದಿರಕ್ಕೆ ತೆರಳಿ ಅಲ್ಲಿ ಅವರಿಗೆ ಕಾಣಿಕೆ ಮತ್ತು ನಡೆದ ಮೇಲೆ ಕಾಲವಾದ ಅರಸರ ದೇಹದ ದಹನಕ್ರಿಯೆಗಳಿಗೆ ರಾಜ್ಯ ಗುತ್ತಿನವರು ಒಪ್ಪಿಗೆ ಪಡೆದು, ಅಂತ್ಯಸಂಸ್ಕಾರ ನಡೆಸುತ್ತಾರೆ. ಹಿಂದಿನ ಅರಸರು ಕಾಲವಾಗಿ ೧೧ನೇ ದಿನದಲ್ಲಿ ಒಳ್ಳೆಯ ಮುಹೂರ್ತದಲ್ಲಿ ಎಲ್ಲರ ಅಪ್ಪಣೆ ಪಡೆದು ೩ ನೆಲೆಯ ತೋರಣ ಮುಹೂರ್ತ ನಡೆಸಿ, ಅಲ್ಲಿ ಕಲಶ ನೀರು ಸ್ನಾನಮಾಡಿ ಶೃಂಗಾರವಾಗಿದ್ದ ಅರಸರನ್ನು ಪಂಚ ದೀವಟಿಗೆ ಸಮೇತ ಅರಮನೆಗೆ ಬಹಳ ವೈಭವದಿಂದ ಬರುತ್ತಾರೆ. ಅರಸರ ಪಾದಗಳನ್ನು ತೊಳೆದು ಆರತಿ ಬೆಳಗಿ, ಕುರ್ದಿ ನೀರಿನ ದೀಪದ ಸುತ್ತು (ತಲೆಗೆ) ತೆಗೆದು, ಪುನಃ ಕಾಲಿಗೆ ನೀರು ಹಾಕಿ, ಎರಡು ತೆಂಗಿನಕಾಯಿಗಳನ್ನು ತಲೆಗೆ ದೂರು ಸುತ್ತು ತಂದು ಒಂದನ್ನು ಎಡಗಡೆಗೆ ಹಾಗೂ ಇನ್ನೊಂದನ್ನು ಬಲಗಡೆ ಮೆಟ್ಟಲಿಗೆ ಒಡೆಯುತ್ತಾರೆ. ಮುಂದೆ ಪಟ್ಟದ ಉಂಗುರವನ್ನೇ ದೇವರ ಮಂಟಪದಲ್ಲಿ ಇಡುತ್ತಾರೆ. ಪಟ್ಟದ ಮಂಚವನ್ನು ಅರಸರು ಏರಿದ ಮೇಲೆ ದೇವಳದ ಅರ್ಚಕರು ಪ್ರಸಾದ ಕೊಡುತ್ತಾರೆ. ಅರಸರ ಪತ್ನಿ ಬೆಳ್ಳಿ ತಟ್ಟೆ ಲೋಟದಲ್ಲಿ ಹಾಲು ತಂದು ಅರಸರಿಗೆ ನೀಡಿ ನಮಸ್ಕರಿಸುತ್ತಾರೆ. ಅನಂತರ ಕಿರಿಯ ಹೆಂಗಸರ ರಾಜ್ಯಗುತ್ತು, ಅರ್ಚಕರು ಇತರೇ ಗುತ್ತಿನವರು, ಮಡಿವಾಳ, ವಾಲಗ, ಸತ್ತಿಗೆ ಪೂಜಾರಿಯವರು, ಪರವ, ನಲ್ಕೆ, ಮೇರ ಹರಿಜನರಿಂದ ನಮಸ್ಕಾರ ಸ್ವೀಕರಿಸಿ, ಮನೆದೇವರ ಪೂಜೆ ಮುಗಿಸಿ ಚಾವಡಿಯಲ್ಲಿ ಆಸೀನರಾಗುತ್ತಾರೆ. ಇದಾದ ಮೇಲೆ ನಿರ್ದಿಷ್ಟ ದಿನದಂದು ಪಟ್ಟಾಭಿಷೇಕ ಮಹೋತ್ಸವ ಜರುಗುತ್ತದೆ. ಆ ದಿನ ಅರಮನೆ ಬಸದಿ, ದೇಗುಲಗಳಿಂದ ತಂದ ಕಲಶಗಳೊಂದಿಗೆ ಶ್ರೀ ಪದ್ಮಾವತೀ ದೇವಿಯ ಪೂಜೆಯ ನಂತರ, ಅರಸರನ್ನು ಕರೆದುಕೊಂಡು ಬಂದು ಪಟ್ಟದ ಉಯ್ಯಾಲೆಯಲ್ಲಿ ಕುಳ್ಳಿರಿಸುತ್ತಾರೆ. ತಂದಿರುವ ಕಲಶಗಳ ತೀರ್ಥಪ್ರೋಕ್ಷಣೆ ನಡೆದ ನಂತರ ಸಕಲ ಬಿರುದಾವಳಿಗಳೊಂದಿಗೆ ದೇವಾಲಯ ಹಾಗೂ ಬಸದಿಗಳನ್ನು ದರ್ಶನಗೈದು ಅರಮನೆ ಪ್ರವೇಶಿಸುತ್ತಾರೆ. ಎಲ್ಲರ ಉಪಸ್ಥಿತಿಯಲ್ಲಿ ಸಿಂಹಾಸನ ಏರುತ್ತಾರೆ. ಅಲ್ಲಿ ಎಲ್ಲರಿಂದಲೂ ಕಾಣಿಕೆ ಸ್ವೀಕರಿಸಿದ ಅರಸರು ಅವರೆಲ್ಲರಿಗೂ ಪ್ರತಿ ಗೌರವವನ್ನು ಪಟ್ಟಿಯ ಮೂಲಕ ನೀಡುತ್ತಾರೆ. ಉಳಿದ ಅರಸರು ಈ ಸಮಾರಂಭದಲ್ಲಿ ಪಾಲ್ಗೊಳ್ಳುತ್ತಾರೆ. ಇವುಗಳೆಲ್ಲವೂ ಪಟ್ಟಾಭಿಷೇಕದ ವಿಧಿ ವಿಧಾನಗಳು: ಅತ್ಯಂತ ಪ್ರಾತಿನಿಧಿಕವಾದ ಅಂಶಗಳನ್ನು, ಅಧಿಕಾರಿ ವರ್ಗ, ಮತ್ತು ಇತ್ಯಾದಿ ಮನೆತನದವರು ಹೇಗೆ ಪಾಲ್ಗೊಳ್ಳುತ್ತಾರೆ ಎಂಬ ನಿರೂಪಣೆಗಾಗಿ ಬಳಸಿಕೊಳ್ಳಲಾಗಿದೆ. ಇಲ್ಲಿಯ ಪ್ರತಿಯೊಂದು ಆಚರಣೆಯೂ ಅರಸರೊಂದಿಗೆ ಊರ ದೇಗುಲ, ಬಸದಿ, ಮನೆದೇವರು ಹಾಗೂ ರಾಜ ಪುರೋಹಿತರಿಂದ ಹಿಡಿದು ಮಡಿವಾಳ ಮೊದಲಾದ ಕೊನೆಯ ವರ್ಗದವರು ಹೇಗೆ ಅಂತರ್ ಸಂಬಂಧ ಹೊಂದಿದ್ದಾರೆ ಎಂಬುದನ್ನು ತಿಳಿಸುವುದಕ್ಕಾಗಿ ವಿವರಿಸಲಾಗಿದೆ. ಆಯಾಯ ಪಂಗಡದವರು ಇಂದಿಗೂ ಬಾಯ್ದರೆಯಾಗಿ ಬಂದಿರುವ ಶಾಸನಾತ್ಮಕ ವಿಧಿವಿಧಾನಗಳನ್ನು ನಮ್ರತೆಯಿಂದ, ಭಯದಿಂದ ಆಚರಿಸುತ್ತಿರುವುದು ಆಶ್ಚರ್ಯದ ವಿಚಾರ. ಈ ವ್ಯವಸ್ಥಿತ ವೈಭವದ ಅರಸು ಪಟ್ಟಾಭಿಷೇಕದ ಬಗ್ಗೆ ಉಡುಪಿಯ ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ ವೀಡಿಯೋ ದಾಖಲಾತಿ ಹೊಂದಿದೆ.

*ಪಡುಬಿದ್ರಿ ಬಲ್ಲಾಳರ ಪಟ್ಟಾಭಿಷೇಕ :* ಕ್ರಿ.ಶ. ಹದಿನಾಲ್ಕನೇ ಶತಮಾನದ ಅವಧಿಯಲ್ಲಿ ಆಡಳಿತಕ್ಕೆ ಬಂದ ಪಡುಬಿದ್ರಿ ಬಲ್ಲಾಳರು ವಿಜಯನಗರ ಹಾಗೂ ಕೆಳದಿ ನಾಯಕರ ಸಾಮಂತರಾಗಿದ್ದು, ಭೂತಾಳಪಾಂಡ್ಯನ ಅಳಿಯ ವಿದ್ಯುಮ್ನ ಪಾಂಡ್ಯರಾಯನ ಐದನೆಯ ಹೆಂಡತಿಯ ವಂಶಸ್ಥರು ಎಂಬ ಹೇಳಿಕೆಯಿದೆ.[೭] ಇವರ ಆಳ್ವಿಕೆಯು ಮೂರು ಗ್ರಾಮಗಳನ್ನು ಹೊಂದಿದ್ದು, ಅದನ್ನು ೧೬ ಗುತ್ತುಗಳಾಗಿ ವಿಂಗಡಿಸಲಾಗಿತ್ತು. ಪಾದೆಬೆಟ್ಟು, ನಡ್ಸಾಲು, ಫಲಿಮಾರು ಗ್ರಾಮಗಳೊಂದಿಗೆ, ಪಡುಬಿದ್ರಿಯಲ್ಲಿ ನಡ್ಸಾಲು, ಪಟ್ಟಣಶೆಟ್ಟಿಮನೆ, ಪೇಟೆಮನೆ, ಬಗ್ಗಡೆಗುತ್ತು ಎಂಬ ನಾಲ್ಕು ಗುತ್ತಿನಮನೆಗಳಿವೆ. ನಡ್ಸಾಲು, ಅವರಾಲು, ಬಳಂಜೆ (ಬೊಳಿಂಜೆ) ಹಾಗೂ ದಾರಡು ಗುತ್ತಿನವರು ಮಾಗಣೆ ಗುರಿಕಾರರು. ಮೂರಡಿ ಮನೆ ಅಂಮ್ಮುಳಿತ್ತಾಯರು ಪ್ರಧಾನಿಗಳು. ಕೊರ್ನಾಯ ಕುಟುಂಬದವರು ಮಂತ್ರಿಗಳು ಆಳಿಕೊಂಡಿದ್ದ ಬಲ್ಲಾಳ ಗತಿಸಿದರೆ ರಾಜವಂಶದ ಹಿರಿಯ

ಅಧಿಕಾರಿಗೆ ಪಟ್ಟಕಟ್ಟುವುದಿದ್ದರೂ, ಬಲ್ಲಾಳರೇ ಉತ್ತರಾಧಿಕಾರಿಯನ್ನು ನೇಮಿಸಿದ್ದರೆ, ಅವರಿಗೆ ಪಟ್ಟಾಭಿಷೇಕವಾಗುತ್ತದೆ. ಅಳಿಯಕಟ್ಟು ಪರಂಪರೆಯಲ್ಲಿ ರಾಜ್ಯವಾಳುತ್ತಾ ಬರುತ್ತಿದ್ದ ಈ ಜೈನ ಅರಸರು ಮುಂದೆ ಸಂತಾನವಿಲ್ಲದಾಗ, ದತ್ತು ಸ್ವೀಕರಿಸಿರುವುದಕ್ಕೆ ದಾಖಲೆಗಳಿವೆ. ಯಾವುದೇ ಕಾರ್ಯಕ್ಕೆ ಅಲ್ಲಿನ ಗುತ್ತಿನವರನ್ನು ವಿಶ್ವಾಸಕ್ಕೆ ತೆಗೆದುಕೊಂಡೇ ರಾಜ್ಯವಾಳುತ್ತಿದ್ದರು. ವೇಣೂರಿನ ಅಜಿಲ ಅರಸರ ಪಟ್ಟಾಭಿಷೇಕದಂತೆ ಇಲ್ಲೂ ಬೇರೆ ಬೇರೆ ಗುತ್ತಿನವರು ಪಟ್ಟಾಭಿಷೇಕ ಸಂದರ್ಭದಲ್ಲಿ ಕೆಲಸ ನಿರ್ವಹಿಸುತ್ತಾರೆ. ಈ ಬಗ್ಗೆ ಲಿಖಿತ ದಾಖಲೆಗಳು ಸಿಗುತ್ತಿಲ್ಲ. ಕೊರ್ನಾಯ ಮನೆತನದ ಪ್ರಮುಖರು ಅರಸರನ್ನು ಪಟ್ಟದ ಮಂಚದಲ್ಲಿ ಕುಳ್ಳಿರಿಸಿದರೆ, ಅರಸರಿಗೆ ಉಂಗುರ ಮತ್ತು ಪೇಟವನ್ನು ತೊಡಿಸುವವರು ಅಂಬ್ಲುತ್ತಾಯರು. ನಡ್ಸಾಲ ಗುತ್ತಿನವರು ಪಟ್ಟದ ಖಡ್ಗ ನೀಡುತ್ತಾರೆ. ಪಟ್ಟಣಶೆಟ್ಟರ ಕುಟುಂಬದಿಂದ ಪಟ್ಟದ ಘೋಷಣೆ ಆಗುತ್ತದೆ. ೨೯ ಕಲಶಗಳ ಪೂಜೆ, ರಾಜರಪೇಟ, ಪೂಜೆ, ಶ್ರೀ ಲಕ್ಷ್ಮೀನಾರಾಯಣ ಪ್ರತಿಮಾ ಸ್ಥಾಪನೆ ಪೂಜೆಗಳು ಋತ್ವಿಜರ ಸಮ್ಮುಖದಲ್ಲಿ ಪಟ್ಟವಾಗುವ ಹಿಂದಿನ ದಿನವೇ ನಡೆಯುತ್ತವೆ. ಮರುದಿನ ಪಟ್ಟವಾಗುತ್ತಿರುವ ಅರಸರಿಗೆ ಕಲಶಾಭಿಷೇಕ, ಪ್ರಧಾನ ದೇಗುಲದಲ್ಲಿ ರಾಜಪಟ್ಟಾಭಿಷೇಕ ಹೋಮವೂ ಜರುಗುತ್ತವೆ. ರಾಜರಿಗೆ ಪಟ್ಟವಾಗುವ ತನಕ ದೇವಳದ ಒಳಭಾಗಕ್ಕೆ ಪ್ರವೇಶ ನಿಷಿದ್ಧ. ತದನಂತರ ಬೀಡಿನಲ್ಲಿ ರಾಜದರ್ಬಾರು ನಡೆಯುತ್ತದೆ. ಪಡುಬಿದ್ರಿಯಲ್ಲಿ ಜೂನ್ ೨೮, ೨೦೦೧ರಂದು ಶ್ರೀ ಚಂದಯ್ಯ ಅರಸು ಕಿನ್ನಿಕ್ಕ ಬಲ್ಲಾಳರು ಪಟ್ಟವೇರಿದರು. ೧೯೭೭ರ ಜನವರಿ ೨೪ ಹಿಂದಿನ ಅರಸು ಶಂಕರ ಅರಸು ಕಿನ್ನಿಕ್ಕ ಬಲ್ಲಾಳರು ತೀರಿಕೊಂಡಾಗಲೇ, ಉತ್ತರಾಧಿಕಾರಿಯಾಗಿ ಆಯ್ಕೆಗೊಂಡಿದ್ದರೂ ಪಟ್ಟಾಭಿಷೇಕ ಆಗಿರಲಿಲ್ಲ. ಅವರ ಪಟ್ಟಾಭಿಷೇಕ ನಡೆದ ಸಂದರ್ಭದಲ್ಲಿ ಪರಂಪರೆಯನ್ನು ಉಳಿಸಿಕೊಂಡು, ಐತಿಹಾಸಿಕ ಮಹತ್ವವನ್ನು ಕಾಪಾಡಿಕೊಂಡದ್ದು ವೈಶಿಷ್ಟ್ಯ.

*ಮೂಲ್ಕಿ ಸಾವಂತರ ಪಟ್ಟಾಭಿಷೇಕ :* ಸಾವಂತರಸರು ಮೂಲಿಕೆ ಸೀಮೆಯನ್ನು ೧೪ನೇ ಶತಮಾನದಿಂದಲೇ ಆಳುತ್ತಾ ಬಂದವರು. ಆಯಿಕಳ, ಅತ್ತೂರು, ಕುಬೆವೂರು, ಪಂಜ, ಒಳಲಂಕೆ, ಕರ್ನಾಡು, ಬಪ್ಪನಾಡು, ಕುಡೆತ್ತೂರು, ಕಾಳಿಪ್ಪಾಡಿಗಳೆಂಬ ಒಂಬತ್ತು ಮಾಗಣೆಗಳೊಂದಿಗೆ, ೪೦ ಗುತ್ತುಗಳನ್ನು ಒಳಗೊಂಡು ಸುಮಾರು ೩೮ ಗ್ರಾಮ ವ್ಯಾಪ್ತಿಯುಳ್ಳ ರಾಜ್ಯವನ್ನಾಳುತ್ತಿದ್ದವರು ಪಡು ಪಣಂಬೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡ ಸಾವಂತರಸರು. ದುಗ್ಗಣ್ಣ ಹಾಗೂ ಚೆನ್ನರಾಯ ಎಂಬ ಎರಡು ಹೆಸರುಗಳಿಂದ ಕರೆಯಲ್ಪಡುತ್ತಿದ್ದ ಈ ಅರಸರ ಪಟ್ಟಾಭಿಷೇಕ ಇತ್ತೀಚೆಗೆ ಅಂದರೆ ೧೯೯೯ರಲ್ಲಿ ನಡೆದುದರಿಂದ ಅವರ ವಿಧಿವಿಧಾನಗಳನ್ನು ದಾಖಲಿಸುವುದು ಸಾಧ್ಯವಾಯಿತು.

ಪಟ್ಟ ಹೊಂದಿದ ಅರಸ ಮರಣ ಹೊಂದಿದರೆ, ಉತ್ತರಾಧಿಕಾರಿ ಆಯ್ಕೆಯಾಗುವವರೆಗೂ ಇಲ್ಲಿ, ಶವಸಂಸ್ಕಾರ ನಡೆಸದೆ, ಶವವನ್ನು ಇಡಲು ನಿರ್ಮಿಸಿರುವ ಕೊಠಡಿಯಲ್ಲಿ ದೊಡ್ಡ ಮರದ ಪೆಟ್ಟಿಗೆಯಲ್ಲಿ ಉಪ್ಪಿನಲ್ಲಿ ಹಾಕಿ ಇಡುತ್ತಿದ್ದರಂತೆ. ಈ ಪದ್ಧತಿ ತುಳುನಾಡಿನ ಕೆಲವು ಅರಸರ ಮನೆಯಲ್ಲಿತ್ತು ಎಂದು ಮಾಹಿತಿ ಸಂಗ್ರಹದ ಸಂದರ್ಭದಲ್ಲಿ ತಿಳಿದು ಬರುತ್ತದೆ. ತುಳುವಿನಲ್ಲಿ ಇದನ್ನು 'ಕಲೆಂಬಿ' ಎಂದು ಕರೆಯುತ್ತಾರೆ. ಕೆಲವೆಡೆ ಕಲ್ಲಿನ ಪೆಟ್ಟಿಗೆಗಳೂ ಇದ್ದುವು ಎಂಬುದು ಗಮನಾರ್ಹ. ಉತ್ತರಾಧಿಕಾರಿ ಆಯ್ಕೆಯಾದ ಮೇಲೆ ಶವದ ಕೈಯಲ್ಲಿರುವ ಮುದ್ರೆಯುಂಗುರವನ್ನು ನೂಲಿನ ಮೂಲಕ ತೊಡಿಸಲಾಗುತ್ತಿತ್ತು.

ಸಿಮಂತೂರು ಆದಿ ಜನಾರ್ಧನ ದೇವಸ್ಥಾನ, ಬಪ್ಪಿನಾಡು ದೇವಾಲಯಗಳಲ್ಲಿ ತೀರ್ಥಸ್ಥಾನಗೈದು, ಜೈನ ಬಸದಿ ಪಡುಪಣಂಬೂರು, ಅರಮನೆಯ ಪದ್ಮಾವತಿ ಅಮ್ಮನವರ ಬಸದಿಗಳಲ್ಲಿ ವಿಶೇಷ ಪೂಜೆ ಸಲ್ಲಿಸಿ, ಪಟ್ಟಾಭಿಷೇಕದ ವಿಧಿವಿಧಾನ ನಡೆಯುತ್ತದೆ. ಪಟ್ಟಕಟ್ಟುವವರು ಕರ್ಹಾಡ ಬ್ರಾಹ್ಮಣ ಮನೆತನದ ಗುರುರಾಯ ಭಟ್ಟರ ಮನೆಯವರು. ಪಂಜದ ಗುತ್ತಿನ ಹಿರಿಯರು ಅರಸರಿಗೆ ಪೇಟ ತೊಡಿಸುತ್ತಾರೆ. ಪುತ್ತೂರು ಭಾವದ ಹಿರಿಯರು ಪಟ್ಟದಕತ್ತಿ ನೀಡುತ್ತಾರೆ. ಪಟ್ಟದ ಉಂಗುರವನ್ನು ಅರಸರ ಪ್ರಧಾನಿ ಕುಟುಂಬದ ಕಾಸಪಯ್ಯ ಮನೆತನದವರು ಹಾಕುತ್ತಾರೆ. ರಾಜಪುರೋಹಿತ ಅತ್ತೂರು ಗಣಪತಿ ಉಡುಪರು (ಬೈಲು ಉಡುಪರೆಂದೇ ಪ್ರಸಿದ್ಧ) ಪಟ್ಟಾಭಿಷೇಕದ ವಿಧಿವಿಧಾನ ನೆರವೇರಿಸುತ್ತಾರೆ. ಬಿಲ್ಲವ ಸೇನಾಪತಿಗಳಾದ ಬಂಕಿನಾಯಕ-ಗುಡ್ಡೆನಾಯಕರು ಉಪಸ್ಥಿತರಿರುತ್ತಾರೆ. ಜೊತೆಗೆ ಸೀಮಂತೂರು, ಬಪ್ಪನಾಡು ಮುಂತಾದ ಬಂಟರ ಗುತ್ತು ಮನೆಯವರು ಇರುತ್ತಾರೆ. ಇತ್ತೀಚೆಗೆ ಹಿಂದಿನ ದುಗ್ಗಣ್ಣ ಸಾವಂತರ ಜೇಷ್ಠ ಪುತ್ರ ಶ್ರೀ ಜಯಕೀರ್ತಿಯವರು ಶ್ರೀ ಚೆನ್ನರಾಯ ಸಾವಂತರಾಗಿ ಅಧಿಕಾರ ವಹಿಸಿಕೊಂಡರು. ಶ್ರೀ ಗಣಪತಿರಾವ್‌ರವರು ಪಟ್ಟಾಭಿಷೇಕದ ವಿವರಗಳನ್ನು ತಿಳಿಸುತ್ತಾ, ಪಟ್ಟದ ಉಂಗುರ ಬೆರಳಿಗೆ ಹಾಕಿ ಹೆಸರು ಕರೆಯುವವರು ಗುಂಡಾಲಿನ ಕಾಸಪಯ್ಯ ಮನೆತನದವರು: ಪಟ್ಟಕಟ್ಟುವವರು ಗುರುರಾಯಭಟ್ಟರ ಮನೆಯವರು ಎನ್ನುತ್ತಾ ಉಳಿದ ವಿಚಾರಗಳು ದೊರಕದಿರುವ ಬಗ್ಗೆಯೂ ಪ್ರಸ್ತಾಪಿಸುತ್ತಾರೆ. ಅರಸರ ಅಧಿಕಾರಿ ವರ್ಗಗಳಲ್ಲಿ ಶಿಮಂತೂರು ಭಾವ, ಪುತ್ತೂರಭಾವ, ಪಿಲಿಗುಟ್ಟ ಪರಾರಿ ಮತ್ತು ಐಕಳ ಭಾವಗಳು ಮುಖ್ಯವಾಗುತ್ತವೆ. ಇಂತಹ ಗುತ್ತು, ಭಾವಗಳಲ್ಲಿ ಪಟ್ಟ ಆದ ಹಿರಿಯರಿಗೆ ಗೌರವದ ಹೆಸರಿನಿಂದ ಕರೆಯುವ ಪದ್ಧತಿ ಇತ್ತು ಎಂಬುದು ತಿಳಿದು ಬರುತ್ತದೆ. ಉದಾ: ಪಂಜದ ಗುತ್ತಿನವರನ್ನು 'ಮಲ್ಲಿ' ಎಂಬ ಗೌರವದ ಹೆಸರಲ್ಲಿ ಕರೆದರೆ, ಶಿಮಂತೂರು ಭಾವದವರನ್ನು ಅರಲ ಯಾ ಬಸ ಅರಲ ಎಂದು ಕರೆಯುತ್ತಿದ್ದರು. ಪುತ್ತೂರು ಭಾವದವರನ್ನು ೨ ಹೆಸರುಗಳಿಂದ ಗುರುತಿಸುತ್ತಿದ್ದರು.

ಅವು ಯಾವುವೆಂದರೆ ತಿಮ್ಮ ಅಧಿಕಾರಿ ಮತ್ತು ಬಗ್ಗ ಅಧಿಕಾರಿ ಅಂತ. ಬಳುಂಜೆ ಗುತ್ತಿನವರನ್ನು 'ಮಣಯ್ಯ' ಎಂದೂ ಕರೆಯುತ್ತಿದ್ದರು. ಈ ರೀತಿ ಬೇರೆ ಕಡೆಯಲ್ಲೂ ಗುತ್ತು, ಭಾವಗಳಲ್ಲಿ ಅಧಿಕಾರಕ್ಕೆ ಬಂದಾಗ ಹೊಸ ಹೆಸರನ್ನು ಅಂದರೆ ಪರಂಪರೆಯ ಹೆಸರನ್ನು ಇಡುವ ಪದ್ಧತಿ ಇದೆಯೆಂದು ಸಂಶೋಧಕ ಪು. ಶ್ರೀನಿವಾಸ ಭಟ್ಟರು ಸಂಶೋಧನೆಯ ತಳಹದಿಯ ಮೇಲೆ ತಿಳಿಸುತ್ತಾರೆ. 'ದ.ಕ. ಜಿಲ್ಲೆಯ ಪ್ರಾಚೀನ ಇತಿಹಾಸ' ಗ್ರಂಥದಲ್ಲಿ ಪು. ೪೩೬ರಲ್ಲಿ ಪುತ್ತಿಗೆ ಚೌಟರಿಗೂ, ಬಂಗರಿಂದ ಸ್ವಾಧೀನಪಡಿಸಿ ಕೊಂಡ ಮಣೇಲ ಪೇಜಾವರದ ಸೀಮೆಯವರಿಗೂ ಆದ ಕರಾರಿನ ಪ್ರತಿಯಲ್ಲಿ ರಾಜ ಪರಿವಾರಕ್ಕೆ ಸೀಮೆ, ಗುತ್ತಿನವರ ನೇಮಕಾತಿಯ ವಿವರಗಳು ಸಿಗುತ್ತವೆ. ಮೂಡಬಿದ್ರಿಯ ಚೌಟರಸರು ೧ ನೇ ದೇವರಾಯನ ಪರವಾಗಿ ನೀಲೇಶ್ವರದ ವಲಾತರನ ಸಂಗಡ ಕಾಳಗ ಮಾಡಿ ಸೋಲಿಸಿ, ಬಂಗರಿಗೆ ಸಲ್ಲಿಸಲು ಆಗ ಬಂಗರು ಚೌಟರಿಗೆ ಬಿಟ್ಟುಕೊಟ್ಟ ಮಣೇಲ, ಪೇಜಾರ, ಮುಡುಕೂರು ನಗರಗಳನ್ನು ಸ್ವಗತ ಮಾಡಿಕೊಂಡಾಗ, ಅಲ್ಲಿನ ಪಡಿ ಇತ್ಯಾದಿಗಳು ಚೌಟರಿಗೆ ಮೀಸಲಾದುವಲ್ಲದೆ, ಅಲ್ಲಿನ ಅರ್ಕುಳದ ನಾನೂರಾಳರು, (೪೦೦ ಸೈನ್ಯದ ಸೇನಾಧಿಪತಿ) ಆರ್ನೂರಾಳರು (೬೦೦ ಸೈನ್ಯದ ಸೇನಾಧಿಪತಿ) ಕೂಡಿ ಪಟ್ಟಣಶೆಟ್ಟಿ (ಮಣೇಲ ಪಟ್ಟಣ ಶೆಟ್ಟಿ) ಮುಂತಾದವರು ಮಿಜಾರಗಡಿಗೆ ಮಾನ ಮರ್ಯಾದಿ, ಮೆರ್ವೆ ತೋರಣಗಳಿಂದ ಬರಲಹುದು ಎಂದು ಮುಂತಾಗಿ ಹೇಳುತ್ತಾ, ಬುನ್ನಂಬಳಿಯ ಕಾಳು ಶೆಟ್ಟಿ, ಮಾಸಾದಿಕ ಜೈನ ಕಾಳಶೆಟ್ಟಿ, ಜಂಗಮಂಜನ ಸಂತತಿ, ಮಾಸಾದಿಕ ಜಯಿನ ಮೋನಪ್ಪಶೆಟ್ಟಿ, ಮಾಸಾದಿಕ ಜಯಿನ ಕಿಟ್ಟುಸೆಟ್ಟಿಯನ್ನು ಅಮ್ಮನೂರು, ದುಡುಕೂರಿನ ಚೆನ್ನದ (ಇನ್ನದ)ಗುತ್ತು, ತೋಕೂರು ಗುತ್ತುನಲ್ಲಿ ಈ ಅಧಿಕಾರಿಗಳಾಗಿ ನೇಮಿಸಲ್ಪಡುತ್ತಾರೆ ಮಾತ್ರವಲ್ಲ ಅವರು ಅದಕ್ಕೆ ವಿರೋಧವಾಗಿ ನಡೆದರೆ ಕ್ರಮ ಕೈಗೊಳ್ಳುತ್ತೇವೆ ಎಂಬುದು ಶಾಸನಪಾಠ. ಉಳಿದಂತೆ ಬೇರೆ ಲಿಖಿತ ವಿವರಗಳು ದಕ್ಕಿಲ್ಲ. ಆದರೆ ಪಟ್ಟಾಭಿಷೇಕಕ್ಕೆ ಇವರೆಷ್ಟು ಮುಖ್ಯರು ಎಂಬುದು ಅಸ್ಪಷ್ಟವಾಗಿದೆ.

ಹೀಗೆ ಅರಸರು ಮೃತನಾಗಿ ಇನ್ನೊಬ್ಬನು ಅಧಿಕಾರ ಗ್ರಹಣ ಮಾಡುವ ಸಂದರ್ಭ ಬಂದಾಗ, ಆ ಬೀಡು ಅಥವಾ ಅರಮನೆಗೆ ಸಂಬಂಧಪಟ್ಟ ಎಲ್ಲಾ ಗುತ್ತುಗಳ ಮುಖ್ಯಸ್ಥರು, ಸಮಸ್ತ ಜಾತಿ ಮುಖಂಡರು ಸೇರಿ ಅರಸನ ಆಯ್ಕೆಯಲ್ಲಿ ಪಾಲ್ಗೊಳ್ಳುವುದು, ನೂತನ ಅರಸನ ಆಯ್ಕೆಯಾದ ಮೇಲೆ ನಡೆಯುವ ಸಂಪ್ರದಾಯದ ಅನುಸರಣೆ ಒಂದು ಕಡೆ ಆದರೆ ಇನ್ನೊಂದೆಡೆ ಅರಸನ ಅಧಿಕಾರದ ರಕ್ಷಣೆ ಎಂಬುದು ನಮ್ಮ ಸಂಪೂರ್ಣ ಹೊಣೆಗಾರಿಕೆ ಎಂದು ಭಾವಿಸುವ ಅಧಿಕಾರವರ್ಗವಿರುವುದು. ಇವೆಲ್ಲವೂ ರಾಜ್ಯದ ಭದ್ರತೆಯನ್ನು ಕಾಪಾಡಿಕೊಂಡು ಬರಲು, ಏಕತೆಯನ್ನು ರಾಜಕೀಯವಾಗಿ ರೂಪಿಸಿದ ಪ್ರಯತ್ನವಾಗಿ ಕಾಣುತ್ತದೆ. ಈ ಮೂರೂ ರಾಜರುಗಳ ಪಟ್ಟಾಭಿಷೇಕದ ಸಂದರ್ಭಗಳಲ್ಲಿ ಲಿಖಿತ ದಾಖಲೆಗಳು ಸಿಕ್ಕಿಲ್ಲವಾದರೂ ಬಾಯ್ದೆರೆಯ ಮೂಲಕ ಬಂದಂತಹ ಆಚರಣಾ ವಿಧಾನವನ್ನು ಕೈಬಿಡದೆ ಅವುಗಳನ್ನು ಹಾಗೆಯೇ ಪಾಲಿಸಿಕೊಂಡು ಬಂದಿರುವುದು ಐತಿಹಾಸಿಕವಾಗಿ ಬಹಳ ಮುಖ್ಯವಾಗುತ್ತದೆ. ರಾಜ ಪರಿವಾರದಲ್ಲಿ ಪ್ರಧಾನಿ, ಸೇನಾಪತಿ, ರಾಜ ಪುರೋಹಿತ, ಕೊಠಾರಿ, ಸೇನಭೋಗ ಮುಂತಾದವರು ಇದ್ದರು. ಇವರೆಲ್ಲರ ಸೇರುವಿಕೆ ಪಟ್ಟಾಭಿಷೇಕ ಸಂದರ್ಭದಲ್ಲಿ ಬಹಳ ಅಗತ್ಯವಿತ್ತು. ಒಂದೆಡೆ ಅನಕ್ಷರಸ್ಥ ಜನಪದರು, ಇನ್ನೊಂದೆಡೆ ಅಕ್ಷರಸ್ಥ ಆಳುವ ಸಮುದಾಯ ಈ ಎರಡು ಜಗತ್ತನ್ನು ಬೆಸೆಯುವ ಆಚರಣೆ ನಿಧನ ಹೊಂದಿದ ಅರಸರ ಶವಸಂಸ್ಕಾರ ಹಾಗೂ ನೂತನ ಅರಸರ ಆಯ್ಕೆ ಮತ್ತು ಪಟ್ಟಾಭಿಷೇಕ ಮಹೋತ್ಸವ. ಇಲ್ಲಿರುವ ಪ್ರತಿಯೊಂದು ಆಚರಣೆಯಲ್ಲೂ ಅಧಿಕಾರದ ಒತ್ತಡ ಹಾಗೂ ಅಧಿಕಾರಿ ಬಳಗವನ್ನು ಒಗ್ಗಿಸುವ ಪ್ರಯತ್ನ ಕಂಡು ಬರುತ್ತದೆ. ನೂತನ ಅರಸನ ರಾಜ್ಯಭಾರಕ್ಕೆ ತಕ್ಕುದಾದ ಎಲ್ಲಾ ರೀತಿಯ ಚೌಕಟ್ಟನ್ನು ನಿರ್ಮಾಣ ಮಾಡಿ ಕೊಡುವ ಈ ರೀತಿ ರಿವಾಜುಗಳ ವಿಧಿವಿಧಾನಗಳಲ್ಲಿ ವಿಶೇಷ ಬದಲಾವಣೆ ಇಲ್ಲವಾದರೂ, ಗುತ್ತು, ಬಾಳಿಕೆ ಮುಂತಾದ ಅಧಿಕಾರಿವರ್ಗದವರ ಕೆಲಸ ಕಾರ್ಯಗಳಲ್ಲಿ ರಾಜ್ಯದಿಂದ ರಾಜ್ಯಕ್ಕೆ ಅಲ್ಪಸ್ವಲ್ಪ ಬದಲಾವಣೆ ಗಳು ಕಂಡು ಬರುತ್ತವೆ. ಬಹಳ ಶಾಸ್ತ್ರೀಯವಾಗಿ ನಡೆದುಕೊಂಡು ಬರುತ್ತಿರುವ ಈ ಅರಸುಪಟ್ಟಾಭಿಷೇಕ ಆಚರಣೆ, ಜನಪದರ ರಾಜಕೀಯ ಆಸ್ಥೆ, ರಾಜರುಗಳ ರಾಜಕೀಯ ಇತಿಹಾಸ ಮತ್ತು ಅಧಿಕಾರದ ವಿಶಾಲ ತಳಹದಿಯನ್ನು ಅಧ್ಯಯನ ಮಾಡಲು ಅನುಕೂಲಿಸುತ್ತದೆ. ನವ ಇತಿಹಾಸ ಜೋಡಣೆಗೆ ಅವಕಾಶ ಕಲ್ಪಿಸಿಕೊಡಬಲ್ಲುವು. ಈ ನಿಟ್ಟಿನಲ್ಲಿ ಸಮಗ್ರ ಅಧ್ಯಯನದ ಅಗತ್ಯ ಇದೆ.



(ಮಾಹಿತಿ ಸಹಕಾರ : ಶ್ರೀ ಎಸ್. ಎ. ಕೃಷ್ಣಯ್ಯ, ಡಾ. ಪದ್ಮಪ್ರಸಾದ ಅಜಿಲ, ವೇಣೂರು, ಶ್ರೀ ಅ. ರಾಮಚಂದ್ರ ಪಡುಬಿದ್ರಿ, ಶ್ರೀಚಂದಯ್ಯ ಕಿನ್ನಕ್ಕ ಬಲ್ಲಾಳ, ಡಾ. ಕೆ. ಜಿ. ವಸಂತಮಾಧವ, ಶ್ರೀ ಪು. ಶ್ರೀನಿವಾಸ ಭಟ್ಟ, ಕಟೀಲು ಹಾಗೂ ಆರ್. ಆರ್. ಸಿ. ಉಡುಪಿ)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೩. ಎಮ್. ಗಣಪತಿರಾವ್., (೧೯೨೩), **ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ.**

೧. ಹೆರಂಜೆ ಕೃಷ್ಣ ಭಟ್ ಮತ್ತು ಡಾ. ಎಸ್. ಡಿ. ಶೆಟ್ಟಿ., (೨೦೦೦), **ತುಳುಕರ್ನಾಟಕ ಅರಸು ಮನೆತನಗಳು.**

೬. ಡಾ. ಕೆ. ಜಿ. ವಂಸತಮಾಧವ., (೧೯೯೮), **ಕರಾವಳಿ ಕರ್ನಾಟಕದ ರಾಜಕೀಯ ಇತಿಹಾಸ ಅಧ್ಯಯನ.**

೪. **ವೇಣೂರು ಸಿರಿ ಬಾಹುಬಲಿ.,** (೨೦೦೦), ಡಾ. ಎಸ್. ಡಿ. ಶೆಟ್ಟಿ, (ಸಂ.)

೫. ಡಾ. ಕೆ. ಜಿ. ವಂಸತಮಾಧವ., (೧೯೮೮), **ಮೂಲಿಕೆಯ ಇತಿಹಾಸ.**

೬. **ಉದಯವಾಣಿ**, ದೈನಿಕ, ಜುಲೈ ೨೩, (೨೦೦೧)

೭. **ಜನವಾಹಿನಿ.,** (೧೯೯೯).


೪. ಘಟ್ಟದ ಬದಿಯಿಂದ ಬಂಗರ ಸೀಮೆಯಿಂದ ಸಮುದ್ರದ ಬದಿಯಿಂದ ವೀರಪಾಂಡ್ಯ ಬಲ್ಲಾಳ ಸೀಮೆಯವರೆಗಿನ ಪ್ರಜೆಗಳಲ್ಲಿ ಅಜಿಲರ ಸೀಮೆಯ ಹನ್ನೆರಡು ಮಾಗಣೆಯ ಅರಸರಲ್ಲಿ ಮಾಗಣೆ ಗುತ್ತು ಗ್ರಾಮದ ಗುತ್ತಿನವರು ಮತ್ತು ಸೇರಿದ ಪ್ರಜೆಗಳು ಹೇಳುವುದೇನೆಂದರೆ ಆಳದಂಗಡಿ ಅರಮನೆ ಹನ್ನೆರಡು ಮಾಗಣೆಯ ಶ್ರೀ ಕೃಷ್ಣರಾಜ ಅಜಿಲರು ಕಾಲವಾದರು. ಆ ಬಗ್ಗೆ ರಾಜ್ಯದ ಗುತ್ತಿನವರಾದ ನಾವು ಅರಮನೆಯ ಪಟ್ಟದ ಪ್ರಕಾರ ಹಿರಿಯ ಕಿರಿಯರ ಒಪ್ಪಿಗೆ ಪಡೆದು ಹಕ್ಕುದಾರರಾಗಿರುವ ಇವರಿಗೇ ಪಟ್ಟಕಟ್ಟುವುದೆಂದು ಒಮ್ಮತದ ಅಭಿಪ್ರಾಯ ಹೊಂದಿದ್ದೇವೆ. ಇನ್ನು ಮುಂದಿನ ಕೆಲಸಕ್ಕೆ ಸೇರಿದ ಪ್ರಜೆಗಳ ಸಹಕಾರ ಕೇಳುತ್ತೇವೆ.

೫. ಹನ್ನೆರಡು ಮಾಗಣೆಯ ಅಸ್ರಣ್ಣರೇ, ತಂತ್ರಿಗಳೇ, ರಾಜ್ಯಗುತ್ತಿನವರೇ, ಹಾಗೆಯೇ ಹನ್ನೆರಡು ಮಾಗಣೆಯ ಸಮಸ್ತ ಜನಗಳೇ, ಕಾಲವಾದ ಅರಸರ ಉತ್ತರಾಧಿಕಾರಿ ಹಕ್ಕುದಾರರಾಗಿರುವ ಪ್ರತಿನಿಧಿಗಳನ್ನು ಪಟ್ಟದಲ್ಲಿ ಕುಳ್ಳಿರಿಸಿರಿ.

ಡಾ॥ ಬಸವರಾಜ. ಮಲಶೆಟ್ಟಿ*

# ಕಿತ್ತೂರ ಈರವ್ವನನ್ನು ಕುರಿತು ಇತಿಹಾಸ ಮತ್ತು ಜನಪದ ಸಾಹಿತ್ಯ

ಕಿತ್ತೂರ ಸಂಸ್ಥಾನದ ಕೊನೆಯ ದೊರೆ ಶಿವಲಿಂಗರುದ್ರ ಸರ್ಜನ ಮರಣಾನಂತರ ಆ ಸಂಸ್ಥಾನ ಅವನತಿಯತ್ತ ಸಾಗಿತು. ಶಿವಲಿಂಗರುದ್ರಸರ್ಜ ತನ್ನ ಜೀವಿತದ ಕೊನೆಯ ಗಳಿಗೆಯಲ್ಲಿ ತೆಗೆದುಕೊಂಡ ದತ್ತಕವನ್ನು ಬ್ರಿಟಿಷರು ಒಪ್ಪಲಿಲ್ಲ. ಕಿತ್ತೂರನ್ನು ಕೈವಶಮಾಡಿಕೊಳ್ಳಲು ಈ ಸಂದರ್ಭವನ್ನು ಅವರು ಯಶಸ್ವಿಯಾಗಿ ಬಳಸಿಕೊಂಡರು. ಅಂತೂ ಕಿತ್ತೂರ ಪತನವಾಯಿತು. ಶಿವಲಿಂಗ ರುದ್ರಸರ್ಜನ ವಿಧವಾ ಪತ್ನಿ ಈರವ್ವ (ವೀರಮ್ಮ) ಮತ್ತು ಅವನ ಮಲತಾಯಿ ಚೆನ್ನಮ್ಮನನ್ನು ಬೈಲಹೊಂಗಲದಲ್ಲಿ ಗೃಹಬಂಧನ ದಲ್ಲಿಡಲಾಯ್ತು. ಸಂಗೊಳ್ಳಿರಾಯಣ್ಣನಂಥ ಬಂಡುಕೋರರಿಗೆ ಈರವ್ವ ಗುಪ್ತನೆರವು ನೀಡುತ್ತಿದ್ದಾಳೆಂಬ ಆರೋಪದ ಮೇಲೆ ಅವಳನ್ನು ಬೈಲಹೊಂಗಲದಿಂದ ಸ್ಥಳಾಂತರಿಸಲಾಯಿತು. ಅವಳು ಧಾರವಾಡದಲ್ಲಿ ನಿಧನಳಾದಳು. ಇದಿಷ್ಟು ವಿಷಯ ಇತಿಹಾಸದಲ್ಲಿ ಹೇಗೆ? ದಾಖಲಾಗಿದೆ, ಮತ್ತು ಜಾನಪದದಲ್ಲಿ ಹೇಗೆ? ಚಿತ್ರಿತ ವಾಗಿದೆ ಎಂಬುದನ್ನು ಪರಿಶೀಲಿಸುವುದು ಈ ಲೇಖನದ ಉದ್ದೇಶ.

ಐತಿಹಾಸಿಕ ದಾಖಲೆಗಳು ಈರವ್ವನ ಬಗ್ಗೆ ಸಂಕ್ಷಿಪ್ತವಾದ ಖಚಿತವಾದ ವಿವರಗಳನ್ನು ನೀಡುತ್ತವೆ. ಶಿವಲಿಂಗರುದ್ರಸರ್ಜ ತೀರಿಕೊಂಡಾಗ (೧೨-೯-೧೮೨೪) ಈರವ್ವನಿಗೆ ಹನ್ನೊಂದು ವರ್ಷ ದತ್ತಕ ಒಪ್ಪದ್ದರಿಂದ ಈರವ್ವನೇ ಕಿತ್ತೂರಿನ ವಾರಸುದಾರಳು. ಇವಳು ಹೆಸರಿಗೆ ಮಾತ್ರ ವಾರಸುದಾರಳಾಗಿದ್ದಳು. ಆಡಳಿತವನ್ನೆಲ್ಲ ಚೆನ್ನಮ್ಮ ನೋಡಿಕೊಳ್ಳುತ್ತಿದ್ದಳು. ಥ್ಯಾಕರೇನ ಕಾಟ ತಾಳಿಕೊಳ್ಳ ಲಾರದೆ ಈರವ್ವನೊಂದಿಗೆ ಪುಣೆ ಮುಂಬೈಗಳಿಗೆ ಹೋಗಿ ವಾಸಿಸಬೇಕೆಂದು ಚೆನ್ನಮ್ಮ ಅಪೇಕ್ಷಿಸಿದ್ದಳು. ಆದರೆ ಬ್ರಿಟಿಷರು ಒಪ್ಪಿಗೆ ನೀಡಲಿಲ್ಲ. ಚೆನ್ನಮ್ಮ - ಈರವ್ವರಲ್ಲಿ ಮನಸ್ತಾಪ ಹುಟ್ಟಿಸಲು ಥ್ಯಾಕರೆ ವಿಫಲ ಪ್ರಯತ್ನ ನಡೆಸಿದ. ತಾನು ತಾಯಿಯೆಂದು ನಂಬಿದ್ದ ಚೆನ್ನಮ್ಮನ ಮೇಲಿನ ನಂಬಿಕೆಯನ್ನು ಈರವ್ವ ಕಳೆದುಕೊಳ್ಳಲಿಲ್ಲ. ಶಿವಲಿಂಗ ರುದ್ರ ಸರ್ಜನ ಮರಣದಿಂದ ಕಿತ್ತೂರ ಪತನದವರೆಗಿನ ಎಂಭತ್ತು ನಾಲ್ಕು ದಿನಗಳ ಅವಧಿಯಲ್ಲಿ ಕಿತ್ತೂರು ಮತ್ತು ಬ್ರಿಟಿಷರ ನಡುವೆ ಪತ್ರವ್ಯವಹಾರ ನಿರಂತರವಾಗಿ ನಡೆಯಿತು. ಈ ಪತ್ರಗಳಲ್ಲಿ ಬೆರಳೆಣಿಕೆಯಷ್ಟು ಪತ್ರಗಳು ಚೆನ್ನಮ್ಮ ಮತ್ತು ಈರವ್ವ ಜಂಟಿಯಾಗಿ ಬರೆದಂಥವು. ಉಳಿದ ಬಹು ಸಂಖ್ಯೆಯ ಪತ್ರಗಳಲ್ಲಿ ಈರವ್ವನ ಪ್ರಸ್ತಾಪವಿಲ್ಲ. ಅಪ್ರಾಪ್ತ ವಯಸ್ಕಳಾದ ಈರವ್ವ, ಚೆನ್ನಮ್ಮನಿಗೆ ಎಲ್ಲ ಒಪ್ಪಿಸಿ ನಿರ್ಲಿಪ್ತಳಾಗಿದ್ದುದು ಸಹಜವಾಗಿದೆ. ಕಿತ್ತೂರು ಎರಡನೇ ಯುದ್ಧದಲ್ಲಿ ಸಂಪೂರ್ಣವಾಗಿ ಸೋತಮೇಲೆ ಚೆನ್ನಮ್ಮ-ಈರವ್ವ ಕೋಟೆಯ ಈಶಾನ್ಯ ಭಾಗದಿಂದ ತಪ್ಪಿಸಿಕೊಂಡು ಹೋಗುವಾಗ ಬ್ರಿಟಿಷರಿಗೆ ಸೆರೆ ಸಿಕ್ಕರು. ಇಬ್ಬರನ್ನು ಬೈಲಹೊಂಗಲದಲ್ಲಿ ಗೃಹಬಂಧನದಲ್ಲಿಡಲಾಯಿತು. ಈ ರಾಜಕೀಯ ಕೈದಿಗಳಿಗೆ ೪೦ ಸಾವಿರ ರೂ. ನಿವೃತ್ತಿ ವೇತನ ದೊರೆಯುತ್ತಿತ್ತು. ಚೆನ್ನಮ್ಮನ ನಿಧನಾನಂತರ ಈರವ್ವನನ್ನು ಕುಸುಗಲ್ಲಿಗೆ - ನಂತರ ಧಾರವಾಡಕ್ಕೆ (೧೭.೨.೧೮೩೦) ಸ್ಥಳಾಂತರಿಸಲಾಯಿತು. ಅವಳು ಬಂಡಾಯಗಾರ ಸಂಗೊಳ್ಳಿ ರಾಯಣ್ಣನಿಗೆ ಗುಪ್ತವಾಗಿ ನೆರವು- ಪ್ರೇರಣೆ ನೀಡುತ್ತಿದ್ದಾಳೆಂಬ ಸುಳಿವು ಬ್ರಿಟಿಷರಿಗೆ ಸಿಕ್ಕದ್ದೇ ಈ ಸ್ಥಳಾಂತರಕ್ಕೆ ಕಾರಣವಾಯಿತು. ಜನರ ಪ್ರೀತಿ-ಅನುಕಂಪ ಗಳಿಸಿದ್ದ ಈರವ್ವನ ಸ್ಥಳಾಂತರವನ್ನು ನಾಗರಿಕರು ಪ್ರತಿಭಟಿಸಿದರು. ಬೈಲಹೊಂಗಲದ ಸಮೀಪದ ಆನಿಗೋಳದಲ್ಲಿ ಸಾವಿರಾರು ಜನ ಪ್ರತಿಭಟನಕಾರರು ಸೇರಿದ್ದಾಗಿಯೂ ಈರವ್ವನ ಕಾವಲಿಗಿದ್ದ ದೊಡ್ಡ ಸೈನ್ಯವನ್ನು ಕಂಡು ಹಿಂದೆ ಸರಿದರೆಂದೂ ಸ್ಟೋಕ್ಸ್ ಎಂಬ ಅಧಿಕಾರಿ ಬರೆದಿದ್ದಾನೆ. ಈರವ್ವ ಅನಾರೋಗ್ಯದಿಂದ ೧೩-೭-೧೮೩೦ರಂದು ಧಾರವಾಡದಲ್ಲಿ ನಿಧನಳಾದಳು. ಸ್ತ್ರೀಯರಿಗೇ ವಿಶಿಷ್ಟವಾದ ಗುಪ್ತರೋಗವೊಂದು ಅವಳ ಸಾವಿಗೆ ಕಾರಣವಾಯಿತೆಂದು ಬ್ರಿಟಿಷ್ ದಾಖಲೆಗಳು ತಿಳಿಸುತ್ತವೆ (ನಿಸ್ಬತ್‌ನ ಪತ್ರ).

ಒಟ್ಟಾರೆ ಕಿತ್ತೂರಿನ ಚರಿತ್ರೆಯಲ್ಲಿ ಈರವ್ವನದು ನಗಣ್ಯ ಪಾತ್ರ. ಅವಳು ಇತಿಹಾಸದಲ್ಲಿ ಕಾಣಿಸಿಕೊಂಡ ಸಂದರ್ಭದಲ್ಲಿ ಚೆನ್ನಮ್ಮ ಪ್ರಧಾನ ವ್ಯಕ್ತಿಯಾಗಿ ಕಂಗೊಳಿಸಿದ್ದಕ್ಕೆ ಕಾರಣ ಚೆನ್ನಮ್ಮನ ಚಾಣಾಕ್ಷತನ ಧೈರ್ಯ-ಹೋರಾಟದ ಮನೋಭಾವಗಳು. ಮುಗ್ಧಳೂ ಅಸಹಾಯಕಳೂ ಆಗಿದ್ದ ಈರವ್ವ ತೆರೆಮರೆಯಲ್ಲಿ ಉಳಿದುದು ಇತಿಹಾಸಕ್ಕೆ ಅಚ್ಚರಿಯ ಸಂಗತಿಯಲ್ಲ. ಆದರೆ ಅಂದಿನ ಜನಪದ ಈರವ್ವನ ಬಗ್ಗೆ ತೋರಿಸಿದ ಪ್ರೀತಿ ಅನುಕಂಪಗಳು ಅಪಾರ. ಅಧಿಕೃತ ವಾರಸುದಾರಳಾಗಿದ್ದಳೂ ಅನಾಥಳಾದ ಹನ್ನೊಂದನೆಯ ವಯಸ್ಸಿಗೇ ವಿಧವೆಯಾದ ದಾಂಪತ್ಯ ಸುಖದಿಂದ ವಂಚಿತಳಾದ ಈರವ್ವ ಜನಸಾಮಾನ್ಯರ ಅನುಕಂಪಗಳಿಸಿದ್ದು ಸಹಜವಾಗಿದೆ. ಶಿವಲಿಂಗರುದ್ರಸರ್ಜನ ಸಹೋದರನೊಬ್ಬ ಅವನಿಗಿಂತ ಮೊದಲೇ ತೀರಿಕೊಂಡಿದ್ದ. ಅವನ ಪತ್ನಿ ಜಾನಕಿಬಾಯಿ ತಾರುಣ್ಯದಲ್ಲಿಯೇ ವಿಧವೆಯಾದವಳು. ಅವಳ

* ಹೊಸಪೇಟೆ, ಬಳ್ಳಾರಿ ಜಿಲ್ಲೆ

ಬಗ್ಗೆಯೂ ಅನುಕಂಪ ಅಪೇಕ್ಷಿತವಾಗಿತ್ತು. ಆದರೆ ಅದು ಕಂಡು ಬರುವುದಿಲ್ಲ. ಇತಿಹಾಸದ ಪುಟಗಳಲ್ಲಿ ರೇಖಾಚಿತ್ರವಾಗಿ ಉಳಿದಿರುವ ಈರವ್ವನನ್ನು ಜನಪದರು ತುಂಬಾ ಹಚ್ಚಿ ಕೊಂಡಿದ್ದಾರೆ. ಅವಳ ಅಳಲನ್ನು ದುಃಸ್ಥಿತಿಯನ್ನು ಕಂಡು ಮಮ್ಮಲ ಮರುಗಿದ್ದಾರೆ. ತಮ್ಮ ಪ್ರತಿಕ್ರಿಯೆ ಮತ್ತು ಅನುಕಂಪ ಗಳನ್ನಾಧರಿಸಿ ಈರವ್ವನ ವರ್ಣರಂಜಿತ ಚಿತ್ರ ಬಿಡಿಸಿದ್ದಾರೆ. ಜನಪದರು ಬಿಡಿಸಿರುವ ಈ ಚಿತ್ರ ಅನೇಕ ಹಾಡುಗಳಲ್ಲಿ ಮೂಡಿನಿಂತಿದೆ. ಇತಿಹಾಸದ ದಾಖಲೆಗಳು ತಿಳಿಸಿದ ಅಥವಾ ಅಲಕ್ಷಿಸಿರುವ ಬಹಳಷ್ಟು ಅಂಶಗಳು ಜನಪದರ ಹಾಡುಗಳಲ್ಲಿ ವ್ಯಕ್ತವಾಗಿವೆ. ಕೆಲವು ಅಭಿಪ್ರಾಯಗಳೂ ಐತಿಹಾಸಿಕ ಅಂಶಗಳನ್ನು ಸಮರ್ಥಿಸುವಂತಿವೆ, ಅವುಗಳಿಗೆ ಪೂರಕವಾಗಿವೆ. ಇನ್ನು ಕೆಲವು ಇತಿಹಾಸಕ್ಕೆ ತದ್ವಿರುದ್ಧವಾಗಿವೆ.

ಬ್ರಿಟಿಷರ ಸೆರೆಯಾಳುಗಳಾಗಿ ಚೆನ್ನಮ್ಮ ಈರವ್ವ ಕಿತ್ತೂರು ಬಿಟ್ಟುಹೊರಟದ್ದು ಎಂಥ ನೋವಿನ ಅಪಮಾನದ ಅಸಹಾಯಕ ಸ್ಥಿತಿ? ಆಗ ಚೆನ್ನಮ್ಮ ಹೇಳುತ್ತಾಳೆ - "ಈರವ್ವನ ಸುಡಗಾಡಕ ದಾರಿ ಎರದಂಗಾತು" ಅವಳ ದುಃಸ್ಥಿತಿಯನ್ನು ಕಂಡು ಮರುಗಿದ ಜೀವ,

*ಕಂದನ್ನ ಹಡಿಲಿಲ್ಲ ಕೈಬೀಸಿ ನಡಿಲಿಲ್ಲ*
*ಗಂಡನ ಪುಣ್ಯ ಉಣಲಿಲ್ಲ / ಈರವ್ವ*
*ರಂಡಿತನ ನಿನಗೆ ಮೂಲಾತೊ*

-ಎಂದು ಹಾಡಿದೆ. ರಾಯಣ್ಣನ ಬಂಡಾಯಕ್ಕೆ ಈರವ್ವ ನೆರವು ನೀಡಿದುದನ್ನು ಜನಪದರು ಹೀಗೆ ಸ್ಮರಿಸಿಕೊಂಡಿದ್ದಾರೆ:

*ಮುಕ್ಕಣ್ಣ ಗತಿಯೆಂದು ಸಿಕ್ಕು ಸೆರೆಯಾಗಿದ್ದು*
*ಬಿಕ್ಕಿ ಅಳತಾಳ ಈರವ್ವ / ರಾಯಣ್ಣ*
*ಅಕ್ಕ ನಿಮ್ಮಪ್ಪ ಈ ರಾಯ*

ಸೆರೆಯಲ್ಲಿದ್ದು ತನ್ನ ದುಃಸ್ಥಿತಿಗಾಗಿ ವ್ಯಥೆ ಪಡುತ್ತಿದ್ದ ಈರವ್ವನನ್ನು ರಾಯಣ್ಣ ಸಮಾಧಾನಪಡಿಸಿರುವುದರ ಚಿತ್ರಣ ಇಲ್ಲಿದೆ.

ಈರವ್ವನನ್ನು ಚೆನ್ನಮ್ಮನಿಂದ ಅಗಲಿಸಿ ಹೊಂಗಲದಿಂದ ಕುಸುಗಲ್ಲಿಗೆ ಒಯ್ದ ಘಟನೆ ಜನಪದರ ಮನಸ್ಸನ್ನು ಕಲಕಿದೆ. ಅಸಹಾಯಕ ಸ್ಥಿತಿಯಲ್ಲಿದ್ದ ಅವಳನ್ನು ಒತ್ತಾಯದಿಂದ ಬೇರೆಕಡೆ ಸಾಗಿಸಿದ್ದು ಜನರ ದೃಷ್ಟಿಯಲ್ಲಿ ಅಮಾನವೀಯ ಕೃತ್ಯವೆನಿಸಿದೆ. ಅದಕ್ಕಾಗಿ ಇಡೀ ನಾಡು ಮರುಗಿದೆ. ದುಃಖ ಸಿಟ್ಟು ಅಸಹಾಯಕತೆ ಯಿಂದ ಮರುಗಿದ ಸಮುದಾಯ

*ಕಂಚಿನ ಹರಿವಾಣದಾಗ ಮಿಂಚ ಮುತ್ತ ಸುರಿವಿದ್ದಾಂಗ*
*ನಿಂತಿರುವ ಗ್ವಾಡಿ ಬಿರಿಯಲ್ಲಿ / ಈರವನ*
*ಒಯಿದವರ ಓಸ ಹುರಿಯಲಿ।*

- ಎಂದು ಶಾಪ ನೀಡಿದೆ. 'ಈರವ್ವ ಹೊಂಗಲ ಬಿಟ್ಟ ಹೋಗುವಾಗ, ನಿಂತವರು ಜನರು ಅಳತಾರವ್ವ'

'ಕಿತ್ತೂರ ಚೆನ್ನವ್ವನ ಸೊಸಿ' ಎಂಬ ಲಾವಣಿ ಒಂದು ಮಹತ್ವದ ದಾಖಲೆಯಾಗಿದೆ. ಇದರ ಕರ್ತೃ ಹೆಬ್ಬಳ್ಳಿ ಬಸವ ಅಂದಿನ ಘಟನೆಯನ್ನು ಸ್ವತಃ ಕಂಡವನಾಗಿರಬೇಕು.

*ಕಿತ್ತೂರ ಚೆನ್ನಮ್ಮನ ಸೊಸಿ ಹೊಂಗಲ ಬಿಟ್ಟ ಹೋಗವಾಗ*
*ಮಾಡಲಿದ್ದಳಣ್ಣ ಮಹದುಖ್ಖ*
*ಮತ್ತ ನಮ್ಮ ಮಲ್ಲಸರ್ಜ ಸತ್ತು ಹೋಗದಿದ್ದರ*
*ಹೊತ್ತು ಹೋಗುದ್ಯಾಕ ನಮ್ಮ ಬದಕಾ*

ಎಂದು ಪ್ರಾರಂಭವಾಗುವ ಲಾವಣಿ, ಈರವ್ವನ ಮೂಲಕ ಕಿತ್ತೂರ ಅವನತಿಯನ್ನು ಸ್ಮರಿಸಿಕೊಳ್ಳುವ ಕ್ರಮದಲ್ಲಿದೆ. ಸಮಕಾಲೀನ ಜನಪದ ಸಮುದಾಯವನ್ನು ಕಾಡಿದ ಈರವ್ವನ ಸ್ಥಳಾಂತರ ಲಾವಣಿಕಾರನನ್ನೂ ಕೆದಕಿದೆ. ಅವಳು ತನ್ನ ಕಿತ್ತೂರಿನ ಗತವೈಭವ ನೆನೆದು ಕಣ್ಣೀರಿಡುತ್ತಾಳೆ. ರಾಜ್ಯದ ಸಂಪತ್ತು, ಆಡಳಿತ, ಆಭರಣ ಸೀರೆ, ಶ್ರಾವಣದ ಆಚರಣೆ ಇವನ್ನೆಲ್ಲ ನೆನೆಸಿಕೊಂಡು ದುಃಖಿಸುತ್ತಾಳೆ: 'ಪಾಪಿ ಕೇಳ ನಮ್ಮಂಥಾ ಪಾತಕರ್ಯಾರಿಲ್ಲ' ಎಂದು ತನ್ನನ್ನು ತಾನು ಹಳಿದುಕೊಳ್ಳುತ್ತಾಳೆ. ಚೆನ್ನಮ್ಮನನ್ನು ಅಗಲುವ ಸಂದರ್ಭ ಅವಳಿಗೆ ಅಸಹನೀಯವೆನಿಸುತ್ತದೆ. ಅಲಗು ಕಟ್ಟಿ ಅದಕ್ಕೆ ಹಾಯಲು ಯತ್ನಿಸುವಳು. ಆಗ 'ತೊತ್ತುಗಳೆಲ್ಲರು ಸುತ್ತಲು ಮುತ್ತಿದರು.' ಅವಳ 'ನೀರು ಇಲ್ಲದ ಮಲ್ಲಿಗೆ ಬೇರ ಒಣಗಿ ಹೋದಂತೆ' ಆಗಿನ ಸ್ಥಿತಿ ನೋಡಿ ನಾಡೆಲ್ಲ ಮರುಗಿತು. ಈರವ್ವನನ್ನು ಕುಸುಗಲ್ಲಿಗೆ ಸಾಗಿಸುವಾಗ ರಾಯಣ್ಣನ ಭಯ ಬ್ರಿಟಿಷರಿಗಿತ್ತು ಅವಳ ಮೇಲೆ ಖಚಿತ ಆಪಾದನೆ -

*ರಾತ್ರಿ ರಾಯನಾಯಕನ್ನಚ್ಚಿ ದೌಡಮಾಡಿ*
*ಸುತ್ತಿನಹಳ್ಳಿ ಅವನ ಕೈಯಿಂದ ಸುಡಿಸ್ತಿ.*

- ಎಂಬುದಾಗಿದೆ. ಅವಳು ಅನ್ನ ಉದಕ ಬಿಟ್ಟಳು. 'ಒಣಗಿದ ಸುಣ್ಣದ್ಹಾಂಗ ದೇಹಸುಟ್ಟಳು'. ನವಲಗುಂದದ ಕಾಡಸಿದ್ದನಲ್ಲಿಗೆ ಹೋಗಿ ಜಂಗಮಾರಾಧನೆ ಮಾಡಿದಳು. 'ಒಡವಿವಸ್ತುಗಳನೆಲ್ಲ ಬಿಡದೆ ದಾನವ ಕೊಟ್ಟಳು'. ಧಾರವಾಡದಲ್ಲಿ 'ಮರಣಕಾಲ ಬಂದು ಪ್ರಾಣಬಿಟ್ಟಳು'. ಅವಳ ಶವಯಾತ್ರೆಯ ವೈಭವವನ್ನು ಲಾವಣಿಕಾರ ಮನದುಂಬಿ ಬಣ್ಣಿಸಿದ್ದಾನೆ 'ಮಹಾನಾಡ ಜನ ಸೇರಿ ನಿಂತು ಸುರಿಸ್ಯಾರೊ ಕಣ್ಣೀರು'. ದತ್ತಕ ಸುಳ್ಳಾದ ಮೇಲೆ ಸವಾಯಿ ಮಲ್ಲಸರ್ಜ ತಲೆಮರೆಸಿಕೊಂಡಿರಬೇಕು. ಈ ಲಾವಣಿ ಪ್ರಕಾರ ಅವನು ಧಾರವಾಡ ಶಹರದಲ್ಲಿದ್ದು ಈರವ್ವನ ಮರಣಕ್ಕೆ ದುಃಸ್ಥಿತಿಗೆ ಮರುಗಿ ದುಃಖಿಸಿದನು.

ಈರವ್ವನ ಕುರಿತಾದ ಇನ್ನೊಂದು ಜನಪದ ಹಾಡು - 'ಈರವ್ವನ ದುರಂತ ಮರಣ' - ಒಂದು ಮುಖ್ಯ ಸಂದೇಹವನ್ನು ಎತ್ತುತ್ತದೆ. ಈರವ್ವನಿಗೆ ವಿಷನೀಡಲಾಯಿತು ಅದರಿಂದಾಗಿ ಅವಳ ಸಾವು ಸಂಭವಸಿತೆಂದು ಈ ಹಾಡು ಹೇಳುತ್ತದೆ. ಈರವ್ವನದು ಸಹಜ ಸಾವಲ್ಲ. ಬ್ರಿಟಿಷರು ಮಾಡಿದ ಕೊಲೆ ಎಂಬ ನಂಬಿಗೆ ಜನಪದದಲ್ಲಿದ್ದಂತಿದೆ. ಇತರ ಹಾಡುಗಳಲ್ಲಿ ಬಂದಿರುವ 'ತೀರಿಕೊಂಡಳು ಬಾಲಿಕೆಯು ನೀಲವಜ್ರ ವಿಷ ಸೇವಿತದಿ' ಮತ್ತು 'ಈರವ್ವನ ಕೊಂದವರ ವಂಶ ಹುರಿಯಲಿ' ಎಂಬ ಮಾತುಗಳು

ಪ್ರಸ್ತುತ ಹಾಡಿನ ಅಭಿಪ್ರಾಯವನ್ನು ಸಮರ್ಥಿಸುತ್ತದೆ. ಈರವ್ವ ನನ್ನು ಧಾರವಾಡದ ಲೈನ ಪೇಟೆಗೆ, ಉಳವಿ ಚೆನ್ನಬಸವನ ದೇವಸ್ಥಾನಕ್ಕೆ ಕರೆತಂದರು. ಬೇಬರ ಎಂಬ ಬ್ರಿಟಿಷ್ ಅಧಿಕಾರಿ ಅವಳಿಗೆ ವಿಷದ ಗುಳಿಗೆಗಳನ್ನು ನೀಡಿದ. ನಿಟ್ಟುಸಿರು ಹತ್ತಿ ಕಿತ್ತೂರಕಡೆ ನೋಡಿ 'ಕಿತ್ತೂರು ವಾಡೇಕ ದಿಕ್ಕ ಇಲದಂಗಾತು' ಎಂದು ದುಃಖಿಸಿ ಜೀವ ಬಿಟ್ಟಳು. 'ಬೇಬರ ಸತ್ತಾಳವಳಂತ ನಗತಾನ' ಎಂಬ ಮಾತು ಆ ಅಧಿಕಾರಿಯ ಕ್ರೌರ್ಯವನ್ನು ಬಿಂಬಿಸುತ್ತದೆ.

ನಿಸ್ಬತ್‌ನ ಪತ್ರದಲ್ಲಿ ಈರವ್ವನ ಕಾಯಿಲೆ, ಅವಳಿಗೆ ನೀಡಿದ ಉಪಚಾರಗಳ ವಿವರವಿದೆ. ಅಲ್ಲಿ ಕೊಲೆಯ ವಾಸನೆ ಕಂಡು ಬರುವುದಿಲ್ಲ. ಹೆಬ್ಬಳ್ಳಿ ಬಸವನ ಲಾವಣಿಯಲ್ಲಿ 'ಮರಣಕಾಲ ಬಂದು ಪ್ರಾಣಬಿಟ್ಟಳು' ಎಂದಿದೆ. ಹೀಗಿರುವಾಗ ಈರವ್ವನನ್ನು ವಿಷ ಹಾಕಿ ಕೊಲ್ಲಲಾಯಿತೆಂಬ ವಿಚಾರ ಹೇಗೆ ಮೊಳೆಯಿತು? ಏಕೆ ಪ್ರಚಾರ ಪಡೆದುಕೊಂಡಿತು? ಇವುಗಳಲ್ಲಿ ಯಾವುದು ನಿಜ? ಈ ಬಗ್ಗೆ ಚರ್ಚೆಯಾಗಬೇಕಿದೆ.



## ಆಧಾರ ಗ್ರಂಥಸೂಚಿ


೧. ಸದಾಶಿವ ಒಡೆಯರ್., ರಾಣಿ ಚೆನ್ನಮ್ಮ.

೨. ನಾಗಣ್ಣ ಸಣ್ಣಕ್ಕಿ ಶಿವಲಿಂಗಪ್ಪ ಭಾವಿಕಟ್ಟಿ., ಜಾನಪದದಲ್ಲಿ ಕಿತ್ತೂರು.

೩. ಡಾ. ಸೂರ್ಯನಾಥ ಕಾಮತ., ಸಂಗೊಳ್ಳಿ ರಾಯಣ್ಣ

೪. ಡಾ. ಎಂ. ಎಂ. ಕಲಬುರ್ಗಿ., ಡಾ. ಚೆನ್ನಕ್ಕ ಪಾವಟೆ., ಕಿತ್ತೂರು ಸಂಸ್ಥಾನ ಸಾಹಿತ್ಯ.

ವಿಶ್ವನಾಥ ಶೇಟ್*

# ಕೆಳದಿ ಅರಸರ ವಿಚಿತ್ರತರ ನಾಟಕಶಾಲೆಯಿಂದ ಬಡಗುತಿಟ್ಟು ಯಕ್ಷಗಾನದ ಕಾಯಕಲ್ಪ

"ಮು*ಗುಳ್ದಿಕ್ಕೇರಿಯರಮನೆಯೊಳ್ ವಿಚಿತ್ರತರ ರಚನಾ ಕೌಶಲ್ಯದಿಂ ನಾಟಕ ಶಾಲೆಯಂ ನಿರ್ಮಾಣಗೈಸಿ...."*

- ಎಂದು ಕೆಳದಿ ನೃಪವಿಜಯದಲ್ಲಿ ಲಿಂಗಣ್ಣ ಕವಿ ಹೇಳಿಕೊಂಡಿದ್ದಾನೆ. ಯಕ್ಷಗಾನ ರಂಗಭೂಮಿಯಲ್ಲಿ ಪೂರ್ವ ಪೀಠಿಕಾ ಸಂಧಿಯಲ್ಲಿ ಹನುಮನಾಯಕ (ಕೋಡಂಗಿ) ಕೊಂಡಾಡುವ ಮಾತುಗಳು ಕೆಳದಿ ಅರಸರ ಸಾಧನೆ, ಬೋಧನೆ, ಬಿರುದು ಬಾವಲಿಗಳ ಕುರಿತದ್ದಾಗಿದೆ. ಸಮಕಾಲೀನ ಕವಿ ರತ್ನಾಕರಣ ವರ್ಣಿಯ ಭರತೇಶ ವೈಭವದಲ್ಲಿಯ ಬಣ್ಣನೆಗಳು, ಯಕ್ಷಗಾನದ ಬಯಲಾಟಕ್ಕೆ ಸಮನಾದ ಹೋಲುವೆಗಳುಳ್ಳವು.

ಡಾ. ಶಿವರಾಮ ಕಾರಂತರು 'ಯಕ್ಷಗಾನ ಬಯಲಾಟ' ಕೃತಿ ರಚನಾ ಸಂಶೋಧನೆಯ ಅವಧಿಯಲ್ಲಿ ಅವರ ಗಮನಕ್ಕೆ ಬಂದಿರುವುದನ್ನು ಪ್ರಸ್ತಾಪಿಸಿರುತ್ತಾರೆ. ಶಿಲ್ಪವಿಜ್ಞಾನ ಶಾಸ್ತ್ರದಲ್ಲಿ ಕೆಳದಿ ಅರಸರ ರಾಜಲಾಂಛನ "ಗಂಡಭೇರುಂಡ" ಚಿತ್ರ ಯಕ್ಷಗಾನ ಬಡಗುತಿಟ್ಟಿನ ರಾಜ ಪಾತ್ರದ ಶಿರೋಭೂಷಣ ರೂಪಗೊಂಡು ಪುಜಾರ್ಹ ಗಣಪತಿ ದೇವತೆಯ ಸ್ಥಾನ ಅಂಲಕರಿಸಿದೆ. ಹಾಗೂ ನಾಗ ಪೂಜಾಲಂಕಾರ, ಸಾಂಪ್ರದಾಯಿಕ ನೃತ್ಯಶೈಲಿ, ಯಕ್ಷ ಶೈಲಿಯ ಗೀತ, ನಾಗನ ಫಣಿ ಸಂಕೇತಿಸುವ ಶಿಲ್ಪ ವಿನ್ಯಾಸ ಆ ಭೂಷಣಗಳನ್ನು ನೃತ್ಯಾಭಿನಯಕ್ಕೆ ಪಾತ್ರೋಚಿತ ಆಹಾರ್ಯವಿನ್ಯಾಸಗೊಳಿಸಿ ಜನಾಕರ್ಷಣೆಗೊಳಿಸಿದ್ದು. ಈ ನಾಟಕ ಶಾಲೆಯ ಅದ್ಭುತ ಕೊಡುಗೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಈ ಬಗ್ಗೆ ತೌಲನಿಕವಾಗಿ ವಿದ್ವಾಂಸರಿಗೆ ತಿಳಿಸುವುದೇ ನನ್ನ ಪ್ರಬಂಧದ ಉದ್ದೇಶ.

ವರದೆಯ ದಡದಲ್ಲಿ ಮಲೆನಾಡ ನಡುವೆ ಕೆಳದಿ ಹಳ್ಳಿಬೈಲ ಮಲವ ಕುಟುಂಬದ ಸಾಹಸಿ ಪುರುಷರಾದ ಚೌಡಪ್ಪ ಭರಮಪ್ಪ ಯೋಧರಿಂದ ಸ್ಥಾಪನೆಗೊಂಡ ಸಂಸ್ಥಾನ ಪಡುಗಡಲಾಧೀಶ್ವರ, ಗಂಡಬೇರುಂಡ, ಕೋಟೆಕೋಲಾಹಲರೆಂಬ ಬಿರುದಿನ ರಾಜ ವೈಭವ ಇಂದು ಇತಿಹಾಸವಾಗಿದೆ. ೧೪೯೯ರಿಂದ ೧೭೬೩ ರವರೆಗೆ ದೀರ್ಘಕಾಲ ಆಳಿ, ನಾಡಿಗೆ ನೀಡಿದ ಸಾಂಸ್ಕೃತಿಕ ಧಾರ್ಮಿಕ, ರಾಜಕೀಯ ಕೊಡುಗೆ ಇಂದಿಗೂ ಜನಮನದಮನಿಯಲ್ಲಿ ಹಾಸುಹೊಕ್ಕಾಗಿದೆ.

ದಕ್ಷಿಣ ಭಾರತದ ನಾಡನುಡಿ, ಸಂಸ್ಕೃತಿ, ಸಾಹಿತ್ಯ ಸಮೃದ್ಧಿ ಸಮ್ರಾಟರಾದ ವಿಜಯನಗರ ದೊರೆಗಳ ಪ್ರೀತಿ ವಿಶ್ವಾಸ ಹೊಂದಿರುವ ಕೆಳದಿ ಅರಸರುಗಳು, ಕನ್ನಡ, ಸಂಸ್ಕೃತ ಭಾಷೆಯ ಹಿರಿಮೆ ಹೆಚ್ಚಿಸಿದವರು; ವಿಜಯನಗರದವರ ಆದರ್ಶ ಆಡಳಿತೆಯನ್ನು ಅನುಸರಿಸಿ, ಶೌರ್ಯ, ಸಾಹಸ, ಶಿಸ್ತಿನ ಆಡಳಿತೆಯಲ್ಲಿ ದಕ್ಷರೆನಿಸಿಕೊಂಡವರು. ಇವರು ಕಲೆ ಸಾಹಿತ್ಯದಲ್ಲಿ ಪ್ರಬುದ್ಧರು. ರಸಿಕರು ಆಗಿದ್ದರು. ಆಸ್ಥಾನದಲ್ಲಿ ವಿದ್ವಜ್ಜನರನ್ನು ಹೊಂದಿದ್ದರು. ಜನರ ಬೇಕು-ಬೇಡಗಳನ್ನು ಅರಿತು ಕೆಲಸ ಮಾಡುತ್ತಿದ್ದರೆನ್ನುವುದಕ್ಕೆ ಅವರ ಆಡಳಿತ ಪ್ರದೇಶದಲ್ಲಿ, ಸಮೀಕ್ಷೆಯಿಂದ ಹಾಗು ಆ ಕುರಿತಾಗಿ ಬರೆದಿರುವ ಇತಿಹಾಸಕಾರ ವಿದೇಶಿಪ್ರವಾಸಿ ಲೇಖಕರ ಲೇಖನಗಳು ಆಧಾರವಾಗಿವೆ.

ಮುಖ ಮನಸ್ಸಿನ ಕನ್ನಡಿ, ಮಾತು ಹೃದಯದ ಬಿಂಬ, ಕೃತಿ ಸಂಸ್ಕೃತಿಯ ಪ್ರತೀಕ, ಎನ್ನುವಂತೆ ಅರಸರ ಕಾಲದ ಸಾಹಿತ್ಯ, ಶಿಲ್ಪ, ಕಲೆ, ಅವರ ಸಾಮಾಜಿಕ ಕೆಲಸ ಸಂಸ್ಕೃತಿಯ ಚಿಂತನೆಯನ್ನು ಪರಿಚಯಿಸುತ್ತದೆ. ಆಳುವ ಅರಸರ ಅಭಿರುಚಿಯಂತೆ ಎಲ್ಲವೂ ಪ್ರಕಟಗೊಳ್ಳುತ್ತದೆ ಎನ್ನುವುದು ಇತಿಹಾಸಾವಲೋಕನದಿಂದ ತಿಳಿದುಬರುತ್ತದೆ. ಈ ನೆಲೆಯಲ್ಲಿ ಯೋಚಿಸಿದರೆ ಕೆಳದಿ ಅರಸರ ಸಂಸ್ಕೃತಿ, ಚಿಂತನೆ, ಕಲೆ, ಸಾಹಿತ್ಯ, ಶಿಲ್ಪಗಳೆಲ್ಲಾ, ಆಧ್ಯಾತ್ಮಿಕ ಧಾರ್ಮಿಕ ಸಾಂಸ್ಕೃತಿಕ ಬೋಧಕವಾಗಿವೆ. ಹಾಗಾಗಿ, ಕೆಳದಿ ವೆಂಕಟಪ್ಪ ನಾಯಕನ ಬಹುಮುಖ ಪ್ರತಿಭೆಯನ್ನು ತಿಳಿದ ಲಿಂಗಣ್ಣ ಕವಿ - "ಸರಸ ಸಂಗೀತಲೋಲಂ, ನಿರುಪಮಕೌಶಲ್ಯವಿವಿಧ ಸಾಹಿತ್ಯ ವಿಧಂ, ಸುರುಚಿರ ಸಕಲಕಲಾ ಸತ್ಪರಿಣತನೆಂದೆನಿಸಿ-" ಎಂದು ಬಣ್ಣಿಸಿದ್ದಾನೆ ಹಾಗು ವೆಂಕಟಪ್ಪ ನಾಯಕನಿಂದ ನಿರ್ಮಿತ ನಾಟಕ ಶಾಲೆಯ ಕುರಿತು - "ಮುಗುಳ್ದಿಕ್ಕೇರಿಯರ ಮನೆಯೊಳ್ ವಿಚಿತ್ರ ತೆರ ರಚನಾ ಕೌಶಲ್ಯದಿಂ ನಾಟಕ ಶಾಲೆಯಂ ನಿರ್ಮಾಣಗೈಸಿ"... ಎನ್ನುವ "ಕೆಳದಿ ನೃಪವಿಜಯ"ದ ವಾಕ್ಯವನ್ನು ತುಂಬಾ ಚರ್ಚಿಸುವಂತಿದೆ.

ನಾಟಕಶಾಲೆ, ನಾಟ್ಯಮಂದಿರ, ನಾಟಕರಂಗ ಹೆಸರಿನಿಂದ ದೃಶ್ಯರೂಪಕ ಪ್ರದರ್ಶನದ ಅನುಕೂಲಕ್ಕೆ ಸಂಯೋಜಿಸಿದ ಸ್ಥಳಕ್ಕೆ ಕರೆಯುವ ರೂಢಿ, ಆದರೆ, ವೆಂಕಟಪ್ಪ ದೊರೆ ನಿರ್ಮಿತ ನಾಟಕ ಶಾಲೆ 'ವಿಚಿತ್ರ ತೆರ' ಎನ್ನುವುದಾಗಿ ಪ್ರಸ್ತಾಪಿಸಿದ್ದಾನೆ. ವಿಚಿತ್ರ ಎನ್ನುವುದಕ್ಕೆ ಬೆರಗು, ಆಶ್ಚರ್ಯಕರವಾದ, ಅನೇಕ ಬಣ್ಣಗಳಿಂದ ಕೂಡಿದ, ನಾನಾ ಬಗೆಯ, ಸುಂದರವಾದ ಎಂದೆಲ್ಲಾ ಅರ್ಥ

* ಮು॥ಪೊ॥ ಹಾರ್ಸಿಕಟ್ಟಾ, ತಾ॥ ಸಿದ್ದಾಪೂರ (ಉ.ಕ.)

ವಿರುವುದು. ಈ ನಾಟಕ ಶಾಲೆಯಲ್ಲಿ ಬಗೆ ಬಗೆಯ ಚಿಂತನೆ, ಪ್ರಯೋಗಗಳು ನಡೆಯುತ್ತಿದ್ದವನ್ನುವುದು ಅವಲೋಕನೀಯ. ಇಲ್ಲಿ ಎಲ್ಲ ರೀತಿಯ ಕಲಾ ಪರಿಣಿತರು ಸೇರುವ, ಚರ್ಚಿಸುವ, ಪ್ರಾಯೋಗಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುವುದಲ್ಲದೇ, ಕಲಿಕಾಕೇಂದ್ರವೂ ಆಗಿತ್ತು. ಜನಾಕರ್ಷಣೀಯ ಜಾನಪದ ಯಕ್ಷಗಾನ, ಬಡಗುತಿಟ್ಟು, ಇಷ್ಟು ಮೈದುಂಬಿಕೊಂಡ ಕಲೆಯೆಂದು ಹೆಸರು ಪಡೆದುಕೊಳ್ಳಲು ಕೆಳದಿ ಅರಸರ ವಿಚಿತ್ರ ತೆರ ನಾಟಕ ಶಾಲೆಯೇ ಕಾರಣವಾಗಿದೆ.

ಡಾ. ಶಿವರಾಮ ಕಾರಂತರು 'ಯಕ್ಷಗಾನ ಬಯಲಾಟ'ದಲ್ಲಿ (ಪುಟ. ೩೩) ಈ ನಾಟಕ ಶಾಲೆಯ ಪ್ರಭಾವಕ್ಕೊಳಗಾಗಿ ಚಿಂತನೆ ನಡೆಸಿದ್ದಿದೆ. ಸಮಕಾಲೀನ ಮಹಾಕವಿ ರತ್ನಾಕರವರ್ಣಿಯ ಪದ್ಯಗಳನ್ನು ಉಲ್ಲೇಖಿಸಿ ಯಕ್ಷಗಾನದ ಪೂರ್ವ ಪೀಠಿಕಾ ಸಂಧಿಯ ಕ್ರಮವನ್ನು ಪ್ರಸ್ತಾಪಿಸಿದ್ದಾರೆ (ಕ್ರಿ.ಶ. ೧೫೫೭) ಹಾಗು, ಯಕ್ಷಗಾನಕ್ಕೆ ಅರ್ಥಪೂರ್ಣ ಸುಂದರ ಆಭೂಷಣಗಳನ್ನು ಹೊಂದಿಸಿ ಮೈದುಂಬಿಸಿದವರು ಇಕ್ಕೇರಿ, ಸಾಗರ, ಶಿಕಾರಿಪುರ, ಸೊರಬ, ಕುಮಟಾ, ಶಿರ್ಶಿಯ ಕಡೆಯಲ್ಲಿರುವ ಗುಡಿಗಾರರಿಂದ ಆಗಿದ್ದಿರಬೇಕೆಂದು ಹೇಳಿದ್ದಾರೆ. ಹಾಗು ಡಾ. ಸಾ. ಶಿ. ಮರುಳಯ್ಯನವರೂ "ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ" ಗ್ರಂಥದಲ್ಲಿ (ಪುಟ ೨೫೦-೫೨ ಹಾಗು ೨೬೮) ನಿರೂಪಿಸಿದ್ದಾರೆ. ಹಿರಿಯ ವೆಂಕಟಪ್ಪನಾಯಕನು ಇಕ್ಕೇರಿಯಲ್ಲಿ ಕಟ್ಟಿಸಿದ ನಾಟಕ ಶಾಲೆ ಕೇವಲ ಒಂದು ನಾಟಕ ರಂಗಭೂಮಿಯಾಗಿರಲಿಕ್ಕಿಲ್ಲ. ವಿಶೇಷವಾಗಿ ಕವಿ, ಕಲಾವಿದರ, ಪಂಡಿತರ ಸಮಾವೇಶಕ್ಕಾಗಿ ಮೀಸಲಿದ್ದ ಮಹಾಮಂದಿರವೆಂದಿರುವುದಲ್ಲದೇ, ತಮಿಳಿನ ಸಂಗಮ ಶಾಲೆಯಂತೆ, ಅನುಭಾವಿಗಳು ಕೂಡುವ ಅನುಭವ ಮಂಟಪದಂತೆ ಆಂಧ್ರ ಭೋಜ ಕೃಷ್ಣದೇವರಾಯನ ಆಸ್ಥಾನದ ವಿದ್ವನ್ಮಂಡಳಿ ಸೇರುತ್ತಿದ್ದ ಭವನಕ್ಕೆ "ಭುವನ ವಿಜಯ" ವೆಂದು ಕರೆದಂತೆ ಕರ್ನಾಟಕದ ನವಭೋಜನಾದ ಹಿರಿಯ ವೆಂಕಟಪ್ಪ ನಾಯಕನ ಆಳ್ವಿಕೆಯಲ್ಲಿ ಪಂಡಿತರು, ಕಲಾವಿದ ವಿದ್ವನ್ಮಣಿಗಳು ಇಕ್ಕೇರಿಯಲ್ಲಿ ಸೇರುತ್ತಿದ್ದ ಸ್ಥಳವನ್ನು ನಾಟಕ ಶಾಲೆಯೆಂದು ಹೆಸರಿಸಿ ಇದು ಒಂದು ಕಲಾಗಾರವಾಗಿತ್ತು, ಕನ್ನಡ ಕಲೆಗೆ ಚೈತನ್ಯ ರೂಪದ್ದಾಗಿತ್ತು, ಎಂದಿದ್ದಾರೆ.

ಯಕ್ಷಗಾನ ತೆಂಕುತಿಟ್ಟು ಕೇರಳ ದೊರೆ ಕೊಟ್ಟಾರಕ ಅರಸ (೧೫೫೦) ರಿಂದ ರೂಪಗೊಂಡಿದ್ದು ತಿಳಿದು ಬರುವಂತೆ ಯಕ್ಷಗಾನ ಬಡಗುತಿಟ್ಟು, ವೆಂಕಟಪ್ಪನಾಯಕನ ನಾಟಕ ಶಾಲೆಯ ಕೊಡುಗೆ ಎನ್ನುವುದು ಖಚಿತವಾಗುತ್ತದೆ.

೧. ಬಡಗು ತಿಟ್ಟು ಪ್ರಚಲಿತವಾಗಿರುವುದು ಅಂದಿನ ಕೆಳದಿ ನಾಯಕರ ಆಡಳಿತ ಪ್ರದೇಶ (ಅಂಕೋಲಾದಿಂದ ಉಡುಪಿ ಬಂಟವಾಳದವರೆಗೆ) ಇಂದಿಗೂ ಯಕ್ಷಗಾನ ರಂಗಭೂಮಿ ಯಲ್ಲಿ ಕೋಡಂಗಿ ಪಾತ್ರಧಾರಿ, ಅರಸರ ರಾಜಲಾಂಛನ ಬಿರುದು ಬಾವಲಿಗಳನ್ನು ಕೊಂಡಾಡುವ ಸಂಪ್ರದಾಯವಿದೆ.

೨. ಡಾ. ಶಿವರಾಮ ಕಾರಂತರಿಗೆ ಹೆಚ್ಚಿನ ಪ್ರಸಂಗ ಕೃತಿಗಳು ದೊರೆತಿರುವುದು, ಕೆಳದಿ ಅರಸರ ಆಡಳಿತ ಪ್ರದೇಶದಲ್ಲಿ.

೩. ಬಡಗುತಿಟ್ಟು ಯಕ್ಷಗಾನ ಸಾಂಪ್ರದಾಯಿಕ ಕಲಾತ್ಮಕ ಮೌಲ್ಯ ಹೊಂದಿದೆ. ಶೈವ, ಭಾಗವತ, ನಾಗ ಸಂಪ್ರದಾಯದ ಶಿಲ್ಪವನ್ನು ಸಂಕೇತಿಸುತ್ತದೆ.

೪. ಜಾನಪದ ಯಕ್ಷಗಾನ ಬಡಗುತಿಟ್ಟು ಮಾತ್ರ ಸಮಾನ ಕಲೆಗಳಾದ ದೊಡ್ಡಾಟ, ಮೂಡಲಪಾಯ, ಪಡುವಲ ಪಾಯ, ವೀಥಿನಾಟಕ, ರಾಮನಟ್ಟಂ. ದಾಸಿ ಆಟ, ಭಾಗವತರ ಆಟ, ಕೂತ್ತು ಇತ್ಯಾದಿಗಳಿಂದ ಭಿನ್ನವಾಗಿ ನೃತ್ಯ ಶಿಲ್ಪಗಳು ಇರುವುದು ತಿಳಿದುಬರುತ್ತದೆ ("*ಕರ್ನಾಟಕ ಜನಪದ ರಂಗಭೂಮಿ*"ಯಲ್ಲಿ ಡಾ. ಡಿ. ಕೆ. ರಾಜೇಂದ್ರ ಚರ್ಚಿಸಿದ್ದಾರೆ).

೫. ರಾಜ ಪಾತ್ರದ ಶಿರೋಭೂಷಣ (ಕಿರೀಟ) ಕೆಳದಿ ಅರಸರ ರಾಜ ಲಾಂಛನ 'ಗಂಡಭೇರುಂಡ' ಕಲಾತ್ಮಕ ರೂಪ ಗೊಂಡಿದೆ.

೬. ಕುಮಾರಪಾತ್ರಗಳ, ಸೇನಾನಾಯಕರ, ಗಂಧರ್ವ ಮತ್ತು ಕಿರಾತಾದಿ ಪಾತ್ರಗಳಿಗೆ ಕೇದಿಗೆ ಮುಂದಲೆ ಹಾಗೂ ದೊಡ್ಡ ಪಗಡೆ ಮತ್ತು ಅಡ್ಡ ಪಗಡೆ, ಶಿರೋಭೂಷಣಗಳು ನಾಗನಹೆಡೆಯ ಆಕೃತಿಯನ್ನು ಹೊಂದಿರುವದು ನೋಡುತ್ತೇವೆ.

೭. ಬಡಗುತಿಟ್ಟು ಯಕ್ಷಗಾನ ಆಡುವ ಪ್ರದೇಶ ಮೊದಲು ಅಹಿ ಕ್ಷೇತ್ರವೆಂದು, ನಾಗಖಂಡವೆಂದು ಕರೆದಿರುವರು. 'ಅಹಿ' ಎಂದರೆ ನಾಗ. ಈ ಕಲಾ ಸಂಸ್ಕೃತಿಯ ಸಂಕೇತ ಪಗಡೆ, ಕೇದಿಗೆ ಮಂದಲೆ.

೮. ಕೆಳದಿ ವೀರಭದ್ರ ದೇವಾಲಯದ ಮೇಲಛಾವಣಿಯಲ್ಲಿ ಮೂರು ಉಬ್ಬು ಚಿತ್ರಗಳಿವೆ. ೧. ಗಂಡಭೇರುಂಡ, ೨. ನಾಗಮಂಡಲ, ೩. ಸಹಸ್ರದಳ ಪದ್ಮ (ದಶದಳ ಪದ್ಮ)

೯. ನಾಗಸ್ಕಂದನ ಅಂಶವಾದದ್ದು, ಶಿವನಾಗನನ್ನು ಪೂಜಾರ್ಹ ನನ್ನಾಗಿ ಹರಿಸಿದ್ದು, ಸ್ಕಂದ ಪುರಾಣ ಸಹ್ಯಾದ್ರಿ ಖಂಡದಲ್ಲಿ ಹೇಳಿದೆ (ಕನ್ನಡ ವಿಶ್ವಕೋಶ - ನಾಗಾರಾಧನೆ - ಪುಟ ೧೬೮). ಭಾರತದ ಪಡುಗಡಲ ಸೀಮೆಯಾಗಿರುವ ಗೋಕರ್ಣದಿಂದ ಕನ್ಯಾಕುಮಾರಿಯವರೆಗೆ ಪರಶುರಾಮ ಕ್ಷೇತ್ರವೆಂದು ಪ್ರಾಚೀನ ಕಾಲದಲ್ಲಿ ನಾಗಖಂಡವೆಂದು ಹೆಸರಿತ್ತು. (ಶಿಖಾರಿಪುರ ಶಾಸನಾಧಾರ ೬೮೦-೬೯೬ ನಾಯರ್ಖಂಡ.)

೧೦. ಯಕ್ಷಗಾನ ಕಥಾಪ್ರಾರಂಭದಲ್ಲಿ ಸಭಾ ಲಕ್ಷಣದಲ್ಲಿ ಮಂಡಲ ನಾಯಕನಾದ ಸುಬ್ಬರಾಯನಿಗೆ ರಂಗಸ್ಥಳದಲ್ಲಿ ಪೂಜೆ ಸಲ್ಲುತ್ತದೆ.

೧೧. ನಾಗಾರಾಧನೆಯಿಂದ ಗೋವು, ಧನ, ಧಾನ್ಯ, ಆಯುಷ್ಯ, ಸಂತಾನ, ಸಮೃದ್ಧಿಗಾಗಿ ಆಚರಿಸಲ್ಪಡುತ್ತದೆ. ಕೆಳದಿ ರಾಜವಾಡೆಯ ನಾಗಮ್ಮ ದೇವಾಲಯದಲ್ಲಿ ಸರ್ಪ ದೋಷಕ್ಕೆ ಹರಕೆ ಸಲ್ಲಿಸುತ್ತಾರೆ. ಪ್ರತಿ ವರ್ಷ ವಿಜಯದಶಮಿಗೆ ಅಲ್ಲಿ ಜಾತ್ರೆ ಹಾಗೂ ಯಕ್ಷಗಾನ ಸೇವೆ, ಅನ್ನ ಸಂತರ್ಪಣೆಯನ್ನು ನಡೆಸುವ ರೂಢಿ ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ.

೧೨. ನಾಗ ಯೋಗಸಾಧನೆಯಲ್ಲಿ ಕುಂಡಲಿನಿ ಶಕ್ತಿ. ಶೈವ, ಶಾಕ್ತ, ವೈಷ್ಣವ, ಬೌದ್ಧ, ಜೈನ ಮುಂತಾದ ಮತ ಸಂಪ್ರದಾಯದವರಲ್ಲಿಯೂ ನಾಗ ಪೂಜಾರ್ಹ ದೇವತೆ.

೧೩. ಕೆಳದಿ ಇತಿಹಾಸದಲ್ಲಿ ಚೌಡಪ್ಪನಾಯಕನಿಗೆ ನಾಗದರ್ಶನ, ಗುಪ್ತನಿಧಿ ಸಂಗ್ರಹ, ನಾಗಮುರಿ ಕತ್ತಿ (ಖಡ್ಗ), ಲಭ್ಯವಾದದ್ದೊಂದು ಕತೆಯಾದರೂ, ಸತ್ಯ ಸಂಗತಿ. ಹಾಗೆ, ನಾಗ ಸಾಂಕೇತಿಕ ಕಲಾಭ್ಯುದಯಗೊಳಿಸಿದ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ.

೧೪. ಯಕ್ಷಗಾನ ಕೂಟ (ತಾಳಮದ್ದಲೆ) ಉತ್ತರ ಕನ್ನಡ, ದಕ್ಷಿಣ ಕನ್ನಡ, ಶಿವಮೊಗ್ಗಾ, ತೀರ್ಥಹಳ್ಳಿ, ಹೀಗೆ ಕೆಳದಿ ಆಡಳಿತ ಪ್ರದೇಶದಲ್ಲಿ ಉಳಿದುಬಂದಿದೆ. (ಡಾ. ಶಿವರಾಮ ಕಾರಂತ ಯಕ್ಷಗಾನ ಬಯಲಾಟ)

೧೫. ವೈದಿಕ ಬೋಧಾಯನದಲ್ಲಿ ನಾಗಾರಾಧನೆಯ ಪೂಜಾ ಪದ್ಧತಿ ನೆಡೆದು ಬಂದಿರುತ್ತದೆ.

ಶಿವನಿಗೆ ಆಭರಣ, ವಿಷ್ಣುವಿಗೆ ತಲ್ಪ, ಗಣೇಶನಿಗೆ ಉದರಬಂಧ, ಸುಬ್ರಮಣ್ಣನ ಅನನ್ಯ ರೂಪ, ಈ ನಾಗಫಣೆಯೇ ಪಗಡೆಯ ರೂಪ ಕಲಾತ್ಮಕತೆಯನ್ನು ಹೊಂದಿದೆ. ನಾಗಾರಾಧನೆಯಲ್ಲಿ ನಾಗಪಾತ್ರಿಗಳ ಕುಣಿತಕ್ಕೆ ಯಕ್ಷಗಾನ ಪಾತ್ರಧಾರಿಗಳ ನೃತ್ಯಕ್ಕೆ ನೇರ ಹೋಲಿಕೆ ಇರುವುದನ್ನು ಸವಿವರವಾಗಿ ಡಾ. ಶಿವರಾಮ ಕಾರಂತರ 'ಯಕ್ಷಗಾನ ಬಯಲಾಟ'ದಲ್ಲಿ ಓದಬಹುದು, ರಂಗಭೂಮಿಯಲ್ಲಿ ನೋಡಬಹುದು.

ಯಕ್ಷಗಾನ ಇದು ದಾಕ್ಷಿಣಾತ್ತರಲ್ಲಿಯ ಒಂದು ಗೀತಶೈಲಿ, - "ಯಕ್ಷೌಘಗೀತಮಪಿ ಗಾನಶೈಲಿಂ' ಎಂದು ಸಂಗೀತ ಶಾಸ್ತ್ರ ಪಂಡಿತರಾದ ಗೋವಿಂದ ದೀಕ್ಷಿತರು (ಕ್ರಿ.ಶ. ೧೬೨೦) ತಮ್ಮ "ಸಂಗೀತ ಸುಧೆ"ಯಲ್ಲಿ ಹೇಳಿದ್ದಾರೆ. ಸಾರಂಗದೇವ ವಿರಚಿತ "ಸಂಗೀತ ರತ್ನಾಕರ"ದಲ್ಲಿ ಜಕ್ಕ ಎಂಬುದು ಸಂಗೀತದ ಒಂದು ಶೈಲಿಗಿರುವ ಹೆಸರು ಎಂದು ಹೇಳಿದ್ದಾರೆ. "ಚಾಲಿರ್ಜಕ್ಕೇತಿ ಕೀರ್ತಿತಾ" ಜಕ್ಕ, ಎಕ್ಕಲು, ಎಕ್ಕ, ಜಕ್ಕಲು, ಯಕ್ಷ ಶಬ್ದಗಳು ಒಂದು ಗಾನಶೈಲಿಯನ್ನು ಹೇಳುತ್ತವೆ. ಈ ಶೈಲಿಯೊಂದಿಗೆ ನೃತ್ಯ, ಭಾಷೆ, ಭಾವ, ಆಹಾರ್ಯ (ಭರತಮುನಿ ಹೇಳಿದ ಆಂಗಿಕ, ವಾಚಿಕ, ಸಾತ್ವಿಕ ಆಹಾರ್ಯ) ಹೀಗೆ ನಾಲ್ಕು ಅಂಗಗಳನ್ನು ಪಡೆದು ಔಚಿತ್ಯಪೂರ್ಣವಾಗಿ ಪರಿಪುಷ್ಟಗೊಂಡ ಕಲೆಯೊಂದು ಧಾರ್ಮಿಕ ಸಂಕೇತಶಾಸ್ತ್ರ ಸಂಪ್ರದಾಯದ ಮಿತಿಯಲ್ಲಿ ಜನರೆದುರು ಬರಲು ಕೆಳದಿ ನಾಟಕ ಶಾಲೆಯೇ ಕಾರಣ. ಪೂರಕವಾಗಿ ಆಸ್ಥಾನ ಕವಿಗಳೇ ಹಲವರು ಯಕ್ಷಗಾನ ಕೃತಿಗಳನ್ನು ನೀಡಿದ್ದಾರೆ. ನಾಟಕಶಾಲೆಯ ಉಲ್ಲೇಖ "ಶಿವತತ್ವ ರತ್ನಾಕರ"ದಲ್ಲಿ ಹೇಳಿದೆ. ಜಾನಪದ ಕಲೆಯೊಂದು ರಾಜಾಶ್ರಯ ಪಡೆದು ಅರಮನೆಯ ಗೌರವಾದರ ಹೊಂದಿರುವದರಿಂದಲೇ ಮೇಲ್ದರ್ಜೆಯ ವಿದ್ವಾಂಸರ ಹಸ್ತಮಸ್ತಕಾನುಗ್ರಹದಿಂದ ಮೈದುಂಬಿಗೊಂಡ ಸಮೃದ್ಧ ಕಲೆಯಾಗಿದೆ. ಇಂದು, ಬಡಗುತಿಟ್ಟು ಯಕ್ಷಗಾನದ ಪ್ರತಿಯೊಂದು ಅಂಗವೂ ಸಂಶೋಧಕರ ಲೇಖಣಿಗೆ ಇಂಬು ನೀಡಿದೆ. ರಂಗದಲ್ಲಿ ನಟನೆಗೆ ಕೀರ್ತಿ ತಂದಿದೆ. ಗಾಯಕನಿಗೆ ಗೌರವ ಒದಗಿಸಿದೆ. ಕೆತ್ತನೆಯ ಕುಶಲಕರ್ಮಿಗೆ ಕೆಲಸ ನೀಡಿದೆ. ಹೆಚ್ಚಿನದಾಗಿ ಪ್ರೇಕ್ಷಕರಿಗೆ ರಮ್ಯಾದ್ಭುತ ಕಲೆಯ ರಸದೌತಣವಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ತುಳುನಾಡ ನಾಗಾರಾಧನೆ.**, ಐ.ಬಿ.ಎಚ್. ಪ್ರಕಾಶನ.
೨. ಡಾ|| ಶಿವರಾಮ ಕಾರಂತ., **ಯಕ್ಷಗಾನ ಬಯಲಾಟ.**
೩. **ಕನ್ನಡ ವಿಶ್ವಕೋಶ.**, (ನೋಡಿ ನಾಗಾರಾಧನೆ).
೪. (ಸಾ.ಶಿ. ಮರುಳಯ್ಯ)., **ಕೆಳದಿ ಅರಸರ ಕನ್ನಡ ಸಾಹಿತ್ಯ** .
೫. ವಿಶ್ವನಾಥ ಶೇಟ್., **ಆಹಾರ್ಯ ಕಮ್ಮಟ**, ವಾಙ್ಮಯ ಪ್ರಕಾಶನ, ಹೆಗ್ಗೋಡು.

ಹರಿಹರ ಶ್ರೀನಿವಾಸರಾವ್*

# ಜಲಶಾಸ್ತ್ರದ ಹಿನ್ನೆಲೆಯಲ್ಲಿ ಶ್ರೀ ವಾದಿರಾಜರ ತೀರ್ಥಪ್ರಬಂಧ

**ಕವಿ ಪರಿಚಯ :** ಶ್ರೀ ವಾದಿರಾಜರ ಕಾಲ ಕ್ರಿ. ಶ. ೧೪೮೦-೧೬೦೦.ನೂರಿಪ್ಪತ್ತುವರ್ಷಗಳಷ್ಟು ದೀರ್ಘಕಾಲ ಬಾಳಿದ ವೈಷ್ಣವ ಯತಿಗಳು ಇವರೊಬ್ಬರೇ ಎನ್ನಬಹುದು. ಕನಕದಾಸರ ಸಮಕಾಲೀನರು. ೧೧೨ ವರ್ಷ ಸನ್ಯಾಸ ಜೀವನವನ್ನು ನಡೆಸಿದ ಇವರು ಒಟ್ಟು ೧೦೯ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ೪ ಸ್ವತಂತ್ರ ಸಂಸ್ಕೃತ ಕಾವ್ಯಗಳು : ೧. ರುಕ್ಮಿಣೀಶ ವಿಜಯ (೧೨೪೧ ಶ್ಲೋಕಗಳು) ೨. ಸರಸ ಭಾರತೀ ವಿಲಾಸ (೭೦೦ ಶ್ಲೋಕಗಳು) ೩. ತೀರ್ಥಪ್ರಬಂಧಃ ೪. ಕವಿ ಕದಂಬ ಕಂಠ ಭೂಷಣ (೧೫ ಶ್ಲೋಕಗಳು) (೨೩೫ ಶ್ಲೋಕಗಳು)

ಸ್ವತಂತ್ರ ಸಂಸ್ಕೃತ ಗ್ರಂಥಗಳು: ೨೪; ಕನ್ನಡ ಕೃತಿಗಳು: ೧೩

**ತೀರ್ಥಪ್ರಬಂಧಃ :** ತೀರ್ಥಯಾತ್ರೆ ಎಂಬ ಪದಕ್ಕೆ ತೀರ್ಥಕ್ಷೇತ್ರ ಸಂದರ್ಶನ ಎಂಬ ಸಾಮಾನ್ಯ ಅರ್ಥವು ಪ್ರಚಾರ ದಲ್ಲಿದ್ದರೂ, ವಿಧ್ಯುಕ್ತವಾಗಿ ಮಾಡಲ್ಪಡುವ ತೀರ್ಥಕ್ಷೇತ್ರಗಳ ಶಾಸ್ತ್ರೋಕ್ತ ಸ್ಮರಣೆ, ಚಿಂತನ, ಸ್ನಾನ ಪಾನಾದಿ ರೂಪಸೇವೆ ಸಂದರ್ಶನವೇ ತೀರ್ಥಯಾತ್ರೆ ಎಂಬುದು ಭಾರತೀಯ ಪರಂಪರೆಯಲ್ಲಿ ಮುಖ್ಯಾರ್ಥವೆನಿಸಿದೆ. ಒಂದು ಸ್ಥಳವು ತೀರ್ಥ ಕ್ಷೇತ್ರವೆನಿಸಲು ಅಲ್ಲಿಯ ದೇಗುಲಗಳು ಜಲಾಕರಗಳು ಉತ್ತಮ ಪರಿಸರ ಇತ್ಯಾದಿಗಳು ಇರಬೇಕು. ಜಲಸ್ಥಾನಗಳು ತೀರ್ಥಗಳು ಹೇಗೆ ಆಗುತ್ತವೆ ಎನ್ನುವುದನ್ನು ವಿಜಯನಗರ ಕಾಲದ ಶಾಸನಗಳು ಹೀಗೆ ತಿಳಿಸುತ್ತವೆ: ೨ನೇ ಹರಿಹರನ ಕಾಲದಲ್ಲಿ[1] (ಕ್ರಿ.ಶ. ೧೩೮೦) ಎಡವಂಕ ಎನ್ನುವ ಒರತೆ ನೀರು ಉಕ್ಕುವ ಸ್ಥಳದಲ್ಲಿ ಕೊಳ ಒಂದನ್ನು ಬದ್ದೆಯನಾಯಕ ಎಂಬ ಬೇಟೆಕಾರನು ನಿರ್ಮಿಸಿದ. ಆತನು ರಾಜನ ಅರಮನೆಯಲ್ಲಿ ಸೇವಕನಾಗಿದ್ದ. ಈ ಪುಷ್ಕರಣಿಯನ್ನು ಮೈಲಾರದೇವರ ದೇವಸ್ಥಾನ ಪ್ರತಿಷ್ಠಾಪನಾ ಸಂದರ್ಭದಲ್ಲಿ ಕಟ್ಟಲಾಯಿತು. ಈ ಕಾರಣದಿಂದಲೇ ಆ ದೇವರಿಗೆ 'ಒರತೆಯ ಮೈಲಾರ ದೇವ'ನೆಂದು ಹೆಸರು ಬಂದಿತು. ಅದರ ಪಕ್ಕದಲ್ಲಿಯೇ ಒಂದು ಬನ್ನಿ ಮರವನ್ನೂ ನೆಟ್ಟು ಬೆಳೆಸಲಾಯಿತು. ಒರತೆ ಕುಂಡವು ದೇವಸ್ಥಾನದ ಉತ್ಸವಾದಿಗಳಿಗೂ ಬಳಕೆಯಾಗುತ್ತಿತ್ತು. ಕ್ರಿ.ಶ. ೧೩೭೭ರಲ್ಲಿ ಭಕ್ತ ನಾಗಪ್ಪನೆಂಬುವನು ಒಂದು ಭಾವಿಯನ್ನು ಸವೆಸಿ, ಅದರ ಪಕ್ಕದಲ್ಲಿ ಅಶ್ವತ್ಥ ಗಿಡವೊಂದನ್ನು ನೆಟ್ಟನು. ಇದೇ ಕಾರಣದಿಂದಲೇ ಆ ಸ್ಥಳವನ್ನು "ತೀರ್ಥ"ವೆಂದು ಕರೆಯಲಾಗಿದೆ. ಹಂಪೆಯಲ್ಲಿಯೇ ದೊರೆಯುವ ಪಿ.ಡಿ.ಬಿ. ೨೭ನೇ ಶಾಸನದಿಂದ ಈ ವಿಷಯ ತಿಳಿದುಬರುತ್ತದೆ. ಇದೇ ಭಕ್ತ ನಾಗಪ್ಪನು ತನ್ನ ಗುರುಗಳಾದ ಕ್ರಿಯಾಶಕ್ತಿ ಒಡೆಯರ ಆಜ್ಞೆಯ ಮೇರೆಗೆ ಇನ್ನೊಂದು ಬಾವಿಯನ್ನು ತೋಡಿಸಿದನು. ಈ ಬಾವಿಯೂ ವಿನಾಯಕ ದೇವಸ್ಥಾನ ಮತ್ತು ಅಶ್ವತ್ಥ ವೃಕ್ಷದ ಜೊತೆಗೇ ಇರುವುದನ್ನು ಪಿ.ಡಿ.ಬಿ. ೨೬ನೇ ಶಾಸನವು ಉಲ್ಲೇಖಿಸುತ್ತದೆ. ಹೀಗೆ ಒಂದು ದೇವಸ್ಥಾನ ಅದರ ಪಕ್ಕದಲ್ಲಿಯ ಪುಷ್ಕರಣಿ, ಹೊಂಡ, ಅಥವಾ ಕೊಳ ಇತ್ಯಾದಿ ನಿರ್ಧಾರಗಳನ್ನು ನಿರ್ಮಿಸಿ ಅದರ ಆವರಣದಲ್ಲಿ ಅಶ್ವತ್ಥ, ಬನ್ನಿಮರ ಇತ್ಯಾದಿ ವಿಶೇಷ ವೃಕ್ಷಗಳನ್ನು ಬೆಳೆಸಿ ಅವಕ್ಕೆ ಶಾಸ್ತ್ರಗಳಲ್ಲಿ ವಿವರಿಸಿರುವಂತೆ ವಿಧಿಯುಕ್ತ ಪೂಜಾದಿ ಕಾರ್ಯಗಳನ್ನು ನಡೆಸಿ ಹಲವಾರು ದಾನಗಳನ್ನು ಕೊಟ್ಟು ಪೂಜಾದಿಕಾರ್ಯಗಳನ್ನು ನಡೆಸಿ ನಂತರ ಆ ಕ್ಷೇತ್ರವನ್ನು ತೀರ್ಥಕ್ಷೇತ್ರಗಳೆಂದು ಘೋಷಿಸಲಾಗುತ್ತಿತ್ತು. ಇಂಥವೇ ಮನಸ್ಸು ದೇಹ ಎರಡಕ್ಕೂ ಸಮಾಧಾನ ಕೊಡುವಂಥವು ಎನ್ನುವುದು ನಮ್ಮ ಸಾಂಸ್ಕೃತಿಕ ನಂಬಿಕೆ. ತೀರ್ಥಯಾತ್ರೆಗೆ ಹೊರಡುವ ಮೊದಲು ಆಯಾ ಕ್ಷೇತ್ರಗಳ ಮಹತ್ವ, ಪೌರಾಣಿಕ, ಐತಿಹಾಸಿಕ, ಸ್ನಾನಾದಿಗಳ ವಿವರ ಇತ್ಯಾದಿಗಳನ್ನು ತಿಳಿದಿರಬೇಕಾಗುತ್ತದೆ. ಅದಕ್ಕೆ ತಕ್ಕ ಮಾನಸಿಕ, ದೈಹಿಕ, ಆರ್ಥಿಕ ಸಿದ್ಧತೆಗಳು ಪೂರ್ವಭಾವಿ ಯಾಗಿರಬೇಕು. ವಾದಿರಾಜರು ತಮ್ಮ ಸಂದರ್ಶನ ವ್ಯಾಪಕ ಸಂಚಾರದ ಐತಿಹಾಸಿಕ ದಾಖಲೆಯಾಗಿ ನದಿ, ನಗರ ಪುಣ್ಯ ಕ್ಷೇತ್ರಗಳ ಸಾರ ಸಂಗ್ರಹವಾಗಿ, ತೀರ್ಥಪ್ರಬಂಧವನ್ನು ರಚಿಸಿದ್ದಾರೆ. ಒಟ್ಟು ೨೩೫ ಶ್ಲೋಕಗಳಿರುವ ಈ ಸಂಸ್ಕೃತ ಕೃತಿಯಲ್ಲಿ ಕ್ರಮವಾಗಿ ಪಶ್ಚಿಮ, ಉತ್ತರ, ಪೂರ್ವ ಮತ್ತು ದಕ್ಷಿಣ ಎಂಬ ಹೆಸರುಗಳುಳ್ಳ ೪ ಪ್ರಬಂಧಗಳನ್ನು ಒಳಗೊಂಡಿರುವ ೧೬ನೇ ಶತಮಾನದಲ್ಲಿ ರಚಿತವಾಗಿರುವ, ಸಂಸ್ಕೃತ ಭಾಷೆಯಲ್ಲಿ 'ಪ್ರವಾಸ ಸಾಹಿತ್ಯ' ಪ್ರಕಾರಕ್ಕೆ ಸೇರುವ ಒಂದು ಅಪರೂಪ ಕೃತಿ. ಭರತಖಂಡದ[2] ನದಿ, ನದ, ತೀರ್ಥಗಳನ್ನು ಹೀಗೆ ೪ ಖಂಡಗಳನ್ನಾಗಿ ೧೬ನೇ ಶತಮಾನದಲ್ಲಿಯೇ ವೈಜ್ಞಾನಿಕವಾಗಿ ವಿಭಾಗಿಸಿರುವುದೂ, ನದಿಗಳ ಉಗಮಸ್ಥಾನದಿಂದ ಪ್ರಾರಂಭವಾಗಿ ಸಮುದ್ರ ಸೇರುವತನಕ ತಾವು ಸಂದರ್ಶಿಸಿದ, ಕೇಳಿದ ತೀರ್ಥಕ್ಷೇತ್ರಗಳ ವರ್ಣನೆ ಇಲ್ಲಿವೆ. ವಿಶೇಷವೆಂದರೆ ೧೯೮೦ರ ನಂತರ ಮಾತ್ರವೇ ಕೇಂದ್ರ ಜಲ ಆಯೋಗದವರು ಭಾರತದ ನದಿಗಳನ್ನು ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಎಂದು ವಿಭಾಗಿಸಿದ್ದಾರೆ. ಆದರೆ ವಾದಿರಾಜರು ತೀರ್ಥಕ್ಷೇತ್ರಗಳನ್ನು ನಾಲ್ಕು ರೀತಿಯ ನದೀಪಾತ್ರಗಳಲ್ಲಿ ತಮ್ಮ

* ೭೫/೧೫, 'ಸಮರ್ಥ', ಹೊಸ ವಿಕಾಸ್ ಶಾಲೆ ಎದುರು ೫ನೇ ಬ್ಲಾಕ್, ೩ನೇ ಪೇಸ್
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫, ಫೋನ್ : ೬೬೯೭೭೩೬

ಕಾಲಕ್ಕೆ ಗುರುತಿಸಿ ವಿಭಾಗಿಸಿರುವುದು ಒಂದು ವಿಶೇಷ ಸಂಗತಿಯೇ ಸರಿ: ಎರಡನೆಯದಾಗಿ ಅವರ ಸಮಾಧಿ ಸ್ಥಳವಾದ ಸೋದೆ (ಉತ್ತರ ಕನ್ನಡಜಿಲ್ಲೆ)ಯ ಸುತ್ತಮುತ್ತ ಹಲವಾರು ಪುಷ್ಕರಣಿ, ದೇವಸ್ಥಾನಗಳನ್ನು ನಿರ್ಮಿಸಿದ್ದು ಇನ್ನು ಕೆಲವನ್ನು ಜೀರ್ಣೋದ್ಧಾರ ಮಾಡಿರುತ್ತಾರೆ. ಇವುಗಳಲ್ಲಿ ಪ್ರಮುಖವಾದವು ಪಂಚಸರೋವರಗಳಾದ ಧವಲಂಗಂಗಾ ಅಮೃತಗಂಗಾ, ಶೀತಲಗಂಗಾ, ಅಂತರಗಂಗಾ, ಪಾತಾಳಗಂಗಾ, ಹಯಗ್ರೀವ ಸರೋವರವೆಂಬ ತಟಾಕ ವಾಸ್ತುಶಿಲ್ಪದ ವಿಶಿಷ್ಟತೆಯಿಂದ ನಿರ್ಮಿಸಲಾಗಿರುವ ತ್ರಿವಿಕ್ರಮ ದೇವಾಲಯ, ಚಂದ್ರಮೌಳೇಶ್ವರ, ಗೋಪಾಲಕೃಷ್ಣ ದೇವಸ್ಥಾನಗಳು ನೋಡುಗರನ್ನು ಆಕರ್ಷಿಸುತ್ತಿವೆ. ದಟ್ಟ ಮಲೆನಾಡಿನ ಮಧ್ಯ ಸುಂದರ ಸ್ಥಳಗಳನ್ನು ಆಯ್ದು ನಿರ್ಮಿಸಿರುವ ಪಂಚಸರೋವರಗಳು ಹಿಮಾಲಯದ ಧವಳಗಂಗಾ ಉಡುಪಿಯ ಮಧ್ವ ಸರೋವರಗಳನ್ನು ಜ್ಞಾಪಕಕ್ಕೆ ತರುತ್ತವೆ. ಒಮ್ಮೆ ಇಲ್ಲಿ ಮಿಂದರೆ ಮೈ ಮನಗಳು ಪುಳಕಿತಗೊಳ್ಳಲು, ಇರುವ ಮುಖ್ಯ ಕಾರಣಗಳಿವು; ಮೋಡಗಳ ಮಂಜು ನೇರವಾಗಿ ನೀರಿನ ರೂಪತಳೆದು ಗಿಡಮೂಲಿಕೆಗಳ ಮೂಲಕ ಹರಿದು ಕೊಳವನ್ನು ಸೇರುವುದರಿಂದ ಆ ನೀರು ಉತ್ತಮ ಔಷಧೀಯ (*Herbal water*) ಗುಣಗಳನ್ನು ಹೊಂದಿರುತ್ತದೆ. ನೀರಿನಲ್ಲಿ ಕರಗಿರುವ ಹಸಿರಿನ ಒಡಲಿನಿಂದ ಹೊಸತಾಗಿ ಹುಟ್ಟಿದ (*Fresh oxygen*) ಆಮ್ಲಜನಕದ ಪ್ರಮಾಣ ನೀರಿನ ಶುಚಿ ರುಚಿತ್ವಗಳನ್ನು ಹೆಚ್ಚಿಸುತ್ತದೆ. ಇನ್ನು ಇತಿಹಾಸಕ್ಕೆ ಬಂದರೆ ಸೋದೆಯ ಬಳಿಯಲ್ಲಿಯೇ ಹರಿಯುವ ಶಾಲ್ಮಲೀ ನದಿಯ ತೀರದಲ್ಲೇ ವಾದಿರಾಜರು ಅನೇಕ ವರ್ಷ ತಪೋನಿರತರಾಗಿದ್ದರೆಂದು ಅವರ ಚರಿತ್ರೆಯಲ್ಲಿ ಉಕ್ತವಾಗಿದೆ. ಆದ್ದರಿಂದ ಅದನ್ನು 'ತಪೋವನ'ವೆನ್ನುವರು. ಇಲ್ಲಿ ತಪೋನಿರತರಾಗಿದ್ದಾಗಲೇ ಶತ್ರುಗಳಿಂದ ಪರಾಜಿತನಾಗಿದ್ದ ಸೋದೆಯ ಅರಸಪ್ಪನಾಯಕನು ಇವರನ್ನು ಶರಣು ಹೊಕ್ಕನೆಂದೂ, ಅವರ ಅನುಗ್ರಹದಿಂದ ಶತ್ರುಗಳನ್ನು ಸೋಲಿಸಿ ಪುನಃ ರಾಜ್ಯ ಪಡೆದ ನಂತರ ಅವರ ಶಿಷ್ಯನಾದನು. ಈ ನದಿಯನ್ನು ವರ್ಣಿಸುವ ಒಂದು ಶ್ಲೋಕ ಹೀಗಿದೆ:

*ಭರ್ತುರಗ್ರೇ ಸ್ವಲಾವಣ್ಯ ವಿಸ್ತೃತೇರವಿವೇಕಿನೀಮ್।*
*ಸ್ವಾಸೇವಿತಾಂ ಸಖೀಮೇತಾಂ ಸರ್ವಸೇವ್ಯಾಂ*
*ಕರೋತಿಸಾ॥* ೩

**ಅನು** : ಭರ್ತುಃ-ಸ್ವಾಮಿಯಾದ ಸಮುದ್ರ ರಾಜನ; ಅಗ್ರೇ-ಎದುರಿನಲ್ಲಿ; ಸ್ವಲಾವಣ್ಯ, ವಿಸ್ತೃತೇಃ- ತನ್ನ ಲಾವಣ್ಯದ (ಸೌಂದರ್ಯ ಮತ್ತು ಸಮುದ್ರವನ್ನು ಸೇರಿದ್ದರಿಂದ ಉಂಟಾದ ಲವಣ ಭಾವ. ಇಲ್ಲಿ ಲಾವಣ್ಯದ ಮತ್ತು ಅವಿವೇಕಿನೀ - ಎಂಬಲ್ಲಿ ಶ್ಲೇಷಾಲಂಕಾರವಿದೆ.) ವಿಸ್ತಾರದಿಂದಾಗಿ, ಅವಿವೇಕಿನೀಂ - ವಿವೇಕ ರಹಿತಳಾದ (ಇದು ನದಿಯೇ ಜಲ ಇದು ಸಮುದ್ರ ಜಲ ಎಂದು ಗುರುತಿಸಲು ಅಸಾಧ್ಯವಾದ); ಸ್ವಾಸೇವಿತಾಂ - ತನ್ನವರಿಂದ ಸೇವಿಸಲ್ಪಡದಿರುವ; ಸಖೀಂ ಏತಾಂ - ತನ್ನ ಸಖಿ (ಸವತಿ) ಯಾದ ಈ ನದಿಯನ್ನು ; ಸಾ - ಆ ಭಾಗೀರಥಿಯು; ಸರ್ವಸೇವ್ಯಾಂ - (ತನ್ನ ಸನ್ನಿಧಾನವಿರುವ ಆ ಒಂದು ದಿನದ ಮಟ್ಟಿಗೆ) ಸರ್ವರಿಂದಲೂ ಸ್ನಾನಪಾನಾದಿಗಳ ರೂಪ ಸೇವನೆಗೆ ಅರ್ಹಳನ್ನಾಗಿ; ಕರೋತಿ - ಮಾಡುವಳು. ಶಾಲ್ಮಲೀ ನದಿಯು ಶಿರಸಿಯ ಬಳಿ ಲಿಂಗದ ಕೋಣ ಎಂಬಲ್ಲಿ ಹುಟ್ಟಿ ಸೋದೆಯ ಬಳಿ ಹರಿದು ಬೇಡ್ತಿ ನದಿಯನ್ನು ಸೇರಿ 'ಗಂಗಾವಳಿ' ಎಂಬ ಹೆಸರನ್ನು ಪಡೆಯುತ್ತದೆ. ಅನಂತರ ಅಂಕೋಲಕ್ಕೆ ೮ ಕಿ.ಮೀ. ಉತ್ತರದಲ್ಲಿ 'ಗಂಗಾವಳಿ' ಎಂಬಲ್ಲಿ ಅರಬ್ಬೀ ಸಮುದ್ರವನ್ನು ಸೇರುತ್ತದೆ. ಅಲ್ಲಿ ಒಂದು ಗಂಗಾದೇವಿಯ ದೇವಸ್ಥಾನವೂ ಇದ್ದು ಗಂಗಾಷ್ಟಮಿಯಂದು ವಿಶೇಷ ಪೂಜೆ ನಡೆಯುತ್ತದೆ. ಗಂಗಾಷ್ಟಮಿಯಂದು ಈ ನದಿಯಲ್ಲಿ ಗಂಗೆಯು ಆಗಮಿಸುವ ಪ್ರಸಿದ್ಧಿ ಅಲ್ಲಿಯ ಜನಗಳಲ್ಲೂ ಉಂಟು. ಇದನ್ನೇ ಕವಿ ಗುರುವು ಇಲ್ಲಿ ಪ್ರಕಾರಾಂತರದಿಂದ ವರ್ಣಿಸಿದ್ದಾರೆ. ಸಂಗಮ ಸ್ಥಳದಲ್ಲಿ ಸಮುದ್ರ ಜಲದಿಂದ ಸಂಪರ್ಕ ಹೊಂದುವ ಶಾಲ್ಮಲಿಯು ಉಪ್ಪಾಗಿರುವುದರಿಂದ ಜನರು ಅದನ್ನು ಸ್ನಾನಪಾನಾದಿಗಳಿಗೆ ಉಪಯೋಗಿಸುವುದಿಲ್ಲ. ಆದರೆ ಗಂಗಾಷ್ಟಮಿಯಂದು ಗಂಗಾದೇವಿಯ ಆಗಮನದಿಂದ ನೀರು ಸಿಹಿಯಾಗುವುದರಿಂದ ಅಂದು ಮಾತ್ರ ಎಲ್ಲರೂ ಅದನ್ನು ಸೇವಿಸುವರು ಎಂದು ಭಾವ; ಸಮುದ್ರ ಸಂಗಮದ ಬಳಿ ಶಾಲ್ಮಲಿಯು ಗಂಗಾಷ್ಟಮಿಯಂದು ಮಾತ್ರ ಸರ್ವಸೇವ್ಯಳಾಗಲು ಅದರಲ್ಲಿಯ ಗಂಗಾ ಸನ್ನಿಧಾನವೇ ಕಾರಣ ಎಂದು ಭಾವ. ಹೀಗೆ ತಾವು ಸಂದರ್ಶಿಸಿದ ಕ್ಷೇತ್ರಗಳಲ್ಲಿ ತಾವು ಕಂಡದ್ದನ್ನು ಕೇಳಿದ್ದನ್ನು ತಮ್ಮ ಕಾವ್ಯ ಪ್ರತಿಭೆಯಿಂದ ತೀರ್ಥಪ್ರಬಂಧದಲ್ಲಿ ನಮಗೆ ಜ್ಞಾನದೀವಿಗೆಯಾಗಿ ಕೊಟ್ಟಿದ್ದಾರೆ.

***"ತೀರ್ಥಪ್ರಬಂಧ – ಇಂದು"***: ಮೇಲೆ ತಿಳಿಸಿದಂತೆ ನೂರಾರು ತೀರ್ಥಕ್ಷೇತ್ರಗಳ ಬಗ್ಗೆ ಒಳ್ಳೆಯ ಮಾಹಿತಿ ಸಿಗುತ್ತದಾದರೂ, ಇಲ್ಲಿ ನಾನು ಕಂಡ ಕೆಲವು ಸ್ಥಳಗಳಾದ ಹರಿಹರ, ಬಿದಿರಹಳ್ಳಿ (ವೇಣುಪುರಿ), ವಿಠ್ಠಲಾಪುರ ರಂಗಾಪುರ, ಮಾಗಳಗಳ ಇಂದಿನ ಸ್ಥಿತಿಯನ್ನೂ ಹಾಗೂ ಮುಂದೆ ಇವುಗಳಿಗೆ ಉಂಟಾಗಬಹುದಾದ ಹಾನಿಯನ್ನೂ ಕುರಿತಂತೆ ಸಂಕ್ಷಿಪ್ತವಾಗಿ ಈ ಪ್ರಬಂಧದಲ್ಲಿ ಚರ್ಚಿಸಲಾಗಿದೆ.

***ಹರಿಹರ***

*ಮುರಹರ ಪುರಹರ ಲಕ್ಷ್ಮೀ ಪಾರ್ವತೀ ಕೇಲಿ ಲೋಲ*
*ಸ್ಫುರದ ಸಿತಾಂಗಾಸಹ್ಯ ಚಕ್ರ ತ್ರಿಶೂಲ।*
*ಪರತರ ಗುರುಮೂರ್ತೇ ಪಾವನಾರ ಕೀರ್ತೇ*
*ಹರಿಹರ ತವ ಪಾದಾಂಭೋಜಯುಗ್ಮಂ ನತೋಽಸ್ಮಿ*
*॥ ಶ್ಲೋ. ೫೯॥*

ಭಾವಾರ್ಥ : ಮುರಹರನೂ, ಪುರಹರನೂ ಆದ ಲಕ್ಷ್ಮೀ, ಪಾರ್ವತೀ ವಿಲಾಸದಲ್ಲಿ ಆಸಕ್ತನಾದ ಉಜ್ವಲವಾದ ಕಪ್ಪು ಬಿಳುಪು

ಶರೀರದ (ಶತ್ರುಗಳಿಂದ) ಸಹಿಸಲು ಅಶಕ್ಯವಾದ ಚಕ್ರ, ತ್ರಿಶೂಲಗಳನ್ನುಳ್ಳ ಸರ್ವೋತ್ತಮನೂ, ಉಪದೇಶಕನೂ ಆದ, ಪಾವನವೂ ಅಪಾರವೂ ಆದ ಕೀರ್ತಿಯುಳ್ಳ ಎಲೈ ಹರಿಹರನೇ ನಿನ್ನ ತಾವರೆಯಂತಹ ಎರಡು ಪಾದಗಳಿಗೆ ವಂದಿಸುವೆನು.

ಈ ಹರಿಹರ ಕ್ಷೇತ್ರವು ತುಂಗಭದ್ರಾ ನದಿ ತೀರದ ಈಗಿನ ದಾವಣಗೆರೆ ಜಿಲ್ಲೆಯ ಒಂದು ಮುಖ್ಯ ಪಟ್ಟಣ. ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕ (ಹಳೇ ಮೈಸೂರು ಪ್ರಾಂತ್ಯ)-ಇವುಗಳ ಭೌಗೋಳಿಕ ಪ್ರಾಕೃತಿಕ ಮೇರೆ. ಕದಂಬರು, ಹೊಯ್ಸಳರೂ, ಉಚ್ಚಂಗಿ ಪಾಂಡ್ಯರ ಕಾಲದಲ್ಲಿಯೂ ಇದೊಂದು ಆಯಕಟ್ಟಿನ ಪ್ರದೇಶವಾಗಿದ್ದಿತು. ಫ್ಲೀಟ್ ಮತ್ತು ರೈಸ್‌ರವರು ತಮ್ಮ ಶಾಸನಾಧ್ಯಯನ ಕ್ರಮಕ್ಕೆ ಇದನ್ನೇ ಭೌಗೋಳಿಕ ಮೇರೆಯನ್ನಾಗಿ ಉಪಯೋಗಿಸಿದ್ದಾರೆ. ಕ್ರಿ. ಶ. ೬ನೇ ಶತಮಾನದಿಂದಲೇ ಹರಿಹರವು ಪ್ರಸಿದ್ಧಿಯಾಗಿರುವುದನ್ನು ಇಲ್ಲಿಯ ಶಾಸನಗಳು ಹೇಳುತ್ತವೆ. ಕ್ರಿ.ಶ. ೧೨೭೭ರಲ್ಲಿ ದಾವಣಗೆರೆ ಶಾ. ಸಂಖ್ಯೆ ೫೯) ಮಹಾದೇವ ಎನ್ನುವ ಯಾದವ ರಾಮಚಂದ್ರನ ಮಗ ಕೊಂಕಣ, ಗೌಳ, ಉತ್ಕಳ, ಮಾಳವಗಳನ್ನು ಗೆದ್ದು ದಕ್ಷಿಣ ದಿಗ್ವಿಜಯಕ್ಕೆ ಸನ್ನದ್ಧನಾಗಿ ಆ ಕಾರಣದಿಂದಲೇ ಹರಿಹರಕ್ಕೆ ಧಾವಿಸಿದ. ತನ್ನ ಅಭೀಷ್ಟದ ಈಡೇರಿಕೆಗಾಗಿ ಹರಿಹರೇಶ್ವರನನ್ನು ಶಂಖದಲ್ಲಿ ನೀರೆರೆದು ಭಕ್ತಿಯಿಂದ ಪೂಜಿಸಿ, ಹರಿಹರ ಪ್ರದೇಶವನ್ನು ಸುಂಕ ಇತ್ಯಾದಿಗಳಿಂದ ಸರ್ವಮಾನ್ಯ ಮಾಡಿದ.

ಸ್ಕಂದ ಪುರಾಣದ ಪ್ರಕಾರ ತುಂಗಭದ್ರೆಯಲ್ಲಿ ೧೧ ತೀರ್ಥಗಳು ಇರುವಂತೆ ತಿಳಿದು ಬರುತ್ತದೆ.

*೧. ಬ್ರಹ್ಮತೀರ್ಥ ೨. ಭಾರ್ಗವತೀರ್ಥ ೩. ನೃಸಿಂಹ ತೀರ್ಥ ೪. ಪಿಶಾಚಮೋಚನ ತೀರ್ಥ ೫. ಗಾಲವ ತೀರ್ಥ ೬. ಚಕ್ರತೀರ್ಥ ೭. ವಹ್ನಿತೀರ್ಥ ೮. ಋಣ ವಿಮೋಚನ ತೀರ್ಥ ೯. ವಟಚ್ಛಾಯಾ ತೀರ್ಥ ೧೦.* ರುದ್ರಪಾದತೀರ್ಥ ೧೧. *ಪಾಪನಾಶನ ತೀರ್ಥ*-ಇವುಗಳಲ್ಲಿ ಈಗ, ನನ್ನ ಗುರುಗಳಾದ ಹರಿಹರದ ಶ್ರೀ ಸಮರ್ಥನಾರಾಯಣ ಮಹಾರಾಜರಿಂದ ತಿಳಿದಂತೆ, ಕೇವಲ ೩ ತೀರ್ಥಗಳನ್ನು ಮಾತ್ರ ಗುರ್ತಿಸಬಹುದಾಗಿದೆ. ಅವುಗಳಾವೆಂದರೆ ರುದ್ರಪಾದಗಳಿರುವ ನದೀ ಮಧ್ಯದ ಮಂಟಪದ ಸುತ್ತಲೂ ಇರುವುದು ರುದ್ರಪಾದ ತೀರ್ಥ, ಅಲ್ಲಿಂದ ೫ರಿಂದ ೧೦ ಮೀಟರ್ ದೂರದಲ್ಲಿ ಚಕ್ರತೀರ್ಥ ಇಂದಿಗೂ ಮಳೆಗಾಲದಲ್ಲಿ ಬಂಡೆಗಳ ಮಧ್ಯದಲ್ಲಿ ನೀರಿನ ಸುಳಿವು, ಸೆಳವು ಹೆಚ್ಚಾಗಿರುತ್ತದೆ. ಆ ಭಾಗವನ್ನು ಚಕ್ರತೀರ್ಥವೆಂದು ಇದುವರೆಗೂ ಹರಿಹರದ ಯಾವ ವಿದ್ವಾಂಸರೂ, ಜನರೂ ಗುರ್ತಿಸಿದ್ದುದರ ದಾಖಲೆಯಾಗಲೀ, ಹೇಳಿಕೆಯಾಗಲೀ ಇಲ್ಲ. ಶ್ರೀ ಶಿವಾನಂದರ ಮಠದ ಕಡೆಯಿಂದ ಈ ಮುನ್ನ ಕಲ್ಲಿನ ಸೋಪಾನಗಳ ಮುಖಾಂತರ ತುಂಗಭದ್ರೆಯ ಸ್ನಾನಕ್ಕೆ ಹೋಗಬಹುದಿತ್ತು. ಅಲ್ಲೊಂದು ಅರಳೀಮರ ಈಗಲೂ ಇದೆ. ಪ್ರವಾಹಬಂದಾಗ ನೀರು ಈ ವಟವೃಕ್ಷವನ್ನು ಸುತ್ತುತ್ತದೆ. ಈ ಕಾರಣದಿಂದಾಗಿಯೇ ಹಲವಾರು ಬಾರಿ ಆ ಮರ ಕೊಚ್ಚಿ ಹೋಗಿದ್ದರೂ ಅದೇ ಸ್ಥಳದಲ್ಲಿ ಮತ್ತೆ ಮತ್ತೆ ಅರಳೀಗಿಡವನ್ನು ನೆಟ್ಟಿರಬಹುದು. ಅಲ್ಲದೆ, ಹಿಂದೆ ಅಲ್ಲಿ ಸ್ನಾನ ಘಟ್ಟವೂ ಇದ್ದಿತು ಎನ್ನಲು ಅಲ್ಲಿಯ ಮೆಟ್ಟಿಲುಗಳ ಮೇಲೆ ಹಲವಾರು ಭಕ್ತರ ಶಾಸನಸ್ಥ ಹೆಸರುಗಳಿದ್ದುದನ್ನು ನಾನು ಚಿಕ್ಕವನಿದ್ದಾಗ ಕಂಡಿದ್ದೇನೆ. ಈಗ ಅವು ಕಂಡು ಬರುವುದಿಲ್ಲ. ಆದ್ದರಿಂದ ಈ ಭಾಗವೇ ವಟಚ್ಛಾಯಾ ತೀರ್ಥವಿರಬೇಕು. ಆದರೆ ಈಗ ಈ ಮೆಟ್ಟಿಲುಹಾದಿಗೆ ಬೇಲಿಹಾಕಿ ಜನರು ಆ ಮೂಲಕ ನದಿಗೆ ಹೋಗದಂತೆ ಮಾಡಿದ್ದಾರೆ.

ಅರಳೀ ಗಿಡದ ಛಾಯೆ ಕೆರೆ, ಸರೋವರ, ಒಟ್ಟಾರೆ ನೀರಿನ ಮೇಲೆ ಇರಬೇಕೆಂದು ೬ನೇ ಕಲ್ಲೋಲ, ೧೦ನೇ ತರಂಗದಲ್ಲಿ ಕೆಳದಿಯ ಬಸವರಾಜರು ರಚಿಸಿರುವ ಶಿವತತ್ತ್ವರತ್ನಾಕರದಲ್ಲಿ ಜಲ ಶುದ್ಧೀಕರಣ ಸಂದರ್ಭದಲ್ಲಿ ತಿಳಿಸಿದ್ದಾನೆ. ದೊಡ್ಡದಾಗಿ ಬೆಳೆಯುವ ಅರಳೀ ಮರದಿಂದ ಸೂರ್ಯಕಿರಣಗಳಿರುವತನಕ ಹೆಚ್ಚಿನ ಆಮ್ಲಜನಕ ಉತ್ಪತ್ತಿಯಾಗುತ್ತದೆ. ಒಂದು ಸಾಮಾನ್ಯ ಮರದ ಬೆಲೆ ವಿಜ್ಞಾನಿಗಳ ಪ್ರಕಾರ ೩.೩೦ ಕೋಟಿ ರೂಪಾಯಿಗಳು! ಏಕೆಂದರೆ ಒಂದು ವೃಕ್ಷವು ಮನುಷ್ಯನಿಗೆ ಸುಮಾರು ೮೦ ವರ್ಷಗಳಿಗೆ ಬೇಕಾಗುವಷ್ಟು ಆಮ್ಲ ಜನಕವನ್ನು ಸೃಷ್ಟಿಸುತ್ತದೆ.

ತುಂಗಭದ್ರೆ ಮತ್ತು ಹರಿದ್ರಾನದಿಗಳು ಕೂಡುವ ಸ್ಥಳದಲ್ಲಿ ಸಂಗಮೇಶ್ವರ ದೇವಸ್ಥಾನವಿದೆ. ಇದೇ ಕಾರಣಕ್ಕೆ ಹರಿಹರಕ್ಕೆ ಮೊದಲು **ಕೂಡಲೂರು** ಎನ್ನುವ ಸ್ಥಳನಾಮವಿದ್ದಿತೆಂದು ಶಾಸನದಿಂದ ತಿಳಿದುಬರುತ್ತದೆ. ಈ ಸ್ಥಳವನ್ನು 'ಪಂಚಕೋಶ' ವೆನ್ನುತ್ತಿದ್ದರು. ಇಲ್ಲಿಯ ಮಣ್ಣಿನ ವಿಶೇಷಗುಣವೆಂದರೆ ಒಂದು ಕಾಲದಲ್ಲಿ ಇಲ್ಲಿ ಹೆಣಗಳನ್ನು ಹೂಳಿದರೆ ಒಂದೆರಡು ತಿಂಗಳುಗಳಲ್ಲಿಯೇ ಅಸ್ಥಿ ಸಹಿತ ಪೂರ್ತಿ ಮಣ್ಣಾಗುತ್ತಿದ್ದಿತಂತೆ. ಆದರೆ ಇಂದು ಹರಿಹರದ ಜನತೆಗೆ ೧೧ ತೀರ್ಥಗಳ ಹೆಸರುಗಳೂ ಮರೆತು ಹೋಗಿವೆ. ಈ ಸ್ಥಾನವು ಕೊಳಚೆ ನೀರಿನ ಆಗರವಾಗಿದೆ. ವಟಛಾಯಾ ತೀರ್ಥ ಕ್ಷೇತ್ರವು ಮಲವಿಸರ್ಜನೆಯ ಕೇಂದ್ರವಾಗಿದೆ. ಇನ್ನು ರುದ್ರಪಾದದಿಂದ ಕೆಳಗೆ ಹರಿಯುವ ನೀರಂತೂ ಸ್ನಾನಾದಿಗಳನ್ನು ಮಾಡಲು ಬಳಸದಷ್ಟು ಅಶುಚಿಯಾಗಿದೆ. ಮತ್ತೆ ಕಿಲೋಮೀಟರ್ ಮುಂದೆ ಹೋದರೆ ನಿರಂತರ ನೀರನ್ನು ಕಲುಷಿತಗೊಳಿಸುತ್ತಿರುವ ಬಿರ್ಲಾ ಪಾಲಿ ಫೈಬರ್ಸ್‌ನಿಂದ ತ್ಯಾಜ್ಯವಾದ ನೀರು ನದಿಗೆ ತಳ್ಳಲ್ಪಟ್ಟು ಝಾಂಡಿಸ್, ಕರುಳು ಬೇನೆ ಇತ್ಯಾದಿ ರೋಗಗಳಿಗೆ, ಆಕರವಾಗಿದೆ. ಹೀಗಾಗಿ ವಾದಿರಾಜರು ವರ್ಣಿಸಿರುವ ಈ 'ಗುಹಾರಣ್ಯ ಕ್ಷೇತ್ರ' ಇಂದು ಜನಾರಣ್ಯ ಕ್ಷೇತ್ರವಾಗಿದೆ. ಇತ್ತೀಚಿನ ಬೆಳವಣಿಗೆ ಎಂದರೆ ಪಶ್ಚಿಮ ಘಟ್ಟಗಳಲ್ಲಿ ಕುದುರೆ ಮುಖ ಕಬ್ಬಿಣ ಕಾರ್ಖಾನೆಯ ಗಣಿಗಾರಿಕೆಯಿಂದಾಗಿ ತುಂಗಭದ್ರೆಯ ಮೂಲವೇ ನಷ್ಟವಾಗುತ್ತಿದ್ದು, "ತುಂಗ ಭದ್ರೆ ಉಳಿಸಿ" ಎಂಬ ಜನಾಂದೋಳನ

ವೊಂದು ಹರಿಹರದ ನದೀ ತೀರದ ಜನರಿಂದಲೇ ಪ್ರಾರಂಭವಾಗಿದೆ. ೧೫-೨೦ ವರ್ಷಗಳ ಹಿಂದೆಯೇ ಜ್ಞಾನಪೀಠ ಪ್ರಶಸ್ತಿ ವಿಜೇತ ಶಿವರಾಮ ಕಾರಂತರ ಮುಖಂಡತ್ವದಲ್ಲಿ ಬಿರ್ಲಾ ಕಲುಷಿತ ನೀರಿನಿಂದ ಜಲಜೀವಿಗಳಿಗೆ ಮತ್ತು ಜನಕ್ಕೆ ಉಂಟಾದ ಹಾನಿಯ ಬಗ್ಗೆ ಸುಪ್ರೀಂ ಕೋರ್ಟಿನ ಮೆಟ್ಟಿಲು ಹತ್ತಿದ್ದು ಇಂದು ಇತಿಹಾಸ !

*ತೀರ್ಥಪ್ರಬಂಧ - ಮುಂದು*

ಬದಿರಹಳ್ಳಿ : ಬಿದಿರಹಳ್ಳಿ ಕ್ಷೇತ್ರವು ಕೊಪ್ಪಳ ಜಿಲ್ಲೆಯ ಮುಂಡರಗಿ ತಾಲ್ಲೂಕಿನ ಒಂದು ಗ್ರಾಮ. ಇಲ್ಲಿಯ ವೇಣುಗೋಪಾಲಸ್ವಾಮಿ ದೇವಸ್ಥಾನ, ಕಲ್ಯಾಣಿ ಚಾಲುಕ್ಯರಿಂದ ನಿರ್ಮಿತವಾಗಿರುವ ಉತ್ಕೃಷ್ಟ ಬಾಗಿಲುವಾಡಗಳ ಕೆತ್ತನೆ, ನವರಂಗ ಮಂಟಪವಿರುವ ಇತಿಹಾಸ ಪ್ರಸಿದ್ಧ ಸೋಮೇಶ್ವರ ದೇವಸ್ಥಾನ, ಅಶ್ವತ್ಥನಾರಾಯಣ, ವಿಷ್ಣುಪಾದ, ಗ್ರಾಮದೇವತೆ ಬಿದಿರಹಳ್ಳಿಯಮ್ಮನ ದೇವಸ್ಥಾನಗಳಿವೆ. ಪ್ರಸಿದ್ಧ ಟಿಪ್ಪಣಿಕಾರ, ಶ್ರೀಯಾದವಾರ್ಯರ ಶಿಷ್ಯರೂ, ಶ್ರೀ ರಾಘವೇಂದ್ರಸ್ವಾಮಿಗಳಿಂದ "ತೀರ್ಥ" ಪ್ರಶಸ್ತಿಯಿಂದ ಆದೃತರೂ ಆದ ಶ್ರೀನಿವಾಸತೀರ್ಥರ ಮುಖ್ಯ ಕಾರ್ಯ ಕ್ಷೇತ್ರ ಬಿದಿರಹಳ್ಳಿ.

**ಅಶ್ವತ್ಥನಾರಾಯಣನ ವರ್ಣನೆ:**

*ಮಾಯಾ ಹಿ ಪುಷ್ಕರ ಮಹೀಮಥವಾ ಪ್ರಯಾಗಂ*
*ಕಾಶೀಂ ಗಯಾಂ ಬದರಿಕಾಶ್ರಮ ಮತ್ಯಪ್ಯ ಸಾಧ್ಯಮ್।*
*ಸೇತುಂಚ ರಾಘುವಕೃತಂ ವರತುಂಗ ಭದ್ರಾ*
*ತೀರಸ್ಥ ಪಿಪ್ಪಲ ಗೃಹಂ ಹರಿಮೇಹಿ ಸಿದ್ಧ್ಯೈ (ಶ್ಲೋ. ೬೪)*

- ಹರಿಭಕ್ತ್ಯಾದಿ ಸಕಲ ಪುರುಷಾರ್ಥ ಸಿದ್ಧಿಗೋಸ್ಕರ, ಪುಷ್ಕರ ಕ್ಷೇತ್ರವನ್ನು ಅಥವಾ ಪ್ರಯಾಗ, ಕಾಶೀ ಕ್ಷೇತ್ರವನ್ನೋ ಅತಿ ಆಯಾಸದಿಂದ ಅಸಾಧ್ಯವಾದ ಬದರಿಯನ್ನು, ಶ್ರೀರಾಮನಿಂದ ನಿರ್ಮಿತವಾದ ಸೇತುವೆಯನ್ನು ಹೊಂದಿರುವ (ರಾಮೇಶ್ವರ) ಕ್ಷೇತ್ರವನ್ನು ಕುರಿತು ಹೋಗಬೇಡ. ಶ್ರೇಷ್ಠವಾದ ತುಂಗಭದ್ರಾ ನದಿಯ ತೀರದ ಅಶ್ವತ್ಥ ವೃಕ್ಷದಲ್ಲಿ ನೆಲೆಸಿರುವ ನಾರಾಯಣನನ್ನು (ಸಂದರ್ಶಿಸು) ಬಾ

ಪಾದಸ್ಥಾನಲ್ಪಪಾದಃ ತುನು ನಿಹಿತ ತನುಃ ಕೋಮಲಾಗ್ರಸ್ಥಿತಾಸ್ಯಃ
ಸ್ಕಂಧ ಸ್ಕಂಧೋಗ್ರ್ಯ ಶಾಖಾಸ್ಥಿತ ಕರನಿಕರಃ ಶ್ರೀಧರಾ
ಶ್ಲಿಷ್ಟ ಪಾರ್ಶ್ವಃ।
ವ್ಯಾಪ್ಯಾಶ್ವತ್ಥಂ ಮುಕುಂದ ಸ್ತ್ರಿದಶ ಪರಿವೃತಸ್ತುಂಗ ಭದ್ರಾತಿಭದ್ರೇ
"ವೇಣುಗ್ರಾಮ" ಸದಾಽಽಸ್ತೇ ಸಕಲ ಜನ ಮನೋಯಿಭಿಷ್ಟದಾಯಿ
ದಯಾಲುಃ ॥ ೬೫॥

- ಅಶ್ವತ್ಥವೃಕ್ಷದ ಮೂಲಗಳಲ್ಲಿ ತನ್ನ ಅನಂತ ಪಾದಗಳನ್ನು ಉಳ್ಳವನಾಗಿ, ವೃಕ್ಷಮಧ್ಯದಲ್ಲಿ ತನ್ನ ಶರೀರ ಉಳ್ಳವನಾಗಿ ಕೋಮಲವಾದ ವೃಕ್ಷದ ತುದಿಗಳಲ್ಲಿ ತನ್ನ ಮುಖವನ್ನುಳ್ಳವನಾಗಿ, ಶಾಖಾ ಮೂಲ - ರೆಂಬೆಗಳು ಕವಲೊಡೆಯುವ ಸ್ಥಳದಲ್ಲಿ ತನ್ನ ಹೆಗಲನ್ನು ಉಳ್ಳವನಾಗಿ ಮರದ ಉತ್ತಮ ರೆಂಬೆಗಳಲ್ಲಿ ತನ್ನ ಹಸ್ತ ಸಮೂಹವನ್ನು ಉಳ್ಳವನಾಗಿ ಶ್ರೀದೇವಿ ಭೂದೇವಿಯರಿಂದ ಆಲಂಗಿತ ಪಾರ್ಶ್ವನೂ, ದೇವತೆಗಳಿಂದ ಸುತ್ತುವರಿಯಲ್ಪಟ್ಟವನೂ, ಸಕಲ ಸಜ್ಜನರ ಮನದ ಅಭಿಲಾಷೆಗಳನ್ನು ಪೂರೈಸುವವನೂ, ದಯಾಶೀಲನೂ (ಆದ) ಶ್ರೀ ನಾರಾಯಣನು ತುಂಗಭದ್ರಾನದಿಯ ಅತ್ಯಂತ ಮನೋಹರ (ಮಂಗಲಕರ) ವಾದ ವೇಣುಗ್ರಾಮದಲ್ಲಿ ಅಶ್ವತ್ಥವೃಕ್ಷವನ್ನು ವ್ಯಾಪಿಸಿದವನಾಗಿ ಯಾವಾಗಲೂ (ಬಿದಿರಹಳ್ಳಿ) ಇರುವನು. ಈ ಶ್ಲೋಕವು ಸ್ವಭಾವೋಕ್ತಿ ಅಲಂಕಾರದಲ್ಲಿದೆ. ಒಂದು ವೃಕ್ಷವನ್ನು ನಾವು ಸಹಜ ಸ್ವಭಾವದಿಂದ ನೋಡುವ ರೀತಿಯಲ್ಲಿಯೇ ದೈವದ ನೆಲೆಯನ್ನು ಚಿತ್ರಿಸುವ ಉದಾತ್ತತೆ ವಾದಿರಾಜರ ಸಂಸ್ಕೃತ ಪಾಂಡಿತ್ಯದೊಂದಿಗೆ ಅವರ ಕವಿ ಹೃದಯ ವೈಶಾಲ್ಯತೆಯನ್ನೂ ಸೂಚಿಸುತ್ತದೆ.

ಮಧ್ಯಸ್ಥ ಕೃಷ್ಣ ಪರಿಪಾಲಯ ಭಕ್ತವರ್ಗಂ
ರುದ್ರಾಶ್ರೀತಾಗ್ರ ರುಜಮರ್ದಯ ಸೇವಕಸ್ಯ।
ಪದ್ಮಾಸನಾವಸಥ ಮೂಲ ಸೃಜಾಸ್ಯ ತಂತುಂ
ಸದ್ವಂದ್ಯ ಪಿಪ್ಪಲತರೋ ವಿತರಾಖಿಲೇಷ್ಟಮ್[೪] ॥ ೬೬॥

- ಎಲೈ ಮಧ್ಯಭಾಗದಲ್ಲಿ ಶ್ರೀಕೃಷ್ಣನನ್ನುಳ್ಳ ಅಶ್ವತ್ಥವೃಕ್ಷವೇ; ಭಕ್ತ ಸಮುದಾಯವನ್ನು ಎಲ್ಲ ರೀತಿಯಲ್ಲೂ ಪಾಲಿಸು. ಎಲೈ ರುದ್ರದೇವರು ನೆಲೆಸಿರುವ ತುದಿಯನ್ನುಳ್ಳ ಅಶ್ವತ್ಥವೇ ಸೇವಕನ ರೋಗವನ್ನು[೫] ನಾಶಪಡಿಸು. ಎಲೈ ಬ್ರಹ್ಮದೇವರು ನೆಲೆಸಿರುವ ಮೂಲಭಾಗವನ್ನುಳ್ಳ ಅಶ್ವತ್ಥವೇ ಈ ಸೇವಕನಿಗೆ[೬] ಸಂತಾನವನ್ನು ಉಂಟುಮಾಡು. ಸಜ್ಜನರಿಂದ ಸ್ತುತ್ಯವಾಗಿರುವ ಅಶ್ವತ್ಥ ವೃಕ್ಷವೇ ಸಕಲ ವಿಧ ಬಯಕೆಗಳನ್ನು ಈಡೇರಿಸು ಎಂಬರ್ಥವಿದೆ. ಈ ಶ್ಲೋಕದಲ್ಲಿ ಇಲ್ಲಿಯ ಅಶ್ವತ್ಥನಾರಾಯಣನ ಸೇವೆಯಿಂದ ಸಂತಾನವನ್ನು ಪಡೆಯಬಹುದೆಂದು ತಿಳಿಯುವ ಅಂಶ ವ್ಯಕ್ತವಾಗಿರುವುದು ಇಂದಿನ ನಮಗೆ ಕೇವಲ ಒಂದು ನಂಬಿಕೆ ಎನಿಸಬಹುದು. ಆದರೆ ಈ ಅಶ್ವತ್ಥನಾರಾಯಣನ ಗುಡಿ ತುಂಬಾ ಚಿಕ್ಕದಿದ್ದು ಅದರ ಮುಂಬಾಗಿಲ ತೊಲೆಯ ಮೇಲೆ ಮರಾಠಿ ಶಾಸನವೊಂದಿದೆ. ಇದೇ ಅಶ್ವತ್ಥನಾರಾಯಣನ ಸೇವೆಯಿಂದಲೇ ನಮಗೆ ಔರಸ ಸಂತತಿಯಾಗಿದೆ ಮತ್ತು ಆ ಪುತ್ರನ ಒಡಗೂಡಿ ಈ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿದ್ದೇವೆ ಎಂದೂ ಕಂಡರಿಸಲಾಗಿದೆ!

*ಬಿದಿರಹಳ್ಳಿ ಸೋಮೇಶ್ವರ*

ಸೋಮೇಶ್ವರಾಯ ಸಿತ ಭೂತಿ ವಿಕಸ್ವರಾಯ
ಪ್ರೇಮ ಪ್ರವೃದ್ಧ ಗಿರಿಜಾಹೃದಿ ಭಾಸ್ವರಾಯ।
ತುಂಗೋಲ್ಲ ಸತ್ಪವನ ಪಾವಿತ ವಂಶಪಲ್ಲೀ-
ಮಾಂಗಲ್ಯ ಹೇತು ಚರಿತಾಯ ನಮಃ ಶಿವಾಯ ॥ ೬೮॥

- ಬಿಳಿದಾದ ವಿಭೂತಿಯಿಂದ ಕಂಗೊಳಿಸುವ ಪ್ರೇಮಪೂರ್ಣವಾದ ಗೌರೀದೇವಿಯ ಹೃದಯದಲ್ಲಿ ಹೊಳೆಯುವ ತುಂಗಭದ್ರಾ ನದಿಯ ಬಹಳವಾಗಿ ಶೋಭಿಸುವ ಗಾಳಿಯಿಂದ

ಪಾವನವಾದ 'ಬಿದಿರಹಳ್ಳಿ' ಎಂಬ ಗ್ರಾಮಕ್ಕೆ ಮಂಗಲವನ್ನೀಯುವ ಚರಿತ್ರೆಯುಳ್ಳ ಸೋಮೇಶ್ವರ ಎಂಬ ಹೆಸರಿನ ಶಿವನಿಗೆ ನಮಸ್ಕಾರವು.

ಅಪ್ಪಟ ವೈಷ್ಣವಯತಿಗಳಾದ ವಾದಿರಾಜರು ಧರ್ಮಸ್ಥಳ ಮಂಜುನಾಥನನ್ನು ಆರಾಧಿಸಿದವರು. ಇಲ್ಲಿ ಮತ್ತೊಮ್ಮೆ ಸೋಮೇಶ್ವರನನ್ನು ಹೊಗಳಿರುವುದು ಅವರ ವಿಶಾಲದೃಷ್ಟಿಗೆ ಒಂದು ಉದಾಹರಣೆಯಾದರೆ, ಈಗಾಗಲೇ ತಿಳಿಸಿರುವಂತೆ ಕಲ್ಯಾಣದ ಚಾಲುಕ್ಯರ ಕಾಲದಿಂದಲೂ ಪೂಜಿಸಲ್ಪಟ್ಟು, ಶಾಸನೋಕ್ತವಾಗಿಯೂ ವಾಸ್ತುಶಿಲ್ಪದ ದೃಷ್ಟಿಯಿಂದಲೂ (ನವರಂಗ, ಬಾಗಿಲುವಾಡ ಮತ್ತು ೨ ಅಂತಸ್ತಿನ ದೇವಸ್ಥಾನ) ವಿಶೇಷವಾಗಿ ನಿರ್ಮಿಸಲಾಗಿರುವ ಈಶ್ವರನನ್ನು ಸ್ತುತಿಸಿರುವುದು ಇನ್ನೊಂದು. ಸುಮಾರು ೧೧-೧೨ನೇ ಶತಮಾನದಿಂದ ೧೬ನೇ ಶತಮಾನದವರೆಗೂ ಈ ಸೋಮೇಶ್ವರನ ಮಹತ್ವ ಈ ಭಾಗದ ಜನರಲ್ಲಿಯ ಪೂಜ್ಯ ಮನೋಭಾವಕ್ಕೆ ಕಾರಣವನ್ನು ಬಿಂಬಿಸುತ್ತದಷ್ಟೇ ಅಲ್ಲದೆ ಕಾವ್ಯದ ಮೂಲಕ ಶಾಸನೋಕ್ತ ಚಾರಿತ್ರಿಕ ದಾಖಲೆಯ ಕೊಂಡಿಯೊಂದು ಲಭ್ಯವೆನ್ನುವ ದಾಖಲೆಯಾಗಿದೆ. ಈಗ್ಗೆ ಸುಮಾರು ೬೦ ವರ್ಷಗಳ ಹಿಂದೆ ಈ ಭಾಗದ ಸಂತ ಶ್ರೇಷ್ಠರೆನಿಸಿದ ಬ್ರಹ್ಮಾನಂದರು, ತಮ್ಮ ಗುರುಗಳಾದ ಮಹಾರಾಷ್ಟ್ರದ ಶ್ರೀ ಬ್ರಹ್ಮ ಚೈತನ್ಯ ಮಹಾರಾಜರ ಸಮ್ಮುಖದಲ್ಲಿ ಈ ಬಿದಿರಹಳ್ಳಿಯಲ್ಲಿ ಶ್ರೀರಾಮ ನಾಮ ತೇರಾಕೋಟಿಯನ್ನು ನಡೆಸಿದರು. ಈಕಾಲದ ಚಾರಿತ್ರಿಕ ಘಟನೆಯೊಂದು ಈ ಕ್ಷೇತ್ರದ ಮಹತ್ವವನ್ನು ಇನ್ನೂ ಹೆಚ್ಚಿಸಲು ಕಾರಣವಾಗಿದೆ. ತೇರಾಕೋಟಿ ನಡೆಯುವ ಸಂದರ್ಭದಲ್ಲಿ ಉಡುಪಿ ಕಡೆಯ ಕೆಲವು (ಅಶ್ವತ್ಥಪುರದವರು) ಬ್ರಾಹ್ಮಣರು ಮಧ್ಯಾಹ್ನದ ಉರಿಬಿಸಿಲಿನಲ್ಲಿ ತುಂಗಭದ್ರೆ ಬ್ರಹ್ಮ ಚೈತನ್ಯರು ಸ್ನಾನಕ್ಕೆ ಬರುವ ಸಮಯದಲ್ಲಿ ಮರಳಿನ ಮೇಲೆ ಬರೀ ಮೈಯಲ್ಲಿ ಉರುಳುಸೇವೆ ಮಾಡುತ್ತಿರುವುದನ್ನು ಕಾಣುತ್ತಾರೆ. ಕನ್ನಡ ಬಾರದ ಅವರು ಬ್ರಹ್ಮಾನಂದರನ್ನು ಕುರಿತು ಇವರು ಹೀಗೇಕೆ ತಮ್ಮ ದೇಹವನ್ನು ದಂಡಿಸುತ್ತಿದ್ದಾರೆ, ಎಂದು ಮರಾಠಿಯಲ್ಲಿ ಕೇಳುತ್ತಾರೆ. ಆಗ ಇವರಿಗೆ ಉದ್ಯೋಗವಿಲ್ಲದೇ ಜೀವನೋಪಾಯ ಬಹುಕಷ್ಟವನ್ನು ಅನುಭವಿಸುತ್ತಿದ್ದಾರೆ. ಅವರಿಗೆ ದಾರಿ ತೋರಿಸಬೇಕೆಂದು ವಿನಂತಿಸಿಕೊಳ್ಳುತ್ತಾರೆ. ಆಗ ಗುರುಗಳು "ನೀವು ಅನ್ನ ಮಾರಿ ಜೀವನ ನಡೆಸಬಹುದೆಂದು" ಸೂಚಿಸುತ್ತಾರೆ. ಅದುವರೆಗೆ ಬ್ರಾಹ್ಮಣರಲ್ಲಿ ಅನ್ನ ಮಾರುವ ಪದ್ಧತಿ ಇರಲಿಲ್ಲ ವೆಂಬುದು ಇಲ್ಲಿ ಗಮನಾರ್ಹ. ಮುಂದೆ ಇದೇ ಸೂತ್ರವನ್ನು ಅನುಸರಿಸಿ ಅದನ್ನೇ ಉಡುಪಿ ಹೋಟೆಲ್ ಉದ್ಯಮವನ್ನಾಗಿ ಬೆಳೆಸಿ ಇಂದು ವಿಶ್ವದಾದ್ಯಂತ ಹೋಟೆಲ್‌ಗಳನ್ನು ತೆರೆದು, ಸಾವಿರಾರು ಜನ ತಮ್ಮ ಜೀವನೋಪಾಯ ಮಾರ್ಗವನ್ನು ಕಂಡುಕೊಂಡಿದ್ದಾರೆ.[೭]



*ವಿಠ್ಠಲಾಪುರ* : ಬಿದಿರಹಳ್ಳಿಯಿಂದ ಎರಡು ಕಿಲೋಮೀಟರ್ ದೂರದಲ್ಲಿ ವಿಠ್ಠಲಾಪುರವೆಂಬ ಗ್ರಾಮವಿದೆ. ಇದು ಹಂಪೆಯ ವಿರೂಪಾಕ್ಷೇಶ್ವರ ದೇವಸ್ಥಾನದ ದ್ವಾರಗೋಪುರ



ನಿರ್ಮಾತೃ ಶ್ರೀ ಭಿಷ್ವಪ್ಪಯ್ಯನವರ ವಾಸ ಸ್ಥಳ. ೨೫ ಕೆ.ಜಿ. ತೂಕದ ಭಾರತದಲ್ಲಿಯೇ ಅಪರೂಪವಾದ ಪಾದರಸಲಿಂಗ ಮತ್ತು ಅದರಕೆಳಗೆ ಕಂಚಿನ ಶಾಸನವಿರುವ ಏಕೈಕ ಸ್ಥಳ.[೮]

*ರಂಗಾಪುರ :* ಕಲ್ಯಾಣಿ ಚಾಲುಕ್ಯರ ಕಾಲದ ಉಗ್ರ ನರಸಿಂಹನ ಅತ್ಯಂತ ವಿಶಿಷ್ಟ ಶೈಲಿಯ ವಿಗ್ರಹ, ಗಣೇಶ, ಕಾಲಭೈರವ, ಪ್ರಹ್ಲಾದ, ಈಶ್ವರ ವಿಗ್ರಹಗಳಿವೆ. ಬಿದಿರಹಳ್ಳಿ ತುಂಗಭದ್ರೆಯ (ಮುಂಡರಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ) ಒಂದು ದಡವಾದರೆ ಅದರ ಈಚೆ ದಂಡೆಯಮೇಲೆ ಬಳ್ಳಾರಿ ಜಿಲ್ಲೆ, ಹೂವಿನ ಹಡಗಲಿ, ತಾಲ್ಲೂಕಿಗೆ ಈ ಸ್ಥಳ ಸೇರಿದೆ. ಇದು ಭಿಷ್ವಪ್ಪಯ್ಯನವರ ತಪೋಭೂಮಿ ಮತ್ತು ಜಲಸಮಾಧಿ (ತುಂಗಭದ್ರೆಯ ಒಳಗೆ) ಇರುವ ಸ್ಥಳ. ಅನತಿದೂರದಲ್ಲಿಯೇ ರಾಮೇಶ್ವರ ದೇವಸ್ಥಾನವಿದೆ. ಇದು ವಿಜಯನಗರ ಕಾಲದಲ್ಲಿ ಜೀರ್ಣೋದ್ಧಾರಮಾಡಲ್ಪಟ್ಟಿದೆ.



*ಮಾಗಳ :* ಇಲ್ಲಿಯ ಹೊಯ್ಸಳ ಕಾಲದ ಸೂರ್ಯನಾರಾಯಣ ದೇವಸ್ಥಾನ ಬಹು ಪ್ರಸಿದ್ಧವಾದದ್ದು. ಬಿ. ಎಲ್. ರೈಸ್ ಅವರು ಬಳ್ಳಾರಿ ಜಿಲ್ಲೆಯಲ್ಲಿಯೇ ಈ ದೇವಸ್ಥಾನದ ಶಿಲ್ಪ ಕಲಾವೈಶಿಷ್ಟ ಬೇರೆ ಯಾವ ದೇವಸ್ಥಾನಗಳಲ್ಲೂ ಇಲ್ಲವೆಂದು ಹೇಳಿದ್ದಾರೆ. ಅಂತೆಯೇ ಸೂರ್ಯನಾರಾಯಣ ಶಿಲ್ಪವೂ ಶಿಲ್ಪಶಾಸ್ತ್ರದ ದೃಷ್ಟಿಯಿಂದ ಮಹತ್ವದ್ದಾಗಿದೆ. ಪಾರ್ಶ್ವನಾಥ ಬಿಂಬ, ೧೨-೧೩ನೇ ಶತಮಾನದ ಉತ್ಕೃಷ್ಟ ಮಾದರಿ. ಮಾಗಳದ ಮಾಧವ ಮತ್ತು ಹರಿಹರ ಇಬ್ಬರೂ ಹೊಯ್ಸಳ ಮುಖ್ಯದಂಡಾಧಿಪರು. 'ಮಾಧವ' ಎನ್ನುವ ವ್ಯಕ್ತಿನಾಮವಿರುವ ಮನೆತನವೊಂದು ಈ ಊರಿನಲ್ಲಿ ಈಗಲೂ ಇದೆ.[೯] ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ, ೧೦೨ ವರ್ಷಕಾಲ ತುಂಬು ಜೀವನ ನಡೆಸಿದ "ವ್ಯಾಕರಣ ತೀರ್ಥ" ಚಂದ್ರಶೇಖರ ಶಾಸ್ತ್ರಿಗಳ ಹುಟ್ಟೂರು ಮತ್ತು ಕಾರ್ಯಕ್ಷೇತ್ರ.

ತುಂಗಭದ್ರೆಯ ತೀರ್ಥಗಳನ್ನು ವಾದಿರಾಜರು 'ತೀರ್ಥ ಪ್ರಬಂಧ'ದಲ್ಲಿ ವರ್ಣಿಸಿದ್ದರೆ, ಆ ನದಿಯ ಒಂದು ಬದಿಯಲ್ಲಿ ಶ್ರೀನಿವಾಸತೀರ್ಥರೂ ಇನ್ನೊಂದು ಬದಿಯಲ್ಲಿ 'ವ್ಯಾಕರಣತೀರ್ಥ' ರೆನಿಸಿ ನಮ್ಮೊಂದಿಗೇ ಇದ್ದ ಚಂದ್ರಶೇಖರ ಶಾಸ್ತ್ರಿಗಳು ಇಬ್ಬರೂ 'ತೀರ್ಥ' ಬಿರುದಾಂಕಿತ ಜಂಗಮ ತೀರ್ಥಗಳ ಕಾರ್ಯಕ್ಷೇತ್ರವಾಗಿ ರುವುದೂ ಒಂದು ಅಪರೂಪ ಚರಿತ್ರೆದಾಖಲೆಯ ಸಂಗತಿ ಯಲ್ಲವೆ?

ಇಂತಹ ಅಪರೂಪ ಶಿಲ್ಪಕಲೆ ಹಲವಾರು ಶತಮಾನ ಗಳಿಂದಲೂ ಚಾರಿತ್ರಿಕ ಮಹತ್ವವನ್ನುಳ್ಳ ಇಲ್ಲಿಯ ಸ್ಮಾರಕಗಳೂ ದೇಗುಲಗಳೂ ಸದ್ಯ ಕೈಗೆತ್ತಿಕೊಂಡಿರುವ "ಸಿಂಗಟಾಲೂರು ನೀರಾವರಿ" ಯೋಜನೆಯ ಹಿನ್ನೀರಿನಲ್ಲಿ ಮುಳುಗಡೆಯಾಗುವ ಅಥವಾ ಒಂದು ರೀತಿಯಲ್ಲಿ ಧಕ್ಕೆ ಉಂಟಾಗುವ ಸಂಭವವಿದೆ. ಇತಿಹಾಸ ತಜ್ಞರು, ಸಂಸ್ಕೃತಿಯ ಪ್ರೇಮಿಗಳು ಪುರಾತತ್ವ ಇಲಾಖೆ, ನೀರಾವರಿಯ ಪುನರ್ವಸತಿ ಇಲಾಖೆ ಇವುಗಳ ಸಹಯೋಗದಿಂದ ಈ ಬಗ್ಗೆ ಆಲೋಚಿಸಿ ಈ ಐತಿಹಾಸಿಕ ಪರಂಪರೆ ಮರೆಯಾಗುವ ಮುನ್ನ ಕ್ರಮ ಕೈಗೊಳ್ಳಬೇಕಾಗಿದೆ.

**ಮುಖ್ಯಾಂಶಗಳು**

ಯತಿಗಳು ತೀರ್ಥಕ್ಷೇತ್ರಗಳನ್ನು ಸಂದರ್ಶಿಸುವುದು ಒಂದು ಪ್ರಮುಖಕಾಯಕವೇ. ಆದರೆ ಅದನ್ನೇ ವಸ್ತುವಾಗಿಟ್ಟುಕೊಂಡು ಕಾವ್ಯ ಒಂದನ್ನು ರಚಿಸಿ ಆಯಾಸ್ಥಳಗಳ ಮಹತ್ವದನ್ನು ಉಲ್ಲೇಖಿಸಿರುವುದು ವಾದಿರಾಜರ ವಿಶೇಷ ; ಎರಡನೆಯದಾಗಿ ಹೀಗೆ ಮಾಡುವಾಗ ಅವರು ಭಾರತದ ಕ್ಷೇತ್ರಗಳನ್ನು ೪ ಖಂಡಗಳಾಗಿ ವಿಭಾಗಿಸಿ ಆ ಮೂಲಕ ಯಾತ್ರಿಕರಿಗೆ ಒಂದು ಶಾಬ್ದಿಕ ನೀಲ ನಕ್ಷೆಯನ್ನೇ ಕೊಟ್ಟಿರುವುದು ಅವರ ವೈಜ್ಞಾನಿಕ, ಭೌಗೋಳಿಕ ಪ್ರಜ್ಞೆಯ ಮೂಲಕ ಜಲ ವಿಜ್ಞಾನಕ್ಕೆ ಒಂದು ವಿಶಿಷ್ಠ ಕೊಡುಗೆಯನ್ನು ನೀಡಿದ್ದಾರೆ. ಏಕೆಂದರೆ ಅವರು ಉಲ್ಲೇಖಿಸಿದ ಎಷ್ಟೋ ನದಿಗಳು ತೀರ್ಥಗಳೂ, ಕ್ಷೇತ್ರಗಳೂ ಇಂದು ಮರೆಯಾಗುವ ಅಥವಾ ಮುಳುಗಡೆಯಾಗುವ ಸ್ಥಿತಿಯಲ್ಲಿವೆ. ಆದ್ದರಿಂದ "ತೀರ್ಥಪ್ರಬಂಧ" ಒಂದು 'ಪ್ರವಾಸ ಕಾವ್ಯ' ಮಾತ್ರವಲ್ಲದೆ 'ಐತಿಹಾಸಿಕ' ದಾಖಲೆಯೂ ಹೌದು.

ಸದ್ಯ ಒಂದು ಒಳ್ಳೆಯ ಸುದ್ದಿ ಪ್ರಕಟವಾಗಿದ್ದು, ಕರ್ನಾಟಕ ಸರ್ಕಾರವು ಸಿಂಗಟಾಲೂರು - ಹೆಮ್ಮಿಗೆ ಯೋಜನೆಯನ್ನು ಸದ್ಯಕ್ಕೆ ಸ್ಥಗಿತಗೊಳಿಸಲಾಗಿದೆ. ಶ್ರೀ ಕೆ. ಸಿ. ರೆಡ್ಡಿಯವರ ವರದಿಯನ್ನು ಇನ್ನುಷ್ಟು ಪರಿಷ್ಕರಿಸಬೇಕೆಂದು ಪರಿಶೀಲನೆಗೆ ಒಳಪಡಿಸಲಾಗಿದೆ. ಆದರೆ ನಾನು ಕಂಡಂತೆ ಮಳೆಗಾಲದಲ್ಲಿ ಉಕ್ಕಿಬರುವ ತುಂಗಭದ್ರೆಯಿಂದಲೇ ಬಿದಿರಹಳ್ಳಿಯ ದೇವಾಲಯ ಗಳು ಆವೃತವಾಗುತ್ತಿವೆ. ರಂಗಾಪುರದ ಉಗ್ರಾನರಸಿಂಹನ ದ್ವಾರ ಗೋಪುರ ಇತ್ಯಾದಿಗಳ ಅಸ್ತಿಭಾರಗಳು (*foundations*) ಚದುರಿರುವ ಸ್ಥಿತಿಯಲ್ಲಿವೆ. ಇನ್ನು ನೀರಾವರಿ ಯೋಜನೆಯಿಂದ ಮುಳುಗುವ ಸೂಚನೆಯನ್ನು ಈಗಾಗಲೇ ಭೂಸಮೀಕ್ಷೆಗೆ

ಒಳಪಡಿಸಿ ನೆಟ್ಟಿರುವ ಕಲ್ಲುಗಳಿಂದಲೇ ತಿಳಿಯಬಹುದಾಗಿದೆ. ಈ ಬಗ್ಗೆ ಯಾರೆಲ್ಲ ಎಚ್ಚರ ವಹಿಸಿದರೆ ಕಳೆದುಹೋಗಲಿರುವ ಅತ್ಯಮೂಲ್ಯ ಚಾರಿತ್ರಿಕ ಕೊಂಡಿಯೊಂದನ್ನು ಕಾಪಾಡಿದಂತೆ ಆಗುತ್ತದೆ.

ಇನ್ನು ಹರಿಹರದ ನದೀ ಭಾಗದ ಜಲಮಾಲಿನ್ಯವನ್ನು ನಿಯಂತ್ರಿಸದಿದ್ದರೆ. ಹರಿಹರ, ದಾವಣಗೆರೆ ಎರಡೂ ಪಟ್ಟಣಗಳ ಜನರು ಆರೋಗ್ಯ ಮತ್ತು ಆರ್ಥಿಕ ನಷ್ಟಗಳನ್ನು ಅನುಭವಿಸಬೇಕಾದ ದಿನಗಳು ದೂರವಿಲ್ಲ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. *Vijayanagar a Progress of Research*, Voll II.

೨. ಸಿಂಧೂನದಿ ಮತ್ತು ಅದರ ಮೇಲಿರುವ ತೀರ್ಥಗಳನ್ನು ಈ ಗ್ರಂಥದಲ್ಲಿ ವಿವರಿಸಿಲ್ಲವಾದರೂ ಸುಮಾರು ೪೦೦ ವರ್ಷಗಳ ಹಿಂದೆಯೇ ಭೌಗೋಳಿಕವಾಗಿ ವಿಂಗಡಿಸಿರುವುದು ಉಲ್ಲೇಖಾರ್ಹ.

೩. ಪುಟ. ೭೬, ೭೭ ತೀರ್ಥ ಪ್ರಬಂಧಃ ಪಶ್ಚಿಮ ಪ್ರಬಂಧಃ (ಮೂಲ, ಪ್ರತಿಪದಾರ್ಥ ಮತ್ತು ವಿವರಣೆಗಳ ಸಹಿತ) ಅನುವಾದಕರು ಶ್ರೀ ಡಾ।। ವ್ಯಾಸನಕೆರೆ ಪ್ರಭಂಜನಾಚಾರ್ಯ, ಬೆಂಗಳೂರು.

೪. ಮೂಲತೋ ಬ್ರಹ್ಮರೂಪಾಯ ಮಧ್ಯತೋ ವಿಷ್ಣು ರೂಪಿಣೇ। ಅಗ್ರತೋ ಶಿವರೂಪಾಯ ವೃಕ್ಷರಾಜಾಯತೇ ನಮಃ ।। ಸ್ಮೃತಿ।।

೫. ರುಜಿಂದ್ರಾವಯತೇ ಯಸ್ಮಾದ್ರುದ್ರಸ್ತ ಸ್ಮಾಜ್ಜನಾರ್ದನಃ। (ಬ್ರಹ್ಮ ಸೂತ್ರ ಭಾಷ್ಯ ೧/೩/೩).

೬. ಇಲ್ಲಿ ಸಂತಾನ ಎಂಬುದಕ್ಕೆ ಔರಸಸಂತತಿ, ಶಿಷ್ಯ ಸಂತತಿ ಎಂಬ ಎರಡೂ ಅರ್ಥಗಳೂ ಗ್ರಾಹ್ಯ.

೭. ಬ್ರಹ್ಮಚೈತನ್ಯ ಮಹಾರಾಜರ ಚರಿತ್ರೆ - ಮೊದಲು ಮರಾಠಿಯಲ್ಲಿ ಡಾ।। ಬೆಲ್‌ಸ್ತೆಯವರಿಂದ ರಚಿತಗೊಂಡಿದ್ದು ಈ ವಿಷಯ ಅಲ್ಲಿ ದಾಖಲಾಗಿದೆ.

೮. ಹರಿಹರ ಶ್ರೀನಿವಾಸ ರಾವ್., 'ವಿಠ್ಠಲಾಪುರದ ಅಪ್ರಕಟಿತ ಕಂಚಿನ ಶಾಸನ", **ಇತಿಹಾಸ ದರ್ಶನ** ಸಂ. ೧೦/೧೯೯೫, ಪುಟ ೮೩, ನೋಡಿ. ಈ ಲೇಖನವನ್ನು ಶ್ರೀಮತಿ ಡಾ।। ವಸುಂಧರಾ ಫಿಲಿಯೋಜಾ ಅವರು ಫ್ರೆಂಚ್ ಭಾಷೆಗೆ ಭಾಷಾಂತರಿಸಿದ್ದಾರೆ.

೯. ಹರಿಹರ ಶ್ರೀನಿವಾಸರಾವ್., "ಮಾಗಳದ ಶಾಸನಗಳಲ್ಲಿ 'ಯೋಗ'-ವೈಜ್ಞಾನಿಕ ವಿಶ್ಲೇಷಣೆ", **ಇತಿಹಾಸದರ್ಶನ** ಸಂಪುಟ ೯/೧೯೯೪. ಪುಟ. ೧೩೦.

ಹಣಮಂತ ತಾಸಗಾಂವಕರ*

# ಪ್ರಥಮ ಹರಿದಾಸ ಮಹಿಳೆ ಗಲಗಲಿ ಅವ್ವನವರು

ಬಾಗಲಕೋಟೆ ಜಿಲ್ಲೆಯಲ್ಲಿ ಗಾಲವಮಹರ್ಷಿಕ್ಷೇತ್ರ ಗಲಗಲಿ ಕೃಷ್ಣಾತೀರದಲ್ಲಿದೆ. ಇಲ್ಲಿಯ ಪಂಡಿತರು ಗಲಗಲಿ ಪಂಡಿತರೆಂದು ಹೆಸರುವಾಸಿ. ಈ ಗಾಲವ ಮಹರ್ಷಿ ಕ್ಷೇತ್ರ ಗಲಗಲಿ, ಗಲಗಲ ಮಂಗಲಿಗೆ - ಕುತುಬಾಬಾದ - ಗಲಗಲಿಯಾಗಿ ನಾಮಕರಣ ಗೊಂಡು ಮಾರ್ಪಾಡುಗೊಂಡಿದೆ.

ಕನ್ನಡ ಸಂಸ್ಕೃತಗಳಲ್ಲಿ ಗ್ರಂಥ ರಚಿಸಿದ ರಾಜ್ಯ-ರಾಷ್ಟ್ರ ಪ್ರಶಸ್ತಿ ವಿಜೇತ ಸಂಸ್ಕೃತ ಜ್ಞಾನಪೀಠ ಪುರಸ್ಕೃತ ಪಂಢರಿನಾಥಾಚಾರ್ಯ ಗಲಗಲಿ ಇವರ ಪೂರ್ವಜರೇ ಈ ಗಲಗಲಿ ಅವ್ವನವರು.

ಈ ಮನೆತನಕ್ಕೆ ಪಾಂಡಿತ್ಯ ಮನ್ನಣೆಯಾಗಿ ಅನೇಕ ಜಹಗೀರಗಳು, ವರ್ಷಾಶನ ಬಿರುದು ಬಾವಲಿಗಳು ಆದಿಲಶಾಹಿ, ನಿಜಾಮರು, ಪೇಶವೆ ಮರಾಠರು, ರಾಣಿಸರಕಾರ, ಮೈಸೂರು ಅರಸರಿಂದ, ಇದೀಗ ಭಾರತ-ಸರಕಾರದಿಂದ ಹೀಗೆ ಅಂದಿನಿಂದ ಇಂದಿನವರವರೆಗೂ ಅವ್ಯಾಹತವಾಗಿ ಲಭ್ಯವಾಗಿವೆ. ಗೋದಾವರಿ ತೀರದ ಗಂಗಾಖೇಡ ಈ ಮನೆತನದ ಮೂಲಸ್ಥಾನ. ಮನೆತನ ದವರು ಸೇನೆಕಟ್ಟಿಕೊಂಡು ಸಹಾಯ ಯಾಚಿಸಿದ ರಾಜರುಗಳಿಗೆ ನೆರವಾಗುತ್ತಿದ್ದ ಸೇನಾಪತಿಗಳು.

ಮಧ್ವಸಮಾಜದ ಗುರುಗಳೂ, ಶ್ರೀಮತ್ ಉತ್ತರಾದಿ ಮಠದ ಶ್ರೀಪಾಂದಗಳವರೂ ಆಗಿದ್ದ ಶ್ರೀ ವಿದ್ಯಾಧೀಶ ತೀರ್ಥರಿಂದ ಮಂತ್ರೋಪದೇಶ, ಹೊಂದಿ ಸ್ವರೂಪೋದ್ಧಾರ ಗೊಂಡ ಶ್ರೀಪತ್ಯಾಚಾರ್ಯ ಹಾಗೂ ನರಸಿಂಹಾಚಾರ್ಯರು ಶೂರ್ಪಾಲಿ ಕ್ಷೇತ್ರದಲ್ಲಿ ವಾಸವಾದರು. ಕಾಲಾಂತರದಲ್ಲಿ ಶ್ರೀಗಳಾಜ್ಞೆಯಂತೆ ಅಶ್ವತ್ಥ ವೃಕ್ಷದ ಟೊಂಗೆಯೊಂದಿಗೆ ಗಲಗಲಿ ಗ್ರಾಮವಾಸಿಗಳಾದರು. ಗಲಗಲಿ ಮನೆತನ ಪಂಡಿತರಾದರು. ಈ ಮನೆತನದ ಇಂಥ ಪಂಡಿತರಾದ ಋಷಿಸಾದೃಶ್ಯರಾದ ಮುದ್ಗಲಾಚಾರ್ಯರ ಪತ್ನಿ ಈ ರಮಾಬಾಯಿ. ಮುಂದೆ ಇವರೇ ಗೌರವ ಪೂರ್ವಕ 'ಅವ್ವನವರು" ಎಂದು ಮನ್ನಣೆ ಪಡೆದ ಕವಯಿತ್ರಿ, ರಮೇಶ, ರಮಿಯರಸು, ಅಂಕಿತಗಳಿಂದ ಕೀರ್ತನೆಗಳನ್ನು ರಚಿಸಿರುವರು. ಸುಮಾರು ಇವರ ಕಾಲ ೧೬ನೆಯ ಶತಮಾನದ ಉತ್ತರರಾರ್ಧದಿಂದ - ೧೭ನೆಯ ಶತಮಾನದ ಪೂರ್ವಾರ್ಧ. ವೇದ ಶಾಸ್ತ್ರ ಪುರಾಣ ಭಾಗವತ-ಭಾರತ ಇವೇ ಮೊದಲಾದವುಗಳ ಸಾರವನ್ನು ಪಾಂಡಿತ್ಯ ಅನುಭಾವಗಳ ಮೂಲಕ ನೀತಿಸುಧೆ ಶುದ್ಧಾಚರಣ, ಹರಿಭಕ್ತಿ ಸಾಧನೆಗಳನ್ನು ಇವರು ಬೋಧಿಸಿದ್ದಾರೆ. ಮುಮುಕ್ಷಿಗಳಿಗೂ ತಿಳಿಯುವಂತೆ ಹೇಳುತ್ತಲೇ ಭಕ್ತಿಯ ಜೊತೆಗೆ ಶೃಂಗಾರ ಹಾಸ್ಯ ಕರುಣಾರಸಗಳನ್ನು ಹರಿಸಿದ್ದಾರೆ. ಗಹನವಾದ ಶಾಸ್ತ್ರ ತತ್ವಗಳು ಇವರ ಹಾಡುಗಳಲ್ಲಿ ಸುಲಲಿತವಾಗಿ ಧಾರಾಳವಾಗಿ ಹರಿದು ಬಂದಿವೆ. ವೇದ ಶ್ರುತಿಗಳನ್ನು ಶಾಸ್ತ್ರಗಳನ್ನು ಸರಳಗ್ನಡದಲ್ಲಿ ಹೇಳಿದ್ದಾರೆ. ಅವ್ವನವರ ತವರು ಮನೆ ಇಂದಿನ ಕೊಪ್ಪಳ ಜಿಲ್ಲೆಯ ಭೋಗಾಪುರ. ಆ ಭೋಗಾಪುರೇಶ ದೇವಸ್ಥಾನದ ಪೂಜಾರಿ ಮಗಳು ಹನ್ನೆರಡರ ಬಾಲೆ ಅವಿವಾಹಿತೆ.

ಮುದ್ಗಲಾಚಾರ್ಯರು ಸಂಚಾರಗೈಯ್ಯುತ್ತ ಆಗಾಗ ಈ ದೇವಸ್ಥಾನದಲ್ಲಿ ಪರಿಚಾರಕರು - ಪರಿವಾರದವರೊಂದಿಗೆ ಬೀಡು ಬಿಡುತ್ತಿದ್ದರು. ಜೊತೆಯಲ್ಲಿ ಪಂಡಿತ ಮಕ್ಕಳೂ ಇರುತ್ತಿದ್ದರು. ಇಂಥ ವಯೋವೃದ್ಧ ಮುದ್ಗಲಾಚಾರ್ಯರನ್ನು ಈ ಬಾಲೆ - ಅವ್ವನವರು ವಿವಾಹವಾಗುತ್ತಾರೆ. ಕನ್ಯೆಯ ತಂದೆಗೆ ೧೨೦೦ ಬೆಳ್ಳಿಯ ನಾಣ್ಯಗಳನ್ನು "ತೆರ"ವೆಂದು ಕೊಡುವರು. ಕಾಲಾಂತರ ದಲ್ಲಿ ವೈಧವ್ಯ. ಮಕ್ಕಳಿಂದ ಶಾಸ್ತ್ರ ಕುರಿತಾಗಿ ತಿಳುವಳಿಕೆ. ಭಾರತ ಭಾಗವತ - ರಾಮಾಯಣ ನಿತ್ಯ ಶ್ರವಣ. ಹೀಗೆ ಇವರು "ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತರು". ಇವರು ರಚಿಸಿದ ಮುಯ್ಯಾ ಒಯ್ದು ಹಾಗೂ ಮುಯ್ಯಾ ತಿರುಗಿಸಿದ ಅಲ್ಲದೆ ಕೋಲ ಹಾಡುಗಳೆಂದು ಒಟ್ಟು ೨೬೬ ದೊರೆತಿವೆ. ಉಗಾಭೋಗ ಹಾಗೂ ಸೇತುಬಂಧನ ಹಾಡು ಕೂಡ ರಚಿಸಿದ್ದಾರೆ.

ಗಲಗಲಿಯಲ್ಲಿದ್ದು - ತೀರ್ಥಕ್ಷೇತ್ರ ಪರ್ಯಟನಗೈದು - ಕೊನೆಯಲ್ಲಿ ಶೂರಪಾಲಿ ಗ್ರಾಮದಲ್ಲಿ ವೈಕುಂಠವಾಸಿಗಳಾದರು. ತಮ್ಮ ಕೀರ್ತನೆಗಳಲ್ಲಿ ಇವನ್ನು ಬರೆದು ಮುಗಿಸಿದ ಕಾಲ ತಿಳಿಸಿದ್ದಾರೆ. ಅದು ಕ್ರಿ.ಶ. ೧೬೯೫ ರ ಮೇ ೨೨ ಇರುತ್ತದೆ. ಅಗಿ ಹುಣ್ಣಿವೆ. ನರಸಿಂಹ ದೇವರ ರಥೋತ್ಸವ ಸಮಯ:

*"ಬಲ್ಲಿದ ಗುರುಗಳ ಎಲ್ಲ ಹಿರಿಯರ ದಯದಿ!*
*ಬಲ್ಲಷ್ಟು ತತ್ವ ರಚಿಸಿದೆ"* ಎಂದಿದ್ದಾರೆ.

ಅತಿ - ವಿನಯಿಗಳಾದ ಇವರು ತಮ್ಮ ಕಾವ್ಯ ಕುರಿತು

*"ಮುದ್ಗಲ ವಾಸನ ಶುದ್ಧ ನಾಮದವರು।*
*ಮುದ್ದುಪಾದಗಳ ಸ್ಮರಿಸುತ।*
*ಮುದ್ದುಪಾದಗಳ ಸ್ಮರಿಸುತ - ರಚಿಸಿದ।*
*ಅಪದ್ಧ ನೋಡದಲೆ ಹರಿ ಕೊಳ್ಳೋ।*
*ಮೂಢಳು ನಾನೊಂದು ಬೇಡಿ ಬಯಸಿಕೊಂಡೆ।*
*ಮಾಡಿದೆ ರಚನೆಯ ಮನಉಬ್ಬಿ॥"*

ಎಂದು ಬಿನ್ನೈಸಿದ್ದಾರೆ. ಕೊಂಗ ಬುದ್ಧಿಯನ್ನೂ ಅಷ್ಟಮದ ಗಳನ್ನೂ ತಂದೆ ರಾಮೇಶನ ಪಾದಕ್ಕೆ ಅರ್ಪಿಸಲು ಹೇಳುತ್ತ

* ಕಿಲ್ಲಾ, ಶಿವಾಜಿ ರಸ್ತೆ, ಬಾಗಲಕೋಟೆ - ೫೮೭ ೧೦೧

"ಅಷ್ಟ ಮದವು ತಮವು ಎಂಬುವ। ಕುಟ್ಟಿಹಿಟ್ಟು ಮಾಡಿಸಿ।
ಸಿಟ್ಟು ಕೋಪವೆಂಬುವ ಬಣವಿ। ಒಟ್ಟಿ ಕೆಂಡ ಹೇರಿಸಿ।
ಸತ್ವ ರಜತಮವು ಎಂಬುವ। ಕತ್ತಲೆಯ ಅಡಗಿಸಿ।
ಮತ್ತೆ ಜ್ಞಾನ ಸೂರ್ಯನ। ಪ್ರಶಸ್ತ ಉದಯ ಮಾಡಿಸಿ॥

ಇವರು ತಮ್ಮ ಹಾಡುಗಳಲ್ಲಿ ದ್ರೌಪದಿ ಸುಭದ್ರೆ ರುಕ್ಮಿಣಿ - ಸತ್ಯಭಾಮೆ, ಗಂಗೆ-ಗೌರಿ ಶ್ರೀಕೃಷ್ಣ ವಿಷ್ಣು ಶಿವ ಮಠಾಧೀಶರು, ಆಪ್ತಬಳಗವೃಂದ ಹೀಗೆಲ್ಲರೊಡನೆಯ, 'ಸಂವಾದಗಳೊಂದಿಗೆ ಮುಯ್ಯಾ ಒಯ್ಯುವ, ಕೊಡುವುಗಳನ್ನು, ಹರಿಚರಿತ್ರೆ ಹಾಗೂ ದಿವ್ಯಲೀಲಾ ವಿಭೂತಿಗಳನ್ನು ಭಕ್ತಿಯಿಂದ ಹೇಳುತ್ತಾರೆ. ರುಕ್ಮಿಣಿಯ ಮುಯ್ಯಾ ವರ್ಣನೆಯಲ್ಲಿ

"ದಿಕ್ಕು ತುಂಬಿತು। ಲೆಕ್ಕವಿಲ್ಲದೆ ಜನರು।
ಕಾಶ ತುಂಬಿತು। ಎಲ್ಲ ಕೋಶ ತುಂಬಿತು।
ಆಶೆ ಬಡುತಲೆ ಜನರು। ಸೋಸಿನ ಮುಯ್ಯಕ್ಕೆ।
ಹಾದಿ ತುಂಬಿತು। ಎಲ್ಲ ಬೀದಿ ತುಂಬಿತು।
ಅಂಬರ ತುಂಬಿತು। ಪಟ್ಟಣ ತುಂಬಿತು ಒಂದಿಷ್ಟು ಬಿಡದಲೆ॥

ಹೀಗೆ ಈ ಮಂಗಳ ಕಾರ್ಯಕ್ಕೆ ದೇವಾಧಿದೇವತೆಗಳೆಲ್ಲ , ತಾಳ ತಂಬೂರಿ ಜನ, ತುಂಬುರರು ನಾರದರು, ಸಿದ್ಧ ಸಾಧ್ಯರು ಪ್ರಸಿದ್ಧ ನಾಟಕಕಾರರು, ಸನ್ನದ್ಧರಾಯರೆಲ್ಲ-

"ಕೋಟಿ ಸೂರ್ಯರ ಥಾಟ ತೋರೋ ಅಂಗಳದಿ
ಮುತ್ತಿನ ತೋರಣ ನವರತ್ನ ಹಂದರ।
ಪಚ್ಚದ ಪಾವಟಿಗೆ ರತ್ನ ಹಚ್ಚಿದ ಹೊಸ್ತಿಲ"

ದಾಟಿ ಒಳ ಪ್ರವೇಶಿಸಿದರು. ಎನ್ನುವಲ್ಲಿ ವರ್ಣನೆಯ ಅಗಾಧತೆ. ವಿಶಾಲತೆಯನ್ನು ಕಾಣುತ್ತೇವೆ. ಅದೇ ರೀತಿ ಬೀದಿ ಶೃಂಗಾರದ ಬಣ್ಣನೆಯಲ್ಲಿ:

"ಮೇಲು ಮನೆಯು ಕದಳಿಕಂಬ ಮ್ಯಾಲೆ ಹಂದರಗಳು।
ಸಾಲು ಜಗತಿ ತೋರಣ ವಿಶಾಲ ಬೀದಿಯೊಳು।
ಸಾವಿರ ಅಂಗಡಿಗಳ ಸಾಲು ಬೀದಿಯೊಳು।
ಶ್ರೀ ಲೋಲ ರಾಮೇಶನ ಭಕ್ತರು ವಾಲ್ಯೆಸೋಕು ಹಿಂಗೆ॥

ಸುಂದರ ನಿಸರ್ಗ ಬಣ್ಣನೆಯಲ್ಲೂ ರಮ್ಯತೆ, ಪ್ರೇಮವನ್ನು ಸೂಸಿದ್ದಾರೆ.

ರಂಗನ ಅಂಗಕೆರಗುವಂತೆ। ಬಾಗುವ ಟೆಂಗಿನ ಮರ ನೋಡ।
ಶೃಂಗಾರದವನ ನೋಡ। ಪಂಚರಂಗದ ಗಿಳಿ ನೋಡ।
ಸಖಿಯೆ ಮಂಗಳ ಸ್ವರ ನೋಡ।
ಜಾಜಿ ಕುಸುಮ ನೋಡ। ತುಳಸಿ ರಾಜಿಸುವ ವನನೋಡ।
ಸುಂದರ ಲತೆ ನೋಡ। ರಂಗಗೆ ಫಲ ತಂದು ಅರ್ಪಿಸುವಂತೆ।
ಸಖಿಯೆ ಜಾತಿ ಹಂಸ ನೋಡ। ವನದೊಳು ಮಾತಿನ ಗಿಳಿನೋಡಾ
ನೂತನ ಮೃಗ ನೋಡ। ಕಸ್ತೂರಿ ಮೃಗ ನೋಡ
ಸಾರ ಪಕ್ಷಿಯು ನೋಡ। ಹರಿಗುಣ ಸಾಕುತ ನಲಿಯುತಿವೆ।
ಆಲ ಅಶ್ವತ್ಥಪಾಲೆಶಾಬಾರಿ। ವೃಕ್ಷ ಸಾಲು ಮಂಟಪ ನೋಡ।
ನದನದಿಗಳ। ದಾಟಿ ಮುದದಿ।
ಮುಯ್ಯಕ್ಕೆ ಬರಲು ಅದ್ಭುತವಾಗಿ ಬೆಳಗಿವೆ॥

ಹೀಗೆ ವನದ ವರ್ಣನೆ ಪದ್ಯಗಳು ಸಾಕಷ್ಟು ಕಾಣಸಿಗುತ್ತವೆ. ಸೌಂದರ್ಯವನ್ನು ಬಣ್ಣಿಸುವಲ್ಲಿ ಉಪಮಾತೀತರಾಗಿದ್ದಾರೆ. "ಜಾಣೆ ಕಲ್ಯಾಣಿ ಸುಂದರವಾಸಿ ಲೋಕಸುಂದರಿ ಪನ್ನಂಗ ವೇಣಿ ಚಂದ್ರವದನೆ ಚಂಚಲಾಕ್ಷಿ ನಳಿನ ಮುಖಿ ಮಂದಗಮನೆ ಕಾಂತೆ ಚಾರುವದನೆ ಜಘನ್ನಳೆ ಅಂಬುಜ ಮುಖಿ, ಮೊದಲಾಗಿ ಇಂಥ ಲತಾಂಗಿಯರು ತಂದ ಸುಂದರ ಮುಯ್ಯ, ಇಂದ್ರ ಲೋಕದಲ್ಲಿಲ್ಲ. ಚಂದ್ರಲೋಕದಲ್ಲಿಲ್ಲ. ನಾಗಲೋಕದಲ್ಲಿಲ್ಲ. ಹಿಂದಿಲ್ಲ ಮುಂದಿಲ್ಲವೆಂದು ವರ್ಣಿಸುತ್ತಾರೆ.

ಇವರು ಪ್ರಯೋಗಿಸಿದ ಪದಪುಂಜ ನಾಣ್ನುಡಿಗಳೂ ಪ್ರತಿಮಾ ರೂಪಕಾಲಂಕಾರಗಳೂ ಅದ್ಭುತವಾಗಿವೆ.

"ಹಾಟಗಾಂಬರ ಧಾರಿ ಕೋಟಿ ರೂಪದಿ ಜಗನ್ನಾಟಕ ಕೃಷ್ಣ"
"ನೇತ್ರವೆಂಬೋ ಕುಮುದ ಚಕ್ಕನರಳುತೆ"
"ಬೆಂದ ಬಿಸಲೊಳು ಬಹಳ ಬಂದಪುರುಷಗೆ ಉದಕ"
"ಒಳ್ಳೆ ಮನುಜರಸಂಗ ಮಲ್ಲಿಗಿ ಮುಡಿದಂತೆ"
"ಉರಗ ಹಿರಿಯದೆಂದು ಎರಗೋದೇ"

ಹೀಗೆ ಜನಪದಗಳನ್ನೇ ಸಮರ್ಥವಾಗಿ ಬಳಸಿದ್ದಾರೆ. ನಾಟ್ಯಪ್ರಿಯ ಆ ಭಗವಂತನನ್ನು ಇವರೂ ತಾಳಕ್ಕೆ ತಕ್ಕಂತೆ -ಸ್ತುತಿಸಿದ್ದಾರೆ.

ಘಿಲಿ ಘಿಲಿ ಘಿಲಿಕೆಂದು ಗೆಜ್ಜೆ
ಘಿಲಿ ಘಿಲಿ ಘಿಲಿ। ಘಿಲುಕು ಎನ್ನುತಲಿ
ಬಲು ಬಲು ರೌಪದಿ ಬಾಲೆ ರಂಭಾ
ಕಿಲಿಕಿಲಿ ಕಿಲಿಕಿಲಿ ಕಿಂಕಿಣಿ ಜಾಲದಿ
ನಲಿನಲಿದಾಡುತ ಚಲುವೆ ರಾಧೆ
ಝಣಝಣರೆನುತಲಿ ಜಾಣೆ ರಂಭಾ
ಕುಣಿಕುಣಿದಾಡುತ-ಕುಂಭಿಣಿ ಮ್ಯಾಲೆ
ಥಳಥಳಹೊಳೆಯುತ ತಾಳ ಹಾಕಿಸಿ
ಅಳಕಿಸಿ ಸೂರ್ಯನ ಬೆಳಕಿಲೆ ತನ್ನಯ
ತಕ್ಕಡ ತಕ್ಕಡ ತಾಥಾ ಎನುತಲೆ
ಧಿ ಕ್ಕಿಡಿ ಧಿ ಕ್ಕಿಡಿ ಧಿಮಕಿಡಿ ಎನುತಲೆ
ಘಲು ಘಲು ಘಲುಕು ಎನುತಲೆ
ಚಲುವ ರಾಮೇಶನು ಸುಲಭದಿ ನಲಿಪ॥

ಇಂಥ ಜಾತ್ರೆಯನ್ನು ವರ್ಣಿಸಿ ಕಣ್ಮುಂದೆ ನಿಲ್ಲಿಸುವಂತಿದೆ ಈ ಹಾಡು-

ಹತ್ತೆಂಟು ಸಾಲಿನ ಬತ್ತಾಸದಂಗಡಿ
ಬತ್ತದ ಅರಳು ಮೊದಲಾಗಿ
ಬತ್ತದ ಅರಳು ಮೊದಲಾಗಿ ಸಕ್ಕರಿ ಬೊಂಬೆಯ
ತಂದಿಟ್ಟು ಮಾರುವವರು ಕಡಿಮೆಯಲ್ಲ॥
ಕುಂಕುಮ ಬುಕ್ಕಿಟ್ಟುಗಳ ಸಾಲು ಅಂಗಡಿ ಕುರಿತಾಗಿ-
ಕುಂಕುಮ ಅರಿಷಿಣ ಅಲಂಕಾರ ದ್ರವ್ಯವ
ಅಂಕ ಅಂಕಣಕ ನೆರವ್ಯಾಕೆ।

ಅಂಕ ಅಂಕಣಕ ನೆರವ್ಯಾಕೆ ಚೆಲಿ ಮಾಡೊ
ಕಂಕಣದ ಕೈಯ ಕೆಲದಯುರು ಕಡಿಮೆಯಿಲ್ಲ॥
ಬುಕ್ಕಿಟ್ಟು ಪರಿಮಳ ದ್ರವ್ಯ ಪೊಟ್ಟಣವ ಕಟ್ಟಿ ಥರಥರವು
ದ್ರವ್ಯವ ಕೊಟ್ಟು ಕೊಂಬುವರು ಕಡಿಮೆಯಿಲ್ಲ॥
ಸೋಜಿಗವಾಗಿದ್ದ ಜಾಜಿ ಮಲ್ಲಿಗೆ ಹೂ ಸೂಜಿಮಲ್ಲಿಗೆ ಸರಗಳು।
ರಂಗನ ಪೂಜೆಗೆ ಒಯ್ವೋ ಪುರುಷರು।
ನಾಲ್ಕು ದಿಕ್ಕಿಗೆ ದಿವ್ಯ ಆಕಳ ಹಿಂಡುಗಳು ಸಾಕುವ ಎರಳೆ
ಎಳೆಗಾವು ಎತ್ತೆತ್ತ ನೋಡಿದರು ಮುತ್ತಿನ ಪಲ್ಲಕ್ಕಿ
ಉತ್ತಮ ರಥವು ಹಿಡಿದೇಜಿಯ।
ಹಿಡಿದೇಜಿಯ ಮ್ಯಾಲಿನ್ನು ಹತ್ತಿ ಬಾಹುವರು ಕಡಿಮೆಯಿಲ್ಲ
ಬಾಜಾರ ದೊಳಗಿನ್ನು ರಾಜಸಿಂಹಾಸನ
ರಾಜ ರಮೇಶ ಕುಳಿತಲ್ಲಿಯೆ
ರಾಜ ರಮೇಶ ಕುಳಿತು ಪೂಜೆಗೊಂಬೊ
ಮೂರ್ಜಗವು ಮುದದಿಂದ॥

ಪಾಂಡವರು ಸಾಕಷ್ಟು ಕಷ್ಟ ಅನುಭವಿಸಿದ್ದನ್ನು, ಅವೆಲ್ಲಕ್ಕೂ ಕಾರಣವಾದ ಕೆಟ್ಟವುಗಳನ್ನೆಲ್ಲ ತ್ಯಜಿಸಲು ಶ್ರೀ ಕೃಷ್ಣನ ಮೂಲಕ ಸಮಾಜಕ್ಕೆ ಸಂದೇಶ ಕೊಡುತ್ತಾರೆ. ಮುಯ್ಯಾ, ಒಯ್ದ ಹಾಗೂ ತಿರುಗಿಸಿದ ಕೀರ್ತನೆಗಳಲ್ಲಿ, ದ್ವಾರಕಾ ಪಟ್ಟಣದ ವಿಸ್ತಾರ, ದೂತೆ ಹಾಡು, ವಾದದ ಹಾಡು, ಬಲಗೊಂಡ ಹಾಡುಗಳು, ವನದ, ದ್ರೌಪತೀ ರಮಣ ರಾಸಕ್ರೀಡೆ ಉಡುಗೊರೆ ಪದಗಳು ಹೀಗೆ ವಿವಿಧ ಭಾಗಗಳಲ್ಲಿ ರಚಿತಗೊಂಡಿವೆ.

ಅವ್ವನವರ ಕಾವ್ಯಗಳಲ್ಲಿ ನವರಸಗಳೆಲ್ಲ ಉಕ್ಕೇರಿ ಹರಿಯುತ್ತಿದ್ದರೂ, ಅವೆಲ್ಲವೂ ಭಕ್ತಿಯ ಕುಲುಮೆಯಲ್ಲಿ, ಪಾವನಗೊಂಡಂತೆ ಬರುತ್ತವೆ. ಉಪಮೆ ಉತ್ಪ್ರೇಕ್ಷೆ ಅಲಂಕಾರ ವಕ್ರೋಕ್ತಿ ವ್ಯಾಜ್ಯೋಕ್ತಿ, ಕಲ್ಪನಾಕೌಶಲ್ಯ ಎಲ್ಲವೂ ಅವ್ವನವರ ಕಾವ್ಯದಲ್ಲಿ ನೀತಿ-ಬೋಧಕವಾಗಿ ಹರಿ ಪ್ರೀತಿ-ಕಾರಣವಾಗಿಯೇ ಬೆಳಗುತ್ತವೆ.

ಕನ್ನಡದಲ್ಲಿ ದೇವರನಾಮಗಳಾಗಿ ನೂರಾರು ನುಡಿಗಳನ್ನು ಹಾಡಿರುತ್ತಾರೆ. ಇವರನ್ನು ಮೈಸೂರಿನ ಅರಸರು ಸನ್ಮಾನಿಸಿದ್ದಾರೆ. ಅಲ್ಲದೇ, ಪುಣೆಯಲ್ಲಿ ಜರುಗಿದ ಉತ್ತರ ಹಾಗೂ ದಕ್ಷಿಣ ಭಾರತ. ಪಂಡಿತರುಗಳ ಸಮ್ಮೇಳನದಲ್ಲಿ, ದಕ್ಷಿಣದ ಪಂಡಿತರು ಸೋಲನ್ನಪ್ಪುವ ಹಂತದಲ್ಲಿದ್ದಾಗ, ಈ ಅವ್ವನವರು ಆ ಕೋಟೆ ಪ್ರಮೇಯವನ್ನು ಬಿಡಿಸಿದ್ದೂ ಅಲ್ಲದೆ. ಅದರಿಂದ ಉದ್ಭವಿಸಬಹುದಾದ ಪ್ರಶ್ನೆಗೂ ಪರಿಹಾರ ಸೂಚಿಸಿ, ದಕ್ಷಿಣದ ಪಂಡಿತರುಗಳಿಗೆ ಜಯ ದೊರಕಿಸಿಕೊಟ್ಟರು. ಹೀಗಾಗಿ ಸಂತೋಷಗೊಂಡ ಬಾಜಿರಾಯ ಪೇಶವೆ, ಇವರಿಗೆ ಜಯಪತ್ರ ವರ್ಷಾಶನ ಕೊಟ್ಟು ಗೌರವಿಸಿದ್ದಾನೆ. ಇವಲ್ಲದೆ ಸಾಕಷ್ಟು ಸನದುಗಳು ದೇವನಾಗರಿ ಮೋಡಿ ಪಾರ್ಶಿ ತೆಲುಗು ಕನ್ನಡಗಳಲ್ಲಿವೆ. ಅಂದಿನ ಉತ್ತರಾದಿ ಮಠಾಧೀಶರೂ ಸನ್ಮಾನಿಸಿದ್ದಾರೆ.

ಅವ್ವನವರ ಶಿಷ್ಯೆ ಭಾಗವ್ವ - ಪ್ರಯಾಗವ್ವ ಅಂಕಿತದಿಂದ ಸಾಕಷ್ಟು ಕೀರ್ತನೆಗಳನ್ನು ರಚಿಸಿರುವರು. ಇವರ ಕುರಿತಾಗಿಯೂ ಸಂಶೋಧನೆ ನಡೆಸಬೇಕಿದೆ.

ಮಂತ್ರಾಲಯ ಶ್ರೀರಾಘವೇಂದ್ರ ಯತಿಗಳ ತಾಯಿ "ವಿದುಷಿ" ಎಂದಿದ್ದರೂ ಶ್ರೀ ಪುರಂದರ ದಾಸರ ಹೆಂಡತಿ - ಮಗಳು ಕೀರ್ತನೆಗಳನ್ನು ರಚಿಸಿರುವರೆಂಬ ಉಲ್ಲೇಖವಿದ್ದರೂ. ಇವಾವೂ ದೊರೆತಿಲ್ಲ.

ಹೀಗಾಗಿ ಕ್ರಿ. ಶ. ೧೭೭೫ರಲ್ಲಿ ಕೀರ್ತನೆಗಳನ್ನು ಬರೆದು ಮುಗಿಸಿದ ಈ ಅವ್ವನವರೇ ಪ್ರಥಮ ಹರಿದಾಸ ಮಹಿಳೆಯಾಗುತ್ತಾರೆ. ದಾಸ ಸಾಹಿತ್ಯಕ್ಕೆ ಮಹಿಳೆಯ ಕೊಡುಗೆ ಅತ್ಯಲ್ಪ ಇಂಥವರಲ್ಲಿ ಹರಪನಹಳ್ಳಿ ಭೀಮವ್ವ, ಹೆಳವನಕಟ್ಟೆ ಗಿರಿಯಮ್ಮ ನಂತರದವರಾದರೂ ಇವರ ಸಾಹಿತ್ಯ ಸಾಕಷ್ಟು ಬೆಳಕಿಗೆ ಬಂದಿದೆ. ಆದರೆ ಈ ಅವ್ವಯನವರ ಸಾಹಿತ್ಯ ಮಾತ್ರ ಇನ್ನೂ ಸಂಶೋಧಿಸಬೇಕಿದೆ.



ಡಾ|| ಎನ್. ಕೆ. ರಾಮಶೇಷನ್*

# ಕನ್ನಡದ ಆದ್ಯ ಶ್ರೀವೈಷ್ಣವ ಕೀರ್ತನಕಾರ್ತಿ - ಯದುಗಿರಿ ಅಮ್ಮ

(ಕ್ರಿ.ಶ. ಸು. ೧೮೨೦ - ೧೯೦೮)

"ಸುಧಾ ಓದಿ ಪದಹೇಳು" - ಎಂಬುವ ನಾಣ್ನುಡಿಯು ದಾಸಸಾಹಿತ್ಯ ಪ್ರಿಯರಿಗೆ, ಅದರಲ್ಲಿಯೂ ಮಧ್ವ ಸಂಪ್ರದಾಯ ಸ್ಥರಿಗೆ ಚಿರಪರಿಚಿತ. ಮಧ್ವ ಸಿದ್ಧಾಂತ ಪ್ರತಿಪಾದಕರಾಗಿ, 'ಟೀಕಾಚಾರ್ಯರೆಂದೇ ಪ್ರಸಿದ್ಧರಾದ ಆಚಾರ್ಯ, ಜಯತೀರ್ಥರು 'ನ್ಯಾಯಸುಧಾ ಗ್ರಂಥ' - ಎಷ್ಟು ಸ್ಮರಣೀಯ, ಪಠನೀಯವೋ, ಅಷ್ಟೇ ಮಟ್ಟಿಗೆ ಹರಿಭಕ್ತ, ಹರಿದಾಸರ ಪದ - ಕೀರ್ತನ ಸಂಪದವೂ ಅಷ್ಟೇ ಪ್ರಿಯ, ಸ್ಮರಣೀಯ, ಮನನೀಯ. ಹಾಗೆಯೇ 'ಸೂತ್ರಂ ಪಡಿತ್ ಪ್ರಬಂಧಮ್ ಶೊಲ್ಲ್', 'ನಾರಾಯಣನೇ ನಮಕ್ಕೇ ಪದಂ ತರುವಾನ್', 'ಪ್ರಸ್ಥಾನ ತ್ರಯ - ದಿವ್ಯಪ್ರಬಂಧಗಳು - ಎರಡೂ ವಿಶಿಷ್ಟಾದ್ವೈತದ ಎರಡು ಕಣ್ಣುಗಳಿದ್ದಂತೆ' - ಎಂದೆಲ್ಲಾ ರಾಮಾನುಜ ಮತದನುಯಾಯಿಗಳಾದ ಶ್ರೀವೈಷ್ಣವರು ಹೇಳಿ ಕೊಳ್ಳುವುದಿದೆ.

ನಡುಗನ್ನಡ ಸಾಹಿತ್ಯೇತಿಹಾಸದಲ್ಲಿ - ಅಂದರೆ - ಕ್ರಿ.ಶ. ೧೪ನೇ ಶತಮಾನದಿಂದೀಚೆಗೆ, ಬೆಳೆದು ಬಂದ ದಾಸಸಾಹಿತ್ಯ - ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮ (ಪದ, ಶ್ಲೋಕ, ಪದ್ಯ, ಗದ್ಯ ಬೆರೆತ ವಿಶಿಷ್ಟ ರಚನೆ) ವೇಣುಗೀತ, ಭ್ರಮರಗೀತ, ಮಂಡಿಗೆ (ವಿಶೇಷವಾಗಿ ಕನಕದಾಸರ ಕೊಡುಗೆ ಹಾಗೂ - ಶಿವಶರಣರ 'ಬೆಡಗಿನ ವಚನ'ಗಳಿದ್ದಂತೆ)ತತ್ವ ಸುವ್ವಾಲಿ (ಜಗನ್ನಾಥ ದಾಸರ ತ್ರಿಪದಿಗಳು), ಷಟ್ಪದಿ (ಶ್ರೀ ಕನಕದಾಸರ ನಳಚರಿತ್ರೆ - ರಾಮಧಾನ್ಯ ಚರಿತ್ರೆ - ಹರಿಭಕ್ತಿ ಸಾರ, ಶ್ರೀ ವಾದಿರಾಜಸ್ವಾಮಿಗಳ ವೈಕುಂಠವರ್ಣನ, ಶ್ರೀಜಗನ್ನಾಥ ದಾಸರ ಹರಿಕಥಾಮೃತ ಸಾರದವರೆಗೆ) ಸಾಂಗತ್ಯ (ಮೋಹನತರಂಗಿಣಿ) ಹೀಗೆ ಒಟ್ಟಾರೆ ದಾಸಸಾಹಿತ್ಯವನ್ನು ನೀಡಿದ ಹರಿದಾಸರು ಮಾಧ್ವಮತ ಹಾಗು ಹರಿಸರ್ವೋತ್ತಮತೆಯನ್ನು ಪ್ರತಿಪಾದಿಸಿ, ಪ್ರಸಾರ ಮಾಡಿದರು. ಅದೇ ರೀತಿಯಲ್ಲಿ ಹರಿದಾಸರಿಗೆ ಬಹಳ ಹಿಂದೆ (ಕ್ರಿ. ಶ. ೭-೧೦ನೇ ಶತಮಾನದ ಅವಧಿ) ಇದ್ದ ಶ್ರೀವೈಷ್ಣವ ಸಂತರಾದ ಆಳ್ವಾರರೂ ಪ್ರಧಾನವಾಗಿ ವೀರವೈಷ್ಣವ - ನಿಷ್ಠರು!

'ದ್ರಾವಿಡ ವೇದ' ವೆಂದೇ ಆಳ್ವಾರರು ಹಾಡಿದ ವೈಷ್ಣವ ಭಕ್ತಿಗೀತೆಗಳನ್ನು 'ಆರಾವಮುದೇ...' ಆರದ ಅಮೃತವೇ - ಎಂದು ಪರಿಭಾವಿಸಿ ಬ್ರಹ್ಮಸೂತ್ರದ ಶ್ರೀಭಾಷ್ಯಕ್ಕೆ ಸಮಾನವಾದ ಸ್ಥಾನ ವನ್ನು ನಾಲಾಯಿರ ದಿವ್ಯ ಪ್ರಬಂಧ ಸಾಹಿತ್ಯ ಸಂಪದಕ್ಕೆ ಮಾನ್ಯತೆ ಯಿತ್ತವರು. ಆಚಾರ್ಯರಿಗೆ 'ಉಭಯ ವೇದಾಂತ ಪ್ರವರ್ತನಾ ಚಾರ್ಯ' ಎಂದೇ ಕರೆವ ರೂಢಿ.

ತಮಿಳಿನಲ್ಲಿ ಬಹುಕಾಲದಿಂದ (ಕ್ರಿ.ಶ. ೬ನೇ ಶ. ದಿಂದ) ಭಕ್ತಿಚಳುವಳಿ, ಭಕ್ತಿ ಸಾಹಿತ್ಯ, 'ತೊಂಡ್' ಸಾಹಿತ್ಯವೆಂದು, ಸುವಿದಿತ. ತಮಿಳಿನಲ್ಲಿ 'ತೊಂಡ' 'ತೋಂಟ' ಎಂದರೆ, ಕನ್ನಡದಲ್ಲಿ 'ಡಿಂಗರಿಗ', 'ಭಕ್ತ' ಎಂಬುವ ಸಮಾನಾರ್ಥ (ಮೇಲುಕೋಟೆ ಬಳಿಯ ತೊಂಡನೂರು ಎಂದರೆ, ಶ್ರೀವೈಷ್ಣವ ಭಕ್ತ ವಾಸಿಸಿದ ಸ್ಥಳ). ದಿನನಿತ್ಯದ ಐಹಿಕಗಳಲ್ಲಿ (*Mundane* - ಪ್ರಾಂಪಚಿಕ) ವಾಂಛೆಯಿಲ್ಲ, ನಿಂತಲ್ಲಿ ನಿಲ್ಲುವವರಲ್ಲ, ಗ್ರಾಮೈಕ ರಾತ್ರಿವಾಸ ಸದಾ ಶ್ರೀ ಮನ್ನಾರಾಯಣ ಚಿಂತನೆ ಹೀಗೆ ಭಕ್ತನಾದವನು ಭುಕ್ತಿಗೆ ಹೆಚ್ಚು ಚಿಂತಿಸದೆ, ಭಕ್ತಿಯಲ್ಲೆ ಉನ್ಮಾದಾವಸ್ಥೆಯಲ್ಲಿ (*Ecstasy*) ಇರುತ್ತಾನೆ. *ತಾನೇಕೆ ಇಲ್ಲಿ - ಈ ಇಹಕ್ಕೆ ಬಂದೆ? ಇಲ್ಲೆಲ್ಲಾ ಬರೀ ಲೊಳಲೊಟ್ಟೆ; ಅಲ್ಲಿದೆ ನಮ್ಮ ಮನೆ - ಇಲ್ಲಿ ಬಂದೆ ಸುಮ್ಮನೆ; ಆದ್ದರಿಂದ ಹಿಡಿಯುವೆ ಶ್ರೀಹರಿಪುರದ ಬಟ್ಟೆ. 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ'* ಎಂದೇ ಚಿಂತನೆ ನಡೆಸುತ್ತಾರೆ.

ಹೀಗೆಯೇ ಮೂಡಬಾಗಿಲ (ಮುಳಬಾಗಿಲ) ಶ್ರೀಪಾದ ರಾಜರು, ಸೋದೆಯ ಶ್ರೀವಾದಿರಾಜಸ್ವಾಮಿಗಳು, ವ್ಯಾಸ ರಾಯರು, ಮಂತ್ರಾಲಯದ ಶ್ರೀರಾಘವೇಂದ್ರರು, ವ್ಯಾಸ ತತ್ವಜ್ಞರು ಇತ್ತೀಚಿನ ವ್ಯಾಸರಾಯ ಮಠದ ಪ್ರಸನ್ನ ವಿದ್ಯಾತೀರ್ಥರ ತನಕ ಅನೇಕ ಮಠಾಧೀಶರೂ ಈ ಭಕ್ತಿ ಆಂದೋಲನಕ್ಕೆ ಬೆಂಬಲ ನೀಡಿದ್ದಾರೆ. ತಾವೂ ಸಕ್ರಿಯವಾಗಿ ತೊಡಗಿಸಿಕೊಂಡು, ದಾಸಸಾಹಿತ್ಯ ಸಂಪದ ಬೆಳಸಿದ್ದಾರೆ.

ಇದೇ ರೀತಿಯಲ್ಲಿ ಕ್ರಿ.ಶ. ೭-೧೦ರ ಶತಮಾನಗಳಲ್ಲಿದ್ದು ಹೋದ ತಮಿಳುನಾಡಿನ ಶ್ರೀವೈಷ್ಣವ ಪರಂಪರೆಯ ಆಳ್ವಾರರು ನಡೆಸಿದ ಭಕ್ತಿಯಾಂಧೋಲನ, ಹರಿಭಕ್ತಿ ಪ್ರಸಾರ, ಸಮಾಜದ ಹಿತ ಬಯಸುವ ಮನೋವೈಶಾಲ್ಯ, ಜನಸಾಮಾನ್ಯರು ಬಳಸುವ ನುಡಿಗಟ್ಟಿನ ರಚನೆಗಳು ಅಂದಂದು ಇದ್ದ ವಿವಿಧ ದ್ರಾವಿಡ ಛಂದಗಳಲ್ಲಿ (ವೆಣ್ಬಾ, ಇಯಜ್‌ಪಾ, ಮಣಿಪ್ರವಾಳ, ಶೆಂದಮಿಳ್) ಹಾಡಿದ ದಿವ್ಯ ಪ್ರಬಂಧ, ಅಥವಾ ನಾಲಾಯಿರ ದಿವ್ಯ ಪ್ರಬಂಧ ವೆಂಬ ಭಕ್ತಿಗೀತೆಗಳು, ಇವನ್ನು ಗಮನಿಸಿದಾಗ ಈ ಆಂದೋಲನ - ಚಳುವಳಿ (*Movement*) ಸಾಕಷ್ಟು ಎಲ್ಲರನ್ನು ತನ್ನಲ್ಲಿ ತೊಡಗಿಸಿಕೊಂಡ ಜನತಾ ಚಳುವಳಿ, ಸರ್ವೋದಯ ಚಳುವಳಿಯೇ ಆಯಿತು. ಇದಕ್ಕೆ ಜ್ವಲಂತ ನಿದರ್ಶನಗಳಾಗಿ

* ಸಂಖ್ಯೆ ೧೭, ಶ್ರೀಗುರುಸದನ್, ೧೧ನೇ ಮುಖ್ಯ ರಸ್ತೆ, ಎಲ್. ಪಿ. ಸಿ. ಕಾಲೋನಿ, ಮೈಸೂರು - ೫೭೦ ೦೨೩

ತಿರುಪಾಣಿ (ಅಮಲನಾದಿಪಿರಾನ್) ವೆಲ್ಲಾಳರ ತಿರುಮಂಗೈ (ತಿರುಮೊಳಿ), ತಿರುಮಳಿಶೈ, ಕೊಂಡರಡಿಪ್ಪಡಿ (ಭಕ್ತಾಂಘ್ರಿರೇಣು) ಅನಂತರ ಬಂದ ರಾಮಾನುಜರು ಪ್ರೀತಿಸಿದ ದನುರ್ದಾಸ, ಅಂದಿನ ಸಮಾಜದ ಒಂದು ಕೆಳಸಮುದಾಯವನ್ನು 'ತಿರುಕುಲತ್ತಾರ್' (ಶ್ರೇಷ್ಠ ಕುಲದವರು) ಎಂದು ಕರೆದು ಸನಿಹ ಸೇರಿಸಿಕೊಂಡ ಪರಿ ಇವೆಲ್ಲ ಸಾಕ್ಷ್ಯ ನುಡಿದಾವು.

ಈ ದಿಸೆಯಲ್ಲಿ ಲಂಬಿಸದೆ, ಹರಿದಾಸ ಸಾಹಿತ್ಯಕ್ಕೆ ಮಹಿಳೆಯರಾದ ಹೆಳವನಕಟ್ಟೆ ಗಿರಿಯಮ್ಮ (ಮಲೇಬೆನ್ನೂರಿನ ಸಮೀಪ, ಕುಮಾರನಹಳ್ಳಿ ಹೆಳವನಕಟ್ಟೆಯ ರಂಗನಾಥ ಸ್ವಾಮಿಯಬೆಟ್ಟ, ಆರಾಧ್ಯದೈವವಾಗಿ ಸೇವಿಸಿದವರು) (ಕ್ರಿ.ಶ. ೧೭೦೦-೧೭೫೦) ಹರಪನಹಳ್ಳಿ ಭೀಮವ್ವ (ಭೀಮೇಶ್ವರ ವಿಠಲ - ಕ್ರಿ.ಶ. ೧೮೨೩ - ೧೯೦೩) ಮೊದಲಾದ ವೈಷ್ಣವ ಕೀರ್ತನ ಕಾರ್ತಿಯರಂತೆಯೇ, ರಾಮಾನುಜ ದರ್ಶನದ ಅನುವರ್ತಿಯಾಗಿ, ಶ್ರೀವೈಷ್ಣವ ಆದ್ಯ ಕೀರ್ತನಕಾರ್ತಿಯಾಗಿ ಯದುಗಿರಿ ಅಮ್ಮನವರ ಕೃತಿ ಕುರಿತ ಸಂಕ್ಷಿಪ್ತ ಕಾಣ್ಕೆ ಈ ಸಾಲುಗಳ ಉದ್ದೇಶ.

ಶ್ರೀವೈಷ್ಣವ ಸಂಪ್ರದಾಯ - ರಾಮನುಜದರ್ಶನದ ಅನುಯಾಯಿಗಳ ಪೈಕಿ ತಮಿಳುನಾಡಲ್ಲಿದ್ದಂತೆ ಇರದಿದ್ದರೂ, ಕ್ರಿ. ಶ. ೧೭-೧೯ರಲ್ಲಿ ಅನೇಕ ಅನಾಮಿಕ ಕೀರ್ತನಕಾರ್ತಿಯರು ಆಗಿಹೋಗಿರುವುದು, ಮೇಲುಕೋಟೆ, ಮಳೂರು, ಬೇಲೂರು - ಹಳೇಬೀಡು, ಕಡೂರು - ದೇವನೂರು ಇತ್ಯಾದಿ ಕಡೆ ಕಂಡು ಬರುತ್ತದೆ.

ಶಿವಮೊಗ್ಗದ ಕೋಟೆ ಆಂಜನೇಯ ದೇವಾಲಯ ಪರಿಸರ, ಶ್ರೀರಂಗಪಟ್ಟಣ - ನಾಗಮಂಗಲ, ತಮಿಳುನಾಡಿನ ಶ್ರೀರಂಗ - ಶ್ರೀ ವಿಲಿಪುತ್ತೂರು ಶ್ರೀ ಪೆರಂಬೂರು - ತಿರುವಳ್ಳೂರು - ಆಳ್ವಾರ್ ತಿರುನಂಗಲಿ - ಬೆಂಗಳೂರಿನ ತುಳಸಿತೋಟ, ರಾಮಮಂದಿರ ಗಳು, ಮೈಸೂರು ಶ್ರೀಪರಕಾಲಮಠ, ಇಲ್ಲೆಲ್ಲ ನಡೆಯುವ ವಿಶೇಷೋತ್ಸವ ಸಾಂಪ್ರದಾಯಿಕ ಹಬ್ಬಹರಿದಿನಗಳು ಹಾಗು ಕನ್ನಡ ನಾಡಿನ ಊರುಗಳಲ್ಲಂತೂ, ಅನೇಕ ಕೀರ್ತನೆ-ದೇವರನಾಮ ಕೇಳಿದರೆ, ಅವರ ಸಂಗ್ರಹಿತ ಸಾಹಿತ್ಯದ ಕಲ್ಪನೆ ಒದಗುತ್ತದೆ. ಅವರ ಅನಂತರದ ತಲೆಮಾರಿನವರು ಬಹುತೇಕ ಸಂಗ್ರಹಣ ವಿಚಾರದೆಡೆ ಮನಗೊಡಲಿಲ್ಲ.

ಆದರೆ ಅದೃಷ್ಟವಶಾತ್, ಯದುಗಿರಿಯಮ್ಮನವರ, ಕೆಲವಾರು ಕೀರ್ತನೆ, ದೀರ್ಘಕೃತಿಗಳನ್ನು ಆಕೆಯ ಹತ್ತಿರದವರು ಬರೆದು, ಅದನ್ನು ಹಿರಿಯರಾದ ಶ್ರೀ ತೂಮ್ಬಲ್ ವೆಂಕಟಾ ಚಾರ್ಯರೆಂಬುವರು ೧೯೦೪ರಲ್ಲಿ ಪ್ರಕಟಸಿದ್ದು ಒಳ್ಳೆಯದಾಗಿದೆ. ಅಮ್ಮನವರ ಅಂಕಿತ, ವೆಂಕಟರಂಗ, ವೆಂಕಟಕೃಷ್ಣ, ಎಂದೆಲ್ಲ ಇದೆ.

ಯದುಗಿರಿಯಮ್ಮನವರ ಕುರಿತಂತೆ ವಿದ್ವಾನ್ ರಘುಸುತರು ಸುದೀರ್ಘ ಲೇಖನವೊಂದನ್ನು ಬರೆದಿದ್ದು, ಅವರೊಡನೆ ವೈಯಕ್ತಿಕ ಭೇಟಿ-ಮಾತುಕತೆ, ಪ್ರೊ।। ನಾ. ಗೀತಾಚಾರ್ಯರೊಡನೆ ಚಿಂತನೆ ಸ್ವಲ್ಪ ಮಾಹಿತಿಯನ್ನೊದಗಿಸಿವೆ. ತಿರುನಾರಾಯಣಪುರ - ಮೇಲುಕೋಟೆಯ ಕೆಲವರು ಹಿರಿಯರು, ಶ್ರೀರಾಮಾನುಜ ಮುನಿಗಳು, ಅಡ್ಯೆಯರ್ ಶ್ರೀರಾಮಶರ್ಮರುಗಳ ಮೂಲಕವೂ ಇಷ್ಟರಲ್ಲೇ ಕೆಲವು ಮಾಹಿತಿಗಳು ನನಗೆ ಲಭಿಸಲಿವೆ. ಶ್ರೀವೈಷ್ಣವ ಕೀರ್ತನಕಾರರನ್ನು ಗುರುತಿಸಿ, ಅವರ ರಚನೆಗಳನ್ನು ಬೆಳಕಿಗೆ ತಂದು, ವೈಕುಂಠದಾಸರ ಕೃತಿ ಸಂಚಯ - ಕನಕದಾಸರ ಪ್ರವೃತ್ತಿ ಭಾವ ವಿವೇಚಿಸಿ, ಹೆಚ್ಚಿನ ಸಂಶೋಧನೆಯನ್ನು ಪ್ರೊ।। ಗೀತಾ ಚಾರ್ಯರು ನಡೆಸಿದ್ದಾರೆ.

ಯದುಗಿರಿಯಮ್ಮನವರ ಪ್ರಕಟಿತ ಗೀತಸಂಪದದಲ್ಲಿ ಅನೇಕ ಬಿಡಿ ಕೀರ್ತನೆ, ಶ್ರೀಭಾಗವತ ಕಥಾ ಸಂಗ್ರಹ, ಶ್ರೀಪಾರ್ಥ ಸಾರಥಿಮಂಗಳ, ಶ್ರೀರಂಗಮಹಾತ್ಮ್ಯಂ, ಆಂಡಾಳ್ ನೀರಾಟ್ಟಂ, ಶ್ರೀ ಪಾರ್ಥಸಾರಥಿ ಸೇವಾತ್ರಯ ಕೀರ್ತನೆ, ಹೀಗೆ ಹಲವಾರು ದೀರ್ಘ ಕೃತಿಗಳೂ ಇವೆ. ವೈಯಕ್ತಿಕ ಬದುಕಿನಲ್ಲಿ ಅನುಭವಿಸಿದ ನೋವು - ಬಾಧೆ - ಬೇವು, ಪಾರಮಾರ್ಥಿಕತೆಗೆ ಹೆಚ್ಚು ಮನಗೊಡುವಂತೆ ಮಾಡಿತು. ಹೆಚ್ಚು ಪ್ರಸಾರವಿರದೆಯೇ ಕೀರ್ತನಕಾರ್ತಿ ಕಣ್ಮುಚ್ಚಿದರು.

ಇಲ್ಲಿ ಮೊದಲಿಗೆ, ಉಡುಪಿ ಶ್ರೀಕೃಷ್ಣನ ಕುರಿತು ಕೀರ್ತನೆಯನ್ನು ಉದ್ಧರಿಸಿ, ಅನಂತರ ಉಳಿದ ಕೃತಿಗಳ ಸಂಕ್ಷಿಪ್ತ ಮಾಹಿತಿ ನೀಡುವುದು ಉದ್ದೇಶ. ಈ ಕೃತಿಯನ್ನು ಕಿವಿಗೊಟ್ಟಾಲಿಸಿದಾಗ, ಮುಳಬಾಗಲಿನ ಶ್ರೀ ಪಾದರಾಯರ "ಕಂಗಳಿದ್ಯಾತಕೋ ಕಾವೇರಿ ರಂಗನ ನೋಡಿರೆ", "ಇಟ್ಟಾಂಗೆ ಇರುವೆನೊ ಹರಿಯೆ, ಎನ್ನದೊರೆಯೆ" ಎಂಬುವು ನೆನಪಾಗುತ್ತವೆ. ಹಾಗೆಯೆ ಅಮ್ಮನವರ ರಚನೆಯಲ್ಲಿರುವ ಭಕ್ತಿ-ಭಾವಗೀತಾತ್ಮ ಕತೆಯೂ ಗಮನಾರ್ಹ.

ದೃಷ್ಟಿ ಇದ್ಯಾತಕೆ ಉಡುಪಿ ಕೃಷ್ಣನ ನೋಡದ ।। ಪ।।
ಗೋಪಿಯರ ಪೂಜೆ ಗ್ರಹಿಸಿ । ಗೋಪಿಚಂದನ ಸಹಿತವಾಗಿ।
ವ್ಯಾಪಾರದ ಹಡಗೀಲಿ ಬಂದು ಶ್ರೀಪತಿಯ ನೋಡದ ।। ೧।।
ಮಧ್ವರಾಯರಿಗೊಲಿದು ಬಂದ। ಸಮುದ್ರ ತೀರದಲ್ಲಿ ನಿಂದು
ಪದ್ಮನಾಭನ ಪುರದೆ ನೆಲಸಿದ।
ಮುದ್ದು ಶ್ರೀ ಕೃಷ್ಣನ್ನ ನೋಡದ ।। ೨।।
ಅಷ್ಟ ಮಠದ ಯತಿಗಳಲ್ಲಿ । ಶ್ರೇಷ್ಠವಾದ ಪೂಜೆಗ್ರಹಿಸಿ।
ಶಾಪದುಷ್ಟವಾದ ದೇಶವನೆಲ್ಲಾ।
ಶ್ರೇಷ್ಠ ಮಾಡಿದ ಕೃಷ್ಣನ್ನ ನೋಡಿರ ।। ೩।।
ಶುದ್ಧವಾದ ಗೋವ ಘೃತವು।
ಕ್ಷೀರ ಸಕ್ಕರೆ ದಧಿ ಮಧುವು ನಾರಿಕೇಳ ಫಲಗಳಿಂದ।
ಮಿಂದ ಶ್ರೀಕೃಷ್ಣನ್ನ ನೋಡಿದ ।। ೪।।
ಉದ್ದಂಡವಾದ ಉರಗನಲ್ಲಿ। ಭೂಮಂಡಲಮನಾಳ್ವ
ನಿಲವನಿಟ್ಟುಕೊಂಡ

ಮಕುಟ ಚಂಕು ಧರಿಸಿದ ಪುಂಡರೀ ಕಾಕ್ಷನ್ನ
ನೋಡದ ॥ ೫॥
ಪಾನು ಪಟ್ಟೆ ಮುತ್ತಿನ ಬಟ್ಟು, ಮೂಗುತಿಯನಳಾವಟ್ಟು
ವಜ್ರದ ಕರ್ಣಕುಂಡಲವನಿಟ್ಟು। ಅರ್ಜುನ ಸಾರಥಿಯ
ನೋಡದ ॥ ೬॥
ಪವಳದಂತೆ ಅಧರ ಕಾಂತೀ। ಕೊರಳಿನಲ್ಲಿ ವೈಜಯಂತಿಹಾರ
ಪದಕ ಸರಗಳಿಟ್ಟು। ವಾರಿಜನಾಭನ ನೋಡದ ॥ ೭॥
ಬಲದ ಕೈಯಿಲಿ ಕಡೆಗೋಲು। ಎಡದ ಕೈಯ
ತೊಡೆಯೊಳಿಟ್ಟು। ಉಡಿದಾರ ಗೆಜ್ಜೇನಿಟ್ಟ। ಪೊಡವಿಗೀಶ್ವರ
(ನನ್ನ) ನೋಡದ ॥ ೮॥
ಅಂದುಗೆ ಗೆಜ್ಜೇನಿಟ್ಟು। ಕುಂದಣದ ಅಟ್ಟಣೆ ಮೆಟ್ಟಿ।
ಆನಂದದಿಂದ ಗಡಿಗೆವಡೆದ। ಇಂದಿರೇಶನ ವಾದ್ಯವ
ನೋಡದ ॥ ೯॥
ಸಂಸಾರದಗ್ನಿಯಲ್ಲಿ ಬೆಂದುನೋಂದು।
ಬಂದ ಭಕ್ತರ ಚರಣವೆಂಬೊ ಶರಧಿಯಲ್ಲಿ। ಭರದಲಿಡುವ
ಹರಿಯ ನೋಡದ ॥ ೧೦॥
ಕಲ್ಲಸತಿಯ ಮಾಡಿ। ಕಾಳಿಂಗನ ಮೇಲೆ ನಾಟ್ಯವಾಡಿ
ದುರುಳ ಶಕಟನನ್ನು ತುಳಿದ।
ವರದ ವೆಂಕಟಕೃಷ್ಣನನ್ನು ನೋಡದ॥
ದೃಷ್ಟಿಯಿದ್ಯಾತಕೆ ಉಡುಪಿ ಕೃಷ್ಣನ ನೋಡದ॥

ಯದುಗಿರಿ ಅಮ್ಮನವರ ಭಾಗವತ ಪ್ರಜ್ಞೆ! ಪುರಾಣ ಇತಿಹಾಸ ಮನನ ಅವರ ಕೃತಿಗಳುದ್ದಕ್ಕೂ ಕಾಣಬರುತ್ತದೆ. ತೂಪ್ಪುರ್ ವೆಂಕಟಾಚಾರ್ಯರು ತಿಳಿಸುವಂತೆ, ಅಮ್ಮನವರಿಗೆ, ಭಕ್ತಿ ವಿಶೇಷ, ಚಿತ್ತದ ಏಕಾಗ್ರತೆ, ಕೇಳಿಸಿಕೊಂಡಿರುವ ಪುಣ್ಯಕಥೆ, ಕಂಡಯಾತ್ರಾ ಸ್ಥಳ, ಹಾಗೆಯೇ ಅವರ ಮನದಲ್ಲಿ ಸ್ಪಷ್ಟವಾಗಿ ನೆಲೆಗೊಂಡು ಹಾಡುಗಳ ರೂಪದಲ್ಲಿ ಹೊಮ್ಮುತ್ತಿದ್ದುವಂತೆ! ಬರೆಯುವುದಕ್ಕೂ, ಬರೆದದ್ದನ್ನು ತಿದ್ದಲೂ ಅಮ್ಮನವರಿಗೆ ತ್ರಾಣವಿರಲಿಲ್ಲ. ಅವರ ಸನಿಹವಿದ್ದ ಮಕ್ಕಳು, ಪಾತ್ರಿಯರು, ಅಮ್ಮನವರ ಹಾಡುಗಳನ್ನು ಕಲಿತು, ಬರೆದರು, ಬರೆಯಿಸಿದರು! ಹೀಗೆ ಯದುಗಿರಿ ಅಮ್ಮನವರ ಸಾಹಿತ್ಯ ರಚನೆ ಮೌಖಿಕವಾಗಿ ಉಳಿದು, ಗ್ರಂಥಸ್ಥ ಆಗಿದ್ದು ವೃದ್ಧೆಯಾಗಿದ್ದ ಅಮ್ಮನವರಿಗೆ, ಅವರ ಕೀರ್ತನೆಗಳಿಗೆ ರಾಗ-ತಾಳ-ಇತ್ಯಾದಿಗಳಿಗೆ ಅವಕಾಶವಾಗದೆಯೆ ಮುದ್ರಣ ಕಂಡಿದೆ.

ಭಕ್ತಿ, ಇಹದ ಭಂಗುರತೆ, ದೇವರಲ್ಲಿ ಅಪ್ರಮೇಯತನ ವೆಂಬ ಪ್ರಪತ್ತಿ ಅಮ್ಮನವರ ಕೃತಿಗಳ ಕೇಂದ್ರಬಿಂದು. ಯಮಕ, ಪ್ರಾಸಾದಿಗಳು, ಅಲಂಕಾರ, ಉಪಮೆ, ತಕ್ಕಮಟ್ಟಿಗೆ ಮೂಡಿವೆ.

ಇಡೀ ೧೨ ಸ್ಕಂಧಗಳ ಶ್ರೀಮದ್ಭಾಗವತವನ್ನು ಯದುಗಿರಿ ಅಮ್ಮನವರು, ತಮ್ಮ ಕವಿತೆಯ ಮೂಲಕ ಹಾಡಿದ್ದಾರೆ. ಸರಳ ಗತಿಯಲ್ಲಿ ಮುಂದುವರಿಯುವ, ಈ ಗೀತ ಕಾವ್ಯದಲ್ಲಿ ಆಚಾರ್ಯರಿಗೆ ಅಭಿನಂದಿಸಿ, ವಿಶ್ವಕ್ಸೇನರನ್ನು ನೆನೆದು, ಅಜನರಾಶಿಯನ್ನು ಭಜಿಸಿ, 'ಭಜುಂಗಶಯನನ ನಿಜ ಚರಿತ್ರೆಯನ್ನು ವಿಸ್ತರಿಸಿ ಪೇಳುವೆ'ನೆಂದಿದ್ದಾರೆ.

"ಭಾಗವತವೆಂತೆಂಬ ಭಾನು ಉದಯವಾದ ಮೇಲೆ ಕ್ಷೀಣವಾಯಿತಯ್ಯ ಅಜ್ಞಾನ ತಿಮಿರವು" ಎಂದು ಹಾಡುತ್ತ ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸುತ್ತಾರೆ. "ನರರ ಸ್ತೋತ್ರ ಮಾಡಿ ಮನಸು ಸರಿಯಿಲ್ಲಧೋಯಿತು ನರಹರಿಯ ಸ್ತೋತ್ರವನ್ನು ಮಾಡಿರೆಂದೆನು": ಇದನ್ನೋದುವಾಗ, ಪ್ರಸನ್ನ ವೆಂಕಟದಾಸರ 'ಭಾಗವತ' ಕಾವ್ಯವು ನೆನಪಾಗುತ್ತದೆ.

"ಶ್ರೀರಂಗ ಮಹಾತ್ಮ್ಯಂ" ಅಮ್ಮನವರ ಇನ್ನೊಂದು ದೀರ್ಘ ಕೃತಿ. ಚಂಪೂ ಛಂದಸ್ಸಿನ ಚಿಕ್ಕುಪಾಧ್ಯಾಯ ವಿರಚಿತ ಶ್ರೀರಂಗ ಮಹಾತ್ಮ್ಯೆ, ಪಶ್ಚಿಮರಂಗ ಮಹಾತ್ಮೆ, ಉಳಿದಂತೆ ಯದುಗಿರಿಯಮ್ಮನವರ "ಶ್ರೀರಂಗಮಹಾತ್ಮ್ಯೆ" ಶ್ರೀರಂಗನಾಥ ಸ್ವಾಮಿಯ ಎಲ್ಲ ಉತ್ಸವ, ಅಲಂಕಾರ ಕಂಣಾರೆ ಕಂಡು ಭಕ್ತ ಕವಯತ್ರಿಯಾಗಿ ವರ್ಣಿಸಿದ್ದಾರೆ.

ಕೊಟ್ಟಿಗೋತ್ಸವ, ಕೊಟಾರೋತ್ಸವ, ಶ್ರೀವೈಷ್ಣವರಲ್ಲಿ ಒಂದು ಸಂಪ್ರದಾಯ ವಿಶೇಷ. ರಾತ್ರಿ ಮೊದಲು ಆರಂಭವಾಗಿ ಮುಗಿಯುವಾಗ್ಗೆ ಅರ್ಧರಾತ್ರಿ ದಾಟಿರುತ್ತದೆ ಅದರ ವರ್ಣನೆ:

ಭಕ್ತರು ಪೇಳಿದ ಪ್ರಬಂಧವನೆಲ್ಲಾ
ಭಕ್ತಿಯಿಂದಲೆ ಪೇಳಿದ ಆದ್ಯರಿಗೆ
ಯುಕ್ತಿ ತೋರಿದ ಪರಾಶರ ವ್ಯಾಸರಿಗೆ
ಬ್ರಹ್ಮರಥವನಿತ್ತ ಬ್ರಹ್ಮಾಂಡರೂಪ॥
ಮುತ್ತಿನಂಗಿಯ ಸೇವೆ (ವೈರಮುಡಿ ರೀತಿ?)

ನೋಡಬೇಕೆನ್ನುತ ಹತ್ತು ಸಾವಿರ ಪ್ರಜೆಬಂದು ನಿಂತಿರಲೂ ಇತ್ತು ಕಾಣಿಕೆಯನ್ನು ನೋಡಿ ವೆಂಕಟರಂಗನ ಮುಕ್ತರಾದೆವೆಂದು ಭಕ್ತರು ನೆನೆದರು.

ರಾಮಧ್ಯಾನ, ಶ್ರೀರಾಮಾಯಣಮಂಗಲ, ತಿರುಪತಿಯ ಶ್ರೀನಿವಾಸನನ್ನು ಕುರಿತ ರಚನೆ, ರಂಗನಾಥನನ್ನು ಕುರಿತ ಬಿಡಿ ಕೃತಿಗಳು, ಕಂಚಿ ವರದರಾಜಸ್ವಾಮಿ ಕುರಿತ ರಚನೆ, ಅನಂತರ ಆಂಡಾಳ್ ನೀರಾಟ್ಟಂ ಎಂಬುವ ಹಾಡೂ ಆಳ್ವಾರ್ ಶ್ರೇಣಿಯಲ್ಲಿರುವ ಆಂಡಾಳ್, ವಿಷ್ಣುಚಿತ್ತರೆಂಬುವವರ ಸಾಕು ಪುತ್ರಿ; ಶ್ರೀರಂಗದ ಸ್ವಾಮಿ, ವಟಪತ್ರಶಾಯಿಯನ್ನು ತನ್ನ ಪತಿಯೆಂದು ಭಾವಿಸಿದಾಕೆ; 'ತಿರುಪ್ಪಾವೈ, ವಾರಣಮಾಲಿಯಂ' ಈಕೆಯ ಕೃತಿಗಳು, ಭಾಗವತದ ರಾಧೆ ನಪ್ಪಿನ್ನೈ, ನೀಳೆ, ಆಂಡಾಳ್ ಎಂದು ತಿಳಿಯ ಬರುತ್ತದೆ. "ನೀರಾಟ್ಟಲ್" ಅಭಿಷೇಕೋತ್ಸವವನ್ನು ಅಮ್ಮನವರು ಅನುಭವಿಸಿ ಹಾಡಿದ್ದಾರೆ.

*ಇದಲ್ಲದೆ ಯಾಕೆ ನಿರ್ದಯ ಮಾಡಿದೆರಂಗಯ್ಯ, ಯೆಲ್ಲಿದ್ದರೂ ಕಾಯ್ವ ಯದುಕುಲ ತಿಲಕಾ, ಪಾದವನು ನಂಬಿದೆನೊ ಪರಮಪುರುಷ ಅಭಯವನಿತ್ತು ಕಾಯೋ ರಂಗಯ್ಯ, ಮಂಗಳಂ, ಜಯತು ಭಾಗೀರಥಿಗೆ, ಕಂಡು ಧನ್ಯನಾದೆನೋ ಪುಂಡರೀಕಾಕ್ಷ ಶ್ರೀ ಪುರುಷೋತ್ತಮ ವಿಷ್ಣುಪದವ (ಕಂಡು ಧನ್ಯನಾದೆ ಎಂಬುವ ಪುರಂದರ ಕೃತಿ ನೆನಪಾಗುತ್ತದೆ) ರಂಗನಾಥಯೆನ್ನ ಕಂಗಳೆದುರು ನಿಂತಿರುವಂತಿದೆ*

*(ಕೃಷ್ಣಾಮೂರ್ತಿ ಕಣ್ಣಾಮುಂದೆ ನಿಂದಿರಂದಿದೆ).* ಇಲ್ಲೆಲ್ಲ ಅನುಕರಣೆಯಿರದೆ, ಸ್ವತಂತ್ರ ಕಲ್ಪನೆ, ವರ್ಣನೆ ಇವೆ.

ಕೇವಲ ಒಂದೆರಡು ಶತಕದ ಅಂದರೆ ೧೯ನೆಯ ಶತಮಾನದ ಪೂರ್ವಾರ್ಧದಲ್ಲಿದ್ದು ಹೋದ ಯದುಗಿರಿ ಅಮ್ಮನವರ ರಚನೆಗಳು (ದೊರೆತಿರುವಂಥ) ಶ್ರೀವೈಷ್ಣವ ಸಂಪ್ರದಾಯದ ಹರಿದಾಸರ ಪ್ರತಿನಿಧಿಯಾಗಿ ವೈಕುಂಠದಾಸರು ಹೇಗಿದ್ದರೋ ಅದೇ ತೆರನಾಗಿ ಶರಣಾಗತಿ ಮಾರ್ಗ, ಹರಿಸರ್ವೋತ್ತಮತೆಯನ್ನು ಪ್ರತಿಪಾದನೆ ಮಾಡಿರುವ ಕೀರ್ತನ ಕಾರ್ತಿಯಾಗಿ ಸಫಲತೆಯನ್ನು ಪಡೆದಿದ್ದಾರೆ. ಸಮಾಜ ಶುದ್ಧಿಯು ಸಾಹಿತ್ಯದ ಒಂದು ಧ್ಯೇಯ ಎನ್ನುವುದಾದರೆ, ಅಮ್ಮನವರು ಕಟ್ಟು-ಕೃತಿಗಳಲ್ಲಿ ಈ ಲಕ್ಷ್ಯವನ್ನು ಸಾಧಿಸಿದ್ದಾರೆ ಎನ್ನಿಸುತ್ತದೆ.

ಯದುಗಿರಿಯಮ್ಮನವರ ಕೃತಿಗಳಲ್ಲಿ ಭಾವದ ನೆಲೆಯಿದೆ, ಭಕ್ತಿಯ ಸೆಲೆಯಿದೆ, ಕಾವ್ಯ ಬಂಧದ ಸೊಗಡು, ಮಲೆನಾಡಿನ ಸೌದಾಮಿನಿಯಾಗಿ ಅಲ್ಲಲ್ಲಿ ಮಿಂಚಿರುತ್ತದೆ. ಅಮ್ಮನವರು ಬೆಳೆದದ್ದು, ಕಟ್ಟಾ ಸಂಪ್ರದಾಯಸ್ಥ ಶ್ರೀವೈಷ್ಣವರ ಮನೆಯಲ್ಲಿ. ಆಗಿನ ಕಾಲಕ್ಕೇ ಅವರು ಬದರಿ ಕ್ಷೇತ್ರದಿಂದ ಸೇತು ರಾಮೇಶ್ವರದ ತನಕ ತೀರ್ಥಯಾತ್ರೆ ಮಾಡಿ, ದ್ರಾವಿಡ ದಿವ್ಯ ದೇಶಗಳ ಆಳ್ವಾರ್ ಸಂತರನ್ನು ಭಾವಿಸಿ ಹಾಡಿದ್ದಾರೆ. ಅಲ್ಲಿ ಒಂದು ಸಂಸ್ಕೃತಿಯ ದರ್ಶನವಿದೆ. ಅವರ ಎಲ್ಲ ಕೃತಿಗಳಲ್ಲಿ ಪ್ರಧಾನವಾಗಿ ಕಾಣಬರುವ ಪ್ರಪತ್ತಿ ಭಾವದೊಂದಿಗೆ ಹಾಳತ ಆಗಿ ಸಂಸ್ಕೃತಿ ಸದಾಚಾರಗಳೂ ಮಿಳಿತಗೊಂಡಿವೆ. ಹಾಡುಗಾರಿಕೆಯಲ್ಲಿ ಒಲವು - ಪ್ರವೇಶವಿರುವ ಸಹೃದಯರು ಹಾಡಲೂ ತಕ್ಕುದಾಗಿವೆ.



ನಾ. ಗೀತಾಚಾರ್ಯ*

# ಕನಕದಾಸರ ತತ್ವ: ದ್ವೈತವಲ್ಲ ವಿಶಿಷ್ಟಾದ್ವೈತ

ಕನಕದಾಸರು ಕನ್ನಡ ಸಾಹಿತ್ಯದಲ್ಲಿ ಅತ್ಯಂತ ಪ್ರಮುಖ ಕವಿ, ಕೀರ್ತನಕಾರರು. ಈ ತನಕ ಈ ಬಗೆಗೆ ವಿಪುಲವಾದ ಚರ್ಚೆ ನಡೆದಿದೆ. ೧೯೯೦ರ ವರೆಗೆ ಕನಕದಾಸರ ಕೃತಿಗಳ ಮುದ್ರಣ, ಮರುಮುದ್ರಣ, ಪರಿಷ್ಕೃತ ಮುದ್ರಣಗಳು ಸು. ೫೦. ಕನಕದಾಸರನ್ನು ಕುರಿತ ಗ್ರಂಥಗಳು ಸು. ೬೦ ಮತ್ತು ಲೇಖನಗಳು ಸು. ೨೧೧ ಬಂದಿವೆ.[೧] ಆ ನಂತರ ಈ ಮೂರುವರ್ಗದಲ್ಲೂ ತಲಾ ೧೦ರಂತೆ ಬಂದಿರಬಹುದು. ಪ್ರಾಚೀನ ಸಾಹಿತ್ಯದಲ್ಲಿ ಇಷ್ಟೊಂದು ಹೆಚ್ಚಿನ ಚರ್ಚೆಗೆ ಒಳಗಾಗಿರುವ ಕವಿ ಇನ್ನೊಬ್ಬರಿಲ್ಲ ಎನ್ನಬಹುದೇನೋ! ಒಟ್ಟಿನಲ್ಲಿ ಇಷ್ಟೊಂದು ಚರ್ಚೆಗೆ ಗ್ರಾಸರಾಗಿದ್ದರೂ ಕನಕದಾಸರ ಕಾಲ ದೇಶ ಮತಗಳು ಇನ್ನೂ ಖಚಿತತೆಯನ್ನು ಪಡೆದಿಲ್ಲ. ಕಾಲ-ದೇಶಗಳು ಬಹುಮಟ್ಟಿಗೆ ನಿರ್ದಿಷ್ಟವಾಗಿದ್ದರೂ ಮತದ ಜಿಜ್ಞಾಸೆ ಇನ್ನೂ ನಿರ್ಧಾರವಾಗ ಬೇಕಾಗಿದೆ. ಈ ಅಂಶದತ್ತ ಬೆಳಕು ಚೆಲ್ಲುವುದರತ್ತ ಈ ಲೇಖನವನ್ನು ಮಿತಿಗೊಳಿಸಿಕೊಳ್ಳಲಾಗಿದೆ.

ಇದುವರೆಗಿನ ಸಾಹಿತ್ಯ ವಲಯದ (ಇತಿಹಾಸದ) ತಿಳುವಳಿಕೆಯೆಂದರೆ ಕನಕದಾಸರು ಮಾಧ್ವಮತಾನುಯಾಯಿಗಳಾಗಿ ವ್ಯಾಸರಾಯರ ಶಿಷ್ಯರಾಗಿ ಮಧ್ವತತ್ವಗಳಿಗೆ ಅನುಗುಣವಾಗಿ ಕೃತಿಗಳನ್ನು ಕೀರ್ತನೆಗಳನ್ನೂ ರಚಿಸಿದ್ದಾರೆ ಎಂಬುದು ಆದರೂ ಎಲ್ಲರೂ ಅನುಮಾನಾಸ್ಪದವಾಗಿಯೇ ಈ ಅಭಿಪ್ರಾಯಕ್ಕೆ ಬರುತ್ತಾರೆ. ಏಕೆಂದರೆ ಇವರ ಗುರುಗಳು ಎಂದು ಹೆಸರಿಸಿರುವ ವ್ಯಾಸರಾಯರನ್ನಾಗಲಿ ವಾದಿರಾಜರನ್ನಾಗಲಿ ಸ್ತುತಿಸಿರುವ ಒಂದೂ ಕೀರ್ತನೆಯೂ ಇವರಲ್ಲಿಲ್ಲದಿರುವುದು; ಮಧ್ವ ತತ್ವಾನುಯಾಯಿಯಾದ ನಿರ್ದಿಷ್ಟ ಕೀರ್ತನೆಗಳೂ ಕಾಣದೊರೆಯದಿರುವುದು; ಕನಕದಾಸರಿಗೆ ಇತರ ಹರಿದಾಸರಂತೆ ಶಾಸ್ತ್ರೋಕ್ತವಾದ ದೀಕ್ಷೆ - ಅಂಕಿತ ಲಭ್ಯವಿಲ್ಲದಿರುವುದು; ಆದರೆ ಕನಕದಾಸರು, ಕೀರ್ತನೆಗಳಲ್ಲಿ ಮತ್ತು ಕೃತಿಗಳಲ್ಲಿ ವಿಶಿಷ್ಟಾದ್ವೈತ ತತ್ವದ ಆಚಾರ್ಯರಾದ ರಾಮಾನುಜಾಚಾರ್ಯರನ್ನೂ, ಆ ಕಾಲದ ಪ್ರಸಿದ್ಧ ಶ್ರೀವೈಷ್ಣವ ಗುರುಗಳಾಗಿದ್ದ ತಾತಾಚಾರ್ಯರನ್ನು ಮತ್ತು ಕೀರ್ತನಕಾರರಾಗಿದ್ದ ಬೇಲೂರು ವೈಕುಂಠದಾಸರನ್ನೂ ಸ್ತುತಿಸಿರುವುದು. ಈ ದ್ವಂದ್ವದ ಕಾರಣದಿಂದ ಇವರನ್ನು ಹೌದೋ ಅಲ್ಲವೋ ಎಂಬಂತೆಯೇ ಮಾಧ್ವ ಪರಂಪರೆಯಲ್ಲಿ ಗುರುತಿಸಿ ಚರ್ಚಿಸಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ ಪರಂಪರೆಯಲ್ಲಿ ಸಾಹಿತ್ಯ ಸೃಷ್ಟಿಯಾಗಿಲ್ಲ ಎಂಬ ಸಾರ್ವತ್ರಿಕ ಅಭಿಪ್ರಾಯದ ಹಿನ್ನೆಲೆಯಲ್ಲಿ[೨] ಮುಂದಿನವರು ಇದಕ್ಕೆ ಕಟ್ಟು ಬೀಳುತ್ತ ಈ ದೃಷ್ಟಿಯಲ್ಲಿ ಸಾಹಿತ್ಯವನ್ನು ಪರಾಮರ್ಶಿಸದೆ ಹೋದುದರ ಕಾರಣದಿಂದ ಕನಕದಾಸರ ಮತದ ಬಗೆಗೆ ಇಂತಹ ದ್ವಂದ್ವ ಸೃಷ್ಟಿಯಾಯಿತು ಮತ್ತು ಬೇಲೂರು ವೈಕುಂಠದಾಸರು ಅಪರಿಚಿತರಾಗಿಯೇ ಉಳಿದರು ಎಂದರೆ ತಪ್ಪಾಗಲಾರದು. ೯೦ರ ದಶಕದಲ್ಲಿ ಈ ನಿಟ್ಟಿನಲ್ಲಿ ನಡೆದ ಅಧ್ಯಯನದ ಫಲದಿಂದ ವಿಜಯನಗರ ಕಾಲದಿಂದಲೂ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟಾದ್ವೈತ ಸಾಹಿತ್ಯವಿದೆ. ಮತ್ತು ವಿಪುಲವಾಗಿ ಸೃಷ್ಟಿಯಾಗಿದೆ ಎಂಬುದು ಸಾಬೀತಾಗಿರುವುದರಿಂದ[೩] ಇನ್ನು ಮುಂದೆ ಇಂತಹ ದ್ವಂದ್ವಗಳನ್ನು ಬಿಡಿಸಬಹುದಾಗಿದೆ. ಈ ದಾರಿಯಲ್ಲಿ ಹೆಚ್ಚು ಹೆಚ್ಚು ಅಧ್ಯಯನ ಸಾಗಿದಂತೆ ಕನಕದಾಸರ ತತ್ವ ನಿಚ್ಚಳವಾಗುತ್ತ ಹೋಗುತ್ತದೆ. ಇದೇ ರೀತಿಯ ದ್ವಂದ್ವಕ್ಕೆ ಈಡಾಗಿರುವ ಕುಮಾರವ್ಯಾಸನ ತತ್ವವೂ ಈ ಚಿಂತನೆಯ ಹಿನ್ನೆಲೆಯಲ್ಲಿ ಸ್ಪಷ್ಟವಾಗುತ್ತದೆ. ಹಾಗೆಯೇ ಕವಿ ಲಕ್ಷ್ಮೀಶನನ್ನು ಈಗಾಗಲೇ ವಿದ್ವಾಂಸವಲಯ ವಿಶಿಷ್ಟಾದ್ವೈತ ಮತೀಯನೆಂದೇ ನಿರ್ಧರಿಸಿದ್ದು ಅದು ಮತ್ತಷ್ಟು ಖಚಿತವಾಗುತ್ತದೆ.

ಕನಕದಾಸರ - ತತ್ವವನ್ನು ಚರ್ಚಿಸುವಾಗ ಜಾತಿಯ ಪ್ರಶ್ನೆ ಬರುವುದಿಲ್ಲ. ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಜಾತಿ-ಮತ-ತತ್ವಗಳು ಒಂದಕ್ಕೊಂದು ಪೂರಕವಾಗಿರುವುದು ಸಹಜವಾದರೂ ಕೆಲವು ಸಂದರ್ಭಗಳಲ್ಲಿ ಬೇರೆ ಬೇರೆಯೂ ಆಗಿರುತ್ತದೆ. ಕನಕದಾಸರ ಸಂದರ್ಭದಲ್ಲಿ ಇದು ಬೇರೆ ಬೇರೆಯಾಗಿರುವುದರಿಂದ ಇಲ್ಲಿ ಅವರ ಜಾತಿಯ ಪ್ರಶ್ನೆಯನ್ನು ಎತ್ತುವ ಅಗತ್ಯವಿಲ್ಲ. ಈಗಾಗಲೆ ಒಪ್ಪಿತವಾಗಿರುವ ಕುರುಬ ಜಾತಿಯ ಕನಕದಾಸರು ತಂದೆಯವರ ಕಾಲದಲ್ಲೇ ರಾಮಾನುಜ ಮತಕ್ಕೆ ಪ್ರಭಾವಿತರಾಗಿದ್ದರೆಂಬ ಸೂಚನೆಯಿದ್ದರೂ[೪] ಬಾಲ್ಯ ಯೌವನದಲ್ಲಿ ತಂದೆಯವರಿಂದಲೇ ಬಂದಿದ್ದ ಸೈನಿಕ ನಿರ್ವಹಣೆಯ, ಮಾಂಡಲಿಕ ದೊರೆತನದ ಹಂತದಲ್ಲಿ ಶ್ರೀವೈಷ್ಣವ ಗುರುವೊಬ್ಬರಿಂದ ದೀಕ್ಷಿತರಾದಂತೆ ಕೀರ್ತನೆಯೊಂದರಲ್ಲಿ ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ.[೫] ಮೊದಲಿನಿಂದಲೂ ಈ ಉಪದೇಶದಲ್ಲಿದ್ದರೂ ತಿಳಿಯದಿದ್ದ ನನಗೆ 'ಮನ್ನಿಸಿ ಭವ ಬಂಧನ ಬಿಡಿಸಿ ಹದನಕ್ಕೆ ನಿಲ್ಲಿಸಿದೆ', 'ತವದಾಸರಿಗೆ ಅಡಿಯಾಗಿಸಿದೆ' ಎಂದೂ, 'ಇದು ರಹಸ್ಯವು' ಎಂದು ಹಿತವಬೋಧಿಸಿದೆ, 'ವೀರವೈಷ್ಣವರ ಚರಣ ಸೇರಿಸಿದೆ' ಎಂದೂ ಹೇಳಿಕೊಂಡಿರುವಲ್ಲಿ

* ಹಿರಿಯ ಉಪನ್ಯಾಸಕರು, ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ, ಶೇಷಾದ್ರಿಪುರಂ ಕಾಲೇಜು, ಬೆಂಗಳೂರು - ೫೬೦ ೦೨೦.

ಸ್ಪಷ್ಟವಾಗಿ ವಿಶಿಷ್ಟಾದ್ವೈತ ಪರಿಭಾಷೆಯೇ ಇದ್ದು ಇದಕ್ಕೆ ಪೂರಕವಾಗಿ ಇತರ ಕೀರ್ತನೆಗಳಲ್ಲಿಯೂ ಈ ಪರಿಭಾಷೆ, ಈ ಮತದ ಗುರುಸ್ತುತಿಗಳು, ತತ್ವಗಳು ಹೇರಳವಾಗಿ ಬರುವುದರಿಂದ ಕನಕದಾಸರನ್ನು ನಿಸ್ಸಂದೇಹವಾಗಿ ವಿಶಿಷ್ಟಾದ್ವೈತ - ತತ್ವದಲ್ಲಿ ನಿಲ್ಲಿಸಬಹುದು. ಈ ಕೀರ್ತನೆಯಲ್ಲಿ ಬರುವ ವೀರವೈಷ್ಣವ ಎಂಬುದು ಆ ಕಾಲದಲ್ಲಿ 'ಶ್ರೀವೈಷ್ಣವ' ಪದಕ್ಕೆ ಬಳಕೆಯಾಗುತ್ತಿದ್ದ ಪರ್ಯಾಯ ಪದವಾಗಿದೆ.[೬] 'ಇದು ರಹಸ್ಯವು ಎಂದು ಹಿತವ ಬೋಧಿಸಿ' ಎಂಬುದು ವಿಶಿಷ್ಟಾದ್ವೈತದಲ್ಲಿ ಬರುವ ರಹಸ್ಯತ್ರಯ ಮಂತ್ರದ ಬೋಧನೆಯೇ ಆಗಿದೆ. ಯಾವೊಬ್ಬನೂ ಶ್ರೀವೈಷ್ಣವ ನಾಗಲು ಪಂಚಸಂಸ್ಕಾರ ದೀಕ್ಷೆ ಅನಿವಾರ್ಯ. ಇದರಲ್ಲಿ ರಹಸ್ಯತ್ರಯ ಮಂತ್ರಗಳನ್ನು ಗೋಪ್ಯವಾಗಿ ಬೋಧಿಸಲಾಗುತ್ತದೆ. (ಇದನ್ನೇ ರಾಮಾನುಜರು ಬಹಿರಂಗವಾಗಿ ಉದ್ಘೋಷಿಸಿದ್ದು) ಕನಕದಾಸರಿಗೆ ಇಂತಹ ಶ್ರೀವೈಷ್ಣವ ದೀಕ್ಷೆಯಾಗಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತಿದ್ದೂ" ವಿದ್ವಾಂಸವಲಯದಲ್ಲಿ ಪ್ರಚಲಿತವಿರುವ ಸಿದ್ಧ ಹೇಳಿಕೆಯಾದ ಕನಕದಾಸರಿಗೆ ಮಾಧ್ವದೀಕ್ಷೆಯೂ ಇಲ್ಲ. ಶ್ರೀವೈಷ್ಣವ ದೀಕ್ಷೆಯೂ ಇರಲಿಲ್ಲ ಎಂಬ ಅಭಿಪ್ರಾಯವನ್ನು ಬದಲಿಸಬಹುದಾಗಿದೆ.[೭] 'ಗುರುಮಂತ್ರ ಮೂಲ ಸದ್ಗುರುಮೂರ್ತಿ ನೀನಾಗಿ' ಎಂಬಲ್ಲಿಯೂ ವಿಶಿಷ್ಟಾದ್ವೈತ ತತ್ವವೇ ಅಡಗಿದೆ. ಈ ಸಂಪ್ರದಾಯದಲ್ಲಿ ಗುರುವನ್ನು ಶ್ರೀ ಹರಿಯ ಸಮಾನವಾಗಿ ಸ್ವೀಕರಿಸಲಾಗುತ್ತದೆ. ಗುರುಸ್ತುತಿಯೇ ಹರಿಸ್ತುತಿಯೂ ಆಗುವಷ್ಟು ಸಮೀಕರಣವಾಗಿರುತ್ತದೆ. ಈ ಹರಿಗುರು ಸಮಾನತೆಯ ಧೋರಣೆಯೇ ಇಲ್ಲಿರುವುದು. (ಇಲ್ಲಿ 'ಗುರುಮಂತ್ರ' ಎಂಬುದು ಪ್ರಾಯಶಃ 'ಮೂಲದಲ್ಲಿ' 'ತಿರುಮಂತ್ರ' ಎಂದಿರುವ ಸಾಧ್ಯತೆಯಿದೆ. ಹಾಗೆಂದರೆ ಶ್ರೀವೈಷ್ಣವ ಪರಿಭಾಷೆಯಲ್ಲಿ ಓಂ ನಮೋ ನಾರಾಯಣಾಯ-ಅಷ್ಟಕ್ಷರ) ಹಾಗೆಯೇ 'ತವದಾಸರಿಗೆ ಇರದೆ ಅಡಿಯಾಗಿರಿಸಿದೆ' ಎಂಬುದೂ ಆ ಕಾಲದ ಪ್ರಸಿದ್ಧ ಶ್ರೀವೈಷ್ಣವ ಹರಿದಾಸರಾಗಿದ್ದ ಬೇಲೂರು ವೈಕುಂಠದಾಸರನ್ನು ಕುರಿತದ್ದೇ ಆಗಿರುವಂತಿದೆ. ಬೇಲೂರಿನಲ್ಲಿ ಕನಕದಾಸರು ಹೆಚ್ಚು ಕಾಲ ಇದ್ದರೆಂಬುದೂ ವೈಕುಂಠದಾಸರ ಸಹವಾಸ ಸಂಪರ್ಕದ ಲ್ಲಿದ್ದರೆಂಬುದೂ ಇದರಿಂದ ಇನ್ನಷ್ಟು ಬಲಗೊಳ್ಳುತ್ತದೆ. ಕನಕದಾಸರಿಗೆ ವೈಕುಂಠದಾಸರೇ ಗುರುಸ್ಥಾನದಲ್ಲಿದ್ದರೆಂದೂ[೮] ತಾತಾಚಾರ್ಯರಿಂದ ಈ ತತ್ವಾನುಷ್ಠಾನ, ಗುರುದರ್ಶನ ಸಾಧ್ಯವಾಗಿದೆ ಯೆಂದು,[೯] ಇದರಿಂದ ತೀರ್ಮಾನಕ್ಕೆ ಬರಬಹುದು. ಆದ್ದರಿಂದಲೇ ಈ ತತ್ವದ ಬಗ್ಗೆ ದಾಸರಿಗೆ ಪ್ರೀತಿ ಒಲವು. ಇದರಿಂದಲೇ ಅವರ ದಾಸತ್ವ ಬೆಳೆದಿರುವುದು ಬೆಲೆ ಕಟ್ಟಿರುವುದು. ಈ ತತ್ವದ ಹಿನ್ನೆಲೆಯಲ್ಲಿ ನೋಡಿದಾಗ ಇವರ ಪ್ರಮುಖ ಕೃತಿಗಳೆಲ್ಲ ಹೊಸ ಬೆಲುವನ್ನು ಮತ್ತು ವಸ್ತುನಿಷ್ಠ ಅರ್ಥವನ್ನು ಪಡೆಯುತ್ತವೆ. 'ಬದುಕಿದೆನು ಬದುಕಿದೆನು ಭವವೆನಗೆ ಹಿಂಗಿತು' ಪದುಮನಾಭನ ಪಾದದೊಲುಮೆ ಎನಗಾಯಿತು' ಎಂಬುದು ಮಾಧ್ವ ತತ್ವಕ್ಕಿಂತ ಶ್ರೀವೈಷ್ಣವತತ್ವಕ್ಕೆ ಹೆಚ್ಚು ಹತ್ತಿರವಾಗುತ್ತದೆ. ಇಲ್ಲಿ ಬರುವ ಹರಿತೀರ್ಥ ಹರಿನಾಮಾಮೃತ ಹರಿದಾಸರು ಹರಿಮುದ್ರೆಗಳು ವಿಶಿಷ್ಟಾದ್ವೈತದ ಪರಿಭಾಷೆಯೇ ಆಗಿವೆ. ಇಲ್ಲಿ ಬರುವ 'ನೂರೊಂದು ಕುಲ ಯಾವುದು ' ಎಂಬುದು ಇನ್ನೂ ನಿರ್ಧಾರ ವಾಗಬೇಕಾಗಿದೆ.

'ನಾರಾಯಣನೆನು ಮನವೆ ನರಹರಿಯ ನೆನೆಮನವೆ'

- ಎಂಬ ಕೀರ್ತನೆಯಲ್ಲಿ ಬರುವ 'ಗುರುವಿನುಪದೇಶದಲಿ ಪರಮರಹಸ್ಯ' ವನರಿತು; 'ತಿರುಮಂತ್ರವನು ಜಪಿಸು', 'ತಿರುಲಾಂಛನವಧರಿಸು', ಪರಮ ವೈಷ್ಣವರ ಪಂಕ್ತಿಯಸೇರು', 'ಶ್ರೀ ಪಾದತೀರ್ಥ', 'ಶೇಷ ವಿಶೇಷವೆಂದೆನಿಪ ಪರಮಾರ್ಥ' ಪದಗಳೆಲ್ಲ ನೇರವಾಗಿ ಶ್ರೀವೈಷ್ಣವ ಪರಿಭಾಷೆಗಳೇ ಆಗಿವೆ. ಈ ತತ್ವವನ್ನು ಅನುಸರಿಸುವವನ ದಿನಚರ್ಯೆಯನ್ನು ಇವು ಸೂಚಿಸುತ್ತವೆ. ಇಷ್ಟು ಸ್ಪಷ್ಟವಾಗಿ ಈ ತತ್ವಗಳನ್ನು ಅಳವಡಿಸಿಕೊಂಡರುವಾಗ ಅವರ ತತ್ವ ವಿಶಿಷ್ಟಾದ್ವೈತ ಎಂಬುದು ನಿಚ್ಚಳವಾಗುತ್ತ.

ಕನಕದಾಸರ ಪ್ರತಿಯೊಂದು ಕೀರ್ತನೆಯಲ್ಲಿಯೂ ಈ ತತ್ವಕ್ಕೆ ಆಧಾರಗಳನ್ನು ಸುಲಭವಾಗಿ ಹುಡುಕಬಹುದಾಗಿದೆ. ವಿಶಿಷ್ಟಾದ್ವೈತ ತತ್ವದ ಮುಖ್ಯ ಪ್ರಮೇಯಗಳಾದ ಜೀವ ಸ್ವಾತಂತ್ರ್ಯ ನಿರಾಕರಣೆ, ಹರಿಪಾದಸೇವನೆ, ಹರಿ - ಗುರು ಸಮಾನತೆ. ದೇವ-ಜೀವ ಸಮೀಕರಣ ಲೋಕಾಸಕ್ತಿ ನಿರಾಕರಣೆ, ದೈನ್ಯತೆ, ಕರ್ಮಾತತ್ವ ಬದ್ಧತೆ, ಹರಿನಾಮಸ್ಮರಣೆ, ಶರಣಾಗತಿ, ಸಂಪೂರ್ಣ ದೈವಾವಲಂಬನೆಗಳೇ ಇವರ ಕೃತಿಗಳಲ್ಲಿ ಅಡಕವಾಗಿರುವ ತಾತ್ವಿಕ ನಿಲುವುಗಳಾಗಿದ್ದು ಇದು ಸುಲಭ - ನೇರನಿರೂಪಣೆಗಳಾಗಿವೆ. ಮಾಧ್ವ ಮತವನ್ನು ನಿರೂಪಿಸಬೇಕಾದರೆ ಪ್ರಯಾಸಪಡ ಬೇಕಾಗುತ್ತದೆ. ಕೀರ್ತನೆಗಳನ್ನು ಹುಡುಕಬೇಕಾಗುತ್ತದೆ. ಮಾಧ್ವ ತತ್ವದ ಸುಳುಹುಗಳನ್ನು ಹೇಳುವವರು ದ್ವೈತ ವಿಶಿಷ್ಟಾ ದ್ವೈತ ತತ್ವಗಳ ಸಮಾನ ಅಂಶಗಳಾದ ಹರಿಪಾರಮ್ಯ ಹರಿಸರ್ವೋತ್ತಮತ್ವ ಮತ್ತು ಹರಿನಾಮಸ್ಮರಣೆಗಳನ್ನಷ್ಟೇ ಗುರುತಿಸುತ್ತಾರೆ. ದೇವತಾ ತಾರತಮ್ಯವಾಗಲಿ ಪಂಚಭೇದ ಗಳಾಗಲಿ, ಮೋಕ್ಷದ ಪರಿಕಲ್ಪನೆಯಂತಹ ಮಾಧ್ವ ತತ್ವನಿಷ್ಠೆಗಳು ಇವರಲ್ಲಿಲ್ಲವೆಂದೇ ಅಭಿಪ್ರಾಯವಿದೆ.[೧೦] ಅಲ್ಲದೆ ಕೆಲವೆಡೆ ಮಾಧ್ವತತ್ವಕ್ಕೆ ವಿರೋಧದ ನಡೆಯೇ ಇದೆ ಎಂದೂ ಗುರುತಿಸುತ್ತಾರೆ.[೧೧]

ಇನ್ನು ಕೆಲವರು ಇವರಲ್ಲಿ ಕ್ವಚಿತ್ತಾಗಿ ಕಂಡುಬರುವ ಅದ್ಭುತ ಚಿಂತನೆಗಳಾದ ಹರಿಹರಾಬೇಧ, ಅನ್ಯದೈವಸ್ತುತಿ ಮುಂತಾದವು ಗಳ ಹಿನ್ನೆಲೆಯಲ್ಲಿ ಇವರನ್ನು ಅದ್ವೈತ ಸಂಪ್ರದಾಯದವರೆಂದು ಹೇಳಹೊರಟರೂ[೧೨] ಸ್ಪಷ್ಟ ಸಮರ್ಥನೆ ಸಾಧ್ಯವಾಗದುದರಿಂದ ಹರಿಪಾರಮ್ಯದ ಭಾಗವತ ಧರ್ಮೀಯನು ಎಂದು ತೇಲಿಸುತ್ತಾರೆ.

ಈ ಚರ್ಚೆಗಳನ್ನೆಲ್ಲ ಪುನರ್ವಿಮರ್ಶೆಗೊಳಪಡಿಸಿದರೆ ಬಹಳ ಖಚಿತವಾಗಿ ಕನಕದಾಸರನ್ನು ಅನುಮಾನಕ್ಕೆ ಎಡೆಯಿಲ್ಲದಂತ ವಿಶಿಷ್ಟಾದ್ವೈತದಲ್ಲಿ ನಿಲ್ಲಿಸಬಹುದಾಗಿದೆ. ಇದಕ್ಕೆ ಇವರ ಕೃತಿಗಳೂ

ಹೊರತಲ್ಲ. ವಿದ್ವಾಂಸರು ಈಗಾಗಲೇ ಸ್ಪಷ್ಟವಾಗಿ ಗುರುತಿಸಿರುವಂತೆ 'ಹರಿಭಕ್ತಿಸಾರ' ಮತ್ತು 'ಮೋಹನ ತರಂಗಿಣಿ'ಗಳಲ್ಲಿ ವಿಶಿಷ್ಟಾದ್ವೈತವಿರುವ ಸೂಚನೆ, ಇದರಿಂದ ಇನ್ನಷ್ಟು ಸ್ಪಷ್ಟತೆಯನ್ನು ಪಡೆಯುತ್ತವೆ. ನಳಚರಿತ್ರೆ ಮತ್ತು ರಾಮಧಾನ್ಯ ಚರಿತ್ರೆಗಳು ಕವಿಯ ಪ್ರೌಢ, ಪಕ್ವ ಮನಸ್ಥಿತಿಯ ಸೃಷ್ಟಿಗಳಾದ್ದರಿಂದ ತತ್ವಾತೀತವಾದ ಮಾನವಧರ್ಮದ ಪ್ರತಿಪಾದನೆಯಾಗಿದೆ. ಯಾವುದೇ ಒಂದು ತತ್ವದಲ್ಲಿ ಒಬ್ಬ ಸಾಧಕ ಕಾಣಿಸಿಕೊಂಡರೂ ಅವನ ಸಾಧನೆಯ ಫಲಶ್ರುತಿ, ಅಂತಿಮ ಗುರಿ ತತ್ವಾತೀತವಾದ ಮಾನವತಾವಾದವನ್ನೂ ಪ್ರತಿಪಾದಿಸುವುದೇ ಆಗಿರುತ್ತದೆ. ಕನಕದಾಸರ ಸಾಧನೆಯಲ್ಲಿಯೂ ಇದನ್ನೇ ಕಾಣಬಹುದಾಗಿದೆ. ಅವರು ಜಾತಿಯಲ್ಲಿ ಕುರುಬರಾದರೂ ವಿಶಿಷ್ಟಾದ್ವೈತ ತತ್ವದಲ್ಲಿ ಬೆಳೆದರೂ ಮಾಧ್ವಗುರುಗಳ ಸಖ್ಯ ದೊರೆತರೂ ತಮ್ಮ ಅಸಾಧಾರಣ ಸಾಧನೆಯಿಂದ ತತ್ವಾತೀತರಾಗಿ ಬೆಳೆದಿದ್ದಾರೆ. ಇಂತಹ ವಿಶ್ವಮಾನವತ್ವವನ್ನೂ ಪ್ರತಿಪಾದಿಸುವವರೂ ಮೂಲದಲ್ಲಿ ಒಂದು ತತ್ವರಿಂದಲೇ ಬಂದಿರಬೇಕಷ್ಟೇ. ಹಾಗೆಯೇ ಮೂಲದಲ್ಲಿ ಕನಕದಾಸ ತತ್ವ ವಿಶಿಷ್ಟಾದ್ವೈತ ಎನ್ನುವುದಕ್ಕೆ ಯಾವ ಅಡ್ಡಿಯೂ ಇಲ್ಲ.

ಆದರೂ ಕೆಲವು ಪ್ರಶೆಗಳು ಉಳಿಯುತ್ತವೆ. ಅವುಗಳಲ್ಲಿ ಒಂದು: ಹಾಗಾದರೆ ಕನಕ-ವ್ಯಾಸರಾಯರ ಸಂಬಂಧವನ್ನು ಅವರ ನಡುವೆ ಬೆಳೆದಿರುವ ದಂತಕಥೆಗಳ ಅಸ್ತಿತ್ವವೇನು? ಎಂಬುದು. ಅದಕ್ಕೆ ಹೀಗೆ ಸಮಾಧಾನ ಕೊಡಬಹುದು. ಕನಕದಾಸರು ವ್ಯಾಸರಾಯರ ಪರಿಚಯಕ್ಕೆ ಬರುವ ವೇಳೆಗಾಗಲೆ ಕವಿಯಾಗಿ ಕೀರ್ತನಕಾರರರಾಗಿ ಪ್ರಸಿದ್ಧರಾಗಿದ್ದು ಅವರನ್ನು ವ್ಯಾಸರಾಯರು ಗುರುತಿಸಿ ಗೌರವಿಸಿ ಮನ್ನಣೆನೀಡಿ ಮಠದಲ್ಲಿ ಸ್ಥಾನ ನೀಡಿದ್ದಾರೆ.[೧೩] ಇದರಿಂದ ಅಸೂಯೆಗೊಂಡ ಶಿಷ್ಯರಲ್ಲಿ ಈರ್ಷ್ಯೆ ಅಸಮಾಧಾನ ಬೆಳೆದಿದೆ. ಅದರ ಹಿನ್ನೆಲೆಯಲ್ಲಿ ದಾಸರ ಸಾಧನೆ, ಗುಣಗಳನ್ನು ಪರಿಚಯಿಸಲು ಗುಣಗ್ರಾಹಿಗಳಾದ ವ್ಯಾಸರಾಯರು ನಡೆಸಿದ ಈ ಕಥಾ ಪ್ರಸಂಗಗಳಾಗಿವೆ ಎನ್ನಬಹುದು. ಇದಕ್ಕೆ ಪೂರಕವಾಗಿ ವ್ಯಾಸರಾಯರಿಂದಾಗಲಿ ವಾದಿರಾಜರಿಂದಾಗಲಿ ಕನಕದಾಸರಿಗೆ ದೀಕ್ಷೆ - ಅಂಕಿತ ಸ್ವೀಕಾರದಂತಹ ಸಂಪ್ರದಾಯದ 'ದಾಸತ್ವ' ಆಗಿಲ್ಲವೆಂದೇ ಎಲ್ಲ ವಿದ್ವಾಂಸರೂ ಹೇಳಿರುವುದನ್ನು ಗಮನಿಸಬಹುದು.[೧೩] ಕನಕನಕಿಂಡಿ, ವ್ಯಾಸರಾಯ ಕೆರೆಯ ಕೋಣನ ಪ್ರಸಂಗ ಮುಂತಾದ ವ್ಯಾಸ-ಕನಕರ ನಡುವಿನ ಪ್ರಸಂಗಗಳನ್ನೆಲ್ಲ ಈ ಅಭಿಪ್ರಾಯದ ಹಿನ್ನೆಲೆಯಲ್ಲಿಯೇ ಪುನರ್ವಿಮರ್ಶಿಸಬೇಕಾಗಿದೆ. ಆರಂಭದಲ್ಲೆ ವ್ಯಾಸರಾಯರ ಆಶ್ರಯಕ್ಕೆ ಬಂದರು ಎಂಬುದು ಈ ಅಭಿಪ್ರಾಯಗಳಿಂದಲೇ ಸ್ಪಷ್ಟವಾಗಿ ಹಿಂದೆ ಸರಿದಂತಾಗಿದೆ.

ವಿದ್ವಾಂಸರು ಗುರುತಿಸಿರುವ ಕನಕ - ಪುರಂದರರ ಕೀರ್ತನೆಗಳಲ್ಲಿನ ಭಿನ್ನತೆಗೆ - ವ್ಯತ್ಯಾಸಕ್ಕೆ ಈವರೆಗೆ ಕನಕದಾಸರು ಶೂದ್ರ ವರ್ಗಕ್ಕೆ ಸೇರಿದವರೆಂಬ ಕಾರಣವನ್ನು ಹೇಳಲಾಗಿದೆ. ಆದರೆ ವಿಶಿಷ್ಟಾದ್ವೈತ ತತ್ವದ ಹಿನ್ನೆಲೆಯಲ್ಲಿ ನೋಡಿದಾಗ ಈ ತತ್ವದಲ್ಲಿನ ಭಿನ್ನತೆಯೇ ಈ ವ್ಯತ್ಯಾಸಕ್ಕೆ ಕಾರಣವೆಂದು ಹೇಳಬಹುದಾಗಿದೆ. ಇದಕ್ಕೆ ಒಂದೆರಡು ಉದಾಹರಣೆಗಳನ್ನು ನೋಡಬಹುದು.

ಕನಕದಾಸರ ಕೃತಿಗಳಲ್ಲಿ ಪುರಂದರದಾಸರದಲ್ಲಿರುವಂತೆ ಗೇಯತೆಯಾಗಲಿ, ರಾಗ ತಾಳಗಳ ಶಾಸ್ತ್ರೀಯ ಕಲ್ಪನೆಯಾಗಲಿ ಪ॥, ಅ. ಪ॥, ಗಳ ಸಿದ್ಧ ಛಂದೋರೂಪದ ಅನುಕರಣೆಯಾಗಲಿ, ಅಷ್ಟಾಗಿ ಕಂಡುಬರುವುದಿಲ್ಲ. ಭಕ್ತನಾಗಿ ಪುರಂದರರಲ್ಲಿರುವ ದೃಢತೆ ಖಚಿತತೆ, ಆತ್ಮವಿಶ್ವಾಸ, ದೈವ-ಭಕ್ತನ ಸ್ಥಾನದ ಅರಿವು, ಇತ್ಯಾದಿಗಳು ಕನಕದಾಸರದಲ್ಲಿ ಕಡಿಮೆ ಎಂಬಂತಹ ಹೇಳಿಕೆಗಳೆಲ್ಲ ಕನಕದಾಸರ ತತ್ವವಾದ ವಿಶಿಷ್ಟಾದ್ವೈತದ ಸರಳ ಉಪಾಯವಾದ ಶರಣಾಗತಿ ತತ್ವಕ್ಕೆ ಅನುಗುಣವಾಗಿವೆ. ಇಲ್ಲಿ ಯಾವುದೇ ರೀತಿಯ ಶಾಸ್ತ್ರ ನಿಷ್ಠೆಯಾಗಲಿ ಇರುವುದಿಲ್ಲ. ದೈವವನ್ನು ಒಲಿಸಿಕೊಳ್ಳುವುದೊಂದೇ ದೈವದತ್ತ. ತುಡಿಯುವುದೊಂದೇ ಮಾರ್ಗ. ಇಲ್ಲಿ ಭಕ್ತ-ದೈವರ ನಡುವೆ ಅಂತರವೇರ್ಪಡುವುದಿಲ್ಲ. ತಂದೆ-ಮಗ, ಗಂಡ-ಹೆಂಡತಿ, ತಾಯಿ-ಮಗು, ಪುರುಷ -ಪ್ರಕೃತಿ ಹೀಗೆ ಹಲವು ಭಾವಗಳನ್ನು, ಆತ್ಮೀಯತೆಯನ್ನು ಸಾಧಿಸಬಹುದಾಗಿದೆ. ಯಾವುದೇ ಬಗೆಯ ಪ್ರತ್ಯೇಕತೆ ಇಲ್ಲ. ಲಕ್ಷ್ಮಿಯ ಮೂಲಕ ಗುರು-ಭಕ್ತರ ಮೂಲಕ ಈ ದೈವ ದರ್ಶನ ಸುಲಭ ಎಂಬ ತತ್ವದಲ್ಲಿ ಈ ಏಕನಿಷ್ಠೆ ನಿಲ್ಲುತ್ತದೆ.

ದೀನನಾನು ಸಮಸ್ತ ಲೋಕಕೆ ದಾನಿನೀನು ವಿಚಾರಿಸಲು
ಮತಹೀನ ನಾನು ನೆರಸುಜ್ಞಾನ ಮೂರುತಿ ನೀನು
ನಿನ್ನ ಸಮಾನರುಂಟೆ ದೇವ ರಕ್ಷಿಸು ನಮ್ಮನವರತ!

- ಎಂಬುದು ವಿಶಿಷ್ಟಾದ್ವೈತದ ಅದನ್ನು ಅನುಸರಿಸುವ ಕನಕದಾಸರ ಕೃತಿಗಳ ಸಾರವಾಗಿದೆ.

'ತನು ನಿನ್ನದು ಜೀವನಿನ್ನದು',
'ತಲ್ಲಣಿಸದಿರು ಕಂಡ್ಯ ತಾಳು ಮನವೆ'
'ಹರಿದಾಸರೊಳಿರತಿರು ಹೇ ಮನುಜ'
'ತೊರೆದು ಜೀವಿಸಬಹುದೆ ಹರಿ ನಿನ್ನ ಚರಣ'
'ಬಯಲು ಆಲಯದೊಳಗೊ ಆಲಯವು ಬಯಲೊಳಗೊ'
'ಎಲ್ಲರನು ಸಲಹುವನು ಇದಕೆ ಸಂಶಯಬೇಡ'
'ನೀನಲ್ಲದ ನರರು ಸ್ವತಂತ್ರರೆ'

- ಇಲ್ಲೆಲ್ಲ ವಿಶಿಷ್ಟಾದ್ವೈತದ ಭಕ್ತಿಯ ಸ್ವರೂಪವೇ ಸುಲಭವಾಗಿ ಅನ್ವಯವಾಗುವಂತೆ, ಮಾಧ್ವಭಕ್ತಿಯನ್ನು ತರುವುದು ಕಷ್ಟವಾಗುತ್ತದೆ. ಇನ್ನು ಅನೇಕ ಉದಾಹರಣೆಗಳನ್ನು ನೀಡಿ ಕನಕದಾಸನ ವಿಶಿಷ್ಟಾದ್ವೈತ ತತ್ವವನ್ನು ಸ್ಪಷ್ಟಪಡಿಸಬಹುದು. ಇದಕ್ಕೆ ಹೆಚ್ಚಿನ ಚರ್ಚೆಯ ಅಗತ್ಯವಿದೆ. ಪ್ರಮೇಯಗಳ ಮತ್ತು ಕೀರ್ತನೆಗಳ ವಿವರವಾದ ವಿಶ್ಲೇಷಣೆಯಾಗಬೇಕಾಗುತ್ತದೆ.

ಬೇಲೂರು ವೈಕುಂಠದಾಸರಿಂದ ಆರಂಭವಾಗುವ ವಿಶಿಷ್ಟಾದ್ವೈತ ತತ್ವ ಪ್ರತಿಪಾದನೆ ಕನ್ನಡ ಸಾಹಿತ್ಯದಲ್ಲಿ ಅವರ ಶಿಷ್ಯರೇ

ಆದ ಕನಕದಾಸರಲ್ಲಿ ಅದ್ಭುತವಾಗಿ ಕಾಣಿಸಿಕೊಂಡುದು ಮಾಧ್ವ ಭಕ್ತಿ ಪರಿಸರದ ಪ್ರೇರಣೆಯಿಂದ ಎಂಬುದನ್ನಂತೂ ಮರೆಯ ಲಾಗದಾದರೂ ಈ ಮೂಲ ತತ್ವ ಹೀಗೆ ಪ್ರಭಾವೀತತ್ವದೊಳಗೆ ಲೀನವಾಗಿ ಮರೆಮಾಚುವಂತಾಗಿದ್ದುದನ್ನೂ ಹಾಗೆಯೇ ಸಾಹಿತ್ಯ ಚರಿತ್ರೆಯಲ್ಲಿ ಮರೆಯಲಾಗದು. ನಂತರ ಕವಿಲಕ್ಷ್ಮೀಶನಲ್ಲಿ ಮುಂದುವರಿದರೂ ಅದಕ್ಕೆ ಅಥವ ಮಡಿವಂತಿಕೆಯನ್ನು ನಿರ್ಮಿಸಿ ಕೊಳ್ಳದೆ ಭಕ್ತಿಯೊಂದನ್ನೇ ಶರಣಾಗತಿಯ ಮೂಲಕ ಅಭಿವ್ಯಕ್ತಿಸುವ ಕ್ರಮವೇ ಈ ಸರಳ ಉಪಾಯ. ಕನಕದಾಸರು ಇದನ್ನೇ ಅನುಸರಿಸಿರುವುದು. ಇಲ್ಲಿಯ ತತ್ವಕ್ಕೆ ಅನುಗುಣವಾಗಿ ಪಂಚ ಭೇದದ ತಡೆಗೋಡೆಯ ಗೊಡವೆಯಿಲ್ಲ. ದೇವತಾ ತಾರತಮ್ಯದ ಹಂತಗಳಿಲ್ಲ. ಇಲ್ಲಿ ಶ್ರೀ ಹರಿಯೊಬ್ಬನೇ ದೈವ. ಅವನನ್ನು ನಂಬಿದರೆ ಸಾಕು. ಸಿದ್ಧಿ ಸಾಧ್ಯ. ನಾನು, ನನ್ನದು ಎಂಬುದರ ಸಂಪೂರ್ಣ ನಿವೃತ್ತಿ ಈ ಪ್ರಪತ್ತಿಯ ವಿಶಿಷ್ಟ ಗುಣ. "ಜೀವನದ ನಶ್ವರತೆ, ಹೆಣ್ಣು ಹೊನ್ನು ಮಣ್ಣಿಗೆ ಆಸೆ ಪಡದಿರುವ ಸಮಚಿತ್ತ, ಭಗವಂತನನೊಲಿಸಿಕೊಳ್ಳುವ ಗುರಿಯ ಹೊರತು ಅನ್ಯ ಗುರಿಯತ್ತ ನಿರ್ಲಕ್ಷ್ಯ. ಇದೇ ಈ ತತ್ವವನ್ನು ಅನುಸರಿಸಿದ ಭಕ್ತನ ಕಾಯಕ.

'ನಾನು ನೀನು ಎನ್ನದಿರು ಹೀನ ಮಾನವ'
'ನನ್ನಿಂದ ನಾನೆ ಜನಿಸಿ ಬಂದೆನೆ ದೇವ'
'ನಾರಿ ಮಕ್ಕಳು ತನುಮನ ನಿನ್ನವಯ್ಯ'
'ಕೇಶವನೊಲುಮೆಯು ಆಗುವ ತನಕ'

ಮುಂತಾದ ಅನೇಕ ಆತ್ಮ ನಿವೇದನೆಯ ಕೀರ್ತನೆಗಳಲ್ಲೆಲ್ಲ ಈ ಶರಣಾಗತಿ ತತ್ವ, ತನ್ನತನದ ನಿರಾಕರಣೆ, ದೈವ ಸಾಕ್ಷಾತ್ಕಾರದ ಏಕೈಕ ಗುರಿ, ಅದಕ್ಕಾಗಿ ದೇವರಲ್ಲಿ ಮೊರೆ, ದೈನ್ಯತೆ, ದೈವಭಕ್ತರಲ್ಲಿ ದಾಸತ್ವ, ಗುರು-ಭಕ್ತರ ಮೂಲಕ ದೈವದರ್ಶನದ ಹಂಬಲ ಇತ್ಯಾದಿ ವಿಶಿಷ್ಟಾದ್ವೈತ ತತ್ವದ ವಿಶಿಷ್ಟ ಲಕ್ಷಣಗಳನ್ನು ಸುಲಭವಾಗಿ ಗುರುತಿಸಬಹುದು.

ಶ್ರೀ ಹರಿಸರ್ವೋತ್ತಮತ್ವದ ಕೀರ್ತನೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ "ಹರಿ ಏಕನಿಷ್ಠೆ"ಯಲ್ಲಿ ನಿಲ್ಲುವುದನ್ನು ನೋಡಬಹುದು. ಈ ಹರಿ ಏಕನಿಷ್ಠೆ ವಿಶಿಷ್ಟಾದ್ವೈತದ ಒಂದು ಮುಖ್ಯ ಪ್ರಮೇಯ. ಶ್ರೀ ಹರಿಯೊಬ್ಬನನ್ನು ಅವಲಂಬಿಸಿದರೆ ಉಳಿದೆಲ್ಲ ದೈವಗಳ ಒಲುಮೆಯು ಸಾಧ್ಯ. ಶ್ರೀಹರಿಯನ್ನು ಒಲಿಸಿಕೊಂಡರೆ ಮೋಕ್ಷ ಸುಲಭ ಸಾಧ್ಯ. ಹೀಗೆ ಮಾಧ್ವ ತತ್ವದ ಪ್ರಭಾವವಿಲ್ಲದಿದ್ದರೂ, ಇವನನ್ನು ಈ ತತ್ವದಾಚೆಗೆ ನಿಲ್ಲಿಸಿ ನೋಡಿದ್ದೂ ವಿಮರ್ಶೆಯ ತಪ್ಪುದಾರಿಯೆನ್ನಬಹುದಾಗಿದೆ. ನಂತರ ಯದುಗಿರಿಯಮ್ಮ, ರಂಗದಾಸರು, ವೆಂಕಟವರದಾರ್ಯರು ಮುಂತಾದವರಿಂದ ೧೮-೧೯ನೇ ಶ. ದಲ್ಲಿ ಈ ವಿಶಿಷ್ಟಾದ್ವೈತ ಕೀರ್ತನ ಪರಂಪರೆ ಸಮೃದ್ಧವಾಗಿಯೇ ಬೆಳೆದು ಬಂದಿದೆ. ಈ ಪರಂಪರೆಯಲ್ಲಿ ತುಳಸಿರಾಮದಾಸರ ಶಿಷ್ಯನಾಗಿ ಕಂಡುಬರುವ ಚನ್ನಪಟ್ಟಣದ ಅಹೋಬಲದಾಸ ಈ ಕಾಲದಲ್ಲಿ ಇನ್ನೊಬ್ಬ ಕನಕದಾಸರಂತೆ ಅಭಿವ್ಯಕ್ತಗೊಂಡಿದ್ದಾರೆ. ಇವರಿಬ್ಬರಲ್ಲೂ ಅನೇಕ ಸಮಾನ ಅಂಶಗಳಿವೆ. ಇವರ ಒಂದು ಕೀರ್ತನೆಯಲ್ಲಿ ಇಡೀ ಶರಣಾಗತಿ ತತ್ವದ ಸಾರವೇ ಅಡಗಿದೆ.

'ಧ್ಯಾನಧರಣನಾಗಬೇಕಂತೆ
ದೀನ ನೀನಾದರೆ ಸಾಕಂತೆ'

- ಎಂದು ಆರಂಭವಾಗುವ ಈ ಕೀರ್ತನೆಯ ಸಾಲುಗಳೇ ಪ್ರಪತ್ತಿ ತತ್ವದ ಒಟ್ಟು ತಾತ್ಪರ್ಯವಾಗಿದೆ. ಆಸೂರಿ ರಾಮಸ್ವಾಮಿ ಅಯ್ಯಂಗಾರ್ ರಂತಹವರು ೫೦೦ ಕ್ಕೂ ಅಧಿಕ ಕೀರ್ತನೆಗಳನ್ನು ರಚಿಸುವ ಮೂಲಕ ೨೦ ನೇ ಶ.ದ ಶಾಮಶರ್ಮರು ಸಂಪತ್ತ ಯ್ಯಂಗಾರ್ಯರು, ನಾರಾಯಣ ಶರ್ಮರ ವರೆಗೆ ಈ ಪರಂಪರೆ ಯಿದ್ದು ಈಗಲೂ ಮುಂದುವರಿಯುತ್ತಿದೆ. ಈವರೆಗಿನ ಶೋಧದಲ್ಲಿ ಒಂದು ಸಾವಿರಕ್ಕೂ ಅಧಿಕ ಕೀರ್ತನೆಗಳು ಲಭ್ಯವಾಗಿವೆ.[೧೮]

ಹೀಗೆ ಒಂದು ಪರಂಪರೆಯಾಗಿಯೇ ಬೆಳೆದು ಬಂದಿರುವ ವಿಶಿಷ್ಟಾದ್ವೈತ ತತ್ವಪ್ರತಿಪಾದನೆಗೆ ಅದರ ಎಲ್ಲ ಸಾಧ್ಯತೆಗಳಿಂದಲೂ ಗರಿಷ್ಠ! ಪ್ರಮಾಣದ ಸಾಧನೆ ಮಾಡಿರುವ ಕನಕದಾಸರಂತಹ ಮುಖ್ಯ ಕವಿ ಕೃತಿಯನ್ನು ಇನ್ನು ಮುಂದಾದರೂ ಸಾಹಿತ್ಯ ಪರಂಪರೆ ವಸ್ತುನಿಷ್ಠವಾಗಿ ವಿಶ್ಲೇಷಿಸಬೇಕಾಗಿದೆ. ಆ ಮೂಲಕ ಈ ತತ್ವದ ಬಗೆಗೂ ಇದರ ಸಾಹಿತ್ಯ ನಿರ್ಮಿತಿಯ ಬಗೆಗೂ ಪುನರಾಲೋಚಿಸ ಬೇಕಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ಕನಕಸಾಹಿತ್ಯ ದರ್ಶನ** ಸಂ. ೧., (೧೯೯೦), ಕರ್ನಾಟಕ ಸರ್ಕಾರ, ಪು. ೮೮೮.
೨. ರಂ. ಶ್ರೀ. ಮಗಳಿ., **ಕನ್ನಡ ಸಾಹಿತ್ಯ ಚರಿತ್ರೆ** - ಪು. ೩೦, ತುಮಕೂರು ಜಿಲ್ಲೆಯ ಕೀರ್ತನಕಾರರು, ಪು. ೧೫.
೩. ನಾ. ಗೀತಾಚಾರ್ಯ., 'ವಿಜಯನಗರ ಕಾಲದಲ್ಲಿ ಶ್ರೀ ವೈಷ್ಣವ ಹರಿದಾಸ ಸಾಹಿತ್ಯ ಶೋಧ', **ಕರ್ನಾಟಕ ಲೋಚನ.**
೪. ೧. ಬನ್ನಂಜೆ ಗೋವಿಂದಾಚಾರ್ಯ., (೧೯೯೭), **ಕನಕದಾಸರು**, ಪು. ೧೨೩.
೨. ಎಂ. ವಿ. ಸೀತಾರಾಮಯ್ಯ., (೧೯೯೦), **ಕನಕ ಸಾಹಿತ್ಯ ದರ್ಶನ**, ಕ.ಸಂ. ೩, ಪು. ೧೬೨.
೫. 'ಹರಿ ನಿಮ್ಮ ಪದಕಮಲ ನಿರುತ ಧ್ಯಾನದಿ ಎನಗೆ' **ಕನಕದಾಸರ ಕೀರ್ತನೆಗಳು**, ಕ.ಸ. ಪು. ೮೩.
೬. ಇದಕ್ಕೆ ಅನೇಕ ಶಾಸನಗಳ ಆಧಾರವಿದೆ.

೭. ಎಂ. ವಿ ಸೀ., (ಸಂ.), ಕ.ಸಂ. ಪು. ೧೬೧, ೧೬೨.

೭ . ಬನ್ನಂಜೆ ಗೋವಿಂದಾಚಾರ್ಯರು ಕನಕದಾಸರ 'ರಾಮಾನುಜರೆ ನಮೋನಮೋ' ಕೀರ್ತನೆಯಲ್ಲಿ ಎತ್ತಿರುವ ರಾಮಾನುಜರ ವಿಶೇಷಣಗಳನ್ನು ದೇವರಿಗೆ ಆರೋಪಿಸಿರುವುದು ತೀರ ಅಸಂಗತವಾಗುತ್ತದೆ ಎಂಬ ಪ್ರಶ್ನೆಯನ್ನು ಈ ಚಿಂತನೆಯ ಹಿನ್ನೆಲೆಯಲ್ಲಿ ವಿಶ್ಲೇಷಿಸಿದರ ಕ್ಲೇಶವಿರದು. (ನೋಡಿ : **ಕನಕದಾಸರು**, ಬನ್ನಂಜೆಯವರ ಲೇಖನ, ತಿರುಪತಿ ೧೯೯೭. ಪು.೧೨೩).

೮. 'ಬಂಟನಾಗಿ ಬಾಗಿಲ ಕಾಯ್ವೆ'ಯಲ್ಲಿ, ವೈಕುಂಠದಾಸರನ್ನೇ ಸ್ತುತಿಸಲಾಗಿದೆ ಎಂದು ವಿದ್ವಾಂಸರ ಅಭಿಮತ. 'ಮೋಹನ ತರಂಗಿಣಿ'ಯಲ್ಲಿನ ರಾಮಾನುಜರು, ತಾತಾಚಾರ್ಯರ ನಂತರದ 'ರಾಮಾನುಜಮುನಿ' ಎಂಬ ಸ್ತುತಿಯೂ ವೈಕುಂಠದಾಸರನ್ನು ಕುರಿತದ್ದೇ ಆಗಿರಬೇಕೆಂದು ತೋರುತ್ತದೆ.

೯. ತಾತಾಚಾರ್ಯರನ್ನು **ಮೋಹನ ತರಂಗಿಣಿ** ಮತ್ತು ಕೆಲವು ಕೀರ್ತನೆಗಳಲ್ಲಿ 'ತಿರುಮಲಾಚಾರ್ಯ ಶ್ರೀ ಗುರುವೆ ಬಲ್ಲ' - ಗುರುಸ್ಥಾನದಲ್ಲಿ ಸ್ತುತಿಸಿದ್ದಾರೆ.

೧೦. ಸಿ. ಪಿ. ಕೃಷ್ಣಕುಮಾರ್., ಎಂ. ವಿ. ಸೀತಾರಾಮಯ್ಯ., (೧೯೯೦), **ಕನಕಸಾಹಿತ್ಯ ದರ್ಶನ**.

೧೧. ಎಂ.ವಿಸೀ., 'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೊ' ಎಂಬುದರಲ್ಲಿನ ಮಾಯಾತತ್ವ. ಅದೇ, ೧೬೧,೧೬೩.

೧೨. ಎಂ. ವಿ. ಸೀ., ಅದೇ.

೧೩. **ಕನಕದಾಸರು** ಬನ್ನಂಜೆ., ಪು. ೧೨೩, ತಿರುಪತಿ, ೧೯೯೭, ಇದರಲ್ಲಿಯೂ ಇದೇ ಅಭಿಪ್ರಾಯವಿದೆ; ಜಿ.ಎಸ್. ದೀಕ್ಷಿತ್., ಸಿಪಿಕೆ, ವಿಎನ್‌ಎನ್. ಎಂ.ವಿ.ಸೀ. ಬನ್ನಂಜೆ, ಜಿ ವರದರಾಜರಾವ್. ಇತರರು ವಿವಿಧ ಗ್ರಂಥಗಳಲ್ಲಿ ಈ ಅಭಿಪ್ರಾಯವನ್ನು ಸ್ಪಷ್ಟವಾಗಿ ಸೂಚಿಸಿದ್ದಾರೆ.

೧೪. ಕರ್ನಾಟಕ ಸರ್ಕಾರದ ಸಮಗ್ರ ಹರಿದಾಸ ಸಾಹಿತ್ಯ ಪ್ರಕಟನೆಗಾಗಿ ಶ್ರೀವೈಷ್ಣವ ಕೀರ್ತನ ಸಂಪುಟ ೧, ೨ ಅನ್ನು ಪ್ರಸ್ತುತ ಲೇಖಕನ ಸಂಪಾದಕತ್ವದಲ್ಲಿ ಸಿದ್ಧಗೊಳಿಸಿ ಹಸ್ತಪ್ರತಿಗಳನ್ನು ಕನ್ನಡ ಸಂಸ್ಕೃತಿ ಇಲಾಖೆಗೆ ಸಲ್ಲಿಸಲಾಗಿದೆ.

ಗುರುಮೂರ್ತಿ ಪೆಂಡಕೂರು*

# ರಾಯವಾಚಕ ಕೃಷ್ಣದೇವರಾಯನ ದಿನಚರಿ - ಒಂದು ಪರಿಶೀಲನೆ

ರಾಯವಾಚಕ ಎಂಬ ತೆಲುಗು ಗದ್ಯಗ್ರಂಥವನ್ನು ಕಾಶಿ ವಿಶ್ವನಾಥ ನಾಯನಯ್ಯ ಅವರ ಸ್ಥಾನಪತಿ ಬರೆದ ನಿರೂಪ ಎನ್ನಲಾಗಿದೆ. ಈ ಕಾಶಿ ವಿಶ್ವನಾಥ ನಾಯನಯ್ಯ ಯಾರು ಎಂಬುದು ಈವರೆಗೆ ಖಚಿವಾಗಿಲ್ಲ. ಪ್ರಾಯಃ ಮಧುರೆಯನ್ನಾಳಿದ ವಿಶ್ವನಾಥನಾಯಕ (೧೫೪೨-೧೫೬೦) ಎಂದು ಒಂದು ಅಭಿಪ್ರಾಯ. ಈ ನಾಯಕನ ಪರವಾಗಿ ವಿಜಯನಗರದಲ್ಲಿ ಅಧಿಕಾರಿ (ರಾಯಭಾರಿ) ಯಾದವನೇ ಆಗ ಸ್ಥಾನಪತಿ ಎನಿಸಿಕೊಳ್ಳುತ್ತಿದ್ದನು. ಆದರೆ ಈ ವರದಿಯು ಅವನ ಹೆಸರಲ್ಲಿ ನಮೂದಾಗಿಲ್ಲ. ಈ ವರದಿ ಕೃಷ್ಣದೇವರಾಯನ ಕೊನೆಯ ದಿನಗಳಲ್ಲಿ ಬರೆಯಲ್ಪಟ್ಟಿರಬಹುದು ಅಥವಾ ಅಚ್ಯುತದೇವರಾಯನ ಕಾಲದಲ್ಲಿ ರಚಿಸಲ್ಪಟ್ಟಿರ ಬಹುದೆಂದು ಊಹಿಸಲಾಗಿದೆ. ವಿಜಯನಗರದಲ್ಲಿ ಎಲ್ಲ ಮಾಂಡಲಿಕರ ಮತ್ತು ಅನ್ಯರಾಜರ ಪ್ರತಿನಿಧಿಗಳಾಗಿ ಸ್ಥಾನಪತಿ ಗಳಿರುತ್ತಿದ್ದರು. ಗಜಪತಿ ರಾಜ್ಯದಲ್ಲಿ ಕರ್ನಾಟಕದ ಪರವಾಗಿ ಕಮಲನಾಭಯ್ಯ ಎಂಬುವರು ಸ್ಥಾನಪತಿಯಾಗಿದ್ದರು. ಈ ರೀತಿ ಸ್ಥಾನಪತಿಯಾಗಿದ್ದ ಅಧಿಕಾರಿಯೊಬ್ಬರು ತನ್ನ ಪ್ರಭುವಿಗೆ ಕಳಿಸಿದ ನಿವೇದನೆಯೇ ರಾಯವಾಚಕ.

ಆದರೆ ಈ ವಾಚಿಕೆಯ ಅಂತಃಸಾಕ್ಷ್ಯಗಳನ್ನು ಆಧರಿಸಿ ಡಾ|| ಸಿ. ವಿ. ರಾಮಚಂದ್ರರಾಯರು ೧೫೫೫-೧೬೦೨ರ ಕಾಲಾವಧಿಯಲ್ಲಿ ಕೃಷ್ಣದೇವರಾಯನ ಕಾಲಾನಂತರ ಈ ಗ್ರಂಥವು ರಚಿಸಲ್ಪಟ್ಟಿತೆಂದು ತೀರ್ಮಾನಿಸಿದ್ದಾರೆ. ಈ ವಾಚಿಕೆಯ ವಸ್ತು-ಕೃಷ್ಣದೇವರಾಯರ ಚರಿತ್ರೆ. ರಾಯರ ಕಥೆಯನ್ನು ಹೇಳುವುದೇ ಉದ್ದೇಶವಾದರೂ ತತ್ಸಂಬಂಧವಾದ ಅನೇಕ ಐತಿಹ್ಯಗಳನ್ನು ಇಲ್ಲಿ ಸುಬದ್ಧವಾಗಿ ಸಂಕಲಿಸಲಾಗಿದೆ. ಪಾಶ್ಚಾತ್ಯರ 'ಚರಿತ್ರೆ'ಯ ಭಾಷ್ಯದ ಪ್ರಕಾರ ನೋಡಿದರೆ ಇದು ಚರಿತ್ರೆ ಅಲ್ಲ. ಆದರೆ ಇತಿಹಾಸ ರಚನೆಗೆ ಆಕರವಾಗಬಲ್ಲ ಗ್ರಂಥ. ಇದರಲ್ಲಿ ಪೌರಾಣಿಕ ಪ್ರಸಂಗಗಳು, ಜಾನಪದ ಕಲ್ಪನೆಗಳು ಸೇರಿಕೊಂಡಿವೆ.

ರಾಯವಾಚಕದ ಲೇಖಕ ಒಬ್ಬ ಅಧಿಕಾರಿ. ಸಮಾಚಾರ ನೀಡುವವನು. ಆತನಿಗೆ ಸಮಕಾಲೀನ ರಾಜಕೀಯ ಮತ್ತು ಸಾಹಿತ್ಯದ ನಿಕಟ ಪರಿಚಯವಿದೆ. ಅವನು ಸುಜನರಿಂದ ಸಂಗ್ರಹಿಸಿದ ಸತ್ಯವಾದ ವಿವರಗಳು ಇಲ್ಲಿವೆ ಎಂದು ವಾಚಿಕೆಯ ಬಗ್ಗೆ ಹೇಳುತ್ತಾನೆ. ತಾನು ಕೃಷ್ಣರಾಯರ ಚರಿತ್ರೆಯನ್ನು ಹೇಳ ಹೊರಟವನು. ಅವರ ಪೂರ್ವಿಕರಾದ ವೀರನರಸಿಂಹರಾಯರ ದಿನಚರಿ ಮತ್ತು ವಾಲಿ ಸುಗ್ರೀವರ, ವಿದ್ಯಾರಣ್ಯರ, ವಿದ್ಯಾನಗರ ಸ್ಥಾಪನೆಯ ವಿಷಯಗಳನ್ನೂ ತಿಳಿಸುತ್ತಾನೆ. ಅನಂತರ ಕೃಷ್ಣ ದೇವರಾಯನ ಪಟ್ಟಾಭಿಷೇಕ, ಆತನ ದಿನಚರಿ, ಪರಿಪಾಲನಾ ವಿಧಾನ, ಯುದ್ಧಗಳು, ತೀರ್ಥಯಾತ್ರೆಗಳು ಮತ್ತು ಅನೇಕ ಕಥೆ ಉಪಕಥೆಗಳನ್ನು ಹೇಳಲಾಗಿದೆ.

ಬೇರೆ ಬೇರೆ ಗ್ರಂಥಗಳಿಂದ ಸಂದರ್ಭಾನುಸಾರವಾಗಿ ಪದ್ಯಗಳನ್ನು, ಶ್ಲೋಕಗಳನ್ನು, ಔಚಿತ್ಯಪೂರ್ಣವಾಗಿ ಉದ್ಧರಿಸಲಾಗಿದೆ. ಚರಿತ್ರೆಯ ಗ್ರಂಥಗಳಲ್ಲಿ ಪದ್ಯಗಳಿರುವುದಿಲ್ಲ. ಈ ಗ್ರಂಥದಲ್ಲಿ ಮುಖ್ಯವಾಗಿ ರಾಜನು ಹೇಗಿರಬೇಕು? ರಾಜ ಮರ್ಯಾದೆಗಳು, ಮಂತ್ರಿಗಳ ನಡವಳಿಕೆ ಮೊದಲಾದ ವಿಷಯ ಗಳಿಲ್ಲಿವೆ, ರಾಜನೆಂದರೆ ಸಭಾಪತಿ, ಅವನು ಹೇಗಿಬೇಕೆಂದರೆ.

ತರುಣನಾಗಿ ನವರತ್ನಾ
ಭರಣನಾಗಿ ಗಂಧ ಪುಷ್ಪ ಪರಿಮಳಯುತನಾಗಿ
ನರನಾಯಕ ಪರಿವೃತನಾಗಿ
ಆಸೀನನಾದವನೇ ಸಭಾಪತಿಯೆನಿಸುವನೈ||

-ಇಲ್ಲಿ ರಾಜನ ಸಪ್ತಾಂಗಗಳು, ಸಪ್ತೋಪಾಯಗಳು, ರಾಜನಿಗೆ ಬರಬಾರದ ಸಪ್ತ ವ್ಯಸನಗಳು, ಸಪ್ತ ಸಂತಾನ, ಸಭಾ ಸಪ್ತಾಂಗ, ಸಪ್ತ ತ್ಯಾಗಗಳು ಇತ್ಯಾದಿಗಳನ್ನು ವಿವೇಚಿಸಿ, ಹದಿನಾಲ್ಕು ರಾಜದೋಷಗಳನ್ನು ವಿವರಿಸಿ, ತ್ರಿಸಂಖ್ಯೆಯಿಂದ ರಾಜನೀತಿ ಹೇಳುತ್ತಾನೆ. ರಾಯರು ತುರುಕರನ್ನು ಗೆದ್ದ ಮೇಲೆ ಕವಿ ಮುಕ್ಕುತಿಮ್ಮನನು ಹೇಳಿದ ಪದ್ಯ ಹೀಗಿದೆ:

ನರಸಿಂಹ ಕೃಷ್ಣ ರಾಯಾ
ರಣದಲ್ಲಿ ನಿನ್ನ ಹೆಸರೇ ತುರುಕರನು ಸದೆ ಬಡಿಯಿತು
ಕದಿರಾಜ ವರದನೆಂದು
ಕಾರುಮೋಡಗಳು ನಿನ್ನ ಕಂಡು ಗಕ್ಕನೆ ತಿರುಗಿದುವು||

ಹೀಗೆ ನಾನಾ ಕಥೆಗಳ, ಐತಿಹ್ಯಗಳ, ಸುದ್ದಿ ಸಮಾಚಾರದ ಉತ್ಕೃಷ್ಟ ಸಂಕಲನವೇ ರಾಯವಾಚಕ.

ಕನ್ನಡದ ಕೃಷ್ಣದೇವರಾಯನ ದಿನಚರಿಯು ೧೯೮೩ರಲ್ಲಿ ಬಿ. ಎಂ. ಶ್ರೀ ಪ್ರತಿಷ್ಠಾನದಿಂದ ಪ್ರಕಟವಾಗಿದೆ. ಶ್ರೀ ಎಂ. ವಿ. ಸೀತಾರಾಮಯ್ಯನವರು ಸಂಪಾದಿಸಿದ್ದಾರೆ. ಇದು ತೆಲುಗು ರಾಯವಾಚಕದ ಅನುವಾದ. ಕೃಷ್ಣ ದೇವರಾಯರು ಆ ಕಾಲದಲ್ಲಿ ಅತ್ಯಂತ ಪ್ರಸಿದ್ಧರೂ, ಜನಪ್ರಿಯರೂ, ಆದರ್ಶಪ್ರಾಯರೂ ಆಗಿದ್ದ ರಿಂದ ಇದು ಅನ್ಯಭಾಷೆಗಳಿಗೆ ಅನುವಾದವಾಗಿರಬೇಕು.

* ನೇತಾಜಿ ರಸ್ತೆ, ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ - ೫೮೩ ೨೧೨

ಅನುವಾದಕಾರನು ರಾಯವಾಚಕದ ಅನೇಕ ಪದ್ಯಗಳನ್ನು ಶ್ಲೋಕಗಳನ್ನು ಕೈಬಿಟ್ಟಿದ್ದಾನೆ. ಕೆಲಕಡೆ ಭಾವಾನುವಾದ ನೀಡಲಾಗಿದೆ. ಕೃಷ್ಣ ದೇವರಾಯನ ದಿನಚರಿ ಎಂದರೆ ಆಧುನಿಕ ಅರ್ಥದ ಡೈರಿ ಅಥವಾ ದಿನಚರಿ ಅಲ್ಲ. ರಾಯರೇ ಇದನ್ನು ಬರೆದಿಲ್ಲ. ಇದು ರಾಯರ ಒಂದು ದಿನದ ಕಾರ್ಯ ಕಲಾಪಗಳ ವಿವರ ಎನ್ನಬಹುದು. ಇದು ಒಂದು ರೀತಿಯ ಬಖೈರು. ಬಖೈರು ಒಬ್ಬ ಅಧಿಕಾರಿ ತನ್ನ ಪ್ರಭುವಿಗೆ ಬರೆದ ವಿವರವಾದ ಪತ್ರ. 'ನಾಮಾ' ಎಂದರೂ ಅದೇ ಆಗುತ್ತದೆ. ಉದಾ : ಹೈದರ್ ನಾಮಾ. ರಾಜೇಂದ್ರನಾಮೆ - ಈ ದಿನಚರಿಯೂ ಅಂತಹದೇ ಒಂದು ಗ್ರಂಥ. [*ರಾಜೇಂದ್ರನಾಮೆ ಕೇವಲ ದೊಡ್ಡ ವೀರರಾಜೇಂದ್ರ ಒಡೆಯನ ದಿನಚರಿಯಲ್ಲ; ವಿವರವಾದ ಪತ್ರವೂ ಅಲ್ಲ; ಕೇವಲ ದಿನದ ಕಾರ್ಯ ಕಲಾಪವಲ್ಲ. ಪಟ್ಟಾಭಿಷೇಕ, ವಿವಾಹ ಇತ್ಯಾದಿ ವಿವರ ವಂಶಿಕ ಚರಿತ್ರೆ, ಆಡಳಿತ ಹಾಗೂ ಮಾಡಿದ ಯುದ್ಧಗಳು, ದೊರೆಯ ಆಶಯಗಳನ್ನು, ವಂಶಿಕ ವಿವರಗಳನ್ನು ನೀಡಿ ಬರೆದಿರುವ ಚರಿತ್ರೆ. ದೊರೆಯ ಸಮ್ಮತ ಪಡೆದಿರುವ ಚರಿತ್ರೆ (-ಸಂ).*]

ಈ ದಿನಚರಿಯಲ್ಲಿ : ೧. ವೀರನರಸಿಂಹರಾಯರ, ಕೃಷ್ಣ ದೇವರಾಯರ ಬೆಳಗಿನ ದಿನಚರ್ಯೆ ೨. ವಿದ್ಯಾನಗರ ಸ್ಥಾಪನೆ, ೩. ಕೃಷ್ಣದೇವರಾಯರ ಪಟ್ಟಾಭಿಷೇಕ ೪. ಮಂತ್ರಿಗಳಿಂದ ರಾಜನೀತಿ ವಿವರಣೆ ೫. ಬೇರೆ ಬೇರೆ ರಾಜ್ಯಗಳಿಗೆ ವರದಿಗಾರರನ್ನು ಕಳಿಸಿದ್ದು. ೬. ಕೃಷ್ಣದೇವರಾಯರ ರಾತ್ರಿಗಸ್ತು. ೭. ನಗರ ಕೋಶಾದಿ ವಿವರಣೆ ೮. ಚತುರಂಗ ಬಲ ವಿಸ್ತರಣ ೯. ತುರುಕರ ದಂಡನೀತಿ ೧೦. ತುರುಕರ ಮೇಲೆ ಸಮರ ೧೧. ಓರುಗಲ್ಲಿನ ಮೇಲೆ ಡಿಲ್ಲಿ ಸುಲ್ತಾನನ ದಾಳಿ ೧೨. ಡಿಲ್ಲಿ ಸುಲ್ತಾನ, ಪ್ರತಾಪ ರುದ್ರರ ಮಹಿಮೆ ೧೩. ಪುರುಷೋತ್ತಮ ನಗರ (ಪುರಿ) ವರ್ಣನೆ. ೧೪. ಗೋದಾವರಿ ತೀರದಲ್ಲಿ ಗಜಪತಿ ಜಗನ್ನಾಥರ ವಿವರ. ಷೋಡಶ ಪಾತ್ರರ ವಿವರ ೧೫. ಗಜಪತಿ ರಾಜ್ಯದಲ್ಲಿ ಜಗಜೆಟ್ಟಿ ಗಾರುಡಿ ೧೬. ರಾಯರ ದಿಗ್ವಿಜಯ ೧೭. ಗಜಪತಿಯ ಮೇಲೆ ದಾಳಿ ಷೋಡಶಪಾತ್ರರಿಗೆ ಹದಿನಾರು ಆಭರಣಗಳ ಕಾಣಿಕೆ ೧೯. ಗಜಪತಿ ಕುವರಿಯೊಂದಿಗೆ ವಿವಾಹ. ೨೦. ತೀರ್ಥಕ್ಷೇತ್ರ ಸಂದರ್ಶನ ೨೧. ವಿದ್ಯಾನಗರ ಪ್ರವೇಶ.

ರಾಯವಾಚಕದಲ್ಲಿರುವ ಸಿಂಗಿರಿಭಟ್ಟರ ಪ್ರಸಕ್ತಿ, ವೇದ ವ್ಯಾಸರ ಭೇಟಿ, ವಿದ್ಯಾರಣ್ಯ ಪ್ರಶಂಸೆ, ಅವತಾರಿಕಾ ಪದ್ಯಗಳು, ಫಲಶ್ರುತಿ ವಾಕ್ಯಗಳು ಇಲ್ಲಿಲ್ಲ. ಅನೇಕ ಕಡೆ ವಕ್ಕಣಿಕೆಯಲ್ಲೂ ಭೇದವಿದೆ.

ಎಂ. ವಿ. ಸೀತಾರಾಮಯ್ಯನವರು ಈ ಗ್ರಂಥವನ್ನು ಮುಕ್ಕುತಿಮ್ಮನ ಮತ್ತು ಮಾದಯ್ಯನವರ ಮಲ್ಲಣ್ಣ ಬರೆದಿರಬೇಕೆಂದು ಊಹಿಸಿದ್ದಾರೆ.

ದಿನಚರಿಯಲ್ಲಿ - ಕಥಾ ಆರಂಭಕ್ಕಿಂತ ಮೊದಲು - ರಾಯವಾಚಕದಲ್ಲಿರುವ ಈ ಬಿನ್ನಹ ವಾಕ್ಯಗಳೇ ಇಲ್ಲ.

'ಶ್ರೀಮಂತ ಸಕಲ ಗುಣ ಸಂಪನ್ನ ಮಹಾಮೇರು ಸಮಾನಧೀರ ಅಖಂಡಿತ ಲಕ್ಷ್ಮೀಪ್ರಸನ್ನರಾದ ಶ್ರೀಮನ್ಮಹಾಮಂಡಲೇಶ್ವರ ರಾಜಮಾನ್ಯ ಮಹಾರಾಜ ರಾಜ ಶ್ರೀ ಕಾಶೀ ವಿಶ್ವನಾಥ ನಾಯಕನಯ್ಯ ಅವರ ದಿವ್ಯ ಶ್ರೀಪಾದಪದ್ಮಗಳಿಗೆ ಪ್ರಭುಗಳ ಸ್ಥಾನಪತಿ ಭಕ್ತ ಪರಾಧೀನ ಸದ್ವಿನಯ ಭಯಭಕ್ತಿಯಿಂದ ಸಮರ್ಪಿಸಿದ ಬಿನ್ನಪ".

ಈ ರೀತಿ ಸ್ಥಾನಪತಿಯೊಬ್ಬರು ಬರೆದ ನಿರೂಪವನ್ನು ಅನಂತರ ಕನ್ನಡ ಬಲ್ಲವರೊಬ್ಬರು ದಿನಚರಿಯೆಂದು ಅನುವಾದಿಸಿರಬೇಕು. ಮುಕ್ಕುತಿಮ್ಮನನಾಗಲೀ ಮಾದಯ್ಯನವರ ಮಲ್ಲಣ್ಣನಂಥವರಾಗಲೀ ರಚಿಸಿರಬಹುದಾದ ಕೃತಿಯಿದಲ್ಲ.

ಮೇಲಾಗಿ ಕೃಷ್ಣದೇವರಾಯನು ತನ್ನ ದಿನಚರಿಯನ್ನು ಬರೆಯಲು ಎಂದೂ ಯಾರಿಗೂ ಹೇಳಿಲ್ಲವೆಂದು ಖಚಿತ ಅಭಿಪ್ರಾಯ. ಮೇಲಾಗಿ ರಾಯವಾಚಕಕ್ಕೂ ದಿನಚರಿಗೂ ವಿವರಗಳಲ್ಲಿ ಸಾಕಷ್ಟು ಭೇದವಿದೆ. ಆದರೆ ಬಹುಪಾಲು ದಿನಚರಿಗೂ ರಾಯವಾಚಕದ ತದ್ವತ್ ಅನುವಾದವಾಗಿದೆ.

ರಾಯವಾಚಕ ಮತ್ತು ದಿನಚರಿ ರಚನೆಯ ಕಾಲದಲ್ಲಿ ತುಂಬಾ ವ್ಯತ್ಯಾಸವಿಲ್ಲ. ಆ ವಿಜಯನಗರದಲ್ಲಿ ದ್ವಿಭಾಷಾ ವ್ಯವಹಾರವಿತ್ತು. ಆಗಲೇ ಯಾರಾದರೂ ಉಭಯ ಭಾಷಾ ವಿಶಾರದರು 'ದಿನಚರಿ' ಯನ್ನು ರಚಿಸಿರಬಹುದು.

ಈ ಎರಡೂ ಗ್ರಂಥಗಳನ್ನು ಪರಿಶೀಲಿಸಿದಾಗ ವಿಜಯನಗರ ಕಾಲದಲ್ಲಿ ಕನ್ನಡವೇ ಪ್ರಧಾನ ಮತ್ತು ಆಡಳಿತ ಭಾಷೆಯಾಗಿತ್ತೆಂದೂ, ಕೃಷ್ಣದೇವರಾಯರ ಸಮಸ್ತ ವ್ಯವಹಾರವೂ ಕನ್ನಡದಲ್ಲೇ ನಡೆದಿತ್ತೆಂದು ಹೇಳಬಹುದು. ತೆಲುಗಿನ ಮೇಲೆ ಕನ್ನಡವು ತೀವ್ರ ಪ್ರಭಾವ ಬೀರಿತ್ತು ಎಂದೂ ತೀರ್ಮಾನಿಸಬಹುದು.

೧. ನನ್ನಯ್ಯನೇ ಪಂಪನಿಂದ ಪ್ರಭಾವಿತನಾದೆನೆಂದು ಹೇಳಿದ್ದಾನೆ.

೨. ನನ್ನೆ ಚೋಡನು ಕುಮಾರಸಂಭವದಲ್ಲಿ ದೇಸಿ, ಮಾರ್ಗ ಕವಿತೆ, ಮುಂತಾದ ಪ್ರಯೋಗ ಮಾಡಲು ಕನ್ನಡದ ಪ್ರಭಾವವೇ ಕಾರಣ.

೩. ೧೨ನೇ ಶತಮಾನದಲ್ಲಿ ಶಿವಶರಣರ ಪ್ರಭಾವವು, ವಚನ ಸಾಹಿತ್ಯದ ಪ್ರಭಾವ ಆಂಧ್ರದ ಶಿವಕವಿಗಳ ಮೇಲೆ ಗಾಢವಾಗಿ ಆಯಿತು.

೪. ಪಂಡಿತಾರಾಧ್ಯ, ಪಾಲ್ಕುರಿಕೆ ಸೋಮನಾಥ ಅವರು ವೀರಶೈವ ಧರ್ಮ ಪ್ರಚಾರ ಮಾಡುವಾಗ - ಕನ್ನಡ ವಾಚಹ-ವಾಚನವಾಯಿತು.

೫. ತಿಕ್ಕನ ಭಾರತದಲ್ಲಿ - ಆದಿ ಪುರಾಣದ ಪ್ರಭಾವ - ಎರ್ರನನ ಕೃತಿಯಲ್ಲಿ - ಪಂಪ ಭಾರತದ ಪ್ರಭಾವ ಎಲ್ಲರೂ ಒಪ್ಪಿದ ಮಾತು.

೬. ಶ್ರೀನಾಥ, ಪೋತನರ ಮೇಲೆ ಕುಮಾರ ವ್ಯಾಸನ ಪ್ರಭಾವ

೭. ಸಂಗೀತ ಲೋಕದಲ್ಲಿ ಪುರಂದರ, ಅನ್ನಮಯ್ಯ, ತ್ಯಾಗರಾಜರ ಕೃತಿಗಳು, ಎರಡೂ ಭಾಷೆಗಳನ್ನು ಸನಿಹ ಮಾಡಿದವು.

೮. ಹೀಗಾಗಿ ರಾಯವಾಚಕದ ಭಾಷೆಯ ಉಚ್ಚಾರಣೆ ಪದಜಾಲ, ಪದಬಂಧ, ಸರ್ವನಾಮ, ವಾಕ್ಯ ರಚನೆ ಯಲ್ಲೂ ಕನ್ನಡದ ಪ್ರಭಾವ ಬೀರಿತು.

೧. ತೆಲುಗಿನಲ್ಲಿ ಣ,ಳ ಇಲ್ಲ. ಅಲ್ಲಿ ನ, ಲಗಳೇ ಪ್ರಿಯ. ರಾಯವಾಚಕದಲ್ಲಿ - ಅಣ್ಣಗಳು, ಮಳಯಾಳ, ಕಲ್ಯಾಣ ನಡವಡಿಕೆಲು, ಸಂಬಂಳಂ ಸಾರಿಕೆಲು

೨. ಪದಜಾಲ - ಅಪ್ಪ, ಅಳಿಯ, ಕಾಸು ಮುಂತಾದವು.

೩. ಅಂಕ್ಕ ಪಂಕ್ಕ,ಕಡ್ಡಿ ಕವಳ, ಕಾನುಕಕಪ್ಪಮುಲು, ಧಾನ್ಯ ದವಸಮುಲು, ಕೋಟೆ ಕೊತ್ತಳಮುಲು.

೪. ಸರ್ವನಾಮ - ಆತ - ಆತಡು. ಈತ - ಈತಡು

೫. ಸಂಖ್ಯಾವಾಚಕ -ಕಾಲು, ಮುಕ್ಕಾಲು, ಮುನ್ನೂರು, ನಾಲುಗಾರು ಹೀಗೆ ಹತ್ತು ಹಲವಾರು ರೀತಿಯಲ್ಲಿ ಕನ್ನಡವು ತೆಲುಗಿನ ಮೇಲೆ ಪ್ರಭಾವ ಬೀರಿತು. ಆದರೆ / ಇಲ್ಲಿ ತಮಿಳು ಪದಗಳಿಲ್ಲ. ಪಾರ್ಸಿ ಪೋರ್ತುಗೀಸ್ ಪದಗಳಿವೆ. ಆ ಕಾಲದ ಆಡು ಮಾತಿನ ತೆಲುಗು ಇಲ್ಲಿದೆ. ಅದು ಕನ್ನಡ ಭೂಯಿಷ್ಠವಾಗಿದೆ. ನಿಘಂಟುವಿನಲ್ಲಿಲ್ಲದ ಅನೇಕ ಪದಗಳಿವೆ. 'ರಾಯವಾಚಕ'ವು ವೈಯಾಕರಣಿ ಮತ್ತು ಭಾಷಾತಜ್ಞರ ಗಣೆಯಾಗಿದೆ.

ಆಧುನಿಕ ತೆಲುಗಿನ ಮೇಲೆ ಅಂದರೆ ತೆಲುಗು ಭಾಷಾ ರಚನೆಯ ಮೇಲೆ ಕನ್ನಡದ ಪ್ರಭಾವವು ಗಾಢವಾಗಿದೆಯೆಂದು ತೆಲುಗು ವಿದ್ವಾಂಸರು ಅಂಗೀಕರಿಸಿದ್ದಾರೆ. ರಾಜ ಮತ್ತು ರಾಜ್ಯದ ಭಾಷೆ ಕನ್ನಡವಾಗಿದ್ದರಿಂದ ಅದರ ಪ್ರಭಾವವು ತೆಲುಗಿನ ಮೇಲಾಯಿತು.

*ಉದಾಹರಣೆಗಳು*

| ಕನ್ನಡ | ತೆಲುಗು | ವಿಜಯನಗರದ ತೆಲುಗು |
|---|---|---|
| ಒಂಟಿಯಾಗಿ | - | ವೊಂಟಿಗಾ |
| ಯಥವತ್ತಾಗಿ | - | ಯಥಾವತ್ತುಗಾ |
| ನೀತಿಗಳು | ನೀತುಲು | ನೀತುಲನ್ನಿ |
| ಅವರೆಲ್ಲಾ | ವಾಳ್ಳಂತಾ | ವಾರ್ಲೆಲ್ಲಾ |
| ಸರಿ (ಅಭಿಪ್ರಾಯ ಪ್ರಕಟನೆ) | ಅಲಾಗೇ | ಸರೇ |
| ದರ್ಶನ ಮಾಡಿ | ದರ್ಶಿಂಚಿ | ದರ್ಶನಮು ಚೇಸಿನ ಪಿಮ್ಮಟ |
| ಬಿನ್ನಹ ಮಾಡಿ | ಬಿನ್ನವಿಂಚಿ | ವಿನ್ನಪಂ ಚೇಸಿ |
| ವಾಸಮಾಡಿ | ವಾಸಿಂಚಿ | ವಾಸಮು ಚೇಸಿ |
| ಕೂತುಕೊಂಡು | ಕೂರ್ಚೊನಿ | ಕೂರ್ಚುಂಡುಕೊನಿ |
| ಹತ್ತಿಕೊಂಡು | ಎಕ್ಕಿ | ಎಕ್ಕುಕೊನಿ |

ಈ ರೀತಿಯಾಗಿ ಪದ ಪ್ರಯೋಗದಲ್ಲಿ ಕನ್ನಡ ಪ್ರಭಾವ ಆಗಿದೆ. ಆ ಕಾಲದ ಆಡುಭಾಷೆಯ ತೆಲುಗನ್ನು ರೂಪಿಸುವಲ್ಲಿ ಕನ್ನಡದ ನೆರವು ಅಮೂಲ್ಯವಾಗಿದೆ. ಪ್ರಾಯಃ ತೆಲುಗಿನ ಪ್ರಥಮ ಗದ್ಯ ಗ್ರಂಥವಾದ ರಾಯವಾಚಕವು ವಿಜಯನಗರ ಕಾಲದ ಕನ್ನಡ - ತೆಲುಗು ದ್ವಿಭಾಷಿಕತೆಯ ಅಧ್ಯಯನಕ್ಕೆ ಆಕರವೆನಿಸಿದೆ. ತೆಲುಗು ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನ ಪಡೆದಿರುವ ರಾಯವಾಚಕವು ತೆಲುಗಿನ ಆಡು ಭಾಷೆಯನ್ನು ಬಳಸಿದ ಅಪೂರ್ವ ಕೃತಿಯಾಗಿದೆ. ಕಂದಾಚಾರ, ಕಡ್ಡಿ ಕವಳ, ರೊಕ್ಕ ರುಜಿನ, ಊಳಿಗ, ಕರಣಿಕ, ಕೈ ಜೀತ, ಗಣಿಕೆ, ತಲಾರಿ, ದಳವಾಯಿ, ಪಾಳೇಗಾರ, ಬಂಟ, ಬಾನಿಸ ಮಾವುತ, ರಾಯಸ, ಬೊಕ್ಕಸ, ಕಾಗಜ ಮತ್ತು ಅಳಿಯ ಮುಂತಾದ ಸಹಸ್ರಾರು ಶಬ್ದಗಳು ತೆಲುಗು ಭಂಡಾರದಲ್ಲಿ ಸೇರಿದವು. ಕುರ್ನೀಸು, ಕೂಚು, ಕೊತ್ವಾಲ, ಜೀರಾ, ಡೇರೆ, ತಾಕೀತು, ದುನೇದಾರ ಮತ್ತು ಭರೋಸಾದಂತಹ ಪಾರಶೀ ಶಬ್ದಗಳು ಕನ್ನಡ - ತೆಲುಗನ್ನು ಪ್ರವೇಶಿಸಿದವು. ಕನ್ನಡ-ತೆಲಗು ಭಾಷೆಗಳ ಮಧುರ ಬಾಂಧವ್ಯವೂ ಈ ಕೃತಿಯಿಂದ ಸರ್ವತ್ರ ವಿದಿತವಾಯಿತು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ರಾಯವಾಚಕಮು.**, (೧೯೮೨), ಡಾ|| ಸಿ. ವಿ. ರಾಮಚಂದ್ರರಾವ್ (ಸಂ.), ಆಂಧ್ರ ಸಾಹಿತ್ಯ ಅಕಾಡೆಮಿ, ಹೈದರಾಬಾದ್.

೨. **ಕೃಷ್ಣ ದೇವರಾಯನ ದಿನಚರಿ.**, (೧೯೮೩), ಎಂ. ವಿ. ಸೀತಾರಾಮಯ್ಯ (ಸಂ.), ಬಿ. ಎಂ. ಶ್ರೀ ಪ್ರತಿಷ್ಠಾನ, ಬೆಂಗಳೂರು.

೩. ಡಾ|| ಕೆ. ರಾಮಾಂಜನೇಯಲು., (೧೯೯೩), **ರಾಯವಾಚಕಂ – ಭಾಷಾ ಸಾಹಿತ್ಯ ಪರಿಶೀಲನ**, ಫಣಿ ಕೃಷ್ಣ ಪಬ್ಲಿಕೇಶನ್ಸ್, ಹೈದರಾಬಾದ್.

ಡಾ|| ಬಿ. ವಿ. ಸುಧಾಮಣಿ*

# ನೂರೊಂದನ 'ಸೌಂದರಕಾವ್ಯ' -ಒಂದು ಐತಿಹಾಸಿಕ ದೃಷ್ಟಿಕೋನ

ಕಳಲೆ ಮನೆತನದ ದಳವಾಯಿ ನಂಜರಾಜಯ್ಯನ ಆಶ್ರಿತ ಕವಿಗಳಲ್ಲಿ ಒಬ್ಬನಾಗಿದ್ದ ನೂರೊಂದ ಕ್ರಿ. ಶ. ೧೭೪೦ರಲ್ಲಿ **ಸೌಂದರಕಾವ್ಯ** ಎಂಬ ಕಾವ್ಯವನ್ನು ರಚಿಸಿದ. ಸೌಂದರಕಾವ್ಯ ಹೊರನೋಟಕ್ಕೆ ಒಂದು ಧಾರ್ಮಿಕ ಕೃತಿಯಾಗಿ ತೋರಿದರೂ ಅದರ ಒಳಹೊಕ್ಕಷ್ಟೂ ಸಮಕಾಲೀನ ಆಡಳಿತ, ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಇತ್ಯಾದಿ ವಿವಿಧ ಕ್ಷೇತ್ರಗಳ ಬಗೆಗೆ ಮಾಹಿತಿ ನೀಡುವ ಐತಿಹಾಸಿಕ ಕಾವ್ಯವೆಂದು ಕಂಡು ಬರುತ್ತದೆ. ಇದು ೧೩೯೫ ಪದ್ಯಗಳನ್ನುಳ್ಳ ೧೩ ಸಂಧಿಗಳಿಂದ ಕೂಡಿದೆ.[೧]

ನೂರೊಂದ, ತನ್ನ ಕಾವ್ಯದ ಆರಂಭದ ಹದಿನೈದು ಪದ್ಯಗಳಲ್ಲಿ ತನ್ನ ಹಾಗೂ ತನ್ನ ಆಶ್ರಯದಾತನಾದ ನಂಜರಾಜಯ್ಯನ ಇಷ್ಟದೇವರುಗಳಾದ ನಂಜನಗೂಡಿನ ನಂಜುಡೇಶ್ವರ, ವಿನಾಯಕ, ಈಶ್ವರ, ಪಾರ್ವತಿ, ಚಂಡಿ, ಚಾಮುಂಡಿ, ಶ್ರೀರಂಗನಾಥ ಮುಂತಾದ ದೇವರುಗಳ ಸ್ತುತಿ ಮಾಡಿದ್ದಾನೆ. ನಂತರ ಮುಂದುವರಿದು ಮೂರನೇ ಸಂಧಿಯ ಕೊನೆಯವರೆವಿಗೂ ಕ್ರಿ. ಶ. ೧೭೪೦ರಲ್ಲಿ ದಳವಾಯಿ ಸಹೋದರರ ನೇತೃತ್ವದಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಯಲ್ಲಿ ನಡೆದ ವಿಶೇಷ ದರ್ಬಾರನ್ನು ಕುರಿತು ಸವಿಸ್ತಾರವಾದ ವರ್ಣನೆ ಮಾಡಿದ್ದಾನೆ. ಇದರಲ್ಲಿ ಅವರ ಮನೆ ಹಾಗೂ ಸಿಂಹಾಸನಗಳ ಚಿತ್ರಣವೂ ಸೇರಿದೆ. ಈ ವಿಶೇಷ ಓಲಗಕ್ಕೆ ಐವತ್ತಾರು ದೇಶಗಳ ದೊರೆಗಳು, ಮಾಂಡಲಿಕರು, ಗುರಿಕಾರರು, ಪುರಪತಿಗಳು, ಅರಸರು ಅವರ ಮನೆಯವರೊಂದಿಗೆ ಆಗಮಿಸಿದ್ದುದಾಗಿ ಕಾವ್ಯದಿಂದ ತಿಳಿದುಬರುತ್ತದೆ.[೨] ಚಾಂಬಳ್ಳಿ ದೊಡ್ಡಯ್ಯ, ನಗರವನಂತಗಿರಿಯ ಚಲುವಯ್ಯ, ಹಾಸನ ಪುರಪತಿ, ನುಗ್ಗೇಹಳ್ಳಿ ದೊರೆ ವೀರರಾಜ, ಹಾರನಹಳ್ಳಿಯ ಗುರಿಕಾರ, ಅರಕಲಗೂಡ ದೊರೆ, ಕಡಬದ ನರಸರಾಜಯ್ಯ, ಮದ್ದೂರ ಚದುರ ಕೃಷ್ಣಯ್ಯ, ಚಿಕ್ಕನಾಯಕನಹಳ್ಳಿ ಮುದ್ದುರಾಜಯ್ಯ, ಬೆಳ್ಳೂರ ಕೆಂಪರಾಜಯ್ಯ, ಧಾರಾಪುರದ ದಳಪತಿ, ಇವರಲ್ಲದೆ ದೂರ ದೂರದ ಕೊಂಗ, ಕಳಿಂಗ, ಕಾಶ್ಮೀರ, ಕೋಸಲ, ಕಾಂಬೋಜ, ಮಲೆಯಾಳ, ನೇಪಾಳ, ಬಂಗಾಳ, ಕುಂತಳ, ಮಾಳವ,ಮಗಧ, ಕೊಂಕಣ ಮುಂತಾದ ರಾಜ್ಯಗಳ ದೊರೆಗಳು ಓಲಗಕ್ಕೆ ಆಗಮಿಸಿದ್ದರು,[೩] ಎಂದಿದ್ದಾನೆ.

ಮುಂದೆ ಕವಿಯು ಈ ವಿಶೇಷ ಓಲಗ ನಡೆಯಲು ಕಾರಣರಾದ ದಳವಾಯಿ ಸಹೋದರರ ಠೀವಿ - ಠೇಂಕಾರಗಳನ್ನು, ಅವರಿಗಾಗಿ ಮೀಸಲಾಗಿದ್ದ ಆಸನಗಳ ವರ್ಣನೆಯನ್ನು ಸ್ವಲ್ಪ ಹೆಚ್ಚೆನಿಸುವಂತೆಯೇ ವರ್ಣಿಸಿದ್ದಾನೆ. ಓಲಗದಲ್ಲಿ ಅಂತಃಪುರದ ನರ್ತಕಿಯರು ನೃತ್ಯ - ನಾಟಕ ಪ್ರದರ್ಶಿಸಿ, ಸುಶ್ರಾವ್ಯವಾಗಿ ಹಾಡಿ ನೆರೆದಿದ್ದವರ ಕಣ್ಮನಗಳನ್ನು ತಣಿಸಿದರೆಂಬ ವಿಚಾರ ಸಾಕಷ್ಟು ವರ್ಣಿಸಲ್ಪಟ್ಟಿದೆ. ಇವರಲ್ಲಿ ಕಾಳಿಂದಿ, ಕಂದರ್ಪಸೇನೆ, ಸರಸಿ ಎಂಬ ನೃತ್ಯಗಾರ್ತಿಯರು ತಮ್ಮ ಒನಪು ವಯ್ಯಾರ ಗಳಿಂದ, ನೃತ್ಯ ಕೌಶಲವನ್ನು ಪ್ರದರ್ಶಿಸಿ ಆಹ್ವಾನಿತರ ಮೆಚ್ಚುಗೆಗೆ ಪಾತ್ರರಾಗಿದ್ದುದಾಗಿ ಕವಿ ವಿವರಿಸಿದ್ದಾನೆ.[೪] ಈ ಓಲಗದಲ್ಲಿ ಅರವತ್ನಾಲ್ಕು ವಿದ್ಯೆಗಳನ್ನು ತೋರಿಸಿದುದಾಗಿ ತಿಳಿದುಬರುತ್ತದೆ.[೫]

ಕಾವ್ಯದ ನಾಲ್ಕನೇ ಸಂಧಿಯಲ್ಲಿ ದಳವಾಯಿ ದೇವರಾಜಯ್ಯ ಕ್ರಿ. ಶ. ೧೭೨೮ರಲ್ಲಿ ಕೈಗೊಂಡ ಮಾಗಡಿ ದಿಗ್ವಿಜಯದ ವಿವರಣೆ ನೀಡಲಾಗಿದೆ. ಇದರಲ್ಲಿ ದೇವರಾಜಯ್ಯ ವಿಜಯಿಯಾಗಿ ಮಾಗಡಿಯ ನಾಯಕನನ್ನು ಸೆರೆಹಿಡಿದ ವಿಚಾರ ತಿಳಿದು ಬರುತ್ತದೆ.[೬] ದೇವರಾಜಯ್ಯನ ಮಾಗಡಿ ದಿಗ್ವಿಜಯದ ಬಗೆಗೆ ಸಮಕಾಲೀನ ಶಾಸನಗಳು[೭], ಇತರ ಸಾಹಿತ್ಯಗಳೂ ಕೂಡ ಮಾಹಿತಿ ನೀಡುತ್ತವೆಯಾದರೂ ಸೌಂದರಕಾವ್ಯದಲ್ಲಿ ದೊರಕುವಷ್ಟು ದೀರ್ಘವಿವರಣೆ ಮತ್ತಾವ ಸಮಕಾಲೀನ ಆಕರಗಳಲ್ಲೂ ದೊರುವುದಿಲ್ಲ. ಹೀಗಾಗಿ ಸೌಂದರಕಾವ್ಯ ಒಂದು ಮಹತ್ವವಾದ ಕೃತಿ ಎನಿಸುತ್ತದೆ.

ಕಾವ್ಯದ ಐದನೇ ಸಂಧಿಯಿಂದ ಹತ್ತನೇ ಸಂಧಿಯ ವರೆವಿಗೂ ನೂರೊಂದ, ದಳವಾಯಿ ಸಹೋದರರು, ಕ್ರಿ. ಶ. ೧೭೩೬ರಲ್ಲಿ ಕೈಗೊಂಡ 'ಕೈಲಾಂಭ ಯುದ್ಧದ' ವರ್ಣನೆಯನ್ನು ಕಣ್ಣ ಎದುರಿನಲ್ಲಿ ನಡೆಯುತ್ತಿದೆಯೇನೋ ಎಂದು ಭಾಸವಾಗುವಂತೆ ಚಿತ್ರಿಸಿದ್ದಾನೆ. ಗೂಢಚಾರರಿಂದ ಮೊಗಲ್‌ಸೇನೆ ಕೈಲಾಂಭದ ಕಡೆಗೆ ಬರುತ್ತಿದೆ ಎಂಬ ವಿಚಾರ ತಿಳಿದಕೂಡಲೆ ದಳವಾಯಿ ಸಹೋದರರು ರಾಜಧಾನಿಯಲ್ಲಿ ಯುದ್ಧಕ್ಕೆ ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡ ವಿಚಾರ, ದಳವಾಯಿ ಸಹೋದರರಿಬ್ಬರೂ ಸಂಸ್ಥಾನದ ಬೃಹತ್ ಸೇನೆಯ ನಾಯಕತ್ವ ವಹಿಸಿ ಯುದ್ಧಭೂಮಿಗೆ ಹೊರಟ ಸಂದರ್ಭದಲ್ಲಿ ಒಡೆಯರು, ರಾಜಧಾನಿಯ ಮುತ್ತೈದೆಯರು ಅವರಿಗೆ ಆರತಿ ಬೆಳಗಿ ಜಯಶಾಲಿಗಳಾಗುವಂತೆ ಆಶೀರ್ವದಿಸಿ ಕಳಿಹಿಸಿಕೊಟ್ಟ ರೀತಿ, ಯುದ್ಧ ಭೂಮಿಯಲ್ಲಿ ದಳವಾಯಿ ಸಹೋದರರು ಹಾಗೂ ಸಂಸ್ಥಾನದ ಸೈನಿಕರು ವೀರಾವೇಶದಿಂದ ಹೋರಾಡಿ ಶತ್ರುಗಳ

* ಹಿರಿಯ ಶ್ರೇಣಿ ಇತಿಹಾಸ ಉಪನ್ಯಾಸಕರು, ಸಂಖ್ಯೆ ೧೦೦, ಎಂ.ಐ.ಜಿ-೨, ಹುಡ್ಕೊ ೩ನೇ ಹಂತ, ಹೆಬ್ಬಾಳು, ಮೈಸೂರು - ೫೭೦ ೦೧೭

ಕರಿ - ತುರಗಗಳನ್ನು ಸೆರೆಹಿಡಿದದ್ದು, ಯುದ್ಧಕ್ಕೆ ಬಳಸಿದ ಶಸ್ತ್ರಾಸ್ತ್ರಗಳ ವಿವರ, ಮೊಗಲ್ ಸೈನ್ಯದ ವಿರುದ್ಧಗಳಿಸಿದ ಭಾರೀ ವಿಜಯ ದಿಂದಾಗಿ ಜಯಕಾರ ಮಾಡುತ್ತ ರಾಜಧಾನಿಗೆ ಸೈನ್ಯ ಹಿಂತಿರುಗಿದಾಗ ಒಡೆಯರು, ಅರಮನೆಯವರು ಹಾಗೂ ರಾಜಧಾನಿಯ ಜನತೆ ಪುನಃ ಅವರಿಗೆ ಆರತಿ ಬೆಳಗಿ ವಿಜಯೋತ್ಸವವನ್ನು ಆಚರಿಸಿ ಅವರನ್ನು ಕರೆಸಿಕೊಂಡ ರೀತಿ ಇತ್ಯಾದಿ ಪ್ರತಿಯೊಂದು ಅಂಶವನ್ನೂ ಕೂಡ ಕಣ್ಣಿಗೆ ಕಟ್ಟುವಂತೆ ಕವಿ ವರ್ಣಿಸಿದ್ದಾನೆ. ಇದರಿಂದಾಗಿ ಸಮಕಾಲೀನ ಮೈಸೂರು ರಾಜ್ಯದಲ್ಲಿ ಇದ್ದ ಯುದ್ಧ ಸಾಮಗ್ರಿಗಳು, ಅವರಿಗೆ ನೀಡುತ್ತಿದ್ದ ತರಬೇತಿ, ಸಂಸ್ಥಾನದ ಜನ ಅಂತಹ ಸಂದರ್ಭದಲ್ಲಿ ಸೈನ್ಯಕ್ಕೆ ನೀಡುತ್ತಿದ್ದ ಹುರುಪು, ಇತ್ಯಾದಿ ಅಂಶಗಳು ಇತಿಹಾಸ ಪುನಾರಚನೆಗೆ ಸಹಕಾರಿಯಾಗಿವೆ.

ಕಾವ್ಯದ ಹನ್ನೊಂದು ಹಾಗೂ ಹನ್ನೆರಡನೇ ಸಂಧಿಯಲ್ಲಿ ಜಟ್ಟಿಕಾಳಗ, ದಸರಾ ಉತ್ಸವ, ಪಗಡೆ ಮತ್ತು ಚದುರಂಗದಾಟದ ಬಗೆಗೆ ಮಾಹಿತಿ ಲಭ್ಯವಿದೆ. ಹದಿನೆಂಟನೇ ಶತಮಾನದ ಪೂರ್ವಭಾಗದಲ್ಲಿ ಕಳಲೆ ಮನೆತನದ ವ್ಯಕ್ತಿಗಳು ಮೈಸೂರು ಸಂಸ್ಥಾನದ ಆಡಳಿತದಲ್ಲಿ ಪ್ರಧಾನಪಾತ್ರ ವಹಿಸಿದ್ದರು. ಇವರು ಪರಂಪರಾನುಗತವಾಗಿ ಸಂಸ್ಥಾನದಲ್ಲಿ ನಡೆದುಕೊಂಡು ಬಂದಿದ್ದ ಸಾಂಸ್ಕೃತಿಕ ಚಟುವಟಿಕೆಗಳನ್ನು ಲೋಪವಿಲ್ಲದಂತೆ ಮುಂದುವರಿಸಿ ಕೊಂಡುಹೋದರೆಂಬುದು ಗಮನಾರ್ಹ. ದಸರಾ ಮಹೋತ್ಸವದ ಪ್ರಯುಕ್ತ ನಡೆಸುತ್ತಿದ್ದ ಜಟ್ಟಿಕಾಳದ ಸ್ಪರ್ಧೆಗೆ ಸಂಸ್ಥಾನದ ಜಟ್ಟಿಗಳು ಮಾತ್ರವಲ್ಲದೆ ಮಧುರೆ, ಬಿದರೂರು ಮುಂತಾದ ಕಡೆಗಳಿಂದಲೂ ಜಟ್ಟಿಗಳು ಆಗಮಿಸುತ್ತಿದ್ದರು. ದಳವಾಯಿ ಸಹೋದರರು ರಾಜಧಾನಿಯಲ್ಲಿ ಗರಡಿ ಮನೆಯನ್ನು ಪ್ರೋತ್ಸಾಹಿಸಿ ಅಲ್ಲಿ ಪ್ರಖ್ಯಾತ ಜಟ್ಟಿಗಳನ್ನು ಬೆಳೆಸಿದ್ದರು.[೮] ಹಾಗೆ ಸ್ಪರ್ಧೆಗೆ ಬಂದಿದ್ದ ಹಲವಾರು ಜಟ್ಟಿಗಳಲ್ಲಿ ಶರಭಜಟ್ಟಿ ಹಾಗೂ ಕಾಳಭೈರವನೆಂಬುವವರು ಅತ್ಯಂತ ಪ್ರಸಿದ್ಧರಾಗಿದ್ದು ಗೆಲುವು ಸಾಧಿಸಿ ದಳವಾಯಿಗಳಿಂದ. ಒಡೆಯರಿಂದ ವಿಶೇಷ ಕೊಡುಗೆಗಳನ್ನು ಪಡೆದುಕೊಂಡರು.[೯] ಈ ಸ್ಪರ್ಧೆಯನ್ನು ವೀಕ್ಷಿಸಲು ಸಂಸ್ಥಾನದ ನಾನಾಕಡೆಗಳಿಂದಲೂ. ಹೊರರಾಜ್ಯಗಳಿಂದಲೂ ಜನರು ಹೆಚ್ಚು ಸಂಖ್ಯೆಯಲ್ಲಿ ಆಗಮಿಸಿದ್ದರು. ಜಟ್ಟಿಗಳು ಧರಿಸಿದ್ದ ವೇಷಭೂಷಣ, ಅವರು ಪಟ್ಟು ಹಾಕಿ ಎದುರಾಳಿಯನ್ನು ಸೋಲಿಸಲು ಸೆಣಸಾಡುತ್ತಿದ್ದ ರೀತಿ, ಸ್ಪರ್ಧಾಕಣಕ್ಕಿಳಿದ ಜಟ್ಟಿಗಳನ್ನು ವೀಕ್ಷಿಸಲು ಬಂದಿದ್ದ ಜನ ಹುರಿದುಂಬಿಸುತ್ತಿದ್ದ ರೀತಿ, ಸ್ಪರ್ಧೆಯಲ್ಲಿ ಜಯಗಳಿಸಿದವರಿಗೆ ದಳವಾಯಿ ಸಹೋದರರು, ಒಡೆಯರು ಮುತ್ತಿನ ಹಾರ ಇತ್ಯಾದಿ ಉಡುಗೊರೆಗಳನ್ನು ಕೊಟ್ಟು ತಮ್ಮ ಸಂತಸ ವ್ಯಕ್ತಪಡಿಸುತ್ತಿದ್ದುದು, ಇತ್ಯಾದಿ ವಿವರಗಳು ಕಾವ್ಯದಲ್ಲಿ ಲಭ್ಯವಿವೆ. ನಂತರ ನವರಾತ್ರಿ ಒಂಬತ್ತು ದಿನಗಳು ಅರಮನೆಯಲ್ಲಿ, ರಾಜಧಾನಿಯಲ್ಲಿ ವಿಶೇಷ ಪೂಜೆ ನಡೆಸುತ್ತಿದ್ದ ವಿಚಾರ, ಆ ಸಂದರ್ಭದಲ್ಲಿ ನಡೆಸುತ್ತಿದ್ದ ಓಲಗ, ಇಡೀ ಸಂಸ್ಥಾನವೇ ನವರಾತ್ರಿಯಲ್ಲಿ ಸಂಭ್ರಮದಿಂದ ಕೂಡಿರುತ್ತಿದ್ದುದು, ಕೊನೆಯದಿನ ವಿಶೇಷವಾಗಿ ಅಲಂಕೃತಗೊಂಡ ಕರಿ-ತುರಗಗಳು. ಅವುಗಳಲ್ಲಿ ಒಡೆಯರು, ದಳವಾಯಿ ಸಹೋದರರು ಠೀವಿಯಿಂದ ಕುಳಿತು ಮೆರವಣಿಗೆಯಲ್ಲಿ ಹೋಗುತ್ತಿದ್ದುದು ಇತ್ಯಾದಿ ಪ್ರತಿಯೊಂದು ವಿಷಯಗಳನ್ನು ಸೂಕ್ಷ್ಮವಾಗಿ ವರ್ಣಿಸಲಾಗಿದೆ. ಇದರ ಜೊತೆಗೆ ಒಡೆಯರು ತಮ್ಮ ರಾಣಿಯೊಂದಿಗೆ ಆಡಿದ ಪಗಡೆ ಆಟ - ಪಗಡೆ ಹಾಸು, ಕೆಂಪು - ಕರಿ ಹಸಿರು - ಹಳದಿ ಕಾಯಿಗಳು, ದಾಳಗಳ ವಿವರಣೆ, ನವ-ದುಗ ಸಂಖ್ಯೆಗಳು, ಹಾಗೆಯೇ ನಂಜರಾಜ ಆಡಿದ ಚದುರಂಗದಾಟದ ದೀರ್ಘವಾದ ವಿವರಣೆ ನೀಡಲಾಗಿದೆ.

ಕೊನೆಯ ಸಂಧಿಯಲ್ಲಿ ಆಡಳಿತದಲ್ಲಿ ಮಂತ್ರಿಗಳ ಪ್ರಾಮುಖ್ಯತೆ, ರಾಜನೀತಿಗೆ ಸಂಬಂಧಿಸಿದ ವಿಚಾರಗಳು, ಮಂತ್ರಿ ಚತುರನು, ತಾಳ್ಮೆಯುಳ್ಳವನು, ಧರ್ಮಪರನೂ, ನಿಷ್ಠೆಯುಳ್ಳವನು ಆಗಿದ್ದಾಗ ಮಾತ್ರ ರಾಜ್ಯದ ಪ್ರಗತಿ ಸಾಧ್ಯ, ಆತ ಸೀಮೆಗಳನ್ನು ಗೆಲ್ಲುವಾಗ ಸಂದರ್ಭೋಚಿತವಾಗಿ ಚತುರೋಪಾಯಗಳನ್ನು ಉಪಯೋಗಿಸಬೇಕು ಎಂಬಿತ್ಯಾದಿ ವಿಷಯಗಳನ್ನು ಚರ್ಚಿಸಿದ್ದಾನೆ.

ಒಟ್ಟಿನಲ್ಲಿ ಇತರ ಸಮಕಾಲೀನ ಶಾಸನಗಳು ಅಥವಾ ಸಾಹಿತ್ಯಗಳಲ್ಲಿ ಮೇಲೆ ವಿವರಿಸಿರುವ ವಿಷಯಗಳ ಬಗೆಗೆ ತುಣುಕು ಮಾಹಿತಿಗಳೂ ಲಭ್ಯವಾಗಬಹುದಾದರೂ, ಹದಿನೆಂಟನೇ ಶತಮಾನದ ಪೂರ್ವಾರ್ಧದ ಮೈಸೂರು ಸಂಸ್ಥಾನದ ರಾಜಕೀಯ, ಆಡಳಿತ ಹಾಗೂ ಸಾಂಸ್ಕೃತಿಕ ಇತಿಹಾಸ ರಚನೆಗೆ ಇಷ್ಟೊಂದು ದೀರ್ಘವಾದ ವಿವರಣೆ ಸದ್ಯಕ್ಕೆ ನೂರೊಂದನ ಸೌಂದರ ಕಾವ್ಯದಲ್ಲಿ ಲಭ್ಯವಿದೆ. ಪರಿಣಾಮವಾಗಿ ಸಮಕಾಲೀನ ಇತಿಹಾಸ ರಚನೆಗೆ ಸೌಂದರಕಾವ್ಯ ಐತಿಹಾಸಿಕ ಅಂಶಗಳನ್ನು ಒದಗಿಸುವ ಕಾವ್ಯ ವೆಂದು ಹೇಳಿದರೆ ಬಹುಶಃ ಉತ್ಪ್ರೇಕ್ಷೆಯಾಗಲಾರದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ನೂರೊಂದನ ಸೌಂದರಕಾವ್ಯ**., (೧೯೬೬), ಭಾನುಮತಿ, ವೈ.ಸಿ. (ಸಂ), ಮೈಸೂರು.
೨. ಅದೇ, ಸಂಧಿ - ೨, ಪದ್ಯ : ೫, ಪುಟ: ೧೨.
೩. ಅದೇ, ಸಂಧಿ - ೨, ಪದ್ಯ ೬-೯, ಪುಟ : ೧೧-೧೨.
೪. ಅದೇ, ಸಂಧಿ - ೩, ಪದ್ಯ ೧೫-೧೭, ಪುಟ : ೧೮.
೫. ಅದೇ, ಸಂಧಿ - ೩, ಪದ್ಯ - ೨, ಪುಟ - ೧೩.
೬. ಅದೇ, ನಾಲ್ಕನೇ ಸಂಧಿ, ಪದ್ಯ : ೪೩, ಪುಟ - ೩೦.
೭. *E.C. V (NS).*, K.R. Nagar - 117, 1741; T.N. Pur - 16, 1749; *E.C. VI (NS).*, cha - 291, 1744; **ಕಳುದ್ಗಿರಿ ಮಹಾತ್ಮೆ**., (೧೭೪೦), ನಂಜರಾಜ ಕಳಲೆ, ಸಂ. ಕೆ. ೧೫, ೧೫೬, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.
೮. ಅದೇ : ಸಂಧಿ : ೫, ಪದ್ಯ ೬, ಪುಟ - ೩೩.
೯. ಅದೇ, ಸಂಧಿ -೧೨, ಪದ್ಯ : ೪೦-೪೬, ಪುಟ - ೧೦೪.

ಡಾ|| ಕೆ.ಜಿ. ವಸಂತ ಮಾಧವ*

# ಪಶ್ಚಿಮ ಕರಾವಳಿ ಮಾಲ್ದೀವ ದ್ವೀಪ: ಕರಾವಳಿ ಕರ್ನಾಟಕದ ಸಂಪರ್ಕ - ಒಂದು ವಿಶ್ಲೇಷಣೆ

ಮಾಲ್ದೀವ ಭೂಮಧ್ಯರೇಖೆಯ ಸ್ವಲ್ಪ ಉತ್ತರದಲ್ಲಿರುವ ದ್ವೀಪಗಳ ಸಮೂಹ. ಇದು ಹಿಂದು ಮಹಾಸಾಗರದಲ್ಲಿದ್ದು ಆಫ್ರಿಕಾ ಈಶಾನ್ಯ ಏಶ್ಯಾ ಮತ್ತು ಅರಬ ರಾಷ್ಟ್ರಗಳ ವ್ಯಾಪಾರಗಳನ್ನು ಜೋಡಿಸುವ ಕೊಂಡಿಯಾಗಿದೆ. ಈ ಮಾಲ್ದೀವ ದ್ವೀಪಕ್ಕೆ 'ಮಾಲಾ' ಎಂಬುದು ಮೂಲದ ಹೆಸರು. ಈ ದ್ವೀಪಗಳ ಸಮೂಹಕ್ಕೂ ಮತ್ತು ಪಶ್ಚಿಮ ಭಾರತದ ಕರಾವಳಿ ಪ್ರದೇಶವಾದ ಕೇರಳ, ತುಳುವ ಮತ್ತು ಕೊಂಕಣ ಪ್ರದೇಶಗಳಿಗೂ ನಿಕಟ ಸಂಪರ್ಕವಿದ್ದಿತ್ತು. ಆದರೆ ಇದರ ಖಚಿತ ಆಧಾರ ಸಿಕ್ಕಿದ್ದು ಇತ್ತೀಚೆಗೆ. ಈ ಆಕರಗಳು ಅಕಸ್ಮಾತಾಗಿ ದೊರಕಿದುವು. ಈ ಆಕರಗಳಲ್ಲಿ ಗಮನಾರ್ಹವಾದುದು ವಾಣಿಜ್ಯ ಸಂಪರ್ಕ ತಿಳಿಸುವ ದಾಖಲೆ. ಈ ದಾಖಲೆಯು ನಕಾಶೆಯಾಗಿದೆ. ಇದು ೧೯೨೩ರಲ್ಲಿ ಬೆಳಕಿಗೆ ಬಂತು. ಈ ವರ್ಷದಲ್ಲಿ ಟರ್ಕಿಯ ರಾಷ್ಟ್ರೀಯ ನಾಯಕ ಮುಸ್ತಾಪ ಕೆಮಲ ಪಾಷ ಇಸ್ತಾಂಬುಲ ಅರಮನೆಯ ಗ್ರಂಥಾಲಯವನ್ನು ಜಾಳಿಸಿ ನೋಡುವಲ್ಲಿ ಎರಡು ನಕಾಶೆಗಳು ಪತ್ತೆಯಾದುವು. ಒಂದನೇ ನಕಾಶೆ ಸಮುದ್ರಪಟ ಮತ್ತು ಜಲಯಾನಪಟ. ಮೊದಲನೆಯದರಲ್ಲಿ ಮಾಲ್ದೀವ ದ್ವೀಪದಿಂದ ಎಷ್ಟು ದೂರಕ್ಕೆ ಯಾವ ಯಾವ ದ್ವೀಪಗಳು ಎಲ್ಲಿವೆ ಎಂದು ಸೂಚಿಸಿ, ಜಲಯಾನ ನಡೆಸುವಲ್ಲಿ ಹಡಗು ಮತ್ತು ದೋಣಿಗಳು ಹೋಗಿ ಬರುವ ಕಾಲುವೆಗಳು ಯಾವುದೆಂದೂ ಆಳವಿಲ್ಲದ ಸ್ಥಳಗಳು ಮತ್ತು ಕಲ್ಲುಬಂಡೆಗಳು ಎಲ್ಲೆಲ್ಲಿ ಇವೆ ಎಂದು ತಿಳಿಸುತ್ತದೆ. ಈ ಜಲಯಾನ ಪಟದಲ್ಲಿ ಕೊಚ್ಚಿ, ಕಾಳಿಕಾ (ಕಲ್ಲಿಕೋಟೆ), ತವನೂರು (ತಾನೂರು) ಕನಾರೇಡೊ (ಕಾಸರಗೋಡು), ಮಂಗಳೂರು, ಬಕನೋರ (ಬಾರಕೂರು) ಬಾರ್ಸಲೋರ (ಬಸ್ರೂರು) ಮತ್ತು ಹೊನ್ನಾವರ ಸ್ಥಳಗಳನ್ನು ಗುರುತಿಸಿ ಇವುಗಳಿಗೂ ಮತ್ತು ಮಾಲ್ದೀವ ದ್ವೀಪಗಳಿಗೂ ಇರುವ ಜಲಯಾನ ವಾಣಿಜ್ಯ ಸಂಪರ್ಕವನ್ನು ಗುರುತಿಸಿದೆ. ಆಶ್ಚರ್ಯದ ಸಂಗತಿಯೇನೆಂದರೆ ಇವುಗಳಲ್ಲಿ ಒಂದು ನಕಾಶೆಯನ್ನು ಕ್ರಿ. ಶ. ೧೬೬೦ರಲ್ಲಿ ಭಾರತಕ್ಕೆ ಬಂದ ಪ್ರಾಂಕೊಯಿಸ್ ಪಿರಾರ್ದ (*Framcois Pyrard*) ತನ್ನ ವರದಿಯಲ್ಲಿ ತಿಳಿಸಿದ್ದಾನೆ.[೧]

**ತುಳುನಾಡಿನ ರೇವು** - ಮಾಲ್ದೀವ ಉತ್ತರಕ್ಕೆ ಅಂಕೋಲೆಯಿಂದ ದಕ್ಷಿಣಕ್ಕೆ ಎಳಿಮಲೆಯವರೆಗೆ ಹಬ್ಬಿದ ಪಶ್ಚಿಮ ಭಾರತದ ಕರಾವಳಿ ಪ್ರದೇಶ ಐತಿಹಾಸಿಕವಾಗಿ ತುಳುನಾಡಾಗಿತ್ತು.[೨] ಈ ಅಗಲ ಕಿರಿದಾದ ಕರಾವಳಿ ಪ್ರದೇಶಕ್ಕೂ ಮಾಲ್ದೀವ ದ್ವೀಪಗಳಿಗೂ ಸಾಗರೋತ್ತರ ವ್ಯಾಪಾರ ಇರುವ ವಿಚಾರ ಹದಿನಾಲ್ಕನೇ ಶತಮಾನದ ಮಧ್ಯಾವಧಿಯಲ್ಲಿ ಬಂದ ಆಫ್ರಿಕಾ ಪ್ರವಾಸಿ ಇಬನ್ ಬತೂತಾ ವರದಿಯಲ್ಲಿ ವ್ಯಕ್ತವಾಗಿದೆ. ಈ ಪ್ರವಾಸಿಗನ ವರದಿಯಂತೆ ಮಾಲ್ದೀವಿನಿಂದ ತೆಂಗಿನಕಾಯಿ, ಬಟ್ಟೆ ವಲಿಯಾನ್, ಹಿತ್ತಾಳೆ ಪಾತ್ರೆಗಳು, ಪಶ್ಚಿಮ ಕರಾವಳಿಯ ರೇವುಗಳಾದ ಕಲ್ಲಿಕೋಟೆ, ಧರ್ಮಪಟ್ಟಣ, ಕಾಸರಗೋಡು, ಕುಂಬಳಾ, ಮಂಗಳೂರು, ಬಾರಕೂರು ಮತ್ತು ಬಸ್ರೂರಿಗೆ ಬರುತ್ತಿದ್ದವು. ಬಸ್ರೂರು, ಬಾರಕೂರು ಮತ್ತು ಮಂಗಳೂರಿನಿಂದ ಅಕ್ಕಿ, ಕಬ್ಬು, ಶುಂಠಿ, ಮೆಣಸು ಮಾಲ್ದೀವಿಗೆ ಬರುತ್ತಿದ್ದವು. ಈ ಮೇಲೆ ಕಾಣಿಸಿದ ಸಾಮಾನುಗಳನ್ನು ಮಲಬಾರಿ ವರ್ತಕರು ತಮ್ಮ ಹಡಗಿನಲ್ಲಿ ಮಾಲ್ದೀವಿಗೆ ತರುತ್ತಿದ್ದರು.[೩]

ಶಾಸನ[೪] ಮತ್ತು ಕನ್ನಡ ಕಾವ್ಯಗಳಲ್ಲಿ ದ್ವೀಪಾಂತರ ವ್ಯಾಪಾರ, ಸಾಗರಯಾನದ ಉಲ್ಲೇಖಗಳು ಅಲ್ಲಲ್ಲಿ ಬರುತ್ತವೆ. ಈ ಹಿನ್ನೆಲೆಯಲ್ಲಿ ಕನ್ನಡ ಕರಾವಳಿಯ ಜನರು ಹಿಂದು ಮಹಾಸಾಗರದಲ್ಲಿರುವ ಮಾಲ್ದೀವಿಗೆ ವ್ಯಾಪಾರ ನಡೆಸಲು ಹೋಗಿ ಬರುತ್ತಿದ್ದರೆಂದು ಊಹಿಸಲು ಅವಕಾಶವಿದೆ. ಹದಿನಾರನೇ ಶತಮಾನದ ಆರಂಭದ ದಶಕಗಳಲ್ಲಿ ಭಾರತದ ಪಶ್ಚಿಮ ಕರಾವಳಿಯ ರೇವುಗಳಿಗೂ ಮತ್ತು ಮಾಲ್ದೀವಿಗೂ ವ್ಯಾಪಾರ ವ್ಯವಹಾರ ಇದ್ದುದ್ದನ್ನು ಸಮಕಾಲೀನ ಪ್ರವಾಸಿಗರ ವರದಿಯಿಂದ ತಿಳಿದು ಬರುತ್ತದೆ. ಕ್ರಿ. ಶ. ೧೫೧೨ರ ಅವಧಿಯಲ್ಲಿ ಬಂದ ಪ್ರವಾಸಿ ಬಾರ್ಬೋಸ್ ಈ ವಿಚಾರವನ್ನು ತನ್ನ ವರದಿಯಲ್ಲಿ ತಿಳಿಸುತ್ತಾನೆ. ತುಳುನಾಡಿನ ಕುಂಬಳಾ (ಕಾಸರಗೋಡು ಈಗಿನ ಕೇರಳ ರಾಜ್ಯ) ರೇವಿನಿಂದ ಕಪ್ಪು ಅಕ್ಕಿಯನ್ನು ಮಲಬಾರಿ ವರ್ತಕರು ಖರೀದಿಸಿ ತಮ್ಮ 'ಜಾಂಬುರಾಸ' ನಲ್ಲಿ ತುಂಬಿಸಿ ಮಾಲ್ದೀವ ದ್ವೀಪಗಳಲ್ಲಿ ಮಾರುತ್ತಿದ್ದರು. ಈ ಅಕ್ಕಿ ಬಹಳ ಅಗ್ಗವಾಗಿದ್ದು ಇದರ ವ್ಯಾಪಾರದಿಂದ [೪] ವರ್ತಕರು ಲಾಭ ಪಡೆಯುತ್ತಿದ್ದರು. ಹುರಿಹಗ್ಗ, ಮಾಲ್ದೀವಿನಿಂದ ಅಕ್ಕಿ ವ್ಯಾಪಾರದ ಮುಖಾಂತರ ಕುಂಬಳೆಗೆ ಬರುತ್ತಿದ್ದವು. ಇದೇ ರೀತಿಯ ವ್ಯಾಪಾರವು ಮಲಬಾರಿನ ವರ್ತಕರ ಮುಖಾಂತರ ಮಿರ್ಜಾನಲ್ಲಿಯೂ ನಡೆಯುತ್ತಿತ್ತು.[೫]

* ಆರಾಧನೆ, ಪಾವಂಜೆ, ಹಳೆಯಂಗಡಿ - ದ. ಕ. - ೫೭೪ ೧೪೬




[British Museum, Portolano of Fernão Vaz Dourado, circ. 1570.]

## ತುಳುನಾಡು - ಮಾಲ್ದೀವ

ತುಳುನಾಡಿನ ರೇವುಗಳಿಗೂ ಮಾಲ್ದೀವಿ ದ್ವೀಪಗಳಿಗೂ ಇರುವ ಸಾಗರೋತ್ತರ ವ್ಯಾಪಾರ ವಿವರಗಳು ಫ್ರೆಂಚ್ ಪ್ರವಾಸಿ ಪಿರಾರ್ಡ್‌ನ ವರದಿಯಲ್ಲಿವೆ. ಈ ಪ್ರವಾಸಿ ಕ್ರಿ. ಶ. ೧೬೦೧ ರಂದು ಫ್ರಾನ್ಸಿನ ರೇವು ಸೆಂಟಮಾಲೊಂದಿಯಿಂದ ಹೊರಟು ೧೬೦೬ ರವರೆಗೆ ಮಾಲ್ದೀವಿನಲ್ಲಿದ್ದು ೧೬೦೭ ರಲ್ಲಿಗೆ ಮಲಬಾರಿನಲ್ಲಿ ಪ್ರವಾಸ ಮಾಡಿದ್ದನು.[೬] ತನ್ನ ವರದಿಯಲ್ಲಿ ಗೋವೆಯ ದಕ್ಷಿಣಕ್ಕಿರುವ ಅಗಲ ಕಿರಿದಾದ ಕರಾವಳಿಯ ರೇವುಗಳಿಗೂ ಮತ್ತು ಮಾಲ್ದೀವ ದ್ವೀಪಗಳೊಳಗಿರುವ ಜಲಯಾನ ಸಂಪರ್ಕ ಇರುವುದನ್ನು ತಿಳಿಸಿದ್ದಲ್ಲದೇ ಅವುಗಳ ಸ್ವರೂಪದ ಕುರಿತಾಗಿ ಕೆಲವು ಮಾಹಿತಿಗಳನ್ನು ಇವನ್ನು ಬೆಳಕಿಗೆ ತಂದಿದ್ದಾನೆ. ಆದರೆ ಇವನು ಗೋವೆಯ ದಕ್ಷಿಣಕ್ಕಿರುವ ಕರಾವಳಿ 'ಮಲಬಾರ್' ಎಂದು ತಪ್ಪಾಗಿ ತಿಳಿಸಿದ್ದಾನೆ.[೭] ಇವನು ತಿಳಿಸಿದಂತೆ ಕನ್ನಡ ಕರಾವಳಿಯ ರೇವುಗಳಿಂದ ಅಕ್ಕಿ, ಬಿಳೀ ಹತ್ತಿ ಬಟ್ಟೆ, ಕಚ್ಚಾರೇಶ್ಮೆ, ಎಣ್ಣೆ, ಅಡಕೆ ; ಉಕ್ಕು, ಸಾಂಬಾರ, ಪಿಂಗಾಣಿ, ಚಿನ್ನ, ಬೆಳ್ಳಿ ಮಾಲ್ದೀವಿಗೆ ದೊಡ್ಡ ಮಂಜಿಗಳಲ್ಲಿ ಬರುತ್ತಿದ್ದವು. ಮಾಲ್ದೀವಿಯಿಂದ ಹುರಿಹಗ್ಗ ವಿವಿಧ ರೀತಿಯ ಚಿಪ್ಪುಗಳು ಮಂಗಳೂರು ಮತ್ತು ಹೊನ್ನಾವರ ರೇವುಗಳಿಗೆ ಬರುತ್ತಿದ್ದವು. ಇವುಗಳನ್ನು ಈ ರೇವಿನ ವರ್ತಕರು ಹಡಗು ಕಟ್ಟಲು ಉಪಯೋಗಿಸುತ್ತಿದ್ದರೆಂದು ಇದೇ ಪ್ರವಾಸಿಗ ತನ್ನ ವರದಿಯಲ್ಲಿ ತಿಳಿಸಿದ್ದಾನೆ.[೮] ಇನ್ನೊಂದು ಕುತೂಹಲದ ಸಂಗತಿಯೇನೆಂದರೆ ಮಂಗಳೂರಿನ ರಾಜ ತನ್ನ ರಾಜ್ಯದಿಂದ ಒಂದು ಹಡಗಿನಷ್ಟು ಅಕ್ಕಿಯನ್ನು ಮಾಲ್ದೀವಗೆ ಕಳುಹಿಸಿದ್ದು. ಇಷ್ಟಲ್ಲದೇ ಇವನು ಒಬ್ಬ ರಾಯಭಾರಿಯನ್ನು ಮಾಲ್ದೀವ ರಾಜನ ಆಸ್ಥಾನಕ್ಕೆ ಕಳುಹಿಸಿದ್ದ. ಈ ರಾಯಭಾರಿಯನ್ನು ಮಾಲ್ದೀವಿನ ಅರಸ ಮನ್ನಿಸಿದನೆಂದು ಇದೇ ಪ್ರವಾಸಿ ತನ್ನ ವರದಿಯಲ್ಲಿ ತಿಳಿಸಿದ್ದಾನೆ.[೯] ಈ ಸಮಯದಲ್ಲಿ ಮಂಗಳೂರಿನಲ್ಲಿ ಆಳಿಕೊಂಡಿದ್ದ ರಾಜ ಬಂಗವಂಶದ ಕಾಮಿರಾಯ ಬಂಗ, ಆನೆಯ ದಂತವನ್ನು ಮಂಗಳೂರಿನಿಂದ ಮಾಲ್ದೀವಿಗೆ ಮತ್ತು ಪಶ್ಚಿಮ ಕರಾವಳಿಯ ಸಾಗರೋತ್ತರ ವ್ಯಾಪಾರದಲ್ಲಿ "ಮುಖವನ್" ಜಾತಿಯವರು ಮುಂಚೂಣಿಯಲ್ಲಿದ್ದರು. ಬಸ್ರೂರು ಹೊನ್ನಾವರ, ತಂಗಲೊಳ (ಕಾಸರಗೋಡು)ಗಳಿಗೂ ಮತ್ತು ಮಾಲ್ದೀವಿ ದ್ವೀಪಗಳೊಳಗೆ ನಿಕಟ ಸಾಗರೋತ್ತರ ವ್ಯಾಪಾರ ನಡೆಯುತ್ತಿತ್ತು. ಪೋರ್ಚುಗೀಸರು ಹೊನ್ನಾವರ, ಬಸ್ರೂರು ಮಂಗಳೂರಿನಲ್ಲಿ ಕೋಟೆಕಟ್ಟಿಕೊಂಡು ಈ ರೇವುಗಳಲ್ಲಿ ಸ್ಥಳೀಯರು ನಡೆಸುತ್ತಿದ್ದ ಸಾಗರೋತ್ತರ ವ್ಯಾಪಾರಗಳಿಗೆ ಅಡ್ಡಿಯನ್ನುಂಟುಮಾಡುತ್ತಿದ್ದರು. ಆದರೂ ಪೋರ್ಚುಗೀಸರು ಬಸ್ರೂರಿನಲ್ಲಿರುವ ಮಲಬಾರಿ ಸಮುದ್ರಗಳ್ಳರಿಗೆ ಬಹಳ ಹೆದರುತ್ತಿದ್ದರು. ಈ ಸಮುದ್ರಗಳ್ಳರ ಸಹಾಯವನ್ನು ತೆಗೆದುಕೊಂಡು ಮಾಲ್ದೀವಿ ಅರಸನು ಪೋರ್ಚುಗೀಸರನ್ನು ತನ್ನ ರಾಜ್ಯದಿಂದ ಹೊರಗೆ ಅಟ್ಟಿದನು.[೧೦]

## ಸಾಂಸ್ಕೃತಿಕ ಸಂಪರ್ಕ

ಮಾಲ್ದೀವಿನ ಜನರ ಆಡುಭಾಷೆಗಳಲ್ಲಿ ತುಳು, ಮಲೆಯಾಳ ಮತ್ತು ಕೆಲವು ಕನ್ನಡ ಮತ್ತು ಸಂಸ್ಕೃತ ಶಬ್ದಗಳು ಮಿಶ್ರಿತವಾಗಿವೆ. ಈ ವಿಚಾರವನ್ನು ಕೆಲವು ಯೂರೋಪಿನ ಭಾಷಾತಜ್ಞರು ವ್ಯಕ್ತಪಡಿಸಿದ್ದಾರೆ.[೧೧] ಈ ಹಿನ್ನೆಲೆಯಲ್ಲಿ ಭಾರತದ ಪಶ್ಚಿಮ ಕರಾವಳಿ ಪ್ರದೇಶದೊಂದಿಗೆ ನಿಕಟ ಸಂಪರ್ಕವಿದ್ದಿರಬೇಕು ಎಂದು ಅಭಿಪ್ರಾಯಪಡಲಿಕ್ಕೆ ಅವಕಾಶವಿದೆ. ಇಷ್ಟಲ್ಲದೆ ಕೆಲವು ಮಲೆಯಾಳಿ ವರ್ತಕರು ಮಾಲ್ದೀವ 'ದಿವಂನದಾರು' ದ್ವೀಪದಲ್ಲಿ ನೆಲಸಿದ್ದರು.[೧೨]

ಮಾಲ್ದೀವ ಮತ್ತು ಪಶ್ಚಿಮ ಭಾರತದ ಸಾಂಸ್ಕೃತಿಕ ಇತಿಹಾಸದಲ್ಲಿ ಗಮನಸೆಳೆಯುವ ಒಂದು ಮುಖ್ಯ ಸಂಗತಿ ಬೌದ್ಧ ಧರ್ಮ- ಈ ಧರ್ಮ ಇಸ್ಲಾಂಮತ ಮಾಲ್ದೀವಿಗೆ ಬರುವ ಮೊದಲು ಹೆಚ್ಚು ಪ್ರಚಾರವಿತ್ತೆಂಬ ಹೇಳಿಕೆಗೆ ಸ್ಪಷ್ಟ ಪುರಾವೆ ಸಿಕ್ಕಿದ್ದು ಇತ್ತೀಚೆಗೆ. ಇಲ್ಲಿ ಸಿಕ್ಕಿದ ಬೌದ್ಧ ಚೈತ್ಯಾಲಯ[೧೩] ಹನ್ನೊಂದನೇ ಶತಮಾನದೆಂದು ನಿರ್ಣಯಿತವಾಗಿದೆ. ಈ ಬೌದ್ಧಧರ್ಮ ಯಾವಾಗ ಯಾರ ನೇತೃತ್ವದಲ್ಲಿ ಮಾಲ್ದೀವಿಗೆ ಬಂದಿತು ಎಂಬ ವಿಚಾರದಲ್ಲಿ ಚರ್ಚೆ ಇದೆ. ಆದರೂ ದಕ್ಷಿಣ ಭಾರತದ ಪಶ್ಚಿಮ ಕರಾವಳಿಯಿಂದ ಕರ್ನಾಟಕದ ಹಿರೆಗುತ್ತಿ ಹೊನ್ನಾವರ ಹೈಗುಂದ ಮತ್ತು ಕದ್ರಿವರೆಗೆ (ಮಂಗಳೂರಿನ ಸಮೀಪ) ಬೌದ್ಧಶಾಸನ ಮತ್ತು ಸ್ಮಾರಕಗಳು ಸಿಕ್ಕಿವೆ. ಕದ್ರಿ ಮತ್ತು ಮಾಲ್ದೀವಿ ದ್ವೀಪಗಳಲ್ಲಿರುವ ಬೌದ್ಧ ಸ್ಮಾರಕಗಳ ತುಲನಾತ್ಮಕ ಅಧ್ಯಯನ ನಡೆಸಿದರೆ ಕೆಲವು ಉಪಯುಕ್ತ ಮಾಹಿತಿಗಳು ಸಿಗುವ ಅವಕಾಶವಿದೆ. ಕೇರಳದಿಂದ ಬೌದ್ಧಮತವು ದ್ವೀಪಾಂತರಗಳಲ್ಲಿ ಪ್ರಚಾರವಾಯಿತೆಂಬ ಒಂದು



ವಾದವು ಇದೆ. ಇದಕ್ಕೆ ಮುಖ್ಯ ಆಧಾರ ಹನ್ನೆರಡನೇ ಶತಮಾನದ ಅವಧಿಯಲ್ಲಿ ಅತ್ಯೂಲನಿಂದ ರಚಿತವಾದ ಕಾವ್ಯ *ಮೂಸಿಕಾವಂಶ* ಇದರಂತೆ ಕೇರಳದಲ್ಲಿರುವ ಶ್ರೀಮೂಲನಿವಾಸ ಎಂಬ ಸ್ಥಳವು ಬೌದ್ಧ ಮತದ ಕೇಂದ್ರವಾಗಿತ್ತು. ಇಲ್ಲಿಂದಲೇ ಈ ಮತವು ದ್ವೀಪಾಂತರಗಳಲ್ಲಿ ಪ್ರಚಾರವಾಯಿತು. ಇಷ್ಟಲ್ಲದೆ ಮೂಸಿಕಾ ವಂಶದ ರಾಜ (ಇವನ ರಾಜಧಾನಿ ಕಣ್ಣಾನೂರ ಸಮೀಪದಲ್ಲಿರುವ ಇಳಿಮಲೆ) ಶ್ರೀವಲ್ಲಭ, ದ್ವೀಪಾಂತರಗಳೊಂದಿಗೆ ನಿಕಟ ಸಂಪರ್ಕವನ್ನು ಇಟ್ಟುಕೊಂಡಿದ್ದನು.[೧೪] ಈ ಹಿನ್ನೆಲೆಯಲ್ಲಿ ಬೌದ್ಧಮತ ಮಾಲ್ದೀವಿ ದ್ವೀಪಗಳಲ್ಲಿ ಪ್ರಚಾರವಾಯಿತೇ? ಕೇರಳ ಮತ್ತು ಮಾಲ್ದೀವಿ ಬೌದ್ಧ ಸ್ಮಾರಕಗಳಲ್ಲಿ ಯಾವ ರೀತಿ ಸಾಮೀಪ್ಯತೆ ಇವೆ ಎಂದು ಪರಿಶೀಲಿಸುವ ಅವಶ್ಯಕತೆ ಇದೆ.[೧೫]

ಮಾಲ್ದೀವಿಯಲ್ಲಿ ಬೌದ್ಧಮತವು ಹದಿನೈದನೇ ಶತಮಾನದ ಮಧ್ಯಾವಧಿಯಲ್ಲಿ ನಾಶವಾಗಿ ಮಹ್ಮದೀಯ ಮತ ಪ್ರಚಾರವಾಯಿತೆಂದು ಪ್ರವಾಸಿ ಪಿರಾರ್ಡ್ ತನ್ನ ವರದಿಯಲ್ಲಿ ತಿಳಿಸಿದ್ದಾನೆ.[೧೬] ಆದರೆ ಈ ಪ್ರವಾಸಿ ತಿಳಿಸಿದ ಕಾಲ ಸರಿಯಲ್ಲ. ಏಕೆಂದರೆ ೧೩೪೩ರ ಅವಧಿಯಲ್ಲಿ ಇಲ್ಲಿ ಬಂದ ಪ್ರವಾಸಿ ಇಬನ್ ಬತೂತಾ ಮಾಲ್ದೀವಿಯಲ್ಲಿ ಇಸ್ಲಾಂ ಮತ ಪ್ರಬಲವಾಗಿತ್ತೆಂದೂ ಈ ಮತಸ್ಥರು ಸುಂದರ ಮಸೀದಿಯನ್ನು ಇಲ್ಲಿ ಕಟ್ಟಿಸಿದರೆಂದೂ ತನ್ನ ವರದಿಯಲ್ಲಿ ತಿಳಿಸಿದ್ದಾನೆ.[೧೭] ಹೀಗಿದ್ದರೂ ಮಾಲ್ದೀವಿಯ ಮುಸ್ಲಿಂರು ಬೌದ್ಧಮತದ ಪ್ರಭಾವದಿಂದ ಸಂಪೂರ್ಣ ವಿಮುಕ್ತರಾಗಿಲ್ಲ. ಇದು ಇವರು ವೈಶಾಖ ಪೂರ್ಣಿಮೆಯಲ್ಲಿ ಆಚರಿಸುವ ಹಬ್ಬದಲ್ಲಿ ವ್ಯಕ್ತವಾಗುತ್ತದೆ. ಈ ಹಬ್ಬವು 'ಪೊಯ್ಯರಸ'.[೧೮] ಇದು ಬೌದ್ಧ ಪೂರ್ಣಿಮಗೆ ಸರಿಹೊಂದುತ್ತದೆ. ಇಷ್ಟಲ್ಲದೇ ಪಶ್ಚಿಮ ಭಾರತದಲ್ಲಿದ್ದ ಜ್ಯೋತಿಷ್ಯ ಇವರ ದೈನಂದಿನ ಜೀವನದ ಮೇಲೆ ಪ್ರಭಾವ ಬೀರಿದೆ.[೧೯]

*ಉಪಸಂಹಾರ*

ಮಾಲ್ದೀವ ದ್ವೀಪ ಮತ್ತು ಭಾರತದ ಪಶ್ಚಿಮ ಕರಾವಳಿಯ ಸಂಪರ್ಕವು ಹೆಚ್ಚಾಗಿ ವಾಣಿಜ್ಯಮಯವಾಗಿತ್ತು. ಆದರೂ ಅಲ್ಲಲ್ಲಿ ಸಾಂಸ್ಕೃತಿಕ ಮಾಹಿತಿಗಳು ಇದ್ದಿತ್ತೆಂದು ತಿಳಿಸುವ ಸ್ಮಾರಕಗಳು ಮಾಲ್ದೀವ ದ್ವೀಪಗಳಲ್ಲಿ ಪತ್ತೆಯಾಗಿವೆ. ಸಿಕ್ಕಿದ ಐತಿಹಾಸಿಕ ಸ್ಮಾರಕಗಳು ಮಾಲ್ದೀವ ಮತ್ತು ಕೇರಳ, ತುಳು ಮತ್ತು ಕನ್ನಡ ಮಾತಾಡುವ ಕರಾವಳಿ ಪ್ರದೇಶಗಳ ಸಂಪರ್ಕ ತಿಳಿಯುವಲ್ಲಿ ಒಂದು ಹೊಸ ಹಾದಿಯನ್ನು ರಚಿಸಿದೆ. ಇಂತಹ ಹಲವಾರು ಸ್ಮಾರಕಗಳು ಮಾಲ್ದೀವಿ ದ್ವೀಪಗಳಲ್ಲಿ ಇರುವ ಸಾಧ್ಯತೆ ಇವೆ. ಇವುಗಳನ್ನು ಪತ್ತೆ ಹಚ್ಚಿ, ಅಧ್ಯಯನಿಸಿದಲ್ಲಿ ಹೊಸ ಸಂಗತಿಗಳು ತಿಳಿಯುವ ಸಾಧ್ಯತೆ ಇದೆ.



(ಈ ಲೇಖನ ತಯಾರಿಸುವಲ್ಲಿ ಅನಂತರಾಜ ಸುಬ್ಬರಾಜ ಮತ್ತು ಅಬುದಾಭಿಯ ಸೋಶಲ್ ಸೆಂಟರ್ ಗ್ರಂಥಾಲಯದ ಗ್ರಂಥಪಾಲಕರು ಕೆಲವು ಅಮೂಲ್ಯ ದಾಖಲೆಗಳನ್ನು ಒದಗಿಸಿದ್ದಾರೆ ಇವರಿಗೆ ಲೇಖಕರ ಕೃತಜ್ಞತೆಗಳು.)

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. Albert Gray & H.C.P., Bell., (2000), *The Voyage of Francois Pyrard of Laval to East Indus The Maldives, The Meluccas and Brazil, AES, Vol* II. PT II. Page. 423.

೨. ನಾಗೇಗೌಡ ಹೆಚ್.ಎಲ್., (೧೯೬೯), **ಪ್ರವಾಸಿ ಕಂಡ ಇಂಡಿಯಾ**, ಸಂ. ೩ ಮೈಸೂರು, ಪುಟ. ೩೭೨. ಇದು ೧೫೧೨ ರವರೆಗಿನ ಬಾರ್ಬೋಸ (Barbosa) ಬಂದ ಕಾಲದಲ್ಲಿದ್ದದ್ದು. ಕಾಲಕ್ರಮೇಣ ತುಳುನಾಡು ದಕ್ಷಿಣಕ್ಕೆ ಚಂದ್ರಗಿರಿ ನದಿಯ ಉತ್ತರಕ್ಕೆ ಕಲ್ಯಾಣಪುರ ಹೊಳೆಯ ದಕ್ಷಿಣಕ್ಕೆ ಸೀಮಿತವಾಗಿತ್ತು. ಹೆಚ್ಚಿನ ವಿವರ ನೋಡಿ ಎಂ. ಗೋವಿಂದ ಪೈ., (೧೯೬೬), **"ತುಳುನಾಡ – ತೆಂಕನಾಡು"** (ಕಾಸರಗೋಡು) ಪು. ೧೨-೩೫.

೩. The *Travels of Ibn Battuta.*, (1992), Gibb (Ed) *AES*, pp. 254, 272, ನಾಗೇಗೌಡ., (೧೯೬೬), ಅದೇ, ಭಾಗ ೨ (ಮೈಸೂರು ಪು. ೧೦೬).

೪. *Epigraphia Carnatica VIII* (ಹಳೇ ಮುದ್ರಣ), Sk ೧೧೮, ೧೦೫೪, ಅದೇ, II No. 335, 1195, K. I. V 98, 1195 ಹೆಚ್ಚಿನ ವಿವರಕ್ಕೆ *Gururaja Acharya., (1974 Edn.), Some Aspects of Economic and Social life in Karnataka* (Mysore 1974) pp. 103-105.

೫. Mansel Longworth Dames., (1974 *Edn.*), *The Book of Duarte Barbosa, pp. 185-197.*

೬. *The Voyage of Francois Pyrard* I, introduction, p. XXVII.

೭. ಅದೇ, (೧), ಪು. ೩೮೯ ಬಸ್ರೂರಿನಲ್ಲಿ ಮಾತಾಡುವ ತುಳು ಭಾಷೆಯನ್ನು ಕೇಪ್‌ಕಮೋರಿಯನ್ (ಕನ್ಯಾಕುಮಾರಿ) ಭಾಷೆ (ಮಲೆಯಾಳಂ) ಒಂದೇ ಎಂದು ತಪ್ಪಾಗಿ ತಿಳಿಸಿದ್ದಾರೆ. ಬಸ್ರೂರಿನಲ್ಲಿ ಈಗ ಕನ್ನಡ ಆಡುವ ಭಾಷೆಯಾಗಿದ್ದರೂ. ೧೫-೧೬ನೇ ಶತಮಾನಗಳಲ್ಲಿ ತುಳು ಭಾಷೆ ಬಳಕೆಯಲ್ಲಿ ಇದ್ದಿತ್ತು. ಆ ಊರಿನ ಪಕ್ಕದಲ್ಲಿ ತುಳು ಬರಹದ ಶಾಸನಗಳು ಸಿಕ್ಕಿವೆ. ನೋಡಿ ಪಿ. ಎನ್. ನರಸಿಂಹಮೂರ್ತಿ., (೧೯೯೩), ಉಳ್ಳೂರು ಶ್ರೀ **ಕಾರ್ತಿಕೇಯ ಸುಬ್ರಹ್ಮಣ್ಯ ದೇವಸ್ಥಾನ**, ಕಂದಾವರ, ಪು. ೯೯.

೮. ನಾಗೇಗೌಡ., ಅದೇ, ಭಾಗ ೩, ಪು. ೩೮೩-೩೮೪.

೯. *The Voyage of Francois*, Pyrard I, p. 277 - 78.

೧೦. ಅದೇ, VoL II Part I, p. 259 ಮಾಲ್ದೀವಿ-ಮಲಬಾರ ಪೋರ್ಚುಗೀಸರ ಘರ್ಷಣೆ, ನೋಡಿ. M. N. Prarson, (1981), *Coastal Western India* New Delhi, p. 25, 32 - 38.
*"The Portuguese in Maldives in 16th Century A Volatile period in Maldivian Histroy"* Explore (Male) Spring 2000) pp 25 - 27.

೧೧. *"The Voyage of Francois Pyrard"*, Vol II, pt. II - p. 405 - 418.

೧೨. ಅದೇ ಸಂಪುಟ ೧, ಪುಟ, ೩೨೩ - ೨೪.

೧೩. ಮಾಲ್ದೀವ ದ್ವೀಪಗಳಲ್ಲಿ ಬೌದ್ಧ ಧರ್ಮ ಇದ್ದ ಕೆಲವು ಅಪೂರ್ಣ ಸಂಗತಿಯನ್ನು ಆಲ್‌ಬರ್ಟ್ ಗ್ರೆ ತಿಳಿಸಿದ್ದಾರೆ. ಬೌದ್ಧ ಧರ್ಮದ ಇರುವಿಕೆಯನ್ನು ಚಿತ್ರ ಸಹಿತವಾಗಿ ಮಾಹಿತಿ ನೀಡಿದವರು ಅಬುದಾಭೆಯ ಉದ್ಯೋಗಸ್ಥ ಶ್ರೀ ಅನಂತಸುಬ್ಬರಾಜ.

೧೪. *A History of Mushika Vamsa.*, (1980), S. P. Unni (Ed.), Trivandrum: ಶ್ರೀಮೂಲನಿವಾಸವನ್ನು ಸರಿಯಾಗಿ ಗುರುತಿಸುವಲ್ಲಿ ಕೇರಳದ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಕೆಲವು ವಿದ್ವಾಂಸರರ ಪ್ರಕಾರ ಇದು ದಕ್ಷಿಣ ಕೇರಳದ ಕೊಲ್ಲಂನ ಸಮೀಪವಿದೆ ಎಂಮೂ ಇನ್ನು ಕೆಲವರು ಎಳಿಮಲೆ ಪಯನೂರಿನ ಸಮೀಪ ಕಣ್ಣಾನೂರು ಜಿಲ್ಲೆಯಲ್ಲಿ ಇದೆ ಎಂದೂ ತಿಳಿಸಿದ್ದಾರೆ. ಮೂಸಿಕವಂಶ ಕಾವ್ಯ ಅಧ್ಯಯನದ ಹಿನ್ನೆಲೆಯಲ್ಲಿ ಶ್ರೀ ಮೂಲ ನಿವಾಸವು ಎಳಿಮಲೆಯ ಸಾಮಿಪ್ಯದಲ್ಲಿರಬೇಕು ಎಂಬ ಅಭಿಪ್ರಾಯ ಬರುತ್ತದೆ.

೧೫. ಮಾಲ್ದೀವಿನ ಬೌದ್ಧ ಸ್ಮಾರಕಗಳನ್ನು ಅವಲೋಕಿಸಿದ ಡಾ. ಎಸ್. ನಾಗರಾಜು ಅವರು ಈ ಸ್ಮಾರಕ ಬೌದ್ಧ ಸ್ಮಾರಕಗಳಿಗೆ ಸಾಮಿಪ್ಯವಿದೆ ಎಂದು ಈ ಲೇಖಕರಿಗೆ ತಿಳಿಸಿದ್ದಾರೆ.

೧೬. ನಾಗೇಗೌಡ, ಅದೇ ಭಾಗ ೩ ಪು. ೩೮೫.

೧೭. *Ibn Battuta Travels* P. 241 ಹನ್ನೆರಡನೇ ಶತಮಾನದ ಕಾಲದಲ್ಲಿ ಮಾಲ್ದೀವ ಸಂಪೂರ್ಣ ಇಸ್ಲಾಂ ಮತೀಯವಾಯಿತು ಎಂದು Gibb ಅಭಿಪ್ರಾಯ ಪಟ್ಟಿದ್ದಾರೆ. ನೋಡಿ *Ibn Battuta Travels* P. 364 Note No.1.

೧೮. *The Voyage of Francois Pyrard,* Vol I ಪು. ೧೪೩ - ೧೪೪ ಇದರ ಅಡಿಟಿಪ್ಪಣಿ ಸಂಪುಟ. ೨ ನಾಗೇಗೌಡ ಅದೇ ೩ ಪು. ೩೭೯

೧೯. ನಾಗೇಗೌಡ - ಅದೇ, ಪು. ೩೭೩, ೩೮೧.

ಡಾ|| ಮಾಲತಿ ಕೆ. ಮೂರ್ತಿ*

# ಉಪ್ಪಿನ ಏಕಸ್ವಾಮ್ಯ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಸಾಹತುಶಾಹಿ ಆದಳಿತ ನೀತಿ

ಭಾರತದಲ್ಲಿ ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪೆನಿ ಸರಕಾರದ ಆದಾಯದ ಹಲವು ಪ್ರಮುಖ ಮೂಲಗಳಲ್ಲಿ ಉಪ್ಪಿನ ಆದಾಯವೂ ಒಂದಾಗಿತ್ತು. ಇದನ್ನು ಏಕಸ್ವಾಮ್ಯ ಅಥವಾ ಅಬಕಾರಿ ಸುಂಕದ ಮುಖಾಂತರ ವಸೂಲು ಮಾಡಲಾಗುತ್ತಿತ್ತು. ೧೮೦೫ರ ಸೆಪ್ಟೆಂಬರದಲ್ಲಿ ಒಂದನೇ ರೆಗ್ಯಲೇಷನ್ ಪ್ರಕಾರ ಮದ್ರಾಸ್ ಪ್ರೆಸಿಡೆನ್ಸಿಯ ಕೆನರಾ ಮತ್ತು ಮಲಬಾರ್ ಪ್ರದೇಶ ಹೊರತಾಗಿ ಎಲ್ಲ ಜಿಲ್ಲೆಗಳಲ್ಲಿ ಉಪ್ಪಿನ ಏಕಸ್ವಾಮ್ಯವನ್ನು ಅನುಷ್ಠಾಪಿಸಲಾಗಿತ್ತು. ಇದರ ಪ್ರಕಾರ ಉಪ್ಪಿನ ಉತ್ಪಾದನೆಯು ಸರಕಾರೀ ನಿಯಂತ್ರಣಕ್ಕೊಳಪಟ್ಟಿತ್ತು. ಪರವಾನಿಗೆ ಪಡೆದ ಉತ್ಪಾದಕರು ನಿರ್ದಿಷ್ಟ ಬೆಲೆಯಲ್ಲಿ ಸರಕಾರಕ್ಕೆ ಉಪ್ಪನ್ನು ಪೂರೈಸಬೇಕಿತ್ತು ಮತ್ತು ಸರಕಾರವು ಅದರ ದಳ್ಳಾಳಿಗಳ ಮೂಲಕ ಆ ಉಪ್ಪನ್ನು ನಿರ್ದಿಷ್ಟ ಬೆಲೆಗೆ ಮಾರುತ್ತಿತ್ತು. ಆದರೆ ೧೮೦೭ ರ ಎರಡನೇ ರೆಗ್ಯುಲೇಷನನ್ವಯ ಕೆನರಾದಲ್ಲಿ ಅನುಷ್ಠಾನಕ್ಕೆ ಬಂದ ಉಪ್ಪಿನ ಏಕಸ್ವಾಮ್ಯದ ವ್ಯವಸ್ಥೆಯಲ್ಲಿ ಉಪ್ಪಿನ ಉತ್ಪಾದನೆಗೆ ಸ್ವಾತಂತ್ರ್ಯವಿದ್ದರೂ, ಆ ಉತ್ಪಾದನೆಯನ್ನು ಬರೇ ಸರಕಾರಕ್ಕಷ್ಟೇ ಮಾರಾಟಮಾಡಬೇಕೆಂಬ ವಿಧಿಯನ್ನು ಹೇರಲಾಗಿತ್ತು. [೧]

ಅಂದಿನ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಉಪ್ಪು ತಯಾರಿಕೆಯ ಮತ್ತು ಮಾರಾಟದ ಕೇಂದ್ರಗಳು ಸಾಮಾನ್ಯವಾಗಿ ಬೇರೆಯೇ ಆಗಿರುತ್ತಿದ್ದುವು. ೧೮೦೫ರ ಸುಮಾರಿಗೆ *ಹೊಸಂಗಡಿ, ವಂಡ್ಸೆ, ಉಪ್ಪುಂದ, ಹಳ್ಳಿಗೇರಿ, ಬೈಂದೂರು, ಹೆಮ್ಮಾಡಿ, ಆನಗಳ್ಳಿ, ವಡೇರಹೋಬಳಿ, ಹಾರ್ನಾಡು (ಬಹುಶಃ ಹಳ್ನಾಡು), ಬಸ್ರೂರು, ಹಾಲಾಡಿ, ಕುಂದಾಪುರ, ಕೋಟೇಶ್ವರ, ಬಾರ್ಕೂರು, ಬಳಿಸಾವಿರ, ಕೋಟೆ (ಬಹುಶಃ ಉಪ್ಪಿನ ಕೋಟೆ) ಬ್ರಹ್ಮಾವರ, ತೋನ್ಸೆ, ಉದ್ಯಾವರ, ಕಟಪಾಡಿ, ನಿಡಂಬೂರು, ಕಾಪು, ಪಡುಬಿದ್ರಿ, ಹೆಜಮಾಡಿ, ಬಪ್ಪನಾಡು, ಮುಲ್ಕಿ, ಕಾರ್ನಾಡು, ಪಣಂಬೂರು, ಕೂಳೂರು, ಉಳ್ಳಾಲ, ಮಂಗಳೂರು, ಕಾರ್ಕಳ, ಮೊಗ್ರಾಲ್, ಪುತ್ತೂರು, ಮಂಜೇಶ್ವರ, ಬಂಗ್ರ ಮಂಜೇಶ್ವರ, ಕಾಸರಗೋಡು, ಕುಂಬಳೆ, ಪಡುವನಾಡು* ಮತ್ತು *ನೀಲೇಶ್ವರ* ೨ - ಇವುಗಳಲ್ಲಿ ನದಿ / ಹಿನ್ನೀರು ಸಮೀಪದವುಗಳು ಉಪ್ಪು ತಯಾರಿಕೆಯ ಮತ್ತು ಒಳಪ್ರದೇಶಗಳಲ್ಲಿರುವ ಮಾರಾಟ ಕೇಂದ್ರಗಳು ಆಗಿದ್ದಿರಬೇಕು. ಇಂದಿಗೂ ದ. ಕನ್ನಡದ ಕರಾವಳಿ ಹಾಗೂ ಕಾಸರಗೋಡು ಮತ್ತು ಒಳಪ್ರದೇಶಗಳಲ್ಲಿ ಕೆಲವೊಂದು ಸ್ಥಳಗಳ ಹೆಸರುಗಳು, ಉದಾ: *ಉಪ್ಪಿನ ಕುದ್ರು, ಉಪ್ಪುಂದ* (ಕುಂದಾಪುರ ತಾಲೂಕು), *ಉಪ್ಪಿನ ಕೋಟೆ* (ಉಡುಪಿ ತಾಲೂಕು), *ಉಪ್ಪಳ* (ಕಾಸರಗೋಡು), ಉತ್ತರ ಕನ್ನಡದ *ಉಪ್ಪಿನ ಪಟ್ಟಣ* - ಇವೆಲ್ಲ ಉಪ್ಪು ತಯಾರಿಕೆಗೆ ಹಾಗೂ ವ್ಯಾಪಾರದ ಕೇಂದ್ರಗಳಾಗಿದ್ದಿರಬಹುದೆಂಬುದನ್ನು ಸೂಚಿಸುತ್ತವೆ. ಕ್ರಮೇಣ ಇವು ತಮ್ಮ ಮಹತ್ವವನ್ನು ಕಳೆದುಕೊಂಡಿರಬಹುದು.

ಸೂರ್ಯ ಶಾಖದಿಂದ ಸಮುದ್ರದ ಅಥವಾ ಹಿನ್ನೀರಿನ ಉಪ್ಪು ನೀರನ್ನು ಆವಿಯಾಗಿಸಿ, ಉಪ್ಪಾಗಿಸುವ ಪರಂಪರಾಗತ ಉತ್ಪಾದನಾ ಕ್ರಮವೇ ದ. ಕನ್ನಡದಲ್ಲಿ ಪ್ರಚಲಿತದಲ್ಲಿತ್ತು. ಹೊಲಗಳಲ್ಲಿ ತುಂಬಿದ ಉಪ್ಪುನೀರನ್ನು ತಟ್ಟುಗೊಳಿಸಿದ ಮಣ್ಣಿನ ಚೌಕಗಳಿಗೆ ಹಾಯಿಸಿ, ಬಿಸಿಲಲ್ಲಿ ಆವಿಯಾಗಿಸಿ, ಬಳಿಕ ಹರಳುಗಟ್ಟಿದ ಉಪ್ಪನ್ನು ಮರದ ಕೈ (*scoop*) ಗಳಿಂದ ಒಟ್ಟು ಮಾಡಿ, ಮೂರು- ನಾಲ್ಕು ಚೌಕಗಳು ಸೇರುವೆಡೆ ಉಪ್ಪನ್ನು ರಾಶಿಮಾಡಿಡಲಾಗುತ್ತಿತ್ತು.[೩] ಸರಿಯಾಗಿ ಒಣಗಿದ ಬಳಿಕ ತೂಗಿ, ಅಳತೆ ಮಾಡಿ, ಗೋದಾಮುಗಳಲ್ಲಿ ಶೇಖರಿಸಲಾಗುತ್ತಿತ್ತು. ಉಪ್ಪಿನ ಚೌಕಗಳ ತಯಾರಿ ಸಾಮಾನ್ಯವಾಗಿ ಜನವರಿಯಲ್ಲಿ ಆರಂಭಗೊಂಡು ಜೂನ್ ತನಕವೂ ಅಂದರೆ ಮಳೆಗಾಲದ ಆರಂಭದ ತನಕವೂ ಮುಂದುವರಿಯುತ್ತಿತ್ತು.[೪] ಪ್ರತಿಯೊಂದು ಉಪ್ಪಿನ ಗದ್ದೆಯ ಒಡೆಯನೂ ಜಿಲ್ಲಾ ಕಲೆಕ್ಟರನಲ್ಲಿ ಹೆಸರನ್ನು ನೋಂದಾಯಿಸಬೇಕಿತ್ತು.[೫]

ಉತ್ಪಾದನೆಯಿಂದ ಮಾರಾಟದ ತನಕ ಉಪ್ಪಿನ ಸಾಗಾಟ ಗುತ್ತಿಗೆಯ ಮೂಲಕ ನಡೆಯುತ್ತಿತ್ತು. ಜಿಲ್ಲೆಯ ಉಪ್ಪಿನ ಚೌಕಗಳು ಹಿನ್ನೀರಿನ ಅಥವಾ ನದಿಗಳ ದಡಗಳಲ್ಲಿರುತ್ತಿದ್ದುವು. ಜಿಲ್ಲೆಯ ದಕ್ಷಿಣ ಭಾಗದಲ್ಲಿ ತಯಾರಾಗುತ್ತಿದ್ದ ಉಪ್ಪಿನ ಗುಣಮಟ್ಟ ಸಾಮಾನ್ಯವಾಗಿ ಕಳಪೆಯದಾಗಿತ್ತು. ಉತ್ಪಾದಕರು ಸಾಮಾನ್ಯ ಕೆಲಸದವರಾಗಿದ್ದು ಕೃಷಿಯಂತೇ ಅದನ್ನು ನಡೆಸಿಕೊಂಡು ಬರುತ್ತಿದ್ದರು. ಭೂಮಾಲೀಕರೇ ಉಪ್ಪಿನ ಪೂರೈಕೆಯ ಗುತ್ತಿಗೆ ಪಡೆದಿರುತ್ತಿದ್ದರು. ಗಾರ್ಸೊಂದಕ್ಕೆ (೧ ಗಾರ್ಸ್ - ೧೨೦ ಮಣ) ರೂ ೭ ರಿಂದ ರೂ. ೧೨ ರವರೆಗೆ ಸಾಗಾಟದ ವೆಚ್ಚವಿರುತ್ತಿತ್ತು. ಕೆಸರು ಮಿಶ್ರಿತ ಉಪ್ಪು ಮೀನನ್ನು ಒಣಗಿಸಲು ಉಪಯೋಗವಾಗುತ್ತಿತ್ತು. ಆದರೆ ಅದರ ಬಳಕೆಗೂ ಸರಕಾರದ ಪರವಾನಗಿ ಬೇಕಾಗಿತ್ತು. ಜಿಲ್ಲೆಯ ಉತ್ತರದ ಭಾಗಗಳಲ್ಲಿ, ಗೋವಾದ ಗಡಿ ಹಾಗೂ ಸಮುದ್ರ ಮುಖಾಂತರ ಉಪ್ಪಿನ ಕಳ್ಳಸಾಗಾಣಿಕೆಯೂ

* ೭೮, ತೃಪ್ತಿ ೪ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ, ದೊಡ್ಡಣಗುಡ್ಡೆ, ಉಡುಪಿ, ೫೭೬ ೧೦೨

ನಡೆಯುತ್ತಿತ್ತು. ಸರಕಾರೀ ಮಾರಾಟದ ಅಂಗಡಿಗಳಿಗೆ ಹೋಗುವ ದಾರಿಯಲ್ಲೂ ಸಾಕಷ್ಟು ಉಪ್ಪು ಅನಧಿಕೃತವಾಗಿ ಸೋರಿ ಹೋಗುತ್ತಿತ್ತು. ಘಟ್ಟದ ಮೇಲಿನ ವ್ಯಾಪಾರಿಗಳು ಅಕ್ಕಿ, ಧಾನ್ಯವನ್ನು ತಂದು ಉಪ್ಪನ್ನು ಖರೀದಿಸಿ ಒಯ್ಯುತ್ತಿದ್ದರು. ಮುಂಬೈಯಿಂದ ಉಪ್ಪನ್ನು ಆಮದಿಸಲಾಗುತ್ತಿತ್ತು. ಗೋವಾದಿಂದ ಅಬಕಾರಿ ಸುಂಕವನ್ನು ತೆತ್ತು ಉಪ್ಪನ್ನು ಖರೀದಿಸಲಾಗುತ್ತಿತ್ತು. ಆದರೆ ಸಮುದ್ರ ಮಾರ್ಗವಾಗಿ ದ. ಕನ್ನಡದಿಂದ ಉಪ್ಪು ರಫ್ತಾಗುತ್ತಿರಲಿಲ್ಲ.

ಆರಂಭದಲ್ಲಿ, ಅಂದರೆ ಏಕಸ್ವಾಮ್ಯದ ಅನುಷ್ಠಾನ ಪೂರ್ವದಲ್ಲಿ ಉತ್ಪಾದನಾ ಕೇಂದ್ರಗಳಲ್ಲಿ ಬರೇ ಮಾರಾಟದ ಮೇಲೆ ಸುಂಕ ವಿಧಿಸುವ ಪ್ರಸ್ತಾವವಿತ್ತು.[೬] ಆದರೆ ಉಪ್ಪಿನ ಚೌಕಗಳು ಒಂದರಿಂದೊಂದು ದೂರವಿದ್ದುದರಿಂದ, ವಸೂಲಾತಿ ವೆಚ್ಚವು ಸುಂಕದ ಪ್ರಮಾಣಕ್ಕಿಂತ ಹೆಚ್ಚಾಗಿದ್ದರಿಂದ, ಕಳ್ಳಸಾಗಾಣಿಕೆ / ವಂಚನೆಯನ್ನು ತಡೆಗಟ್ಟಲು ಅಸಾಧ್ಯವಾದ್ದರಿಂದ ಮತ್ತು ಕೆಳವರ್ಗದ ಜನರಿಗೆ ತೆರಿಗೆಯ ಹೊರೆ ಇನ್ನಷ್ಟು ಹೆಚ್ಚು ಬಹುದೆಂಬ ಕಾರಣಗಳನ್ನು ನೀಡಿ ದ.ಕ. ಜಿಲ್ಲೆಯ ಕಲೆಕ್ಟರನು ಬೋರ್ಡ್ ಆಫ್ ರೆವಿನ್ಯೂಗೆ ಅಬಕಾರಿ ಸುಂಕ ಪ್ರಸ್ತಾವವನ್ನು ವಿರೋಧಿಸಿ ಪತ್ರ ಬರೆದನು.[೭] ಅದರ ಬದಲು ಸಮುದ್ರ ಮುಖಾಂತರ ಆಮದಾಗುತ್ತಿದ್ದ ಉಪ್ಪಿಗೆ (ಗಾರ್ಸೊಂದರ) ೭ ಪಗೋಡಾಗಳ (ಅಂದರೆ ರೂ ೨೪ ೧/೨) ಮತ್ತು ಗಡಿಯಿಂದಾಚೆ ರಫ್ತಾಗುವ ಅಂದರೆ ಯಾವುದೇ ಸಮುದ್ರ ಸುಂಕವನ್ನು ತೆರದವರಿಗೆ ೬ ಪಗೋಡಾಗಳ (ಅಂದರೆ ರೂ ೨೧) ಸುಂಕ ವಿಧಿಸಬೇಕೆಂದೂ ಸಲಹೆ ನೀಡಿದನು.[೮] ಇಲ್ಲಿ ಗಮನಿಸಬೇಕಾದ ಅಂಶ ಅಂದರೆ ಇವೆರಡೂ ಉತ್ಕೃಷ್ಟ ಮಟ್ಟದ ಉಪ್ಪಾಗಿದ್ದು ಶ್ರೀಮಂತರೇ ಈ ದುಬಾರಿ ಉಪ್ಪನ್ನು ಕೊಳ್ಳುತ್ತಿದ್ದರು. ಹಾಗಾಗಿ ಈ ಹೊರೆ ಮಾತ್ರ ಶ್ರೀಮಂತರ ಮೇಲೆಯೇ ಬೀಳುತ್ತಿತ್ತು.

ಆದರೆ ಸರಕಾರ ಈ ಪ್ರಸ್ತಾಪವನ್ನು ಕೈಬಿಟ್ಟು ೧೮೦೭ರ ೨ನೇ ನಿಯಂತ್ರಣಾಧಿಸೂಚನೆ ಮೂಲಕ ದ. ಕ. ಜಿಲ್ಲೆಯಲ್ಲಿ ಉಪ್ಪಿನ ಏಕಸ್ವಾಮ್ಯವನ್ನು ಅನುಷ್ಠಾನಿಸಿತು. ಇದರ ಅನುಷ್ಠಾನಕ್ಕೋಸ್ಕರ ಸರಕಾರವು ಒಬ್ಬ ಅಧಿಕಾರಿಯನ್ನು ನೇಮಿಸಿತು. ಆದರೆ ೧೮೦೮ರಲ್ಲಿ ಈ ಹುದ್ದೆಯನ್ನು ರದ್ದುಗೊಳಿಸಿ, ಒಟ್ಟು ಲಾಭದ ಶೇ ೧೧/೨ ರಷ್ಟನ್ನು ಕಲೆಕ್ಟರನಿಗೂ, ೧/೩ ಅವನ ಮುಖ್ಯ ಸಹಾಯಕನಿಗೂ ನೀಡುವ ವ್ಯವಸ್ಥೆಯನ್ನು ಮಾಡಲಾಯಿತು. ೧೮೩೭ರಲ್ಲಿ ಕಮಿಷನನ್ನು ರದ್ದು ಪಡಿಸಿ, ಇದರ ನಿರ್ವಹಣೆಯನ್ನು ಕಲೆಕ್ಟರನ ಕರ್ತವ್ಯವಾಗಿ ಪರಿಗಣಿಸ ಲಾಯಿತು.[೯]

೧೮೦೭ರ ಎರಡನೇ ನಿಯಂತ್ರಣಾಧಿಸೂಚನೆಯತೆ ಉಪ್ಪಿನ ಏಕಸ್ವಾಮ್ಯ ಬೆಲೆಯನ್ನು ಗಾರ್ಸೊಂದರ ರೂ ೭೦ ರಂತೆ ನಿಗದಿಪಡಿಸಲಾಗಿತ್ತು. ೧೮೦೯ ರಲ್ಲಿ ಇದನ್ನು ರೂ. ೧೦೫ಕ್ಕೆ ಏರಿಸಲಾಯಿತು. ೧೮೨೦ರಲ್ಲಿ ಮೊದಲಿನ ರೂ ೭೦ ರ ಬೆಲೆ ಇದನ್ನು ಇಳಿಸಿದರೂ ಸರಕಾರದ ಆದಾಯ ಇಳಿಮುಖ ವಾಯ್ತೆಂದು ೧೮೨೪, ೧೮೨೫ ಮತ್ತು ೧೮೨೮ರಲ್ಲಿ ಮತ್ತೆ ಧಾರಣೆಯನ್ನು ಏರಿಸುವ ಕುರಿತು ಪ್ರಸ್ತಾವಗಳನ್ನು ಮಂಡಿಸ ಲಾಗಿತ್ತು. ಪ್ರಸ್ತಾವಿತ ಬೆಲೆಯೇರಿಕೆಯಿಂದ ಬಳಕೆದಾರರಿಗೆ ತೊಂದರೆಯಾಗಬಹುದೇ ಅಥವಾ ಬೇಡಿಕೆ ಕುಸಿಯಬಹುದೇ ಎಂದು ಬಹಳಷ್ಟು ಪರಿಶೀಲಿಸಿದ ಬೋರ್ಡು, ಈ ಯಾವ ಸಂದೇಹಕ್ಕೂ ಆಸ್ಪದವಿಲ್ಲವೆಂದು ತಿಳಿಸಿದ ಕಾರಣ, ಸರಕಾರವು ಉಪ್ಪಿನ ಧಾರಣೆಯನ್ನು ಗಾರ್ಸೊಂದರ ರೂ. ೧೦೫ಕ್ಕೆ ಏರಿಸಿತು. ಇದೇ ಧಾರಣೆ ೧೮೪೪ರ ವರೆಗೂ ಮುಂದುವರಿಯಿತು.[೧೦]

ಈ ರೀತಿ ನಿಗದಿಪಡಿಸಿದ ಬೆಲೆಯೂ ಜಿಲ್ಲೆಯ ಎಲ್ಲೆಡೆ ಒಂದೇ ತೆರನಾಗಿರಲಿಲ್ಲ. ಉಪ್ಪಿನ ಏಕಸ್ವಾಮ್ಯದಲ್ಲಿ ಲಾಭವೊಂದೇ ಗುರಿಯಾಗಿದ್ದ ಸರಕಾರಕ್ಕೆ ಜನರ ಅನಾನುಕೂಲತೆಗಳಾಗಲೀ, ಸಂಕಷ್ಟಗಳಾಗಲೀ ಮುಖ್ಯವಾಗಲಿಲ್ಲ ಅದು ದ. ಕನ್ನಡ ಜಿಲ್ಲೆಯಾಗಲೀ, ಒರಿಸ್ಸಾವಾಗಲೀ ಅಥವಾ ಬಂಗಾಳವಾಗಲೀ ಸರಕಾರದ ನೀತಿ ಶೋಷಣಾತ್ಮಕವಾಗಿಯೇ ಇತ್ತು.[೧೧]

ಆದರೆ, "ಸರಕಾರದ ವೆಚ್ಚಗಳಿಗೆ ಜನರಿಂದ ಹಣ ವಸೂಲಾಗಬೇಕಾದರೆ, ಅದು ಅತ್ಯಗತ್ಯ ವಸ್ತುಗಳ ಮೇಲೆ ತೆರಿಗೆ ಹೇರುವುದರಿಂದಷ್ಟೇ ಸಾಧ್ಯ. ಇಂಡಿಯಾದಲ್ಲಿ ಸದ್ಯದ ಪರಿಸ್ಥಿತಿ ಯಲ್ಲಿ ಈ ತೆರಿಗೆ ಅತ್ಯಂತ ಸೂಕ್ತ" ಎಂದು ಅಭಿಪ್ರಾಯಪಟ್ಟ ಬ್ರಿಟಿಷ್ ಸರಕಾರದ ಇಂಡಿಯಾ ರಾಜ್ಯ ಕಾರ್ಯದರ್ಶಿ, 'ಆದರೆ ಅವರ ದೈನಂದಿನ ಖರ್ಚಿನ ಬಹು ಭಾಗವನ್ನು ಅದು ಕಬಳಿಸುವಂತಾಗಬಾರದು' ಎಂದೂ ಸೇರಿಸಿದ್ದನು.[೧೨] ಆದರೂ ಭೂಕಂದಾಯ, ಹೊಗೆಸೊಪ್ಪಿನ ಏಕಸ್ವಾಮ್ಯ, ಒಳನಾಡು ಸುಂಕ, ರಫ್ತು ಹಾಗೂ ಆಮದು ಸುಂಕಗಳಿಂದಾಗಿ ಕಂಗೆಟ್ಟ ಜನರಿಗೆ ಉಪ್ಪಿನ ಏಕಸ್ವಾಮ್ಯ ಬೆಲೆಯು ದೊಡ್ಡ ಹೊರೆಯಾಯಿತು. ಉತ್ಪಾದನೆಯ ಮೇಲಿನ ನಿರ್ಬಂಧ ಮತ್ತು ಏರಿಸಿದ ಬೆಲೆಯಿಂದಾಗಿ ಬಳಕೆದಾರರ ಕಷ್ಟವೂ ಹೆಚ್ಚಿತಲ್ಲದೆ ಕಳ್ಳಸಾಗಾಣಿಕೆಗೂ ಬಾಗಿಲು ತೆರೆಯಿತು.

ಒರಿಸ್ಸಾದಲ್ಲಿ ಬ್ರಿಟಿಷ್ ಸರಕಾರದ ಏಕಸ್ವಾಮ್ಯ ನೀತಿ ೧೮೧೭ರಲ್ಲಿ ದಂಗೆಗೆ ಎಡೆಮಾಡಿಕೊಟ್ಟಿತ್ತು. ಅಲ್ಲಿ ತಯಾರಾದ ಉಪ್ಪನ್ನು ಸರಕಾರವು ಇನ್ನೊಂದು ಪ್ರಾಂತ್ಯದಲ್ಲಿ ಮಾರುತ್ತಿತ್ತು. ಜನರ ಬಳಕೆಗೆ ಬಹಳ ಸ್ವಲ್ಪವೇ ಉಪ್ಪು ಉಳಿಯುತ್ತಿತ್ತು. ಒಂದೆಡೆ ಪೂರೈಕೆಯ ಕೊರತೆ, ಇನ್ನೊಂದೆಡೆ ಹೆಚ್ಚಿದ ಬೆಲೆ ಇವು ೧೮೩೧ರ "ಕೂಟ ದಂಗೆ" ಮತ್ತು ೧೮೩೭ರ 'ಕಲ್ಯಾಣ ಸ್ವಾಮಿಯ ದಂಗೆ' ಯಲ್ಲೂ ಅತೃಪ್ತ ಜನರ ಅನೇಕ ಬೇಡಿಕೆಗಳಲ್ಲಿ ಉಪ್ಪಿನ ಏಕಸ್ವಾಮ್ಯವನ್ನು ತೊಡೆದು ಹಾಕಬೇಕೆನ್ನುವುದೂ ಒಂದಾಗಿತ್ತು ಅನ್ನುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ದ. ಕ. ಜಿಲ್ಲೆಯಲ್ಲಿ ಉಪ್ಪಿನ ತಯಾರಿಕೆಯು ಪರವಾನಿಗೆಗೆ ಒಳಪಟ್ಟಿತ್ತು. ಉಪ್ಪಿನ ಪೂರೈಕೆಯ ಕೊರತೆಯನ್ನು ನೀಗಿಸಲು ಸರಕಾರವು ಮುಂಬೈಯಿಂದ ಮತ್ತು ಗೋವಾದಿಂದ ಉಪ್ಪನ್ನು

ತರಿಸಿಕೊಳ್ಳುತ್ತಿತ್ತು. ಮಣವೊಂದಕ್ಕೆ ೧೨ ಆಣೆಯಂತೆ ಆಮದು ಸುಂಕವನ್ನು ತೆರುತ್ತಿದ್ದರೂ, ಅದರ ಮೊತ್ತ ಜಿಲ್ಲೆಯ ಉತ್ಪಾದನೆಯಿಂದ ಪಡೆಯುತ್ತಿದ್ದ ಲಾಭಕ್ಕೆ ಸಮನಾಗಿರುತ್ತಿತ್ತು. ಮುಂಬೈಯಿಂದ ಮಂಗಳೂರು ಬಂದರಿಗೆ ತಲುಪಿದ ಉಪ್ಪು, ಸರಕಾರೀ ವೆಚ್ಚದಲ್ಲಿ ಬಂಟ್ವಾಳಕ್ಕೆ ತಲುಪುವಾಗ ಸಹಜವಾಗಿಯೇ ಬೆಲೆ ಏರುತ್ತಿತ್ತು. ಸರಕಾರವು ಉಪ್ಪಿನ ಏಕಸ್ವಾಮ್ಯವನ್ನು ಅನುಷ್ಠಾನಿಸುವ ಪೂರ್ವದಲ್ಲಿ ಮಂಗಳೂರಲ್ಲಿ ಮುಂಬೈ ಉಪ್ಪಿನ ಬೆಲೆ ಮಣವೊಂದಕ್ಕೆ ೪ ಆಣೆಗೂ ಕಡಿಮೆ ಮತ್ತು ಗೋವಾದ ಉಪ್ಪಿನ ಬೆಲೆ ಮಣವೊಂದಕ್ಕೆ ೩ ಆಣೆಗೂ ಕಮ್ಮಿ ಇತ್ತು. ಏಕಸ್ವಾಮ್ಯದ ಬಳಿಕ ೯ ಆಣೆ ೪ ಪೈ, ೧೮೪೪ರಲ್ಲಿ ೧೪ ಆಣೆಯಾಗಿ, ೧೮೪೫ರಲ್ಲಿ ೧ರೂ, ೧೮೬೫ - ೬೬ರಲ್ಲಿ ೧೧/೨ ರೂಗೆ ಏರಿ ೧೮೬೯ರಿಂದ ೧೮೭೭ರ ವರೆಗೆ ೨ ರೂ. ಆಗಿತ್ತು.[೧೪]

ದ,.ಕ. ಜಿಲ್ಲೆಯಲ್ಲಿ ಬಂಟ್ವಾಳ, ಉಪ್ಪಿನ ವ್ಯಾಪಾರದ ಪ್ರಮುಖ ಕೇಂದ್ರವಾಗಿತ್ತು. ಅಲ್ಲಿಂದಲೇ ಜಿಲ್ಲೆಯ ದಕ್ಷಿಣ ಭಾಗಕ್ಕೂ ಮತ್ತು ಘಟ್ಟದ ಮೇಲಿನ ಮೈಸೂರಿಗೂ ಸರಬರಾಜಾಗುತ್ತಿದ್ದರಿಂದ, ವ್ಯಾಪಾರೀ ಸರಕಾರ, ಬಂಟ್ವಾಳದಲ್ಲಿ ಉಪ್ಪಿಗೆ ಅತಿ ಹೆಚ್ಚಿನ ಬೆಲೆಯನ್ನು ನಿಗದಿಪಡಿಸಿತ್ತು. ಉಪ್ಪಿಗಿರುವ ಸ್ಥಿತಿಸ್ಥಾಪಕತ್ವ ರಹಿತ ಬೇಡಿಕೆ ಮತ್ತು ಏರಿಸಿದ ಬೆಲೆಯಿಂದ ಸರಕಾರದ ಲಾಭ ಹೆಚ್ಚುತ್ತಲೇ ಹೋಯಿತು. ೧೮೪೦ರ ಬಳಿಕ ಸಂಚಾರ ಸೌಕರ್ಯದಲ್ಲಿ- ಮುಖ್ಯವಾಗಿ ರಸ್ತೆಗಳ ನಿರ್ಮಾಣ ಹಾಗೂ ಸುಧಾರಣೆ, ಉಪ್ಪಿನ ವ್ಯಾಪಾರದ ಹೆಚ್ಚಳಕ್ಕೆ ಪೂರಕವಾಯಿತು. ಈ ಹೆಚ್ಚಳ ಎಷ್ಟೊಂದು ಗಮನಾರ್ಹವಾಗಿತ್ತೆಂದರೆ, ರಸ್ತೆ ಸುಧಾರಣೆಗಾದ ಖರ್ಚಿನ ಒಂದೂವರೆ ಪಟ್ಟಿನಷ್ಟು ಹಣ ಬರೇ ಉಪ್ಪಿನ ಆದಾಯ ಮಾತ್ರದಿಂದಲೇ ಸರಕಾರಕ್ಕೆ ಮರಳಿತ್ತು.[೧೫] ಇದನ್ನು ಸರಕಾರದ ಆದಾಯವೆಂದು ಗುರುತಿಸುವುದಕ್ಕಿಂತಲೂ, ಜನರು ಉಪ್ಪಿಗಾಗಿ ಹೆಚ್ಚು ಖರ್ಚು ಮಾಡಬೇಕಾದ ಅನಿವಾರ್ಯತೆ ಎನ್ನುವುದೇ ಹೆಚ್ಚು ಸಮಂಜಸ. ಬಹುಶಃ ಆರ್ಥಿಕವಾಗಿ ತೀರ ಹಿಂದುಳಿದ ವರ್ಗಗಳಲ್ಲಿ ಉಪ್ಪಿನ ಬಳಕೆ ಸ್ವಲ್ಪ ಮಟ್ಟಿಗೆ ಕಡಿಮೆಯಾಗಿದ್ದಿರಬೇಕು. ೧೮೨೭ ಮತ್ತು ೧೮೪೭ರ ನಡುವಿನ ಎರಡು ದಶಕಗಳಲ್ಲಿ ಬಳಕೆಯ ಪ್ರಮಾಣ ಶೇ. ೩೩ ರಷ್ಟು ಕಡಿಮೆ ಆಗಿದ್ದರೂ.[೧೬] ವೆಚ್ಚದಲ್ಲಿ ಕಡಿತವಾಗಿರಲಿಲ್ಲ ಅನ್ನುವುದು ಬೆಲೆಯೇರಿಕೆಯ ಪರಿಣಾಮದ ಸ್ಪಷ್ಟ ನಿದರ್ಶನ. ೧೮೪೪ರಲ್ಲಿ ಒಳನಾಡು ಸುಂಕಗಳ ರದ್ದತಿಯಿಂದ ಜನರಿಗೆ ಸ್ವಲ್ಪ ಪರಿಹಾರ ದೊರೆತರೂ, ಏಕಸ್ವಾಮ್ಯ ಬೆಲೆಯಲ್ಲಾದ ಏರಿಕೆ (೧೮೪೪ರ ೬ನೇ ಕಾನೂನು ) ಮಣವೊಂದರ ೧ ೨/೩ ರೂ ಯಂತೆ ಮತ್ತು ಸಾಗರ ಸುಂಕ - ಮಣವೊಂದರ ರೂ. ೩ ರಂತೆ ಏರಿಕೆ - ಇವು ಈ ಪರಿಹಾರವನ್ನು ಶೂನ್ಯಕ್ಕಿಳಿಸಿದ್ದವು. ೧೮೪೮ರ ಸೆಪ್ಟೆಂಬರ್ ೧೮ ರಂದು ದ.ಕ. ಜಿಲ್ಲಾ ಕಲೆಕ್ಟರನು ಬೋರ್ಡ್ ಆಫ್ ರೆವಿನ್ಯೂಗೆ ಬರೆದ ಪತ್ರದಲ್ಲಿ "ಬೆಲೆಯೇರಿಕೆಯಾದಾಗಲೂ ಮಾರಾಟದಲ್ಲಿ ವ್ಯತ್ಯಯವಾಗದಿರಲು ಪಟ್ಟಣ ಸುಂಕ ಹಾಗೂ ಸಾಗಾಟಸುಂಕ ರದ್ದತಿ, ಸುಧಾರಿತ ರಸ್ತೆಗಳು ಮತ್ತು ಪ್ರಾಕೃತಿಕ ವಿಕೋಪಗಳಿಲ್ಲದಿರುವುದೇ ಕಾರಣ" ಎಂದು ತಿಳಿಸಿದ್ದನು. ಅದರ ಜತೆಗೇ, ಏಕಸ್ವಾಮ್ಯ ಬೆಲೆಯಿಂದ ಜನರಿಗಾದ ತೊಂದರೆಯನ್ನು ವಿವರಿಸಿ, ಆದಷ್ಟು ಬೇಗ ಇದನ್ನು ಸರಿಪಡಿಸಿ, ಇಲ್ಲಿ ತಯಾರಾಗುವ ಉಪ್ಪು ಇಲ್ಲಿನ ಬಹುತೇಕ ನಿವಾಸಿಗಳಿಗೆ, ಅದರಲ್ಲೂ ಒಳನಾಡ ಪ್ರದೇಶಗಳಿಗೆ ದೊರಕುವಂತಾಗಬೇಕೆಂದೂ ಸೂಚಿಸಿದ್ದನು.[೧೭]

ಏಕಸ್ವಾಮ್ಯ ಬೆಲೆಯ ಏರಿಕೆ ಹಾಗೂ ತತ್ಪರಿಣಾಮವಾದ ಜನರ ಸಂಕಷ್ಟಗಳು ಒಂದೆಡೆಯಾದರೆ, ಇನ್ನೊಂದೆಡೆ ಸ್ಥಳೀಯ ಉತ್ಪಾದನಾ ಉಪ್ಪಿಗೆ ಪೂರಕವಾಗಿ ದ.ಕನ್ನಡದ ಉತ್ತರದಲ್ಲಿ ಗೋವಾ ಉಪ್ಪಿನ ಸರಬರಾಜು, ದಕ್ಷಿಣ ಭಾಗದಲ್ಲಿ ಮುಂಬೈ ಮತ್ತು ಅರೇಬಿಯಾದಿಂದ ಆಮದಾಗುತ್ತಿದ್ದ ಉಪ್ಪು, ಕರಾವಳಿ ಯುದ್ದಕ್ಕೂ ಕಳ್ಳ ಸಾಗಾಣಿಕೆಯ ಜಾಲ ಇವು ಆಡಳಿತಗಾರರಿಗೆ, ಅಂದರೆ ಕಲೆಕ್ಟರುಗಳಿಗೆ ಆಡಳಿತಾತ್ಮಕ ಸಮಸ್ಯೆಗಳನ್ನೊಡ್ಡುತ್ತಿದ್ದುವು. ಹಾಗಾಗಿಯೇ ೧೮೫೧ರಲ್ಲಿ ಏಕಸ್ವಾಮ್ಯದ ಬದಲು, ಗೋವಾ, ಮುಂಬೈ ಮತ್ತು ಅರೇಬಿಯನ್ ಉಪ್ಪಿನ ಮೇಲೆ ಅಬಕಾರಿ ಸುಂಕವನ್ನು ಹೇರಿ, ಈ ಪ್ರದೇಶವನ್ನು ಪ್ರವೇಶಿಸುವ ಎಲ್ಲಾ ಉಪ್ಪಿನ ಬೆಲೆಯನ್ನು ಏಕರೂಪಕ್ಕೆ ತರುವಂತೆ ದ.ಕನ್ನಡದ ಕಲೆಕ್ಟರನು ಸಲಹೆಯನ್ನಿತ್ತಿದ್ದನು.[೧೮]

ಈ ನಡುವೆ ಅಂದರೆ ೧೮೫೧ರ ಸುಮಾರಿಗೆ ಉಪ್ಪಿನ ತಯಾರಿಕೆ ದ. ಕನ್ನಡ ಜಿಲ್ಲೆಯ ಉತ್ತರಭಾಗಕ್ಕೆ, ಮುಖ್ಯವಾಗಿ ಕುಂದಾಪುರ ತಾಲೂಕಿಗೆ ಸೀಮಿತಗೊಂಡಿರುವಂತೆ ಕಾಣುತ್ತದೆ. ಕುಂದಾಪುರ ತಾಲೂಕಿನ ಆನಗಳ್ಳಿ, ವಡೇರಹಳ್ಳಿ, ಹಾರ್ನಾಡು (ಹಳ್ನಾಡು), ಹಾಲಾಡಿ, ವಂಡ್ಸೆ ಮತ್ತು ಬೈಂದೂರು ಉಪ್ಪಿನ ತಯಾರಿ ಮತ್ತು ಮಾರಾಟದ ಕೇಂದ್ರಗಳಾಗಿದ್ದುವು. ಮೂಲ್ಕಿ, ಮಂಜೇಶ್ವರ, ಕುಂಬ್ಳೆ, ಕಾಸರಗೋಡು ಮತ್ತು ನೀಲೇಶ್ವರಗಳು ತಯಾರಿಕೆ ಮತ್ತು ಮಾರಾಟ ಕೇಂದ್ರಗಳೆಂದು ದಾಖಲಾಗಿದ್ದರೂ ಅಲ್ಲಿ ಉಪ್ಪಿನ ತಯಾರಿಕೆ ಬಹಳ ಕಡಿಮೆ ಪ್ರಮಾಣದಲ್ಲಿತ್ತು. ಪಾಣೆ ಮಂಗಳೂರು (ಬಂಟ್ವಾಳ), ಉದ್ಯಾವರ, ಕಾಪು ಉಪ್ಪಿನ ಕೋಟೆ (ಮಾಬುಳ) ಮತ್ತು ಬಜೆಗಳು ಮಾರಾಟದ ಕೇಂದ್ರಗಳಾಗಿದ್ದುವು. ೧೮೫೧ರಲ್ಲಿ ದ. ಕ. ಜಿಲ್ಲೆಯ ಕಲೆಕ್ಟರ್ ಎಫ್.ಎನ್. ಮಾಲ್ಟಾಬೀಯು ತನ್ನ ವರದಿಯಲ್ಲಿ "ಜಿಲ್ಲೆಯ ಉತ್ತರಭಾಗಕ್ಕಷ್ಟೇ ತಯಾರಿಕೆ ಸೀಮಿತವಾಗಿತ್ತು" ಎಂದು ಉಲ್ಲೇಖಿಸಿದುವುದನ್ನು ಇಲ್ಲಿ ನೆನಪಿಸಬಹುದು.[೧೯] ೧೮೫೬ರಲ್ಲಿ ಪೌಡೆನನು ಗವರ್ನರ್ ಜನರಲ್ಲರಿಗೆ ಕಳುಹಿಸಿದ ವರದಿಯಲ್ಲಿ ಅಡಕಗೊಂಡಿರುವ ನಕ್ಷೆಯಲ್ಲೂ, ಜಿಲ್ಲೆಯ ಉತ್ತರಭಾಗಕ್ಕಷ್ಟೇ ಉಪ್ಪಿನ ಬಹುತೇಕ ತಯಾರಿ ಸೀಮಿತಗೊಂಡಿರುವುದನ್ನು ಕಾಣಬಹುದಾಗಿದೆ. ದ.ಕ. ಜಿಲ್ಲೆಯ ದಕ್ಷಿಣ ಭಾಗದಲ್ಲಿ, ಅಂದರೆ

ಮುಖ್ಯವಾಗಿ ಮಂಗಳೂರು ಬಂದರಿನಲ್ಲಿ ಅರಬ್ ವ್ಯಾಪಾರಿ ಸಂಪರ್ಕ ಜಾಲವಿದ್ದು, ಇಲ್ಲಿಗೆ ಮುಂಬೈ ಮತ್ತು ಅರೇಬಿಯಾದಿಂದಲೂ ಉಪ್ಪನ್ನು ತರಿಸಲಾಗುತ್ತಿತ್ತು. ಈ ಹಿನ್ನೆಲೆಯಲ್ಲೇ ಕಲೆಕ್ಟರ್ ಮಾಲ್ಟೌಬೀಯು ತನ್ನ ವರದಿಯಲ್ಲಿ, "ಮುಂಬೈ ಮತ್ತು ಅರೇಬಿಯಾದ ಉಪ್ಪಿಗೆ ಇಲ್ಲಿ ನಿಗದಿತ ಸುಂಕವನ್ನು ಹೇರಿದಲ್ಲಿ ಬೆಲೆಯಲ್ಲಿ ಸಮಾನತೆಯನ್ನು ತರಲು ಸಾಧ್ಯ. ಅದೇ ಪ್ರಮಾಣದಲ್ಲಿ ಜಿಲ್ಲೆಯ ಉಪ್ಪಿನ ಮೇಲೂ ತೆರಿಗೆಯನ್ನು ಹೇರಬೇಕಾಗುತ್ತದೆ, ಅಂತೆಯೇ ಕರಾವಳಿಯ ಉಪ್ಪು ತಯಾರಿಕಾ ಕೇಂದ್ರಗಳು ಮತ್ತು ಒಳನಾಡ ಮಾರಾಟ ಕೇಂದ್ರಗಳನ್ನು ಪ್ರಮುಖ ಘಾಟೀ ರಸ್ತೆಗಳೊಡನೆ ಜೋಡಿಸುವ ಕಾಮಗಾರಿಯೂ ಅವಶ್ಯವಿದೆ" ಎಂದು ಪ್ರತಿಪಾದಿಸಿದ್ದನು. ಆದರೆ "ಈ ಕುರಿತು ಇನ್ನು ಹೆಚ್ಚಿನ ಮಾಹಿತಿಯ ಅಗತ್ಯವಿದೆ" ಎನ್ನುತ್ತಾ ಸರಕಾರ ಹಿಂದಿನ ವ್ಯವಸ್ಥೆಯನ್ನೇ ಮುಂದುವರಿಸಿತ್ತು.[೨೦] ಪತ್ರ ವ್ಯವಹಾರ ಮತ್ತೆ ಮುಂದುವರಿದು, ೧೮೫೩ರಲ್ಲಿ ನಿರ್ದೇಶಕ ಮಂಡಳಿಯ ಆದೇಶದಂತೆ, ಆಮದು ಸುಂಕವನ್ನು ಮಣವೊಂದಕ್ಕೆ ೧೨ ಆಣೆಗಳಷ್ಟು ಕಡಿತ ಮಾಡಲಾಯಿತು. ಅಗತ್ಯದ ಸುಂಕವನ್ನಷ್ಟೇ ಹೇರಿ, ಎಲ್ಲಾ ವಿಧದ ಉಪ್ಪಿನ ಬೆಲೆಯನ್ನು ಏಕರೂಪಕ್ಕೆ ತಂದು, ಉಪ್ಪಿನ ವ್ಯಾಪಾರವನ್ನು ಮುಕ್ತಗೊಳಿಸಲು ಒಪ್ಪದ ಸರಕಾರ, ಏಕಸ್ವಾಮ್ಯವನ್ನು ಕಾಯ್ದುಕೊಳ್ಳುವರಲ್ಲಿಯೇ ಉತ್ಸುಕವಾಗಿದ್ದುದು, ವಸಾಹತುಶಾಹೀ ಸರಕಾರಕ್ಕೆ ಲಾಭ ಮುಖ್ಯವಾಗಿತ್ತೇ ಹೊರತು, ಜನರ ಸಂಕಷ್ಟಗಳ ಕಡೆಗೆ ಗಮನವಿರಲಿಲ್ಲ ಎಂಬುದನ್ನು ಸೂಚಿಸುತ್ತದೆ.

೧೮೬೧ರಲ್ಲಿ ದ. ಕನ್ನಡ ಜಿಲ್ಲೆಯಲ್ಲಿ ೧೨ ಗೋದಾಮುಗಳಿದ್ದುವು. ಕರಾವಳಿಯಲ್ಲಿ ನೀಲೇಶ್ವರ, ಕುಂಬಳೆ, ಕಾಸರಗೋಡು, ಮಂಜೇಶ್ವರ, ಮಂಗಳೂರು, ಮೂಲ್ಕಿ, ಉದ್ಯಾವರ ಮತ್ತು ಮಾಬುಕಳ - ಒಟ್ಟು ೮ ಗೋದಾಮುಗಳು ಮತ್ತು ಪಾಣೆಮಂಗಳೂರು, ಬಜೆ, ಹಾಲಾಡಿ ಮತ್ತು ವಂಡ್ಸೆಯಲ್ಲಿ - ಒಟ್ಟು ೪ ಗೋದಾಮುಗಳಿದ್ದುವು.[೨೧] ೧೮೬೫ರಲ್ಲಿ ಕುಂಬಳೆಯ ಗೋದಾವನ್ನು ಮುಚ್ಚಲಾಯಿತು.[೨೨]

ಸರಕಾರಕ್ಕೆ ಉಪ್ಪಿನ ಮಾರಾಟದ ಮೇಲಿನ ನಿಯಂತ್ರಣ, ಉತ್ಪಾದನಾ ನಿಯಂತ್ರಣಕ್ಕಿಂತ ಹೆಚ್ಚು ಲಾಭದಾಯಕವಾಗಿತ್ತು. ಏಕೆಂದರೆ ನಿಜವಾದ ವೆಚ್ಚಕ್ಕೆ ಬೇರೆ ವೆಚ್ಚಗಳನ್ನು - ಅಂದರೆ ಉತ್ಪಾದಕರಿಂದ ಉಪ್ಪನ್ನು ಖರೀದಿಸುತ್ತಿದ್ದ ಬೆಲೆಗೆ, ಉಪ್ಪಿನ ಗದ್ದೆಗಳ ಮೇಲಿನ ತೆರಿಗೆ ಮತ್ತು ಇತರ ಸ್ಥಿರ ವೆಚ್ಚಗಳು, ಸಾದಿಲ್ವಾರು, ಪತ್ತೆಮಾರು ದೋಣಿಗಳ ಮೇಲೆ ಸಾಗಾಟ ಸುಂಕ, ಉಗ್ರಾಣಗಳ ರಿಪೇರಿ ಮುಂತಾದವುಗಳನ್ನು ಸೇರಿಸಿ, ಸ್ಥಳೀಯ ಉಪ್ಪಿನ ಖರೀದಿ ಬೆಲೆಯನ್ನು ನಿಗದಿಪಡಿಸಲಾಗುತ್ತಿತ್ತು.[೨೩] ಉಪ್ಪಿಗಿರುವ ಸ್ಥಿತಿಸ್ಥಾಪಕತ್ವ ರಹಿತ ಬೇಡಿಕೆಯಿಂದಾಗಿ ನಿರಂತರವಾಗಿ ಬೆಲೆಯನ್ನು ಏರಿಸಲೂ ಸಾಧ್ಯವಾಗಿತ್ತು.

ಉಪ್ಪಿನ ವ್ಯಾಪಾರ ವಿಭಾಗದ ಸಿಬ್ಬಂದಿಗಳಾದ ಮುತ್ಸದ್ದಿ ಮತ್ತು ಮಣೆಗಾರರಿಗೆ ಉತ್ಪಾದನೆ, ಹಂಚಿಕೆ ಮತ್ತು ಮಾರಾಟಗಳ ಮೇಲ್ವಿಚಾರಣೆಯಲ್ಲದೆ, ಅವರವರ ವಿಭಾಗದಲ್ಲಿ ಕಳ್ಳ ಸಾಗಾಣಿಕೆಯನ್ನು ಹತ್ತಿಕ್ಕುವ ಮತ್ತು ಆದಾಯವನ್ನು ಹೆಚ್ಚಿಸುವ ಜವಾಬ್ದಾರಿಯೂ ಇತ್ತು. ಶಿರಸ್ತೇದಾರರು ಮತ್ತು ಗುಮಾಸ್ತರು ಉತ್ಪಾದನೆ ಮತ್ತು ಮಾರಾಟದ ಲೆಕ್ಕ ಪತ್ರಗಳನ್ನಿಡುವುದರ ಜತೆಗೇ, ಮೇಲ್ವಿಚಾರಕರಿಗೆ ಸಹಾಯಕರಾಗಿಯೂ ಕೆಲಸ ನಿರ್ವಹಿಸುತ್ತಿದ್ದರು.

೧೮೫೨ರಲ್ಲಿ ಅರೇಬಿಯಾದಿಂದ ತರಿಸುತ್ತಿದ್ದ ಉಪ್ಪಿನ ಮೇಲೆ ಸುಂಕವನ್ನು ಹೇರಲಾಯಿತು. ೧೮೫೭ - ೫೮ರಲ್ಲಿ ಉ. ಕನ್ನಡದಲ್ಲಿನ ಉತ್ಪಾದನೆಯ ಪಾರ್ಶ್ವಕಡಿತೆಯಿಂದಾಗಿ ಮತ್ತು ಮುಂಬೈ ಹಾಗೂ ಗೋವಾಗಳಲ್ಲಿನ ಕೊರತೆಯಿಂದಾಗಿ, ದ.ಕ. ಜಿಲ್ಲೆಯ ಮಾರುಕಟ್ಟೆಯ ಅವಶ್ಯಕತೆಗಳನ್ನು ಪೂರೈಸಲು ಪೂರ್ವ ಕರಾವಳಿಯಿಂದ ಉಪ್ಪನ್ನು ಪಡೆದುಕೊಳ್ಳಬೇಕಾಯಿತು. ಪೂರ್ವ ಕರಾವಳಿಯಿಂದ ಪಶ್ಚಿಮ ಕರಾವಳಿಗೆ ಉಪ್ಪನ್ನು ಪೂರೈಸಲು ಸರಕಾರವೇ ಈ ಜವಾಬ್ದಾರಿಯನ್ನು ಹೊರುವಂತಾಯಿತು. ಹಾಗಾಗಿ, ೧೮೫೮ರಲ್ಲಿ ರೆವಿನ್ಯೂ ಬೋರ್ಡು, ಕೆನರಾ ಮತ್ತು ಮಲಬಾರ್ ಪ್ರದೇಶಗಳಲ್ಲಿ ಏಕಸ್ವಾಮ್ಯಕ್ಕೆ ಬದಲಾಗಿ ಅಬಕಾರಿ ಸುಂಕದ ವ್ಯವಸ್ಥೆ ಮಾಡುವಂತೆ ಸೂಚಿಸಿತು.[೨೪] ಆದರೆ ಸರಕಾರವಿನ್ನೂ ಏಕಸ್ವಾಮ್ಯದ ಆಕರ್ಷಣೆಯಿಂದ ಮುಕ್ತವಾಗಿರದ ಕಾರಣ, ೧೯೫೯ ಆಗಸ್ಟ್ ೧೫ರ ಅಧಿಸೂಚನೆಯಂತೆ ಏಕಸ್ವಾಮಯ್ಯ ಬೆಲೆಯನ್ನು ಗಾರ್ಸೊಂದರ ರೂ ೧೨೦ ರಿಂದ ರೂ ೧೩೫ಕ್ಕೆ ಮತ್ತು ಮುಂಬೈ ಉಪ್ಪಿನ ಬೆಲೆಯನ್ನು ರೂ ೧೩೪ರಿಂದ ರೂ ೧೫೦ ಕ್ಕೆ ಏರಿಸಿತು.[೨೫] ೧೮೬೧ರಲ್ಲಿ, ಬೋರ್ಡ್ ಆಫ್ ರೆವಿನ್ಯೂ ಮತ್ತು ಕಲೆಕ್ಟರ್‌ಗಳ ಏಕಸ್ವಾಮ್ಯ ವಿರೋಧಿ ಶಿಫಾರಸುಗಳ ಹೊರತಾಗಿಯೂ ಏಕಸ್ವಾಮ್ಯ ಬೆಲೆಯನ್ನು ಮತ್ತೆ ರೂ. ೧೬೫ಕ್ಕೆ ಏರಿಸಲಾಯಿತು. ಆದರೆ ದ.ಕ. ಜಿಲ್ಲೆಯ ದಕ್ಷಿಣ ಭಾಗದಲ್ಲಿ ಉಪ್ಪಿನ ತಯಾರಿಯ ತೀವ್ರ ಕುಸಿತ ಉತ್ಪಾದನಾ ಪ್ರಾಮಾಣದ ಮೇಲಿನ ನಿಯಂತ್ರಣ ಉಪ್ಪಿನ ಉತ್ಪಾದನೆಗೆ ನೈಸರ್ಗಿಕ ಕಾರಣಗಳಿಂದ ಉಂಟಾದ ಅಡಚಣೆ, ಮಾರುಕಟ್ಟೆಯ ಮೇಲ್ವಿಚಾರಣಾ ಜವಾಬ್ದಾರಿ ಹಾಗೂ ವೆಚ್ಚ, ಕಳ್ಳ ಸಾಗಾಣಿಕೆಯ ಸವಾಲು, ಮುಂಬೈ-ಗೋವಾಗಳಲ್ಲೂ ಉಪ್ಪಿನ ಕೊರತೆ, ದ.ಕ. ಜಿಲ್ಲೆಯಲ್ಲಿ ತೆಂಗು-ತೆಂಗಿನ ಕೃಷಿ ಹೆಚ್ಚು ವ್ಯಾಪಕವಾದದ್ದು - ಈ ಎಲ್ಲಾ ಕಾರಣಗಳಿಂದಾಗಿ ೧೮೭೭ರಲ್ಲಿ ಅನುಷ್ಠಾನಕ್ಕೆ ಬಂದ ಅಬಕಾರಿ ಕಾನೂನಿನನ್ವಯ ದ.ಕ. ಜಿಲ್ಲೆಯಲ್ಲಿ ಉಪ್ಪಿನ ಏಕಸ್ವಾಮ್ಯ ಕೊನೆಗೊಂಡಿತು.[೨೬]

ದ.ಕ. ಜಿಲ್ಲೆಯಲ್ಲಿ ಉಪ್ಪಿನ ಉತ್ಪಾದನೆಯು, ಏಕಸ್ವಾಮ್ಯದ ಎಲ್ಲ ಅನಿಷ್ಟಗಳಲ್ಲದೆ ಪರಂಪರಾಗತ ತಯಾರಿಯ ದೋಷಗಳಿಂದಲೂ ಕೂಡಿತ್ತು. ಈ ವಿಧಾನದಲ್ಲಿ ತಯಾರಾದ ಉಪ್ಪಿಗೆ

ಸಹಜವಾಗಿಯೇ ಬೇಡಿಕೆಯೂ ಕಡಿಮೆಯಾಗಿತ್ತು. ಜಿಲ್ಲೆಯಲ್ಲಿ ಉಪ್ಪಿನ ಸಂಪನ್ಮೂಲದ ಕೊರತೆ ಇರಲಿಲ್ಲ ಅನ್ನುವುದನ್ನು 'ಕೆನರಾ ಜಿಲ್ಲೆಯ ಉಪ್ಪಿನ ಅವಶ್ಯಕತೆಗಳಿಗೆ ಬೇಕಾದಷ್ಟು ಉಪ್ಪನ್ನು ಅದೂ ಉತ್ಕೃಷ್ಟ ದರ್ಜೆಯನ್ನು ಕುಂದಾಪುರ ತಾಲೂಕಿನ ಉತ್ಪಾದನಾ ಕೇಂದ್ರಗಳೇ ಪೂರೈಸುವಷ್ಟು ಸಾಮರ್ಥ್ಯವನ್ನು ಹೊಂದಿವೆ -ಎಂಬ ವರದಿ ಸ್ಪಷ್ಟೀಕರಿಸುತ್ತದೆ.[೨೭] ಉತ್ಪಾದಕರು ಉಪ್ಪಿನ ಗದ್ದೆಗಳನ್ನು ಸರಿಯಾಗಿ ಇಟ್ಟಿಕೊಂಡಲ್ಲಿ, ಮಳೆಗಾಲ ಮುಗಿದ ತಕ್ಷಣ ಉತ್ಪಾದನೆಯನ್ನು ಪ್ರಾರಂಭಿಸಿದಲ್ಲಿ ಮತ್ತು ಹೆಚ್ಚು ವೈಜ್ಞಾನಿಕ ರೀತಿಯಿಂದ ಉತ್ಪಾದಿಸಿದಲ್ಲಿ ಮಾತ್ರ ಇದು ಸಾಧ್ಯ. ಆದರೆ ಇದರ ಬಗ್ಗೆ ಹೆಚ್ಚು ನಿರೀಕ್ಷಿಸುವಂತಿಲ್ಲ;" ಎಂಬ ಉಲ್ಲೇಖ ವಾಸ್ತವಿಕತೆಯನ್ನು ಬೊಟ್ಟುಮಾಡುತ್ತದೆ.ಹಳೆಯ ತಾಂತ್ರಿಕತೆ ಮತ್ತು ಏಕಸ್ವಾಮ್ಯ - ಇವೆರಡೂ ಉಪ್ಪಿನ ಪೂರೈಕೆಯ ಪರಿಸ್ಥಿತಿಯನ್ನು ಬಿಗಡಾಯಿಸಿದವು. ಉಪ್ಪಿನ ಉತ್ಪಾದನೆ ಕುಂಠಿತಗೊಂಡಿತು. ಬೆಲೆ ಏರಿತು. ಹೊರಗಿನಿಂದ ತರಿಸಿದ ಉಪ್ಪನ್ನು ಏರಿಸಿದ ಬೆಲೆಯಲ್ಲಿ ಇಲ್ಲಿ ಹೇರಲಾಯಿತು. ಸರಕಾರೀ ಆದಾಯದ ನಿರೀಕ್ಷೆಯೂ ಹೆಚ್ಚುತ್ತಲೇ ಹೋಯಿತು. ಉಪ್ಪಿನ ಬಳಕೆ ಅನಿವಾರ್ಯವಾದದ್ದರಿಂದ ವಸಾಹತುಶಾಹೀ ಸರಕಾರದ ಉದ್ದೇಶ ಈಡೇರಿ ಅದೊಂದು ಯಶಸ್ವೀ ಕ್ರಮವೆಂಬ ಭ್ರಮೆಯಲ್ಲಿ, ಜನರ ಕಷ್ಟಗಳು ಹೆಚ್ಚಿದ ಬಗ್ಗೆ ಸತತ ವರದಿಗಳು ಬಂದಾಗಲೂ, ಸರಕಾರ ಅದನ್ನು ಬಹಳ ಕಾಲ ಮುಂದುವರಿಸಿತು. ಜಿಲ್ಲೆಯ ಜನರ ಮಟ್ಟಿಗೆ, ಉಪ್ಪಿನ ಏಕಸ್ವಾಮ್ಯ, ವಸಾಹತುಶಾಹೀ ಸರಕಾರದ ಶೋಷಣಾತ್ಮಕ ಕ್ರಮಗಳಲ್ಲೊಂದಾಯಿತು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಪ್ಲೌದೆನೌ, ಉಪ್ಪಿನ ಕಮೀಶನರ್, 'ರಿಪೋರ್ಟ್ ಆನೌ ದಿ ಸಾಲ್ಟ್ ಇನ್ ಬ್ರಿಟಿಷ್ ಇಂಡಿಯಾ ಎಂಡ್ ಮೋರ್ ಎಸ್ಪೆಶಲೀ ಅಪಾನ್ ದಿ ಪ್ರಾಕ್ಟಿಕೆಬಿಲಿಟಿ ಆಫ್ ಸಬ್ಸಿಟ್ಯೂಟಿಂಗ್ ಫಾರ್ ಪ್ರೆಸೆಂಟ್ ಎರೇಂಜ್‌ಮೆಂಟ್ಸ್, ಎ ಸಿಸ್ಟಮ್ ಆಫ್ ಎಕ್ಸೈಜ್ ಇನ್ ದಿ ಪ್ರೆಸಿಡೆನ್ಸಿಸ್ ಆಫ್ ಬೆಂಗಾಲ್ ಎಂಡ್ ಮದ್ರಾಸ್' - ಬ್ರಿಟಿಷ್ ಪಾರ್ಲಿಮೆಂಟಿಗೆ ಸಲ್ಲಿಸಿದ ವರದಿ, ೧೮೫೬, ಪು. ೯೦, ಪ್ಯಾರಾ - ೫೦೮ - ೫೦೯

೨. ಪ್ರೊಸೀಡಿಂಗ್ಸ್ ಆಫ್ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ೨೫-೭-೧೮೦೫, ಸಂಪುಟ 411 'e' ಪು. ೫೩೯೪

೩. ಎಫ್. ಎಸ್. ಮಾಲ್ಟ್‌ಬೀ, ಕೆನರಾದ ಕಲೆಕ್ಟರ್, ಬೋರ್ಡ್ ಆಫ್ ರೆವಿನ್ಯೂದ ಸೆಕ್ರೆಟರಿ, ಡಬ್ಲ್ಯೂ. ಹೆಚ್. ಬೈಲಿಗೆ ಸಲ್ಲಿಸಿದ ವರದಿ, ಎಪೆಂಡಿಕ್ಸ್ ಟು ದಿ ರಿಪೋರ್ಟ್ ಆಫ್ ದಿ ಕಮಿಶನರ್, ಪು. ೨೮೧

೪. ಅದೇ, ಪು. ೧೦೬-೧೦೭, ಪ್ಯಾರಾ ೧೦೧-೧೦೩

೫. ಉಪ್ಪಿನ ಚೌಕಗಳನ್ನು ಹೊಂದಿದ್ದೂ, ತಯಾರಿಸಲು ನಿರಾಕರಿಸಿದಲ್ಲಿ, ಅಥವಾ ನಿಶ್ಚಿತ ಪ್ರಮಾಣಕ್ಕಿಂತ ತುಂಬಾ ಕಡಿಮೆ ಉತ್ಪಾದಿಸಿದಲ್ಲಿ, ಅಂತಹವುಗಳನ್ನು ಸರಕಾರ ವಶಪಡಿಸಿಕೊಂಡು ಬೇರೆಯವರಿಗೆ ಮಾರಾಟ ಮಾಡುತ್ತಿತ್ತು. ಆ ಅರ್ಥದಲ್ಲಿ ಉಪ್ಪಿನ ಚೌಕವೊಂದು ನಿಜವಾದ ಆಸ್ತಿಯೇ ಆಗಿತ್ತು, ಅದೇ, ಪ್ಯಾರಾ ೧೦೦

೬. ಪ್ರೋಸೀಡಿಂಗ್ಸ್ ಆಫ್ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ೧೭-೨-೧೮೦೬, ಸಂಪುಟ. ೪೨೨ ಬಿ, ಪು. ೧೧೪೫

೭. ಕೆನರಾದ ಕಲೆಕ್ಟರ್ ಬೋರ್ಡ್ ಆಫ್ ರೆವಿನ್ಯೂಗೆ ಬರೆದ ಪತ್ರ, ೩೦-೧೧-೧೮೦೩, ಎಪೆಂಡಿಕ್ಸ್ ಟು ದಿ ರಿಪೋರ್ಟ್ ಆಫ್ ದಿ ಕಮೀಶನರ್, ಪು. ೩೦೯, ಪ್ಯಾರಾ ೩-೪

೮. ಅದೇ, ಪ್ಯಾರಾ ೬

೯. ಮೇಲೆ ಹೇಳಿದ ಪ್ಲೌದೆನನ ವರದಿ, ಪು. ೯೧, ಪ್ಯಾರಾ ೫೧೪

೧೦. ಅದೇ, ಪು. ೯೧-೯೩

೧೧. ಬಂಗಾಳದಲ್ಲಿ ಸರಕಾರದಿಂದ ನಿಯುಕ್ತರಾದವರೇ ಉಪ್ಪನ್ನು ತಯಾರಿಸುತ್ತಿದ್ದು, ಉತ್ಪಾದನಾ ವೆಚ್ಚಕ್ಕೆ ತೆರಿಗೆ ಸೇರಿಸಿ ಅದನ್ನು ಮಾರುಕಟ್ಟೆಗೆ ಬಿಡುಗಡೆಯಾಗುತ್ತಿತ್ತು. ಇಂಗ್ಲೆಂಡ್ ಅಥವಾ ಬೇರೆ ದೇಶಗಳಿಂದ ಬಂಗಾಳದಲ್ಲಿ ಉಪ್ಪನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಕಂಪೆನಿ ಸರಕಾರವು ಇಲ್ಲಿ ತಯಾರಾದ ಮತ್ತು ಆಮದು ಮಾಡಿಕೊಳ್ಳುತ್ತಿದ್ದ ಉಪ್ಪಿನ ಬೆಲೆಯಲ್ಲಿ ಸಮತೋಲನ ಕಾಯ್ದುಕೊಳ್ಳಲು ಯತ್ನಿಸಿದರೆ ಬ್ರಿಟಿಷ್ ವ್ಯಾಪಾರಿಗಳು ಬಂಗಾಳದ ಉಪ್ಪಿನ ಏರಿಕೆಯ ಬೆಲೆ ಲಾಭ ಪಡೆದು ಇಂಗ್ಲೆಂಡಿನ ಉಪ್ಪನ್ನು ಬಂಗಾಳದಲ್ಲಿ ತುಂಬಿಸಲು ಯತ್ನಿಸುತ್ತಿದ್ದರು. ಕಂಪೆನಿ ಸರಕಾರ ಮತ್ತು ಇಂಗ್ಲೆಂಡಿನ ವ್ಯಾಪಾರಿಗಳ ನಡುವಿನ ಸ್ಪರ್ಧೆಯಿಂದ ಜನರಿಗೆ ಲಾಭವಾಗಲಿಲ್ಲ, ಬದಲು ಉಪ್ಪಿನ ಕಳ್ಳ ಸಾಗಾಣಿಕೆಯ ಸಂದೇಹದಿಂದ ಜನರು ಓಡಾಟಕ್ಕೆ ಬಳಸುತ್ತಿದ್ದ ವಾಹನಗಳನ್ನು ತಪಾಸಿಸುತ್ತಿದ್ದ ಅಧಿಕಾರಿಗಳ ಕ್ರಮಗಳ ವಿರುದ್ಧ ಸರಕಾರಕ್ಕೆ ಅನೇಕ ದೂರುಗಳು ಬರುತ್ತಿದ್ದುವು. [ರೋಮೇಶ್ ದತ್., (೧೮೫೩), **ದಿ ಇಕನಾಮಿಕ್ ಹಿಸ್ಟರಿ ಆಫ್ ಇಂಡಿಯಾ**, ಎರಡನೇ ಸಂಪುಟ; ಪು. ೧೦೪-೧೧೦ ಕಾಮನ್ಸ್ ರಿಪೋರ್ಟ್] ಆದರೂ ಉಪ್ಪಿನ ತೆರಿಗೆಯ ವಿರುದ್ಧದ ಜನರ ಬೇಡಿಕೆಗಳು ನಿಷ್ಫಲವಾದುವು.

೧೨. ಎಸ್. ಶ್ರೀನಿವಾಸ ರಾಘವೈಯ್ಯಂಗಾರ್, ಮೆಮೊರಾಂಡಮ್ ಆನ್ ದಿ ಪ್ರೋಗ್ರೆಸ್ ಆಫ್ ದಿ ಮದ್ರಾಸ್ ಪ್ರೆಸಿಡೆನ್ಸಿ ಡ್ಯೂರಿಂಗ್ ದಿ ಲಾಸ್ಟ್ ಫಾರ್ಟಿ ಇಯರ್ಸ್, ಪು. ೧೧೭-೧೧೮.

೧೩. ಬಿ.ಸಿ.ರೇ, 'ಬ್ರಿಟಿಷ್ ಸಾಲ್ಟ್ ಮೊನೊಪಲಿ ಇನ್ ಒರಿಸ್ಸಾ, ೧೮೦೩-೧೮೧೭, ಪ್ರೊಸೀಡಿಂಗ್ಸ್ ಆಫ್ ದಿ ಥರ್ಟಿಥರ್ಡ್ ಸೆಶನ್ ಆಫ್ ದಿ ಇಂಡಿಯನ್ ಹಿಸ್ಟರಿ ಕಾಂಗ್ರೆಸ್, ಮುಝಾಫರ್ ಪುರ್, ೧೯೭೨.

೧೪. ಎಸ್. ಶ್ರೀನಿವಾಸ ರಾಘವೈಯ್ಯಂಗಾರ್., ಮೇಲೆ ಹೇಳಿದ ಕೃತಿ, ಪು. ೧೧೬

೧೫. ಮೇಲೆ ಉಲ್ಲೇಖಿಸಿದ ಉಪ್ಪಿನ ಕುರಿತ ವರದಿ, ಪು. ೧೬೫, ಪ್ಯಾರಾ ೪೦೨
೧೬. ಎಪೆಂಡಿಕ್ಸ್ ಟು ದಿ ರಿಪೋರ್ಟ್ ಆಫ್ ದಿ ಕಮಿಶನರ್, ಪು. ೪೧೭ ಪ್ಯಾರಾ ೯
೧೭. ಅದೇ, ಪು. ೪೧೮, ಪ್ಯಾರಾ ೧೧-೧೨
೧೮. ಎಫ್. ಎನ್. ಮಾಲ್ಟ್ಬೀ, ಕೆನರಾದ ಕಲೆಕ್ಟರ್, ಬೋರ್ಡ್ ಆಫ್ ರೆವಿನ್ಯೂಗೆ ಬರೆದ ೩-೯-೧೮೫೧ ರ ಪತ್ರ, ಎಪೆಂಡಿಕ್ಸ್ ಟು ದಿ ರಿಪೋರ್ಟ್, ಪು. ೩೨೪
೧೯. ಅದೇ, ಪು. ೩೨೫, ಪ್ಯಾರಾ ೩೬
೨೦. ಅದೇ, ಪು. ೩೩೦, ಪ್ಯಾರಾ ೩೫, ಮಿನಟ್ಸ್ ಆಫ್ ಕನ್ಸಲ್ಟೇಶನ್ಸ್ ತಾ ೨-೪-೧೮೫೨
೨೧. ಪ್ರೋಸೀಡಿಂಗ್ಸ್ ಆಫ್ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ೨೬-೬-೧೮೬೧, ನಂ. ೩೩೫೧
೨೨. ಸರಕಾರೀ ಆದೇಶ ತಾ. ೧-೫-೧೮೬೫, ನಂ. ೮೮೯
೨೩. ಎಪೆಂಡಿಕ್ಸ್ ಟು ದಿ ರಿಪೋರ್ಟ್, ಪುಟ. ೨೮೨
೨೪. ಪ್ರೊಸೀಡಿಂಗ್ಸ್ ಆಫ್ ಮದ್ರಾಸ್ ಬೋರ್ಡ್ ಆಫ್ ರೆವಿನ್ಯೂ, ೪-೮-೧೮೫೮ ಸಂಪುಟ ೭, ಪು. ೯೬೪
೨೫. ಸೆಟ್ಲ್‌ಮೆಂಟ್ ರಿಪೋರ್ಟ್ ಆಫ್ ಸೌತ್ ಕೆನರಾ ಫಾರ್ ಫಸ್ಲಿ ೧೨೬೯ (೧೮೫೯-೬೦), ಪು. ೪, ಪ್ಯಾರಾ ೨೫
೨೬. ಸಿ. ಅಣ್ಣಾದುರೈ ಅಯ್ಯರ್., ದಿ ರೆವಿನ್ಯೂ ಕೋಡ್ ಕಂಟೈನಿಂಗ್ ಆಲ್ ದಿ ಅನ್‌ರಿಪೀಲ್ಡ್ ರೆವಿನ್ಯೂ ರೆಗ್ಯುಲೇಶನ್ಸ್ ಎಂಡ್ ಎಕ್ಸ್ ಎಪ್ಲಿಕೇಬಲ್ ಟು ದ ಮದ್ರಾಸ್ ಪ್ರೆಸಿಡೆನ್ಸಿ ಫ್ರಮ್ ೧೮೦೨ ಟು ಸೆಪ್ಟೆಂಬರ್ ೧೮೪೪, ಪು. ೬೬
೨೭. ಜೆ. ಜೆ. ಎಲ್. ರಾಟನ್., (೧೮೭೩), ದಿ ರಿಪೋರ್ಟ್ ಆನ್ ದಿ ಮ್ಯಾನುಫ್ಯಾಕ್ಚರ್ ಆಫ್ ಸಾಲ್ಟ್ ಇನ್ ಸೌತ್ ಕೆನರಾ, ಪು. ೩೧, ಪ್ಯಾರಾ ೧೩೩.

ಎಸ್. ಎಲ್. ಶ್ರೀನಿವಾಸ ಮೂರ್ತಿ*

# ಮೊಗ್ಲಿಂಗನಿಗೆ ನೆರವಾದ ಕೆಸಮೇಜರ್ ಯಾರು?

ಕನ್ನಡ ನಾಡು - ನುಡಿಗಳಿಗೆ ಸೇವೆ ಸಲ್ಲಿಸಿದ ಪ್ರಮುಖ ಪಾಶ್ಚಾತ್ಯ ವಿದ್ವಾಂಸರಲ್ಲಿ ಹರ್ಮನ್ ಮೊಗ್ಲಿಂಗನೂ ಒಬ್ಬ. ಕನ್ನಡದ ಮೊದಲ ಮೂರು ಪತ್ರಿಕೆಗಳಾದ 'ಮಂಗಳೂರ ಸಮಾಚಾರ', 'ಕನ್ನಡ ಸಮಾಚಾರ' (೧೮೪೩-೪೪) ಹಾಗೂ 'ಕನ್ನಡ ಸುವಾರ್ತಿಕ (೧೮೫೭) ಗಳ ಸಂಪಾದನೆ', ಕೊಡಗಿನ ಇತಿಹಾಸವನ್ನು ಕುರಿತಾದ 'ರಾಜೇಂದ್ರನಾಮೆ'ಯ ಪ್ರಕಟಣೆ, *Coorg Memories* ಎಂಬ ವಿವಿಧ ವಿಷಯಕ ಲೇಖನಗಳ ಸಂಗ್ರಹ ಇವೆಲ್ಲಾ ಮೊಗ್ಲಿಂಗನ ಪ್ರಮುಖ ಸಾಧನೆಗಳಲ್ಲಿ ಕೆಲವು. ಇವೆಲ್ಲಕ್ಕಿಂತ ಮಹತ್ವದ್ದೆಂದರೆ 'ಬಿಬ್ಲಿಯಾಥೆಕಾ ಕರ್ಣಾಟಿಕ' ಎಂಬ ಮಾಲಿಕೆಯಲ್ಲಿ ಜೈಮಿನಿ ಭಾರತ (೧೮೪೮), ತೊರವೆ ರಾಮಾಯಣ(೧೮೪೯), ಇತ್ಯಾದಿಗಳ ಕಾವ್ಯಭಾಗಗಳನ್ನು, ದಾಸರ ಪದಗಳು (೧೮೫೦), ಹರಿಭಕ್ತಿಸಾರ, ಕುಮಾರವ್ಯಾಸ ಭಾರತ, ಬಸವಪುರಾಣ, ಚನ್ನಬಸವಪುರಾಣ (೧೮೫೮) ಮುಂತಾದ ಕೃತಿಗಳನ್ನು ಪರಿಷ್ಕರಿಸಿ ಮುದ್ರಿಸಿದ್ದು. ಈ ಮಾಲೆಯ ಪ್ರಕಟಣೆಗಾಗಿ ಮೊಗ್ಲಿಂಗನಿಗೆ ಜರ್ಮನಿಯ ತೀಬಿಂಜನ್ ವಿಶ್ವವಿದ್ಯಾಲಯದ ಗೌರವ ಡಾಕ್ಟೊರೇಟ್ ಪದವಿಯನ್ನು ತಂದುಕೊಟ್ಟಿತು.

ಮೊಗ್ಲಿಂಗನ ಈ ಎಲ್ಲ ಸಾಧನೆಗಳಿಗೆ ಪ್ರೇರಕ ಶಕ್ತಿಯಾಗಿದ್ದವನು ಮೈಸೂರಿನ ಮಾಜಿ ರೆಸಿಡೆಂಟನಾಗಿದ್ದ ಕೆಸಮೇಜರ್ ಎಂದು ಈವರೆಗೆ ನಂಬಲಾಗಿದೆ. ಆದರೆ ರೆಸಿಡೆಂಟನಾಗಿದ್ದ ಕೇಸಮೇಜರನಿಗೂ, ಮೊಗ್ಲಿಂಗನಿಗೂ ಯಾವುದೇ ಸಂಬಂಧವಿರಲಿಲ್ಲ, ಆತ ಬೇರೆಯವನೇ ಆದ ಇನ್ನೊಬ್ಬ ಕೆಸಮೇಜರ್ ಎಂಬ ಅಂಶವನ್ನು ಪ್ರತಿಪಾದಿಸುವುದು ಪ್ರಸ್ತುತ ಪ್ರಬಂಧದ ಉದ್ದೇಶವಾಗಿದೆ.

ರೆಸಿಡೆಂಟನಾಗಿದ್ದ ಕೆಸಮೇಜರನೇ ಮೊಗ್ಲಿಂಗನಿಗೆ ನೆರವಾದವ ಎಂದು ಮೊದಲಿಗೆ ಉಲ್ಲೇಖಿಸಿದವರು ಬಿ. ಎಲ್. ರೈಸರು. ಅವರು ತಮ್ಮ ಗೆಜೆಟಿಯರ್‌ನಲ್ಲಿ *"Before 1850, the publication had been commenced, under the superintendence of the Revs. Dr. Moegling and weigle of the Basel mission at Mangalore, and at the expense of Mr. Casamaijor, former Resident of Mysore, of a series of works to form a Bibliotheca Carnatica"* ಎಂದಿದ್ದಾರೆ.[೧] ಐ. ಮಾ. ಮುತ್ತಣ್ಣನವರು ತಮ್ಮ ಕೃತಿಯಲ್ಲಿ ಜಾರ್ಜ್ ಕೆಸ ಮೇಜರ್ ಎಂಬ ವ್ಯಕ್ತಿಯನ್ನು ಉಲ್ಲೇಖಿಸಿದ್ದಾರಾದರೂ[೨] ಆತ ಯಾರು, ಆತನಿಗೂ ಮೊಗ್ಲಿಂಗನಿಗೂ ಏನಾದರೂ ಸಂಬಂಧ ವಿತ್ತೇ ಎಂಬುದನ್ನು ಸೂಚಿಸಿಲ್ಲ. ಡಾ|| ಶ್ರೀನಿವಾಸ ಹಾವನೂರರೂ ತಮ್ಮ ನಿಬಂಧದ ಮೊದಲ ಮುದ್ರಣದಲ್ಲಿ ರೈಸರ ಹೇಳಿಕೆಯನ್ನೇ ಒಪ್ಪಿ ಉದ್ಧರಿಸಿದ್ದಾರೆ.[೩] ಇತ್ತೀಚೆಗೆ ಅವರು ಬಾಸೆಲ್‌ನ ಪತ್ರಾಗಾರದಲ್ಲಿದ್ದ ಕೆಸಮೇಜರ್-ಮೊಗ್ಲಿಂಗರ ಕಾಗದ ಪತ್ರಗಳನ್ನು ಹೊರತೆಗೆದು ವಿಶ್ಲೇಷಿಸಿದ್ದಾರಾದರೂ[೪] ಇಲ್ಲಿ ಉಕ್ತವಾಗಿರುವ ಕೆಸಮೇಜರ್ ೧೮೨೭ರಿಂದ ೧೮೩೨ರ ವರೆಗೆ ಮೈಸೂರಿನ ರೆಸಿಡೆಂಟನಾಗಿದ್ದವನೇ ಎಂಬ ಪೂರ್ವ ನಿರ್ಧರಿತ ಅಂಶವನ್ನು ಪ್ರಶ್ನಿಸಹೋಗಿಲ್ಲ.

ಆದರೆ ಮೇಲ್ಕಂಡ ಪತ್ರಗಳ ಸೂಕ್ಷ್ಮ ಅಧ್ಯಯನದಿಂದ[೫] ಈ ಕೆಸಮೇಜರ್ ರೆಸಿಡೆಂಟನಿಗಿಂತ ಭಿನ್ನ ಎಂಬುದನ್ನು ಪ್ರತಿಪಾದಿಸಲು ಸಾಧ್ಯವಿದೆ. ಮೊದಲನೆಯದಾಗಿ ಪತ್ರದ ಕಡೆಯಲ್ಲಿರುವ ಸಹಿಯನ್ನು ಗಮನಿಸಿದರೆ ಹೆಸರಿನ ಹಿಂದೆ 'ಜಿ' ಎಂಬ ಆದ್ಯಕ್ಷರವಿರುವುದನ್ನು ಸ್ಪಷ್ಟವಾಗಿ ಕಾಣಬಹುದು ಆದರೆ ರೆಸಿಡೆಂಟನ ಪೂರ್ಣ ಹೆಸರು ಜೇಮ್ಸ್ ಆರ್ಕಿಬಾಲ್ಡ್ ಕೆಸಮೇಜರ್ ಎಂದು. ಈತನ ಬಗ್ಗೆ ಸಿ. ಹಯವದನ ರಾಯರು ನೀಡಿರುವ ಮಾಹಿತಿಯನ್ನು ಹೀಗೆ ಸಂಗ್ರಹಿಸಬಹುದು. "೧೮೦೨ರಲ್ಲಿ ರೈಟರನಾಗಿ ಈಸ್ಟ್ ಇಂಡಿಯಾ ಕಂಪನಿಯ ಸೇವೆಗೆ ಸೇರಿದ ಈತ ಮರುವರ್ಷ ಬೋರ್ಡ್ ಆಫ್ ಟ್ರೇಡ್‌ನ ಕಾರ್ಯದರ್ಶಿಯ ಸಹಾಯಕನಾಗಿ ನೇಮಕಗೊಂಡ. ೧೮೦೬ರಲ್ಲಿ ಕಂದಾಯ ಮಂಡಲಿಯ ಡೆಪ್ಯೂಟಿ ಸೆಕ್ರೆಟರಿಯಾದ. ೧೮೦೯ರಲ್ಲಿ ಶ್ರೀರಂಗಪಟ್ಟಣದ ಮ್ಯಾಜಿಸ್ಟ್ರೇಟ್ ಹಾಗೂ ಕಲೆಕ್ಟರನಾಗಿ ದುಡಿದು ೧೮೧೮ರಲ್ಲಿ ರೆಸಿಡೆಂಟನ ಸಹಾಯಕನೆನಿಸಿದ. ೧೮೨೭ರಿಂದ ೧೮೩೨ರವರೆಗೆ ಮೈಸೂರಿನ ರೆಸಿಡೆಂಟನಾಗಿದ್ದ. ೧೮೩೨ರಿಂದ ೧೮೩೪ರ ವರೆಗೆ ವಿವಿಧ ಹುದ್ದೆಗಳನ್ನು ನಿರ್ವಹಿಸಿ ೧೮೩೪ರಲ್ಲಿ ತಿರುವಾಂಕೂರು ಹಾಗೂ ಕೊಚ್ಚಿನ್ನಿನ ರೆಸಿಡೆಂಟನಾದ. ೧೮೩೬ರಲ್ಲಿ ಸ್ವದೇಶಕ್ಕೆ ಹಿಂದಿರುಗಿ ೧೮೬೩ರಲ್ಲಿ ನಿಧನ ಹೊಂದಿದ.[೬]

ಮುಮ್ಮಡಿ ಕೃಷ್ಣರಾಜ ಒಡೆಯರ್‌ರ ಪದಚ್ಯುತಿ, ಕೊಡಗಿನ ಅರಸನಾದ ಎರಡನೇ ವೀರರಾಜೇಂದ್ರನ ರಾಜ್ಯಗ್ರಹಣ ಮುಂತಾದ ಪ್ರಮುಖ ರಾಜಕೀಯ ಸ್ಥಿತ್ಯಂತರದ ಘಟನೆಗಳಲ್ಲಿ ಗಣನೀಯ ಪಾತ್ರ ವಹಿಸಿದ್ದ ಈತ ಸಾಂಸ್ಕೃತಿಕ ವಿಷಯಗಳ ಬಗೆಗೆ ಅಷ್ಟೇನೂ ಆಸಕ್ತನಾದಂತೆ ತೋರುವುದಿಲ್ಲ. ಬ.ನ. ಸುಂದರರಾಯರೆನ್ನುವಂತೆ

* ಉಪನ್ಯಾಸಕ, ಕನ್ನಡ ವಿಭಾಗ, ವಿಜಯ ಪದವಿ ಪೂರ್ವ ಕಾಲೇಜು, ಆರ್. ವಿ. ರಸ್ತೆ, ಬೆಂಗಳೂರು - ೫೬೦ ೦೦೪

: (ಹಿಂದಿನ ರೆಸಿಡೆಂಟರಾಗಿದ್ದ) ಕೋಲ್‌ರವರು ಮಹಾರಾಜರ (ಮುಮ್ಮಡಿ ಕೃಷ್ಣರಾಜರ) ವಿಶ್ವಾಸಗಳಿಸಿ ಮಹಾರಾಜರೊಂದಿಗೆ ಮೈತ್ರಿಯಿಂದಿರುತ್ತಿದ್ದರು. ಆದರೆ ಕೆಸಮೇಜರ್ ತುಂಬಾ ಬಿಗುಮಾನದಿಂದಿರುತ್ತಿದ್ದು ಅಷ್ಟೇನೂ ಜನಾನುರಾಗ ಗಳಿಸಿರಲಿಲ್ಲ.[೭]

ಮೊಗ್ಲಿಂಗನ ಜೀವನ ಚರಿತ್ರೆಯನ್ನು ರಚಿಸಿರುವ ಹರ್ಮನ್ ಗುಂಡರ್ಟ್‌ನು ತನ್ನ ಕೃತಿಯಲ್ಲಿ,[೮] ಕೆಸಮೇಜರ್‌ನ ಬಗೆಗೆ ಕೆಲವು ಮಾಹಿತಿಗಳನ್ನು ನೀಡಿದ್ದು ಅದಕ್ಕೂ ರೆಸಿಡೆಂಟ್‌ನ ವಿವರಗಳಿಗೂ ತಾಳೆಯಾಗುವುದಿಲ್ಲ; ಮೊದಲನೆಯದಾಗಿ ಮೊಗ್ಲಿಂಗನಿಗೆ ಕೆಸಮೇಜರ್‌ನ ಪರಿಚಯವಾದದ್ದು ೧೮೪೮ರ ಸುಮಾರಿಗೆ ಎಂದು ಗುಂಡರ್ಟ್ ದಾಖಲಿಸಿದ್ದಾನೆ.[೯] ಅಷ್ಟೇಕೆ, ಮೊಗ್ಲಿಂಗನೇ ೧೮೪೯ರ ಆರಂಭದಲ್ಲಿ ತನ್ನ ಸಹೋದ್ಯೋಗಿಯಾದ ಬಾರ್ಥನಿಗೆ ಬರೆದ ಪತ್ರದಲ್ಲಿ ``*For some time my studies have been taking a new direction. Mr. Casamajor is giving the money for lithographing the Canareese literature, Starting from oldest times, in a small edition of about one hundred copies. Therefore we have started to search the remnants of the Canareese Spiritual former ages*''[೧೦] ಎಂದಿದ್ದಾನೆ.

ಆದರೆ ಈ ಮೊದಲೇ ಗಮನಿಸಿದಂತೆ ರೆಸಿಡಂಟನಾಗಿದ್ದ ಕೆಸಮೇಜರ್ ೧೮೪೯ರ ವೇಳೆಗೆ ಸ್ವದೇಶಕ್ಕೆ ಹಿಂದಿರುಗಿದ್ದ. ಹಾಗಾಗಿ ಈತ ರೆಸಿಡೆಂಟನಿಗಿಂತ ಭಿನ್ನನಾದ ಇನ್ನೊಬ್ಬ ವ್ಯಕ್ತಿ ಎಂಬ ಸಂಶಯಕ್ಕೆ ಎಡೆಮಾಡಿಕೊಡುತ್ತದೆ.

ಗುಂಡರ್ಟನ ಕೃತಿಯನ್ನು ಸಂಪಾದಿಸಿರುವ ಆಲ್ಬರ್ಟ್ ಫ್ರೆನ್ಜ್ "ಜೆ. ಕೆಸಮೇಜರ್ ಎಂಬ ನಿವೃತ್ತ ಆಂಗ್ಲ ನ್ಯಾಯಾಧೀಶ ಕೇಟಿಯಲ್ಲಿ ವಾಸವಾಗಿದ್ದ, ಈತ ಬಾಸೆಲ್ ಮಿಷನ್ನಿನ ಚಟುವಟಿಕೆಗಳಲ್ಲಿ ಆಸಕ್ತನಾಗಿದ್ದ" ಎಂಬ ಸೂಚನೆಯನ್ನು ಕೊಟ್ಟಿದ್ದಾರೆ.[೧೧] ಈ ಎಳೆಯನ್ನು ಹಿಡಿದು ಶೋಧನೆಯನ್ನು ಮುಂದುವರೆಸಿದಾಗ ಉದಕಮಂಡಲಕ್ಕೆ ಮೂರು ಮೈಲಿ ದೂರದಲ್ಲಿರುವ ಕೇಟಿ ಎಂಬಲ್ಲಿದ್ದ ಜೆ. ಕೇಸಮೇಜರನ ಬಗೆಗೆ ಈ ಕೆಳಕಂಡ ಮಾಹಿತಿಗಳು ಲಭ್ಯವಾದವು.

"೧೮೪೫ರಲ್ಲಿ ಮದ್ರಾಸಿನ ಉಚ್ಚ ನ್ಯಾಯಾಲಯದ ನ್ಯಾಯಾಧೀಶನ ಪದವಿಗೆ ರಾಜೀನಾಮೆಯನ್ನಿತ್ತ ಜಾರ್ಜ್. ಜೆ. ಕೆಸಮೇಜರ್ ಕೇಟಿಯಲ್ಲಿದ್ದ ಲಾರ್ಡ್ ಎಲ್‌ಫಿಲ್‌ಸ್ಟೋನನ ಆಸ್ತಿಯನ್ನು ೧೫,೩೦೦ ರೂಗಳಿಗೆ ಕೊಂಡು ಅಲ್ಲಿಯೇ ನೆಲಸಿದ. ಕ್ರೈಸ್ತಧರ್ಮಪ್ರಚಾರ ಹಾಗೂ ಶಿಕ್ಷಣ ಕ್ಷೇತ್ರಗಳಲ್ಲಿ ತೀವ್ರನಾಗಿ ಆಸಕ್ತನಾಗಿದ್ದ ಈತ ಬಡಗರಿಗೆಂದೇ ಒಂದು ಶಾಲೆಯನ್ನು ತೆರೆದನಲ್ಲದೆ ಬೈಬಲ್ಲನ್ನು ಅನುವಾದಿಸುವ ಸಲುವಾಗಿ ಇಳಿ ವಯಸ್ಸಿನಲ್ಲೂ ಕನ್ನಡವನ್ನು ಕಲಿಯಲು ಮುಂದಾಗಿದ್ದ (೧೮೪೮ ರಲ್ಲಿ ಕೆಸಮೇಜರ್ ಮೊದಲು ಮೊಗ್ಲಿಂಗನನ್ನು ಭೇಟಿಯಾದಾಗ ಆತನಿಗೆ ೫೫ ವರ್ಷವಾಗಿತ್ತು ಎಂಬ ಅಂಶ ಉಲ್ಲೇಖಿತ ವಾಗಿರುವುದರಿಂದ ಆತ ೧೭೯೩ರ ಸುಮಾರಿಗೆ ಹುಟ್ಟಿರಬೇಕು) ೧೮೪೯ ರ ಮೇ ೨೯ರಂದು ಆತ ನಿಧನನಾಗುವ ಮುನ್ನ ತನ್ನ ಆಸಕ್ತಿಯ ಬಹುಪಾಲನ್ನು ಬಾಸೆಲ್ ಮಿಷನ್ನಿಗೆ ಬಿಟ್ಟುಕೊಟ್ಟು ತೀರಿಕೊಂಡ.[೧೨]

ಕೆಸಮೇಜರನಿಂದ ಮೊಗ್ಲಿಂಗನಿಗೆ ಬಂದಿರುವ ಪತ್ರದಲ್ಲಿ[೧೩] ಆತ ಕೇಟಿಯಿಂದ ಪತ್ರಬರೆದಿರುವುದು ಸ್ಪಷ್ಟವಾಗಿ ತೋರುತ್ತದೆ. ಆದ್ದರಿಂದ ಈ ಜಾರ್ಜ್. ಜೆ. ಕೆಸಮೇಜರನೇ ಮೊಗ್ಲಿಂಗನಿಗೆ ನೆರವಾದವನು ಎಂಬುದು ಸ್ಪಷ್ಟ. ಅಷ್ಟೇ ಅಲ್ಲದೆ ಆತ ನಿಧನನಾದ ದಿನ ತನ್ನ ಹುಟ್ಟುಹಬ್ಬದ ದಿನವಾಗಿತ್ತೆಂದು ಮೊಗ್ಲಿಂಗ್ ಉಲ್ಲೇಖಿಸಿದ್ದು.[೧೪] ಇದು ಗ್ಯಾಸೆಟಿಯರ್‌ನಲ್ಲಿ ನಮೂದಾದ ದಿನಾಂಕಕ್ಕೆ ಸರಿಹೊಂದುತ್ತದೆ.

ರೈಸ್ ಮತ್ತು ಅವರ ನಂತರದ ಇತಿಹಾಸಕಾರರು 'ಕೆಸಮೇಜರ್' ಎಂಬುದು ಒಬ್ಬ ವ್ಯಕ್ತಿಯ ಹೆಸರು ಎಂದು ಪರಿಗಣಿಸಿದ್ದು ಅವರ ತಪ್ಪು ನಿರ್ಣಯಕ್ಕೆ ಕಾರಣವಾಗಿದೆ. ಆದರೆ ಇದೊಂದು ಕುಟುಂಬನಾಮವಾಗಿದ್ದು *Brook Mans park newsletter* ಈ ಬಗ್ಗೆ ಹೀಗೆ ಹೇಳಿದೆ -"ಕೆಸಾಮೇಜರ್ ಎಂಬ ಕುಟುಂಬವು ಸ್ಪೈನ್‌ನ ಮೂಲದ್ದಾಗಿದ್ದು ಈ ವಂಶದವರು ತಾವು

ಕ್ಯಾಡಿಜ್‌ನ ಅರಸು ಮನೆತನದವರೆಂದು ಹೇಳಿಕೊಳ್ಳುತ್ತಾರೆ. ಇವರ ಒಂದು ಗುಂಪು ೧೮ನೇ ಶತಮಾನದಲ್ಲಿ ಬ್ರಿಸ್ಟಲ್‌ನಲ್ಲಿ ನೆಲೆಸಿ ಆಂಗ್ಲ ಕೆಸಮೇಜರ್ ಶಾಖೆ ಬೆಳೆಯಲು ಅನುವು ಮಾಡಿ ಕೊಟ್ಟಿತು. ಇವರಲ್ಲಿ ಪಾಟೆರೆಲ್ಸ್‌ನಲ್ಲಿ ವಾಸವಾಗಿದ್ದ ಜಸ್ಟೀನಿಯನ್ ಕೆಸಮೇಜರ್ (೧೭೪೭-೧೮೨೦) ಎಂಬಾತನಿಗೆ ಜಾನ್ ಮತ್ತು ಜಾರ್ಜ್ ಜೇಮ್ಸ್ ಎಂಬ ಇಬ್ಬರು ಮಕ್ಕಳಿದ್ದರು. ಅವರಿಬ್ಬರೂ ಭಾರತಕ್ಕೆ ಹೋಗಿ ಅಲ್ಲಿಯೇ ಅವಿವಾಹಿತರಾಗಿ ಮಡಿದಂತೆ ತೋರುತ್ತದೆ. ಅದೇ ಊರಿನಲ್ಲಿಯೇ ಜೇಮ್ಸ್ ಆರ್ಕಿಬಾಲ್ಡ್ ಕೆಸಮೇಜರ್ ಎಂಬ ಕೆಸಮೇಜರ್ ವಂಶದ ಮತ್ತೊಂದು ಶಾಖೆಯ ವ್ಯಕ್ತಿ ತನ್ನ ಇಬ್ಬರು ಹೆಣ್ಣುಮಕ್ಕಳೊಂದಿಗೆ ವಾಸಿಸುತ್ತಿದ್ದದ್ದು ತಿಳಿದು ಬರುತ್ತದೆ.[೧೫]

ಹೀಗಾಗಿ ಜಾರ್ಜ್ ಜೇಮ್ಸ್ ಹಾಗೂ ರೆಸಿಡೆಂಟನಾದ ಜೇಮ್ಸ್ ಆರ್ಕಿಬಾಲ್ಡ್ ಇಬ್ಬರೂ ಕೆಸಮೇಜರ್ ವಂಶಕ್ಕೆ ಸೇರಿದವರಾದರೂ ಮೊಗ್ಲಿಂಗನಿಗೆ ನೆರವಾದವನು ಜಾರ್ಜ್. ಜೆ. ಕೆಸಮೇಜರನೇ ವಿನಃ ರೆಸಿಡೆಂಟನಾಗಿದ್ದ ಆರ್ಕಿಬಾಲ್ಡ್ ಅಲ್ಲ ಎಂಬ ಅಂಶ ಸಿದ್ಧವಾಗುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Rice B.L., Mysore, *A Gazetter* Vol I, P - 504.
೨. ಮುತ್ತಣ್ಣ ಐ.ಮಾ., (೧೯೬೯), ***ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ,*** ಪು. ೩೪೧.
೩ ಹಾವನೂರ ಶ್ರೀನಿವಾಸ., (೧೯೭೪), ***ಹೊಸಗನ್ನಡದ ಅರುಣೋದಯ,*** (ಮೊ.ಮು) ಪು. ೧೧೧.
೪. ಹಾವನೂರ ಶ್ರೀನಿವಾಸ., (೨೦೦೦), ಪೂರ್ವೋಕ್ತ, ಎರಡನೇ ಪರಿಷ್ಕೃತ ಮುದ್ರಣ, ಪು. ೫೯೬-೫೯೯.
೫. ಈ ಪತ್ರಗಳನ್ನು ಅಭ್ಯಸಿಸಲು ಅನುವುಮಾಡಿಕೊಟ್ಟ ಡಾ|| ಹಾವನೂರರಿಗೆ ಕೃತಜ್ಞತೆಗಳು.
೬. Hayavadana Roa C., *Mysore Gazetteer,* Vol - II, p. 3129.
೭. ಸುಂದರರಾವ್ ಬ.ನಾ., (೧೯೮೨), **ಬೆಂಗಳೂರಿನ ಇತಿಹಾಸ,** ಪುಟ - ೩೧೭.
೮. Gundart, Harmann - *Harmann Moegling* (Tr) Stinweg, Chritopf and Stinweg, Elezabeth (Ed) Albrecht Frenz, D.C. Books, Kottayam. 1997
೯. ಅದೇ., ಪುಟ. ೧೫೭.
೧೦. ಅದೇ., ಪುಟ. ೨೪೫.
೧೧. ಅದೇ., ಪುಟ. ೨೪೫ (ಅಡಿ ಟಿಪ್ಪಣಿ).
೧೨. *Gazetteer of Nilagiri District.*, (1908), Francis w. (Ed), Govt. of Madras, Pages. 331 - 332.
೧೩. ಅಕ್ಟೋಬರ್ ೫, ೧೮೪೮ರಲ್ಲಿ ಬರೆದಿರುವ ಪತ್ರ.
೧೪. ಪೂರ್ವೋಕ್ತ, ಪುಟ - ೧೫೮.
೧೫ Brookmans park newsletter Page - 1. www.brookmans.com.

ಡಾ॥ ಬಿ. ಲೀಲಾ*

# ಅಸ್ಪೃಶ್ಯತಾ ನಿವಾರಣೆ ಮತ್ತು ವಿಠಲ್‌ರಾಮ್ ಶಿಂಧೆ (೧೮೭೩ - ೧೯೪೪)

ಹತ್ತೊಂಬತ್ತನೇ ಶತಮಾನದ ಹಲವಾರು ಚಳುವಳಿಗಳನ್ನು ಗಮನಿಸಿದಾಗ ಎಲೆಯ ಮರೆಯ ಕಾಯಂತೆ, ಸಮಾಜ ಸೇವೆ ಮಾಡಿದ ಮತ್ತು ಕರ್ನಾಟಕದಲ್ಲಿಯೂ ಸಾಕಷ್ಟು ದಲಿತ ಸೇವೆ ಮಾಡಿದ ವಿಠಲರಾಮ್ ಶಿಂಧೆಯವರ ಹೆಸರು ಹೆಚ್ಚು ಪ್ರಚಲಿತದಲ್ಲಿಲ್ಲ.

ಜಮಖಂಡಿ ಮೊದಲು ವಿಶಾಲ ಮುಂಬೈಗೆ ಸೇರಿದ್ದರೂ ಏಕೀಕರಣದ ನಂತರ ಕರ್ನಾಟಕದಲ್ಲಿದೆ. ವಿಠಲ್‌ರಾಮ್ ಶಿಂಧೆಯವರ ಹುಟ್ಟೂರು ಜಮಖಂಡಿ (೨೩.೪.೧೮೭೩). ಪ್ರಾರ್ಥನಾ ಸಮಾಜಕ್ಕೆ ಸೇರಿದ ಶಿಂಧೆಯವರು ತಮ್ಮ ವಿದ್ಯಾಭ್ಯಾಸವನ್ನು ಪುಣೆಯಲ್ಲಿ ಮತ್ತು ನಂತರ ಹೆಚ್ಚಿನ ವಿದ್ಯಾಭ್ಯಾಸವನ್ನು ಇಂಗ್ಲೆಂಡಿನ ಮ್ಯಾಂಚಸ್ಟರ್ ಕಾಲೇಜಿನಲ್ಲಿ ಮುಂದುವರಿಸಿದರೂ, ಹಿಂದುಳಿದ ಜನರ ಮೇಲೆ ಅಪಾರ ಅಭಿಮಾನ. ಅವರ ಇಡೀಜೀವನವನ್ನು ದಲಿತರ ಸೇವೆಗೆ ಸಲ್ಲಿಸಿದರು. ಇದಲ್ಲದೆ ಅವರ ಭಾಷಾಭಿಮಾನದ ಒಲವನ್ನು ಅವರು ಬರೆದಿರುವ ಹಲವಾರು ಬಿಡಿ ಲೇಖನಗಳು ಮತ್ತು ಪುಸ್ತಕಗಳಲ್ಲಿ ಕಾಣಬಹುದು. ಸಾಮಾನ್ಯವಾಗಿ ಇಂಗ್ಲಿಷಿನಲ್ಲಿ ಕೂಡ ಇವರ ಬಗ್ಗೆ ಹೆಚ್ಚಿನ ಬರವಣಿಗೆಗಳಾಗಲಿ, ಪುಸ್ತಕಗಳಾಗಲಿ ಕಂಡುಬರುವುದಿಲ್ಲ. ಹೆಚ್ಚಿನ ಬರವಣಿಗೆ ಮರಾಠಿ ಭಾಷೆಯಲ್ಲಿರುವುದರಿಂದ ಕನ್ನಡಿಗರಿಗೆ ಈ ಮೂಲಕ ವಿಠಲ್‌ರಾಮ್ ಶಿಂಧೆಯವರನ್ನು ಪರಿಚಿಸುವ ಕಿರುಯತ್ನವನ್ನು ಇಲ್ಲಿ ಮಾಡಲಾಗಿದೆ.

ಶಿಂಧೆಯವರ ಮರಾಠಿಪುಸ್ತಕ *Majhya Athavani Ani Anubhav* ಎಂಬ ಅನುಭವ - ಸ್ಮೃತಿ ಬೆಳಕಿಗೆ ಬಂದದ್ದು ಸುಮಾರು ೧೯೫೮ರಲ್ಲಿ. ಈ ಪುಸ್ತಕದಲ್ಲಿ ಶಿಂಧೆಯವರ ವಿಸ್ತಾರವಾದ, ಸರಳವಾದ ಬರವಣಿಗೆಯಿಂದ ಅವರ ಜೀವನದ ಅನುಭವವನ್ನು ಕಾಣಬಹುದು. ಮರಾಠಿ ಮತ್ತು ಕನ್ನಡ ಸಂಸ್ಕೃತಿಯನ್ನು ಬೆಳೆಸಿದ್ದ ಹಿರಿಯರ ಮಾರ್ಗದರ್ಶನ ಶಿಂಧೆಯ



ಮಹರ್ಷಿ ವಿಠ್ಠಲ್ ರಾಮ್‌ಜಿ ಶಿಂಧೆ

ವರಿಗಿತ್ತು. ತಾತ ಕಟ್ಟಾ ಮರಾಠರಾದರೂ ಅಜ್ಜಿ, ಕನ್ನಡ ಸಂಪ್ರದಾಯದವರು ಮತ್ತು ರೈತ ಪಂಗಡಕ್ಕೆ ಸೇರಿದವರು. ವಿಠಲರಾಮ್‌ಜೀಗೆ ಅಣ್ಣ ಪರಶುರಾಮ ಮತ್ತು ತಂಗಿ ಜಾನಕ್ಕ. ಜಾನಕ್ಕ ರಾಮ್‌ಜಿಗೆ ಕೊನೆಯ ತನಕ ಬೆಂಬಲವಾಗಿ ನಿಂತರು. ಜಾತಿ, ಮತ ಇವುಗಳಲ್ಲಿ ಹೆಚ್ಚಿನ ನಂಬಿಕೆ ಇಲ್ಲದ್ದರಿಂದ ಎಲ್ಲಾ ಜಾತಿಯವರು ಕೂತು ಚರ್ಚೆ, ಉಪಹಾರ ಮಾಡುವುದು ರಾಮ್‌ಜೀಯವರ ಮನೆಯಲ್ಲಿ ನಡೆಯುತ್ತಿತ್ತು.

ಅಣ್ಣಾ ಸಾಹೇಬರ (ವಿಠಲ್‌ರಾಮ್‌ರವರನ್ನು ಕರೆಯುತ್ತಿದ್ದ ರೀತಿ)ಮನಸ್ಸಿನ ಮೇಲೆ ಹೆಚ್ಚಿನ ಪ್ರಭಾವ ಬೀರಿದವರು ಅವರ ತಾಯಿ. ಕೃಷ್ಣನ ಬಗ್ಗೆ ಕನ್ನಡ ಹಾಡುಗಳನ್ನು ಹಾಡಿ ತೋರಿಸುತ್ತಿದ್ದರು. ಪುಣೆಯ ಫರ್ಗ್ಯೂಸನ್ ಕಾಲೇಜಿನಲ್ಲಿ ಹೆಚ್ಚಿನ ಶಿಕ್ಷಣ ಪಡೆದ ಬಡತನದಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿದರು. ಆ ಹೊತ್ತಿಗೆ ತಂಗಿಯು ಗಂಡನ ಮನೆಯವರ

* ಫ್ಲಾಟ್ - ४೮, ಮೊದಲ ಮಹಡಿ, 'ಶ್ಯಾಮಲಾ' ಮಾತಂಗ, ಮುಂಬಯಿ - ४೦೦ ೦೧೯

ಅನಾದರಕ್ಕೆ ಈಡಾದ ಕಾರಣ ತಂಗಿಯ ಜವಾಬ್ದಾರಿ ಕೂಡ ಇವರ ಮೇಲೆ ಬಿತ್ತು. ತಮ್ಮ ಸ್ಕಾಲರ್‌ಷಿಪ್ ಹಣದಿಂದ ಎಲ್ಲರ ರಕ್ಷಣೆಯನ್ನು ವಹಿಸಬೇಕಾಯ್ತು. ಪಾಠ ಹೇಳಿ ಹಣ ಸಂಪಾದಿಸ ಬೇಕಾಯ್ತು.

ತಮ್ಮ ವಿದ್ಯಾಭ್ಯಾಸದ ಕಾಲದಲ್ಲಿ ಡೈರಿ ಬರೆಯುವ ಹವ್ಯಾಸ ವಿಟ್ಟಿದ್ದರಿಂದ ಅವರ ದಿನಚರಿಯಲ್ಲಿ ಸಾಕಷ್ಟು ಅವರ ಬಗ್ಗೆ ಮಾಹಿತಿ ದೊರಕುತ್ತದೆ. ಪುಣೆಯ ಫರ್ಗೂಸನ್ ಕಾಲೇಜಿನಲ್ಲಿ ಅವರಿಗೆ ಧರ್ಮ, ಮತಶ್ರದ್ಧೆ ಇವುಗಳ ಜಿಜ್ಞಾಸೆ ಹುಟ್ಟಿತು ಮತ್ತು ಹಲವಾರು ಪ್ರಸಿದ್ಧ ವ್ಯಕ್ತಿಗಳ ಭಾಷಣಗಳನ್ನು ಕೇಳುವ ಹವ್ಯಾಸವಿತ್ತು. ಇದಲ್ಲದೆ 'ವಸಂತ ವ್ಯಾಖ್ಯಾನ ಮಾಲಾ' ಕ್ಕೆ ತಪ್ಪದೆ ಹೋಗುತ್ತಿದ್ದರು. ಸಮಾಜ ಸುಧಾಕರರಾದ ಅಗರ್‌ಕರ್‌ರವರ *'Reformist'* ಎಂಬ ಪತ್ರಿಕೆಯಲ್ಲಿ ಬರುತ್ತಿದ್ದ ಲೇಖನಗಳು ಅವರನ್ನು ಆಕರ್ಷಿಸಿತ್ತು. ಜಸ್ಟೀಸ್ ರಾನಡೆ, ಡಾ॥ ಭಂಡಾರ್‌ಕರ್ ಪ್ರಭಾವ ಇವರ ಮೇಲೆ ಆಗಿತ್ತು. ೧೮೯೮ರಲ್ಲಿ ಪ್ರಾರ್ಥನಾ ಸಮಾಜದ ದೀಕ್ಷೆಯನ್ನು ಹೊಂದಿದರು. ಆಕಸ್ಮಿಕವಾಗಿ ದೊರೆತ ವಿದ್ಯಾರ್ಥಿವೇತನ (೧೦೦ ಪೌಂಡ್ ವರ್ಷಕ್ಕೆ) ಇವರನ್ನು ಮ್ಯಾಂಚಸ್ಟರ್ ಕಾಲೇಜಿಗೆ ಒಯ್ದಿತು. ಮತ್ತು ಬ್ರಹ್ಮಸಮಾಜದ ಕಟ್ಟುಪಾಡಿಗೆ ಬದ್ಧರಾದರು.

ಬಾಲ್ಯದಲ್ಲೇ ಭಾಗವತ ಧರ್ಮದಿಂದ ಪ್ರೇರೇಪಿತರಾದ ಶಿಂಧೆಯವರು ವಿಗ್ರಹಾರಾಧನೆಯನ್ನು ಖಂಡಿಸಿ ಬ್ರಹ್ಮ ಸಮಾಜಕ್ಕೆ ಒಲಿದಿದ್ದರು ಮತ್ತು ಬ್ರಹ್ಮತತ್ವ ಮತ್ತು ಸಮಾನತೆಯಿಂದ ಮಾನವತೆಯನ್ನು ಪ್ರಚಾರ ಮಾಡಲು ಸಾಕಷ್ಟು ಶ್ರಮವನ್ನು ಪಟ್ಟರು. ಅವರ ಪ್ರಕಾರ 'ಅಸ್ಪೃಶ್ಯತೆಯನ್ನು ಹೋಗಲಾಡಿಸುವದು ನನ್ನ ಧರ್ಮ ಎಂದು ನಂಬಿದ್ದೇನೆ', ಎಂಬುದಾಗಿತ್ತು.[೨]

ದಲಿತ ಸಂಘಟನೆಗಳನ್ನು ಗಮನಿಸಿದಾಗ ಸ್ವತಂತ್ರವಾದ ಸಂಘಟನೆ ೧೯೦೬ಕ್ಕೆ ಮೊದಲು ಕಂಡುಬಂದಿಲ್ಲ. ಅಲ್ಲೊಂದು, ಇಲ್ಲೊಂದು ಪ್ರಯತ್ನ ನಡೆದಿದೆಯಷ್ಟೆ. ಅದು ಮಹರ್ ಜಾತಿಯವರ 'ಸೋಮವಂಶೀಯ' ಎಂಬ ಉಪಜಾತಿಯ



ಶಿಂಧೆಯವರ ತಾಯಿ ಜಮುನಾಬಾಯಿ ಮತ್ತು ತಂದೆ ರಾಮ್‌ಜಿ ಹಾಗು ಅವರ ಮಗ ಪ್ರತಾಪ್

ಪ್ರಯತ್ನ. ಈ ಪ್ರಯತ್ನದಿಂದ ಹೆಚ್ಚಿನ ಸುಧಾರಣೆ ಮಾಡಲಾಗದಿದ್ದರೂ, ವಿದ್ಯಾಭ್ಯಾಸ ಮತ್ತಿತರ ಉಪಯುಕ್ತವಾದ ಸುಧಾರಣೆಗೆ ಹೆಚ್ಚು ಇಂಬು ಕೊಟ್ಟಿತ್ತು. ಶಿಂಧೆಯವರು ತಮ್ಮ ಅಸ್ಪೃಶ್ಯತಾ ಸಮಾಜ ಸಂಸ್ಥೆಯನ್ನು ಆರಂಭಿಸಿದಾಗ ಇದೆಲ್ಲವನ್ನೂ ಗಮನಿಸಿದ್ದರು.

**ಅಸ್ಪೃಶ್ಯತಾ ಸಮಾಜ ಸಂಸ್ಥೆ ೧೯೦೬**

ವಿಠಲ್‌ರಾಮ್ ಶಿಂಧೆಯವರು ಅಸ್ಪೃಶ್ಯತಾ ಸಮಾಜ ಸಂಸ್ಥೆಯನ್ನು ಆರಂಭಿಸಿದ್ದು ೧೯೦೬ರಲ್ಲಿ. ಇದಕ್ಕೆ ಮೊದಲು ಜ್ಯೋತಿ ಬಾ ಫುಲೆ (೧೮೫೧) ಒಂದು ಸ್ಕೂಲನ್ನು ಅಸ್ಪೃಶ್ಯರಿಗೆಂದು ಸ್ಥಾಪಿಸಿದ್ದರು. ಆದರೆ ಅವರು ಹೆಚ್ಚಿನ ಸಂಕಷ್ಟಕ್ಕೆ ಒಳಪಟ್ಟರು. ಆ ಕಾಲದಲ್ಲಿ ಮಧ್ಯಮವರ್ಗದ ಜನ ಇದಕ್ಕೆ ಹೆಚ್ಚು ಇಂಬುಕೊಟ್ಟಂತೆ ಕಾಣುವುದಿಲ್ಲ. ಮತ್ತು ಮುಂಬೈ ಪ್ರಾರ್ಥನಾ ಸಮಾಜ ಅಸ್ಪೃಶ್ಯರಿಗೆಂದು ಸಂಜೆಯ ಶಾಲೆ (೧೮೮೩) ಮತ್ತು ಬರೋಡದಲ್ಲಿ (೧೮೮೩) ತೆರೆದ ಶಾಲೆ ಮತ್ತು ಥಿಯಾಸಫಿಗೆ ಸೇರಿದ ಓಲ್‌ಕಟಾರವರು ಮದ್ರಾಸಿನಲ್ಲಿ ಸ್ಥಾಪಿಸಿದ ಸ್ಕೂಲ್ ಮತ್ತು ಕೆ. ರಂಗರಾವ್ ಮಂಗಳೂರಿನಲ್ಲಿ ಸ್ಥಾಪಿಸಿದ ಸ್ಕೂಲ್ (೧೮೯೭), ಇವೆಲ್ಲಾ ಸ್ಥಳೀಯ ಪ್ರಯತ್ನಗಳು. ಆದರೆ ಶಿಂಧೆಯವರು ಮೊದಲಬಾರಿಗೆ ತಮ್ಮ ಪ್ರಯತ್ನದಿಂದ ಅಸ್ಪೃಶ್ಯತಾ ನಿವಾರಣ ಸಂಸ್ಥೆಯನ್ನು (*Depressed class Mission Society*) ಅಖಿಲ ಭಾರತದ ಮಟ್ಟಕ್ಕೆ ಒಯ್ದರು. ಈ ಪ್ರಯತ್ನದಲ್ಲಿ ಮುಂಬಯಿಯ ಪ್ರಾರ್ಥನಾ ಸಮಾಜ ಮತ್ತು ಜಸ್ಟೀಸ್ ಚಂದಾವರ್ಕರ್‌ರವರ ಬೆಂಬಲ ಇವರಿಗಿತ್ತು.

**ಶಿಂಧೆಯವರ ಅಸ್ಪೃಶ್ಯತಾ ನಿವಾರಣ ಸಂಸ್ಥೆಯ ಮೂಲ ಉದ್ದೇಶ**

ವಿದ್ಯಾಭ್ಯಾಸ ಮತ್ತು ಜೀವನೋಪಾಯಕ್ಕೊಂದು ಉದ್ಯೋಗ, ಮತ್ತು ಸಾಮಾಜಿಕ ಚಿಂತನೆ, ಆರೋಗ್ಯ ಇವು ಮೂಲ ಉದ್ದೇಶಗಳಾದರೂ, ಸಾಮಾನ್ಯ ಮನುಷ್ಯನ ನಿಲುವಿಗೆ ತಿಳಿಯುವಂತೆ ಕೀರ್ತನೆ, ಭಜನೆ, ಪ್ರಾರ್ಥನೆ ಇವುಗಳು ದೈನಿಕ ಅಂಗದಲ್ಲಿ ಸೇರಿದ್ದವು. ಸೇವಾಸಂಘದಲ್ಲಿ ನಿರಾಶ್ರಿತ ಮಹಿಳೆಯರಿಗೆ ಆಶ್ರಯವಿತ್ತು. ಇದರ ಉಪಸಂಸ್ಥೆ ಇಂಡಿಯಾದ ಹಲವು ಭಾಗಗಳಲ್ಲಿ ಪ್ರಚಾರದಲ್ಲಿತ್ತು. ೧೯೦೯ರ ಹೊತ್ತಿಗೆ ಸಂಸ್ಥೆಯು ೧೨ ಉಪಭಾಗವನ್ನು ಹೊಂದಿದ್ದು ೧೨ ಸ್ಕೂಲ್ ನಡೆಸುತ್ತಿತ್ತು ಮತ್ತು ೧೧೦೮ ಮಕ್ಕಳು ವಿದ್ಯಾಭ್ಯಾಸದಲ್ಲಿ ತೊಡಗಿದ್ದರು.[೩] ಸಂಸ್ಥೆಯ ಆಜೀವ ಸದಸ್ಯರು ಸದಾಶಿಯ ಸೊಹನಿ, ಅಬ್ದುಲ್ ಖಾದರ್ ಮತ್ತು ಶಿಂಧೆಯವರ ತಂಗಿ ಜನಾಬಾಯಿ. ಮುಂಬಯಿ ಶಾಖೆಯಲ್ಲಿ ಪುಸ್ತಕ ಹೊಲಿಯುವದು, ಹೊಲಿಗೆ, ಮರಗೆಲಸ ಕಲಿಸುತ್ತಿದ್ದರು. ಮಂಗಳೂರು ಸಂಸ್ಥೆಯಲ್ಲಿ ಬಟ್ಟೆ, ನೂಲುವದು ಮತ್ತು ಮಹಾಬಲೇಶ್ವರದಲ್ಲಿ ಬೆತ್ತದ ಸಾಮಾನು ಹಗ್ಗ ಮಾಡುವುದನ್ನು ಕಲಿಸುತ್ತಿದ್ದರು. ಶಿಂಧೆಯವರ ಪ್ರಕಾರ ಯಾವುದಾದರೂ ಕಸುಬಿನಲ್ಲಿ ಮಕ್ಕಳು ತರಬೇತಿ ಹೊಂದಿದರೆ, ಜೀವನವನ್ನು ಉತ್ತಮ ಪಡಿಸಿಕೊಂಡು ಉತ್ತಮ ಪ್ರಜೆಗಳಾಗ

ಬಹುದು. ಶಿಂಧೆಯವರ ಈ ಪ್ರಯತ್ನದಲ್ಲಿ ಹಲವಾರು ಮಹಾರಾಜರುಗಳು. ರಾಜಕಾರಣಿಗಳು, ಸಮಾಜ ಸುಧಾರಕರು ಸಹಕರಿಸಿದರು[೪]. ಶಿಂಧೆಯವರು ಮಹರ್ಷಿ ಕರ್ವೆಯವರಿಂದ ಪ್ರಭಾವಿತರಾದವರು. ಗಿಡಮಲ್ ದಯಾರಾಮ್ ಅವರ ಸಹಾಯವೂ ಅವರಿಗಿತ್ತು. ಲೇಡಿ ಮ್ಯೂರ್ ಮೆಕನ್ಜಿ, ಲೇಡಿಚಂದಾ ವರ್‌ಕರ್, ಲಕ್ಷ್ಮೀಬಾಯಿ ರಾನಡೆ, ಮತ್ತು ಪಿ-ಕ್ಯಾಪ್ಟನ್ ಆರ್ಥಿಕ ಸಹಾಯ ನೀಡಿದರು. ೧೯೦೮ ರ ಹೊತ್ತಿಗೆ ಹಲವಾರು ಮುಂಬಯಿ ಗಣ್ಯವ್ಯಕ್ತಿಗಳ ಆರ್ಥಿಕ ಬೆಂಬಲ, ಅಸ್ಪೃಶ್ಯತಾ ಸಂಸ್ಥೆಗೆ ಒದಗಿತ್ತು. ಸಂಸ್ಥೆಯು ಹಲವಾರು ಶಾಖೆಗಳನ್ನು ಸ್ಥಾಪಿಸಿತು. ಹಲವು ಸಂಸ್ಥೆಗಳು ಹಣಕಾಸು ವ್ಯವಸ್ಥೆಯನ್ನು ತಾವೇ ನೋಡಿಕೊಳ್ಳುತ್ತಿದ್ದವು. ಮಂಗಳೂರು ಸಂಸ್ಥೆಯು ಮೊದಲೇ ಶುರುವಾದ್ದರಿಂದ *All India Depressed Class* ಸಂಸ್ಥೆಗೆ ಒಳಪಟ್ಟಿತ್ತು. ೧೯೧೧ರಲ್ಲಿ ಪ್ರಾರ್ಥನಾ ಸಮಾಜದ ಸ್ಥಾನಕ್ಕೆ ರಾಜೀನಾಮೆ ಸಲ್ಲಿಸಿ ಶಿಂಧೆಯವರು ಪೂರ್ಣವಾಗಿ ಡಿಪ್ರೆಸ್ಡ್‌ಕ್ಲಾಸ್ ಸಂಸ್ಥೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು, ಇದಕ್ಕಾಗಿ ಅನೇಕ ಸಮ್ಮೇಳನಗಳನ್ನು ನಡೆಸಿದರು. ಶಿಂಧೆಯವರ ನೇತೃತ್ವದಲ್ಲಿ ಸೂರತ್ (೧೯೦೭), ಮದ್ರಾಸ್ (೧೯೦೮), ಲಾಹೋರ (೧೯೦೯), ಅಲಹಾಬಾದ (೧೯೧೦), ಬೆಂಗಳೂರು (೧೯೧೨), ಕರಾಚಿ (೧೯೧೩), (ಇವೆಲ್ಲಾ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಭೇಟಿಯಾಗುವ ಸ್ಥಳಗಳು) ಅಲ್ಲೆಲ್ಲಾ ಸಮ್ಮೇಳನಗಳು ನಡೆದವು. ಮೊದಲನೆ ಸಾರ್ತಿ ೧೯೧೨ರ ಅಕ್ಟೋಬರ್‌ನಲ್ಲಿ, ಸಮಾಜ ಸೇವಕರ ಸಮ್ಮೇಳನ ಒಂದು ನಡೆಯಿತು. ಮೂರು ದಿನದ ಸಮ್ಮೇಳನದಲ್ಲಿ ೨೬೦ ಜನ ಭಾಗವಹಿಸಿದ್ದೇ ಅಲ್ಲದೆ ಮುಖ್ಯವಾಗಿ ವಿಮರ್ಶೆಮಾಡಿದಾಗ 'ಸಂಸ್ಥೆಯು ೨೫ ಸ್ಕೂಲ್‌ಗಳನ್ನು ೧೪ ಷಡ್‌ಗಳಲ್ಲಿ ನಡೆಸುತ್ತಿದ್ದು ಅದರಲ್ಲಿ ೧೧೦೦ ವಿದ್ಯಾರ್ಥಿಗಳು ಕಲಿಯುತ್ತಿದ್ದು, ೩೫ ಜನ ಬೋಧಕರಿದ್ದರು.' ಇದಲ್ಲದೆ ೫ ವಸತಿ ಗೃಹ ಅಸ್ಪೃಶ್ಯರಿಗಾಗಿದ್ದು ೧೨ ಬೇರೆ ಬೇರೆ ಸಂಘಟನೆಗಳು ಬೇರೆ ಬೇರೆ ಪ್ರಾಂತ್ಯ ದಲ್ಲಿದ್ದವು.[೫]

**ಕರ್ನಾಟಕ ಮತ್ತು ವಿಠಲ್‌ರಾಮ್ ಶಿಂಧೆ**

ವಿಠಲರಾಮ್ ಶಿಂಧೆಯವರು ತಮ್ಮ ಅಸ್ಪೃಶ್ಯತಾ ನಿವಾರಣಾ ಸಂಸ್ಥೆಯಿಂದ ಕರ್ನಾಟಕದಲ್ಲಿ ಪ್ರಭಾವ ಬೀರಿದರು. ಮಂಗಳೂರು, ಬೆಳಗಾಂ, ಹುಬ್ಬಳ್ಳಿ ಮತ್ತು ಬೆಂಗಳೂರುನಲ್ಲಿ ಸಂಸ್ಥೆಗಳನ್ನು ತಾವು ಸ್ವತಃ ಈ ಶಾಖೆಗಳ ಪುರೋಭಿವೃದ್ಧಿಯನ್ನು ಗಮನಿಸುತ್ತಿದ್ದರು. ಡಿಪ್ರೆಸ್ಡ್‌ಕ್ಲಾಸ್ ಮಿಷಿನ್ ಸಂಸ್ಥೆಗಳ ಬೆಳವಣಿಗೆಯನ್ನು ಗಮನಿಸಿದಾಗ, ಸಂಸ್ಥೆಯ ಎಲ್ಲಾ ಉಪಶಾಖೆಗಳ ಏಳ್ಗಿ ಶಿಂಧೆಯವರ ಗಮನದಲ್ಲಿತ್ತು. ಮಂಗಳೂರಿ ನಲ್ಲಿ ಶಿಂಧೆಯವರಿಗಿಂತ ಮೊದಲೇ ಕುದುಮಲ್‌ರಂಗರಾವ ರವರ ಶ್ರಮದಿಂದ ಒಂದು ಸ್ಕೂಲ್ ದಲಿತರಿಗೆಂದು ಶುರುವಾಗಿತ್ತಷ್ಟೆ.



ಶಿಂಥೆ ಅವರ ಮಡದಿ ಶ್ರೀಮತಿ ರುಕ್ಮಿಣಿಬಾಯಿ

(೧೮೯೦). ಆದರೆ ಕುದ್ಮುಲ್ ರಂಗರಾಯರ ನೇತೃತ್ವದಿಂದ ಮತ್ತು ಶಿಂಧೆಯವರ ಪ್ರಯತ್ನದಿಂದ (೧೯೧೩) ಸ್ಕೂಲ್‌ಗಳು ಹೆಚ್ಚಾದವು ಮತ್ತು ವಿದ್ಯಾರ್ಥಿಗಳ ಸಂಖ್ಯೆ ೯೩ರಿಂದ ೧೩೫ಕ್ಕೆ ಏರಿತು. ಇದ್ದ ಮೂರು ಸ್ಕೂಲಿನಲ್ಲಿ ಒಂದು ರಾತ್ರಿಶಾಲೆ. ಇದರಲ್ಲಿ ವಯಸ್ಕರು ಮತ್ತು ದಿನಕೆಲಸದವರು ಹೆಚ್ಚಾಗಿದ್ದರು. ಮತ್ತೆರಡು ಶಾಲೆಗಳಲ್ಲಿ ಪಂಚಮ ಮತ್ತು ಪರೆಯ ಜಾತಿಯವರಿದ್ದರು. ೧೯೧೩-೧೯೨೧ರಲ್ಲಿ ಸ್ಕೂಲಿನ ಪ್ರಗತಿಯನ್ನು ಗಮನಿಸಿದಾಗ, ಒಂದನೇ ತರಗತಿಯಿಂದ ಎಂಟನೆ ತರಗತಿವರೆಗೆ ಸ್ಕೂಲು ಪ್ರಗತಿ ಹೊಂದಿದ್ದನ್ನೂ ಮತ್ತು ಹಲವಾರು ಚಟುವಟಿಕೆಗಳನ್ನು ಗಮನಿಸುತ್ತೇವೆ. ವಿದ್ಯಾರ್ಥಿಗಳ ಸಂಖ್ಯೆ ೩೦೦-೪೦೦ ಮತ್ತು ಪಂಚಮರೇ ಎಲ್ಲಾ ಜವಾಬ್ದಾರಿಯನ್ನು ನಿರ್ವಹಿಸಿದ್ದು ಗಮನಾರ್ಹ ವಿಷಯ. ನಿರಂತರ ಪ್ರಯತ್ನದಿಂದ ಸರ್ಕಾರ ೩೪ ಎಕರೆ - ೨೯ ಸೆಂಟ್ ಜಾಗವನ್ನು ಉಡುಪಿಯಲ್ಲಿ ದಲಿತವರ್ಗದವರ ವಸತಿಗಾಗಿ ಕೊಡಲು ಒಪ್ಪಿತು. ಇದಕ್ಕೆ ಶಿಂಧೆಯವರು ಎಲ್ಲರ ಸಹಕಾರವನ್ನು ಬಯಸಿದರು. ೧೯೨೧ರ ವಾರ್ಷಿಕ ವರದಿಯನ್ನು ನೋಡಿದಾಗ, ಸ್ಕೂಲು ಹೆಚ್ಚಿನ ಜವಾಬ್ದಾರಿ ವಹಿಸಿ ಪ್ರಗತಿಯನ್ನು ಸಾಧಿಸಿದಂತಿದೆ. ಸ್ಕೂಲ್‌ಗಳಲ್ಲಿ ಹಲವಾರು ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು. ವಿದ್ಯಾರ್ಥಿ-ಬೋಧಕರ ಸಂವಾದ, ಚರ್ಚಾ ಕೂಟಗಳು ಅತ್ಯಂತ ಮಹತ್ವದ್ದೆನಿಸಿವೆ. ಚರ್ಚೆಯಲ್ಲಿ ಸಾಮಾನ್ಯ ಜೀವನಕ್ಕೆ ಸಂಭವಿಸಿದ ವಿಷಯಗಳನ್ನು ಚರ್ಚಿಸಲಾಗುತ್ತಿತ್ತು. ಮುಖ್ಯವಾದ ವಿಷಯಗಳನ್ನು ಕಾರ್ಯದರ್ಶಿಯು ಕಾರ್ಯಕಾರಿ ಸಮಿತಿಯ ಮುಂದೆ ಇಟ್ಟಿದ್ದು ತನ್ಮೂಲಕ ಪಂಚಮರ ಏಳ್ಗೆಗೆ ಸಹಾಯವಾಯ್ತು. ಈ ಚರ್ಚೆಗಳ ಲಾಭವೆಂದರೆ ಸುತ್ತ ಮುತ್ತ ಇರತಕ್ಕ ಇತರ ಪಂಚಮ ವಿದ್ಯಾರ್ಥಿಗಳಿಗೆ, ಜವಾನ, ದರ್ಜಿ, ಮರಗೆಲಸ ಮಾಡುವ ಇತರರಿಗೆ ತಾವು ಸಹ ರಾತ್ರಿ ಶಾಲೆಗೆ ಹೋಗಿ ವಿದ್ಯಾಭ್ಯಾಸ ಮಾಡಬೇಕೆಂದು ಪ್ರೇರೇಪಿಸಿತು. ಆದ್ದರಿಂದ ಅವರಿಗೆಂದೇ ರಾತ್ರಿ ಶಾಲೆ ಒಂದನ್ನು ಸ್ಥಾಪಿಸಲಾಯಿತು. ಕೆಲವು

ದಿವಸದಲ್ಲೇ ಮುನಿಸಿಪಲ್ ತೋಟಿ, ಗುಡಿಸುವವರು, ಇತರರೂ ತಮಗೂ ರಾತ್ರಿ ಶಾಲೆಯ ಸೌಲಭ್ಯದೊರಕಬೇಕೆಂದು ಕೇಳಿಕೊಂಡರು. ಆದರೆ ಬೇರೆಯವರು ಅಷ್ಟು ಉತ್ಸಾಹ ತೋರಲಿಲ್ಲ.

ಮಿತ್ರ ಮಂಡಳಿಗಳು ಕುಡಿಯುವವರ ವಿರುದ್ಧ ಪ್ರಚಾರಮಾಡಿ ಸುತ್ತ ಮುತ್ತ ಜಾಗ್ರತಿಯನ್ನು ಮೂಡಿಸಿದ್ದು, ಜ್ಞಾನೋದಯ ಸಮಾಜದವರು ಕುಡಿತದಿಂದ ಆಗುವ ದುಷ್ಪರಿಣಾಮದ ಮೇಲೆ ಹರಿಕಥೆಯನ್ನು ಏರ್ಪಡಿಸಿದಾಗ ೩೦೦ ಜನ ಪಂಚಮ ಹೆಂಗಸರು, ಗಂಡಸರು ಭಾಗವಹಿಸಿ ಸ್ಫೂರ್ತಿ ಹೊಂದಿದರು. ಆದರೆ ಮಹಾಯುದ್ಧದಿಂದಾಗಿ ಧನ ಸಹಾಯ ಹೆಚ್ಚಾಗಿ ಬರಲಿಲ್ಲ. ಕಾಮಗಾರಿ, ಮರಗೆಲಸ ಹಾಗೆಯೇ ನಿಂತಿತು. ಆದರೆ ಸ್ಕೂಲು ಹುಡುಗರು ಮರಗೆಲಸ ಮಾಡುತ್ತಾರೆ. ಜನರು ದಲಿತ ವರ್ಗದ ಸಂಸ್ಥೆಗೆ ತಮ್ಮ ಸಾಮಾನನ್ನು ಅಣಿಮಾಡಲು ಹೇಳುತ್ತಾರೆ. ಯಂತ್ರೋಪಕರಣಕ್ಕೆ ಸಾಕಷ್ಟು ಸಾಮಗ್ರಿ ಇಲ್ಲದಿರುವುದರಿಂದ ಸಕಾಲಕ್ಕೆ ಸಾಮಾನು ಒದಗಿಸಲು ಸಾಧ್ಯವಾಗುತ್ತಿರಲಿಲ್ಲ. ದಲಿತರಿಗೆ ವಸತಿ ಏರ್ಪಡಿಸಿ, ಜೀವನೋಪಾಯ ಕಲ್ಪಿಸಿ, ಸ್ವಲ್ಪ ಕಸಬು ಕಲಿತ ಮೇಲೆ ಮನೆಯಲ್ಲೇ ತಾವು ಕಲಿತ ಕಸುಬನ್ನು ಉಪಯೋಗಿಸಿ ಸ್ವಾವಲಂಬಿಗಳಾಗಿ ಶಾಲೆಯಿಂದ ಕಲಿತ ಅಲ್ಪಕಲಿಕೆಯಿಂದ ಅವರನ್ನು ಹೀನಸ್ಥಿತಿಯಿಂದ ಉತ್ತಮ ಪ್ರಜೆಗಳನ್ನಾಗಿ ಮಾಡಲು ಸಾಧ್ಯ, ಎಂಬುದು ಶಿಂಧೆಯವರ ಮಂತ್ರವಾಗಿತ್ತು.

ಶಿಂಧೆಯವರ ಸತತ ಪ್ರಯತ್ನದಿಂದ *August 10,* ೧೯೧೨ರಲ್ಲಿ ಹುಬ್ಬಳ್ಳಿಯಲ್ಲಿ ಒಂದು ದಲಿತವರ್ಗದ ಸಂಸ್ಥೆ ಆರಂಭವಾಯಿತು. ಇದರ ಜವಾಬ್ದಾರಿಯನ್ನು ಸಯ್ಯದ್‌ವರು ವಹಿಸಿದರು. ಇದರ ಅಂಗವಾಗಿ ಒಂದು ವಸತಿ ಗೃಹ. ಒಂದು ದಿನಪೂರ್ತ ಸ್ಕೂಲ್, ಸಂಜೆ ಶಾಲೆ, ಧಾರ್ಮಿಕ ಪ್ರಚಾರ. ಮತ್ತಿತರ ಕಾರ್ಯಗಳನ್ನು ಯಶಸ್ವಿಯಾಗಿ ನಡೆಸುತ್ತಿದ್ದರು. ಧಾರವಾಡದ ಡಿಸ್ಟ್ರಿಕ್ಟ್ ಕಲೆಕ್ಟರ್, ಸಂಸ್ಥೆಗೆ ಭೇಟಿಕೊಟ್ಟು ಸೈಯ್ಯದ್ ಅವರ ಪ್ರಶಂಸನೆ ಮಾಡಿರುವರು. ಶಿಂಧೆಯವರು ಮತ್ತು ಸೈಯ್ಯದ್ ರವರು ಕರ್ನಾಟಕದ ಸುತ್ತ ಮುತ್ತ ಊರೂರು ತಿರುಗಿ ಹಿಂದುಳಿದ ವರ್ಗದ ಏಳ್ಗೆಗೆ ಶ್ರಮಿಸಿದರು. ಕೊಲ್ಹಾಪುರ, ಹುಬ್ಬಳ್ಳಿ, ಗದಗ್, ಬೆಟಿಗೇರಿ, ಕುರ್ತುಕೋಟಿ, ಬಿಜಾಪುರ, ಸುತ್ತಾಡಿ ೧,೪೦೦ ರೂಗಳನ್ನು ಕೂಡಿಸಿದರು.[೬]

ಬೆಳಗಾವಿ ಡಿಪ್ರೆಸ್ಡ್ ಮಿಷನ್ ಶುರುವಾದದ್ದು ೧೯೧೫ರಲ್ಲಿ. ಹಲವಾರು ಮಹಾರ್, ಶಿಪಾಯಿಗಳು ಯುದ್ಧಕಾಲದಲ್ಲಿ ತಮ್ಮ ಸಹಾಯದ ನೆರವನ್ನು ನೀಡಿದರು. ಇವರಿಗೆ ಖಾಯಂ ಆಗಿ ಸೈನ್ಯ ಪದವಿಯನ್ನು ಒದಗಿಸಬೇಕೆಂದು ಶಿಂಧೆಯವರು ಅಭಿಪ್ರಾಯ ಪಟ್ಟರು. ಇದಲ್ಲದೆ ಡಿಸ್ಟ್ರಿಕ್ಟ್ ಬೋರ್ಡ್ ಸೆಂಟ್ರಲ್ ಸ್ಕೂಲ್‌ಗಳನ್ನು ಹಿಂದುಳಿದ ಮಕ್ಕಳಿಗೆ ಸ್ಥಾಪಿಸಬೇಕೆಂದು, ಅವರಿಗೆ ಇನ್ನೂ ಹೆಚ್ಚಿನ ಸೌಕರ್ಯ ಒದಗಿಸಬೇಕೆಂದೂ ಮತ್ತು ಹೆಚ್ಚಿನ ಮಕ್ಕಳು ಉಪಯೋಗ ಹೊಂದಬೇಕೆಂದು ಇಲ್ಲಿನ ಶಾಖೆ ಮನವಿಮಾಡಿತು.

ಸೈಯ್ಯದ್ ಮತ್ತು ಶಿಂಧೆಯವರ ಸ್ನೇಹ ಉತ್ತಮವಾಗಿತ್ತು. ಕರ್ನಾಟಕ ಶಾಖೆಯನ್ನು ನೆನಸಿದಾಗೆಲ್ಲಾ ಸೈಯ್ಯದ್ ಮತ್ತು ಶಿಂಧೆಯವರ ಅನುಭವ ನೆನಪಿಗೆ ಬರುವಂತಾದ್ದು. "ಒಂದು ದಿನ ಮಧ್ಯರಾತ್ರಿ ಬೆಳಗಾವಿ ಸ್ಟೇಷನ್ನಿನಲ್ಲಿ ಶಿಂಧೆ - ಸೈಯ್ಯದ್ (ಪ್ರಚಾರಕ್ಕೆಂದು ಹೊರಟರು) ಇಳಿದರು. ಅವರಿಗೆ ಹಸಿವಾಗಿತ್ತು. ಹತ್ತಿರದಲ್ಲಿ ಒಂದು ಚಾ ಅಂಗಡಿ ಇತ್ತು. ಅವನು ಅವರಿಗೆ ಚಹಾ ಕೊಡಲು ಹಿಂದು, ಮುಂದು ನೋಡಿದ. ಶಿಂಧೆಯವರ ದಾಡಿ ನೋಡಿ ಸೈಯ್ಯದ್ ಎಂದು ತಿಳಿದ. ಸಯ್ಯದ್‌ಗೆ ದಾಡಿ ಇಲ್ಲದ್ದರಿಂದ ಅವನು ಹಿಂದು ಅಲ್ಲವೆಂದು ಹೇಳುವುದಕ್ಕೆ ಸಾಧ್ಯವಿರಲಿಲ್ಲ. ಸೈಯ್ಯದ್; ದಾಡಿ ಇದ್ದರೇನಾಯಿತು. ಅವರು



ಶಿಂಧೆಯವರ ಸೋದರಿ ಶ್ರೀಮತಿ ಜನಾಬಾಯಿ

ಹಿಂದೂ. ಅದರೆ! ಸೈಯ್ಯದ್‌ರವರ ಬಗ್ಗೆ ಪ್ರಶ್ನೆ ಏಳಲಿಲ್ಲ. ಹೀಗಾಗಿ ನಡುರಾತ್ರಿಯಲ್ಲಿ ಚಾ ದೊರಕಿತು.

ಧಾರವಾಡ, ಹುಬ್ಬಳ್ಳಿ ಪ್ರಚಾರ ಮುಗಿಸಿ ಗದಗಕ್ಕೆ ಹೋದರು. ಅಲ್ಲಿ ಒಬ್ಬ ಶ್ರೀಮಂತ ಒಂದು ಬಂಗ್ಲೆ ಕೊಟ್ಟಿದ್ದ. ಆದರೆ ಅಡುಗೆ ಅವರೇ ಮಾಡಬೇಕಿತ್ತು. ಲಿಂಗಾಯಿತರ ಮಠದಲ್ಲಿ ದುಡ್ಡುಕೊಟ್ಟರೆ ಭಕರಿ ಸಿಕ್ಕುತ್ತಿತ್ತು. ಆದರೆ ಮಹರ, ಇತರ ದಲಿತರ ಜೊತೆ ಸಹಕರಿಸಿದ್ದರಿಂದ ಊಟಕ್ಕೆ ಧಕ್ಕೆ ಬಂತು. ಅಂದಿನಿಂದ ಸ್ವಯಂಪಾಕ ತಯಾರಿಸುತ್ತಿದ್ದರು. ಸೈಯ್ಯದ್ ಅಡುಗೆ ಮಾಡುತ್ತಿದ್ದ ಮತ್ತು ಶಿಂಧೆ ಪಾತ್ರೆ ತೊಳೆಯುತ್ತಿದ್ದರು. ಊರಿನ ಗಣ್ಯ ಮನುಷ್ಯರು ಶಿಂಧೆಯವರನ್ನು ಭೇಟಿಮಾಡಲು ಬರುತ್ತಿದ್ದರು. ಬಾಂಡಿ ತೊಳಿಯುತ್ತಿದ್ದ ಶಿಂಧೆಯವರನ್ನು ಸೈಯ್ಯದ್ ಎಂದು ತಿಳಿದು 'ಶಿಂಧೆಯವರಿದ್ದಾರೆಯೆ ಎಂದು ವಿಚಾರಿಸಿದಾಗ, ದಿವಾಣಖಾನೆ ಯಲ್ಲಿ ಕುಳಿತಿರಿ, ನಿಮ್ಮ ಭೇಟಿಗೆ ಬರುತ್ತಾರೆ.' ಎಂದು ತಿಳಿಸಿದರು. ಒಳಗೆ ಹೋಗಿ ಸೈಯ್ಯದ್‌ರವರಿಗೆ ಅದೇ ಪ್ರಶ್ನೆ ಕೇಳಿದಾಗ,

ಶಿಂಧೆಯವರನ್ನು ಕರೆದುಕೊಂಡು ಬರುತ್ತೇನೆ ಎಂದು ಹೇಳಿ ಸೈಯ್ಯದ್ ಕೂರಿಸಿದರು. ಸ್ವಲ್ಪ ಹೊತ್ತಾದ ಮೇಲೆ, ಶಿಂಧೆ ಅವನನ್ನು ಭೇಟಿ ಮಾಡಲು ಹೋದರು. ಅರೆ ಖರೆ ಶಿಂಧೆ ಯಾರು! ಸೈಯ್ಯದ್‌ರವರ ಹಸನ್ಮುಖ ಚಹರೆಯನ್ನು ನೋಡಬೇಕಿತ್ತು.[೭]

**ಬೆಂಗಳೂರು**

ಬೆಂಗಳೂರಿನಲ್ಲಿ ಹಲವು ಶ್ರದ್ಧಾವಂತ ಸ್ಥಳೀಯ ನಾಗರೀಕರ ಸಹಾಯದಿಂದ ೧೯೧೩ರಲ್ಲಿ ದಲಿತ ವರ್ಗದವರಿಗೆಂದು ಒಂದು ಸ್ಕೂಲನ್ನು ತೆರೆಯಲಾಗಿತ್ತು. ಆದರೆ ಒಂದು ವರುಷದ ನಂತರ ಜಾಗ ಮತ್ತು ಹಣದ ಸಹಾಯವಿಲ್ಲದೆ ಸ್ಕೂಲ್ ಮುಚ್ಚಲ್ಪಟ್ಟಿತು. ಆದರೆ ಈ ಸ್ಥಿತಿ ಹೆಚ್ಚಿನ ಕಾಲ ಇರಲಿಲ್ಲ. ಶಿಂಧೆಯವರ ಹಳೇ ಮಿತ್ರ ನಾರಾಯಣ ದೇವಲ್‌ರವರ ಶ್ರಮದಿಂದ ಬೆಂಗಳೂರಿನ ಟ್ಯಾನರಿ ರೋಡಿನಲ್ಲಿ ೧ ಜುಲೈ ೧೯೧೫ರಂದು ಒಂದು ಸ್ಕೂಲ್ ಶುರುವಾಯಿತು. ಉಪಾಧ್ಯಾಯರಿಗೆ ತರಬೇತಿ ಶಿಕ್ಷಣ ಇಲ್ಲದಿದ್ದರೂ ಶ್ರಮದಿಂದ ಸ್ಕೂಲನ್ನು ನಡೆಸಿದ್ದರಿಂದ ಸ್ಕೂಲು ಯಶಸ್ವಿಯಾದದ್ದೇ ಅಲ್ಲದೆ ವಿದ್ಯಾರ್ಥಿ ಸಂಖ್ಯೆ ಮೊದಲು ೨೫ ಇದ್ದುದು, ೧೯೧೭ರಲ್ಲಿ ೭೪ಕ್ಕೆ ಏರಿತು. ವಿದ್ಯಾರ್ಥಿಗಳಿಗೆ ಫೀಸ್ ಇರಲಿಲ್ಲ. ಅವರೇ ಸ್ಲೇಟು ಬಳಪ ಕೊಂಡು ಉತ್ತಮರೀತಿಯಲ್ಲಿ ಶ್ರಮಿಸುವಂತೆ ಕೆ. ಸಿ. ದವಲ್‌ರವರು ದುಡಿದರು. ಡಿಪ್ರೆಸ್ಡ್‌ಕ್ಲಾಸ್ ಸಂಸ್ಥೆಯವರು ಬೆಂಗಳೂರಿನ ಶ್ವೇತಜ್ವರದ ಪಿಡುಗಿನ ಜ್ವರದಲ್ಲಿ ೧೯೧೮-೧೯ರಲ್ಲಿ ೧೦೭೯ ಜನರಿಗೆ ಸಹಾಯವನ್ನು ಒದಗಿಸಿದರು. ಮತ್ತು ಬೆಂಗಳೂರು ಸುತ್ತ ಮುತ್ತ ಇದ್ದ ಪೀಡಿತರ ನೆರವಿಗೆ, ೧೮ ದಿವಸ ಸಮಾಜ ಸೇವಕರಿಂದ ಸೇವೆ ಸಲ್ಲಿಸಲಾಯ್ತು. ಇದರಲ್ಲಿ ಗೋಪಾಲಸ್ವಾಮಿ ಐಯ್ಯರ್, ಚಲುವರಾಯ ಮೊದಲಿಯಾರ್, ಡಾ|| ಅಮೃತರಾವ್ ವಿಶೇಷ ಸಹಾಯ ಒದಗಿಸಿದರು. ಒಬ್ಬ ಔಷಧಿ ವ್ಯಾಪಾರಿ ಮುಫತ್ತಾಗಿ ಔಷಧಿ ಒದಗಿಸಿದನು ಮತ್ತು ಇದಲ್ಲದೆ ಹೊರಗಿನಿಂದ ಕೂಡ ಧನ ಸಹಾಯ ಒದಗಿ ಬಂತು.

೧೯೧೫ರ ಹೊತ್ತಿಗೆ ಹಿಂದುಳಿದ ಮಕ್ಕಳಿಗಾಗಿ ೩ ಪೂರ್ಣಶಾಲೆ ಮತ್ತು ೨ ರಾತ್ರಿಶಾಲೆಗಳು ಕೆ. ಸಿ. ದೇವಲ್, ಪಿ. ವೆಂಕಟರಂಗನ್ ಮತ್ತು ವಿ. ಕೆ. ನಾಯಕರವರ ಪ್ರಯತ್ನದಿಂದ ನಡೆದಿದ್ದುವು. ಶಿಂಧೆಯವರು ಸ್ಕೂಲಿಗೆಂದು ೫೦೦೦ ರೂಪಾಯಿ ಧನ ಸಹಾಯ ಬೇಡಿದ್ದರು ಆದರೆ ೧೦೦೦ ರೂಪಾಯಿ ಮಾತ್ರ ಸಂದಿತು. ೧೯೧೯ರಲ್ಲಿ ಕೃಷ್ಣಾಜಿ ಗೋವಿಂದರಾವ್ ಪಾಕಾಡೆಯವರ ಸಂಗಡ ಶಿಂಧೆಯವರು ೧೯೧೯ರಲ್ಲಿ ಬೆಂಗಳೂರಿಗೆ ಭೇಟಿಕೊಟ್ಟರು.[೮]

ಮುಂಬೈಯಿಂದ ಪ್ರಚಾರ ಸಂಘವನ್ನು (೧೯೧೨) ಸ್ಥಳಾಂತರಿಸಲಾಯ್ತು. ಸರ್ಕಾರದ ಸಹಾಯಒದಗಿತು. ಮತ್ತು ಸಂಸ್ಥೆಗೆ ಕಟ್ಟಡದ ಅವಶ್ಯಕತೆ ಇತ್ತು. ಅಹಲ್ಯಾಶ್ರಮದ ಕೆಲಸ ನಡೆದಿದ್ದಾಗ ಶಿಂಧೆಯವರ ಮೇಲೆ ಆರೋಪದ ಹೊಣೆ ಹೊರಿಸಲಾಯ್ತು. ಶಿಂಧೆಯವರು ಸಂಸ್ಥೆಗೆ ರಾಜಿನಾಮೆ ಸಲ್ಲಿಸಿದರು. ಆದರೆ ದಲಿತ ನಿವಾರಣ ಕೆಲಸಕ್ಕೆ ಮಾತ್ರ ಹಿಂದೆಗೆಯಲಿಲ್ಲ. ಸಂಸ್ಥೆಯಲ್ಲಿ ⅔ ಸದಸ್ಯರು ದಲಿತರಿರಬೇಕೆಂದೂ ಮತ್ತು ಇತರರಲ್ಲಿ ಎರಡು ಮಹಾರ್, ಚಂಬರ್, ಮಂಗ್‌ಭಂಗಿ ಮತ್ತು ೨ ಮುಸ್ಲಿಮರ ಸದಸ್ಯತ್ವ ಇರಬೇಕೆಂದು ಮರಾಟ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಒಬ್ಬೊಬ್ಬ ಇರಬೇಕೆಂದು ಠರಾವು ಮಂಡಿಸಿದರು. ಇದನ್ನು ಸರ್ವಾನುಮತದಿಂದ ಒಪ್ಪಿತು.

ಪುಣೆಯ ಅಹಲ್ಯಾಶ್ರಮದ ಶಂಕುಸ್ಥಾಪನೆ ಮಾಡಲು ಮೈಸೂರಿನ ಮಹಾರಾಜರಾದ ಕೃಷ್ಣ ರಾಜ ಒಡೆಯರ್‌ನ್ನು ಕರೆಯಲು ೧೯೨೧ರಲ್ಲಿ ಶಿಂಧೆಯವರು ಮೈಸೂರಿಗೆ ಭೇಟಿ ಇತ್ತರು. ಮೈಸೂರಿನ ರಾಜರನ್ನು ನೋಡಲು ಮೈಸೂರು ದರ್ಬಾರ್‌ಡ್ರೆಸ್ನಲ್ಲಿ ಬಂದು ಕಾಣಬೇಕೆಂದೂ ಮಹಾರಾಜ ಸೆಕ್ರೆಟರಿಯವರ ಆದೇಶ. ಆ ಡ್ರೆಸ್ ಅವರ ಹತ್ತಿರ ಇರಲಿಲ್ಲ. ಅದನ್ನು ಎರವಲು ಪಡೆಯ ಬಹುದೆಂದು ಸೆಕ್ರೆಟರಿ ತಿಳಿಸಿದ. ಮೈಸೂರು ಜರತಾರಿ ಪೇಟ, ನಿಲುವಂಗಿ, ಶರವಾನಿ ಕೊಟ್ಟು ಶಿಂಧೆಯವರು ಮಹಾರಾಜರನ್ನು ಕಾಣಲು ಹೋದರು. ಸರ್ಕಸ್ಸಿನಲ್ಲಿರುವಂತಿತ್ತು ಅವರ ಪೋಷಾಕು. ಮಹಾರಾಜರು ಇವರಿಗಾಗಿ ಕಾದಿದ್ದರು. ಇವರನ್ನು ಗಂಭೀರವಾಗಿ ಬರಮಾಡಿಕೊಂಡರು ಮತ್ತು ಶಿಂಧೆಯವರನ್ನು ಕೂಡಿಸಿ ಹತ್ತಿರ ಕೂತರು. ನಮ್ರತೆಯಿಂದ ಶಿಂಧೆಯವರು "ಮಹಾರಾಜ ಈ ಪೋಷಾಕು ನಮ್ಮಂಥವರು ಧರಿಸೇ ನಿಮ್ಮನ್ನು ನೋಡಬೇಕೆ?" ಎಂದರು. ಇದನ್ನು ಕೇಳಿ ಸಂಕೋಚಗೊಂಡ ಮಹಾರಾಜರು ಇದೆಲ್ಲಾ ನಿಮಗೆ ಬೇಕಾಗಿರಲಿಲ್ಲ ತಪ್ಪಾಯಿತು ಎಂದರು. ಶಿಂಧೆಯವರು ತಾವು ಬಂದ ಕಾರಣ ತಿಳಿಸಿದರು. ಮಹಾರಾಜರು ಯುವ ರಾಜರನ್ನು ಸಮಾರಂಭಕ್ಕೆ ಕಳುಹಿಸುವುದಾಗಿ ತಿಳಿಸಿದರು. ಆಗ ಮೈಸೂರು, ಮದ್ರಾಸ್ ಪ್ರಾಂತ್ಯದಲ್ಲಿ ಅಸ್ಪೃಶ್ಯರನ್ನು ಬಿಷಪ್ ವೈಟ್‌ಹೆಡ್ ಎಂಬಾತ ಮತಾಂತರಿಸುತ್ತಿದ್ದ ಚಳುವಳಿ ನಡೆದಿತ್ತು. ಶಿಂಧೆಯವರು ಮಹಾರಾಜರಿಗೆ ತಿಳಿಸಿದರು. ಮಹಾರಾಜರು ತಮಗೆ ಇಂತಹ ವಿಷಯಗಳೆಲ್ಲಾ ಕಿವಿಗೆ ಬರುವದಿಲ್ಲವೆಂದೂ, ಮತ್ತು ತಿಳಿಸಿದ್ದಕ್ಕೆ ಅಭಾರಿಯಾಗಿದ್ದೇನೆಂದು ತಿಳಿಸಿದರು. ಡಿಪ್ರೆಸ್ಡ್ ಮಿಷಿನ್ ಕೆಲಸವನ್ನು ಮಹಾರಾಜರು ಮೆಚ್ಚಿದ್ದಲ್ಲದೆ ಮುಂಬೈನ ಸಮ್ಮೇಳನಕ್ಕೆ ಬರುವೆನೆಂದು ಆಶ್ವಾಸನಕೊಟ್ಟು ಹಾಗೆಯೇ ಮಾಡಿದರು.[೯]

೧೯೧೭ರಲ್ಲಿ ಆನಿಬೆಸೆಂಟ್ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಪ್ರೆಸಿಡೆಂಟ್ ಆದಾಗ 'ಇಂಡಿಯಾ ದೇಶದ ಸಮಸ್ತ ಜನರು ದಲಿತರಿಗೆ ಆಗಿರುವ ಅನ್ಯಾಯವನ್ನು ಕೊನೆಗಾಣಿಸಬೇಕು ಶಿಂಧೆಯವರು, 'ಕಾಂಗ್ರೆಸ್ ಕಮಿಟಿಯಲ್ಲಿ ಠರಾವು ಮಂಡಿಸುವಂತೆ ಮಾಡಿದರು.' ಈ ಠರಾವು ಎಲ್ಲರ ಗಮನ ಸೆಳೆದು ಮುಂದೆ ಅದು ಇಂಡಿಯಾದ ಬಹು ದೊಡ್ಡ ಅಂಗವಾಯಿತು.

ಮೊದಲಿನಿಂದ ಶಿಂಧೆಯವರು, ದಲಿತರು ಎಲ್ಲರೊಡನೆ ಬೆರೆತು ಸಂಪರ್ಕ ಹೊಂದಬೇಕು ಎಂದು ವಾದಿಸಿದರು. ಎಂದೂ ಅವರನ್ನು ಬೇರೆಯವರೆಂದು ಭಾವಿಸಲಿಲ್ಲ. ೧೯೨೪ ವೈಕಾಂ ಸತ್ಯಾಗ್ರಹದಲ್ಲಿ ಕೂಡ ಭಾಗಿಯಾದರು. ಮಹಾತ್ಮಾಗಾಂಧಿಯವರೊಡನೆ ಕಾಂಗ್ರೆಸ್ ಅಸ್ಪೃಶ್ಯತಾ ನಿವಾರಣೆಗಾಗಿ ಅವರು ಹೆಚ್ಚು ಗಮನಕೊಟ್ಟಿಲ್ಲವೆಂದು ವಾದಿಸಿದರು. ಅವರಿಗೆ ಅಸ್ಪೃಶ್ಯತಾ ನಿವಾರಣೆಗಾಗಿ ಹೊರಾಡುವದು ಅತ್ಯಂತ ಮುಖ್ಯವಾಗಿತ್ತು.

**ಶಿಂಧೆಯವರ ಬರವಣಿಗೆ**

ಶಿಂಧೆಯವರ ಬರಹಗಳಲ್ಲಿ ಅವರ ಪ್ರಗತಿಪರ ಯೋಜನೆ ಮತ್ತು ಬಹುಮುಖ ಪ್ರತಿಭೆಯನ್ನು ಕಾಣುತ್ತೇವೆ. ಬಿ. ಬಿ. ಕೇಸ್ಕರ್‌ರವರ ಸಂಪಾದಕತ್ವದಲ್ಲಿ ೧೯೧೨ ರಲ್ಲಿ ಹೊರಬಂದ ಮರಾಠಿ ಪುಸ್ತಕ, "ಲೇಖ ವ್ಯಾಖ್ಯಾನ ಅಣಿ ಉಪದೇಶ"ವು ಮೂರು ಭಾಗದಲ್ಲಿದ್ದು ಅವರು ಮಾಡಿದ ಭಾಷಣ, ಲೇಖನ ಎಲ್ಲವನ್ನೂ ಕಲೆ ಹಾಕಿದೆ. ಇದರಲ್ಲಿ ಅವರು ಬೆಂಗಳೂರಿಗೆ ಭೇಟಿ ಕೊಟ್ಟಾಗಿನ ಅವರ ಅನುಭವ ಮತ್ತು ಮಂಗಳೂರಿನ ಅವರ ವಿಸ್ತಾರ ಪ್ರವಾಸ, ಮತ್ತು ರಂಗರಾವ್‌ರವರ ಪ್ರಶಂಸೆ ಇವೆಲ್ಲಾ ಲಿಖಿತವಾಗಿದೆ. ಇವರಲ್ಲದೆ ಹಲವಾರು ಧಾರ್ಮಿಕ ಲೌಕಿಕ, ಮುರಳಿ (ದೊಡ್ಡದಾಗಿ) ಬಗ್ಗೆ ಚರ್ಚೆ ಉಪನ್ಯಾಸ ಇದೆ. ಬಹಿಷ್ಕೃತ ಭಾರತದಲ್ಲಿ ತಾವು ಪ್ರತ್ಯಕ್ಷ ಕಂಡ ಅಸ್ಪೃಶ್ಯರ ಪ್ರಶ್ನೆಯನ್ನು ಕೂಲಂಕಷವಾಗಿ ಚರ್ಚಿಸಲಾಗಿದೆ. ಇದಲ್ಲದೆ. ಈ ಪುಸ್ತಕದಲ್ಲಿ ದಲಿತ ಸಮಾಜದ ಬಗ್ಗೆ ಸುದೀರ್ಘ ಲೇಖನ ಇದೆ. ಇದಲ್ಲದೆ *V. R. Shinde : the Theistic Directory and a Review of the liberal Religious thought and work in the civilized world 1912-* ಈ ಪುಸ್ತಕದಲ್ಲಿ ದಲಿತ ಸಮಾಜದ ಬಗ್ಗೆ ಸುದೀರ್ಘಲೇಖನ ಇದೆ. ಇದಲ್ಲದೆ ಮಂಗಳೂರು, ಬೆಂಗಳೂರು ಬ್ರಹ್ಮಸಮಾಜದ ಬಗ್ಗೆ ಹೆಚ್ಚಿನ ಮಾಹಿತಿ ದೊರೆಯುತ್ತದೆ. ಇದು ಅತ್ಯಂತ ಉಪಯುಕ್ತವಾಗಿದೆ. ಇನ್ನು ಮಾನಗುಡಕರ್‌ರವರ 'ಶಿಂಧೆ' ಲೇಖನ ಸಂಗ್ರಹ ೧೯೬೩, ಶಿಂಧೆಯವರ ಪ್ರಬುದ್ಧ ವಿದ್ವತ್‌ಪೂರ್ಣ ಲೇಖನ, 'ಕಾನಡಿ ಅಣಿ ಮರಾಠಿ' ತುಲನಾತ್ಮಕ ಅಧ್ಯಯನ ಸುದೀರ್ಘವಾಗಿದೆ. ಮತ್ತೊಂದು ಲೇಖನ ಕೊಂಕಣಿ ಹಾಗೂ ಮರಾಠಿ': ಪರಸ್ಪರ ಸಂಬಂಧ ಕುರಿತದ್ದು. ಇದು ಸಾಹಿತ್ಯಕಾರರಿಗೆ ತುಂಬಾ ಉಪಯೋಗ ಅಂತ ನನ್ನ ಅನಿಸಿಕೆ. 'ಭಾರತೀಯ ಅಸ್ಪುಸ್ಯತೇಚ ಪ್ರಶ್ನ' ಬರೆದದ್ದು ೧೯೩೩ರಲ್ಲಿ. ಇನ್ನು ಅವರೇ ಬರೆದಿಟ್ಟ *Memoirs* 'ಮ್ಯಾಝಾ ಅಟವಣಿ ಅನಿ ಅನುಭವ' ಅತ್ಯಂತ ಸರಳ ಆತ್ಮಚರಿತ್ರೆ. ಇದನ್ನು ಅವರ ಚಿರಂಜೀವಿ ಅವರ ಹಸ್ತಲಿಖಿತ ಪ್ರತಿಯನ್ನು ಪುನಃ ತಯಾರಿಸಿ ಪ್ರಿಂಟಾಗಿಸಿದ್ದು, ಇದು ೧೯೫೮ರಲ್ಲಿ ಹೊರಗೆ ಬಂತು. ಮಹರ್ಷಿ ಶಿಂಧೆಯವರನ್ನು ಹತ್ತಿರದಿಂದ ಕಂಡ ಪಿ. ಬಿ. ಕೋಲಕ್‌ರವರ ಮುನ್ನುಡಿ ಇದೆ. ಇತ್ತೀಚೆಗೆ ಬಂದ ಪುಸ್ತಕ ಜಿ. ವಿ. ಪವರ್‌ರವರ *Vithal Ramji Shinde;* ನ್ಯಾಷನಲ್ ಬುಕ್ ಟ್ರಸ್ಟ್ ಹೊರತಂದಿದೆ. ಇದಕ್ಕೆ ಹಿಂದೆ ಎಮ್. ಎನ್. ಗೋರೆ *Vithal Ramji Shinde; an assessment of his contribution.* ಇದಕ್ಕೂ ಹಿಂದೆ ಸಿ. ಎಮ್. ಕುಲಕರ್ಣಿಯವರ ಮಾರ್ಗದರ್ಶನದಲ್ಲಿ *S. Ghurge* ಅವರು *Renaissance in Western India; Karmaveer V.R. Shinde* ಎಂಬ ಪ್ರಬಂಧ ಪುಸ್ತಕ ರೂಪದಲ್ಲಿದೆ.

**ಅನುಬಂಧ**

ಮಹರ್ಷಿ ಶಿಂಧೆಯವರು ತಮ್ಮ ಯತ್ನದಲ್ಲಿ ಸಫಲರಾದರೆ? ಎಂಬ ಪ್ರಶ್ನೆ ಕಠಿನವಾದದ್ದು. ಬಹಳ ಜನ ಮಹರ್ಷಿ ಶಿಂಧೆಯವರ ಕೆಲಸವನ್ನು ಹಾಸ್ಯಮಾಡಿ "ಇದೆಲ್ಲಾ ಶಿಂಧೆ ಸರ್ಕಸ್' ಎಂದದ್ದು ಉಂಟು. ಆದರೆ ಶಿಂಧೆಯವರು ಇದ್ಯಾವುದಕ್ಕೂ ಮಣಿಯಲಿಲ್ಲ. ಅಸ್ಪೃಶ್ಯ ನಿವಾರಣ ಕಾರ್ಯದಲ್ಲಿ ಶಿಂಧೆಯವರಿಗಿದ್ದ ತ್ಯಾಗ ಅಸಾಧಾರಣವಾದದ್ದು. ಅಸ್ಪೃಶ್ಯತಾ ನಿವಾರಣ ಕಾರ್ಯಕ್ಕೆ ತಮ್ಮ ಸಮಯವನ್ನು ವಿನಿಯೋಗಿಸಿ, ಧರ್ಮ ಪ್ರಚಾರಕಾರ್ಯಕ್ಕೆ ರಾಜೀನಾಮೆ ಇತ್ತರು. "ದಲಿತರ ಪ್ರಶ್ನೆಯನ್ನು ಅವರು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ದೃಷ್ಟಿಯಿಂದ ನೋಡಿದರು"[೧೦] ಆರ್ಥಿಕ ಬೆಂಬಲ ದಲಿತರ ಪೋಷಣೆಗೆ ಅತ್ಯಂತ ಮುಖ್ಯ ಎಂದು ಮನಗಂಡಿದ್ದರಿಂದ ಅವರು ಸ್ವಾವಲಂಬಿಗಳಾಗಿರಬೇಕೆಂದೂ, ಮತ್ತು ಸಮಾಜದಲ್ಲಿ ಎಲ್ಲರೊಡನೆ ಬೆರೆತು ಒಂದಾಗಲು ಶ್ರಮಿಸಿದರು. ಅವರಿಗೆ ಇದು ರಾಷ್ಟ್ರೀಯ ಪ್ರಶ್ನೆಯಾಗಿತ್ತು. ಶಿಂಧೆಯವರು ತಮಗಾಗಿ ಏನನ್ನೂ ಬಯಸಿದವರಲ್ಲ. ತಮಗೆ ಸರಿಹೊಂದದಿದ್ದರೆ ಸಂಘ, ಸಂಸ್ಥೆಗಳಿಂದ ದೂರವಿರುತ್ತಿದ್ದರು. ಆದರೆ ೧೯೧೯ರ ಹೊತ್ತಿಗೆ ದಲಿತರ ಎರಡನೆ ಪೀಳಿಗೆ ಮುಂದೆ ಬಂದಿದ್ದು, ಅದಕ್ಕೆ ಶಿಂಧೆಯವರೇ ಎಲ್ಲಾ ಅಧಿಕಾರ ಇಟ್ಟುಕೊಂಡಿದ್ದಾರೆ, ತಮ್ಮ ಕಾರ್ಯ ಬಾಹುಳ್ಯದಲ್ಲಿ ಎಲ್ಲರನ್ನೂ ಸೇರಿಸಿಕೊಂಡಿಲ್ಲ ಎಂಬ ಭಾವನೆ ಹುಟ್ಟಿತು. ಅದೂ ಅಲ್ಲದೆ ಅಂಬೇಡ್ಕರ್ ಅಂಥವರ ಯುವ ಜನಾಂಗದ ಮುಂದಾಳತ್ವ ಬದಲಾಗಿ ಶಿಂಧೆಯವರು ಹಿಂದೆ ಸರಿದರು.

ಅಖಿಲ ಭಾರತದ ಮಟ್ಟಿಗೆ ದಲಿತ ಪ್ರಶ್ನೆಯನ್ನು ಒಯ್ದು ಭಾರತದಲೆಲ್ಲಾ ತಮ್ಮ ಡಿಪ್ರೆಸ್ಡ್‌ಕ್ಲಾಸ್ ಮಿಷನ್ ಸಂಘಟನೆಯನ್ನು ಒಗ್ಗೂಡಿಸಿ ಅದರ ಏಳ್ಗೆಗೆ ದುಡಿದು ಅದನ್ನು ಇಂಡಿಯನ್ ನ್ಯಾಷನಲ್ ಕಾಂಗ್ರೆಸ್‌ಗೆ ಒಯ್ದವರು ಶಿಂಧೆಯರು. ಆದರೆ ಇದರ ಪೂರ್ಣ ಸಫಲತೆಯನ್ನು ಕಾಣದೆ (೨ ಜನವರಿ ೧೯೪೪) ನಿಧನರಾದರು. ಮಹರ್ಷಿ ಶಿಂಧೆಯವರ 'ಅಸ್ಪುಶ್ಯಾಚಿ ಪ್ರಶ್ನೆ' ಪುಸ್ತಕದಲ್ಲಿ ಇದೆಲ್ಲದರ ವಿವರ ಸಿಗುತ್ತದೆ. ಶಿಂಧೆಯವರು ಆತ್ಮ ಚರಿತ್ರೆಯಲ್ಲಿ ಹಲವಾರು ಮುಖ್ಯ ವಿಷಯಗಳು ಅಡಕವಿದೆ. ಅಸ್ಪೃಶ್ಯತಾ ನಿವಾರಣಾ ಪ್ರಚಾರ ಕಾರ್ಯ ಆರಂಭಿಸಿದಾಗ

ಅವರನ್ನು ಅನೇಕರು ಅವಹೇಳನ ಮಾಡಿದರು. ಕೇವಲ ಅವರ ತಂಗಿ ಜನಾಬಾಯಿ, ಖಾದರ್ ಮತ್ತು ಅನೇಕ ದಲಿತ ಯುವಕರೇ ಅವರ ಬಂಡವಾಳ ಆದರೆ ಹಲವಾರು ಸಲ ಜನರ ತಪ್ಪು ತಿಳುವಳಿಕೆಯಿಂದಾಗಿ ಅವಹೇಳನಕ್ಕೆ ಗುರಿಯಾಗಬೇಕಾಯ್ತು. ಮಂಗಳೂರಿನಲ್ಲಿ ಕೂಡ ಅವರ ಬಗ್ಗೆ ತಪ್ಪು ಕಲ್ಪನೆ ಉಂಟಾಯಿತು. ಹೀಗಾಗಿ ಮಂಗಳೂರಿನ ಬ್ರಹ್ಮಸಮಾಜಕ್ಕೆ ರಾಜೀನಾಮೆ ಇತ್ತರು. ಅಷ್ಟು ಹೊತ್ತಿಗೆ ರಾಜಕೀಯ ಸನ್ನಿವೇಶ ಪ್ರಬಲವಾಗಿ ಅವರು ವೈಕೊಂ ಸತ್ಯಾಗ್ರಹದಲ್ಲಿ ಪಾಲ್ಗೊಂಡಿದ್ದರು. ಮತ್ತು ಗಾಂಧಿಜೀಯವರ ಪೂರ್ಣ ಗಮನ ಅಸ್ಪೃಶ್ಯತಾ ನಿವಾರಣೆಯಲ್ಲಿಲ್ಲ ಎಂಬುದನ್ನು ಗಾಂಧೀಜೀಯವರ ಸಂಗಡ ವಾದಿಸಿದ್ದರು. ೧೯೩೩ರ ತನಕ ತಮ್ಮ ಶಕ್ತಿಯನ್ನು ಧರ್ಮ ಪ್ರಚಾರ, ದಲಿತ ಸಂಘಟನೆ ಮತ್ತು ರಾಷ್ಟ್ರೀಯ ಚಳುವಳಿಯಲ್ಲಿ ತೊಡಗಿಸಿಕೊಂಡಿದ್ದರಿಂದ ದೃಢವಾದ ಆರೋಗ್ಯ ವಿಪರೀತ ಕುಗ್ಗಿ ಸುಮಾರು ೧೯೩೩-೪೩ರಲ್ಲಿ ಶಿಂಧೆಯವರು ಚಲಾವಣೆಯಲ್ಲಿರಲಿಲ್ಲ. ಮನುಷ್ಯ ಚಲಾವಣೆಯಲ್ಲಿ ಇದ್ದರೆ ತಾನೆ ಯಾರಿಗೂ ಬೆಲೆ! ಹೀಗಾಗಿ ಮಹರ್ಷಿ ವಿಠಲ್ ರಾಮ್ ಶಿಂಧೆ ಮಹಾರಾಷ್ಟ್ರದ ಉಪೇಕ್ಷಿತ ಮನುಷ್ಯರ ಪೈಕಿ ಒಬ್ಬರಾದರು. ಮತ್ತು ಕರ್ನಾಟಕಕ್ಕೆ ಅಪರಿಚಿತರಾಗಿ ಉಳಿದರು.



## ಆಧಾರಸೂಚಿ ಮತ್ತು ಟಿಪ್ಪಣಿಗಳು

- • ಶಿಂಧೆಯವರ ತಂದೆ ಬಸಪ್ಪ ವಿದ್ಯಾವಂತರಾಗಿ, ಉಗ್ರಾಣದ ಅಧಿಕಾರಿಯಾಗಿದ್ದರು ವರಕಾರಿ ಸಂಪ್ರದಾಯಕ್ಕೆ ಸೇರಿದವರು. ಪತ್ನಿ ಯಮುನಾಬಾಯಿ. ಕೆಲಸವನ್ನು ಬಿಟ್ಟು ತಾವು ಮಾಡಿದ ಕೆಲಸಕ್ಕೆ ಏನನ್ನೂ ಅಪೇಕ್ಷಿಸಲಿಲ್ಲ.

೧. ವಸಂತ ವ್ಯಾಖ್ಯಾನಮಾಲಾ, ಮುಖ್ಯವಾಗಿ ಮಹಾರಾಷ್ಟ್ರದಲ್ಲಿ ಉನ್ನತ ಮಟ್ಟದ ವಿದ್ವಾಂಸರನ್ನು ಕರೆದು ಭಾಷಣ ಮಾಡಿಸಿ ಸಂತೋಷಪಡುವ ಮತ್ತು ಅದರ ಬಗ್ಗೆ ಚರ್ಚೆ ನಡೆಸುವ ಕಾರ್ಯಕ್ರಮವಿದೆ. ಇದು ಮೇ ತಿಂಗಳಲ್ಲಿ ನಡೆಯುವ ಒಂದು ಕಾರ್ಯಕ್ರಮ.

೨. G. M. Pawar., Vithal Ramji Shinde. p. 25.

೩. G. M. Pawar., Vithal Ramji Shinde. P. 31.

೪. Indian Social Reformer, 15th Jan 1944.

೫. M. S. Gore: *Vithal Ramji Shinde*, P. 162, See also V. R. Shinde; The Theistic Directory and a Review of the liberal. Religious thought and work in the civilized world. 1912.

೬. Indian Social Reformer. 1st June 1913.

೭. Maji Athvani., p. 346.

೮. Maji Athavari,, pp. 299-300.

೯. Maji Athavari., p. 344. a ಬೆಂಗಳೂರು ರಸ್ರಾಕ್ಸಿಲ್ ಏಕ್ ಪೋರಿ (ಸುಬೋಧ ಪತ್ರಿಕೆಯಲ್ಲಿ ಬರೆದದ್ದು, ೨೭-೧೨-೧೯೦೩, ಮರು ಅಚ್ಚು ಹಾಕಲಾಗಿದೆ. ಮಂಗಳೂರು ಏಕಿಲ್ ಶಾಹಿ ವಿಶೇಷ ಗೋಷ್ಠಿ : ೧೨-೧೦-೧೯೧೧ರಲ್ಲಿ ಬರೆದದ್ದು.

೧೦. M. S. Gore., *Vithal Ramji Shinde*, An Assessment and his contributions, p. 191.

ಎಂ. ಬಿ. ಪಾಟೀಲ್*

# ಕರಾವಳಿ ಕರ್ನಾಟಕದಲ್ಲಿ ಬ್ಯಾಂಕಿಂಗ್ ಉದ್ಯಮದ ಪ್ರಾರಂಭದ ಹಂತ (೧೮೬೮-೧೯೪೯)

ಪ್ರಕೃತಿ ರಮ್ಯ ಕರಾವಳಿ ಕರ್ನಾಟಕವು ತನ್ನದೇ ಆದ ಹಲವಾರು ವೈಶಿಷ್ಟ್ಯಗಳಿಂದ ಕೂಡಿದೆ. ಕರ್ನಾಟಕವನ್ನು ಒಳಗೊಂಡಂತೆ ಭಾರತದ ಸುಸಂಘಟಿತ ವಲಯದ, ಆಧುನಿಕ ಬ್ಯಾಂಕಿಂಗ್ ಉದ್ಯಮಕ್ಕೆ ೧೮೦೬ರಿಂದ ಅಂದರೆ ಬಂಗಾಲದ ಪ್ರೆಸಿಡೆನ್ಸಿ (*presidency*) ಬ್ಯಾಂಕಿನ ಆರಂಭದಿಂದ ಸುಮಾರು ೨೦೦ ವರ್ಷಗಳ ಸುದೀರ್ಘ, ಅನೇಕ ಏಳು-ಬೀಳುಗಳ ರೋಚಕ ಇತಿಹಾಸ ಉಂಟು.

ಭಾರತದ ಬ್ಯಾಂಕಿಂಗ್ ಇತಿಹಾಸದಲ್ಲಿ ಕರಾವಳಿ ಕರ್ನಾಟಕಕ್ಕೆ ಅದರಲ್ಲಿಯೂ ವಿಶೇಷವಾಗಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗೆ ವಿಶೇಷವಾದ ಸ್ಥಾನ-ಮಾನ ಉಂಟು. ಈ ಜಿಲ್ಲೆಯನ್ನು ದೇಶದ ಬ್ಯಾಂಕಿಂಗ್ ಉದ್ಯಮ ಸಂಸ್ಕೃತಿಯ ಪ್ರಥಮ ತೊಟ್ಟಿಲು ಎಂತಲೂ ಕರೆಯಬಹುದು. ಈ ಜಿಲ್ಲೆಯು ಸುಮಾರು ೧೩೪ ವರ್ಷಗಳ, ರೋಚಕ ಬ್ಯಾಂಕಿಂಗ್ ಇತಿಹಾಸವನ್ನು ಹೊಂದಿರುವದು.

ಕರಾವಳಿ ಕರ್ನಾಟಕದ ಸಂಘಟಿತ ವಲಯದ ಆಧುನಿಕ ಬ್ಯಾಂಕಿಂಗ್ ಉದ್ಯಮವು ೧೮೪೩ರಲ್ಲಿ ಪ್ರಾರಂಭವಾದಾಗ ಮದ್ರಾಸ್ ಪ್ರೆಸಿಡೆನ್ಸಿ ಬ್ಯಾಂಕು, ಮಂಗಳೂರಿನಲ್ಲಿ ೧೮೬೮ರಲ್ಲೂ ಜಿಲ್ಲೆಯಲ್ಲಿ ಪ್ರಥಮ ಶಾಖೆಯನ್ನು ತೆರೆಯುವ ಮೂಲಕ ಪ್ರಾರಂಭವಾಯಿತು. ಮಂಗಳೂರು ಶಾಖೆಯ ಮುಖ್ಯ ಉದ್ದೇಶ ಕರಾವಳಿಯ ಪ್ರಮುಖ ತೋಟದ ಬೆಳಗಳಾದ ಕಾಫೀ ಮೆಣಸು, ಅಡಿಕೆ ಮತ್ತು  ಉದ್ಯಮದಲ್ಲಿ ತೊಡಗಿದ್ದ ಬ್ರಿಟೀಷ್ ರಫ್ತು ವ್ಯಾಪಾರಿ ಸಂಸ್ಥೆಗಳಿಗೆ ಹಣಕಾಸಿನ ನೆರವನ್ನು ಒದಗಿಸುವದಾಗಿತ್ತು. (ಇದಕ್ಕೂ ಪೂರ್ವದಲ್ಲಿಯೇ ಬೊಂಬಾಯಿ ಪ್ರೆಸಿಡೆನ್ಸಿ ಬ್ಯಾಂಕ್ ೧೮೬೩ರಲ್ಲೂ ಧಾರವಾಡದಲ್ಲಿ, ಮದ್ರಾಸ್ ಬ್ಯಾಂಕ್ ಬೆಂಗಳೂರಿನಲ್ಲಿ ೧೮೬೪ರಲ್ಲಿ ತನ್ನ ಶಾಖೆಗಳನ್ನು ತೆರೆದಿತ್ತು).

ಒಂದು ಪ್ರದೇಶದ ಆರ್ಥಿಕ ಅಭಿವೃದ್ಧಿಯಲ್ಲೂ ಅಸಂಘಟಿತ ವಲಯದ ಹಣಕಾಸು ಸಂಸ್ಥೆಗಳು ಸಹ ತಮ್ಮದೇ ಆದ ಪ್ರಭಾವ ವಲಯಗಳನ್ನು ಹೊಂದಿರುವುದು. ಇತರ ಪ್ರದೇಶಗಳಂತೆ ಇಲ್ಲಿಯೂ ಸಹ ಖಾಸಗಿ ಸಾಹುಕಾರರು, ಜಮೀನುದಾರರು, ಶ್ರೀಮಂತ ವ್ಯಾಪಾರಸ್ಥರು ಯಾವುದೇ ನಿರ್ಬಂಧ ಇಲ್ಲದೇ ಲೇವಾದೇವಿ ಉದ್ಯಮದಲ್ಲಿ ತೊಡಗಿದ್ದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗೌಡಸಾರಸ್ವತ ಬ್ರಾಹ್ಮಣರು ಈ ಉದ್ಯಮದಲ್ಲಿ ಪ್ರಮುಖರು ಮತ್ತು ಪರಿಣಿತರು ಆಗಿದ್ದರು. ಇದು ಅಲ್ಲದೇ ತಮಿಳುನಾಡಿನಲ್ಲಿ ಬಹಳ ಜನಪ್ರಿಯವಾಗಿದ್ದ ನಿಧಿಗಳು ಮತ್ತು ಪರಸ್ಪರ ನಂಬುಗೆಯಿಂದ ಕಾರ್ಯನಿರ್ವಹಿಸುತ್ತಿದ್ದ 'ಕುರಿದಂಡುಗಳು' ಹಣದ ಲೇವಾದೇವಿ ವ್ಯವಹಾರದಲ್ಲಿ ತಮ್ಮನ್ನು ತೊಡಗಿದ್ದರು. ಗ್ರಾಮೀಣ ಪ್ರದೇಶಗಳಲ್ಲೂ ನಗರ್ತ ಸಮುದಾಯ ದವರು ಆಹಾರ ಧಾನ್ಯಗಳನ್ನು ಸಾಲದ ರೂಪದಲ್ಲಿ ನೀಡುವ (ಹೋಲಿ ಪದ್ಧತಿ) ವ್ಯವಹಾರ ಮಾಡುತ್ತಿದ್ದರು. ಲೇವಾದೇವಿ ಅಂದಿನ ಸಮಾಜದಲ್ಲಿ ಒಂದು ಗೌರವಯುತ, ಪ್ರತಿಷ್ಠಿತ ಮತ್ತು ಕಡಿಮೆ ಶ್ರಮದ ಹೆಚ್ಚು ಲಾಭದಾಯಕ ಉದ್ಯೋಗವಾಗಿತ್ತು. ಅಂತೆಯೇ ಹಣವುಳ್ಳವರು ವ್ಯವಹಾರದಲ್ಲಿ ತೊಡಗಿದ್ದರು. ೧೮೮೫ರ ಪೂರ್ವದಲ್ಲೂ ಈ ಭಾಗದಲ್ಲಿ ಪ್ರಚಲಿತ ಇದ್ದ ಬಡ್ಡಿದರ ಶೇ ೧೨ ಎಂದು ದಾಖಲೆಗಳಿಂದ ತಿಳಿದು ಬರುವುದು. ೧೯೧೮ರ ವರೆಗೆ ಬಡ್ಡಿಯನ್ನು ನಿಯಂತ್ರಿಸುವ ಯಾವ ಕಾನೂನು ಜಾರಿಯಲ್ಲಿ ಇರಲಿಲ್ಲ. ಪ್ರಪ್ರಥಮವಾಗಿ ಮದ್ರಾಸ್ ಸರ್ಕಾರವು ೧೯೩೫ರ ನಂತರ ಸಾಲಗಾರರ ಹಿತವನ್ನು ರಕ್ಷಿಸುವ ಕಾಯಿದೆಗಳನ್ನು ಜಾರಿಯಲ್ಲಿ ತಂದಿತು.

ಸ್ವಾತಂತ್ರ್ಯ ಪೂರ್ವದ ಮತ್ತು ನಂತರ ದಶಕಗಳ ಆಧುನಿಕ ಬ್ಯಾಂಕಿಂಗ್ ಉದ್ಯಮವನ್ನು ಅಧ್ಯಯನ ದೃಷ್ಟಿಯಿಂದ ಎರಡು ಹಂತಗಳಾಗಿ ವಿಂಗಡಿಸಬಹುದು.

೧. ಸ್ವತಂತ್ರ ಮತ್ತು ಸ್ವಚ್ಛಂದ ಬದುಕಿನ ಕಾಲ: ೧೮೦೬-೧೯೪೯
೨. ನಿಯಂತ್ರಿತ ಬೆಳವಣಿಗೆಯ ಕಾಲ : ೧೯೪೯-೧೯೬೯

**ಆರ್ಬುತನಾಥ ಬ್ಯಾಂಕಿಂಗ್ ಕಂಪನಿ**

ದಕ್ಷಿಣ ಕನ್ನಡ ಜಿಲ್ಲೆಯ ಬಗ್ಗೆ ಹೇಳುವದಾದರೆ. ೧೯೦೬ರಲ್ಲಿ ಇಂದಿನ ಕಾರ್ಪೊರೇಷನ್ ಬ್ಯಾಂಕು ಮತ್ತು ಕೆನರಾ ಬ್ಯಾಂಕು ಆರಂಭಗೊಳ್ಳುವ ಸುಮಾರು ಮೂರುದಶಕಗಳ ಪೂರ್ವದಲ್ಲಿ (೧೮೬೯) ಯುರೋಪಿನ್ ಮೂಲದ ಬೃಹತ್ ಹಣಕಾಸು ಸಂಸ್ಥೆ 'ಅರ್ಬುತನಾಥ ಬ್ಯಾಂಕಿಂಗ್ ಕಂಪನಿ' ಈ ಜಿಲ್ಲೆಯ ಮಂಗಳೂರಿನಲ್ಲಿ ತನ್ನ ಶಾಖೆಯ ಮೂಲಕ ಬ್ಯಾಂಕಿಂಗ್ ವ್ಯವಹಾರವನ್ನು ನಡೆಸುತ್ತಿತ್ತು. ಇದೂ ಅಲ್ಲದೇ ಮದ್ರಾಸ್ ಮೂಲದ ಬಿನ್ನಿ ಕಂಪನಿ ಮತ್ತು ಪ್ಯಾರೀ ಕಂಪನಿಗಳು ಹಣಕಾಸಿನ

* ನಂ. ೩೫೬, ಶ್ರೀರೇಣುಕಾ, ಸಿ.ಟಿ.ಬೆಡ್, ೭ನೇ ಕ್ರಾಸ್, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

ವ್ಯವಹಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದವು. ಬ್ರಿಟೀಷ್ ಕಂಪನಿ ಕಾನೂನಿನ ಅನ್ವಯ ನೊಂದಾಯಿಸಲ್ಪಟ್ಟ ಕೂಡುಬಂಡವಾಳ ಸಂಸ್ಥೆಗಳು ಇವುಗಳಾಗಿದ್ದವು. ಇಂಗ್ಲೆಂಡ್ ಮೂಲದ ಅರ್ಭುತನಾಥ ಕಂಪನಿ ಭಾರತದಲ್ಲಿ ಮಾತ್ರವಲ್ಲದೇ ವಿಶ್ವಾದ್ಯಂತ ತನ್ನ ವ್ಯವಹಾರಗಳನ್ನು ನಡೆಸುತ್ತಿತ್ತು. ಈ ಕಂಪನಿಯ ನಿರ್ದೇಶಕರಲ್ಲು ಒಬ್ಬರಾದ ಸರ್ ಜಾರ್ಜ್ ಅರ್ಭುಲ್‌ನಾಥರು ೧೮೮೯ರಲ್ಲಿ ಮದ್ರಾಸ್‌ಕ್ಕೆ ವ್ಯಾಪಾರಕ್ಕೆ ಬಂದು ನೆಲೆಸಿದ್ದರು. ಮದ್ರಾಸ್ ನಗರದ ಗಣ್ಯ ವ್ಯಕ್ತಿಗಳಾಗಿದ್ದರು. ಮದ್ರಾಸ ಪ್ರಾಂತ್ಯದ ಗವರ್ನರ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕರು, ಶಾಸನ ಸಭೆಯ ಸದಸ್ಯರು ಮುಂತಾದ ಸರ್ಕಾರದ ಉನ್ನತ ಹುದ್ದೆಗಳಲ್ಲು ಕಾರ್ಯನಿರ್ವಹಿಸಿದ್ದರು. 'ಸಾಕಷ್ಟು ಹಣವುಳ್ಳ ಪ್ರತಿ ಒಬ್ಬ ವ್ಯಕ್ತಿಯೂ ಈ ಕಂಪನಿಯ ಸಂಗಡ ಬ್ಯಾಂಕಿನ ವ್ಯವಹಾರ ನಡೆಸುತ್ತಿದ್ದರು.' ಇಂತಹ ಬೃಹತ್ ಹಣಕಾಸು ಸಂಸ್ಥೆ ೨೦-೧೦-೧೯೦೬ರಲ್ಲಿ ದಿವಾಳಿಯಾಯಿತು. ಕಂಪನಿಯ ದಿವಾಳಿಯಾಗಲು ಒದಗಿಬಂದ ಹತ್ತು ಹಲವಾರು ಕಾರಣಗಳಲ್ಲಿ ಈ ಕಂಪನಿಯು ಭಾರತದಲ್ಲಿ ಮತ್ತು ಬೇರೆ ಬೇರೆ ದೇಶಗಳಲ್ಲಿ ಸಟ್ಟಾ ವ್ಯವಹಾರದಲ್ಲೂ ಮತ್ತು ವಿವೇಚನಾರಹಿತ ವ್ಯವಹಾರಗಳಲ್ಲೂ, ಉದ್ಯಮಗಳಲ್ಲಿ ಗೊತ್ತು ಗುರಿ ಇಲ್ಲದ್ದಾಗಿತ್ತೆಂದು ಲೆಖ್ಖದ ವರದಿಗಳಿಂದ ತಿಳಿದುಬರುವುದು. ಹಣ ತೊಡಗಿಸುವ ಮೂಲಕ ದಿವಾಳಿ ಆಯಿತು. ಈ ಕಂಪನಿಯ ದಿವಾಳಿತನದಿಂದ ಭಾರತದಲ್ಲಿ ೨೩೦೦ ಲೆಖ್ಖದ ಖಾತೆಗಳಿಂದ ರೂ. ೨೭.೫. ಲಕ್ಷ ಮತ್ತು ಅವಧಿ ಠೇವಣಿಯ ಠೇವಣಿ ಖಾತೆಗಳಲ್ಲಿ (*Fixed deposited A/c*) (ಸುಮಾರು ೪೦೦೦) ಹಣ ತೊಡಗಿಸಿದ ಠೇವಣಿ ಮೊತ್ತ ರೂ. ೨.೫೦ ಕೋಟಿಯಾಗಿದ್ದು ಸಾರ್ವಜನಿಕ ಹಣಕ್ಕೆ ಪಂಗನಾಮ ಹಾಕಲಾಯಿತು. ಇದೇ ಕಾಲಕ್ಕೆ ಬಿನ್ನಿ ಕಂಪನಿ ಮತ್ತು ಪ್ಯಾರೀ ಕಂಪನಿಗಳೂ ಸಹ ದಿವಾಳಿಗೊಂಡು ಸಾರ್ವಜನಿಕರನ್ನು ಸುಮಾರು ೬೦ ಲಕ್ಷರೂವರೆಗೆ, ವಂಚಿಸಿದ ಬಗ್ಗೆ ಮಾಹಿತಿ ದೊರೆಯುವುದು.

ಮಂಗಳೂರಿನ ಅರ್ಭುತನಾಥ ಕಂಪನಿ ಬ್ಯಾಂಕಿಂಗ್ ವ್ಯವಹಾರ ನಡೆಸಲು ನೊಂದಾಯಿಸದಿದ್ದರೂ ಬ್ಯಾಂಕಿಂಗ್ ವ್ಯವಹಾರ ನಡೆಸುತ್ತಿತ್ತು. ಮಂಗಳೂರಿನ ಶ್ರೀಮಂತ ವರ್ಗದವರು ಅದರಲ್ಲಿಯೂ ಕ್ರಿಶ್ಚಿಯನ್ ಸಮುದಾಯದವರು, ಹೆಂಚಿನ ಕೈಗಾರಿಕೆಗಳ ಮಾಲಿಕರು, ಜಮೀನುದಾರರು ಠೇವಣಿ ರೂಪದಲ್ಲಿ ತೊಡಗಿಸಿದ್ದ ತಮ್ಮ ಹಣವನ್ನು ಕಳೆದುಕೊಂಡರು. ಈ ಸಂಸ್ಥೆಯ ಹಣಕಾಸಿನ ಬದ್ಧತೆಯ ಬಗ್ಗೆ ಸಾರ್ವಜನಿಕರಲ್ಲಿ ಅತಿಯಾದ ಭರವಸೆ ಇತ್ತು. ಇದು ದಿವಾಳಿಯಾದ ವಿಷಯ ಬಹು ಬೇಗನೇ ಪ್ರಚಾರವಾಗಲೇ ಇಲ್ಲ ಮತ್ತು ಕೂಡಲೇ ಜನರು ನಂಬಲಿಲ್ಲ.

ಮಂಗಳೂರಿನ ಸ್ಥಳೀಯ ಕನ್ನಡ ಪತ್ರಿಕೆ, **ಸ್ವದೇಶಾಭಿಮಾನಿ**, ದಿನಾಂಕ ೧.೨.೧೯೦೭ರಂದು ಹಣ ಕಳೆದುಕೊಂಡ ಮಂಗಳೂರಿನ ಗಣ್ಯವ್ಯಕ್ತಿಗಳ ಹೆಸರನ್ನು ಪ್ರಕಟಿಸಿತ್ತು.

ಈ ಕಂಪನಿಯಲ್ಲಿ ಹಣ ಕಳೆದು ಕೊಂಡ ಪ್ರಮುಖರಲ್ಲಿ ಖ್ಯಾತ ಸಮಾಜ ಸುಧಾರಕ ಮತ್ತು ಗಾಂಧೀವಾದಿ ಕುದುಮಲ್ ರಂಗರಾವ್ ಸಹ ಒಬ್ಬರು ಎಂಬುದು ತುಂಬಾ ನೋವಿನ ವಿಷಯವಾಗಿತ್ತು. ರಂಗರಾಯರು ಹರಿಜನ, ಗಿರಿಜನರಲ್ಲಿ ಉಳಿತಾಯ ಮನೋಭಾವನೆಯನ್ನು ಪ್ರೇರೆಪಿಸುವ ಮೂಲಕ ಸಂಗ್ರಹಿಸಿದ ನಿಧಿ ರೂ ೧೧,೦೦೦ವನ್ನು ಕಳೆದುಕೊಂಡರು, ಆದರೆ ಈ ಬಡ ಗಾಂಧೀವಾದಿಯವರು ಈ ಸಂಕಟದಿಂದ ಹೇಗೆ ಪಾರಾದರು ಎಂಬುದಕ್ಕೆ ವಿವರಣೆ ಲಭ್ಯ ಇಲ್ಲ.

**ನಂಬಿಕೆ ದ್ರೋಹ**

ಈ ಕಂಪನಿಯ ಕೇಂದ್ರ ವ್ಯಕ್ತಿಯಾಗಿದ್ದ ಜಾರ್ಜ್ ಅರ್ಭುತನಾಥ ಅವರು ದಿವಾಳಿಯ ವಿಷಯವನ್ನು ತನ್ನ ಆಪ್ತ ವಲಯದಲ್ಲಿ ಹಲವರಿಗೆ ಮೊದಲೇ ತಿಳಿಸಿದ್ದರು ಎಂಬುದು ನಂತರ ಗೊತ್ತಾಯಿತು. ಈ ರೀತಿ ಹಣ ಪಡೆದವರಲ್ಲಿ ಅಂದಿನ ಮದ್ರಾಸ ನಗರದ ವಕೀಲರು ಮತ್ತು ಕಾಂಗ್ರೆಸ್ ಪಕ್ಷದ ಕೋಶಾಧಿಕಾರಿಯಾಗಿದ್ದ ವಿ. ಸಿ. ದೇಶಿಕಾಚಾರಿಯವರು ಸೇರಿದ್ದರು ಎಂದು ತಿಳಿದು ಬರುವುದು. ಈ ಹಗರಣದಲ್ಲಿ ಅಂತಿಮವಾಗಿ ಜಾರ್ಜ್ ಅರ್ಭುತನಾಥ ಅವರ ಮೇಲಿನ ೭ ಆರೋಪಗಳು ಸ್ಥಿರಪಟ್ಟು ೧೮ತಿಂಗಳ ಶಿಕ್ಷೆ ಆಯಿತು. ಆದರೆ ಅಂದಿನ ಈ ಭಯಂಕರ ಆರ್ಥಿಕ ಅಪರಾಧಕ್ಕೆ ನೀಡಿದ ಶಿಕ್ಷೆ ಅತ್ಯಲ್ಪ ಎಂದು ಸಾರ್ವಜನಿಕ ವಲಯದಲ್ಲಿ ಮೂಡಿಬಂದ ಅಭಿಪ್ರಾಯವಾಗಿತ್ತು. ಆದರೆ ಈ ಸಂಸ್ಥೆಯ ಅವಸಾನದ ಪರಿಣಾಮ ಬಹಳ ವ್ಯಾಪಕವಾಗಿತ್ತು.

**ದೇಶೀಯ ಮೂಲದ ಬ್ಯಾಂಕುಗಳ ಪ್ರಾರಂಭ**

ಅರ್ಭುತನಾಥ ಕಂಪನಿಯ ಈ ಅವಸಾನದ ಕಾಲದಲ್ಲಿ ಅಂದರೆ ೧೯೦೬ ರ ಸುಮಾರಿಗೆ ಜಿಲ್ಲೆಯ ಬ್ಯಾಂಕಿಂಗ್ ಉದ್ಯಮ ತನ್ನದೇ ಆದ ರೀತಿಯಲ್ಲಿ ಅಂದರೆ ವಿದೇಶಿಯಿಂದ ದೇಶೀಯವಾಗಿ ಬೆಳೆದು ಬರಲು ಸಹಾಯಕವಾಯಿತು. ಒಂದು ಬೃಹತ್ ಸಂಸ್ಥೆ ಅವಸಾನದಿಂದ ಹಲವಾರು ಸಂಸ್ಥೆಗಳು ಹುಟ್ಟಿ ಬರಲು ಕಾರಣವಾದಂತಹ ಇದಕ್ಕೆ ಪೂರಕವಾಗಿ ಗಾಂಧೀಜಿ ಪ್ರೇರಿತ ಸ್ವದೇಶಿ ಚಳುವಳಿ, ಜಿಲ್ಲೆಯಲ್ಲಿ ಬೆಳೆಯುತ್ತಿರುವ ವ್ಯಾಪಾರ ವಾಣಿಜ್ಯ, ಕೈಗಾರಿಕೆಗಳು, ಹೆಚ್ಚುತ್ತಿರುವ ಮಧ್ಯಮ ಮತ್ತು ಕೆಳ ಮಧ್ಯಮ ವರ್ಗದವರ ಹಣಕಾಸಿನ ಬೇಡಿಕೆ ಮುಂತಾದವುಗಳನ್ನು ಸ್ಥಳೀಯವಾಗಿ ಪೂರೈಸಲು ಕೆಲವು ಬ್ಯಾಂಕಿಂಗ್ ಸಂಸ್ಥೆಗಳು ಜಿಲ್ಲೆಯಾದ್ಯಂತ ವ್ಯಾಪಕವಾಗಿ ಮತ್ತು ತೀವ್ರತರ ಪೈಪೋಟಿಯಿಂದ ಪ್ರಾರಂಭಗೊಂಡವು ಎಂದು ಹೇಳಬಹುದು. ಜಿಲ್ಲೆಯ ಪ್ರತಿಷ್ಠಿತ ಸಮಾಜದವರು, ವಿವಿಧ ವೃತ್ತಿ ನಿರತರು, ಸರ್ಕಾರಿ ಅಧಿಕಾರಿಗಳು ಸ್ಪರ್ಧಾತ್ಮಕ ಮನೋಭಾವನೆಯಿಂದ ತಮ್ಮದೇ ಆದ ಬ್ಯಾಂಕಿಗಳನ್ನು ಹುಟ್ಟು ಹಾಕಿದರು! ಪ್ರಾರಂಭದಲ್ಲೂ ಸಮಾಜದ ವ್ಯಕ್ತಿಗಳಿಂದ ಪ್ರತಿ ತಿಂಗಳೂ ಅಲ್ಪಪ್ರಮಾಣದ ಚಂದಾವಸೂಲಿ ಮಾಡಿ ನಂತರ ಅದನ್ನು ಷೇರು ಹಣವನ್ನಾಗಿ ಪರಿವರ್ತಿಸಿ ಬ್ಯಾಂಕುಗಳನ್ನು ಕಟ್ಟಿ ಬೆಳಸಿದರು.

ಈ ಜಿಲ್ಲೆಯಲ್ಲಿ ೧೯೦೬ರಿಂದ ೧೯೪೫ರ ಅವಧಿಯಲ್ಲೂ ೨೨ ವಿವಿಧ ಗಾತ್ರದ ಜಾತಿ ಜನಾಂಗದವರ ಬ್ಯಾಂಕುಗಳು ಮೂಡಿ ಬಂದವು. ವಾಣಿಜ್ಯ ಕೇಂದ್ರವಾದ ಮಂಗಳೂರಿನಲ್ಲಿ ೯ ಅಷ್ಟಮಠಗಳ ಕೇಂದ್ರ ಉಡುಪಿಯಲ್ಲೂ ೭, ಕುಂದಾಪುರ ೨, ಪುತ್ತೂರು, ಮುಲ್ಕಿ ಕಲ್ಯಾಣ ಪುರ, ಮತ್ತು ಮೂಡಬಿದಿರೆಯಲ್ಲಿ ತಲಾ ಒಂದು ಬ್ಯಾಂಕುಗಳ ಪ್ರವರ್ತಿಸಲ್ಪಟ್ಟವು: ಮುಂಬರುವ ವರ್ಷಗಳಲ್ಲಿ ೨೨ ಬ್ಯಾಂಕುಗಳ ಪೈಕಿ ೯ಬೇರೆ ಬೇರೆ ಬ್ಯಾಂಕುಗಳೊಂದಿಗೆ ವಿಲೀನಗೊಂಡವು. ೭ ವಿಸರ್ಜನೆಗೊಂಡವು. ಒಂದು ಸ್ಥಗಿತಗೊಂಡರೆ ಇನ್ನುಳಿದ ೫, ಇಂದಿಗೂ ಸೇವೆ ಸಲ್ಲಿಸುತ್ತಿವೆ. ಅವುಗಳೆಂದರೆ ಕೆನರಾ, ಕಾರ್ಪೋರೇಶನ್ ಸಿಂಡಿಕೇಟ್, ವಿಜಯ ಮತ್ತು ಕರ್ನಾಟಕ ಬ್ಯಾಂಕುಗಳು. ವಿಲೀನಿಕರಣದಿಂದ ಈ ಜಿಲ್ಲೆಯ ಬ್ಯಾಂಕುಗಳ ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಶಾಖೆಗಳನ್ನು ಹೊಂದಲು ಅನುಕೂಲವಾಯಿತು.

**ಹೊಸ ಬ್ಯಾಂಕುಗಳ ಉದಯಕ್ಕೆ ಪ್ರಮುಖ ಕಾರಣಗಳು**

ಅರ್ಭುತನಾಥ ಬ್ಯಾಂಕಿಗೆ ಕಂಪನಿಯ ದಿವಾಳಿಯ ಪರಿಣಾಮದಿಂದ ಇತರೆ ಬ್ಯಾಂಕುಗಳು ಮೂಡಿಬರಲು ಸಕಾರಣವಾಯಿತು ಎಂಬ ಅಭಿಪ್ರಾಯವು ಸಮಂಜಸವಲ್ಲ. ಈ ಯುರೋಪ ಮೂಲದ ಕಂಪನಿಯು ೨೨-೧೦-೧೯೦೬ ರಲ್ಲಿ ಅಧಿಕೃತವಾಗಿ ದಿವಾಳಿಯಾಗುವ ಪೂರ್ವದಲ್ಲಿಯೇ ಅಂದರೆ ೨೮-೫-೧೯೦೬ರಲ್ಲಿ ಕಾರ್ಪೋರೇಷನ್ ಬ್ಯಾಂಕು ಮತ್ತು ೧-೭-೧೯೦೬ರಲ್ಲಿ ಕೆನರಾ ಬ್ಯಾಂಕು ಪ್ರಾರಂಭವಾದವು. ಈ ಹೊಸ ಬ್ಯಾಂಕುಗಳ ಮೂಲ ಉದ್ದೇಶ ಅವುಗಳ ಸ್ಥಾಪಕರೇ ತಿಳಿಸಿರುವಂತೆ ಸದಸ್ಯರಿಗೆ ಕಡಿಮೆ ಬಡ್ಡಿದರದಲ್ಲೂ ಸಾಲ ಸೌಲಭ್ಯವನ್ನು ಒದಗಿಸುವ ಹಾಗಿತ್ತು. ಕೆನರಾ ಬ್ಯಾಂಕಿನ ಸಮಗ್ರ ಇತಿಹಾಸವನ್ನು ಬಿಂಬಿಸುವ (*A Banking Odyssey*) ಗ್ರಂಥದಲ್ಲಿ ದಾಖಲಿಸಿದಂತೆ ಮದ್ರಾಸ್ ಪ್ರೆಸಿಡೆನ್ಸಿ ಬ್ಯಾಂಕು ವಿಧಿಸುತ್ತಿದ್ದ ಬಡ್ಡಿದರ ೧೫ರಿಂದ ೧೮ ಆಗಿತ್ತು. ಮಾರುಕಟ್ಟೆಯಲ್ಲಿ ಪುಟ್‌ಲಿಲ್ ಇದ್ದ ಬಡ್ಡಿದರ ಶೇ ೧೨ ಇತ್ತು. ಕೆನರಾ ಬ್ಯಾಂಕು ಶೇ. ೧೦ರಂತೆ ಬಡ್ಡಿಯನ್ನು ವಿಧಿಸುವ ಈ ಗೊತ್ತುವಳಿಯನ್ನು ಸ್ವೀಕರಿಸುವ ಮೂಲಕ ಆರಂಭಗೊಂಡಿತು ಎಂದು ತಿಳಿದು ಬರುವದು.

ಅದೇ ಪುಸ್ತಕದಲ್ಲಿ ವರದಿಯಾಗಿರುವಂತೆ; ಅಂದಿನ ಗೌಡ ಸಾರಸ್ವತ ಸಮಾಜದಲ್ಲಿ ರೂಢಿಯಲ್ಲಿದ್ದ ಸಾಮಾಜಿಕ ಪದ್ಧತಿಯೂ ಸಂಸ್ಥಾಪಕರಿಗೆ ಈ ಸಂಸ್ಥೆಯನ್ನು ಪ್ರವರ್ತಿಸಲು ಕಾರಣವಾಗಿರಬಹುದು ಎಂದು ವಿವರಣೆ ನೀಡಲಾಗಿದೆ. ಗೌಡ ಸಾರಸ್ವತ ಸಮಾಜದಲ್ಲಿ ಮಗು ಹುಟ್ಟಿದರೆ ಮಗುವಿನ ಹೆಸರಿನಲ್ಲಿ, ಸಮಾಜದ ಗಣ್ಯ ವ್ಯಕ್ತಿಗಳಲ್ಲಿ (ಪಟ್ಟಣ ಸೆಟ್ಟಿ) ಕೆಲವು ಹಣವನ್ನು ಠೇವಣಿಯಾಗಿ ಇಡುವ ಪದ್ಧತಿ ರೂಢಿಯಲ್ಲಿ ಇತ್ತು. ಸದರಿ ಹಣವನ್ನು ಮಗು ಪ್ರಾಪ್ತ ವಯಸ್ಕನಾದ ಮೇಲೆ ಹಿಂದಕ್ಕೆ ನೀಡುವ ವ್ಯವಸ್ಥೆ ಇತ್ತು. ಈ ಹಣಕ್ಕೆ ಯಾವುದೇ ಬಡ್ಡಿಯನ್ನು ನೀಡುವಂತಿರಲಿಲ್ಲ. ಇದರಲ್ಲಿ ಪರಸ್ಪರ ನಂಬುಗೆಯೇ ಮುಖ್ಯ ಕಾರಣವಾಗಿತ್ತು. ಈ ಬಗ್ಗೆ ಬರವಣಿಗೆಯಲ್ಲಿ ಅಥವಾ ಬಾಯಿ ಮಾತಿನ ಒಪ್ಪಂದಗಳೂ ರೂಢಿಯಲ್ಲಿ ಇದ್ದವು. ಈ ವ್ಯವಹಾರಗಳಲ್ಲಿ ಅಕಸ್ಮಾತಾಗಿ ಬಂದೊದಗಬಹುದಾದ ಆ ಪತ್ರಗಳ ಅಪನಂಬಿಕೆ; ಸುದೀರ್ಘ ಅವಧಿ ಮುಂತಾದವುಗಳಿಂದ ಅನೇಕ ವಿಧವೆಯವರು ವಕೀಲರಾದ ಸುಬ್ಬರಾಯ ಪೈ ಅವರನ್ನು ಸಂಪರ್ಕಿಸಿದ್ದು ಉಂಟು. ಈ ಒಂದು ಸಾಮಾಜಿಕ ಸಮಸ್ಯೆಯ ಹಿನ್ನೆಲೆಯಲ್ಲಿ ಎಲ್ಲ ಠೇವಣಿದಾರರಿಗೆ ಬದ್ಧತೆಯನ್ನು ಒದಗಿಸುವ ಉದ್ದೇಶದಿಂದಲೂ ಅವರು ಕೆನರಾ ಬ್ಯಾಂಕನ್ನು ಪ್ರವರ್ತಿಸಲು ಮೂಲ ಕಾರಣ ಅಲ್ಲದಿದ್ದರೂ ಒಂದು ಕಾರಣ ಆಗಿರಬಹುದು. ಎಂದು ಸೂಚಿಸಲಾಗಿದೆ. (ಇತ್ತೀಚಿನ ದಿನಗಳಲ್ಲಿ ಮಠ ಮಾನ್ಯಗಳು ನಿರಂತರ ದೇವರ ಸೇವೆಗೆ ಭಕ್ತರಿಂದ ಸ್ವೀಕರಿಸುವ ಠೇವಣಿಗಳು ವ್ಯಾಪಕವಾಗಿ ಬರಲು ಪ್ರಾರಂಭಿಸಿದ್ದರಿಂದ ತಮ್ಮದೇ ಆದ ನಗರ ಸಹಕಾರ ಬ್ಯಾಂಕುಗಳನ್ನು ಪ್ರದರ್ಶಿಸಿದ ಉದಾಹರಣೆಗಳು ಉತ್ತರ ಕರ್ನಾಟಕದಲ್ಲಿ ಉಂಟು)

ಅಂದಿನ ಬ್ಯಾಂಕಿಗ್ ಪರಿಸ್ಥಿತಿಯಾವ ರೀತಿ ಇದ್ದಿತು ಎಂದರೆ ಅಲ್ಪ ಸ್ವಲ್ಪಹಣ ಬೇಕಾದವರು ಹಳ್ಳಿಯ ಸಾಹುಕಾರರಿಗೆ ಶರಣು ಹೋಗುತ್ತಿದ್ದರು. ದೊಡ್ಡ ವ್ಯಾಪಾರಸ್ಥರು ಹುಂಡಿ ಪಡೆಯುತ್ತಿದ್ದರು. ಹೆಚ್ಚಿಗೆ ಹಣ ಇದ್ದವರು ಲೇವಾದೇವಿ ಮಾಡುತ್ತಿದ್ದರು. ಅಲ್ಪಸ್ವಲ್ಪ ಉಳಿತಾಯ ಮಾಡುವವರು. ಬೆನ್ನ ಬೆಳ್ಳಿ ಖರೀಸುತ್ತಿದ್ದರು. ಭವಿಷ್ಯಕ್ಕಾಗಿ ಬ್ಯಾಂಕಿನಲ್ಲಿ ಹಣ ತೊಡಗಿಸಿ ಸಂಪಾದನೆ ಮಾಡುವದು ಒಂದು ಹೊಸ ವಿಚಾರವಾಗಿತ್ತು.

**ಬ್ಯಾಂಕುಗಳ ಸಂಸ್ಥಾಪಕರು**

ಜಿಲ್ಲೆಯ ಪ್ರಮುಖ ಬ್ಯಾಂಕುಗಳ ಸಂಸ್ಥಾಪಕರಲ್ಲಿ ಸಾಮಾಜಿಕ ಮತ್ತು ರಾಜಕೀಯ ಧುರಿಣರು ಮುಖ್ಯರಾಗಿದ್ದರು. ಡಾ|| ಎನ್. ಕೆ. ತಿಂಗಳಾಯ ಅವರ ಅಧ್ಯಯನದ ಪ್ರಕಾರ ದ.ಕ. ಜಿಲ್ಲೆಯ ಪ್ರಾರಂಭದ ೨೨ ಬ್ಯಾಂಕುಗಳ ೧೬೫ ಸಂಸ್ಥಾಪಕ ನಿರ್ದೇಶಕರಲ್ಲಿ ಹೆಚ್ಚಿನವರು ಪದವೀಧರರು ಆಗಿದ್ದರು. ಅವರಲ್ಲಿ ಬಹುಪಾಲು ೬೧ ಜನರು ಭೂಮಾಲಿಕರಾಗಿದ್ದರೆ, ಉಳಿದಂತೆ ೪೬ ಜನ ವ್ಯಾಪಾರಸ್ಥರು, ೨೯ ಜನ ವಕೀಲರು, ೧೧ ಜನ ವೈದ್ಯರು, ೭ ಜನ ನಿವೃತ್ತ ಅಧಿಕಾರಿಗಳು, ೫ ಜನ ಧಾರ್ಮಿಕ ಸಂಸ್ಥೆಗಳ ಪಾರುಪತ್ತೇದಾರರು ಇದ್ದರು.

ಜಿಲ್ಲೆಯ ಪ್ರಥಮ ಬ್ಯಾಂಕ್ ಆದ ಕಾರ್ಪೋರೇಷನ್ ಬ್ಯಾಂಕಿನ ಸ್ಥಾಪಕರು ಖಾನ ಬಹಾದ್ದೂರ ಹಾಜಿ ಅಬ್ದುಲ್ ಸಾಹೇಬ, ಹಾಜಿ ಕಾಶೀಮ ಸಾಹೇಬ ಬಹಾದ್ದೂರ್ ಆಗಿದ್ದರು. ಇವರು ಉಡುಪಿಯ ಸುಪ್ರಸಿದ್ಧ ವರ್ತಕರಾಗಿದ್ದರು, ದಾನಶೀಲರು.

ಎಲ್ಲಾ ಜಾತಿಗಳ ಮತ್ತು ವರ್ಗಗಳ ಜನರನ್ನು ಸೇರಿಸಿಕೊಂಡ ಉಚ್ಚ ಪರಂಪರೆಯನ್ನು ಈ ಬ್ಯಾಂಕು ಹೊಂದಿತ್ತು. ಕೆನರಾ ಬ್ಯಾಂಕಿನ ಸಂಸ್ಥಾಪಕರಾದ ಅಮ್ಮಂಬಳೆ ಸುಬ್ಬರಾಯಪೈ ಅವರು ಮಧುರೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಹಿಂದು ಪರ್ಮನೆಂಟ್ ಫಂಡ್‌ನಿಂದ ಪ್ರಭಾವಿತರಾಗಿ ಕೆನರಾ ಹಿಂದು ಪರ್ಮನೆಂಟ ಪಂಡ್ ಪ್ರಾರಂಭಿಸಿದರು. ೧೯೧೦ರಲ್ಲಿ ಫಂಡು ಪುನರ್ ರಚನೆಗೊಂಡು ಕೆನರಾ ಬ್ಯಾಂಕಾಯಿತು. ಸಿಂಡಿಕೇಟ್ ಬ್ಯಾಂಕಿನ ಸಂಸ್ಥಾಪಕರು ವೃತ್ತಿಯಿಂದ ವೈದ್ಯರಾಗಿದ್ದರು ಮತ್ತು ಖ್ಯಾತ ಶಿಕ್ಷಣ ತಜ್ಞರಾಗಿದ್ದರು.

ಕರ್ನಾಟಕ ಬ್ಯಾಂಕಿನ ಸಂಸ್ಥಾಪಕ ಅಧ್ಯಕ್ಷರು ವ್ಯಾಸ ರಾಯಾಚಾರ್ಯರು ಮದ್ರಾಸ ಉಚ್ಚ ನ್ಯಾಯಾಲಯದ ವಕೀಲರಾಗಿದ್ದರು. ಮಂಗಳೂರು ಕ್ಯಾಥೋಲಿಕ ಬ್ಯಾಂಕಿನ ಅಧ್ಯಕ್ಷರು ಡಾ|| ಎಲ್. ಪಿ. ಫರ್ನಾಂಡೀಸ್ ಫಾದರ್ ಮುಲ್ಲರ ಆಸ್ಪತ್ರೆಯ ಆರೋಗ್ಯ ಅಧಿಕಾರಿಯಾಗಿದ್ದರು.

**ಜಾತಿಯ ನೆಲೆಯಲ್ಲಿ ಸಮೃದ್ಧ ಬೆಳವಣಿಗೆ**

ಪ್ರಾರಂಭದಲ್ಲಿ ವಿವಿಧ ಜಾತಿ ಪಂಗಡದವರು, ಭಾಷೆ ಯವರು ತಮ್ಮ ತಮ್ಮ ಸಮಾಜದ ಅಭಿವೃದ್ಧಿಗೆ ವಿದ್ಯಾಸಂಸ್ಥೆಗಳನ್ನು ಪ್ರಾರಂಭಿಸುವುದರೊಂದಿಗೆ ಬ್ಯಾಂಕುಗಳನ್ನು ಸಹ ಪ್ರಾರಂಭಿಸಿದರು. ಇದರಿಂದ ಸಮಾಜದವರಿಗೆ ನೌಕರಿ ಲಾಭ ದೊರೆಯಲಿದ್ದು, ವ್ಯಾಪಾರ ವಾಣಿಜ್ಯ ಅಭಿವೃದ್ಧಿಗೆ ಸಹಾಯಕವಾಯಿತು. ಕೆನರಾ ಬ್ಯಾಂಕಿನಲ್ಲಿ ಪ್ರಾರಂಭದಲ್ಲಿ ಜಾತೀಯತೆಯ ಗಾಢ ಪ್ರಭಾವ ಎಷ್ಟೊಂದು ಬಲವಾಗಿತ್ತೆಂದರೆ ತನ್ನ ಪಾಲುದಾರರು ಆಗುವ ಅರ್ಹತೆಯನ್ನು ಆ ಜಾತಿಯ ಸಹಪಂಕ್ತಿ ಭೋಜನ ಮಾಡಲು ಅರ್ಹರಾದವರಿಗೆ ಮಾತ್ರ ನೇಮಿತವಾಗಿತ್ತು.

**ವಿದೇಶಿ ಕಂಪನಿಗಳು**

ಬ್ಯಾಂಕಿಂಗ್ ಕಂಪನಿಗಳಿಗೆ ಜನ್ಮ ನೀಡಿದ ದ.ಕ. ಜಿಲ್ಲೆಯು ವಿದೇಶಿಕಂಪನಿಗಳಿಗೂ ಜನ್ಮ ನೀಡಿತು. ಈ ರೀತಿ ಸ್ವತಂತ್ರ ವಿಮೆ ಕಂಪನಿಗಳು ನಮ್ಮ ರಾಜ್ಯದ ಧಾರವಾಡ ಮತ್ತು ದ.ಕ. ಜಿಲ್ಲೆಯಲ್ಲಿ ಮೂಡಿಬಂದವು. ಈ ಜಿಲ್ಲೆಯಿಂದ ಪಾಪ್ಯುಲರ್ ಇನ್ಸೂರೆನ್ಸ್ ಮಂಗಳೂರು (೧೯೨೦) ಕೆನರಾ ಮ್ಯೂಚುಯಲ್ ಅಶ್ಯೂರನ್ಸ್ ಕಂ. ಉಡುಪಿ (೧೯೩೫) ನ್ಯು ಕರ್ನಾಟಕ ಪ್ರಾವಿಡೆಂಟ್ ಇನ್ಸೂರೆನ್ಸ್ ಕಂ ಲಿಮಿಟೆಡ್ (೧೯೪೬) ಈ ಎಲ್ಲಾ ಕಂಪನಿಗಳು ೧೯೫೬ರಲ್ಲಿ ರಾಷ್ಟ್ರೀಕರಣಗೊಂಡವು.

**ಶಾಖೆಗಳ ವಿಸ್ತರಣೆ**

ಸ್ವಾತಂತ್ರ್ಯ ಪೂರ್ವದಲ್ಲಿ ಕೇವಲ ನಗರ ಪ್ರದೇಶಕ್ಕೆ ವರ್ಗಕ್ಕೆ ಸೀಮಿತ ಮೀಸಲಾಗಿದ್ದ 'ಕ್ಲಾಸ್' ಬ್ಯಾಂಕಿಂಗ್ ವ್ಯವಸ್ಥೆಯಲ್ಲಿಯೂ ಕೂಡ ಇತರೇ ಪ್ರದೇಶಗಳಿಗೆ ಬ್ಯಾಂಕಿಂಗ್ ಸೇವೆಯನ್ನು ವಿಸ್ತರಿಸುವಲ್ಲಿ ಈ ಜಿಲ್ಲೆಯ ಬ್ಯಾಂಕುಗಳು ಅನುಕರಣೀಯ ಸೇವೆ ಮಾಡಿದೆ ಎಂದು ಹೇಳಬಹುದು. ಕೆನರಾ ಬ್ಯಾಂಕು ಜಿಲ್ಲೆಯ ಹೊರಗೆ ಬೊಂಬಾಯಿಯಲ್ಲಿ ೧೯೨೬ರಲ್ಲಿ ತನ್ನ ಪ್ರಥಮ ಶಾಖೆಯನ್ನು ಪ್ರಾರಂಭಿಸಿದರೆ, ಸಿಂಡಿಕೇಟ್ ಬ್ಯಾಂಕು ೧೯೨೮ರಲ್ಲಿ ಕುಮಟಾದಲ್ಲು ತನ್ನ ಪ್ರಥಮ ಶಾಖೆಯನ್ನು ಪ್ರಾರಂಭಿಸಿತು. (ಕುಮಟಾ ಪೈ ಅವರ ಮಾವನವರ ಊರಾಗಿತ್ತು). ೧೯೪೬ರಲ್ಲಿ ಒಂದೇ ದಿನದಲ್ಲಿ (ನವಂಬರ ೨೨) ಸಿಂಡಿಕೇಟ್ ಬ್ಯಾಂಕು ೨೬ ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕುಗಳನ್ನು ಪ್ರಾರಂಭಿಸಿತು. ಶಾಖೆಗಳಿಂದ ಕಡಿಮೆ ವೆಚ್ಚದಲ್ಲಿ ಜನರಿಗೆ ಅತ್ಯಂತ ಹತ್ತಿರವಾಗಿ ಫಲಪ್ರದವಾಗಿ ಕಾರ್ಯ ನಿರ್ವಹಿಸಲು ಬ್ಯಾಂಕು ಅನುಸರಿಸಿದ ಯೋಜನೆ ಎಂದರೆ ತ್ರೀ ಇನ್ ಒನ್ *Three In One* ಅಂದರೆ ಕಮಿಶನ್ ಆಧಾರದ ಮೇಲೆ ಈ ಕೆಲಸವನ್ನು ಗ್ರಾಮೀಣ ಶಾಲೆಗಳ ಮುಖ್ಯೋಪಾಧ್ಯಾಯರಿಗೆ ಒಪ್ಪಿಸಲಾಯಿತು. ಅವರು ಶಾಲೆಯ ಲೆಖ್ಖ, ಪೋಸ್ಟ್ ಆಫೀಸ್ ಲೆಖ್ಖ ಮತ್ತು ಈಗ ಹೊಸದಾಗಿ ಬ್ಯಾಂಕಿನ ಲೆಖ್ಖವನ್ನು ಬರೆಯ ಬೇಕಾಯಿತು, ಆದ್ದರಿಂದ ಅಂದು ಈ ಪದ್ಧತಿಯನ್ನು ಈ ಹೆಸರಿನಿಂದ ಗುರುತಿಸಲಾಯಿತು.

**ಪಿಗ್ಮಿಯೋಜನೆ**

ಸಮಾಜದ ಅತ್ಯಂತ ಕಡಿಮೆ ಆದಾಯದ ಕುಟುಂಬ ಗಳಲ್ಲಿಯೂ ಉಳಿತಾಯ ಮನೋಭಾವನೆ ಕಾರ್ಯ ರೂಪದಲ್ಲಿ ಮೂಡಿಬರಲು ಸಹಾಯಕವಾಗುವಂತೆ ಸಿಂಡಿಕೇಟ್ ಬ್ಯಾಂಕು ಯೋಜಿಸಿದ ಪಿಗ್ಮಿ ಯೋಜನೆ ಇಂದು ಬ್ಯಾಂಕಿಂಗ್ ವಲಯದಲ್ಲಿ ಅತ್ಯಂತ ಜನಪ್ರಿಯ ಯೋಜನೆಯಾಗಿದೆ. ಈ ಯೋಜನೆಯನ್ನು ಬ್ಯಾಂಕು ೧೯೨೮ರಲ್ಲಿ ರೂಢಿಯಲ್ಲಿ ತಂದಿತು. ಈ ಜಿಲ್ಲೆಯಲ್ಲಿ ಪ್ರಾರಂಭಗೊಂಡ ಒಂದು ಬ್ಯಾಂಕು ಅತ್ಯಂತ ಕಡಿಮೆ ಆದಾಯದ ಜನರನ್ನು ತನ್ನ ಕಕ್ಷೆಯಲ್ಲಿ ಸೆಳೆಯಲು ಸಹಾಯಕವಾಗುವಂತೆ ತನ್ನ ಹೆಸರನ್ನು 'ಪೈ ಮನಿ' ಬ್ಯಾಂಕ್ (೧೯೩೪) ಎಂದು ಅಳವಡಿಸಿ ಕೊಂಡಿತ್ತು. 'ಪೈ' ಎಂಬುದು ಸ್ವಾತಂತ್ರ್ಯ ಪೂರ್ವದಲ್ಲೂ ಬಳಕೆಯಲ್ಲಿ ಇದ್ದ ಅತ್ಯಂತ ಕಡಿಮೆ ಬೆಲೆಯ ನಾಣ್ಯ. ಇದೇ ಮುಂದೆ ಪೈಸೆ ಎಂದು ರೂಢಿಯಲ್ಲಿ ಬಂತು.

**ಬ್ಯಾಂಕಿಗೆ ಉದ್ಯಮದ ಉನ್ನತಿಗೆ ಕಾರಣ**

ಈ ರಾಜ್ಯದ ಅಥವಾ ರಾಷ್ಟ್ರದ ಇತರೇ ಪ್ರದೇಶಗಳಿಗೆ ಹೋಲಿಸಿದರೆ ಈ ಪ್ರದೇಶದಲ್ಲಿ ಬ್ಯಾಂಕಿಗೆ ಉದ್ಯಮದ ಮಹತ್ ಸಾಧನೆಗೆ ಈ ಕೆಳಗಿನ ಅಂಶಗಳು ಪ್ರಮುಖವಾದವುಗಳು.

೧. ಜನರಲ್ಲಿಯ ಉಳಿತಾಯ ಮನೋಭಾವನೆ. ೨. ಹೆಚ್ಚಿನ ಸಾಕ್ಷರತೆಯ ಪ್ರಮಾಣ. ೩. ಉತ್ತಮ ಸಂಚಾರ ಸೌಲಭ್ಯ ಮತ್ತು ಸಂಪರ್ಕ ಸಾಧನೆಗಳು. ೪. ಪರಿಶ್ರಮದ ಬದುಕು.

**ಸಂಸ್ಥೆಗಳ ಬಗ್ಗೆ ಹೇಳುವುದಾದರೆ**

೧. ವ್ಯವಹಾರದಲ್ಲಿ ಬದಲಾವಣೆಗೆ ತಕ್ಕಂತೆ ಸ್ಪಂದಿಸುವ ಮನೋಭಾವನೆ

೨. ಆಶಾಭಾವನೆ

೩. ಆಪತ್ತುಗಳನ್ನು ಎದುರಿಸುವಲ್ಲಿ ಧೈರ್ಯದ ಮನೋಭಾವನೆ

೪. ಸಾಮಾಜಿಕ ಬದ್ಧತೆ ಅಥವಾ ಸಾಮಾಜಿಕ ಜೀವನದಲ್ಲಿ ಸಹಭಾಗಿತ್ವ.

೫. ವ್ಯಕ್ತಿಯ ಹಿರಿಮೆಗಿಂತ ಸಂಸ್ಥೆಯ ಹಿರಿಮೆಯನ್ನು ಬಳಸುವುದು

-ಹೀಗೆ ದಕ್ಷಿಣಕನ್ನಡದ ಬಹುಪಾಲು ಬ್ಯಾಂಕಿಂಗ್ ಸಂಸ್ಥೆಗಳು ಸ್ವಾತಂತ್ರ ಪೂರ್ವದಲ್ಲಿ ಇತ್ತೀಚಿನ ದಿನಗಳಲ್ಲಿ ರಾಷ್ಟ್ರೀಕರಣಕ್ಕೆ ಪೂರ್ವದಲ್ಲಿ (೧೯೬೯) ಅನುಸರಿಸಿದ್ದರಿಂದ ಅವು ತಮ್ಮದೇ ಘನತೆ ಗೌರವವನ್ನು ಕಾಯ್ದುಕೊಂಡು ಹೋಗುವಲ್ಲಿ ಯಶಸ್ವಿ ಯಾದವು ಎಂದು ಹೇಳಬಹುದು.

**ಉತ್ತರ ಕನ್ನಡ ಜಿಲ್ಲೆ**

ಕರಾವಳಿ ಕರ್ನಾಟಕದ ಇನ್ನೊಂದು ಪ್ರಮುಖ ಜಿಲ್ಲೆಯಾದ ಉತ್ತರ ಕನ್ನಡ ಜಿಲ್ಲೆಯಲ್ಲಿ ವಾಣಿಜ್ಯ ಬ್ಯಾಂಕಿಂಗ್ ಚಟುವಟಿಕೆ ಗಳಾಗಿ ೧೮೭೨-೭೩ರಲ್ಲಿ ಬೊಂಬಾಯಿ ಪ್ರೆಸಿಡೆನ್ಸಿ ಬ್ಯಾಂಕ್ ಕುಮಟಾದಲ್ಲಿ ತನ್ನ ಶಾಖೆಯನ್ನು ತೆರೆಯುವ ಮೂಲಕ ಪ್ರಾರಂಭಿಸ ಲಾಯಿತು. ಅಂದಿನ ದಿನಗಳಲ್ಲಿ ಕುಮಟಾ ಬಂದರಿನಿಂದ ಅಮೇರಿಕೆಗೆ, ಬೊಂಬಾಯಿ ಮೂಲಕ ಹತ್ತಿಯು ರಫ್ತು ಆಗ ತೊಡಗಿತ್ತು. ಈ ವ್ಯಾಪಾರವನ್ನು ಉತ್ತೇಜಿಸಲು ಈ ಶಾಖೆಯನ್ನು ಪ್ರಾರಂಭಿಸಲಾಯಿತು.

ಸ್ಥಳೀಯವಾಗಿ ಖಾಸಗಿ ವಲಯದಲ್ಲಿ ೧೮೮೭ರಲ್ಲಿ ಹೊನ್ನವಳ್ಳಿ ನೇಟೀವ್ ಅನ್ಯೋನ್ಯ ಸಹಾಯಕ ಕಂಪನಿ ಎಂಬ ಹೆಸರಿನ ಕೂಡು ಬಂಡವಾಳ ಸಂಸ್ಥೆ ಸೋಂದಾ ಬಳಿಯ ಸ್ವರ್ನವಲ್ಲಿಯಲ್ಲಿ ವ್ಯಾಪಾರದೊಂದಿಗೆ ಬ್ಯಾಂಕಿಂಗ್ ವ್ಯವಹಾರ ವನ್ನು ನಡೆಸುತ್ತಿದ್ದುದಾಗಿ ಕಂಡು ಬರುವುದು. ಆದರೆ ಇದರ ಬಗ್ಗೆ ಹೆಚ್ಚಿನ ಮಾಹಿತಿಯು ಲಭ್ಯವಾಗಿಲ್ಲ. ಮುಂಬಯಿ ಮೂಲದ ಶಾಮರಾವ ವಿಠ್ಠಲ ಸಹಕಾರ ಬ್ಯಾಂಕ್ (೧೯೦೬) ಕಾರವಾರ, ಹೊನ್ನಾವರ, ಬಂಕಿ ಕೊಡ್ಲ ಗಳಲ್ಲಿ ಶಾಖೆಗಳನ್ನು ತರೆದು ಇಂದಿಗೂ ಈ ಬ್ಯಾಂಕು ಅಸ್ತಿತ್ವದಲ್ಲಿ ಇರುವದು.

ಉತ್ತರ ಕನ್ನಡ ಜಿಲ್ಲೆಯ ಸಾಮಾಜಿಕವಾಗಿ ಮತ್ತು ವ್ಯಾಪಾರ ದೃಷ್ಟಿಯಿಂದ ಮುಂಬೈಯೊಂದಿಗೆ ಮೊದಲಿನಿಂದಲೂ ಸಂಪರ್ಕ ಹೊಂದಿದ್ದರಿಂದ ಈ ಶಾಖೆಗಳನ್ನು ಆರಂಭಿಸಲಾಗಿತ್ತು. ಸ್ಥಳಾಂತರವಾಗಿ ಇದೇ ಜಿಲ್ಲೆಯ ನೆಲದಿಂದ ಮೂಡಿಬಂದ ಬ್ಯಾಂಕುಗಳಲ್ಲಿ ಬ್ಯಾಂಕ್ ಆಫ್ ರೂರಲ್ ಇಂಡಿಯಾ, ಕಾರವಾರ. (೧೯೪೪) ಮುಖ್ಯವಾದದು. ಇದು ೧೯೫೧ರ ವರೆಗೆ ಕಾರ್ಯ ನಿರ್ವಹಿಸುತ್ತಿತ್ತು. ಈ ಬ್ಯಾಂಕು ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಅಲ್ಲದೇ ಹುಬ್ಬಳ್ಳಿ, ಧಾರವಾಡಗಳಲ್ಲಿ ಶಾಖೆಗಳನ್ನು ಹೊಂದಿತ್ತು. ಕುಂದಾಪುರದ ಮೂಲದ ವ್ಯವಸಾಯ ಮತ್ತು ಕೈಗಾರಿಕಾ ಬ್ಯಾಂಕ್ (೧೯೩೪) ೧೯೩೯ರಲ್ಲಿ ಕಾರವಾರದಲ್ಲಿ ತನ್ನ ಶಾಖೆಯನ್ನು ಪ್ರಾರಂಭಿಸಿತ್ತು ಇದು ೧೯೫೩ರಲ್ಲಿ ವಿಸರ್ಜನೆಗೊಂಡಿತು. ಬೆಳಗಾಂವ ಮೂಲದ ಸಿಟಿಜನ್ ಬ್ಯಾಂಕ್ ಕಾರವಾರದಲ್ಲಿ ೧೯೪೪ರಲ್ಲಿ ತನ್ನ ಶಾಖೆಯನ್ನು ಪ್ರಾರಂಭಿಸಿತ್ತು. ನಂತರ ೧೯೬೧ ರಲ್ಲಿ ಕಾರ್ಪೋರೇಷನ್ ಬ್ಯಾಂಕ್‌ನೊಂದಿಗೆ ವಿಲೀನಗೊಂಡಿತು. ವಿಲೀನ ಪೂರ್ವದಲ್ಲಿ ಇದು ಜಿಲ್ಲೆಯ ಅಂಕೋಲಾ ಸಿರಸಿ : ಕುಮಟಾ ಹಳ್ಳಿಯಾಳಗಳಲ್ಲಿ ಶಾಖೆಗಳನ್ನು ಹೊಂದಿತ್ತು.

**ಸಹಕಾರ ಬ್ಯಾಂಕುಗಳು**

ದ.ಕ. ಜಿಲ್ಲೆಯ ೧೯೦೯ ರಲ್ಲಿ ಪುತ್ತೂರು ನಗರ ಸಹಕಾರ ಬ್ಯಾಂಕಿನ ಪ್ರಾರಂಭದೊಂದಿಗೆ, ಈ ವಲಯದ ಬ್ಯಾಂಕಿಂಗ್ ಉದ್ಯಮ ಪ್ರಾರಂಭವಾಯಿತು. ೧೯೧೨ರಲ್ಲಿ ಮಂಗಳೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್, ಅದೇ ವರ್ಷ ಮಂಗಳೂರಿನ ಕ್ಯಾಥೋಲಿಕ್ ಬ್ಯಾಂಕ್ ಪ್ರಾರಂಭವಾದವು. ಇವು ಈ ಜಿಲ್ಲೆಯ ಪ್ರಾರಂಭದ ಸಹಕಾರ ಬ್ಯಾಂಕುಗಳು.

ಉತ್ತರ ಕನ್ನಡ ಜಿಲ್ಲೆಯಲ್ಲಿ, ಸಿರಸಿಯಲ್ಲಿ ೧೯೦೫ರಲ್ಲಿ ಪ್ರಾರಂಭವಾದ ರೂರಲ್ ಕ್ರೆಡಿಟ್ ಸಹಕಾರಿ ಸಂಘವು ಪ್ರಪ್ರಥಮ ಸಹಕಾರ ವಲಯದ ಹಣಕಾಸು ಸಂಸ್ಥೆ. ನಂತರ ೧೯೧೩ರಲ್ಲಿ ಇದು ಪಟ್ಟಣ ಬ್ಯಾಂಕಾಯಿತು: ಕಾರವಾರ ಮತ್ತು ಕುಮಟಾ ಗಳಲ್ಲಿ ೧೯೧೨ರಲ್ಲಿ ಸಿರ್ಸಿ ಮತ್ತು ಅಂಕೋಲಾಗಳಲ್ಲಿ, ೧೯೧೩ ಹೊನ್ನಾವರ (೧೯೧೯) ಸಿದ್ದಾಪುರಗಳಲ್ಲಿ, ೧೯೨೯ರಲ್ಲಿ ಪಟ್ಟಣ ಸಹಕಾರ ಬ್ಯಾಂಕುಗಳು ಪ್ರಾರಂಭವಾದವು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಉತ್ತರ ಕನ್ನಡಜಿಲ್ಲಾ ಗ್ಯಾಸೆಟಿಯರ್.**

೨. **ದಕ್ಷಿಣ ಕನ್ನಡಜಿಲ್ಲಾ ಗ್ಯಾಸೆಟಿಯರ್.**

೩. **ರಾಜ್ಯ ಗ್ಯಾಸೆಟಿಯರ್ ಸಂಪುಟ.**

೪. ಡಾ॥ ನವೀನ ಚಂದ್ರ ಕೆ. ತಿಂಗಳಾಯ., (೧೯೮೬), **ಕರ್ನಾಟಕದಲ್ಲಿ ಬ್ಯಾಂಕುಗಳ ಹುಟ್ಟು ಮತ್ತು ಬೆಳವಣಿಗೆ**

೫. *Pigmy Economic Review.*, July 1981, Article: Fifty years of Banking in Karwar.

೬. *Pigmy Economic Review.*, January 1974, Banking Develpment North Kanara District.

೭. *March of Karnataka.*, April 1987, An a article by M.B. Patil.

೮. *March of Karnataka.*, Nove. 1988, An article by M. B. Patil.

೯. By. M.V. Kamath., (1991), *A Banking Odyssey*, Canara Bank.

೧೦. ಎಂ. ಬಿ. ಪಾಟೀಲ್., 'ಧಾರವಾಡ ಜಿಲ್ಲೆಯ ಆಧುನಿಕ ಬ್ಯಾಂಕಿಂಗ ಉದ್ಯಮದ ಮೊದಲನೇ ಹಂತ (೧೮೬೩-೧೯೪೯)', **ಇತಿಹಾಸ ದರ್ಶನ** ಸಂಪುಟ. ೫/೧೯೯೧.

ಡಾ|| ಬಸವರಾಜಪ್ಪ ಹೆಚ್. ಈ.*

# ಚಿತ್ರದುರ್ಗ ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಮೇಲೆ ಹೊಸಬೆಳಕು

ಭಾರತವು ಬ್ರಿಟಿಷ್ ಆಳ್ವಿಕೆಗೆ ಅಧೀನವಾದ ನಂತರ ಸ್ವಾತಂತ್ರ್ಯದ ಸಲುವಾಗಿ ದೇಶವ್ಯಾಪಿ ಹೋರಾಟ ನಡೆಯಿತು. ಇದರ ಪ್ರಭಾವವು ಮೈಸೂರು ಸಂಸ್ಥಾನದ ಮೇಲೂ ಆಯಿತು. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಚಿತ್ರದುರ್ಗ ಜಿಲ್ಲೆಯ ಪಾತ್ರವೂ ಮಹತ್ವದ್ದಾಗಿದೆ.

ಚಿತ್ರದುರ್ಗ ಜಿಲ್ಲೆಯು ೧೯೨೦ರ ಸುಮಾರಿಗೆ ಬ್ರಿಟಿಷ್ ಕರ್ನಾಟಕದೊಂದಿಗೆ ರಾಜಕೀಯ ಸಂಪರ್ಕ ಹೊಂದಿತ್ತು. ೧೯೩೦ರ ಕಾಯಿದೆ ಭಂಗ ಚಳವಳಿ ಪ್ರಬಲವಾಗಿ ಪ್ರಾರಂಭ ವಾಯಿತು. ೧೯೩೪ರಲ್ಲಿ ಗಾಂಧೀಜಿಯವರು ದಾವಣಗೆರೆಗೆ ಭೇಟಿ ನೀಡಿದ್ದು ಇಲ್ಲಿನ ರಾಜಕೀಯ ಚಳವಳಿಯಲ್ಲಿ ಒಂದು ಮೈಲಿಗಲ್ಲಾಗಿದೆ. ೧೯೩೬ರಲ್ಲಿ ಜಿಲ್ಲಾ ಕಾಂಗ್ರೆಸ್ ಸಮಿತಿ ಸ್ಥಾಪನೆಯಾಗಿ ಎಸ್. ನಿಜಲಿಂಗಪ್ಪನವರು ಅಧ್ಯಕ್ಷರಾಗಿಯೂ, ಎನ್. ವಾಸುದೇವರಾವ್ ಅವರು ಕಾರ್ಯದರ್ಶಿಯಾಗಿಯೂ ಆರಿಸಿ ಬಂದರು. ಈ ವೇಳೆಗಾಗಲೀ ಕಾಂಗ್ರೆಸ್ ಒಂದು ಪ್ರಬಲ ಸಂಘಟನೆಯಾಗಿ ಬೆಳೆದಿತ್ತು.

ಚಿತ್ರದುರ್ಗ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ ಕುರಿತಾಗಿ ಸೂಕ್ಷ್ಮ ಮಾಹಿತಿಗಳ ಸಂಗ್ರಹಕ್ಕಾಗಿ ಕ್ಷೇತ್ರಕಾರ್ಯ ಕೈಗೊಂಡಾಗ, ಚಿತ್ರದುರ್ಗ ಜಿಲ್ಲಾಧಿಕಾರಿಗಳ ಕಾರ್ಯಾಲಯದ ಗ್ರಂಥಾಲಯದಲ್ಲಿ ಹಳೆಯ ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿದ ಸ್ವಾತಂತ್ರ್ಯ ಹೋರಾಟದ ಮಾಹಿತಿಯನ್ನು ತಿಳಿಸುವ ಎರಡು ದಾಖಲೆಗಳು ಕಂಡು ಬಂದವು.

೧. ಸೀಕ್ರೆಟ್ ಎಸ್. ಬಿ. ಎ. ನಂ. ೪: ೩೭
ಸ್ಪೆಷಲ್ ಬ್ರಾಂಚ್ ಅಬ್‌ಸ್ಟ್ರಾಕ್ಟ್ ಫಾರ್ ದಿ ವೀಕ್ ಎಂಡಿಂಗ್ ಸಾಟರ್ ಡೇ
ದಿ. ೨೩ ಜನವರಿ ೧೯೩೭

೨. ಸೀಕ್ರೆಟ್ ಎಸ್. ಬಿ. ಎ. ನಂ. ೪: ೩೬
ಸ್ಪೆಷಲ್ ಬ್ರಾಂಚ್ ಅಬ್‌ಸ್ಟ್ರಾಕ್ಟ್ ಫಾರ್ ದಿ ವೀಕ್ ಎಂಡಿಂಗ್ ಸಾಟರ್ ಡೇ ದಿ. ೨೮ ಜನವರಿ ೧೯೩೯

ಈ ದಾಖಲೆಗಳು ಹಳೆಯ ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿದಂತೆ ಸ್ವಾತಂತ್ರ್ಯ ಚಳುವಳಿಯ ಅಮೂಲ್ಯ ಮಾಹಿತಿಗಳನ್ನೊಳಗೊಂಡಿವೆ. ಅವುಗಳಲ್ಲಿ ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದಂತೆ ಇಲ್ಲಿಯವರೆಗೂ ತಿಳಿಯದ ಹೊಸ ಸಂಗತಿ ಗಳನ್ನು ಆಯ್ದುಕೊಂಡು ಪ್ರಸ್ತುತ ಪ್ರಬಂಧದಲ್ಲಿ ವಿವೇಚಿಸುತ್ತಿದ್ದೇನೆ. ಈ ಎರಡು ದಾಖಲೆಗಳಲ್ಲಿ ಕಾಂಗ್ರೆಸ್ ಜನಸಮುದಾಯದ ಸಂಘಟನೆಯಾಗಿ ವಹಿಸಿದ ಪಾತ್ರ ಮತ್ತು ರೈತ ಸಮುದಾಯಗಳು ಪ್ರತಿಕ್ರಿಯಿಸಿದ ವಿಧಾನವನ್ನು ಗುರುತಿಸಬಹುದು. ಸಮಗ್ರ ಸಮಾಜವನ್ನು ಕಾಂಗ್ರೆಸಿನೊಡನೆ ಸೆಳೆಯಲು ಕಾಂಗ್ರೆಸ್ ನಾಯಕರು ಅನುಸರಿಸಿದ ವಿಧಾನವನ್ನು ವಿವೇಚಿಸುವ ಪ್ರಯತ್ನವಿದೆ. ಚಿತ್ರದುರ್ಗ ಜಿಲ್ಲೆಯು ೧೯೩೭-೩೯ರ ವರ್ಷಗಳಲ್ಲಿ ದಾವಣಗೆರೆ ಯನ್ನು ಹೊರತುಪಡಿಸಿದರೆ ಜಿಲ್ಲೆಯು ಸಂಪೂರ್ಣವಾಗಿ ರೈತ ಸಮುದಾಯದಿಂದ ಕೂಡಿತ್ತು.

*ಜಗಳೂರು ಕಾಂಗ್ರೆಸ್ ಸಮಿತಿ ೧ ಮೇ ೧೯೩೭*

ರಾಘವೇಂದ್ರರಾವ್: ಕಾರ್ಯದರ್ಶಿಗಳು

ಮಹಾಲಿಂಗಪ್ಪ : ಖಜಾಂಚಿ, ಹಾಗೂ ಇತರ ಸದಸ್ಯರುಗಳಿದ್ದರು.

*ಮೊಳಕಾಲ್ಮೂರು ಕಾಂಗ್ರೆಸ್ ಸಮಿತಿ ೧ ಮೇ ೧೯೩೭*

ಬಿ. ಅಯ್ಯಣ್ಣ : ಅಧ್ಯಕ್ಷರು,

ಜಿ. ಎಸ್. ಮಲ್ಲಪ್ಪ : ಕಾರ್ಯದರ್ಶಿ

ಪೋಸ್ಟ್ ಸಿದ್ದಪ್ಪ : ಖಜಾಂಚಿ

ದೇವತಿ ಸಿದ್ದಪ್ಪ ಮತ್ತು ಇತರ ನಾಲ್ವರು ಸದಸ್ಯರಿದ್ದರು.

*ಚಳ್ಳಕೆರೆ ಕಾಂಗ್ರೆಸ್ ಸಮಿತಿ ೧ ಮೇ ೧೯೩೭*

ಕೃಷ್ಣ ಮೂರ್ತಿರಾವ್ : ಅಧ್ಯಕ್ಷರು

ಸಿ.ವಿ. ಕೃಷ್ಣ ಮೂರ್ತಿರಾವ್ : ಕಾರ್ಯದರ್ಶಿ

ಹೆಚ್. ಮಲ್ಲಪ್ಪ ಮತ್ತು ಸೂರಾನಾಯ್ಕ : ಖಜಾಂಚಿಗಳು

*ಹಿರಿಯೂರು ಕಾಂಗ್ರೆಸ್, ಸಮಿತಿ ೧ ಮೇ ೧೯೩೭*

ಸೀತಾರಾಮಯ್ಯ : ಅಧ್ಯಕ್ಷರು

ಹನುಮಂತರಾವ್ : ಕಾರ್ಯದರ್ಶಿ

ಮಲ್ಲಯ್ಯ : ಖಜಾಂಚಿ

೧೯೩೭ರ ಮೇ ೧೬ರಂದು ಎನ್. ಎಸ್. ಹರ್ಡೀಕರ್, ಶ್ರೀಮತಿ ಉಮಾಬಾಯಿ ಕುಂದಾಪುರ ಮತ್ತು ವಾಸುದೇವರಾವ್ ಚಿತ್ರದುರ್ಗ ಜಿಲ್ಲೆಯ ದೊಡ್ಡ ಸಿದ್ದವನಹಳ್ಳಿಗೆ ಭೇಟಿ ನೀಡಿದ್ದರು. ಹರ್ಡೀಕರ್ ಜನತೆಯನ್ನುದ್ದೇಶಿಸಿ ಮಾತನಾಡುತ್ತಾ,[೧೧] "ಮೈಸೂರು ಸಂಸ್ಥಾನವು ರೈತರಿಂದ ಸಂಗ್ರಹಿಸಿದ ಅಧಿಕ ತೆರಿಗೆಯ ಆಧಾಯವನ್ನು ವೈಸ್‌ರಾಯ್, ಗೌರ್‍ನರ್ ಮತ್ತು ಇತರ ಅಧಿಕಾರಿಗಳು ಸಂಬಳ ರೂಪದಲ್ಲಿ ಪಡೆಯುತ್ತಿದ್ದಾರೆ.

* ಉಪನ್ಯಾಸಕರು, ವಿನಾಯಕ ಬಡಾವಣೆ, ಹೊಸದುರ್ಗ

ಅವರು ವಿಧಿಸಿದ ಭೂ ಕಂದಾಯದಲ್ಲಿ ರಿಯಾಯಿತಿಯನ್ನಾಗಲಿ ಅಥವಾ ಭೂ ಕಂದಾಯವನ್ನು ಕೊಡಲು ತಪ್ಪಿಸಿಕೊಳ್ಳುವುದು ಯಾವ ರೈತರಿಂದಲೂ ಸಾಧ್ಯವಿಲ್ಲ. ತಾವು ಬೆಳೆಯನ್ನು ಬೆಳೆಯದಿದ್ದರೂ, ನಿಗದಿ ಪಡಿಸಿದ ತೆರಿಗೆಯನ್ನು ನೀಡಲೇಬೇಕು. ಇಂತಹ ವ್ಯವಸ್ಥೆಯ ವಿರುದ್ಧ ಪ್ರತಿ ಹಳ್ಳಿಯ ರೈತರು ಸಂಘಟಿತರಾಗಿ ಹೋರಾಡುವುದು ಅವಶ್ಯವಾಗಿದೆ" ಎಂದರು. ನಂತರ ಹೊಸದುರ್ಗ ಮತ್ತು ಬಾಗೂರು ಗ್ರಾಮಕ್ಕೆ ಭೇಟಿ ನೀಡಿ ೧೬ ಮೇ ೧೯೩೭ರಂದು ಹುಬ್ಬಳಿಗೆ ಹಿಂದಿರುಗಿದರು.

೧೯೩೭ರಲ್ಲಿ ನಡೆದ ಸಭೆ ಸಮಾರಂಭಗಳಿಂದ ಎಚ್ಚರವಹಿಸಿದ ಸರ್ಕಾರ ಕಾಯಿದೆಗಳ ಮೂಲಕ ಅಂಥ ಸಭೆಗಳನ್ನು ತಡೆಯಲು ಪ್ರಯತ್ನಿಸಿತು. ಚಿತ್ರದುರ್ಗ ಜಿಲ್ಲೆಯ ಯಾವ ತಾಲ್ಲೂಕು ಅಥವಾ ಹಳ್ಳಿಗಳಲ್ಲಾಗಲಿ ಸಭೆ ಸಮಾರಂಭ ಗಳು ನಡೆಯದಂತೆ ಸರ್ಕಾರ ಕಾಯಿದೆ ರೂಪಿಸಿತು. ಸಾರ್ವಜನಿಕ ಸ್ಥಳಗಳಲ್ಲಿ ಜನ ಗುಂಪಾಗಿ ಸೇರದಂತೆ ತಾಲೂಕು ದಂಡಾಧಿಕಾರಿ ಗಳಾದ ಅಮಲ್ದಾರ್‌ಗಳಿಂದ ಜಿಲ್ಲೆಯಲ್ಲಿ ಪ್ರತಿಬಂಧಕಾಜ್ಞೆ ಜಾರಿಗೊಳಿಸಿದರು. ಸರ್ಕಾರಿ ಅಧಿಕಾರಿಗಳ ದಬ್ಬಾಳಿಕೆಯ ವಿರುದ್ಧ ರೈತ ಸಮುದಾಯ ರಕ್ಷಿಸಿಕೊಳ್ಳಬೇಕಾಗಿತ್ತು. ಇಂತಹ ಸಂದರ್ಭ ದಲ್ಲಿ ಕಾಂಗ್ರೆಸ್ ರೈತ ಸಮುದಾಯದ ಪರವಾದ ನೀತಿ ಅನುಸರಿಸಿತು. ಕಂದಾಯದಲ್ಲಿ ಅಂಶಿಕ ಇಲ್ಲವೇ ಪೂರ್ತಿ ರಿಯಾಯಿತಿ ನೀಡಬೇಕೆಂದೂ, ನೀರಾವರಿ ಅನುಕೂಲ ಸಿಗಬೇಕೆಂದೂ, ಠರಾವು ಮಾಡಿತು. ೧೯೩೯ರಲ್ಲಿ ಚಿತ್ರದುರ್ಗ ಜಿಲ್ಲೆಯ ಪ್ರತಿಯೊಂದು ತಾಲ್ಲೂಕಿನಲ್ಲೂ ರೈತ ಸಮ್ಮೇಳನಗಳು ನಡೆದವು. ಜುಲೈ ೧೯೩೬ರಲ್ಲಿ ಕೆ. ಸಿ. ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಚಳ್ಳಕೆರೆಯಲ್ಲಿ ನಡೆದ ರೈತ ಸಮ್ಮೇಳನದಲ್ಲಿ ಸುಮಾರು ಎರಡೂವರೆ ಸಾವಿರ ಜನ ಸೇರಿದ್ದರು. ಈ ಜಿಲ್ಲೆಯಲ್ಲಿ ಕಾಂಗ್ರೆಸ್ ಸ್ವಾತಂತ್ರ್ಯ ಹೋರಾಟಕ್ಕೆ ರೈತರನ್ನು ಸಂಘಟಿಸಿದ ವಿಧಾನವನ್ನು ಮೇಲಿನ ಎರಡೂ ದಾಖಲೆಗಳು ತಿಳಿಸುತ್ತವೆ. ಆದ್ದರಿಂದ ಕಾಂಗ್ರೆಸ್ ನಡೆಸಿದ ಎಲ್ಲಾ ಚಳವಳಿಗಳಲ್ಲಿ ವ್ಯಾಪಕ ಬೆಂಬಲ ಪಡೆಯಿತು ಎಂಬ ಬಗ್ಗೆ ವಿವರವಾದ ಮಾಹಿತಿ ಈ ದಾಖಲೆಗಳಲ್ಲಿ ಸಿಗುತ್ತದೆ.

ಪ್ರಸ್ತುತ ಪ್ರಬಂಧದಲ್ಲಿ ಚರ್ಚೆ ಮಾಡುವ ಘಟನೆಗಳು ೧೯೩೭ ಮತ್ತು ೧೯೩೬ ವರ್ಷಗಳಿಗೆ ಸಂಬಂಧಿಸಿರುವುದರಿಂದ ಅದಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ವಿವರಿಸಲು ಯತ್ನಿಸ ಲಾಗಿದೆ. ೧೯೩೭ ಮೇ ೧೪ರಂದು ಎನ್. ಎಸ್. ಹರ್ಡೀಕರ್ ಮತ್ತು ಉಮಾಬಾಯಿ ಕುಂದಾಪುರ ಹುಬ್ಬಳ್ಳಿಯಿಂದ ದಾವಣಗೆರೆಗೆ ಬಂದರು. ಅವರನ್ನು ಎಸ್. ನಿಜಲಿಂಗಪ್ಪ ಮತ್ತು ಎಸ್. ವಾಸುದೇವರಾವ್ ಮುಂತಾದವರು ಬರಮಾಡಿ ಕೊಂಡರು. ಆ ಸಂದರ್ಭದಲ್ಲಿ ಜಿಲ್ಲೆಯಾದ್ಯಂತ ಪ್ರವಾಸ ಮಾಡಿ ಕಾಂಗ್ರೆಸ್ ಪರ ಪ್ರಚಾರ ಕೈಗೊಂಡರು. ಇವರ ಪ್ರವಾಸವು ಜಿಲ್ಲೆಯಲ್ಲಿ ವ್ಯಾಪಕ ಪ್ರಭಾವವನ್ನು ಬೀರಿತು. ತಾಲ್ಲೂಕು ಮಟ್ಟದಲ್ಲಿ ಕಾಂಗ್ರೆಸ್ ಸಮಿತಿಗಳು ಅಸ್ತಿತ್ವಕ್ಕೆ ಬಂದವು. ಜಿಲ್ಲೆಯ ಜಗಳೂರು, ಚಳ್ಳಕೆರೆ, ಮೊಳಕಾಲ್ಮೂರು, ಹಿರಿಯೂರು, ಹೊಸದುರ್ಗ ಮುಂತಾದ ತಾಲ್ಲೂಕು ಕೇಂದ್ರಗಳಲ್ಲಿ ಪ್ರವಾಸ ಕೈಗೊಂಡು, ತಮ್ಮ ಸಾರ್ವಜನಿಕ ಭಾಷಣದಲ್ಲಿ ರೈತರು ಹೆಚ್ಚಿನ ಸಂಖ್ಯೆಯಲ್ಲಿ ಕಾಂಗ್ರೆಸ್ ಸದಸ್ಯತ್ವ ಪಡೆಯಬೇಕೆಂದರು. ಜವಾಬ್ದಾರಿ ಸರ್ಕಾರವನ್ನು ರಚಿಸುವುದು ಜೊತೆಗೆ ವಸಾಹಾತುಶಾಹಿಯ ವಿರುದ್ಧ ಹೋರಾಟ ಮಾಡಬೇಕಾದ ಅವಶ್ಯಕತೆಯನ್ನು ಒತ್ತಿ ಹೇಳಿದರು. ೧೬ನೇ ಮೇ ೧೯೩೭ರಂದು ಹಿರಿಯೂರಿನಲ್ಲಿ ಈ ಮುಖಂಡರಿಬ್ಬರೂ, ಪ್ರಚಾರ ಕೈಗೊಂಡಾಗ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಸ್ಥಳೀಯ ತಿರುಮಲೇಶ್ವರ ದೇವಸ್ಥಾನದಲ್ಲಿ ರೈತ ಸಮ್ಮೇಳನವನ್ನು ಸಂಘಟಿಸಿದ್ದರು. ಈ ರೈತ ಸಮ್ಮೇಳನದಲ್ಲಿ ವಾಣಿವಿಲಾಸ ಸಾಗರ ಕೃಷಿ ಸಂಘ ನೀತಿ ಸಂಹಿತೆಯನ್ನು ಬಿಡುಗಡೆ ಮಾಡಿದರು. ಸರ್ಕಾರ ರೈತರಿಗೆ ಉತ್ತಮ ನೀರಿನ ಸೌಲಭ್ಯವನ್ನು ಒದಗಿಸಿಕೊಡಬೇಕೆಂದೂ ಒತ್ತಾಯಿಸಿದರು. ವಾಣಿವಿಲಾಸ ಸಾಗರ ಕೃಷಿ ಬ್ಯಾಂಕ್ ಎಂದು ಕರೆಯಬೇಕೆಂಬುದಾಗಿ ಚರ್ಚಿಸಲಾಯಿತು. ಎಸ್. ಎಸ್. ಹರ್ಡೀಕರ್ ಮತ್ತು ಉಮಾಬಾಯಿ ಕುಂದಾಪುರ ತಾವು ಭೇಟಿ ಮಾಡಿದ ತಾಲೂಕುಗಳಲ್ಲಿ ಕಾಂಗ್ರೆಸ್ ಸಮಿತಿಯನ್ನು ಸಂಘಟಿಸಿದ್ದರು. ಅಂದು ಕಾಂಗ್ರೆಸ್ ಸಮಿತಿಯಲ್ಲಿದ್ದ ಪ್ರಮುಖ ಕಾರ್ಯಕರ್ತರನ್ನು ಈ ಕೆಳಗಿನಂತೆ ಗಮನಿಸಬಹುದು.

೧೯೩೭ ನವೆಂಬರ್ ೩ ರಂದು ಹೊಸದುರ್ಗ ತಾಲೂಕು ಕಾಂಗ್ರೆಸ ಸಮಿತಿ ರಚನೆಯಾಯಿತು. ನರಸಿಂಹ ಶೆಟ್ಟಿ : ಅಧ್ಯಕ್ಷರು.

ಟಿ. ಹೆಚ್. ದಾಸಪ್ಪ ಮತ್ತು ಡಿ. ಎಸ್. ತಿಮ್ಮಪ್ಪ : ಕಾರ್ಯದರ್ಶಿಗಳು, ಈ ಯಂಕಣ್ಣ : ಖಜಾಂಚಿ, ನಾಗೇಶ ಶೆಟ್ಟಿ ಮತ್ತು ೧೨ ಜನ : ಸದಸ್ಯರುಗಳಾಗಿದ್ದರು.

ಈ ತಾಲ್ಲೂಕು ಕಾಂಗ್ರೆಸ್ ಸಮಿತಿಯ ಆಹ್ವಾನದ ಮೇರೆಗೆ ೧೯೩೭ ನವೆಂಬರ್ ೧೮ರಂದು ಹೆಚ್. ಕೆ. ವೀರಣ್ಣಗೌಡ ಹೊಸದುರ್ಗ ಪಟ್ಟಣಕ್ಕೆ ಬಂದರು. ಅವರು ಸ್ಥಳೀಯ ಬನಶಂಕರಿ ದೇವಾಲಯದಲ್ಲಿ ಸಾರ್ವಜನಿಕ ಸಭೆಯನ್ನು ಕುರಿತು ಮಾತ ನಾಡಿದರು. ಈ ಸಭೆಯನ್ನು ತಡೆಯಲು ಸ್ಥಳೀಯ ಅಮಲ್ದಾರರು ಮ್ಯಾಜಿಸ್ಟ್ರೇಟ್‌ರಾಗಿ ೧೪೪ನೇ ಸೆಕ್ಷನ್ ಕಾಯಿದೆಯನ್ನು ಜಾರಿ ಗೊಳಿಸಿ ಸಾರ್ವಜನಿಕ ಸಭೆಗಳು ನಡೆಯದಂತೆ ತಡೆದರು. ನಂತರ ಹೆಚ್.ಕೆ. ವೀರಣ್ಣಗೌಡರು ಸಾರ್ವಜನಿಕರನ್ನುದ್ದೇಶಿಸಿ ಭಾಷಣ ಮಾಡುತ್ತಾ ಕಾಂಗ್ರೆಸ್ ಸದಸ್ಯತ್ವವನ್ನು ಪಡೆಯುವುದು ಅತ್ಯವಶ್ಯ ವೆಂದು ಹೊಸದುರ್ಗ ಜನರು ಹೇಡಿತನದಿಂದ ಬಂದು ಕುಳಿತಿ ರುವುದನ್ನು ನೋಡಿದರೆ ಕಾಂಗ್ರೆಸ್‌ನ ವಿಚಾರ ಸಂದೇಶವು ನಿಮಗೆ ತಿಳಿದಿಲ್ಲ ಎಂದು ತೋರುತ್ತದೆ. ಸರ್ಕಾರದವರು ಜನತೆಯ ಸೇವಕರು, ಇದನ್ನು ರೈತರು ತಿಳಿಯಬೇಕು. ಆದ್ದರಿಂದ ಈ ವ್ಯವಸ್ಥೆಯನ್ನು ಹೋಗಲಾಡಿಸಲು ತಾವೆಲ್ಲರೂ ಸ್ವಾತಂತ್ರ್ಯ

ಹೋರಾಟದಲ್ಲಿ ಭಾಗವಹಿಸುವುದು ಅವಶ್ಯಕವೆಂದೂ ಮನವರಿಕೆ ಮಾಡಿದರು.

೧೯೩೭ರಲ್ಲಿ ಸಂಸ್ಥಾನದಲ್ಲಿ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಬಹುಮತ ಗಳಿಸಲಿಲ್ಲ. ಆದುದರಿಂದ ಕಾಂಗ್ರೆಸ್ ಪಕ್ಷವನ್ನು ಜನ ಸಾಮಾನ್ಯರಲ್ಲಿ ಜನಪ್ರಿಯಗೊಳಿಸಲು ಒಂದು ಸಮಿತಿಯನ್ನು ನೇಮಿಸಲಾಯಿತು. ಈ ಸಮಿತಿಯ ಸದಸ್ಯರಾದ ಟಿ. ಸಿದ್ದಲಿಂಗಯ್ಯ, ವೀರಕೇಸರಿ ಸೀತರಾಮಶಾಸ್ತ್ರಿ, ಮತ್ತು ತಗಡೂರು ರಾಮಚಂದ್ರರಾಯರು, ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡರು. ಈ ವೇಳೆಗಾಗಲೇ ಪ್ರಜಾಪಕ್ಷ ಮತ್ತು ಪ್ರಜಾಮಿತ್ರ ಮಂಡಳಿಗಳು ಮೈಸೂರು ಸಂಸ್ಥಾನದ ಕಾಂಗ್ರೆಸ್ ನೊಂದಿಗೆ ವಿಲೀನಗೊಂಡಿದ್ದವು. ಕಾಂಗ್ರೆಸ್ ಮೈಸೂರು ಸಂಸ್ಥಾನದಲ್ಲಿ ಏಕೈಕ ಪ್ರಬಲ ರಾಜಕೀಯ ಸಂಘಟನೆಯಾಗಿ ರೂಪಗೊಂಡಿತು.

ದಾವಣಗೆರೆಯ ಪ್ರಥಮ ದರ್ಜೆಯ ನ್ಯಾಯಾಧೀಶರು ಒಂದು ಕಾಯಿದೆಯನ್ನು ಪಾಸು ಮಾಡಿ ಸೆಕ್ಷನ್ ೩೯ರ ಪ್ರಕಾರ ಮೈಸೂರು ಪೋಲೀಸ್ ನಿಯಮಾನುಸಾರ ದಾವಣಗೆರೆ ನಗರ ಸಭೆಗೆ ಸೇರಿದ ಹರಿಹರ ಮತ್ತು ದಾವಣಗೆರೆಯ ಹತ್ತು ಮೈಲು ದೂರದವರೆಗೆ ರೈತ ಸಂಘಟನೆ ಅಥವಾ ಕಿಸಾನ್ ಚಳುವಳಿ ಯಂತಹ ಸಾರ್ವಜನಿಕ ಸಭೆಗಳನ್ನು ಮಾಡುವಂತಿಲ್ಲ ಎಂದು ಕಾನೂನು ಜಾರಿಗೆ ತಂದಿದ್ದರು.

ಆಗಸ್ಟ್ ೧೯೩೭ರಲ್ಲಿ ಚಿತ್ರದುರ್ಗ ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯಕರ್ತರು ಎಸ್. ನಿಜಲಿಂಗಪ್ಪನವರ ನೇತೃತ್ವದಲ್ಲಿ ಚಿತ್ರದುರ್ಗದ ಜಯದೇವ ಹಾಸ್ಟಲ್ ಕಾಂಪೌಂಡ್ ನಲ್ಲಿ ಕಾಂಗ್ರೆಸ್ ಬಾವುಟ ಹಾರಿಸಿದರು. ಎಸ್. ನಿಜಲಿಂಗಪ್ಪನವರು ಮಾತನಾಡುತ್ತಾ ಸ್ಥಳೀಯ ವಿದ್ಯಾರ್ಥಿಗಳು ಸ್ವಾತಂತ್ರ್ಯ ಚಳವಳಿಯಲ್ಲಿ ನೇರವಾಗಿ ಭಾಗವಹಿಸಬೇಕೆಂದರು. ಭಾರತದ ಸ್ವತಂತ್ರ್ಯ ಚಳುವಳಿಯು ತಿಲಕ್‌ರ ಮಾರ್ಗದಲ್ಲಿ ನಡೆಯಬೇಕೆಂದು ವಿವರಿಸಿದರು. ಅಂದೇ ಸಾಯಂಕಾಲ ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸೇರಿದ್ದ ಕಾಂಗ್ರೆಸ್ ಕಾರ್ಯಕರ್ತರು ಖಾದಿ ಪ್ರಚಾರ, ಸ್ವಾತಂತ್ರ್ಯದ ಪಡೆಯುವ ಗುರಿ, ಉದ್ದೇಶಗಳನ್ನು ಕುರಿತು ಚರ್ಚಿಸಿದರು. ಆ ವೇಳೆಯಲ್ಲಿದ್ದ ಸದಸ್ಯರೆಂದರೆ ರಂಗರಾವ್, ಎಸ್. ವಾಸುದೇವರಾವ್, ಭೀಮಪ್ಪನಾಯಕ, ರಾಮದಾಸ್. ಹರಿಹರದ ಗುಂಡುರಾವ್, ಎಂ. ಎಲ್. ಆನಂದಮೂರ್ತಿ ಮತ್ತು ಐ. ಎಸ್. ಶ್ರೀನಿವಾಸ ರಾವ್ ಮುಂತಾದವರು ಸೇರಿದ್ದರು. ೧೯೩೭ ಆಗಸ್ಟ್‌ನಲ್ಲಿ ಹೆಚ್. ಹನುಮಂತಪ್ಪನವರ ಮನೆಯಲ್ಲಿ ಹೊಳಲ್ಕೆರೆ ತಾಲೂಕು ಕಾಂಗ್ರೆಸ್ ಸಮಿತಿ ಸಭೆ ಸೇರಿ ತಿಲಕ್ ಜಯಂತಿಯನ್ನು ಆಚರಿಸಿದರು. ಸಭೆಯಲ್ಲಿ ಪ್ರತಿ ತಿಂಗಳು ಕಾಂಗ್ರೆಸ್ ಸಭೆ ನೇರಲು ತೀರ್ಮಾನಿಸಿದರು. ಅದೇ ರೀತಿ ರಾಮಗಿರಿ ಗ್ರಾಮದ ಗಂಗನಹಳ್ಳಿ ರುದ್ರಪ್ಪನವರ ಮನೆಯಲ್ಲಿ ಸಭೆ ಸೇರಿ ತಿಲಕರ ಜಯಂತಿಯನ್ನು ಆಚರಿಸಲಾಯಿತು. ಹೊಸದುರ್ಗ ಬಾಗೂರು, ಚಳ್ಳಕೆರೆಯಲ್ಲಿ ತಿಲಕರ ಜಯಂತಿಯನ್ನು ಆಚರಿಸುವ ಮೂಲಕ ಸಾರ್ವಜನಿಕರ ಗಮನ ಸೆಳೆದರು. ೧೯೩೭ ಅಕ್ಟೋಬರ್ ೧೧ ಹೊಳಲ್ಕೆರೆ, ಚಳ್ಳಕೆರೆ, ಹರಿಹರ, ದಾವಣಗೆರೆಗಳ್ಲಿ ಸಭೆ ಸೇರಿದ ಕಾಂಗ್ರೆಸ್ ಕಾರ್ಯಕರ್ತರು ಆ ದಿನವನ್ನು 'ದಮನಕಾರಿ' ದಿನವನ್ನಾಗಿ ಆಚರಿಸಿದರು. ಅದೇ ದಿನ ಹೊಳಲ್ಕೆರೆಯಲ್ಲಿ ಸಭೆ ಸೇರಿದ ಹನುಮಂತಪ್ಪ , ಕೃಷ್ಣಾರೆಡ್ಡಿ, ಚಿತ್ರದುರ್ಗದ ಕೃಷ್ಣಮೂರ್ತಿ ಮತ್ತು ಆರ್. ಟಿ. ಗೋವಿಂದರಾವ್ ಜನತೆಯನ್ನುದ್ದೇಶಿಸಿ ಮಾತನಾಡುತ್ತಾ, ಇತ್ತೀಚಿನ ಸೆಕ್ಷನ್ ೩೯ರ ಪೋಲೀಸ್ ಕಾಯಿದೆಯನ್ನು ಜಾರಿ ಮಾಡಿದ ದಾವಣಗೆರೆಯ ಪ್ರಥಮ ದರ್ಜೆ ನ್ಯಾಯಾಧೀಶರು ಜನತೆಯ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಕಿತ್ತುಕೊಂಡಿರುವದನ್ನು ಟೀಕಿಸಿದರು. ದಾವಣಗೆರೆಯಲ್ಲಿ ಡಿ. ಹೆಚ್. ಚಂದ್ರಶೇಖರಯ್ಯನವರು ಸರ್ಕಾರದ ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿದರು. ಟಿ. ಸಿದ್ದಲಿಂಗಯ್ಯನವರು ಹಾಗೂ ಇತರರು ಕಾರಾಗೃಹ ಸೇರಿದರು. ಅವರ ಉದ್ದೇಶ ಮೈಸೂರಿನಲ್ಲಿ ಜವಾಬ್ದಾರಿ ಸರಕಾರವನ್ನು ರಚಿಸಬೇಕೆಂಬುದಾಗಿತ್ತು. ಅಂದೇ ಚಿತ್ರದುರ್ಗ ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟ್ ಗೋವಿಂದರಾವ್ ಅವರ ಭಾಷಣವು ದಿವಾನರ ನಿಂದನೆಯಿಂದ ಕೂಡಿದೆ ಎಂದು ಅವರ ವಿರುದ್ಧ ಕಾಯಿದೆ ಜಾರಿಗೊಳಿಸಿದರು. ಈ ನಿಟ್ಟಿನಲ್ಲಿ ರಾಮಗಿರಿ ಗ್ರಾಮದ ಪ್ರತಿಭಟನಾ ಮೆರವಣಿಗೆ ಸ್ಮರಣೀಯವಾದುದು. ಮೆರವಣಿಗೆಕಾರರು ಗಾಂಧೀಜಿಯ ಭಾವಚಿತ್ರವನ್ನು ಹಿಡಿದುಕೊಂಡು ಸರ್ಕಾರದ ದೌರ್ಜನ್ಯವನ್ನು ಪ್ರತಿಭಟಿಸಿದರು. ಸರ್ಕಾರದ ವಿರುದ್ಧ ಘೋಷಣೆ ಕೂಗುತ್ತಾ ಜನತೆಯಲ್ಲಿ ರಾಷ್ಟ್ರೀಯತೆಯ ಬೀಜ ಬಿತ್ತಿದರು.

೧೯೩೭ ಅಕ್ಟೋಬರ್ ೨೨ರಂದು ವಕೀಲರುಗಳಾಗಿದ್ದ ಕಾಸಲು ಶ್ರೀನಿವಾಸ ಶೆಟ್ಟಿ, ದೊಡ್ಡಬಸಪ್ಪ, ಹಾವೇರಿಯ ಕಾರ್ ರುದ್ರಪ್ಪ ಇವರು ಹರಿಹರದಲ್ಲಿ ಸಭೆ ಸೇರಿ ಕೆ. ಎಫ್ ನಾರೀಮನ್ ಅವರನ್ನು ಭೇಟಿ ಮಾಡಿದರು. ಕೆ. ಎಫ್. ನಾರೀಮನ್, ಪಾರ್ಥನಾರಾಯಣ ಪಂಡಿತರವರ ಜೊತೆಯಲ್ಲಿ ಹರಿಹರಕ್ಕೆ ಬಂದು ಹಿಂದಿಯಲ್ಲಿ ಭಾಷಣ ಮಾಡುತ್ತಾ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರವನ್ನು ಸ್ಥಾಪನೆ ಮಾಡುವುದು ಅವಶ್ಯಕವಾಗಿದೆ. ಆದರೆ ಸರ್ಕಾರವು ನಾಯಕರನ್ನು ದಸ್ತಗಿರಿ ಮಾಡುತ್ತಿರುವುದು ಅವಿವೇಕದ ವಿಚಾರವಾಗಿದೆ ಎಂದರು. ಆ ದಿನ ಕೆ. ಎಫ್. ನಾರೀಮನ್ ದಾವಣಗೆರೆಯಲ್ಲಿ ಸ್ಥಳೀಯ ಕಾಂಗ್ರೆಸ್ ಮುಖಂಡರು ವ್ಯವಸ್ಥೆ ಮಾಡಿದ್ದ ಸಾರ್ವಜನಿಕ ಸಭೆಯಲ್ಲಿ ಭಾಗವಹಿಸಿದ್ದರು. ಅವರು ತಮ್ಮ ಭಾಷಣದಲ್ಲಿ ಮೈಸೂರು ಸಂಸ್ಥಾನದ ರಾಜಕೀಯ ಮತ್ತು ನಾಗರೀಕ ಸನ್ನಿವೇಶವು ತುಂಬಾ ಆಪತ್ತಿನಲ್ಲಿದೆ ಎಂದು ಅಭಿಪ್ರಾಯಪಟ್ಟರು. ಈ

ಸಮಯದಲ್ಲಿ ಕೆ. ಟಿ. ಭಾಷ್ಯಂ ಅವರು: "ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಹೋರಾಟಕ್ಕೆ ಅಡಿಗಲ್ಲು ಹಾಕಿದ್ದರೂ ಅದು ಇನ್ನೂ ಯಶಸ್ವಿಯಾಗಿಲ್ಲ. ಈ ಕುರಿತು ಇಲ್ಲಿಯ ಜನತೆ ಎಚ್ಚೆತ್ತುಕೊಳ್ಳಬೇಕಾಗಿದೆ. ಮೈಸೂರು ಸಂಸ್ಥಾನದ ಜನತೆಯ ಜೀವನ ತುಂಬಾ ನಿಕೃಷ್ಟವಾಗಿದೆ. ಹಳ್ಳಿಗಳಲ್ಲಿ ಸಂಗ್ರಹಿಸಿದ ತೆರಿಗೆ ಅರಸರ ದುಂದುವೆಚ್ಚಕ್ಕೆ, ನಗರಗಳ ಅಭಿವೃದ್ಧಿಗೆ ಪೋಲಾಗುತ್ತಿದೆ. ಬ್ರಿಟಿಷರ ಸಂವಿಧಾನವನ್ನೇ ಇವರು ರಾಜ್ಯದ ಜನತೆಯ ಮೇಲೆ ಹೇರುತ್ತಿದ್ದಾರೆ. ಇಂತಹ ದೌರ್ಜನ್ಯ ದಿಂದ ವಿಮೋಚನೆಯಾಗದ ಹೊರತು ಇಲ್ಲಿಯ ಜನತೆಗೆ ಉಳಿಗಾಲವಿಲ್ಲ" ವೆಂದು ಮಾತನಾಡಿದರು. ಈ ಭಾಷಣದಿಂದಾಗಿ ಸರ್ಕಾರ ಅವರನ್ನು ದಾವಣಗೆರೆಯಲ್ಲೇ ದಸ್ತಗಿರಿ ಮಾಡಿತು. ಪರಿಣಾಮವಾಗಿ ಕೆ. ಸಿ. ರೆಡ್ಡಿ, ಎಂ. ಎನ್. ಜೋಷಿ ಜಿಲ್ಲೆಯಾದ್ಯಂತ ಪ್ರವಾಸ ಮಾಡಿ ನಾರೀಮನ್ನರ ದಸ್ತಗಿರಿಯನ್ನು ಬಹುವಾಗಿ ಖಂಡಿಸಿದರು; ಕಾಂಗ್ರೆಸ್, ಜವಾಬ್ದಾರಿ ಸರಕಾರವನ್ನು ಸ್ಥಾಪಿಸಬೇಕೆಂದು ಹಿರಿಯೂರಿನಲ್ಲಿ ಭಾಷಣ ಮಾಡಿದರು. ರೈತ ವಿರೋಧಿ ತೆರಿಗೆಯನ್ನು ಸಂಪೂರ್ಣ ನಿಲ್ಲಿಸಿ ರೈತ ಪರ ಕಂದಾಯ ವ್ಯವಸ್ಥೆ ನಿಗದಿಯಾಗಬೇಕೆಂದು ಸರಕಾರವನ್ನು ಅಗ್ರಹ ಪಡಿಸಿದರು.

೨೬ ಜನವರಿ ೧೯೩೯ರಂದು ಕರ್ನಾಟಕ ಜಲಿಯನ್ ವಾಲಾಬಾಗ್ ಹತ್ಯಾಕಾಂಡ ಸ್ವರೂಪದ ವಿದುರಾಶ್ವತ್ಥದ ಘಟನೆಯನ್ನು ಪ್ರತಿಭಟಿಸಲು ಚಿತ್ರದುರ್ಗದಲ್ಲಿ ಕೆ. ಬಿ. ಭಾಷ್ಯಂ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದರು. ಆ ಸಂದರ್ಭದಲ್ಲಿ ಎಸ್. ನಿಜಲಿಂಗಪ್ಪ, ಡಿ. ಎಸ್. ಶ್ರೀನಿವಾಸಮೂರ್ತಿ, ಎಂ. ಎ. ಮೂರ್ತಿ, ಶಾಮಾಚಾರ್, ಗುರುಸಿದ್ದಯ್ಯ, ಭೀಮಪ್ಪನಾಯ್ಕ, ಗೋವಿಂದರೆಡ್ಡಿ, ಟಿ.ಡಿ. ಸುಬ್ಬರಾವ್, ಭೀಮಕುಮಾರ್ ಮುಂತಾದವರು ಸೇರಿದ್ದರು. ಸರ್ಕಾರದ ವಿರುದ್ಧ ಘೋಷಣೆಗಳನ್ನು ಕೂಗುತ್ತ ವಿದುರಾಶ್ವತ್ಥದ ಘಟನೆಯಂತಹ ಪ್ರಾಣಾಹಾನಿ ಸ್ವರೂಪದ ಘಟನೆಗಳಿಂದ ದೂರವಿದ್ದು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಲು ಜನತೆಗೆ ಕರೆಯಿತ್ತರು. ಜೊತೆಗೆ ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯವನ್ನು ಕುರಿತು ಚರ್ಚಿಸಿದರು.

೧೯೩೯ರಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಅತಿ ಚಿಕ್ಕ ಹಳ್ಳಿಗಳಲ್ಲಿಯೂ ಕಾಂಗ್ರೆಸ್ ಸಮಿತಿಗಳು ಇದ್ದವು. ಅಂತಹ ಕೆಲವು ಗ್ರಾಮಗಳಲ್ಲಿ ಜಗಳೂರು ತಾಲೂಕಿನ ಬಿದರಕೆರೆ ಮತ್ತು ತೋರಣ ಘಟ್ಟ ವ್ಯವಸ್ಥಿತ ಕಾಂಗ್ರೆಸ್ ಸಮಿತಿಯನ್ನು ಹೊಂದಿದ್ದನ್ನು ದಾಖಲೆಗಳು ಗುರುತಿಸುತ್ತವೆ.

*ಜಗಳೂರು ತಾಲ್ಲೂಕು ಕಾಂಗ್ರೆಸ್ ಸಮಿತಿ ೩೦ ಜನವರಿ ೧೯೩೯*

ಜಿ. ಎಸ್. ಕಲ್ಲಪ್ಪ : ಅಧ್ಯಕ್ಷರು
ಭರ್ಮಾಜಿರಾವ್ : ಕಾರ್ಯದರ್ಶಿಗಳು
ಮಹಾಲಿಂಗಪ್ಪ ಮತ್ತು ಆರು ಜನ ಸದಸ್ಯರಿದ್ದರು.

*ಬಿದರಕೆರೆ ಗ್ರಾಮ ಕಾಂಗ್ರೆಸ್ ಸಮಿತಿ ೩೦ ಜನವರಿ, ೧೯೩೯*

ಅಯ್ಯಣ್ಣ ರೆಡ್ಡಿ : ಅಧ್ಯಕ್ಷರು,
ಮಹದೇವಪ್ಪ : ಉಪಾಧ್ಯಕ್ಷರು
ಷಡಕ್ಷರಪ್ಪ : ಕಾರ್ಯದರ್ಶಿಗಳು
ಆನೆಗೋಡು ಶಿವಣ್ಣ : ಖಜಾಂಚಿ
ವೀರಪ್ಪ ಇತರ ಏಳು ಜನ ಸದಸ್ಯರಿದ್ದರು.

*ತೋರಣಘಟ್ಟ ಕಾಂಗ್ರೆಸ್ ಸಮಿತಿ ೩೦ ಜನವರಿ, ೧೯೩೯*

ಹನುಮಂತಪ್ಪ : ಅಧ್ಯಕ್ಷರು
ಓಬಳಪ್ಪ : ಕಾರ್ಯದರ್ಶಿಗಳು
ಗೋವಿಂದಪ್ಪ : ಖಜಾಂಚಿ
ಬಸಪ್ಪ ಇತರ ಏಳು ಜನ ಸಮಿತಿಯ ಸದಸ್ಯರಿದ್ದರು.

೧೯೩೯ರಲ್ಲಿ ಟಿ. ಸಿದ್ದಲಿಂಗಯ್ಯನವರು ಜೈಲು ಸೇರಿದಾಗ (೧೯೩೮ರ ಶಿವಪುರ ಕಾಂಗ್ರೆಸ್ ಅಧಿವೇಶನದ ನಿಮಿತ್ತ) ಕೃಷ್ಣಾರೆಡ್ಡಿ ಪಂಡಿತ್ ಚಿತ್ರದುರ್ಗ ಜಿಲ್ಲೆಯ ಸಾರ್ವಜನಿಕ ಸಭೆಯಲ್ಲಿ ಮಾತನಾಡುತ್ತಾ ಅವರನ್ನು ಜೈಲಿನಲ್ಲಿಟ್ಟಿರುವುದು ಕಾನೂನು ಬಾಹಿರವಾಗಿದೆ. ಈಗಿರುವ ಮೈಸೂರು ಸಂಸ್ಥಾನದ ಆಡಳಿತ ತುಂಬಾ ಹದಗೆಟ್ಟಿದೆ. ರೈತರ ಮೇಲೆ ವಿಧಿಸುತ್ತಿರುವ ತೆರಿಗೆ ಕೂಡಾ ಸರಿಯಾಗಿಲ್ಲ. ಸರ್ಕಾರದವರು ನಿರ್ಬಂಧದಿಂದ ಕಂದಾಯವನ್ನು ವಸೂಲಿ ಮಾಡುತ್ತಿದ್ದಾರೆ. ಕೊಡದಿದ್ದಲ್ಲಿ ಹುಣಿಸೇ ಬರಲಿನಿಂದ ಹೊಡೆದು ತೆರಿಗೆ ವಸೂಲು ಮಾಡುತ್ತಿದ್ದಾರೆ. ಸರ್ಕಾರದ ದೌರ್ಜನ್ಯ ತುಂಬಾ ಅತಿಯಾಗಿದೆ. ಇಂತಹ ಸರ್ಕಾರ ಬಹುಕಾಲ ಉಳಿಯುವುದಿಲ್ಲವೆಂದು ಪ್ರತಿಭಟಿಸಿದರು.

೧೯೩೯ರಲ್ಲಿ ಚಿತ್ರದುರ್ಗದಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಒಂದೇ ಸ್ವಾತಂತ್ರ್ಯ ಚಳವಳಿಗೋಸ್ಕರ ಹೋರಾಟ ಮಾಡುವ ಸಂಘಟನೆಯಾಗಿತ್ತು. ೩ ಏಪ್ರಿಲ್ ೧೯೩೯ರಲ್ಲಿ ದಾವಣಗೆರೆಯ ಗಾಂಧಿಭವನದಲ್ಲಿ ಮೈಸೂರು ಕಾಂಗ್ರೆಸ್ ಸಮಿತಿ ಮತ್ತು ಆಲ್ ಇಂಡಿಯಾ ಕಾಂಗ್ರೆಸ್ ಸಮಿತಿ, ಧಾರವಾಡ ಈ ಎರಡೂ ಸಮಿತಿಗಳಿಗೂ ಸದಸ್ಯರನ್ನು ಆಯ್ಕೆ ಮಾಡಿದರು. ಈ ವಿಚಾರವು ಜಿಲ್ಲೆಯು ಚಳವಳಿಯಲ್ಲಿ ವಹಿಸಿದ ಪಾತ್ರವನ್ನು ಸ್ಪಷ್ಟಪಡಿಸುತ್ತದೆ.

*ಮೈಸೂರು ಕಾಂಗ್ರೆಸ್ ಸಮಿತಿ ಮೈಸೂರು ೩ ಏಪ್ರಿಲ್ ೧೯೩೯*

ಗಂಜಿ ವೀರಪ್ಪ : ಅಧ್ಯಕ್ಷರು
ಕೆ. ಬಿ. ಜಂಬಣ್ಣ : ಉಪಾಧ್ಯಕ್ಷರು
ಕೆ. ವೀರಭದ್ರಪ್ಪ ಮತ್ತು ಮೌನೇಶ್ವರಪ್ಪ : ಜಂಟಿ ಕಾರ್ಯದರ್ಶಿಗಳು
ಬಂಡೆ ಹನುಮಂತಪ್ಪ ಮತ್ತು ಇತರ ಐದು ಜನ ಸದಸ್ಯರಿದ್ದರು.

*ಆಲ್‌ಇಂಡಿಯಾ ಕಾಂಗ್ರೆಸ್ ಸಮಿತಿ ಧಾರವಾಡ, ೩ ಏಪ್ರಿಲ್ ೧೯೩೯*

ಕಾಸಲು ಶ್ರೀನಿವಾಸ ಶೆಟ್ಟಿ : ಅಧ್ಯಕ್ಷರು
ಬಂಡೆ ಹನುಮಂತಪ್ಪ : ಉಪಾಧ್ಯಕ್ಷರು
ಕೆ. ಜಿ. ಜಂಬಣ್ಣ ಮತ್ತು ವೀರಪ್ಪ : ಜಂಟಿ ಕಾರ್ಯದರ್ಶಿಗಳು
ಗಂಜಿ ವೀರಪ್ಪ ಮತ್ತು ಇತರ ಎಂಟು ಜನ ಸದಸ್ಯರಿದ್ದರು.

ಭಾರತದ ಸ್ವಾತಂತ್ರ್ಯ ಚಳುವಳಿ ಒಂದು ಅಪೂರ್ವವಾದ ಜನಾಂದೋಲನದ ಘಟನೆಯಾಗಿದೆ. ಚಿತ್ರದುರ್ಗ ಜಿಲ್ಲೆಯಲ್ಲಿ

ಕಾಂಗ್ರೆಸ್ ಸಮುದಾಯ ಆಧಾರಿತ ತಳಹದಿ ಪಡೆಯಲು ರೈತರ ನಡುವೆ ಕಾಂಗ್ರೆಸ್ ಕೆಲಸ ಮಾಡಿ ಅವರ ಸಮಸ್ಯೆಗಳ ನಿವಾರಣೆಗಾಗಿ ದುಡಿಯಿತು. ಇದರಿಂದಾಗಿ ಕರ್ನಾಟಕದಲ್ಲಿ ಕಾಂಗ್ರೆಸ್ ರೈತರ ಬೆಂಬಲ ಪಡೆದು ಪ್ರಬಲ ಸಂಘಟನೆಯಾಗಿ ಬೆಳೆಯಿತು. ನಗರ, ಪಟ್ಟಣ, ಹಳ್ಳಿಗಳಲ್ಲಿ ಜನರು ಸ್ವಯಂ ಸ್ಫೂರ್ತಿಯಿಂದ ಚಳವಳಿಯಲ್ಲಿ ಭಾಗಿಗಳಾಗಿ ಹುತಾತ್ಮರಾದರು. ಈವರೆಗಿನ ಅಧ್ಯಯನಗಳಿಂದ ಕೆಲವು ಮುಖಂಡರ ಬಗ್ಗೆ ಮಾತ್ರ ತಿಳಿದಿತ್ತು. ಆದರೆ ಇತ್ತೀಚಿನ ಅಲಕ್ಷಿತರ ಅಧ್ಯಯನಗಳಿಂದಾಗಿ ಪ್ರತಿ ಪ್ರದೇಶದ ಚರಿತ್ರೆ ಬೆಳಕಿಗೆ ಬರುತ್ತಲಿದೆ. ಅದರನ್ವಯ ಚಿತ್ರದುರ್ಗ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿಯನ್ನು ಬಿಂಬಿಸುವ ಈ ಹೊಸ ಸಂಗತಿ ಒಂದಾಗಿದೆ. ಚಿತ್ರದುರ್ಗದಲ್ಲಿ ಸ್ವಾತಂತ್ರ ಚಳುವಳಿಯ ಮಟ್ಟಿಗೆ ಪ್ರಮುಖವಾದ ಸಂಗತಿಗಳೇ ಬೆಳಕಿಗೆ ಬಾರದೆ ಉಳಿದಿತ್ತು. ಪ್ರಸ್ತುತ ದಾಖಲೆಗಳ ಅವಲೋಕನ ಅಧ್ಯಯನದಿಂದಾಗಿ ಸ್ವಾತಂತ್ರ್ಯ ಹೋರಾಟದ ಸೂಕ್ಷ್ಮ ಸಂಗತಿಗಳು ಅನೇಕ ಗ್ರಾಮವಾರು ಚಳುವಳಿಗಾರರ ಹೆಸರುಗಳು ಇಲ್ಲಿ ಬೆಳಕಿಗೆ ಬಂದಿವೆ. ಈ ರೀತಿಯ ವ್ಯಾಪಕವಾದ ಅಧ್ಯಯನದಲ್ಲಿ ಸ್ವಾತಂತ್ರ್ಯ ಚಳುವಳಿಯ ಪ್ರತಿದಿನದ ಘಟನೆಯನ್ನು ದಾಖಲಿಸಬಹುದು.



(ಈ ಲೇಖನವನ್ನು ತಯಾರಿಸಲು ಸಹಕಾರ ನೀಡಿದ ನನ್ನ ಮಾರ್ಗದರ್ಶಕರಾದ ಡಾ. ಟಿ. ಪಿ. ವಿಜಯ್, ಮುಖ್ಯಸ್ಥರು ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ಅವರುಗಳನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಸೀಕ್ರೆಟ್ ಎಸ್. ಬಿ. ಎ. ನಂ. ೪ : ೩೭.
ಸ್ಪೆಷಲ್ ಬ್ರಾಂಚ್ ಅಬ್‌ಸ್ಟ್ರಾಕ್ಟ್ಸ್, ಫಾರ್‌ದಿ ವೀಕ್ ಎಂಡಿಂಗ್ ವಿತ್ ಸಾಟರ್ ಡೇ, ೨೩ ಜನವರಿ ೧೯೩೭.

೨. ಸೀಕ್ರೆಟ್ ಎಸ್. ಬಿ. ಎ. ನಂ : ೪ : ೩೮.
ಸ್ಪೆಷಲ್ ಬ್ರಾಂಚ್ ಅಬ್‌ಸ್ಟ್ರಾಕ್ಟ್ಸ್ ಫಾರ್ ದಿ ವೀಕ್ ಎಂಡಿಂಗ್ ವಿತ್ ಸಾಟರ್ ಡೇ, ೨೮ ಜನವರಿ ೧೯೩೮.

೩. ಜ. ಎಸ್. ಹಾಲಪ್ಪ., ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಸಂಪುಟ ೨, ಪು. ೨೯, ೬೪.

೪. ಕರ್ನಾಟಕ ಥ್ರೂ ದಿ ಏಜಸ್., (೧೯೬೮), ಆರ್. ಆರ್. ದಿವಾಕರ್ (ಸಂ).

೫. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಸಂಪುಟ ೧., (೧೯೭೪), ಸಂಪುಟ ೨., (೧೯೭೭), ಸಂಪುಟ ೩., (೧೯೮೦), ಸೂರ್ಯನಾಥ್ ಕಾಮತ್, (ಸಂ.).

೬. ಚಂದ್ರವಳ್ಳಿ., (೧೯೭೬), ಡಾ. ಎಂ. ವಿ. ಶ್ರೀನಿವಾಸ್ (ಸಂ.), ಲಕ್ಷ್ಮಣ ತೆಲಗಾವಿ, (ಸಂ.), ಚಿತ್ರದುರ್ಗ ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ .

೭. ಡಾ. ಕೆ. ವೀರತಪ್ಪ., (೧೯೭೭), ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ.

೮. ಶಿವಮೊಗ್ಗ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರ ನೆನಪುಗಳು., (೧೯೯೨), ಡಿ. ಎಸ್ ದಿವಾಕರ್, (ಪ್ರ.ಸಂ.).

೯. ಹೋರಾಟದ ನೆನಪು (ಸ್ಮರಣ ಸಂಚಿಕೆ)., (೧೯೯೬), ಕೊಟಗಿ ಸಿದ್ದಲಿಂಗಪ್ಪ, (ಸಂ.), ಚಿತ್ರದುರ್ಗ ಜಿಲ್ಲಾ ಸ್ವಾತಂತ್ರ್ಯ ಸಮ್ಮೇಳನ.

೧೦. ಸ್ವಾತಂತ್ರ್ಯೋದಯದ ಮೇಲುಗಲ್ಲುಗಳು., (೧೯೯೭), ಎಸ್. ಆರ್. ರಾಮಸ್ವಾಮಿ, (ಸಂ.)

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.,)

ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಆವರಣ, ಬಸವನಗುಡಿ ರಸ್ತೆ
ನರಸಿಂಹರಾಜಾ ಕಾಲೋನಿ, ಬೆಂಗಳೂರು-೫೬೦ ೦೧೯

## ೨೦೦೧ನೆಯ ಸಾಲಿನ ವಾರ್ಷಿಕ ವರದಿ

ಆತ್ಮೀಯ ಸದಸ್ಯರೇ,

ಅಕಾದೆಮಿಯು ೧೬ ಸಾರ್ಥಕ ವರ್ಷಗಳನ್ನು ಮುಗಿಸಿ ಈಗ ತನ್ನ ೧೭ನೆಯ ವರ್ಷಕ್ಕೆ ಅಡಿಯಿಟ್ಟಿದೆ. ಕಳೆದ ವರ್ಷ ನಾವೆಲ್ಲಾ ಉಡುಪಿಯಲ್ಲಿ ಕಲೆತು, ೧೫ನೆಯ ವಾರ್ಷಿಕ ಸಮ್ಮೇಳನವನ್ನು ಆಚರಿಸಿದ್ದೆವು. ಈಗ, ಶಿವಮೊಗ್ಗೆ ಜಿಲ್ಲೆಯ ಮುಖ್ಯ ಸಾಂಸ್ಕೃತಿಕ ನೆಲೆಗಳಲ್ಲಿ ಒಂದಾದ ರಾಮಚಂದ್ರಾಪುರದಲ್ಲಿ ಶ್ರೀಮಠ ಮತ್ತು ಪೂಜ್ಯ ಶ್ರೀಗಳ ಆಶ್ರಯದಲ್ಲಿ ೧೬ನೆಯ ವಾರ್ಷಿಕ ಸಮ್ಮೇಳನವನ್ನು ಆಚರಿಸಲು ಸಮಾವೇಶಗೊಂಡಿದ್ದೇವೆ. ಕಳೆದ ವರ್ಷ ಅಕಾದೆಮಿಯ ಕಾರ್ಯ ಚಟುವಟಿಕೆಗಳ ಬಗೆಗೆ ನಾವು ತಿಳಿಯಬೇಕಾಗಿದೆ.

**ಐತಿಹಾಸಿಕ ಪರಂಪರೆ ಉಳಿಸಿ - ೨೦೦೧**

೨೦೦೧ನೆಯ ಸಾಲಿನ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳನ್ನು, ಕರ್ನಾಟಕ ಇತಿಹಾಸ ಅಕಾದೆಮಿಯು ಕರ್ನಾಟಕ ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯಗಳ ಸಹಯೋಗದೊಂದಿಗೆ ಹಮ್ಮಿಕೊಂಡಿತ್ತು. ಬೆಂಗಳೂರು ನಗರದಲ್ಲಿ ಬಸವನಗುಡಿಯ ನ್ಯಾಷನಲ್ ಕಾಲೇಜಿನ ಡಾ॥ ಎಚ್. ಎನ್. ಕಲಾಕ್ಷೇತ್ರದಲ್ಲಿ ೧೬-೮-೨೦೦೧ರಂದು ಸಂಜೆ ೬ ಗಂಟೆಗೆ ನಡೆದ ಕಾರ್ಯಕ್ರಮದಲ್ಲಿ ದೀಪ ಹಚ್ಚುವ ಮತ್ತು ಈ ವರ್ಷದ ಕಾರ್ಯಕ್ರಮಗಳಿಗೆಂದೇ ಸಿದ್ಧಪಡಿಸಲಾದ ಭಿತ್ತಿ ಪತ್ರಗಳನ್ನು ಅನಾವರಣ ಮಾಡುವ ಮೂಲಕ, ಸಪ್ತಾಹದ ಕಾರ್ಯಕ್ರಮವನ್ನು ಉದ್ಘಾಟನೆ ಮಾಡಿದವರು, ಕರ್ನಾಟಕದ ಮಾನ್ಯ ರಾಜ್ಯಪಾಲರಾದ ಶ್ರೀಮತಿ ವಿ.ಎಸ್. ರಮಾದೇವಿ. ರಾಜ್ಯದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಯವರಾದ ಶ್ರೀ ಅ. ರಾ. ಚಂದ್ರಹಾಸ ಗುಪ್ತ ಮತ್ತು ಖ್ಯಾತ ಚಲನ ಚಿತ್ರ ಕಲಾವಿದೆ ಶ್ರೀಮತಿ ಉಮಾಶ್ರೀ ಅವರು ಅತಿಥಿಗಳಾಗಿ ಪಾಲ್ಗೊಂಡಿದ್ದರು.ಸಭೆಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಮಾಜಿ ಉಪ ಕುಲಪತಿ ಹಾಗೂ ನಗರದ ಗಣ್ಯ ನಾಗರಿಕರಲ್ಲಿ ಒಬ್ಬರಾದ ಡಾ॥ ಎಚ್. ನರಸಿಂಹಯ್ಯ ಉಪಸ್ಥಿತರಿದ್ದರು. ಸನ್ಮಾನ್ಯ ರಾಜ್ಯಪಾಲರು ತಮ್ಮ ಉದ್ಘಾಟನಾ ಭಾಷಣದಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ಕಾರ್ಯ ಚಟುವಟಿಕೆಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ, ರೂ. ೫೦೦೦ (ಐದು ಸಾವಿರ) ನಗದನ್ನು ದೇಣಿಗೆಯಾಗಿ ನೀಡಿ ಅಭಿನಂದಿಸಿದರು.

ಇದೇ ಸಂದರ್ಭದಲ್ಲಿ ಆಕಾದೆಮಿಯ ಬೆಂಗಳೂರು ಘಟಕವು ಈ ವರ್ಷ ಪ್ರೌಢ ಶಾಲೆ ಮತ್ತು ಪದವಿ ಪೂರ್ವ ಕಾಲೇಜುಗಳ ವಿದ್ಯಾರ್ಥಿಗಳಿಗೆ ನಡೆಸಿದ್ದ ಭಾಷಣ ಮತ್ತು ಪ್ರಬಂಧ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಬಹುಮಾನಗಳನ್ನೂ, ಪಾಲ್ಗೊಂಡ ಎಲ್ಲಾ ವಿದ್ಯಾರ್ಥಿಗಳಿಗೆ ಪ್ರಶಸ್ತಿ ಪತ್ರಗಳನ್ನೂ ನೀಡಿ ಗೌರವಿಸಲಾಯಿತು.

ಅಕಾದೆಮಿಯ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಅವರು ಸಭೆಯ ಅಧ್ಯಕ್ಷತೆ ವಹಿಸಿದ್ದರು.

ಈ ವರ್ಷ ರಾಜ್ಯದ ವಿವಿಧ ಭಾಗಗಳಲ್ಲಿ ಅಕಾದೆಮಿಯ ಸದಸ್ಯರು, ಸ್ಥಳೀಯ ಸಂಘ ಸಂಸ್ಥೆಗಳ ನೆರವಿನೊಂದಿಗೆ ನಡೆಸಿರುವ ಕಾರ್ಯಕ್ರಮಗಳ ವಿವರಗಳನ್ನು ಮುಂದೆ ನೀಡಿದೆ. ಇನ್ನು ಹಲವು ಕಾರ್ಯಕ್ರಮಗಳು ನಡೆದಿವೆ ಎಂದು ತಿಳಿದಿದೆ. ಆದರೆ ಆ ಬಗ್ಗೆ ವಿವರವಾದ ವರದಿಗಳು ಬಂದಿಲ್ಲ ಸದ್ಯ ಬಂದಿರುವ ವರದಿಗಳ ರೀತ್ಯಾ ಕಾರ್ಯಕ್ರಮದ ವಿವರಗಳು ಮುಂದಿನಂತಿವೆ:

# ಇತಿಹಾಸ ಪರಂಪರೆ ಉಳಿಸಿ ಕಾರ್ಯಕ್ರಮಗಳ ವರದಿಗಳ ಪಟ್ಟಿ ೨೦೦೧-೦೨

| ಕ್ರ.ಸಂ. | ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಉದ್ಘಾಟಕರು / ಅಧ್ಯಕ್ಷರು / ಮುಖ್ಯ ಅತಿಥಿಗಳು / ಉಪನ್ಯಾಸಕರು / ಸಂಚಾಲಕರು |
|---|---|---|---|
| | | | *ಸರ್ವಶ್ರೀ* |
| *ಉದ್ಘಾಟನಾ ಸಮಾರಂಭ* | | | |
| ೧. | ೧೬.೮.೨೦೦೧ | ಹೆಚ್. ಎನ್. ಸಭಾಂಗಣ ನ್ಯಾಷನಲ್ ಕಾಲೇಜು, ಬಸವನಗುಡಿ ಬೆಂಗಳೂರು | ಉದ್ಘಾಟನೆ : ಕರ್ನಾಟಕದ ಮಾನ್ಯ ರಾಜ್ಯ ಪಾಲರಾದ ಶ್ರೀಮತಿ ವಿ. ಎಸ್. ರಮಾದೇವಿಯವರಿಂದ<br>ಅಧ್ಯಕ್ಷತೆ : ಡಾ. ಸೂರ್ಯನಾಥ ಕಾಮತ್<br>ಮು. ಅತಿಥಿ : ಶ್ರೀಮತಿ ಉಮಾಶ್ರೀ (ಖ್ಯಾತ ಕಲಾವಿದೆ, ಎಂ. ಎಲ್. ಸಿ)<br>ಅ. ರಾ. ಚಂದ್ರಹಾಸ ಗುಪ್ತ (ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿ) |
| | | *ವಿ.ಸೂ : ಬೆಂಗಳೂರು ನಗರ ಜಿಲ್ಲಾ ಘಟಕವು ನಡೆಸಿದ ಅಂತರ ಕಾಲೇಜು ಭಾಷಣ ಸ್ಪರ್ಧೆ, ಪ್ರಬಂಧ ಸ್ಪರ್ಧೆಗಳಲ್ಲಿ ಮತ್ತು ಅಂತರ ಪ್ರೌಢ ಶಾಲಾ ಚರ್ಚಾಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಪರ್ಯಾಯ ಪಾರಿತೋಷಕಗಳನ್ನು ಮತ್ತು ವೈಯಕ್ತಿಕ ಬಹುಮಾನಗಳನ್ನು ಈ ಸಂದರ್ಭದಲ್ಲಿ ವಿತರಿಸಲಾಯಿತು.* | |
| ೨. | ೧೬.೮.೨೦೦೧ | ಎಸ್. ಜೆ. ಎಂ. ಕೆ. ಪದವಿಪೂರ್ವ ಕಾಲೇಜು, ಬಾದಾಮಿ | 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹದ ಉದ್ಘಾಟನೆ |
| | | *ವಿ.ಸೂ : 'ಐತಿಹಾಸಿಕ ಅವಶೇಷಗಳು ನಾಡಿನ ಸಾಂಸ್ಕೃತಿಕ ಸೊತ್ತು': ಎಂಬ ವಿಷಯದ ಬಗೆಗೆ ಪ್ರಬಂಧ ಸ್ಪರ್ಧೆ ನಡೆಸಿ, ವಿಜೇತರಿಗೆ ಬಹುಮಾನ ನೀಡಲಾಗಿದೆ.* | |
| ೩. | ೧೬.೮.೨೦೦೧ | ಉಮಾಮಹೇಶ್ವರ ದೇವಾಲಯ ಹೊಸಗುಂದ | ಶ್ರೀಮತಿ ಜಯಮ್ಮ ಗೋಪಾಲ್ (ತಾ. ಪಂ. ಅಧ್ಯಕ್ಷೆ); ಡಾ. ಎಸ್. ನಾಗರಾಜು ಶ್ರೀಮತಿ ಗಾಯತ್ರಿ ರೇವಪ್ಪ, ಸಿ. ಎಂ. ಎನ್. ಶಾಸ್ತ್ರಿ, |
| ೪. | ೧೬.೮.೨೦೦೧ | ವಿಟ್ಲ ಪದವಿ ಪೂರ್ವ ಕಾಲೇಜು ವಿಟ್ಲ | ಶ್ರೀ ಯಶು ವಿಟ್ಲ ; ಅನಂತ ಕೃಷ್ಣ ಹೆಬ್ಬಾರರು (ಪ್ರಾಂಶುಪಾಲರು); -- ಡಾ. ಪೀಟರ್‌ಮನ್ ಪ್ರಭಾಕರ |
| ೫. | ೧೬.೮.೨೦೦೧ | ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ; ದ. ಕನ್ನಡ | ಪ್ರೊ. ನಾಗರಾಜ ಪೂವಾನಿ; -- ಉಮಾಕಾಂತ ಶೆಣೈ |
| ೬. | ೧೬.೮.೨೦೦೧ | ಜಿ.ಇ.ಸಿ.ಜಿ ಕೆ ಹಿರೇಗೌಡ ಸಂಯುಕ್ತ ಪದವಿ ಪೂರ್ವಕಾಲೇಜು ರೊಟ್ಟಿಗವಾಡ, ಕುಂದಗೋಳ ತಾಪ | ಎ.ಎಲ್. ಪೋಲೀಸ್ ಪಾಟೀಲ್ (ಪ್ರಾಚಾರ್ಯರು); ಜಿ. ಬಿ. ವೆಂಕಾರೆಡ್ಡಿ, ಎಸ್. ಎಂ. ಹಡಪದ್ ಎಚ್. ಜಿ. ದುರುಗಣ್ಣವರ್, ಯು. ವಿ ಗುಂಜಾಳ್ |
| | | *ವಿ.ಸೂ : 'ಕದಂಬರು ಕರ್ನಾಟಕಕ್ಕೆ ನೀಡಿದ ಕೊಡುಗೆ', ಎಂಬ ವಿಷಯದ ಮೇಲೆ ಪ್ರೊ. ಕೆ.ಸಿ. ಮಲ್ಲಿಗವಾಡ ಅವರ ಉಪನ್ಯಾಸ ನೀಡಿದರು.* | |
| ೭. | ೧೬.೮.೨೦೦೧ | ಮಾದರಿ ಪ್ರಾಥಮಿಕಶಾಲೆ, ಯಾಳಗಿ | ರಾಜ ಹೊಸಮನಿ; ಜಿ. ಎಸ್. ರೋಡಲ ಬಂಕಾ; -- ಎನ್. ಎಚ್. ದೇಸಾಯಿ |
| ೮. | ೧೭.೮.೨೦೦೧ | ಆಕಾಶವಾಣಿ ಕೇಂದ್ರ ಭದ್ರಾವತಿ | ಸುಮತೀಂದ್ರ ನಾಡಿಗ, ಸಂತೆಬೆನ್ನೂರು. |
| | | *ವಿ.ಸೂ : 'ಇತಿಹಾಸ ಪರಂಪರೆ ಉಳಿಸೋಣ' ವಿಷಯದ ಬಗೆಗೆ ಬಾನುಲಿ ಉಪನ್ಯಾಸ* | |
| ೯. | ೧೭.೮.೨೦೦೧ | ಎಸ್. ಜೆ. ಎಂ. ಕೆ. ಪದವಿ ಪೂರ್ವ ಕಾಲೇಜು ಬಾದಾಮಿ | ಶ್ರೀ ಆರ್. ವಿ. ಪಾಟೀಲ್‌ರ ನೇತೃತ್ವ ಮತ್ತು ಮಾರ್ಗದರ್ಶನದಲ್ಲಿ ಗುಹಾದೇವಾಲಯಗಳನ್ನು ಸಂದರ್ಶಿಸಲಾಯಿತು. |
| ೧೦. | ೧೭.೮.೨೦೦೧ | ಎಸ್. ವಿ. ಎಸ್. ಪ್ರೌಢಶಾಲೆ ಬಂಟ್ವಾಳ | ಸುದರ್ಶನ ಶೆಣೈ; -- -- ಪ್ರೊ. ವೆಂಕಪ್ಪ |
| ೧೧. | ೧೮.೮.೨೦೦೧ | ಜಿ.ಇ.ಸಿ.ಜಿ.ಕೆ. ಹಿರೇಗೌಡ ಸಂಯುಕ್ತ ಪ. ಪೂ. ಕಾಲೇಜು, ರೊಟ್ಟಿಗವಾಡ | ಪ್ರೊ. ಎ. ಎಲ್. ಪೋಲೀಸ್ ಪಾಟೀಲ್; ಎಫ್. ವಿ. ಹಿರೇಗೌಡರ್; ಎಲ್. ಬಿ. ರುದ್ರ ಗೌಡರ್; ಕೆ.ಸಿ. ಮಲ್ಲಿಗವಾಡ |
| ೧೨. | ೧೮.೮.೨೦೦೧ | ಗದಗ್ ಕೋ ಆಪ್ ಟೆಕ್ಸ್‌ಟೈಲ್‌ಮಿಲ್‌ನ ಪದವಿ ಪೂರ್ವ ಕಾಲೇಜು, ಗದಗ | ಡಿ. ಜಿ. ಓದು ಗೌಡರು; ಶ್ರೀಮತಿ ಎಸ್. ಕೆ. ಪೋತ್ನೀಸ್ |
| | | *ವಿ. ಸೂ: ಪುರಾತನ ನೋಟು ನಾಣ್ಯ ಮತ್ತು ಅಂಚೆ ಚೀಟಿಗಳ ಪ್ರದರ್ಶನ ನಡೆಸಲಾಯಿತು.* | |
| ೧೩. | ೧೮.೮.೨೦೦೧ | ಶ್ರೀಮತಿ ಬಾಯಿ ಸ್ಮಾರಕ ಸರಕಾರಿ ಮ್ಯೂಸಿಯಂ ಬಿಜೈ. ಮಂಗಳೂರು | ಲ್ಯಾನ್ಸ್ ಲೋಟ್ ಪಿಂಟೊ (ಉಪಮಹಾಪೌರರು); ಕೆ. ನಾರಾಯಣ ನಾಯಕ್ |
| | | *ವಿ. ಸೂ: ಶ್ರೀ ಬಿ. ಸತೀಶ್ ಕುಮಾರ್ ಶೆಟ್ಟಿಯವರು ವಿದ್ಯಾರ್ಥಿಗಳಿಗೆ 'ರಸ ಪ್ರಶ್ನೆ' ನಡೆಸಿದರು.* | |

| ಕ್ರ.ಸಂ. ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಉದ್ಘಾಟಕರು / ಅಧ್ಯಕ್ಷರು / ಮುಖ್ಯ ಅತಿಥಿಗಳು / ಉಪನ್ಯಾಸಕರು / ಸಂಚಾಲಕರು |
|---|---|---|
| | | *ಸರ್ವಶ್ರೀ* |
| ೧೪. ೧೮.೮.೨೦೦೧ | ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ | ಪ್ರಾಚೀನ ವಸ್ತು ಸಂಗ್ರಹಣ ಮತ್ತು ಸಂರಕ್ಷಣೆ ಬಗೆಗೆ ವಿಚಾರ ಸಂಕಿರಣ. ಡಾ. ಎಸ್. ಬಿ. ಶೆಟ್ಟಿ (ಕನ್ನಡ ವಿಭಾಗ ಮುಖ್ಯಸ್ಥರು) ಮತ್ತು ಪ್ರೊ. ತುಕಾರಾಮ ಪೂಜಾರಿ ಉಪನ್ಯಾಸ ನೀಡಿದರು. |
| ೧೫. ೧೮.೮.೨೦೦೧ | ಇತಿಹಾಸ ವಿಭಾಗ ಗುಲ್ಬರ್ಗ ವಿಶ್ವವಿದ್ಯಾಲಯ | ಡಾ. ಬಿ. ಸಿ. ಮಹಾಬಳೇಶ್ವರಪ್ಪ; ಡಾ. ಜೆ. ಎಡ್.ಕೆ. ಅನ್ಸಾರಿ ಡಾ. ಪರ್ವಿನ್ ರುಕ್ಸಾನ; ಡಾ. ಬಿ. ಸಿ. ಮಂಜುಳ |
| ೧೬. ೧೯.೮.೨೦೦೧ | ರೋಟರಿ ಸಮುದಾಯದಳ ಕಡೇಶ್ವಾಲ್ಯ | ಲೋಕನಾಥ ತಿಮ್ಮರಾಜ್ (ಅಧ್ಯಕ್ಷರು ರೋಟರಿ ಸಮುದಾಯ) ಶ್ರೀ ವಾಮನ ನಂದಾವರ, ಶ್ರೀ ರೂಪಾಕ್ಷ |
| | *ವಿ.ಸೂ : ಕಡೇಶ್ವಾಲ್ಯ ದೇವಾಲಯವನ್ನು ಸಂದರ್ಶಿಸಿ ಮಾಹಿತಿ ಪ್ರಸಾರವನ್ನು ಮಾಡಿದರು.* | |
| ೧೭. ೨೦.೮.೨೦೦೧ | ವಿವೇಕಾನಂದ ಪ್ರೌಢಶಾಲೆ, ಪುತ್ತೂರು | ಯು. ರಾಮ ಮೋಹನ ರಾವ್; (ಪ್ರಾಂಶುಪಾಲರು) ಅನಂತರಾಜ ಇಂದ್ರ; (ನಿವೃತ್ತ ಉಪಪ್ರಾಂಶುಪಾಲರು), ವಿ. ಬಿ. ಅರ್ತಿಕಜೆ |
| | *ವಿ.ಸೂ : ಹಳೇನಾಣ್ಯ, ಅಂಚೆ ಚೀಟಿಗಳ ಪ್ರದರ್ಶನ ನಡೆಸಲಾಯಿತು.* | |
| ೧೮. ೨೦.೮.೨೦೦೧ | ಎಸ್.ವಿ.ಪಿ.ವಿ.ವಿ. ಪ್ರೌಢಶಾಲೆ ಕಾಟಾಪುರ, ಪಟ್ಟದಕಲ್ಲು | ಆರ್. ಟಿ. ಪಾಟೀಲ್‌ರ ಮಾರ್ಗದರ್ಶನದಲ್ಲಿ ವಿದ್ಯಾರ್ಥಿಗಳು ಪಟ್ಟದಕಲ್ಲಿನ ಸ್ಮಾರಕಗಳನ್ನು ವೀಕ್ಷಿಸಿದರು. |
| ೧೯. ೨೦.೮.೨೦೦೧ | (ಉಜಿರೆಯ ಕಾಲೇಜಿನ) ವಿದ್ಯಾರ್ಥಿಗಳು ಶ್ರೀ ಜನಾರ್ಧನ ಸ್ವಾಮಿದೇವಾಲಯವನ್ನು ಸಂದರ್ಶಿಸಿ, ವಾಸ್ತು ವಿವರ ಮತ್ತು ಐತಿಹಾಸಿಕ ಮಹತ್ವವನ್ನು ತಿಳಿದುಕೊಂಡರು. ದೇವಾಲಯದ ಮೊಕ್ತೇಸರರಾದ ಶ್ರೀ ವಿಜಯರಾಘವ ಅವರು ದೇವಾಲಯದ ಪೂಜೆ ವಿಧಿ ವಿಧಾನಗಳನ್ನು ತಿಳಿಸಿಕೊಟ್ಟರು. | |
| ೨೦. ೨೧.೮.೨೦೦೧ | ಇದೇ ಕಾಲೇಜಿನ ವಿದ್ಯಾರ್ಥಿಗಳಿಗೆ ಇತಿಹಾಸದಲ್ಲಿ 'ರಸಪ್ರಶ್ನೆ' ಸ್ಪರ್ಧೆ ನಡೆಸಲಾಯಿತು | |
| ೨೧. ೨೧.೮.೨೦೦೧ | ತುಂಬೆ, ಪದವಿ ಪೂರ್ವ ಕಾಲೇಜು | ಗಂಗಾಧರ ಆಳ್ವ (ಪ್ರಾಂಶುಪಾಲರು); ಶ್ರೀ ಅನಂತರಾಜ ಇಂದ್ರ; ಶ್ರೀ ವಿ. ಬಿ. ಅರ್ತಿಕಜೆ |
| | *ವಿ.ಸೂ : ಪ್ರಾಚ್ಯವಸ್ತುಗಳು, ಹಳೇನಾಣ್ಯ, ಅಂಚೆಚೀಟಿ ಪ್ರದರ್ಶನವನ್ನು ಏರ್ಪಡಿಸಲಾಗಿತ್ತು.* | |
| ೨೨. ೨೧.೮.೨೦೦೧ | ಸರ್ಕಾರಿ ಸಂಯುಕ್ತ ಪ.ಪೂ.ಕಾಲೇಜು ದೇವಲಾಪುರ | ವಿ.ಸಿ. ರಾಮದುರ್ಗ (ಪ್ರಾಂಶುಪಾಲರು); ಎಫ್. ಬಿ ಹೊಸೂರ; ಯು. ಬಿ. ಮುತಾಲಿಕ್ ದೇಸಾಯಿ |
| ೨೩. ೨೧.೮.೨೦೦೧ | ವಿಶ್ವೇಶ್ವರಯ್ಯ ಐ.ಟಿ.ಐ. ಕಾಲೇಜು ಹೊಸಪೇಟೆ | ಡಿ.ಡಿ. ಮುತಾಲಿಕ್ ದೇಸಾಯಿ; -- -- ಡಾ. ಬಸವರಾಜ್ ಮಲಶೆಟ್ಟಿ |
| ೨೪. ೨೧.೮.೨೦೦೧ | ಶಾರದಾ ಪ.ಪೂ. ಕಾಲೇಜು ಧಾರವಾಡ | ಶ್ರೀಮತಿ ಭಾಗೀರಥಿ ನವಲಗುಂದ; -- -- ಡಾ॥ ಎಸ್. ಕೆ. ಜೋಶಿ |
| ೨೫. ೨೨.೮.೨೦೦೧ | ರಾಣಿ ಪಾರ್ವತಿ ದೇವಿ ಕಾಲೇಜು ಬೆಳಗಾವಿ | ಸ್ಮಿತಾ ಸುರೇಬಾನಕರ್ (ಸಂಚಾಲಕರು) |
| | *ವಿ.ಸೂ : ವಿದ್ಯಾರ್ಥಿಗಳಿಗೆ - "ಗತಕಾಲೀನ ಅದ್ಭುತ ಭಾರತ" ವಿಷಯದ ಬಗೆಗೆ ಪ್ರಬಂಧ ಸ್ಪರ್ಧೆನಡೆಸಲಾಯಿತು.* | |
| ೨೬. ೨೩.೮.೨೦೦೧ | ಎಸ್.ಡಿ.ಎಂ. ಕಾಲೇಜು, ಉಜಿರೆ | ಪ್ರೊ.ಬಿ. ರಾಧಾಕೃಷ್ಣ; ಉಮಾನಾಥಶೆಣೈ |
| | *ವಿ.ಸೂ : ಸ್ಪರ್ಧೆಗಳಲ್ಲಿ ವಿಜೇತ ವಿದ್ಯಾರ್ಥಿಗಳಿಗೆ ಬಹುಮಾನ ವಿತರಣೆ ನಡೆಸಲಾಯಿತು.* | |
| ೨೭. ೨೩.೮.೨೦೦೧ | ಎಸ್.ವಿ.ಎಸ್. ಕಾಲೇಜು, ಬಂಟ್ವಾಳ | ಶಂಕರಭಟ್ (ಪ್ರಾಂಶುಪಾಲರು); ಸುರೇಶ್ ರೈ |
| | *ವಿ.ಸೂ : ಶ್ರೀ ತುಕಾರಾಂ ಪೂಜಾರಿ ಅವರ ನೇತೃತ್ವದಲ್ಲಿ ವಿದ್ಯಾರ್ಥಿಗಳು ಕ್ಷೇತ್ರಕಾರ್ಯ ನಡೆಸಿ, ಪ್ರಬಂಧ ರಚಿಸಿ ಮಂಡಿಸಿದರು* | |
| ೨೮. ೨೩.೮.೨೦೦೧ | ಸರ್ಕಾರಿ ಪ್ರೌಢಶಾಲೆ ಅನಂತಶಯನಗುಡಿ | ಎಂ. ಶಂಕ್ರಪ್ಪ (ಮುಖ್ಯಗುರುಗಳು); -- -- ಪ್ರೊ.ಡಿ. ಡಿ. ಮುತಾಲಿಕ್ ದೇಸಾಯಿ |
| ೨೯. ೨೩.೮.೨೦೦೧ | ಶ್ರೀ ದಿಗಂಬರ ಪ್ರೌಢಶಾಲೆ ಹಲಕುರ್ಕಿ (ಬಾದಾಮಿ) | ಅಶೋಕ ಚಿಮಲ; ಪಿ.ವಿ. ಗದ್ದಗಿ ಮಠ |
| ೩೦. ೨೩.೮.೨೦೦೧ | ಎಸ್.ವಿ.ಎಸ್. ಕನ್ನಡ-ಆಂಗ್ಲ ಮಾಧ್ಯಮಶಾಲೆ, ಬಂಟ್ವಾಳ | ಸುದರ್ಶನ ಶೆಣೈ; -- -- ಪ್ರೊ. ವೆಂಕಪ್ಪ |
| | *ವಿ. ಸೂ: ಹಳೇ ನಾಣ್ಯ, ಅಂಚೆಚೀಟಿ ಪ್ರದರ್ಶನ ನಡೆಸಲಾಗಿದೆ.* | |
| ೩೧. ೨೪.೮.೨೦೦೧ | ಜೆ.ಇ.ಸಿ.ಜಿ.ಕೆ. ಹಿರೇಗೌಡ ಸಂಯುಕ್ತ ಪ.ಪೂ. ಕಾಲೇಜು, ರೊಟ್ಟಿಗವಾಡ ಕುಂದಗೋಳ(ತಾ) | ಕೆ.ಸಿ.ಮಲ್ಲಿಗವಾಡ; ಎ.ಎಲ್. ಪೋಲಿಸ್ ಪಾಟೀಲ್; ಜಿ.ಎಸ್. ಹಡಕರ್ |

| ಕ್ರ.ಸಂ. | ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಉದ್ಘಾಟಕರು / ಅಧ್ಯಕ್ಷರು / ಮುಖ್ಯ ಅತಿಥಿಗಳು / ಉಪನ್ಯಾಸಕರು / ಸಂಚಾಲಕರು |
|---|---|---|---|
| | | | *ಸರ್ವಶ್ರೀ* |
| ೩೨. | ೨೪.೮.೨೦೦೧ | ತುಂಗಭದ್ರ ಪ.ಪೂ-ಕಾಲೇಜು ಕೊಟ್ಟೂರು | ಎಂ. ವಿ. ಅಂಕಾರ್ ಅವರ ಅಧ್ಯಕ್ಷತೆಯಲ್ಲಿ ಕಾರ್ಯಕ್ರಮ ನಡೆಯಿತು. |
| ೩೩. | ೨೪.೮.೨೦೦೧ | ಸರಕಾರಿ ಬಾಲಕಿಯರ ಪ್ರೌಢಶಾಲೆ ಹರಪನಹಳ್ಳಿ | ಶ್ರೀಮತಿ ಎಂ.ಎಸ್.ಭಾರತೀ(ಪ್ರ.ಗುರು); -- ಕೆ. ಎಂ. ಪ್ರಸಾದಯ್ಯ, ಜಿ. ಬಸವಂತಪ್ಪ, ಎಂ. ತಿಮ್ಮಪ್ಪ |
| ೩೪. | ೨೪.೮.೨೦೦೧ | ಪಿ.ವಿ. ಎಸ್.ಬಿ.ಸಿ. ಪ್ರೌಢಶಾಲೆ ಹೊಸಪೇಟೆ | ವಿ. ಪ್ರಾಣೇಶರಾವ್ (ಮುಖ್ಯೋಪಾಧ್ಯಾಯರು); ಎಂ. ನಾಗರಾಜ್ |
| ೩೫. | ೨೫.೮.೨೦೦೧ | ಸರ್ಕಾರಿ ಹಿರಿಯ ಮಾಧ್ಯಮಿಕ ಶಾಲೆ ರಾಮನಗರಂ | ಸೋಮಶೇಖರ್(ಮುಖ್ಯೋಪಾಧ್ಯಾಯರು); ಶ್ರೀ ಎಸ್. ಎಲ್. ತಿಮ್ಮಯ್ಯ ಎಂ. ಜಿ. ನಾಗರಾಜ್, ಎಲ್. ಚಿಕ್ಕಪ್ಪಾಜಿ; ಡಾ. ಎಸ್. ನಾಗರಾಜು (ನಿರ್ದೇಶಕರು ಎಂ. ಎಚ್. ಕೃಷ್ಣ ಇನ್ಸಿಟ್ಯೂಟ್ ಆಫ್ ಇಂಡಾಲಜಿ ಮಿಥಿಕ್ ಸೊಸೈಟಿ, ಬೆಂಗಳೂರು ಅವರಿಂದ ಉಪನ್ಯಾಸ ನಡೆಯಿತು.) |
| ೩೬. | ೨೫.೮.೨೦೦೧ | ಉದಯ ಕಾಂಪೋಸಿಟ್ ಪಿಯು ಕಾಲೇಜು, ಬೆಂಗಳೂರು - ೪೦ | ಶ್ರೀಮತಿ ಕೆ. ಕೆ. ಕಮಲ (ಪ್ರಾಂಶುಪಾಲರು); ಡಾ. ಕೆ. ಬಿ. ಸುದರ್ಶನ, ಎಸ್. ರಾಮಸ್ವಾಮಿ |
| ೩೭. | ೨೫.೮.೨೦೦೧ | ಸರ್ಕಾರಿ ಪ್ರಥಮ ದರ್ಜೆ ಕಾಲೇಜು ರಾಮನಗರಂ | ನಾರಾಯಣ ಸ್ವಾಮಿ (ಪ್ರಾಂಶುಪಾಲರು); ಪ್ರೊ. ಎಲ್. ಚಿಕ್ಕಪ್ಪಾಜಿ ಪ್ರೊ. ಎಂ. ಜಿ. ನಾಗರಾಜ್; **ಡಾ. ಎಸ್. ನಾಗರಾಜು** ಅವರಿಂದ ಉಪನ್ಯಾಸ |
| ೩೮. | ೨೫.೮.೨೦೦೧ | ನರ್ಬದಾದೇವಿ ಸ್ಮಾರಕ ಪ್ರೌಢಶಾಲೆ ಚಿತ್ತವಾಡಿ : ಹೊಸಪೇಟೆ | ಗುರುಮೂರ್ತಿ ಪೆಂಡಕೂರು; -- -- ಶ್ರೀ ಇಟಗಿ ಈರಣ್ಣ |
| ೩೯. | ೨೬.೮.೨೦೦೧ | ಸೀತಮ್ಮ ಪುರುಷನಾಯಕ, ಸ್ಮಾರಕ ಕನ್ನಡ ಭವನ ಮತ್ತು ಗ್ರಂಥಾಲಯ; ಕಾಸರಗೋಡು | ಎ. ನರಸಿಂಹಭಟ್; ಶಿವರಾಮ ಕಾಸರಗೋಡು, ತಾರಾನಾಥ ಶೆಟ್ಟಿ, ಪಿ. ಕೃಷ್ಣ ಭಟ್ |
| ೪೦. | ೨೭.೮.೨೦೦೧ | ತುಂಗಭದ್ರ ಪ್ರೌಢಶಾಲೆ ಹೂವಿನ ಹಡಗಲಿ | ನಿರಂಜನಮೂರ್ತಿಶೆಟ್ಟಿ; ಎಂ. ಪಿ. ಎಂ. ದಯಾನಂದ ಸ್ವಾಮಿ, ಎಚ್. ಜಿ. ಪಾಟೀಲ್ ಎಸ್. ಬಸವನಗೌಡ್ರು |
| ೪೧. | ೨೮.೮.೨೦೦೧ | ಡಾ|| ಎಸ್. ಗೋಪಾಲರಾಜು ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಆನೇಕಲ್ | ಪ್ರೊ. ಎಚ್. ಜಿ. ಪಂಕಜ; (ಪ್ರಾಂಶುಪಾಲರು) ಡಾ|| ಪಿ. ವಿ. ಕೃಷ್ಣಮೂರ್ತಿ ಅವರಿಂದ 'ಆನೇಕಲ್ ತಾಲೂಕಿನ ಇತಿಹಾಸ' ಕುರಿತು ಉಪನ್ಯಾಸ ಇತಿಹಾಸ ಅಧ್ಯಾಪಕ ಟಿ. ವಿ. ನಾಗರಾಜ್ (ಸಂಚಾಲಕರು) ಆಗಿದ್ದರು. |
| ೪೨. | ೨೮.೮.೨೦೦೧ | ಮುದನೂರು ಪ್ರೌಢಶಾಲೆ | ಬಿ.ಜಿ. ನಾರಾಯಣಸ್ವಾಮಿ; ಭೀಮರಾಯ ಹೊಟ್ಟಿ |
| ೪೩. | ೨೮.೮.೨೦೦೧ | ಜಿ.ವಿ.ಪಿ. ಸರ್ಕಾರಿ ಪ್ರಥಮದರ್ಜೆ ಕಾಲೇಜ್, ಹಗರಿಬೊಮ್ಮನಹಳ್ಳಿ | ಐ. ಬಸವರಾಜು, (ಪ್ರಾಚಾರ್ಯರು), ಗುರುಮೂರ್ತಿ ಪೆಂಡಕೂರ್; -- ಎ.ವಿ. ನಾವಡ, ಪಿ. ಗೋವಿಂದ, ಶ್ರೀ ಉದ್ರಿ ಸ್ವಾಮಿ (ಹಂಪಿ) |
| | | *ವಿ. ಸೂ : ಛಾಯಾಚಿತ್ರ ಪ್ರದರ್ಶನವನ್ನು* | *ನಡೆಸಲಾಗಿದೆ.* |
| ೪೪. | ೨೮.೮.೨೦೦೧ | ಕಿಟೆಲ್ ಕಲಾ ಮಹಾವಿದ್ಯಾಲಯ ಧಾರವಾಡ | ಡಾ. ಎಂ. ವೈ. ಸಾವಂತ; -- ಪ್ರೊ. ಎಂ.ಜೆ. ಪುನೀತ್ |
| ೪೫. | ೨೮.೮.೨೦೦೧ | ಟಿ.ಸಿ.ಎಚ್. ಕಾಲೇಜು, ಹರಪನಹಳ್ಳಿ | ಎಸ್. ಬಸವರಾಜು; ಶ್ರೀ ಜಿನದತ್ತಪ್ಪ. ಜಿ; ಎಚ್. ಎಂ. ವೀರಭದ್ರಯ್ಯ ಎಂ. ಪಿ. ಎಂ. ದಯಾನಂದ ಸ್ವಾಮಿ |
| ೪೬. | ೨೮.೮.೨೦೦೧ | ಜ್ಞಾನಗಂಗ ಪ್ರೌಢಶಾಲೆ | ಎಚ್. ವಿಶ್ವನಾಥ (ಮುಖ್ಯೋಪಾಧ್ಯಾಯರು), ಎಂ.ಪಿ. ಎಂ. ಶಿವಪ್ರಕಾಶ್; ವಿ.ಬಿ. ಮಲ್ಲಪ್ಪ |
| ೪೭. | ೨೯.೮.೨೦೦೧ | ಸರಕಾರಿ ಪ್ರೌಢಶಾಲೆ, ನಗನೂರು | ಅಶೋಕ್ ಗೂಗಲ್; ವೆಂಕೋಬ ಪಾಟೀಲ್; ಎನ್. ಎಚ್. ದೇಸಾಯಿ |
| ೪೮. | ೨೯.೮.೨೦೦೧ | ಹಿರಿಯ ಪ್ರಾಥಮಿಕ ಶಾಲೆ ಮಲ್ಲಾಬಿ. | ನರಸಿಂಗರಾವ್; ಬಿ. ಜಿ. ಪತ್ತಾರ್; ಎನ್. ಎಚ್. ದೇಸಾಯಿ |
| ೪೯. | ೨೯.೮.೨೦೦೧ | ಜಿ.ಪಿ.ಸ.ಪ.ಪೂರ್ವಕಾಲೇಜು | ಎಚ್. ಎಸ್. ಭಗವಾಡ್; ಸುಚಿತ್ರಾರೆಡ್ಡಿ |
| ೫೦. | ೨೯.೮.೨೦೦೧ | ವಿಜಯನಗರ ಪದವಿ ಪೂರ್ವ ಕಾಲೇಜು, ಮುನಿರಾಬಾದ್ | ಟಿ. ಎಂ. ಲಿಂಗರಾಜ್; ಎಚ್. ಲಕ್ಕಪ್ಪ ಗೌಡರ್ (ಹಂಪಿ ವಿ.ವಿ) ಶ್ರೀ ಮೂಡಲಗೇರಿ ಕೊಟ್ರೇಶ; ಕೆ. ರಾಜೇಂದ್ರ |
| ೫೧. | ೨೯.೮.೨೦೦೧ | ಟಿ.ಎಂ.ವಿ.ಇ. ಪ್ರೌಢಶಾಲೆ ಮೇಗಳ ಪೇಟೆ; ಹರಪನಹಳ್ಳಿ | ಎಂ. ಪಿ.ಎಂ.ಬಸವಲಿಂಗನಗೌಡ (ಮುಖ್ಯಗುರು); ಶ್ರೀಮತಿ ಎಂ. ಸುಭದ್ರ ಎಂ.ಪಿ.ಎಂ. ರೇವಣಸಿದ್ಧಯ್ಯ |

| ಕ್ರ.ಸಂ. | ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಉದ್ಘಾಟಕರು / ಅಧ್ಯಕ್ಷರು / ಮುಖ್ಯ ಅತಿಥಿಗಳು / ಉಪನ್ಯಾಸಕರು / ಸಂಚಾಲಕರು |
|---|---|---|---|
| | | | *ಸರ್ವಶ್ರೀ* |
| ೫೨. | ೩೦.೮.೨೦೦೧ | ಸೋ.ಕಾ.ಬಾ.ಸ. ಪದವಿ ಪೂರ್ವ ಕಾಲೇಜು, ಹಡಗಲಿ | ಸಿ. ಎಂ. ಕೊಟ್ರಯ್ಯ; ಡಿ. ದುಶ್ಯಂತ ಗೌಡ<br>ಎನ್. ಶ್ರೀಧರ ಮೂರ್ತಿ (ಪ್ರಾಚಾರ್ಯರು); ಕೆ. ದಯಾನಂದಗೌಡ |
| ೫೩. | ೩೦.೮.೨೦೦೧ | ಸರಕಾರಿ ಪದವಿ ಪೂರ್ವ ಕಾಲೇಜು ಕಾವೂರು (ಕಲಾರಶ್ಮಿ ರಂಗಮಂದಿರ) | ಪಿ. ವಾಸುದೇವಗೌಡ (ಪ್ರಾಂಶುಪಾಲರು); ಶ್ರೀಮತಿ ಎಸ್. ಗೀತಾ;<br>ಕೆ. ನಾರಾಯಣನಾಯಕ್ |
| ೫೪. | ೩೧.೮.೨೦೦೧ | ಸೀತಮ್ಮ ಪುರುಷನಾಯಕ್ ಸ್ಮಾರಕ ಕನ್ನಡ ಭವನ ಮತ್ತು ಗ್ರಂಥಾಲಯ ನುಳ್ಳಿಪ್ಪಾಡಿ | ಎಂ. ನರಸಿಂಹಭಟ್; ಶಿವರಾಮ |
| ೫೫. | ೩೧.೮.೨೦೦೧ | ಸರಕಾರಿ ಪ್ರೌಢಶಾಲೆ ನಾಗತಿ ಬಸಾಪುರ | ಮಲ್ಲೇಶ್ ನಾಯಕ್ (ಪ್ರ. ಮುಖ್ಯೋಪಾಧ್ಯಾಯರು); ಎಸ್. ಬಸವನಗೌಡ<br>ಎಚ್. ಎಂ. ರವೀಂದ್ರನಾಥ, ದಯಾನಂದಗೌಡ (ಸಂಚಾಲಕರು) |
| ೫೬. | ೩೧.೮.೨೦೦೧ | ಸರಕಾರಿ ಪ್ರೌಢಶಾಲೆ ನಲ್ಲೂರು | ಶ್ರೀಮತಿ ಶೀಲಮಣಿ (ಮುಖ್ಯೋಪಾಧ್ಯಾಯರು); ಸಿದ್ಧಲಿಂಗಪ್ಪ, ಸುಮತೀಂದ್ರ ನಾಡಿಗ |
| ೫೭. | ೩.೯.೨೦೦೧ | ಸರ್ಕಾರಿ ಪದವಿ ಪೂರ್ವ ಕಾಲೇಜ್ ಬಳ್ಳಾರಿ | ಕಾಂಡ್ರಾಶ್ರೀರಾಮುಲು (ಪ್ರಾಚಾರ್ಯರು)<br>ಶ್ರೀಮತಿ ಕುಮುದಾನಾಯ್ಕ (ಜಿಲ್ಲಾ ಸಮನ್ವಯಾಧಿಕಾರಿಗಳು) |
| ೫೮. | ೪.೯.೨೦೦೧ | ಹಿರಿಯ ಪ್ರಾಥಮಿಕ ಶಾಲೆ, ಐವೂರು | ರಾಜುಧಣಿ; ಶ್ರೀ ಬಸವಲಿಂಗಪ್ಪ ಹೆಜ್ಜಾಳ; ಸಂ. ಎನ್. ಎಚ್. ದೇಸಾಯಿ |
| ೫೯. | ೫.೯.೨೦೦೧ | ತೂಲಹಳ್ಳಿ ತರಳಬಾಳು ಸಿದ್ಧೇಶ್ವರ ಪ್ರೌಢಶಾಲೆ, ಕೊಟ್ಟೂರು | ಲಿಂಗಾರೆಡ್ಡಿ ಶೇರಿ; ಎಂ. ದಿವಾಕರ, ಜಿ. ಬಿ. ನಾಡಗೌಡ, ಎಸ್. ಪಿ. ಈರಗಾರ |
| ೬೦. | ೫.೯.೨೦೦೧ | ಎಸ್.ವಿ.ಎಸ್.ಬಿ. ಪ್ರೌಢಶಾಲೆ ನಾಗರಕಟ್ಟೆ | ಎಂ. ದಿವಾಕರ; ಜಿ. ಬಿ. ನಾಡಗೌಡ; ಎನ್. ಡಿ. ಈರಗಾರ |
| ೬೧. | ೫.೯.೨೦೦೧ | ಬಯಲು ಸಾಹಿತ್ಯ ವೇದಿಕೆ, ಕೊಟ್ಟೂರು | ದುರಗಪ್ಪ (ಪ್ರಮುಖ ಗುರು); ಎಂ. ದಿವಾಕರ ಬಾಬು<br>ಜಿ.ಬಿ. ನಾಗನ ವಾಡ, ಎಸ್. ಡಿ. ಈರಗಾರ |
| ೬೨. | ೬.೯.೨೦೦೧ | ಸರಕಾರಿ ಪ್ರೌಢಶಾಲೆ, ಬಳ್ಳಾರಿ | ಟಿ. ಎಚ್. ಎಂ. ವಿರೇಶಶರ್ಮ (ಪ್ರಮುಖ ಗುರು); ಪಿ. ನಾಗೇಶ್ವರರಾವ್,<br>ಎನ್. ಬಸವರಾಜ, ಶ್ರೀ ಎಂ. ರಾಮಾಂಜನೇಯ |
| ೬೩. | ೬.೯.೨೦೦೧ | ವಿವೇಕಾನಂದ ಕಾಲೇಜು, ಪುತ್ತೂರು | ಯು. ರಾಮಮನೋಹರರಾವ್ (ಪ್ರಾಂಶುಪಾಲರು); ಪ್ರೊ. ವಿ. ಬಿ. ಅರ್ತಿಕಜೆ<br>ಅನಂತರಾಜ ಇಂದ್ರ |
| ೬೪. | ೭.೯.೨೦೦೧ | ಎಂ.ಎ.ಕೆ. ಆಜಾದ್ ಸರ್ಕಾರಿ ಪ್ರೌಢಶಾಲೆ | ಶಿವಕುಮಾರ್ ಡಿ. ಜೋಳದ (ಮುಖ್ಯ ಗುರುಗಳು); ಶ್ರೀದೇವಿ |
| ೬೫. | ೭.೯.೨೦೦೧ | ಕನ್ನಡ ಸಂಶೋಧನ ಸಂಸ್ಥೆ; ಧಾರವಾಡ | ಡಾ. ಜಿ. ಎಸ್. ದೀಕ್ಷಿತ್; ಶ್ರೀಶಿವಯೋಗಿ ಕಳಸದ;<br>ಪ್ರೊ. ಎನ್. ಕೆ. ಸರ್ಜಾಪುರ (ಬಟ್ನಾಗರ್ ಪ್ರಶಸ್ತಿ ವಿಜೇತರು) |
| ೬೬. | ೮.೯.೨೦೦೧ | ವಿ.ಡಿ. ಎಚ್.ಎಲ್. ಪ್ರೌಢಶಾಲೆ ಪಾರ್ವತಿನಗರ:ಬಳ್ಳಾರಿ | ಉಮಾಪತಿ (ಮುಖ್ಯಗುರು); ವೈ. ಹನುಮಂತರೆಡ್ಡಿ |
| ೬೭. | ೮.೯.೨೦೦೧ | ಸರ್ಕಾರಿ ಪ್ರೌಢಶಾಲೆ ಬಾಪೂಜಿ ಕಾಲೋನಿ; ಬಳ್ಳಾರಿ | ಮುರಳಿ ಮಾಧವ ಶರ್ಮ (ಮುಖ್ಯಗುರು); ಪಿ. ನಾಗೇಶ್ವರರಾವ್ |
| ೬೮. | ೮.೯.೨೦೦೧ | ಸರಕಾರಿ ಪ್ರೌಢಶಾಲೆ, ರಾಮನಗರಂ | ಶ್ರೀಮತಿ ಎಂ. ಸೌಭಾಗ್ಯಮ್ಮ (ಉಪಪ್ರಾಂಶುಪಾಲರು); ಮು. ಶಿವನಂಜಯ್ಯ<br>ಶ್ರೀಮತಿ ಶಾಂತಾಬಾಯಿ, ಶಿವಾಜಿ ರಾವ್, ಎಲ್. ಚಿಕ್ಕಪ್ಪಾಜಿ |
| ೬೯. | ೧೦.೯.೨೦೦೧ | ಸರಕಾರಿ ಪದವಿ ಪೂರ್ವ ಕಾಲೇಜು ಪ್ರೌಢಾಶಾಲಾ ವಿಭಾಗ: ಬಳ್ಳಾರಿ | ಬಿ. ಎಂ. ಶಡಕ್ಷರಯ್ಯ; ಮಧುಸೂದನ ಶೆಟ್ಟಿ, ನಾಗೇಶ್ವರರಾವ್, ರಾಮಾಂಜನೇಯ |
| ೭೦. | ೧೩.೯.೨೦೦೧ | ರಾಣಿ ಪಾರ್ವತಿದೇವಿ ಕಾಲೇಜು ಬೆಳಗಾವಿ | ಶ್ರೀಮತಿ ಸ್ಮಿತಾ ಸುರೇಬಾನಕಾರ್ ಮತ್ತು ಮುನವಳ್ಳಿ ಅವರ ಮಾರ್ಗದರ್ಶನದಲ್ಲಿ ಸ್ಮಾರಕಗಳ ಸಂರಕ್ಷಣೆ ನಡೆದಿದೆ. |
| | | ವಿ.ಸೂ : *ದೇಗಾವೆ ಕಮಲಿನಾರಾಯಣ ಸಂಸ್ಥೆಯ ವಿದ್ಯಾರ್ಥಿಗಳು ಕಿತ್ತೂರು ಕೋಟೆ ದೇವಾಲಯಗಳನ್ನು ಸಂದರ್ಶಿಸಿದರು. ದೇಗುಲಹಳ್ಳಿಯ ಪಾಲುದೇವಾಲಯ ನಿವೇಶನ ಸ್ವಚ್ಛಗೊಳಿಸಿದರು. ಕಾಲೇಜು ವಿದ್ಯಾರ್ಥಿಗಳಿಗೆ ವಿವಿಧ ಭಾಷೆಗಳಲ್ಲಿ 'ಗತಕಾಲೀನ ಅದ್ಭುತ ಭಾರತ' ಎಂಬ ನಿಬಂಧ ಸ್ಪರ್ಧೆ ಏರ್ಪಡಿಸಲಾಗಿತ್ತು. ಗೆದ್ದವರಿಗೆ ನಗದು ಬಹುಮಾನ ನೀಡಲಾಯಿತು.* | |
| ೭೧. | ೧೩.೯.೨೦೦೧ | ಸರಕಾರಿ ಪ್ರೌಢಶಾಲೆ, ಬಳ್ಳಾರಿ | ಎನ್. ತಿಪ್ಪಯ್ಯ; (ಮುಖ್ಯಗುರು); ಎನ್. ಬಸವರಾಜು; ಎನ್. ಬಸವರಾಜ್ |

| ಕ್ರ.ಸಂ. ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಉದ್ಘಾಟಕರು / ಅಧ್ಯಕ್ಷರು / ಮುಖ್ಯ ಅತಿಥಿಗಳು / ಉಪನ್ಯಾಸಕರು / ಸಂಚಾಲಕರು |
|---|---|---|
| | | *ಸರ್ವಶ್ರೀ* |
| ೭೨. ೨೨.೯.೨೦೦೧ | ಕೊಟ್ಟೇಶ್ವರ ಕಾಲೇಜು, ಕೊಟ್ಟೂರು | ಎ.ವಿ. ಅಂಕಾರ್; ಜಿ. ಶಶಿ ಕಿರಣ್, ಎಂ. ದಿವಾಕರಬಾಬು; ಎಸ್. ಎಚ್. ದೇಸಾಯಿ |
| ೭೩. ೧.೧೦.೨೦೦೧ | ಬೇಂದ್ರೆ ಕುಟೀರ ಬಸವೇಶ್ವರ ನಗರ : ಹುಬ್ಬಳ್ಳಿ | ಡಾ.ಜಿ. ಎಸ್. ದೀಕ್ಷಿತ್; ಡಾ. ಆರ್. ಗೋಪಾಲ್; ಡಾ. ಅ. ಸುಂದರ |
| ೭೪. ೫.೧೧.೨೦೦೧ | ಗೌಡ್ರ ಹಾಲಪ್ಪ ಪ್ರೌಢಶಾಲೆ ಮದಿಕೆರೆ | ಎಂ. ವಿ. ಮಹಾರುದ್ರಪ್ಪ; (ಮುಖ್ಯಗುರು); ಸುಮತೀಂದ್ರ ನಾಡಿಗ |
| ೭೫. ೧೮.೧೧.೦೧ | ರಾಷ್ಟ್ರೋತ್ಥಾನ ವಿದ್ಯಾಕೇಂದ್ರ ರಾಮನಗರ, ಹಗರಿ ಬೊಮ್ಮನಹಳ್ಳಿ | ಕೃಷ್ಣಮೂರ್ತಿ (ಮುಖ್ಯೋಪಾಧ್ಯಾಯರು); ಕುಂಬಾ ಸದಾಶಿವಪ್ಪ; ಎಚ್. ಎನ್. ಪಿ. ವಿಠಲ್ |
| | *ವಿ.ಸೂ : ವಿದ್ಯಾರ್ಥಿಗಳಿಗೆ ಪ್ರಬಂಧ ಸ್ಪರ್ಧೆ ನಡೆಸಲಾಗಿದೆ.* | |
| ೭೬. ೨೫.೧೧.೦೧ | ಶ್ರೀ ರೇಣುಕ ಅಂಗವಿಕಲ ಪ್ರೌಢಶಾಲೆ ರಾಮನಗರ, ಹಗರಿ ಬೊಮ್ಮನಹಳ್ಳಿ | ನ್ಯಾಣಪುರಹನುಮಂತಶ್ರೇಷ್ಠಿ; ಡಾ. ಮೃತ್ಯುಂಜಯ ರುಮಾಲೆ |
| | *ವಿ.ಸೂ : 'ಕರ್ನಾಟಕ ಪರಿಚಯ ಪರೀಕ್ಷೆ'ಯನ್ನು ನಡೆಸಲಾಗಿದೆ. ೧೫ ಶಾಲೆ ವಿದ್ಯಾರ್ಥಿಗಳು ಪಾಲ್ಗೊಂಡಿದ್ದರು.* | |
| ೭೭. ೨೬.೧೧.೦೧ | ಬಾಸೆಲ್ ಮಿಶನ್ ಶಿಕ್ಷಕರ ತರಬೇತಿ ಕೇಂದ್ರ, ಧಾರವಾಡ | ಪ್ರೊ. ಎಸ್. ಎಂ. ಕೊಣ್ಣೂರ್; ವಿಲ್ಸನ್ ಗಡ್ಡಿ; ವಿ.ಜಿ. ದೀಕ್ಷಿತ್ |
| ೭೮. ೨೮.೧೧.೦೧ | ಕನ್ನಡ ಜಾಗೃತಿ ಸಮಿತಿ ನಲ್ಲೂರು | ಆರ್. ಕೆಂಚಪ್ಪ (ಶಾಸಕರು); ಎಲ್. ಕರಿಯಣ್ಣ, ಬಿ. ರಂಗನಾಥ; ಸುಮತೀಂದ್ರ ನಾಡಿಗ |
| ೭೯. ೧.೧೨.೦೧ | ರಾಷ್ಟ್ರೋತ್ಥಾನ ವಿದ್ಯಾಕೇಂದ್ರ ಪ್ರೌಢ ಶಾಲೆ ರಾಮನಗರ, ಹಗರಿಬೊಮ್ಮನಹಳ್ಳಿ | ಸುಜ್ಞಾನ ಮೂರ್ತಿ; ಯು. ರಾಘವೇಂದ್ರರಾವ್; ಎಚ್. ಹನುಮಂತಪ್ಪ |
| | *ವಿ.ಸೂ : ವಿದ್ಯಾರ್ಥಿಗಳಿಗೆ 'ರಸಪ್ರಶ್ನೆ' ಸ್ಪರ್ಧೆ ನಡೆಸಲಾಗಿದೆ. ೧೩ ಶಾಲೆ ಭಾಗವಹಿಸಿದ್ದವು.* | |
| ೮೦. ೧೧.೧೨.೦೧ | ಕರ್ನಾಟಕ ವಿ. ವಿ. ದ ರಾಣಿ ಚೆನ್ನಮ್ಮ ಸ್ನಾತಕೋತ್ತರ ಕೇಂದ್ರ, ಬೆಳಗಾವಿ | ಅತುಲಕುಮಾರ್ ತಿವಾರಿ; ಶ್ರೀಮತಿ ಮುಕ್ತಾ ಆಡಿ ಡಾ. ರಘುನಾಥಭಟ್ ಎಚ್.ಆರ್ (ನಿರ್ದೇಶಕರು) |
| ೮೧. ೧೨.೧೨.೦೧ | ಬೆನನ್‌ಸ್ಮಿತ್ ಟೀಚರ್ಸ್ ಟ್ರೇನಿಂಗ್ ಕಾಲೇಜ್, ಬೆಳಗಾವಿ | ಬಿ. ಯು. ಪಾಟೀಲ್ (ಪ್ರಾಚಾರ್ಯರು); ಜಿನದತ್ತ ದೇಸಾಯಿ (ನಿವೃತ್ತ ನ್ಯಾಯವಾದಿಗಳು) |
| ೮೨. ೧೨.೧೨.೦೧ | ಆದರ್ಶ ಬಾಲಿಕೆಯರ ಪ್ರೌಢಶಾಲೆ ಧಾರವಾಡ | ಎನ್. ಜಿ. ಗಲಿಗಲಿ (ಆಡಳಿತಾಧಿಕಾರಿಗಳು); ಪರಾಂಡೆ |
| ೮೩. ೧೩.೧೨.೦೧ | ಸರ್ಕಾರಿ ಪ್ರೌಢಶಾಲೆ ಕಣವೆ, ಬಿಳಚಿ | ಬಿ. ಎಸ್. ಜಗದೀಶ್ವರ್ (ಮುಖ್ಯಗುರು); ಸುಮತೀಂದ್ರ ನಾಡಿಗ |
| ೮೪. ೧೩.೧೨.೦೧ | ಕೆ. ಎಲ್. ಇ. ಎಸ್.ಎಸ್.ಎಸ್. ಬಸವಣ್ಣ ಶಿಕ್ಷಣ ತರಬೇತಿ ಕೇಂದ್ರ ಬೆಳಗಾವಿ | ಎ. ಎನ್. ಬಾಗಿ; ಶ್ರೀಮತಿ ಸ್ಮಿತಾ ಸುರೇಬಾನಕರ್ |
| ೮೫. ೧೪.೧೨.೦೧ | ಸಿದ್ಧರಾಮೇಶ್ವರ ಸಂಯುಕ್ತ ಪ. ಪೂರ್ವ ಕಾಲೇಜು, ಬೆಳಗಾವಿ | ಎಸ್. ಆರ್. ಹಿರೇಮಠ (ಪ್ರಾಚಾರ್ಯರು); ಡಾ. ಶ್ರೀನಿವಾಸ ಕುಲಕರ್ಣಿ |
| ೮೬. ೧೫.೧೨.೦೧ | ವಿವೇಕಾನಂದ ಪ್ರಾಥಮಿಕ ಶಿಕ್ಷಕರ ತರಬೇತಿ ಕೇಂದ್ರ, ಬೆಳಗಾವಿ | ಬಿ. ಜಿ. ಧಾರವಾಡ (ಪ್ರಾಚಾರ್ಯರು); ಪ್ರೊ. ಸಿ.ವಿ. ಮಠದ್ |
| ೮೭. ೧೮.೧೨.೦೧ | ಅಂಗನವಾಡಿ ಕಾರ್ಯಕರ್ತರ ತರಬೇತಿ ಕೇಂದ್ರ, ಬೆಳಗಾವಿ | ಶ್ರೀಮತಿ ದಾನಮ್ಮ ಅಂಗಡಿ; ರಾಘವೇಂದ್ರ ಜೋಶಿ; ಎಂ. ದಿವಾಕರ್ |
| ೮೮. ೨೦.೧೨.೦೧ | ಶ್ರೀ ಜ.ಮ.ಮುಬಾಲಿಕಾ ಪ್ರೌಢಶಾಲೆ ತ್ಯಾವಣಗೆ | ಎಂ. ಎಸ್. ಹೊನ್ನಪ್ಪ; ಅ. ಸುಮತೀಂದ್ರ ನಾಡಿಗ, ಅ. ಸುಮತೀಂದ್ರನಾಡಿಗ |
| ೮೯. ೭.೧.೨೦೦೨ | ಸರ್ಕಾರಿ ಪ್ರೌಢಶಾಲೆ; ದೂರ್ವಿಗೆರೆ | ನಾಗಪ್ಪ ಎಂ. ಆರ್ |
| ೯೦. ೮.೧.೨೦೦೨ | ಆಂಜನೇಯ ಪ್ರೌಢಶಾಲೆ- ಕೊಂಡದಹಳ್ಳಿ | ಎಂ. ನಂಜುಂಡಸ್ವಾಮಿ; ಸುಮತೀಂದ್ರ ನಾಡಿಗ |
| ೯೧. ೨೨.೨.೨೦೦೨ | ವನಿತಾ ಬಾಲಿಕೆಯರ ಪ್ರೌಢಶಾಲೆ ಧಾರವಾಡ | ಎಲ್. ಐ. ತೊಗ್ಗಿ; ಎಸ್. ಎನ್. ಬಾಳಗಿ; ವಿ. ಜಿ. ದೀಕ್ಷಿತ್ |

| ಕ್ರ.ಸಂ. ದಿನಾಂಕ | ಕಾರ್ಯಕ್ರಮ ನಡೆದ ಸ್ಥಳ | ಉದ್ಘಾಟಕರು / ಅಧ್ಯಕ್ಷರು / ಮುಖ್ಯ ಅತಿಥಿಗಳು / ಉಪನ್ಯಾಸಕರು / ಸಂಚಾಲಕರು |
|---|---|---|
| | | *ಸರ್ವಶ್ರೀ* |
| ೯೨. ೨೪.೨.೨೦೦೨ | ಸಿದ್ಧರಾಮೇಶ್ವರ ಸಾಂಸ್ಕೃತಿಕ ಸಂಘ ಧಾರವಾಡ | ಡಾ. ಜಿ. ಎಸ್. ದೀಕ್ಷಿತ್; ಡಾ. ಸೂರ್ಯನಾಥ ಕಾಮತ್ ಡಾ. ಎಚ್. ಆರ್. ರಘುನಾಥ ಭಟ್ |
| ೯೩. ೩೧.೩.೨೦೦೨ | ಜಿಲ್ಲಾ ಉತ್ಸವದ ಸಂದರ್ಭ ದಾವಣಗೆರೆ ಜಿಲ್ಲೆ | ಡಾ. ಸಾ. ಶಿ. ಮರುಳಯ್ಯ; ಪ್ರೊ. ಎಸ್. ಎಚ್. ಪಾಟೀಲ್ ಸುಮತೀಂದ್ರ ನಾಡಿಗ |
| ೯೪. ೨೯.೭.೨೦೦೨ | ಆರ್. ಪಿ.ಡಿ. ಕಾಲೇಜು ಬೆಳಗಾವಿ | ಸ್ಮಿತಾ ಸುರೇಬಾನಕರ್ ಅವರ ನಿರ್ದೇಶನ (ಎನ್. ಎಸ್. ಎಸ್. ತಂಡ) ದಲ್ಲಿ ನೇಸರಗಿಯ ಜೋಡುಗುಡಿಗಳ ಸ್ವಚ್ಛತಾ ಕಾರ್ಯವನ್ನು ವಿದ್ಯಾರ್ಥಿಗಳು ಮಾಡಿದರು. |

*೨೦೦೨* *ಪ್ರೊ॥ ವಸಂತ ಕುಷ್ಟಗಿ ಅವರ ಮಾರ್ಗದರ್ಶನದಲ್ಲಿ ಕಲಬುರ್ಗಿಯ ಸ್ವಾಮೀರಮಾನಂದ ತೀರ್ಥ ಸಾಮಾಜಿಕ ಆರ್ಥಿಕ ಸಂಶೋಧನೆ ಹಾಗು ರಾಷ್ಟ್ರೀಯ ಭಾವೈಕ್ಯತಾ ಸಂಸ್ಥೆಯವರು ಗ್ರಾಮಾಂತರ ಪ್ರದೇಶಗಳಲ್ಲಿ ತಾವು ನಡೆಸುತ್ತಿರುವ ವಿಜ್ಞಾನ ಪ್ರಸಾರ ಕಾರ್ಯಕ್ರಮದ ಜೊತೆಗೆ ಇತಿಹಾಸ ಪರಂಪರೆ ಕಾರ್ಯಕ್ರಮಗಳನ್ನು ನಡೆಸಿರುತ್ತಾರೆ.*



**(ವಿ.ಸೂ : ೨೦೦೦-೨೦೦೧ನೆ ಸಾಲಿನ ಕಾರ್ಯಕ್ರಮಗಳ ವಿಳಂಬಿತ ವರದಿ)**

| | | |
|---|---|---|
| | | *ಸರ್ವಶ್ರೀ* |
| ೯೫. ೧೮.೮.೨೦೦೦ | ರಾಣಿ ಪಾರ್ವತಿ ದೇವಿ ಕಾಲೇಜು ಬೆಳಗಾವಿ | ಪ್ರೊ. ಎನ್. ಕೆ. ಮರಾಠೆ (ಪ್ರಾಂಶುಪಾಲರು); ಡಾ. ಅ. ಸುಂದರ |
| ೯೬. ೧೩.೯.೨೦೦೦ | ಗೋಗಟೆ ವಾಣಿಜ್ಯ ಮಹಾವಿದ್ಯಾಲಯ ಬೆಳಗಾವಿ | ವ್ಹಿ. ಸಿ. ಮಾಲಗತ್ತಿ; ಡಾ. ಎಚ್. ಎಸ್. ಗೋಪಾಲರಾವ್ |

ವಿ.ಸೂ : *ಈ ಸಂದರ್ಭದಲ್ಲಿ ಮಹಾವಿದ್ಯಾಲಯದ ವತಿಯಿಂದ ವಿದ್ಯಾರ್ಥಿಗಳನ್ನು ಹಲಸಿಗೆ ಕರೆದೊಯ್ದಿದ್ದರು. ಅಲ್ಲಿಯ ಕಲ್ಮೇಶ್ವರ, ಕಪಿಲೇಶ್ವರ, ಸುವರ್ಣೇಶ್ವರ ದೇವಾಲಯಗಳ ಆವರಣವನ್ನು ಸ್ವಚ್ಛಗೊಳಿಸಿದರು.*

## ಹದಿನೈದನೆಯ ವಾರ್ಷಿಕ ಸಮ್ಮೇಳನ

ಅಕಾದೆಮಿಯ ಹದಿನೈದನೆಯ ವಾರ್ಷಿಕ ಸಮ್ಮೇಳನವು ಉಡುಪಿಯ ಶ್ರೀ ಕೃಷ್ಣ ಮಠದ ಆಶ್ರಯದಲ್ಲಿ, ೨೦೦೧ರ ಅಕ್ಟೋಬರ್ ೧೩,೧೪ ಮತ್ತು ೧೫ನೆಯ ತಾರೀಕುಗಳಂದು ಶ್ರೀ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳ ಸನ್ನಿಧಿಯಲ್ಲಿ ಅತ್ಯಂತ ಯಶಸ್ವಿಯಾಗಿ ನಡೆಯಿತು. ಕರ್ನಾಟಕ ಸರ್ಕಾರದ ಸಮಾಜ ಕಲ್ಯಾಣ ಹಾಗೂ ತೋಟಗಾರಿಕಾ ಸಚಿವರಾದ ಮಾನ್ಯ ಶ್ರೀ ಕಾಗೋಡು ತಿಮ್ಮಪ್ಪ ಅವರು ಸಮ್ಮೇಳನವನ್ನು ಉದ್ಘಾಟಿಸಿ, ಪ್ರತಿಯೊಬ್ಬ ವ್ಯಕ್ತಿಗೂ ಐತಿಹಾಸಿಕ ಪ್ರಜ್ಞೆ ಇರಲೇಬೇಕು, ಎಂದು ತಿಳಿಸುತ್ತಾ ಐತಿಹಾಸಿಕ ಪರಂಪರೆಯ ರಕ್ಷಣೆಯ ಅವಶ್ಯಕತೆಯನ್ನು ಮನಗಾಣಿಸಿದರು. ಉಡುಪಿಯ ಗಣ್ಯ ನಾಗರೀಕರೂ, ಖ್ಯಾತ ಉದ್ಯಮಿಯೂ ಆದ ಶ್ರೀ ಕೆ.ಕೆ. ಪೈ ಅವರು: ಶ್ರೀ ಎಂ.ಜಿ. ನಾಗರಾಜ್ ಮತ್ತು ಡಾ. ಪಿ.ವಿ. ಕೃಷ್ಣ ಮೂರ್ತಿ ಅವರು ಸಂಪಾದಿಸಿದ **ಇತಿಹಾಸ ದರ್ಶನದ** ೧೬ನೆಯ ಸಂಚಿಕೆಯನ್ನು ಬಿಡುಗಡೆ ಮಾಡಿ, ಪ್ರತಿ ವರ್ಷದ ಸಮ್ಮೇಳನದಲ್ಲಿ ಮಂಡನೆ ಆದ ಪ್ರಬಂಧಗಳ ಸಂಕಲನವಾದ '**ಇತಿಹಾಸದರ್ಶನ**'ವು ಮಹತ್ವದ ಆಕರಗ್ರಂಥವಾಗಿ ಇತಿಹಾಸಾಸಕ್ತರಿಗೆ ಪ್ರಿಯವಾಗುತ್ತಿದೆ ಎಂದು ತಿಳಿಸಿದರು. ಖ್ಯಾತ ಇತಿಹಾಸ ತಜ್ಞ ಡಾ॥ ಬಾ.ರಾ. ಗೋಪಾಲ್ ಅವರ ಹೆಸರಿನಲ್ಲಿ ನೀಡಲಾಗುತ್ತಿರುವ **ಡಾ॥ ಬಾ. ರಾ. ಗೋಪಾಲ್ ದತ್ತಿ ಪ್ರಶಸ್ತಿ** ಯನ್ನು ಪ್ರಪ್ರಥಮವಾಗಿ ಶಾಸನ ತಜ್ಞ **ಡಾ॥ ಕೆ.ವಿ. ರಮೇಶ್** ಅವರಿಗೆ ನೀಡಿ ಗೌರವಿಸಲಾಯಿತು. ಸಮ್ಮೇಳನಾಧ್ಯಕ್ಷರಾಗಿ ಗೌರವ ಸ್ವೀಕರಿಸಿದ **ಡಾ॥ ಜ್ಯೋತ್ಸ್ನಾ ಕಾಮತ್** ಅವರು ಇತಿಹಾಸದಲ್ಲಿ ಆಗಬೇಕಾಗಿರುವ ಸೂಕ್ಷ್ಮಾಧ್ಯಯನದ ಬಗ್ಗೆ ಗಮನ ಸೆಳೆದರು. ***ಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು ಆಶೀರ್ವಚನ ನೀಡಿ ಸಮ್ಮೇಳನ ಯಶಸ್ವಿ ಆಗಲಿ ಎಂದು ಹರಸಿದರು.***

ಇದೇ ಸಂದರ್ಭದಲ್ಲಿ, ಕಳೆದ ಸಮ್ಮೇಳನದ ನಂತರ ಈವರೆಗೆ ಪಿಎಚ್. ಡಿ., ಪಡೆದಿರುವ ಈ ಕೆಳಕಂಡ, ಅಕಾದೆಮಿಯ ಸದಸ್ಯರನ್ನು ಸನ್ಮಾನಿಸಲಾಯಿತು. ಅದರ ಪಟ್ಟಿ ಮುಂದಿನಂತಿದೆ.

| ಕ್ರ.ಸಂ. | ಪಿಎಚ್.ಡಿ., ಪದವಿ ಪಡೆದವರ ಹೆಸರು | ಮಾರ್ಗದರ್ಶಕರ ಹೆಸರು | ವಿಷಯ | ವಿಶ್ವವಿದ್ಯಾಲಯ |
|---|---|---|---|---|
| ೧. | ಹನುಮನಾಯಕ | ಡಾ|| ಕೇಶವನ್ ವೇಲುತಾಟ್ | *Artisanal and trading activities in medieval Karnataka (with special reference to the Hoysala Kingdom A.D. 973-1342)* | ಮಂಗಳೂರು ವಿಶ್ವವಿದ್ಯಾಲಯ ಮಂಗಳೂರು |
| ೨. | ಎಸ್. ವೈ. ಸೋಮಶೇಖರ | ಡಾ|| ಕೆ. ಎಂ. ಸುರೇಶ | ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧನೀತಿ | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೩. | ದ್ಯಾಮನಗೌಡರ್ ವಿರೂಪಾಕ್ಷಿಗೌಡ, ಕಲ್ಲನಗೌಡ | ಡಾ|| ಎಚ್. ಆರ್. ರಘುನಾಥ ಭಟ್ | ಡಂಬಳ ಮತ್ತು ಅದರ ಪರಿಸರ | ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ |
| ೪. | ಎಚ್.ಈ.ಬಸವರಾಜಪ್ಪ | ಡಾ|| ಟಿ.ಪಿ. ವಿಜಯ್ | ಚಿತ್ರದುರ್ಗ ಪ್ರದೇಶದ ಭೂ ಹಿಡುವಳಿ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೫. | ಸುಜಾತಾ ಮಲ್ಲನಗೌಡ | ಡಾ|| ಸಿ. ಎನ್. ಪಾಟೀಲ್ | ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು: ಒಂದು ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೬. | ಎನ್. ಚಿನ್ನಸ್ವಾಮಿ | ಡಾ|| ಓ. ಅನಂತರಾಮಯ್ಯ | ಮೈಸೂರು ಸಂಸ್ಥಾನದಲ್ಲಿ ಗ್ರಾಮೀಣ ಅಭಿವೃದ್ಧಿಯ ಒಂದು ಸಮೀಕ್ಷೆ | ಮೈಸೂರು ವಿಶ್ವವಿದ್ಯಾನಿಲಯ ಮೈಸೂರು |
| ೭. | ಹರ್ಲಾಪುರ ಸುರೇಶ ಬಸವರಾಜ | ಡಾ|| ಚನ್ನಕ್ಕ ಪಾವಟೆ | ಕುಮಾರರಾಮನ ಅಧ್ಯಯನದ ಆಕರಗಳು | ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ |
| ೮. | ವಿರೂಪಾಕ್ಷಿ | ಪ್ರೊ|| ಲಕ್ಷ್ಮಣ್ ತೆಲಗಾವಿ | ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾಗಿರುವ ಬೇಟೆ ಮತ್ತು ಬೇಡರ ಸಂದರ್ಭಗಳು | ಕನ್ನಡ ವಿದ್ಯಾಲಯ, ಹಂಪಿ |
| ೯. | ಡಿ.ಕೆ. ಚಿತ್ತಯ್ಯ ಪೂಜಾರ್ | ಡಾ|| ಜಿ. ಆರ್. ತಿಪ್ಪೇಸ್ವಾಮಿ | ನಿಡುಗಲ್ಲು-ಒಂದು ಸಾಂಸ್ಕೃತಿಕ ಅಧ್ಯಯನ | ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು |
| ೧೦. | ಎಸ್. ನಂದೀಶ್ವರ | ಡಾ|| ಶಿವಣ್ಣ | ಮಧ್ಯಕಾಲೀನ ಕರ್ನಾಟಕದಲ್ಲಿ ಆಹಾರ ಮತ್ತು ಪಾನೀಯಗಳು | ಮೈಸೂರು ವಿಶ್ವವಿದ್ಯಾನಿಲಯ ಮೈಸೂರು |
| ೧೧. | ಯಾದಪ್ಪ ಬ. ಪರದೇಶಿ | ಡಾ|| ಎಸ್. ಸಿ. ಪಾಟೀಲ | ಉತ್ತರ ಕರ್ನಾಟಕದ ಚಿತ್ರಕಲೆ ಒಂದು ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೧೨. | ಕರುಣ ಮಂಗಳವೇಢೆ | ಡಾ|| ಎಚ್. ಎಸ್. ಗೋಪಾಲ ರಾವ್ | ಕರ್ನಾಟಕದ ದೇವಾಲಯಗಳಲ್ಲಿ ರಂಗಭೋಗ (ನೃತ್ತ) | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೧೩. | ರಾಜಶ್ರೀ ಇಲ್ಲೂರು | ಡಾ|| ಎಂ. ಎಸ್. ಪಾಟೀಲ್ | ದೇವಸೂಗೂರು ಶ್ರೀ ಸೂಗೂರೇಶ್ವರ ಒಂದು ಅಧ್ಯಯನ (ಸಾಂಸ್ಕೃತಿಕ) | ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ |

೧೩-೧೦-೨೦೦೧ರಂದು ಮೂರು, ೧೪-೧೦-೨೦೦೧ರಂದು ನಾಲ್ಕು ಮತ್ತು ೧೫-೧೦-೨೦೦೧ರಂದು ನಾಲ್ಕು, ಹೀಗೆ ಹನ್ನೊಂದು ವಿಚಾರ ಗೋಷ್ಠಿಗಳು ನಡೆದು, ಅಕಾದೆಮಿಯ ಸದಸ್ಯರು ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಗಳನ್ನು ಕುರಿತು ತಾವು ಶೋಧಿಸಿದ ಹೊಸ ವಿಚಾರಗಳ ವಿನಿಮಯ ಮಾಡಿಕೊಂಡರು. ಡಾ|| ಅ. ಸುಂದರ, ಪ್ರೊ|| ಲಕ್ಷ್ಮಣ್ ತೆಲಗಾವಿ, ಡಾ|| ಶ್ರೀನಿವಾಸ ಹಾವನೂರ, ಡಾ|| ಚೆನ್ನಕ್ಕ ಪಾವಟೆ, ಡಾ|| ಮಾಲತಿ ಕೆ. ಮೂರ್ತಿ. ಡಾ|| ಕೆ. ಜಿ. ವಸಂತಮಾಧವ, ಡಾ|| ಎಸ್. ಕೆ. ಜೋಶಿ, ಪ್ರೊ|| ಜಿ. ರಾಜಶೇಖರಪ್ಪ ಮತ್ತು ಪ್ರೊ|| ಎಂ. ಜಿ. ನಾಗರಾಜ್ ಅವರುಗಳ ಅಧ್ಯಕ್ಷತೆಯಲ್ಲಿ ನಡೆದ ಹನ್ನೊಂದು ವಿಚಾರ ಗೋಷ್ಠಿಗಳಲ್ಲಿ ೧೧೬ ಸಂಶೋಧನಾ ಪ್ರಬಂಧಗಳು ಮಂಡನೆ ಆದುವು.

೨೦೦೧ರ ಡಾ|| ಬಾ.ರಾ. ಗೋಪಾಲ್ ದತ್ತಿ ಪ್ರಶಸ್ತಿ ಪಡೆದ **ಡಾ|| ಕೆ.ವಿ. ರಮೇಶ್** ಅವರು ದಿನಾಂಕ ೧೩-೧೦-೨೦೦೧ರಂದು ಸಂಜೆ ೬-೩೦ಕ್ಕೆ ಡಾ|| ಜಿ.ಎಸ್. ದೀಕ್ಷಿತ್ ಅವರ ಅಧ್ಯಕ್ಷತೆಯಲ್ಲಿ ವಿಶೇಷ ಉಪನ್ಯಾಸ ನೀಡಿದರು.

೧೫-೧೦-೨೦೦೧ ಸಂಜೆ ೬-೩೦ಕ್ಕೆ ಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು ಆಶೀರ್ವಚನ ನೀಡಿ ಸಮ್ಮೇಳನದ ಸಮಾರೋಪ ಮಾಡಿದರು.

ಸಮ್ಮೇಳನದ ಯಶಸ್ಸಿಗೆ ಶ್ರಮಿಸಿದ ಎಲ್ಲ ಗಣ್ಯರಿಗೂ ಅಕಾದೆಮಿಯು ಧನ್ಯವಾದಗಳೊಡನೆ ಕೃತಜ್ಞತೆಗಳನ್ನು ಸಮರ್ಪಿಸಿತು.

*ಸರ್ವಸದಸ್ಯರ ಸಭೆ - ೨೦೦೦*

ದಿನಾಂಕ ೧೪-೧೦-೨೦೦೧, ಭಾನುವಾರ ಸಂಜೆ ೬-೩೦ ಗಂಟೆಗೆ, ಅಕಾದೆಮಿಯ ೧೫ನೆಯ ವಾರ್ಷಿಕ ಸಮ್ಮೇಳನದ ಸಭಾಸ್ಥಾನವಾದ, ಉಡುಪಿಯ ಶ್ರೀಕೃಷ್ಣ ಮಠದ ಸಭಾಂಗಣದಲ್ಲಿ, ಆ ಮೊದಲೇ ಸರ್ವಸದಸ್ಯರಿಗೂ ಪತ್ರಮುಖೇನ ತಿಳಿಸಿದ್ದ ಪ್ರಕಾರ, ಅಕಾದೆಮಿಯ ಅಧ್ಯಕ್ಷರಾದ ಡಾ|| ಸೂರ್ಯನಾಥ ಕಾಮತ್ ಅವರ ಅಧ್ಯಕ್ಷತೆಯಲ್ಲಿ ನಡೆದ ಸರ್ವಸದಸ್ಯರ ಸಭೆಯ ನಡವಳಿಕೆಗಳು ಕೆಳಕಂಡಂತಿವೆ.

ಸಭೆಯಲ್ಲಿ ೧೧೪ ಸದಸ್ಯರು ಹಾಜರಿದ್ದರು.

ಆ ಮೊದಲೇ ಸರ್ವಸದಸ್ಯರಿಗೂ ಅಂಚೆಯ ಮೂಲಕ ಸರ್ವಸದಸ್ಯರ ಸಭೆಯ ತಿಳುವಳಿಕೆ ಪತ್ರವನ್ನು ಕಳುಹಿಸಲಾಗಿದ್ದ ಕಾರಣದಿಂದ, ಪ್ರಧಾನ ಕಾರ್ಯದರ್ಶಿ ಡಾ|| ಎಚ್.ಎಸ್. ಗೋಪಾಲರಾವ್ ಅವರು ಸಭೆಯನ್ನು ಆರಂಭಿಸಲು ಸರ್ವಸದಸ್ಯರ ಅನುಮತಿ ಕೋರಿದರು. ಸಭೆಯ ಆರಂಭಕ್ಕೆ ಬೆಂಗಳೂರಿನ ಡಾ|| ಎಚ್. ಚಂದ್ರಶೇಖರ್ ಒಪ್ಪಿಗೆ ನೀಡಿದರು ಹಾಗೂ ಆ ಒಪ್ಪಿಗೆಗೆ ಸರ್ವಸದಸ್ಯರ ಅನುಮೋದನೆಯೂ ದೊರೆಯಿತಾದಕಾರಣ, ಸಭೆಯನ್ನು ಆರಂಭಿಸಲಾಯಿತು.

ಡಾ|| ಬಿ.ವಿ. ಸುಧಾಮಣಿ ಅವರ ಪ್ರಾರ್ಥನೆಯೊಂದಿಗೆ ಸಭೆಯು ಆರಂಭವಾಯಿತು. ಕಳೆದ ಸರ್ವಸದಸ್ಯರ ಸಭೆಯ ನಂತರ ಈವರೆಗೆ ನಮ್ಮಿಂದ ಅಗಲಿರುವ ಅಕಾದೆಮಿಯ ಸದಸ್ಯರಿಗೆ ಮತ್ತು ನಾಡಿನ ಇತರ ಗಣ್ಯರಿಗೆ ಗೌರವ ಸೂಚಿಸಿ ಎರಡು ನಿಮಿಷಗಳ ಮೌನ ಶ್ರದ್ಧಾಂಜಲಿ ಸಲ್ಲಿಸಲಾಯಿತು. ಶ್ರದ್ಧಾಂಜಲಿಯಲ್ಲಿ ನೆನಸಿದವರ ಹೆಸರುಗಳು ಈ ಕೆಳಕಂಡಂತಿವೆ.

೧. ಡಾ|| ಸಿ. ಎಸ್. ಪಾಟೀಲ್, ಮೈಸೂರು
೨. ಶ್ರೀ ಜೆ.ಟಿ. ಜಯರಾಮಯ್ಯ, ಬೆಂಗಳೂರು
೩. ಪ್ರೊ|| ಬಿ. ರಾಮಸ್ವಾಮಿ, ಹೈದರಾಬಾದ್
೪. ಶ್ರೀ ರಾಮಾಂಜನೇಯಲು, ಚಳ್ಳಕೆರೆ

ಇವರುಗಳಲ್ಲದೆ, ಕರ್ನಾಟಕದ ಗಣ್ಯವ್ಯಕ್ತಿಗಳಾದ ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಜೆ.ಎಚ್. ಪಟೇಲ್, ಡಾ|| ಹಾ.ಮಾ. ನಾಯಕ್, ಡಾ|| ಕು. ಶಿ. ಹರಿದಾಸ ಭಟ್ಟ ಅವರುಗಳ ನಿಧನಕ್ಕೆ ಹಾಗೂ ಇತ್ತೀಚೆಗೆ ಅಮೇರಿಕಾ ಮತ್ತು ಕಾಶ್ಮೀರಗಳಲ್ಲಿ ಭಯೋತ್ಪಾದಕರಿಗೆ ಬಲಿಯಾದ ಎಲ್ಲರ ನೆನಪಿಗೆ ಶ್ರದ್ಧಾಂಜಲಿ ಅರ್ಪಿಸಲಾಯಿತು.

ಶ್ರದ್ಧಾಂಜಲಿ ಸಲ್ಲಿಕೆಯ ನಂತರ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಡಾ|| ಎಚ್.ಎಸ್. ಗೋಪಾಲ ರಾವ್ ಅವರು ಸಭೆಯಲ್ಲಿ ಹಾಜರಿದ್ದ ಎಲ್ಲಾ ಸದಸ್ಯರನ್ನೂ ಸ್ವಾಗತಿಸಿದರು.

*೨೦೦೦ನೆಯ ಸಾಲಿನ ವರದಿ*

೨೦೦೦ನೆಯ ಸಾಲಿನ ವಾರ್ಷಿಕ ವರದಿಯ ಮುದ್ರಿತ ಪ್ರತಿಗಳನ್ನು ಸಭೆಯ ಆರಂಭದಲ್ಲೇ, ಹಾಜರಿದ್ದ ಎಲ್ಲಾ ಸದಸ್ಯರಿಗೂ ನೀಡಲಾಗಿತ್ತು. ಆದ್ದರಿಂದ ವರದಿಯ ವಾಚನದ ಅವಶ್ಯಕತೆ ಇಲ್ಲವೆಂದೂ, ಅದನ್ನು ಒಪ್ಪಬಹುದೆಂದೂ ಶ್ರೀ ತ.ರಂ. ಕೃಷ್ಣಗೌಡ ಸೂಚಿಸಿದರು. ಆ ಸೂಚನೆಯನ್ನು ಡಾ|| ಕೆ.ಜಿ. ವಸಂತಮಾಧವ ಅನುಮೋದಿಸಿದರು.

*೨೦೦೦ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳು*

೨೦೦೦ನೆಯ ಸಾಲಿನ ವಾರ್ಷಿಕ ವರದಿಯ ಜೊತೆಗೇ ೨೦೦೦ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳನ್ನೂ ಸದಸ್ಯರಿಗೆ ಒದಗಿಸಲಾಗಿತ್ತು. ಅದರ ವಾಚನದ ಅವಶ್ಯಕತೆ ಇಲ್ಲವೆಂದು ಅಭಿಪ್ರಾಯಪಟ್ಟ ಪ್ರೊ|| ವಸಂತಕುಷ್ಟಗಿ ಅವರು ಪರಿಶೋಧಿತ ಲೆಕ್ಕಪತ್ರಗಳನ್ನು ಒಪ್ಪಬಹುದೆಂಬ ಸೂಚನೆ ನೀಡಿದರು. ಅದನ್ನು ಶ್ರೀ ಸಿದ್ಧಯ್ಯ ಹಿರೇಮಠ್ ಅನುಮೋದಿಸಿದರು.

*೨೦೦೦ನೆಯ ಸಾಲಿನ ಮುಂಗಡ ಲೆಕ್ಕಪತ್ರಗಳು*

೨೦೦೦ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳ ಜೊತೆಗೇ ೨೦೦೧ನೆಯ ಸಾಲಿನ ಮುಂಗಡ ಲೆಕ್ಕಪತ್ರಗಳ ವಿವರಗಳನ್ನೂ ಸದಸ್ಯರಿಗೆ ವಿತರಿಸಲಾಗಿತ್ತು. ಅದನ್ನು ಕೋಶಾಧಿಕಾರಿ ಶ್ರೀ ಎಂ.ಬಿ. ಪಾಟೀಲ್ ಮಂಡಿಸಿದರು. ಮಂಡಿತವಾದ ೨೦೦೧ನೆಯ ಸಾಲಿನ ಮುಂಗಡ ಲೆಕ್ಕಪತ್ರಗಳನ್ನು ಒಪ್ಪಬಹುದೆಂದು ಡಾ|| ಎಸ್.ಎನ್. ಶಿವರುದ್ರಸ್ವಾಮಿ ಸೂಚಿಸಿದರು. ಶ್ರೀ ಟಿ.ಎಚ್.ಎಂ. ಬಸವರಾಜು ಸೂಚನೆಯನ್ನು ಅನುಮೋದಿಸಿದರು.

## ೨೦೦೦ನೆಯ ಸಾಲಿಗೆ ಆಡಿಟರ್ ನೇಮಕ

ಈವರೆಗೆ ಅಕಾದೆಮಿಯ ಲೆಕ್ಕ ಪತ್ರಗಳನ್ನು ಪರಿಶೋಧಿಸಿ ಕೊಟ್ಟಿರುವ ಕೆ.ವಿ. ಆಚಾರ್ಯ (ಆಚಾರ್ಯ ಅಂಡ್ ಕಂಪೆನಿ), ಬೆಂಗಳೂರು ಅವರನ್ನೇ ೨೦೦೧ನೆಯ ಸಾಲಿನ ಲೆಕ್ಕಪತ್ರಗಳ ಪರಿಶೋಧನೆಗೂ ನೇಮಿಸಿಕೊಳ್ಳಬಹುದೆಂದೂ, ಅವರಿಗೆ ರೂ.೪,೦೦೦ (ನಾಲ್ಕು ಸಾವಿರ) ಮಾತ್ರ ಗೌರವ ಸಂಭಾವನೆ ನೀಡಬಹುದೆಂದೂ ಡಾ|| ಎಚ್.ಆರ್. ರಘುನಾಥ ಭಟ್ ಅವರು ಸೂಚಿಸಿದರು. ಸೂಚನೆಯನ್ನು ಡಾ|| ಕೆ.ಬಿ. ಶಿವತಾರಕ್ ಅವರು ಅನುಮೋದಿಸಿದರು.

## ಠರಾವುಗಳ ಮಂಡನೆ

೧. ಗ್ರಾಮಾಂತರ ಪ್ರದೇಶಗಳಲ್ಲಿ ಇತಿಹಾಸ ಮತ್ತು ಐತಿಹಾಸಿಕ ಸ್ಮಾರಕಗಳ ತಿಳುವಳಿಕೆ ಮತ್ತು ರಕ್ಷಣೆಗೆ ಆಯಾ ಪ್ರದೇಶದ ಜನರನ್ನು ಎಚ್ಚರಿಸಲು ಮತ್ತು ಸಿದ್ಧಗೊಳಿಸಲು ಅಕಾದೆಮಿಯ ಆಯಾ ಭಾಗದ ಸದಸ್ಯರು, ಸ್ಥಳೀಯ ಶಾಲಾ ಕಾಲೇಜುಗಳ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ನೆರವಿನಿಂದ ಸಂಘಟಿತ ಪ್ರಯತ್ನ ನಡೆಸುವುದು ಸೂಕ್ತ. ಎಲ್ಲಾ ವಿಷಯಗಳಿಗೂ ಸರ್ಕಾರದ ಇಲಾಖೆಗಳನ್ನೇ ಆಶ್ರಯಿಸುವುದರ ಬದಲು ಸ್ಥಳೀಯರಲ್ಲಿ ಆಸಕ್ತಿ ಹುಟ್ಟಿಸುವುದು ಅವಶ್ಯಕ; ಈ ನಿಟ್ಟಿನಲ್ಲಿ ಸ್ಥಳೀಯ ಸರ್ಕಾರದ (ಗ್ರಾಮ ಪಂಚಾಯಿತಿ, ಪಟ್ಟಣಸಭೆ, ಪುರಸಭೆ, ನಗರಸಭೆ ಇತ್ಯಾದಿ) ಪ್ರತಿನಿಧಿಗಳು ಗಮನ ಕೊಡುವಂತೆ ಆದೇಶಿಸಲು, ಸರ್ಕಾರಕ್ಕೆ ಅಕಾದೆಮಿಯ ಈ ಸರ್ವ ಸದಸ್ಯರ ಸಭೆಯು ಮನವಿ ಮಾಡುತ್ತದೆ. ರಾಜ್ಯ ಸರ್ಕಾರದ ಪಂಚಾಯತ್ ರಾಜ್ ಇಲಾಖೆಯು ಈ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳಬೇಕೆಂದು ಅಕಾದೆಮಿಯು ಮನವಿ ಮಾಡುತ್ತದೆ.

ಸೂಚನೆ : *ಬಿ.ಆರ್. ಭಾರತೀ* ಮಂಡನೆ : *ಡಾ|| ಎಚ್. ಚಂದ್ರಶೇಖರ್* ಅನುಮೋದನೆ : *ಡಾ|| ಪಿ.ಎನ್. ನರಸಿಂಹಮೂರ್ತಿ*

೨. ಊರುಗಳ ಹೆಸರುಗಳು ಆಧುನೀಕರಣ ಮತ್ತು ಆಂಗ್ಲೀಕರಣ ಆಗುವುದನ್ನು ತಪ್ಪಿಸುವುದು ಅವಶ್ಯಕ. ಆದ್ದರಿಂದ ಮೂಲ ಹೆಸರನ್ನು ಉಳಿಸಲು ಸರ್ಕಾರವು, ಶೀಘ್ರವೇ ಕ್ರಮ ತೆಗೆದುಕೊಳ್ಳಬೇಕು ಎಂದು ಅಕಾದೆಮಿಯ ಈ ಸರ್ವ ಸದಸ್ಯರ ಸಭೆಯು ಮನವಿ ಮಾಡುತ್ತದೆ. ಈ ನಿಟ್ಟಿನಲ್ಲಿ, ಮೈಸೂರಿನಲ್ಲಿರುವ *Place Names Society*ಯ ನೆರವು ಪಡೆಯಬಹುದು ಎಂದು ಅಭಿಪ್ರಾಯಪಡಲಾಗಿದೆ. ಉದಾ ಗುಲ್ಬರ್ಗದ ಹೆಸರು 'ಕಲಬುರ್ಗಿ' ಎಂದೇ ಉಳಿಯಬೇಕು.

ಸೂಚನೆ: *ಡಾ|| ಎಚ್. ಚಂದ್ರಶೇಖರ್* ಮಂಡನೆ : *ಡಾ|| ಪಿ.ಎನ್. ನರಸಿಂಹಮೂರ್ತಿ* ಅನುಮೋದನೆ : *ಡಾ|| ಕೆ.ಬಿ. ಶಿವತಾರಕ್*

೩. ನದಿಗಳಿಗೆ ಅಣೆಕಟ್ಟೆಗಳನ್ನು ಕಟ್ಟುವಾಗ, ಅಲ್ಲಿ ಮುಳುಗಡೆ ಆಗುವ ಪ್ರದೇಶಗಳಲ್ಲಿ ಇರಬಹುದಾದ ಎಲ್ಲಾ ಐತಿಹಾಸಿಕ ಸ್ಮಾರಕ ಮತ್ತು ದಾಖಲೆಗಳನ್ನು ಸ್ಥಳಾಂತರಿಸಿ, ಸುವ್ಯವಸ್ಥಿತವಾಗಿ ರಕ್ಷಿಸಲು ಸರ್ಕಾರವು ಕ್ರಮ ತೆಗೆದುಕೊಳ್ಳತಕ್ಕದ್ದು ಮತ್ತು ಲೋಕೋಪಯೋಗಿ ಇಲಾಖೆಯು ಅಂತಹ ಸಂದರ್ಭದಲ್ಲಿ ಪುರಾತತ್ವ ಇಲಾಖೆಗಳ ಸಹಕಾರ ಪಡೆಯತಕ್ಕದ್ದು ಸೂಕ್ತ. ಈ ಬಗ್ಗೆ ಇಲಾಖೆಗಳಿಗೆ ನಿರ್ದೇಶನವಿದ್ದರೂ ಸಹ, ಅವು ಈಡೇರುತ್ತಿಲ್ಲ. ಆದ್ದರಿಂದ ಎಲ್ಲಾ ಅಭಿವೃದ್ಧಿ ಯೋಜನೆಗಳಿಗೆ ಸಂಬಂಧಿಸಿದಂತೆಯೂ, ಈ ನಿಟ್ಟಿನಲ್ಲಿ ಸರ್ಕಾರವು ಶೀಘ್ರವೇ ಸೂಕ್ತ ಕ್ರಮ ತೆಗೆದುಕೊಂಡು, ನಿರ್ಮಾಣದ ಅಂದಾಜಿನಲ್ಲಿ ಐತಿಹಾಸಿಕ ಸ್ಮಾರಕಗಳ ರಕ್ಷಣೆಗೂ ಹಣ ನಿಗದಿ ಮಾಡುವುದು ಅವಶ್ಯಕ ಎಂಬ ಮನವಿಯೊಂದಿಗೆ, ಇದೇ ಮನವಿಯನ್ನು ದೇವನಹಳ್ಳಿಯ ವಿಮಾನ ನಿಲ್ದಾಣದ ನಿರ್ಮಾಣದ ಸಂದರ್ಭದಲ್ಲಿ ನಾಶವಾಗಬಹುದಾದ ಐತಿಹಾಸಿಕ ಸ್ಮಾರಕಗಳ ಬಗೆಗೂ ಗಮನಿಸಬೇಕೆಂದು ಕರ್ನಾಟಕ ಇತಿಹಾಸ ಅಕಾದೆಮಿಯ ಈ ಸರ್ವಸದಸ್ಯರ ಸಭೆಯು ರಾಜ್ಯ ಮತ್ತು ಕೇಂದ್ರ ಸರ್ಕಾರಗಳಿಗೆ ಮನವಿ ಮಾಡುತ್ತದೆ.

ಸೂಚನೆ ಮತ್ತು ಮಂಡನೆ : *ಡಾ|| ಸೂರ್ಯನಾಥ ಕಾಮತ್* ಅನುಮೋದನೆ : *ಡಾ|| ಅ. ಸುಂದರ*

೪. ದಕ್ಷಿಣ ಭಾರತಕ್ಕೇ ಪ್ರತ್ಯೇಕವಾಗಿ *National School for Arts and Archaeology*ಯ ಒಂದು ಶಾಖೆಯನ್ನು ಸೂಕ್ತ ಸ್ಥಳದಲ್ಲಿ ಆರಂಭಿಸಬೇಕೆಂದು ಕರ್ನಾಟಕ ಇತಿಹಾಸ ಅಕಾದೆಮಿಯ ಈ ಸರ್ವಸದಸ್ಯರ ಸಭೆಯು ಕೇಂದ್ರ ಸರ್ಕಾರಕ್ಕೆ ಮನವಿ ಮಾಡುತ್ತದೆ.

ಸೂಚನೆ ಮತ್ತು ಮಂಡನೆ : *ಡಾ|| ಅ. ಸುಂದರ* ಅನುಮೋದನೆ : *ಡಾ|| ಎಚ್. ಚಂದ್ರಶೇಖರ್*

## ಇತರ ವಿಷಯಗಳು

೧. ರೇಡಿಯೋ ಮತ್ತು ದೂರದರ್ಶನ ಕಾರ್ಯಕ್ರಮಗಳಲ್ಲಿ ಸರ್ಕಾರಿ ನೌಕರರು ಪಾಲ್ಗೊಳ್ಳಕೂಡದೆಂದು ಸರ್ಕಾರಿ ಆದೇಶ ಬಂದಿರುವುದಾಗಿ ಶ್ರೀ ಜೀವಂಧರ ಕುಮಾರ ಹೋತಪೇಟ ಅವರು ಪ್ರಸ್ತಾಪಿಸಿ, ಆ ಬಗ್ಗೆ ವಿರೋಧ ಅವಶ್ಯಕ ಎಂದು ವಾದಿಸಿದರು. ಇದು ಅನವಶ್ಯಕವೆಂದೂ, ಈ ಆದೇಶವು ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಅನ್ವಯಿಸುವುದಿಲ್ಲವೆಂದೂ ತಿಳಿಸಲಾಯಿತು.

೨. ಮಾಹಿತಿ ಮತ್ತು ತಂತ್ರಜ್ಞಾನದ ನೆರವಿನಿಂದ **ಇತಿಹಾಸ ದರ್ಶನದ** ಮಾಹಿತಿಯನ್ನು ಡಿಜಿಟಲ್ ಮಾಧ್ಯಮದಲ್ಲಿ ರಕ್ಷಿಸಲು ಮತ್ತು ಅದಕ್ಕೆ ಸಂಬಂಧಿಸಿದಂತೆ ಆಯೋಗದ ಮಾದರಿಯಲ್ಲಿ ಒಂದು ತಂಡವನ್ನು ರಚಿಸಬೇಕೆಂದೂ, ***ಇತಿಹಾಸ ದರ್ಶನ***ವನ್ನು ಸಿ.ಡಿ. ಯ ರೂಪದಲ್ಲೂ ಸಿದ್ಧಪಡಿಸಲು ಹಾಗೂ ಈ ತಂತ್ರ ಜ್ಞಾನದ ಮಾಹಿತಿಯನ್ನು ಆರು ತಿಂಗಳಿಗೊಮ್ಮೆ ಪರಿಷ್ಕರಿಸಬೇಕೆಂದೂ ಶ್ರೀ ಎಸ್. ಎ. ಕೃಷ್ಣಯ್ಯ ಸೂಚಿಸಿದರು.

೩. ಅಕಾದೆಮಿಯ ವಾರ್ಷಿಕ ಸಮ್ಮೇಳನಗಳಲ್ಲಿ ಮಂಡಿತವಾಗುತ್ತಿರುವ ಪ್ರಬಂಧಗಳ ಸಂಖ್ಯೆ ಹೆಚ್ಚುತ್ತಿದ್ದು, ಇವುಗಳೆಲ್ಲವನ್ನೂ ಮೂರು ದಿನಗಳ ಅವಧಿಯಲ್ಲಿ ಮಂಡಿಸಲು ಕಷ್ಟವಾಗುತ್ತಿದೆ. ಪ್ರಬಂಧ ಮಂಡನೆಗೆ ದೊರಕುವ ಕಾಲಾವಕಾಶ ಕಡಿಮೆಯಾಗುತ್ತಿದೆ. ಇದರ ನಿವಾರಣೆಗೆ ಸಮ್ಮೇಳನದ ಸಂದರ್ಭದಲ್ಲಿ, ಒಂದೇ ಸಮಯದಲ್ಲಿ, ಎರಡು ಗೋಷ್ಠಿಗಳನ್ನು ಸಮಾನಾಂತರವಾಗಿ ಬೇರೆ ಬೇರೆ ಸ್ಥಳಗಳಲ್ಲಿ ನಡೆಸುವುದು ಸೂಕ್ತ ಎಂದು ಡಾ॥ ಶ್ರೀನಿವಾಸ ಹಾವನೂರ್ ಸೂಚಿಸಿದರು. ಸಮ್ಮೇಳನದಲ್ಲಿ ಮಂಡಿತವಾಗುವ ಹಲವು ಪ್ರಬಂಧಗಳು ತೀರಾ ಕಳಪೆ ಗುಣಮಟ್ಟದವಾಗಿರುತ್ತವೆ ಮತ್ತು ಇತಿಹಾಸೇತರವಾಗಿಯೂ ಇರುತ್ತವೆ. ಇದರ ನಿವಾರಣೆ ಆಗಬೇಕಾದರೆ, ನಿಶ್ಚಿತ ಚೌಕಟ್ಟನ್ನು ನಿರ್ಧರಿಸಿ, ಆ ಪ್ರಕಾರ ಪ್ರಬಂಧಗಳನ್ನು ಆಹ್ವಾನಿಸುವುದು ಅವಶ್ಯಕವೆಂದೂ, ಆಯ್ಕೆ ಮಾಡಿದ ಪ್ರಬಂಧಗಳಿಗೆ ಮಾತ್ರ ಮಂಡನೆಗೆ ಅವಕಾಶ ನೀಡುವುದು ಸೂಕ್ತ ಎಂದೂ ಅವರು ಸಲಹೆ ಮಾಡಿದರು. ಈ ಸಲಹೆಯನ್ನು ಅನುಮೋದಿಸಿದ ಡಾ॥ ಅ. ಸುಂದರ ಅವರು ಯುವ ಸಂಶೋಧಕರಿಗೆ ಗೋಷ್ಠಿಯಲ್ಲಿ ಪ್ರಬಂಧ ಮಂಡನೆಗೆ ಅವಶ್ಯಕವಾದ ಒಂದು ಮಾದರಿಯನ್ನು ಮೊದಲೇ ತಿಳಿಸುವುದು ಸೂಕ್ತ ಎಂದು ಅಭಿಪ್ರಾಯಪಟ್ಟರು. ಯಾವುದೇ ಸಂಶೋಧಕರು ತಾವು ಮಂಡಿಸುವ ಪ್ರಬಂಧದ ಸಾರಾಂಶವನ್ನು ೨-೩ ಪುಟಗಳಲ್ಲಿ ಮೊದಲೇ ಅಕಾದೆಮಿಗೆ ಸಲ್ಲಿಸಿ, ಅಕಾದೆಮಿಯಿಂದ ಪ್ರಬಂಧ ಮಂಡನೆಗೆ ಅವಕಾಶ ದೊರೆತರೆ, ಆಗ ಅದರ ಸಾರಾಂಶದ ಪ್ರತಿಯನ್ನು ತಾವೇ ಸಮ್ಮೇಳನದಲ್ಲಿ ಹಂಚುವ ವ್ಯವಸ್ಥೆ ಮಾಡಿಕೊಳ್ಳಬೇಕು. **ಇತಿಹಾಸ ದರ್ಶನ**ಕ್ಕೆ ವಿಸ್ತಾರವಾದ ಲೇಖನವನ್ನು ಬರೆದು ಸಲ್ಲಿಸಬಹುದು ಎಂದು ಡಾ॥ ಹಾವನೂರ್ ಮತ್ತು ಡಾ॥ ಅ. ಸುಂದರ ಅಭಿಪ್ರಾಯಪಟ್ಟರು. ಡಾ॥ ಎಸ್.ವೈ. ಸೋಮಶೇಖರ್ ಅವರು ಯುವ ಸಂಶೋಧಕರಿಗೆ ಪ್ರಬಂಧ ಮಂಡನೆಗೆ ಅವಕಾಶ ಮತ್ತು ಮಾರ್ಗದರ್ಶನ ಬೇಕು ಎಂದು ತಿಳಿಸಿದರು. ಪ್ರಬಂಧ ಮಂಡನೆಗೆ ಸಂಬಂಧಿಸಿದಂತೆ ಯುವ ಸಂಶೋಧಕರಿಗೆ ಕಾರ್ಯಾಗಾರಗಳನ್ನು ನಡೆಸಬೇಕೆಂಬುದು ಶ್ರೀ ತ.ರಂ. ಕೃಷ್ಣಗೌಡರ ಅಭಿಪ್ರಾಯವಾಗಿತ್ತು. ಸಾಮಾನ್ಯವಾಗಿ ಕರ್ನಾಟಕ ಇತಿಹಾಸ ಅಕಾದೆಮಿಯ ಸದಸ್ಯರು ಇತಿಹಾಸ ಮತ್ತು ಸಂಸ್ಕೃತಿಯ ಎಲ್ಲಾ ಮುಖಗಳ ಬಗ್ಗೆ ಆಸಕ್ತರಾಗಿರುವುದರಿಂದ ಪ್ರತ್ಯೇಕ ಗೋಷ್ಠಿಗಳನ್ನು ನಡೆಸುವುದು ಸರಿಯಲ್ಲ ಎಂದು ಡಾ॥ ಕೆ.ಬಿ. ಸುದರ್ಶನ್ ತಿಳಿಸಿದರು.

### *ಕಾರ್ಯಕಾರೀ ಸಮಿತಿಯ ಸಲಹೆಗಳು*

೧. ಹಲವು ವರ್ಷಗಳಿಂದ ಅಕಾದೆಮಿಯ ಸದಸ್ಯತ್ವ ಶುಲ್ಕವನ್ನು ಹೆಚ್ಚಿಸಿಲ್ಲ. ಅಂಚೆ, ಮುದ್ರಣ ಇತ್ಯಾದಿ ಎಲ್ಲಾ ಅವಶ್ಯಕ ವೆಚ್ಚಗಳೂ ಹೆಚ್ಚಾಗಿರುವ ಹಿನ್ನೆಲೆಯಲ್ಲಿ, ಅಕಾದೆಮಿಯ ವೆಚ್ಚಗಳೂ ಹೆಚ್ಚುತ್ತಿದ್ದು ಇದನ್ನು ಗಮನಿಸಿ ಅಕಾದೆಮಿಯ ಅಜೀವ ಸದಸ್ಯತ್ವ ಶುಲ್ಕವನ್ನು ಈಗಿರುವ ರೂ. ೪೦೦/- (ನಾಲ್ಕು ನೂರು)ಗಳಿಂದ ರೂ. ೫೦೦/- (ಐದು ನೂರು)ಕ್ಕೆ ಹೆಚ್ಚಿಸಬೇಕೆಂಬ ಅಕಾದೆಮಿಯ ಕಾರ್ಯಕಾರೀ ಸಮಿತಿಯ ಸಲಹೆಯನ್ನು ಸರ್ವಸದಸ್ಯರ ಸಭೆಯು ಸರ್ವಾನುಮತದಿಂದ ಅನುಮೋದಿಸಿತು. ಈ ಹೆಚ್ಚಳವು ೧-೧೧-೨೦೦೧ ರಿಂದ ಜಾರಿಗೆ ಬರತಕ್ಕದ್ದೆಂದು ತೀರ್ಮಾನಿಸಲಾಯಿತು.

೨. ಇನ್ನು ಮುಂದೆ ಇತಿಹಾಸ ಪ್ರಶಸ್ತಿ ಪರೀಕ್ಷೆಗಳನ್ನು ನಡೆಸುವುದು ಕಷ್ಟವಾಗಬಹುದೆಂಬ ಅಭಿಪ್ರಾಯದಿಂದ, ಪರೀಕ್ಷಾ ಮೂಲದಿಂದ ಒದಗುವ ಹಣದ ಬಲದಿಂದ ಮುದ್ರಿಸಿ, ಸದಸ್ಯರಿಗೆ ಉಚಿತವಾಗಿ ನೀಡುತ್ತಿರುವ **ಇತಿಹಾಸ ದರ್ಶನ**ದ ಸಂಚಿಕೆಗಳನ್ನು ಇನ್ನು ಮುಂದೆ ಉಚಿತವಾಗಿ ಕೊಡುವುದು ಕಷ್ಟವಾಗುತ್ತದೆ ಮತ್ತು ಏರುತ್ತಿರುವ ಬೆಲೆಗಳ ಹಿನ್ನೆಲೆಯಲ್ಲಿ **ಇತಿಹಾಸ ದರ್ಶನ**ವನ್ನು ಉಚಿತವಾಗಿ ಕೊಡುವುದು ಸರಿಯಲ್ಲ ಎಂಬ ಕಾರಣದಿಂದ ೨೦೦೨ರ ನಂತರ ಇತಿಹಾಸ ದರ್ಶನದ ಪ್ರತಿ ಸಂಚಿಕೆಗೆ, ಸದಸ್ಯರಿಗೆ ಮಾತ್ರ ರೂ. ೫೦/-(ಐವತ್ತು) ಬೆಲೆಗೆ ನೀಡುವುದು ಸೂಕ್ತ ಎಂಬ ಕಾರ್ಯಕಾರೀ ಸಮಿತಿಯ ಸಲಹೆಯ ಬಗ್ಗೆ ಚರ್ಚೆ ನಡೆಯಿತು. ಸದಸ್ಯರಿಂದ *ಇತಿಹಾಸ ದರ್ಶನ*ಕ್ಕೆ ಯಾವುದೇ ರೀತಿಯಲ್ಲಿ ಬೆಲೆ ಸಂಗ್ರಹಿಸಬಾರದೆಂದೂ, ಕೆಲವರು *ಇತಿಹಾಸ ದರ್ಶನ*ದ ಸಲುವಾಗಿಯೇ ಸದಸ್ಯರಾಗಿದ್ದಾರೆಂದೂ ಡಾ॥ ಬಿ. ನಂಜುಂಡಸ್ವಾಮಿ ವಾದಿಸಿದರು. ಡಾ॥ ಬಿ. ಲೀಲಾ ಅವರು ಸದಸ್ಯರಿಗೆ *ಇತಿಹಾಸ ದರ್ಶನ* ಸಂಚಿಕೆಗಳನ್ನು ಉಚಿತವಾಗಿ ನೀಡುವ ಅವಶ್ಯಕತೆ ಇಲ್ಲವೆಂದೂ, ಇತಿಹಾಸ ದರ್ಶನದ ಪ್ರತಿ ಸಂಚಿಕೆಗೆ ಕನಿಷ್ಠ ರೂ. ೧೫೦/- (ಒಂದು ನೂರ ಐವತ್ತು)ನ್ನು ವಸೂಲು ಮಾಡುವುದು ಅವಶ್ಯಕವೆಂದೂ ವಾದಿಸಿದರು.

ಸಮ್ಮೇಳನಗಳಿಗೆ ಪ್ರತಿನಿಧಿಗಳಾಗಿ ಬರುವವರಿಗೆ ಮಾತ್ರ ಇತಿಹಾಸ ದರ್ಶನದ ಸಂಚಿಕೆಗಳನ್ನು ಕೊಡಬೇಕೆಂದು ಡಾ|| ಕೆ.ಬಿ. ಶಿವತಾರಕ್ ವಾದಿಸಿದರು. ಶ್ರೀ ವ್ಹಿ.ಸಿ. ಮಾಲಗತ್ತಿ ಡಾ|| ಬೆಂ.ಶಾ. ಶ್ಯಾಮಲಾ ರತ್ನಕುಮಾರಿ ಮತ್ತಿತರರು ಇತಿಹಾಸ ದರ್ಶನಕ್ಕೆ ಬೆಲೆ ನಿಗದಿ ಪಡಿಸುವುದನ್ನು ವಿರೋಧಿಸಿದರು. ಈ ಹಿನ್ನೆಲೆಯಲ್ಲಿ ಇತಿಹಾಸ ದರ್ಶನದ ಸಂಚಿಕೆಗಳಿಗೆ ಬೆಲೆ ನಿಗದಿ ಪಡಿಸಲು ಸಹಮತವಿಲ್ಲ ಎಂಬ ಕಾರಣದಿಂದ ಆ ನಿರ್ಣಯವನ್ನು ಕೈ ಬಿಡಲಾಯಿತು.

೪. **ಅಕಾದೆಮಿಯ ೧೬ನೆಯ ವಾರ್ಷಿಕ ಸಮ್ಮೇಳನ**

ಈ ಬಗ್ಗೆ ಯಾವುದೇ ಪ್ರಸ್ತಾವನೆಯ ಮಂಡನೆ ಆಗಲಿಲ್ಲ.

### *ಅಧ್ಯಕ್ಷರ ಮಾತುಗಳು*

ಸರ್ವಸದಸ್ಯರ ಸಭೆಯಲ್ಲಿ ಪಾಲ್ಗೊಂಡು ಚರ್ಚೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ, ಹಲವಾರು ಮಹತ್ವದ ನಿರ್ಣಯಗಳಿಗೆ ಅವಕಾಶ ಮಾಡಿದ ಎಲ್ಲಾ ಸದಸ್ಯರಿಗೆ ಅಕಾದೆಮಿಯ ಅಧ್ಯಕ್ಷರಾದ ಡಾ|| ಸೂರ್ಯನಾಥ ಕಾಮತ್ ಕೃತಜ್ಞತೆ ಮತ್ತು ಧನ್ಯವಾದಗಳನ್ನು ಸಲ್ಲಿಸಿದರು. ಸರ್ವಸದಸ್ಯರ ಸಭೆಯಲ್ಲಿ ನಡೆದ ಚರ್ಚೆ ಮತ್ತು ವ್ಯಕ್ತವಾದ ಅಭಿಪ್ರಾಯಗಳ ಹಿನ್ನೆಲೆಯಲ್ಲಿ, ಡಾ|| ಸೂರ್ಯನಾಥ ಕಾಮತ್ ಅವರು ಮಾಹಿತಿ ಮತ್ತು ತಂತ್ರಜ್ಞಾನಕ್ಕೆ ಸಂಬಂಧಿಸಿದಂತೆ ದೊರೆತ ಸೂಚನೆಯನ್ನು ಗಮನಿಸಿ, ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿ ಆರಂಭಿಸಲಿರುವ ವೆಬ್‌ಸೈಟ್‌ನಲ್ಲಿ ಅಕಾದೆಮಿಗೆ ಸಂಬಂಧಿಸದ ಮಾಹಿತಿ ಮತ್ತು ವಿಷಯಗಳನ್ನು ಅವಡಿಸಿಕೊಳ್ಳು ಸಾಧ್ಯತೆಗಳ ಬಗ್ಗೆ ಪರಿಶೀಲಿಸುವುದಾಗಿ ತಿಳಿಸಿದರು.

ಸಮ್ಮೇಳನದಲ್ಲಿ ಪ್ರಬಂಧ ಮಂಡಿಸುವ ವಿಷಯ ಕುರಿತಂತೆ, ಪ್ರಬಂಧಗಳ ಆಯ್ಕೆಗಾಗಿ ಸೂಕ್ತ **Format** ಒಂದನ್ನು ಸಿದ್ಧಪಡಿಸಿ ಕೊಡಲು ಡಾ|| ಅ. ಸುಂದರ ಅವರನ್ನು ಡಾ|| ಸೂರ್ಯನಾಥ ಕಾಮತ್ ಕೋರಿದರು. ಕೆಲವು ಹಿರಿಯ ವಿದ್ವಾಂಸರ ಕೋರಿಕೆಯಂತೆ ಸಮ್ಮೇಳನದ ಸಂದರ್ಭ ನಡೆಯುವ ಗೋಷ್ಠಿಗಳನ್ನು. ಒಂದೇ ಸಮಯದಲ್ಲಿ ಪ್ರತ್ಯೇಕವಾದ ಎರಡು ಸಮಾನಾಂತರ ಗೋಷ್ಠಿಗಳಾಗಿ ನಡೆಸುವುದು ಸಮಸ್ಯೆಗೆ ತಕ್ಕ ಪರಿಹಾರವಲ್ಲ. ಹಾಗೆ ಮಾಡುವುದರಿಂದ ಭಿನ್ನ ಭಿನ್ನ ವಿಷಯಗಳಲ್ಲಿ ಸಮಾನ ಆಸಕ್ತಿ ಹೊಂದಿರುವ ಯುವ ಸಂಶೋಧಕರಿಗೆ ತೊಂದರೆ ಆಗುತ್ತದೆ ಎಂದು ಡಾ|| ಕಾಮತ್ ತಮ್ಮ ಅಧ್ಯಕ್ಷ ಭಾಷಣದಲ್ಲಿ ತಿಳಿಸಿದರು. ಮೊದಲೇ ಪ್ರಬಂಧಗಳನ್ನು ಆಹ್ವಾನಿಸಿ, ಆಯ್ಕೆ ಮಾಡಿ ಕೇವಲ ಒಂದು ನೂರು ಪ್ರಬಂಧಗಳ ಮಂಡನೆಗೆ ಮಾತ್ರ ಅವಕಾಶ ನೀಡಿ, ಉಳಿದ ಪ್ರಬಂಧಗಳನ್ನು ನಿರಾಕರಿಸಲು ಕ್ರಮ ತೆಗೆದುಕೊಳ್ಳಲಾಗುವುದು ಎಂದು ಡಾ|| ಕಾಮತ್ ತಿಳಿಸಿದರು.

ಈವರೆಗೆ ಅಕಾದೆಮಿಯ ಆರೋಗ್ಯಕರ ಬೆಳವಣಿಗೆಗೆ ಕಾರಣರಾಗಿರುವ ಅಕಾದೆಮಿಯ ಎಲ್ಲಾ ಸದಸ್ಯರಿಗೆ ಮತ್ತು ಸಮ್ಮೇಳನಗಳನ್ನು ನಡೆಸಿದ ಎಲ್ಲಾ ಆಶ್ರಯದಾತರಿಗೆ ಡಾ|| ಕಾಮತ್ ಕೃತಜ್ಞತೆ ಮತ್ತು ಧನ್ಯವಾದಗಳನ್ನು ಸಲ್ಲಿಸಿದರು.

### *ಕೃತಜ್ಞತೆಗಳು*

ಅಕಾದೆಮಿಯ ೧೫ನೆಯ ವಾರ್ಷಿಕ ಸಮ್ಮೇಳನಕ್ಕೆ ಆಶ್ರಯ ನೀಡಿ, ಯಾವುದಕ್ಕೂ ಕೊರತೆ ಇಲ್ಲದಂತೆ ಅಚ್ಚುಕಟ್ಟಾಗಿ ಆಯೋಜಿಸಿ, ಪ್ರತಿನಿಧಿಗಳ ಮತ್ತು ಎಲ್ಲಾ ಗಣ್ಯರ ಮೆಚ್ಚುಗೆ ಮತ್ತು ಗೌರವಗಳಿಗೆ ಪಾತ್ರರಾದ ಉಡುಪಿಯ ಶ್ರೀ ಕೃಷ್ಣಮಠದ ಪೇಜಾವರ ಮಠಾಧೀಶರಾದ ಪೂಜ್ಯ ಶ್ರೀ ಶ್ರೀ ವಿಶ್ವೇಶ್ವರತೀರ್ಥ ಸ್ವಾಮೀಜಿ ಅವರಿಗೆ ಮತ್ತು ಅವರ ಸಿಬ್ಬಂದಿಗೆ, ಸಮ್ಮೇಳನದ ಸಂದರ್ಭದಲ್ಲಿ ಹಾಜರಿದ್ದು, ಎಲ್ಲಾ ವರದಿಗಳನ್ನೂ ಜನತೆಗೆ ತಲುಪಿಸಿದ ಸಂಪರ್ಕ ಮಾಧ್ಯಮದವರಿಗೆ, ಉಡುಪಿಯ ರಾಷ್ಟ್ರಕವಿ ಎಂ. ಗೋವಿಂದ ಪೈ. ಸಂಶೋಧನ ಕೇಂದ್ರ ಮತ್ತು ಎಂ. ಜಿ. ಎಂ. ಕಾಲೇಜಿನ ಎಲ್ಲಾ ಬೋಧಕರು ಮತ್ತು ಸಿಬ್ಬಂದಿಗೆ, ಸಮ್ಮೇಳನದ ಸಂದರ್ಭ ಒಂದು ಹೊತ್ತಿನ ಊಟದ ಏರ್ಪಾಡು ಮಾಡಿದ ಶ್ರೀ ಕೆ. ವೇದವ್ಯಾಸ ಆಚಾರ್ಯ ಹಾಗೂ ಸಮ್ಮೇಳನದ ಯಶಸ್ಸಿಗೆ ಕಾರಣರಾದ ಅಕಾದೆಮಿಯ ಎಲ್ಲಾ ಸದಸ್ಯರಿಗೆ ಅಕಾದೆಮಿಯ ಉಪಾಧ್ಯಕ್ಷರಲ್ಲಿ ಒಬ್ಬರಾದ ಪ್ರೊ|| ಎಂ.ಜಿ. ನಾಗರಾಜ್ ವಂದನೆಗಳನ್ನು ಸಲ್ಲಿಸಿದರು.

### *ಇತಿಹಾಸ ಪ್ರಶಸ್ತಿ ಪರೀಕ್ಷೆಗಳು-೨೦೦೧*

೨೦೦೧ನೇ ಸಾಲಿನಲ್ಲಿ, ೨೫-೨-೨೦೦೧, ಭಾನುವಾರದಂದು ಮಧ್ಯಾಹ್ನ ೧ ಗಂಟೆಯಿಂದ ೪ ಗಂಟೆಯವರೆಗೆ, ಎರಡನೆಯ ಪಿ.ಯು.ಸಿ. ಇತಿಹಾಸ ವಿದ್ಯಾರ್ಥಿಗಳಿಗಾಗಿ ಕರ್ನಾಟಕದ ಏಳು ಕೇಂದ್ರಗಳಲ್ಲಿ ನಡೆಸಿದ 'ಇತಿಹಾಸ ಪ್ರಶಸ್ತಿ' ಪರೀಕ್ಷೆಗಳಿಗೆ ಒಟ್ಟು ೬೬೨೭ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಿದ್ದು, ಶೇಕಡಾ ೮೦ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗಳಿಗೆ ಹಾಜರಾಗಿದ್ದಾರೆ. ತೇರ್ಗಡೆಯಾದವರ ಪೈಕಿ ಕೆಳಕಂಡ ವಿದ್ಯಾರ್ಥಿಗಳು ಬಹುಮಾನಗಳನ್ನು ಗಳಿಸಿದ್ದಾರೆ.

ಒಂದನೇ ಬಹುಮಾನ (ರೂ. ೧,೦೦೦) : **ಕು|| ಎಸ್. ನಾಗರತ್ನ**, ವಿ. ವಿ. ಎಸ್. ಮಹಿಳಾ ಪದವಿ ಪೂರ್ವ ಕಾಲೇಜು, ರಾಜಾಜಿನಗರ, ಬೆಂಗಳೂರು.

ಎರಡನೇ ಬಹುಮಾನ (ರೂ. ೬೦೦) : **ಕು|| ನಾಗರತ್ನ ಬಿ.ಎಸ್.**, ಶ್ರೀ ಸಂಘಮಿತ್ರ ಮಹಿಳಾ ಸಂಯುಕ್ತ ಪ.ಪೂ. ಕಾಲೇಜು, ವಿಜಯನಗರ, ಬೆಂಗಳೂರು.

ಮೂರನೇ ಬಹುಮಾನ (ರೂ. ೪೦೦) : **ಕು|| ರೇಖಾ ಜಿ.ಆರ್.**, ಸರ್ಕಾರಿ ಸ್ವತಂತ್ರ ಪ.ಪೂ. ಕಾಲೇಜು, ಚನ್ನರಾಯಪಟ್ಟಣ.

***ಸಮಾಧಾನ ಬಹುಮಾನಗಳು*** (ತಲಾ ರೂ. ೨೦೦)

೧) **ಶ್ರೀ ರಾಘವೇಂದ್ರ ಬಸವರಾಜ ಮಾರ**, ಸಂಗಮೇಶ್ವರ ಸಂಯುಕ್ತ ಪ.ಪೂ. ಕಾಲೇಜು, ಅಮೀನಗಡ, ಬಾಗಲಕೋಟೆ ಜಿಲ್ಲೆ.

೨) **ಕು|| ಅನುರಾಧಾ ಎಸ್. ಪಾಟೀಲ್**, ಸರ್ಕಾರಿ ಪ. ಪೂ. ಕಾಲೇಜು, ಹುಮನಾಬಾದ್, ಬೀದರ್ ಜಿಲ್ಲೆ.

೩) **ಕು|| ಕುಸುಮಾ**, ಸರ್ಕಾರಿ ಪ.ಪೂ. ಕಾಲೇಜು, ಹಳೆಯಂಗಡಿ, ದ.ಕ. ಜಿಲ್ಲೆ.

೪) **ಶ್ರೀ ಗಿರೀಶ್ ಬಿ.ಆರ್.**, ಶ್ರೀ ಸಿದ್ಧಗಂಗಾ ಬಾಲಕರ ಕಾಲೇಜು, ತುಮಕೂರು

ವಿಶೇಷ ಬಹುಮಾನ: **ಕು|| ರಾಧಿಕಾ ಎಸ್. ಶೆಟ್ಟಿ**, ಜ್ಯೋತಿ ನಿವಾಸ್ ಕಾಲೇಜು, ಹೊಸೂರು ರಸ್ತೆ, ಬೆಂಗಳೂರು.

ಪರೀಕ್ಷೆಗಳ ಯಶಸ್ಸಿಗೆ ಕಾರಣರಾದ ಬೆಂಗಳೂರಿನ ಶ್ರೀ ಸಿ.ಆರ್. ಗಾಡಗೋಳಿ, ಶೇಷಾದ್ರಿಪುರ ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲ ಪ್ರೊ|| ಜಿ.ಎಸ್. ವೆಂಕಟರಾಜು ಮತ್ತು ಇತಿಹಾಸ ವಿಭಾಗದ ಪ್ರೊ|| ರಾಧಾಕೃಷ್ಣ, ಎಸ್.ಜೆ. ಆರ್. ಸಿ. ಮಹಿಳಾ ಕಾಲೇಜಿನ ಇತಿಹಾಸ ವಿಭಾಗದ ಡಾ|| ಪಂಪಾದೇವಿ ಮತ್ತು ಕನ್ನಡ ವಿಭಾಗದ ಶ್ರೀ ಸಾಸಲು ವಿಶ್ವನಾಥ್, ತುಮಕೂರಿನ ಸಿದ್ಧಗಂಗಾ ಪದವಿ ಕಾಲೇಜಿನ ಪ್ರಾಂಶುಪಾಲರಾದ ಪ್ರೊ|| ಊರ್ಮಿಳಾ ದೇವಿ, ಇತಿಹಾಸದ ಪ್ರಾಧ್ಯಾಪಕರಾದ ಡಾ|| ಡಿ. ಎನ್. ಯೋಗೀಶ್ ಹಾಗೂ ನೆಲಮಂಗಲದ ಮುರಳಿ ಕಾಲೇಜಿನ ಇತಿಹಾಸ ಪ್ರಾಧ್ಯಾಪಕರಾದ ಪ್ರೊ|| ಹಾಲೇಶಪ್ಪ ಮತ್ತು ಇತರ ಸ್ನೇಹಿತರು, ಮೈಸೂರಿನ ಶ್ರೀ ನಾಗರಾಜ ಶರ್ಮ, ಧಾರವಾಡದ ಡಾ|| ಅಜಿತ್ ಪ್ರಸಾದ್ ಜೈನ್ ಹಾಗೂ ಡಾ|| ಎಚ್.ಆರ್. ರಘುನಾಥ ಭಟ್, ಗುಲಬರ್ಗಾದ ಪ್ರೊ|| ವಸಂತ ಕುಷ್ಟಗಿ ಹಾಗೂ ಮಂಗಳೂರಿನ ಪ್ರೊ|| ಪ್ರಭು ಅವರುಗಳಿಗೆ ಅಕಾದೆಮಿ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಅಂತೆಯೇ ಎಲ್ಲಾ ಪರೀಕ್ಷಾ ಕೇಂದ್ರಗಳಲ್ಲೂ ಪರೀಕ್ಷಾ ಸಂದರ್ಭದಲ್ಲಿ ಸಹಕರಿಸಿದ ಆಯಾ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿ ಹಾಗೂ ಅಧಿಕಾರ ವರ್ಗ ಮತ್ತು ಉತ್ತರ ಪತ್ರಿಕೆಗಳ ಮೌಲ್ಯಮಾಪನ ಮಾಡಿದ ಇತಿಹಾಸ ಉಪನ್ಯಾಸಕರು ಹಾಗೂ ಸ್ಥಳಾವಕಾಶ ನೀಡಿದ ಬಸವೇಶ್ವರ ಶಿಕ್ಷಣ ಸಂಸ್ಥೆಗಳ ಅಧಿಕಾರ ವರ್ಗಕ್ಕೆ ಅಕಾದೆಮಿಯು ಧನ್ಯವಾದಗಳನ್ನು ಸಲ್ಲಿಸುತ್ತದೆ.

**ವಿಚಾರ ಸಂಕಿರಣ**

ದಿನಾಂಕ ೫-೮-೨೦೦೧ರಂದು ಬೆಂಗಳೂರಿನ ಮಿಥಿಕ್ ಸೊಸೈಟಿ ಮತ್ತು ಎಂ.ಎಚ್. ಕೃಷ್ಣ ಇನ್ಸ್‌ಟಿಟ್ಯೂಟ್ ಆಫ್ ಇಂಡಾಲಜಿಯ ಸಹಯೋಗದಲ್ಲಿ ***ಕನ್ನಡದ ಅತ್ಯಂತ ಪ್ರಾಚೀನ ಶಾಸನಗಳು*** ಎಂಬ ವಿಚಾರವಾಗಿ ವಿಚಾರಸಂಕಿರಣವೊಂದನ್ನು ಹಮ್ಮಿಕೊಳ್ಳಲಾಗಿತ್ತು. ವಿಚಾರ ಸಂಕಿರಣದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಡಾ|| ಎಂ. ಚಿದಾನಂದಮೂರ್ತಿ ಅವರು ವಹಿಸಿದ್ದರು. ಸಮ್ಮೇಳನವನ್ನು ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರೀ ಅವರು ಉದ್ಘಾಟಿಸಿದರು. ವಿಚಾರ ಸಂಕಿರಣದ ಔಚಿತ್ಯದ ಬಗ್ಗೆ ಡಾ|| ಎಸ್. ನಾಗರಾಜು ಅವರು ತಿಳಿಸಿದರು. ಶ್ರೀ ಎಂ.ಎನ್. ಕಟ್ಟಿ ಅವರು ಅಧ್ಯಕ್ಷತೆ ವಹಿಸಿದ್ದ ಮೊದಲ ಗೋಷ್ಠಿಯಲ್ಲಿ ಡಾ|| ಕೆ.ವಿ. ರಮೇಶ್ ಅವರು ಹಲ್ಮಿಡಿ ಶಾಸನದ ಬಗ್ಗೆ, ಡಾ|| ಎಚ್.ಆರ್. ರಘುನಾಥ ಭಟ್ ಅವರು ಕದಂಬರ ಇತರ ಕನ್ನಡ ಶಾಸನಗಳ ಬಗ್ಗೆ, ಡಾ|| ಎಸ್.ವಿ. ಪಾಡಿಗಾರ್ ಅವರು ಬಾದಾಮಿಯ ಎರಡು ಶಾಸನಗಳ ಬಗ್ಗೆ ಮತ್ತು ಡಾ|| ಸಿ.ಎಸ್. ಪಾಟೀಲ್ ಗದ್ದೆ ಮನೆ ಶಾಸನದ ಬಗ್ಗೆ ಈವರೆಗೆ ಆಗಿರುವ ಅಧ್ಯಯನಗಳ ಪರಿಶೀಲನೆ ಮಾಡಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು.

ಡಾ|| ಕೆ.ವಿ. ರಮೇಶ್ ಎರಡನೆಯ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು. ಆ ಗೋಷ್ಠಿಯಲ್ಲಿ ಡಾ|| ದೇವರಕೊಂಡಾ ರೆಡ್ಡಿ ತಮಟಕಲ್ಲು ಶಾಸನದ ಬಗ್ಗೆ, ಡಾ|| ಎಂ.ಜಿ. ಮಂಜುನಾಥ್ ಶ್ರವಣಬೆಳಗೊಳದ ಪ್ರಾಚೀನ ಶಾಸನಗಳ ಬಗ್ಗೆ, ಡಾ|| ಎಚ್.ಎಸ್. ಗೋಪಾಲ ರಾವ್ ಗಂಗ ಶ್ರೀ ವಿಕ್ರಮನ ಶಾಸನಗಳ ಬಗ್ಗೆ ಮತ್ತು ಡಾ|| ಎನ್.ಎಸ್. ತಾರಾನಾಥ್ ಪ್ರಾಚೀನ ಕನ್ನಡ ಶಾಸನಗಳ ಭಾಷಾ ವೈಶಿಷ್ಟ್ಯದ ಬಗ್ಗೆ ವಿಚಾರ ಮಂಡನೆ ಮಾಡಿದರು.

ವಿಚಾರ ಸಂಕಿರಣದ ಸಮಾರೋಪದಲ್ಲಿ ಡಾ|| ಟಿ.ವಿ. ವೆಂಕಟಾಚಲ ಶಾಸ್ತ್ರೀ ಮತ್ತು ಡಾ|| ಎಂ. ಚಿದಾನಂದಮೂರ್ತಿ ಅವರು ಸಮಾರೋಪ ಭಾಷಣಗಳನ್ನು ಮಾಡಿ ವಿಚಾರ ಸಂಕಿರಣದಲ್ಲಿ ಅಭಿವ್ಯಕ್ತವಾದ ಎಲ್ಲಾ ಅಭಿಪ್ರಾಯಗಳನ್ನು ಪರಾಮರ್ಶಿಸಿದರು. ಈ ಸಂದರ್ಭದಲ್ಲಿ ಅಧ್ಯಕ್ಷತೆಯನ್ನು ಪ್ರೊ|| ಜಿ. ವೆಂಕಟಸುಬ್ಬಯ್ಯ ವಹಿಸಿದ್ದರು.

ವಿಚಾರ ಸಂಕಿರಣದಲ್ಲಿ ಡಾ|| ಎಂ.ವಿ. ಕೃಷ್ಣಪ್ಪ, ಪ್ರೊ|| ಎಂ.ಜಿ. ನಾಗರಾಜ್. ಡಾ|| ಕೆ.ಆರ್. ಗಣೇಶ್,

ಡಾ।। ಡಿ.ವಿ. ದೇವರಾಜ್, ಡಾ।। ಎಸ್. ಗುರುರಾಜಾಚಾರ್, ಪ್ರೊ।। ಎಸ್. ಶಿವಣ್ಣ, ಡಾ।। ಪಿ.ವಿ. ಕೃಷ್ಣ ಮೂರ್ತಿ, ಡಾ।। ಕೋ. ವಸಂತ ಲಕ್ಷ್ಮಿ, ಶ್ರೀಮತಿ ಕೂ.ಸ. ಅಪರ್ಣ ಮತ್ತು ಶ್ರೀ ಎಸ್. ರಾಜೇಂದ್ರಪ್ಪ ಸಕ್ರಿಯವಾಗಿ ಪಾಲ್ಗೊಂಡಿದ್ದರು.

***ಕಾರ್ಯಕಾರಿ ಸಮಿತಿ ಸಭೆಗಳು***

೨೦೦೧ನೆಯ ಸಾಲಿನಲ್ಲಿ ಅಕಾದೆಮಿಯ ಕಾರ್ಯಕಾರೀ ಸಮಿತಿಯು ನಾಲ್ಕು ಬಾರಿ (೧೪-೫-೨೦೦೧, ೩-೯-೨೦೦೧, ೧೪-೯-೨೦೦೧ ಮತ್ತು ೮-೧೦-೨೦೦೧) ಸಭೆ ಸೇರಿ, ಅಕಾದೆಮಿಯ ಚಟುವಟಿಕೆಗಳು ಉತ್ತಮವಾಗಿ ನಡೆಯಲು ಕಾರಣವಾಗಿದೆ. ತಮ್ಮ ಎಲ್ಲಾ ಕಾರ್ಯಕ್ರಮಗಳ ನಡುವೆಯೂ ಬಿಡುವು ಮಾಡಿಕೊಂಡು, ಖುದ್ದಾಗಿ ಪಾಲ್ಗೊಂಡು ಅಥವಾ ಪತ್ರಮುಖೇನ ಸಲಹೆಗಳನ್ನು ನೀಡುತ್ತಾ ಅಕಾದೆಮಿಯ ಕಾರ್ಯಕಾರೀ ಸಮಿತಿಯ ಸದಸ್ಯರೆಲ್ಲರೂ ಸಹಕರಿಸಿದ್ದಾರೆ.

***ಸದಸ್ಯಬಲ***

೨೦೦೧ರ ಅಂತ್ಯಕ್ಕೆ ಅಕಾದೆಮಿಯ ಸದಸ್ಯಬಲವು ಈ ಕೆಳಕಂಡಂತಿದೆ.

| ಅಜೀವ | ಸಾಮಾನ್ಯ | ಸಂಸ್ಥೆ | ಒಟ್ಟು |
|---|---|---|---|
| ೮೭೫ | ೫ | ೧೫ | ೮೯೫ |

***ಅಕಾದೆಮಿಯ ಘಟಕಗಳು***

ಡಾ।। ಬೆಂ.ಶಾ. ಶ್ಯಾಮಲಾ ರತ್ನಕುಮಾರಿ ಅವರ ಅಧ್ಯಕ್ಷತೆ ಹಾಗೂ ಡಾ।। ಕೆ.ಬಿ. ಸುದರ್ಶನ್ ಅವರ ಕಾರ್ಯದರ್ಶಿತ್ವದಲ್ಲಿ ಬೆಂಗಳೂರು ಜಿಲ್ಲಾ ಘಟಕವೂ, ಶ್ರೀ ಮಾಧವ ನಾ. ಕಟ್ಟಿ ಅವರ ಅಧ್ಯಕ್ಷತೆ ಹಾಗೂ ಶ್ರೀ ಮೈ. ನಾಗರಾಜ ಶರ್ಮ ಅವರ ಕಾರ್ಯದರ್ಶಿತ್ವದಲ್ಲಿ ಮೈಸೂರು ಘಟಕವೂ ಕಾರ್ಯ ನಿರ್ವಹಿಸುತ್ತಿದ್ದು, ಉಳಿದಂತೆ ಧಾರವಾಡ, ಶಿವಮೊಗ್ಗ, ಬಿಜಾಪುರ, ಬಳ್ಳಾರಿ ಘಟಕಗಳು ಕಳೆದ ಅವಧಿಯ ಪದಾಧಿಕಾರಿಗಳ ನೇತೃತ್ವದಲ್ಲಿಯೇ ಮುಂದುವರಿದಿವೆ.

ಬೆಂಗಳೂರಿನ ನಗರ ಘಟಕವು ಕಳೆದ ಸಾಲಿನಲ್ಲಿ ಆರಂಭಿಸಿದ ಮಾಸಿಕ ಉಪನ್ಯಾಸ ಮಾಲೆಯ ೧೧ ಕಾರ್ಯಕ್ರಮಗಳು ಈವರೆಗೆ ಯಶಸ್ವಿಯಾಗಿ ನಡೆದಿದ್ದು, ಅದು ಇನ್ನು ಮುಂದೆಯೂ ಮುಂದುವರಿಯುವ ಸೂಚನೆಗಳಿವೆ. ಮಾಸಿಕ ಉಪನ್ಯಾಸಗಳನ್ನು ಪ್ರತಿ ತಿಂಗಳ ಮೊದಲ ಶುಕ್ರವಾರ ಸಂಜೆ ೬ ಗಂಟೆಗೆ, ಒಂದು ತಿಂಗಳು ಬೆಂಗಳೂರಿನ ಎನ್. ಆರ್. ಕಾಲೋನಿಯಲ್ಲಿರುವ ***ಬಿ. ಎಂ. ಶ್ರೀ ಪ್ರತಿಷ್ಠಾನ***ದಲ್ಲಿ ನಂತರದ ತಿಂಗಳು ರಾಜಾಜಿನಗರದಲ್ಲಿರುವ ***ಬಸವೇಶ್ವರ ಪದವಿ ಕಾಲೇಜಿ***ನಲ್ಲಿ ನಡೆಸಲಾಗುತ್ತಿದೆ. ಸ್ಥಳಾವಕಾಶ ನೀಡಿ ಸಹಕರಿಸುತ್ತಿರುವ ಬಿ. ಎಂ. ಶ್ರೀ ಪ್ರತಿಷ್ಠಾನ ಮತ್ತು ಬಸವೇಶ್ವರ ಕಾಲೇಜಿನ ಅಧಿಕಾರ ವರ್ಗ ಮತ್ತು ಸಹಕರಿಸುತ್ತಿರುವ ಬಸವೇಶ್ವರ ಶಿಕ್ಷಣ ಸಂಸ್ಥೆಗೆ ಅಕಾದೆಮಿಯು ಕೃತಜ್ಞವಾಗಿದೆ.

ದಿನಾಂಕ ೧೦.೨.೨೦೦೧ ಮತ್ತು ೧೧.೨.೨೦೦೧ ರಂದು ಕರ್ನಾಟಕ ಇತಿಹಾಸ ಅಕಾದೆಮಿಯ ಬೆಂಗಳೂರು ಘಟಕವು ***ಸಂಯುಕ್ತ ಬೆಂಗಳೂರು ಜಿಲ್ಲೆಯ ಹೊಸ ಶೋಧ***ಗಳನ್ನು ಕುರಿತು ಎರಡು ದಿನಗಳ ವಿಚಾರ ಸಂಕಿರಣವನ್ನು ಏರ್ಪಡಿಸಿತ್ತು. ೧೦-೨-೨೦೦೧ ರಂದು ಸಂಜೆ ಈ ವಿಚಾರ ಸಂಕಿರಣವನ್ನು ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಾದ ಡಾ।। ಎ. ರವೀಂದ್ರ ಉದ್ಘಾಟಿಸಿದರು. ಐದು ಗೋಷ್ಠಿಗಳಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ೨೫ ಸಂಶೋಧನಾ ಪ್ರಬಂಧಗಳು ಮಂಡನೆ ಆದವು.

೨೦೦೧ ಫೆಬ್ರವರಿ ೯ ಮತ್ತು ೧೦ ರಂದು ಇತಿಹಾಸ ಅಕಾದೆಮಿಯ ಬೆಂಗಳೂರು ಘಟಕವು, ಬೆಂಗಳೂರಿನ ಮಿಥಿಕ್ ಸೊಸೈಟಿಯ ಆಶ್ರಯದಲ್ಲಿ 'ಇತಿಹಾಸ ದರ್ಶನ'ದ ಈವರೆಗಿನ ಎಲ್ಲಾ ಸಂಚಿಕೆಗಳಲ್ಲಿ ಪ್ರಕಟವಾಗಿರುವ ಎಲ್ಲಾ ಲೇಖನಗಳ ಬಗ್ಗೆ ***'ಇತಿಹಾಸ ದರ್ಶನ ಸಂಪುಟಗಳಲ್ಲಿ ಪ್ರಕಟವಾಗಿರುವ ಲೇಖನಗಳ ಮೌಲ್ಯೀಕರಣ'*** ಎಂಬ ವಿಚಾರ ಸಂಕಿರಣವನ್ನು ಹಮ್ಮಿಕೊಂಡಿತ್ತು. ಡಾ।। ಕೆ. ವಿ. ರಮೇಶ್ ವಿಚಾರ ಸಂಕಿರಣವನ್ನು ಉದ್ಘಾಟಿಸಿದರು. ಇದರ ಸಮಾರೋಪ ಸಮಾರಂಭಕ್ಕೆ ಡಾ।। ಸಾ.ಶಿ. ಮರುಳಯ್ಯ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಅಡಿಯಲ್ಲಿ ಅಂತರ ಪ್ರೌಢಶಾಲಾ ಭಾಷಣ ಸ್ಪರ್ಧೆಗಾಗಿ, ***ಡಾ।। ಸೂರ್ಯನಾಥ ಕಾಮತ್ ಪರ್ಯಾಯ ಪಾರಿತೋಷಕ***ವನ್ನು ಪ್ರಗತಿ ಸಹಕಾರ ಬ್ಯಾಂಕ್, ಮಲ್ಲೇಶ್ವರ ಅವರು ಪ್ರಾಯೋಜಿಸಿದ್ದಾರೆ. ಇದಕ್ಕೆ ಸಹಾಯ ಮಾಡಿರುವವರು ಅಕಾದೆಮಿಯ ಕೋಶಾಧಿಕಾರಿಗಳಾದ ಶ್ರೀ ಎಂ.ಬಿ. ಪಾಟೀಲ್, ಅಂತರ ಕಾಲೇಜು ಭಾಷಣ ಸ್ಪರ್ಧೆಗಾಗಿ ***ಡಾ।। ಜಿ.ಎಸ್. ದೀಕ್ಷಿತ್ ಪರ್ಯಾಯ ಪಾರಿತೋಷಕ***ವನ್ನು ಪ್ರಾಯೋಜಿಸಿರುವವರು, ಅಕಾದೆಮಿಯ ಬೆಂಗಳೂರು ಘಟಕದ ಅಧ್ಯಕ್ಷರಾದ ಡಾ।। ಬೆಂ.ಶಾ ಶ್ಯಾಮಲಾ ರತ್ನಕುಮಾರಿ ಅವರು.

೨೧-೭-೨೦೦೧, ನಡೆದ ಡಾ|| ಸೂರ್ಯನಾಥ ಕಾಮತ್ ಪರ್ಯಾಯ ಪಾರಿತೋಷಕ ಅಂತರ ಪ್ರೌಢಶಾಲಾ ಭಾಷಣ ಸ್ಪರ್ಧೆಯಲ್ಲಿ ***ಸುಂಕೇನಹಳ್ಳಿಯ ಸರ್ಕಾರಿ ಪ್ರೌಢಶಾಲೆ***ಯು ಪರ್ಯಾಯ ಪಾರಿತೋಷಕವನ್ನು ಪಡೆಯಿತು ಮತ್ತು ಅದೇ ಶಾಲೆಯ ಶ್ರೀ ಜಿ. ಬೀರಲಿಂಗಪ್ಪ ಪ್ರಥಮ ಬಹುಮಾನವನ್ನು ಪಡೆದರು.

೨೬-೭-೨೦೦೧ರಂದು ನಡೆದ ಡಾ|| ಜಿ.ಎಸ್. ದೀಕ್ಷಿತ್ ಪರ್ಯಾಯ ಪಾರಿತೋಷಕ ಅಂತರ ಕಾಲೇಜು ಭಾಷಣ ಸ್ಪರ್ಧೆಯಲ್ಲಿ ***ರಾಜಾಜಿನಗರದ ಶ್ರೀ ರೇಣುಕಾಚಾರ್ಯ ಪ್ರಥಮ ದರ್ಜೆ ಮಹಿಳಾ ಕಾಲೇಜು*** ಪರ್ಯಾಯ ಪಾರಿತೋಷಕವನ್ನು ಪಡೆಯಿತು ಮತ್ತು ಅದೇ ಕಾಲೇಜಿನ ಶ್ರೀಮತಿ ಎಂ. ರಶ್ಮಿ ಪ್ರಥಮ ಬಹುಮಾನವನ್ನು ಪಡೆದರು.

೪-೮-೨೦೦೧ ರಂದು ನಡೆದ ***ಅಂತರ ಕಾಲೇಜು ಪ್ರಬಂಧ ಸ್ಪರ್ಧೆ***ಯಲ್ಲಿ ಶ್ರೀ ಹೊನ್ನೇಶ ಎಸ್. ಎನ್ನುವ ವಿದ್ಯಾರ್ಥಿ ಪ್ರಥಮ ಬಹುಮಾನವನ್ನು ಪಡೆದರು.

**ಕೃತಜ್ಞತೆಗಳು**

ಹಂಪಿಯನ್ನು ವಿಶ್ವ ಪರಂಪರೆಯಲ್ಲಿ ಉಳಿಸುವ ನಿಟ್ಟಿನಲ್ಲಿ, ನಿರ್ಮಾಣಗೊಳ್ಳುತ್ತಿರುವ ಎರಡು ಸೇತುವೆಗಳ ನಿರ್ಮಾಣ ಕಾರ್ಯವನ್ನು ಸ್ಥಗಿತಗೊಳಿಸಲು ಹಾಗೂ ನಿರ್ಮಾಣವಾಗಿರುವ ಭಾಗವನ್ನು ಕೆಡವಲು ಆದೇಶಿಸಬೇಕೆಂದು, ಕರ್ನಾಟಕ ಇತಿಹಾಸ ಅಕಾದೆಮಿಯ ಪರವಾಗಿ ಕರ್ನಾಟಕದ ಉಚ್ಚ ನ್ಯಾಯಾಲಯಕ್ಕೆ ಶ್ರೀ ತ.ರಂ. ಕೃಷ್ಣಗೌಡ ಅವರು ಅರ್ಜಿ ಸಲ್ಲಿಸಿದ್ದು, ಅರ್ಜಿ ಸಲ್ಲಿಕೆಗೆ ನೆರವಾದ ನ್ಯಾಯವಾದಿ ಶ್ರೀ ಸುಬ್ರಹ್ಮಣ್ಯ ಜೋಯಿಸ್ ಮತ್ತು ಉತ್ತಮವಾಗಿ ಮನವಿ ಸಿದ್ಧಪಡಿಸಿದ ಶ್ರೀ ತ.ರಂ. ಕೃಷ್ಣಗೌಡ ಅವರಿಗೆ ಅಕಾದೆಮಿಯು ಕೃತಜ್ಞತೆ ಸಲ್ಲಿಸುತ್ತದೆ. ಇದೇ ವಿಚಾರದಲ್ಲಿ ರೂ. ೫೦೦೦ (ಐದು ಸಾವಿರ) ನೆರವು ನೀಡಿರುವ INTACH ಸಂಸ್ಥೆಗೂ ಅಕಾದೆಮಿಯು ಕೃತಜ್ಞವಾಗಿದೆ.

ಅಕಾದೆಮಿಯ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಕ್ಕೆ ನೆರವು ನೀಡುತ್ತಿರುವ ಕರ್ನಾಟಕ ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯ, ಅಕಾದೆಮಿಯ ಹಲವಾರು ಕಾರ್ಯಗಳಿಗೆ ಸಹಯೋಗ ನೀಡಿ ಸಹಕರಿಸುತ್ತಿರುವ ಬೆಂಗಳೂರಿನ ಮಿಥಿಕ್ ಸೊಸೈಟಿ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ಬಿ.ಎಂ.ಶ್ರೀ. ಪ್ರತಿಷ್ಠಾನ, ಬಿ. ಆರ್. ಆರ್. ಫ್ಯಾಮಿಲಿ ಟ್ರಸ್ಟ್, ಲಕ್ಷ್ಮೀ ಮುದ್ರಣಾಲಯದ ಶ್ರೀ ಅಶೋಕ ಕುಮಾರ್, ವಾಗ್ದೇವಿ ಮುದ್ರಣಾಲಯ, ಶ್ರೀ ಜಗಜ್ಯೋತಿ ಬಸವೇಶ್ವರ ಸಹಕಾರ ಸಂಘ, ಪ್ರಗತಿ ಸಹಕಾರ ಬ್ಯಾಂಕ್, ಬಸವೇಶ್ವರ ಕಾಲೇಜಿನ ಅಧಿಕಾರ ವರ್ಗ ಮತ್ತು ಸಿಬ್ಬಂದಿ, ಶ್ರೀಕೃಷ್ಣ ಮಠದ ಭಕ್ತಾದಿಗಳು ಮತ್ತು ಉಡುಪಿಯ ಎಂ.ಜಿ. ಎಂ. ಕಾಲೇಜಿನ ಅಧಿಕಾರವರ್ಗ ಮತ್ತು ಸಿಬ್ಬಂದಿ ಹಾಗೂ ಉಡುಪಿಯ ನಾಗರೀಕರು ಮತ್ತು ಅಕಾದೆಮಿಯ ಇತಿಹಾಸ ಪ್ರಶಸ್ತಿ ಪರೀಕ್ಷೆಗಳ ಸಂದರ್ಭ ಸಹಕರಿಸಿರುವ ಶಿಕ್ಷಣ ಸಂಸ್ಥೆಗಳ ಪ್ರಾಂಶುಪಾಲರು ಹಾಗೂ ಸಿಬ್ಬಂದಿ ಮತ್ತು ಇನ್ನೂ ಅನೇಕ ವಿಶ್ವಾಸಿಗಳಿಗೆ ಅಕಾದೆಮಿಯು ಕೃತಜ್ಞವಾಗಿದೆ.

*ಕಾರ್ಯಕಾರಿ ಸಮಿತಿಯ ಅನುಮತಿಯ ಮೇರೆಗೆ*

**ಡಾ|| ಸೂರ್ಯನಾಥ ಕಾಮತ್**
*ಅಧ್ಯಕ್ಷರು*

**ಎಂ.ಜಿ. ನಾಗರಾಜ್**
*ಉಪಾಧ್ಯಕ್ಷರು*

**ಡಾ|| ಎಚ್.ಎಸ್. ಗೋಪಾಲರಾವ್**
*ಪ್ರಧಾನ ಕಾರ್ಯದರ್ಶಿ*

**ಎಂ.ಬಿ. ಪಾಟೀಲ್**
*ಕೋಶಾಧ್ಯಕ್ಷರು*

**ಡಾ|| ಕೆ. ವಸಂತಲಕ್ಷ್ಮೀ, ಡಾ|| ಚಿನ್ನಕ್ಕ ಪಾವಟೆ**
*ಕಾರ್ಯದರ್ಶಿಗಳು*

**ACHARYA & CO.,**
CHARTERED ACCOUNTANTS

**'SRI KRISHNA'**
13/3, Pampamahakavi Road
BANGALORE-560 004
PHONE : 650960
FAX : 080-6618897

---

Ref :

Date ..................................

## AUDITOR'S REPORT

The Members of Karnataka Ithihasa Academy (R).

We have audited the Balance Sheet of Karnataka Ithihasa Academy as at 31st December 2001 and Income and Expenditure Account on that date annexed there to and report that:

1. We have obtained all the information and explanations which to the best of our knowledge and belief were necessary for the purpose of our audit.
2. The Balance Sheet and the Income and Expenditure Account dealt with by this report are in agreement with the Books of Accounts.
3. In our opinion and to the best of our information and according to the explanations given to us, the accounts give true and fair view:

   i) In the case of Balance Sheet of the state of affairs of the Academy as at 31st December 2001 and

   ii) In the case of Income and Expenditure Account of the Income for the year ended on that date.

FOR ACHARYA & CO.,
Chartered Accountants

*(Sd)*
**(K.V. Acharya)**
*Proprietor*

Bangalore
7th September 2002

## KARNATAKA ITHIHASA ACADEMY (R) : BANGALORE - 560 019

## RECEIPTS AND PAYMENTS ACCOUNT FOR THE YEAR ENDED 31ST DECEMBER, 2001

| RECEIPTS | | AMOUNT (RS.) | PAYMENTS | | AMOUNT (RS.) |
|---|---|---|---|---|---|
| To Balance B/f | | | By F.D. with Pragathi Co.op. Bank Ltd., | | |
| To Cash in Hand | 2,348.94 | | (FDR 6278, 6328, 6610) | | 2,25,000.00 |
| To Cash at Syndicate Bank | 1,725.70 | 4,074.64 | By K.H. Exam Expenditure | | 1,72,497.50 |
| To Life Membership Fees | | 28,440.00 | By 15th Annual Conference Expenses | | 40,973.00 |
| To Annual Membership Fees | | 200.00 | By Printing of Ithihasa Darshana Vol. XVI | | 93,000.00 |
| To Donations Received | | 26,316.00 | By Printing & Stationery | | 13,497.00 |
| To Endowment Fund | | 75,000.00 | By Postage & Telegrams | | 2,315.00 |
| To Save Historical Heritage Week | | | By Donation | | 1,020.00 |
| Celebrations - Financial Assistance | | 25,000.00 | By Conveyance | | 3,660.00 |
| To K.H. Exam Fees Receipts | | 2,68,410.00 | By Audit Fees for 2000 | | 2,500.00 |
| To Interest on - F.D. A/c(P.S) | 63,136 | | By Save Historical Heritage Week Celebrations | | |
| - S.B. A/c | 1,148 | | Expenses | | 45,762.00 |
| - Rental Deposit | 900 | 65,184.00 | By Rent | | 9.540.00 |
| To Financial Assistance for | | | By Bank Charges | | 1,786.00 |
| Printing of Ithihasa | | | By Certification Charges | | 500.00 |
| Darshana Vol. XVI | | 15,000.00 | By **Miscellaneous Expenses** | | |
| To Sale of Publications | | 785.00 | Seminar Expenses | 3,552.00 | |
| To Refund of Rental Deposit | | 10,000.00 | Filing of Return | 580.00 | |
| To Fixed Deposit (withdrawal of FDR | | | Others | 510.00 | 4,642.00 |
| No. 6278) with Pragathi Co.op. Bank Ltd., | | 1,00,000.00 | By **Balance C/d:** | | |
| To **Miscellaneous Receipts** | | | Cash on Hand | 76.44 | |
| Delegation Fees for | | | Cash at Syndicate Bank | | |
| Udupi Conference | 8,700 | | SB A/c No. 12467 | 12,605.70 | 12,682.14 |
| Sale of old answer books | 1,250 | | | | |
| Others | 1,015 | | | | |
| | | 10,965.00 | | | |
| | Total Rs. | **6,29,374.64** | | Total | **6,29,374.64** |

Bangalore
7th September 2002

| | | | |
|---|---|---|---|
| **S.U. Kamath** | **H.S. Gopal Rao** | **M. B. Patil** | **(K.V. Acharya)** |
| *President* | *Gen. Secretary* | *Treasurer* | *Chartered Accountant* |

## KARNATAKA ITHIHASA ACADEMY (R) : BANGALORE - 560 019

## INCOME AND EXPENDITURE ACCOUNT FOR THE YEAR ENDED 31ST DECEMBER, 2001

| EXPENDITURE | | AMOUNT (RS.) | INCOME | | AMOUNT (RS.) |
|---|---|---|---|---|---|
| To K.H. Exam Expenditure | | 1,72,497.50 | By Annual Membership Fees | | 200.00 |
| To 15th Annual Conference Expenses | | 40,973.00 | By Donations Received | | 26,316.00 |
| To Printing of Ithihasa Darshana Vol. XVI | | 93,000.00 | By 'Save Historical Heritage' Week | | |
| To Printing & Stationery | | 13,497.00 | Celebrations-Financial Assistance | | 25,000.00 |
| To Postage & Telegrams | | 2,315.00 | By K.H. Exam Fees Receipts | | 2,68.410.00 |
| To Donations | | 1,020.00 | By Interest on : FD A/c/ (P.S.) | 63,136 | |
| To Conveyance | | 3,660.00 | SB A/C | 1,148 | |
| To Audit Fees | | 3,000.00 | Rental Deposit | 900 | 65,184.00 |
| To 'Save Historical Heritage' Week | | | By Financial assistance for | | |
| Celebration expenses | | 45,762.00 | printing of Ithihasa Darshana Vol. XVI | | 15,000.00 |
| To Rent | | 9,540.00 | By Sale of Publications | | 785.00 |
| To Bank Charges | | 1,786.00 | By **Miscellaneous Receipts** | | |
| To Certification Charger | | 500.00 | Delegation Fees for Udupi | | |
| To **Miscellaneous Expenses** | | | Conference | 8,700 | |
| Seminar Expenses | 3,552.00 | | Sale of old answer books | 1,250 | |
| Filing of Return | 580.00 | | Others | 1,015 | 10,965.00 |
| Others | 510.00 | 4,642.00 | | | |
| To Depreciation | | 255.00 | | | |
| To Excess of Income over Expenditure | | 19,412.50 | | | |
| Total | | **4,11,860.00** | Total | | **4,11,860.00** |

Bangalore
7th September 2002

**S.U. Kamath**
*President*

**H.S. Gopal Rao**
*Gen. Secretary*

**M. B. Patil**
*Treasurer*

**(K.V. Acharya)**
*Chartered Accountant*

**KARNATAKA ITHIHASA ACADEMY (R) : BANGALORE - 560 019**

**BALANCE SHEET AS AT 31ST DECEMBER, 2001**

| **LIABILITIES** | | **AMOUNT (RS.)** | **ASSETS** | | **AMOUNT (RS.)** |
|---|---|---|---|---|---|
| Endowment Fund (per Sch) | | 95,000.00 | Furniture and Fixtures | 2,546.47 | |
| Life Membership Fees : | | | **LESS** : Depreciation. 10% | 255.00 | 2,291.47 |
| As per Last Balance Sheet | 2,90,168.00 | | Fixed Deposit with the | | |
| **ADD** : Collected during the year | 28,440.00 | 3,18,608.00 | Pragathi Co.op. Bank Ltd., (per sch) | | 4,95,000.00 |
| Excess of Income over | | | | | |
| Expenditure : | | | **Cash And Bank Balances:** | | |
| As per last Balance Sheet | 73,953.11 | | Cash on Hand | 76.44 | |
| **ADD** : Excess of Income | | | Cash at Syndicate | | |
| over Expenditure for the year | 19,412.50 | 93,365.61 | Bank SB A/c No. 12467 | 12,605.70 | 12,682.14 |
| Outstanding Liabilities for | | | | | |
| Expenses - Audit Fees | | 3,000.00 | | | |
| | Total | **5,09,973.61** | | Total | **5,09,973.61** |

| | | | | |
|---|---|---|---|---|
| Bangalore | **S.U. Kamath** | **H.S. Gopal Rao** | **M. B. Patil** | **(K.V. Acharya)** |
| 7th September 2002 | *President* | *Gen. Secretary* | *Treasurer* | *Chartered Accountant* |

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.)


ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಆವರಣ

ನರಸಿಂಹರಾಜಾ ಕಾಲೋನಿ, ಬೆಂಗಳೂರು - ೫೬೦ ೦೧೯


## ಅಂದಾಜು ಆಯ-ವ್ಯಯಪಟ್ಟಿ - ೨೦೦೨

| ಕ್ರ.ಸಂ. | ನಿರೀಕ್ಷಿತ ಆದಾಯ | ರೂ. | ಅಂದಾಜು ಖರ್ಚು | ರೂ. |
|---|---|---|---|---|
| ೧. | ಆಜೀವ ಸದಸ್ಯಸ್ವತ್ವದ ಶುಲ್ಕ | ೨೦,೦೦೦ | ಪ್ರಶಸ್ತಿ ಪರೀಕ್ಷೆ (೨೦೦೨) ನಿವ್ವಳ ಖರ್ಚು | ೧,೪೪,೦೮೮ |
| ೨. | ಬರಬಹುದಾದ ಬಾಕಿಹಣ (ಸದಸ್ಯರಿಂದ) | ೨,೦೦೦ | ಸರ್ವಸದಸ್ಯರ ಸಭೆ ಮತ್ತು ವಾರ್ಷಿಕ ಸಮ್ಮೇಳನ (೧೬) | ೩೦,೦೦೦ |
| ೩. | ಪ್ರಶಸ್ತಿ ಪರೀಕ್ಷೆ ೨೦೦೨ ನಿವ್ವಳ ಆದಾಯ | ೨,೩೨,೧೧೭ | ಇತಿಹಾಸ ದರ್ಶನ ಸಂ. (೧೭) ಮುದ್ರಣ | ೬೦,೦೦೦ |
| ೪. | ದೇಣಿಗೆ (ಸಾಮಾನ್ಯ) | ೧೫,೦೦೦ | ಇತರೇ ಮುದ್ರಣವೆಚ್ಚ (ಮಾಸಿಕ ಉಪನ್ಯಾಸ) | ೫,೦೦೦ |
| ೫. | ಪರಂಪರೆ ಉಳಿಸಿ ಆರ್ಥಿಕ ನೆರವು | ೨೫,೦೦೦ | ಲೇಖನ ಸಾಮಗ್ರಿ (ಕಛೇರಿಗೆ) | ೨,೦೦೦ |
| ೬. | ಇ.ದ. ಸಂ. ೧೭ ಮುದ್ರಣ ಆರ್ಥಿಕ ನೆರವು | ೧೫,೦೦೦ | ಬೆರಳಚ್ಚು, ಜೆರಾಕ್ಸ್ ಇತ್ಯಾದಿ | ೨,೦೦೦ |
| ೭. | ಠೇವಣಿಗಳ ಮೇಲಿನ ಬಡ್ಡಿ | ೫೦,೦೦೦ | ಅಂಚೆವೆಚ್ಚ | ೫,೦೦೦ |
| ೮. | ಇತರೇ ಮೂಲಗಳಿಂದ | ೩,೦೦೦ | ಪರಂಪರೆ ಉಳಿಸಿ, ಸಪ್ತಾಹ | ೪೦,೦೦೦ |
| | ಕೊರತೆ | ೧೯,೦೧೦ | ಸಂಚಾರ ಭತ್ಯ | ೫,೦೦೦ |
| | | | ಪುದುವಟ್ಟು ನಿರ್ವಹಣಾ ವೆಚ್ಚ | ೧೫,೦೦೦ |
| | | | ಆದಾಯಕರ ಪಾವತಿ (TDS)<br>೧೯೯೯-೨೦೦೦ ೨,೬೨೬<br>೨೦೦೦-೨೦೦೧ ೪,೪೫೯<br>೨೦೦೧-೨೦೦೨ ೫,೯೫೦ | ೧೩,೦೭೫ |
| | | | ಕಛೇರಿ ಬಾಡಿಗೆ (೨೦೦೩ ಮಾರ್ಚ್‌ವರೆಗೆ) | ೧೪,೫೫೦ |
| | | | ಲೆಖ್ಖ ತಪಾಸಣಾ ಶುಲ್ಕ | ೪,೦೦೦ |
| | | | ಇತಿಹಾಸ ದರ್ಶನದ ಲೇಖನಗಳ ಮೌಲ್ವೀಕರಣ ಕುರಿತಂತೆ ವಿಚಾರಗೋಷ್ಠಿ | ೬,೮೧೪ |
| | | | ಸ್ಥಳೀಯ ಘಟಕ ಮತ್ತು ಇತರೇ ಸಂಸ್ಥೆಗಳಿಗೆ ಆರ್ಥಿಕ ನೆರವು | ೫,೦೦೦ |
| | ಮೊತ್ತ | ೩,೮೧,೧೨೭ | ಮೊತ್ತ | ೩,೮೧,೧೨೭ |





ಕರ್ನಾಟಕ ಇತಿಹಾಸ ಅಕಾದೆಮಿ (ರಿ)

# ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ




ಹಳೆಯ ಕೋಟೆ ಹಳೆ ದೇಗುಲ ಹಳೆ ಕಾಗದ ಕಡತ
ಹೇಳುವುದು ನಮಗೆಲ್ಲ ಪ್ರಾಚೀನರ ತುಡಿತ




ಪ್ರಾಚೀನ ಶಾಸನಗಳ ಸಾರ
ಇತಿಹಾಸ ಪುರುಷನಿಗೆ ಹಾರ

ಪ್ರಾಚೀನ ಇಗರ್ಜಿ ಮಸೀದಿ ಗುಡಿ
ನಮ್ಮ ಪರಂಪರೆಯ ಭವ್ಯ ಮುಡಿ







ನೆನಪು ನಮಗೆ ದಾರಿ ತೋರ್ವ ಉರಿಯುವಾ ಬತ್ತಿ
ಇತಿಹಾಸವು ನೆನಪಿಸುತೆ ನಾಡಿಗೊಂದು ಬತ್ತಿ

ನೆರವು: ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆ



